# ಶತಾಯುಷಿ

## ಪ್ರೊ|| ಎ.ಎನ್. ಮೂರ್ತಿರಾವ್ ಅಭಿನಂದನಾ ಗ್ರಂಥ

ಸಂಪಾದಕ

ಸು. ರಂಗಸ್ವಾಮಿ






# ಶತಾಯುಷಿ

ಪ್ರೊ. ಎ. ಎನ್. ಮೂರ್ತಿರಾವ್ ಅಭಿನಂದನಾ ಗ್ರಂಥ

*ಸಂಪಾದಕ :*

ಸು. ರಂಗಸ್ವಾಮಿ

ಹಂಸಧ್ವನಿ ಪ್ರಕಾಶನ
27, ಕಾಟನ್‌ಪೇಟೆ ಮುಖ್ಯರಸ್ತೆ
ಬೆಂಗಳೂರು - 560053

**SHATAYOUSHE** - Editor : Su. Rangaswamy, Published by Hamsa Dhwani Prakashana, No. 27, Cottonpet Main Road, Bangalore - 560053 Ph : 2877750, 3300918



*First Edition* : **2000**

ಪ್ರಥಮ ಮುದ್ರಣ : **2000**

ಹಕ್ಕು : ಆಯಾ ಲೇಖಕರದು



*ಬೆಲೆ* : ರೂ **300.00**

*ಅಕ್ಷರ ಜೋಡಣೆ :*
ಇಂಪ್ರೆಸಿವ್ ಗ್ರಾಫಿಕ್ಸ್ ಅಂಡ್ ಡಿಸೈನ್ಸ್
ಗಿರಿನಗರ, ಬೆಂಗಳೂರು - 85. Ph.: 6722129

*ಮುದ್ರಣ :*
ಎಲಿಗೆನ್ಸ್ ಪ್ರಿಂಟರ್ಸ್
ಮಲ್ಲೇಶ್ವರಂ, ಬೆಂಗಳೂರು - 560003

# ಶತಾಯುಷಿ, ದೀರ್ಘಾಯುಷಿ

ಶತಮಾನ ಕಂಡ ಅಪೂರ್ವ ಸಾಹಿತಿಗಳಲ್ಲಿ ಪ್ರೊ॥ ಎ. ಎನ್. ಮೂರ್ತಿರಾವ್ ಪ್ರಮುಖರು. ಮೂರ್ತಿರಾಯರ ವ್ಯಕ್ತಿತ್ವ ಮತ್ತು ಕೃತಿಗಳು ಅವರಿಗೆ ವಿಶಿಷ್ಟ ಸ್ಥಾನವನ್ನು ಒದಗಿಸಿದೆ. ಅವರ ವಿದ್ವತ್ ಚಿಂತನೆ, ಸಾಹಿತ್ಯ ವಿಮರ್ಶೆ, ಹಾಸ್ಯ ಪ್ರಜ್ಞೆಯ ಮೂಲಕ ನಮಗೆ ಆತ್ಮೀಯರಾಗುತ್ತಾರೆ.

ಮೂರ್ತಿರಾಯರು ಅವರ ಹೆಸರು, ಪುಸ್ತಕಗಳಿಂದ ನನಗೆ ಪರಿಚಿತರಾಗಿದ್ದರೂ ವೈಯಕ್ತಿಕವಾಗಿ ಅವರ ಭೇಟಿ ಇತ್ತೀಚೆಗೆ ಒಂದೆರಡು ವರ್ಷಗಳಿಂದ. ಅವರೂ ಹೊಯ್ಸಳ ಕರ್ನಾಟಕ, ನಾನೂ ಹೊಯ್ಸಳ ಕರ್ನಾಟಕ! ಅಲ್ಲದೆ ಅವರನ್ನು 1998 ನೇ ಸಾಲಿನ '**ಗೊರೂರು ಪ್ರಶಸ್ತಿ**'ಗೆ ಆಯ್ಕೆ ಮಾಡಿದ ಸಂದರ್ಭದಲ್ಲಿ ನನಗೆ ಪ್ರಥಮ ಭೇಟಿ. ನಂತರ ಕೆಲವೊಂದು ನಮ್ಮ ಸಮಾರಂಭಗಳಿಗೆ ಮುಖ್ಯ ಅತಿಥಿಗಳಾಗಿ ಆಹ್ವಾನಿಸಿದಾಗ ಭೇಟಿ. ಒಂದು ನೂರು ವರ್ಷ ತುಂಬಿದ ಹಿರಿಯ ಸಾಹಿತಿಗೆ ಅಭಿನಂದನಾ ಗ್ರಂಥ ಪ್ರಕಟಣೆಯ ನಿರ್ಧಾರ ಕೈಗೊಂಡಿದ್ದು ಮೂರ್ತಿರಾಯರಿಗೆ '**ಗೊರೂರು ಪ್ರಶಸ್ತಿ**' ಪ್ರದಾನ ಸಂದರ್ಭದಲ್ಲಿ. ಲೇಖಕರು ತಮ್ಮ ಲೇಖನಗಳೊಂದಿಗೆ ನನ್ನ ಉದ್ದೇಶಕ್ಕೆ ಸಹಕರಿಸಿದ್ದಾರೆ. ಡಾ॥ ಶಾಂತಾರಾಮ ಪ್ರಭು ಅವರ ಮಹಾ ಪ್ರಬಂಧವನ್ನು ಸಮಗ್ರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಪ್ರೊ॥ ಎ. ಎನ್. ಮೂರ್ತಿ ರಾಯರಿಗೆ ಈ ಅಭಿನಂದನಾ ಗ್ರಂಥವನ್ನು ಪ್ರೀತಿಪೂರ್ವಕವಾಗಿ ಅರ್ಪಿಸಲಾಗಿದೆ.

ಕೆಲವೊಂದು ಲೇಖನಗಳನ್ನು 'ಕರ್ಮವೀರ'ದ ವಿಶೇಷಾಂಕದಿಂದ ಹಾಗೂ ವಿವಿಧ ಪತ್ರಿಕೆಗಳಿಂದ ಪಡೆಯಲಾಗಿದೆ. ಎಲ್ಲ ಲೇಖಕರಿಗೂ ನನ್ನ ನೆನಕೆಗಳು ಸಲ್ಲುತ್ತವೆ.



ಸು. ರಂಗಸ್ವಾಮಿ

# .ಪರಿವಿಡಿ

ಅಧ್ಯಾಯ ಪುಟ ಸಂಖ್ಯೆ

ಎ. ಎನ್. ಮೂರ್ತಿರಾವ್, ಒಂದು ಅಧ್ಯಯನ - ಡಾ. ಪಿ. ಶಾಂತಾರಾಮ ಪ್ರಭು
1. ಪ್ರಸ್ತುತ ಅಧ್ಯಯನದ ಉದ್ದೇಶ ವ್ಯಾಪ್ತಿ 5
2. ಪ್ರಬಂಧ ಸಾಹಿತ್ಯ 12
3. ವಿಮರ್ಶಾತ್ಮಕ ಕೃತಿಗಳು 66
4. ಅಪರ ವಯಸ್ಕನ ಅಮೇರಿಕಾ ಯಾತ್ರೆ 128
5. ವ್ಯಕ್ತಿ ಚಿತ್ರಣ 142
6. ಸಂಜೆಗಣ್ಣಿನ ಹಿನ್ನೋಟ 173
7. ಭಾಷಾಂತರಗಳು 179
8. ಬಿಡಿ ಬರಹಗಳು 253
9. ಪ್ರೊ. ಮೂರ್ತಿರಾಯರ ಇಂಗ್ಲೀಷ್ ಲೇಖನಗಳು 285
10. ವೈಚಾರಿಕ ದೇವರು 321
11. ಉಪನಿಷತ್ತುಗಳ ಪ್ರಭಾವ 345
12. ಅನುಬಂಧಗಳು 370
13. ಹಲವರ, ಕೆಲವು ಅಭಿಪ್ರಾಯಗಳು 381
14. ಮಹಾಭಾರತದಲ್ಲಿ ಕೇಡು - ಕುಲಶೇಖರಿ 391
15. ಭಾವುಕತೆ ವೈಚಾರಿಕತೆಗಳ ಸಮತೋಲನ - ಜೆ. ಆರ್. ಲಕ್ಷ್ಮಣರಾವ್ 393
16. ಹಳೇಬೇರಿನ ಹೊಸ ಚಿಗುರು - ಎ. ಎಸ್. ಮೂರ್ತಿರಾವ್ - ಡಾ. ವರದಾ ಶ್ರೀನಿವಾಸ 399
17. ಅಕ್ಕಿ ಹೆಬ್ಬಾಳಿನಿಂದ ಅಮೇರಿಕಕ್ಕೆ - ಡಾ. ಎಂ. ವಿ. ಶ್ರೀನಿವಾಸ್ 403
18. 'ಪೂರ್ವಸೂರಿಗಳೊಡನೆ' -ಒಂದು ಸಿಂಹಾವಲೋಕನ-ಬಿ.ಜಿ.ಸತ್ಯಮೂರ್ತಿ 408
19. ಶತಮಾನದ ಹೊಸ್ತಿಲಲ್ಲಿ ಸಾಹಿತ್ಯ - ಸಂತ - ಕೆ. ಎಚ್. ಸಾವಿತ್ರಿ 417
20. ಬದುಕನ್ನು ಪ್ರೀತಿಸುವ ಸಾಹಿತಿ - ಪ್ರೊ || ಎಲ್. ಎಸ್. ಶೇಷಗಿರಿರಾವ್ 424
21. ಮಾನವ ಶ್ರೇಷ್ಠರಲ್ಲಿ ಒಬ್ಬರು - ಪ್ರೊ. ಎಸ್. ಕೆ. ರಾಮಚಂದ್ರರಾವ್ 428
22. ಬರೆದದ್ದೆಲ್ಲವೂ ಸತ್ಯವುಳ್ಳದ್ದು - ಪ್ರೊ || ಜಿ. ವೆಂಕಟಸುಬ್ಬಯ್ಯ 431
23. ಕನ್ನಡ ಸಾಹಿತ್ಯದ ಹಿರಿಯಜ್ಜ - ಎ. ಎನ್. ಮೂರ್ತಿರಾವ್ –ಪ್ರೊ. ಕೆ. ನರಸಿಂಹ ಮೂರ್ತಿ 434
24. ಮೂರ್ತಿರಾಯರಿಗೆ ಗೊರೂರು ಪ್ರಶಸ್ತಿ - ಹಾ. ಮಾ. ನಾಯಕ 437
25. 'ಹಗಲುಗನಸುಗಳ' ಶತಾಯುಷಿ - ಪ್ರೊ || ಎ. ಎನ್. ಮೂರ್ತಿರಾವ್ ಹಾ. ಮಾ. ನಾಯಕ 440
26. ನೂರು ತುಂಬಿದ ಮುಗ್ಧಜೀವಿ ಮೂರ್ತಿರಾವ್ - ಎಸ್. ಪಟ್ಟಾಭಿರಾಮನ್ 447
27. ನೂರರ ಹರಯದ ಜ್ಞಾನಯೋಗಿ - ಟಿ. ಮಹಾಬಲೇಶ್ವರಭಟ್ಟ 450
28. ಲಲಿತವನದಲ್ಲಿ ಅಲೆಯುವ ಮನ - ಡಾ. ನರಹಳ್ಳಿ ಬಾಲಸುಬ್ರಮಣ್ಯಂ 453
29. ಶತಮಾನದ ದಾರ್ಶನಿಕ : ಶತಾಯುಷಿ - ಪ್ರೊ || ಎ. ಎನ್. ಮೂರ್ತಿರಾವ್ - ಸತ್ಯನಾರಾಯಣರಾವ್ ಗಣತಿ 461
30. ಪ್ರೊ || ಮೂರ್ತಿರಾಯರ ಜೊತೆ ಒಂದು ಸಂವಾದ - ಡಾ. ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ 468

## ಅರ್ಪಣೆ

ಪ್ರೊ|| ಎ. ಎನ್. ಮೂರ್ತಿರಾಯರಿಗೆ

# ಅಧ್ಯಾಯ-1

## ಪೀಠಿಕೆ

## ಪ್ರಸ್ತುತ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಪ್ರೊ. ಅಕ್ಕಿ ಹೆಬ್ಬಾಳು ನರಸಿಂಹಮೂರ್ತಿರಾಯರು ಕರ್ನಾಟಕದ ಅತ್ಯಂತ ಹಿರಿಯ ಬರಹಗಾರರಲ್ಲಿ ಒಬ್ಬರು. ವೃತ್ತಿಯಲ್ಲಿ ಇಂಗ್ಲೀಷ್ ಪ್ರೊಫೆಸರ್ ಆಗಿದ್ದವರು. ಆದರೆ ಅವರು ಬರೆದದ್ದು ಕನ್ನಡ ಭಾಷೆಯಲ್ಲಿ. ಈ ಶತಮಾನದ ಆರಂಭದಲ್ಲಿ ಜನಿಸಿ ಶತಮಾನದ ಸಮಗ್ರ ಆಗುಹೋಗುಗಳನ್ನು ಗಮನಿಸಿದವರು. ಪ್ರಬಂಧ, ಭಾಷಾಂತರ, ರೂಪಾಂತರ, ವಿಮರ್ಶೆ, ಪ್ರವಾಸ ವ್ಯಕ್ತಿ ಚಿತ್ರಣ, ಆತ್ಮಕಥನ, ವೈಚಾರಿಕ-ಮುಂತಾದ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ರಚನೆ ಮಾಡಿದವರು. ಅಧ್ಯಾಪನದೊಂದಿಗೆ ಮೈಸೂರು ಆಕಾಶವಾಣಿ, ಕನ್ನಡ ಸಂಸ್ಕೃತಿ ಇಲಾಖೆ, ಕನ್ನಡ ಸಾಹಿತ್ಯ ಪರಿಷತ್ತು-ಮುಂತಾದ ಸಂಸ್ಥೆಗಳ ಮುಖ್ಯಸ್ಥರಾಗಿ ಆ ಸಂಸ್ಥೆಗಳ ಪ್ರಗತಿಗಾಗಿ ದುಡಿದವರು. ಇಂಗ್ಲೀಷ್, ಕನ್ನಡ ಹಾಗೂ ಸಂಸ್ಕೃತ ಭಾಷೆ–ಸಾಹಿತ್ಯಗಳನ್ನು ಅತ್ಯಂತ ಆಳವಾಗಿ ಅಧ್ಯಯನ ಮಾಡಿದವರು. ಹೀಗೆ ವೈವಿಧ್ಯಮಯವಾದ ಹಿನ್ನೆಲೆಯಿರುವ ಮೂರ್ತಿರಾಯರನ್ನು ನವೋದಯ ಕಾಲದ ಲಲಿತ ಪ್ರಬಂಧಕಾರರೆಂದು ಮಾತ್ರ ಗುರುತಿಸಲಾಗಿದೆ. ಹಿರಿಯ ಲೇಖಕರಾಗಿಯೂ ಮೂರ್ತಿರಾಯರಿಗೆ ಇದುವರೆಗೆ ಒಂದೂ ಅಭಿನಂದನಾ ಗ್ರಂಥ ಬಾರದಿರುವುದೂ ಒಂದು ಗಂಭೀರವಾದ ವಿಷಯ. ಅಲ್ಲದೆ ಕುವೆಂಪು ವಿಶ್ವವಿದ್ಯಾನಿಲಯದ ಕನ್ನಡ ಭಾರತಿ(ಕನ್ನಡ ಅಧ್ಯಯನ ವಿಭಾಗ)ಹಾಗೂ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ನಡೆಸಿದ ಎರಡು ವಿಚಾರ ಸಂಕಿರಣಗಳನ್ನು ಬಿಟ್ಟರೆ ಮೂರ್ತಿರಾಯರ ಸಮಗ್ರ ಸಾಹಿತ್ಯದ ಗಂಭೀರವಾದ ಅಧ್ಯಯನ ಎಲ್ಲಿಯೂ ನಡೆದಿಲ್ಲ. ಮೂರ್ತಿರಾಯರನ್ನು ಕುರಿತು ಪ್ರಾಸಂಗಿಕವಾಗಿ ಉಲ್ಲೇಖಿಸುವುದು ಕೇವಲ ಲಲಿತ ಪ್ರಬಂಧಗಳ ಸಂಬಂಧವಾಗಿ ಮಾತ್ರವೆ ಎಂಬುದನ್ನು ಇದುವರೆಗೆ ಪ್ರಕಟವಾದ ಕೆಲವು ಪ್ರಾತಿನಿಧಿಕ ಅಭಿಪ್ರಾಯಗಳಿಂದ ಸಮರ್ಥಿಸಬಹುದು.

1. ಡಾ. ರಂ. ಶ್ರೀ ಮುಗಳಿಯವರು ಕನ್ನಡ ಸಾಹಿತ್ಯದ ಇತಿಹಾಸ (1963, ಪುಟ71) ಎಂಬ ತಮ್ಮ ಸಾಹಿತ್ಯದ ಚರಿತ್ರೆಯಲ್ಲಿ ಮೂರ್ತಿರಾಯರನ್ನು ಪ್ರಬಂಧ ಕಾರರೆಂದೇ ಗುರುತಿಸಿದ್ದಾರೆ.

2. ಡಾ. ಪ್ರಭುಶಂಕರ್‌ರವರೂ ಸಹ ತಮ್ಮ "ಅಮೇರಿಕದಲ್ಲಿ ನಾನು, ಶಾಂತಿ" (1978 ಪುಟ 22) ಎಂಬ ಪ್ರವಾಸಕಥನದಲ್ಲಿ ಮೂರ್ತಿರಾಯರ ಪ್ರಬಂಧಗಳ ಮೇಲೆಯೇ ಹೆಚ್ಚಾಗಿ ಒತ್ತುಕೊಟ್ಟಿದ್ದಾರೆ.

3. ಮಳಲಿ ವಸಂತಕುಮಾರ್‌ರವರೂ ಸಹ ತಮ್ಮ "ಪ್ರಬಂಧಮಾಲಿಕ" (1978 ಪುಟ 44-45) ಎಂಬ ಕೃತಿಯಲ್ಲಿ ಈ ಮೇಲಿನ ವಿಚಾರಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿದ್ದಾರೆ.

4. ಕನ್ನಡ ವಿಶ್ವಕೋಶದ ಮೂರನೆಯ ಸಂಪುಟದಲ್ಲಿ (1971) ಕನ್ನಡದಲ್ಲಿ ವಿಮರ್ಶನ ಸಾಹಿತ್ಯ (ಪುಟ 767–770) ಎಂಬ ವಿಭಾಗದಲ್ಲಿ ಮೂರ್ತಿರಾಯರ ಹೆಸರನ್ನೂ ಉಲ್ಲೇಖಿಸಲಾಗಿಲ್ಲ.

5. ಕನ್ನಡ ವಿಶ್ವಕೋಶದ ಐದನೆಯ ಭಾಗವಾದ "ಕಲೆ, ಸಾಹಿತ್ಯ"ದಲ್ಲಿಯೂ ಮೂರ್ತಿರಾಯರನ್ನು ಕುರಿತು ಸ್ವತಂತ್ರ್ಯ ಲೇಖನವಿಲ್ಲ.

6. ಕೆ.ಡಿ. ಕುರ್ತುಕೋಟಿಯವರ "ಯುಗಧರ್ಮ ಹಾಗೂ ಸಾಹಿತ್ಯ ದರ್ಶನ" (1959) ಎಂಬ ಕೃತಿಯಲ್ಲಿಯೂ ಕುರ್ತುಕೋಟಿಯವರು ಮೂರ್ತಿರಾಯರನ್ನು ಗಮನಿಸದಿರುವುದು ಗಂಭೀರವಾದ ವಿಷಯ.

7. ಮಳಲಿ ವಸಂತಕುಮಾರ್ ಅವರು ತಮ್ಮ "ಎ.ಎನ್. ಮೂರ್ತಿರಾಯರ ಜೀವನ ದೃಷ್ಟಿಧೋರಣೆ" ಎಂಬ ಚಿಕ್ಕ ಪುಸ್ತಕದಲ್ಲಿ (1984) ಅವರ ಪ್ರಬಂಧ ಸಾಹಿತ್ಯ ವನ್ನಷ್ಟೇ ಗಣನೆಗೆ ತೆಗೆದುಕೊಂಡಿದ್ದಾರೆ (61–75) ಜೊತೆಗೆ ಉಳಿದ ಪ್ರಕಾರಗಳಲ್ಲಿ ಎಷ್ಟೇ ಹೆಸರು ಗಳಿಸಿದ್ದರೂ ಸಹ ಮೂರ್ತಿರಾಯರ ಪ್ರಬಂಧಗಳ ಸ್ಥಾನಕ್ಕೆ ನ್ಯಾಯ ಒದಗಿಸಿದರೂ ಕೇವಲ ಭಾಗಶಃ ಮಾತ್ರ ಸತ್ಯವಾಗಿದೆ. ತತ್ಪರಿಣಾಮವಾಗಿ ಇದರ ಪರಿಮಿತಿ ಯಲ್ಲಿ ಮೂರ್ತಿರಾಯರ ಇತರ ಸಾಹಿತ್ಯ ಪ್ರಕಾರವನ್ನು ಗೌಣವಾಗಿ ಕಾಣಲಾಗಿದೆ.

8. ಮೂರ್ತಿರಾಯರು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ (1984– ಕೈವಾರ) ಅಧ್ಯಕ್ಷರಾಗಿ ಆಯ್ಕೆಯಾದಾಗ, ಅವರ ಪ್ರಬಂಧಗಳಿಂದ ಮಾತ್ರವೇ ಆಯ್ದ ಹನ್ನೊಂದು ಭಾಗಗಳನ್ನು 'ತರಂಗ' ಪತ್ರಿಕೆ ಪ್ರಕಟಿಸಿತು. (25.03.1984 ಪುಟ 26–27) ಇಲ್ಲಿಯೂ ಅವರ ಇನ್ನಿತರ ಸಾಹಿತ್ಯ ಪ್ರಕಾರವನ್ನು ಗಮನಿಸದಿರುವುದು ಸ್ಪಷ್ಟ.

9. 22.03.1984ರ ಉದಯವಾಣಿ ಪತ್ರಿಕೆಯಲ್ಲಿ (ಪುಟ 2) ಮೂರ್ತಿರಾಯ ರನ್ನು ಕೇವಲ ಪ್ರಬಂಧಕಾರರ ಚೌಕಟ್ಟಿಗೆ ಸೀಮಿತಗೊಳಿಸಿ ಪರಿಚಯಾತ್ಮಕ ಲೇಖನವನ್ನು ಬರೆಯಲಾಗಿದೆ.

10. ನರಹಳ್ಳಿ ಬಾಲಸುಬ್ರಹ್ಮಣ್ಯ ತಮ್ಮ ಒಂದು ಲೇಖನದಲ್ಲಿ ಮೂರ್ತಿರಾಯರ ಪ್ರವಾಸ ಕಥನವನ್ನು ಕುರಿತು ಬರೆಯುವಾಗಲೂ ಅವರನ್ನು "ತಮ್ಮ ಪ್ರಬಂಧಗಳಿಂದ ಕನ್ನಡದ ಅಗ್ರಮಾನ್ಯ ಲೇಖಕರಾಗಿರುವ ಎ.ಎನ್. ಮೂರ್ತಿರಾವ್......." ಎಂದೇ ಆರಂಭಿಸಿ, ಅವರ ಪ್ರವಾಸಕೃತಿಯನ್ನು ಲಲಿತ ಪ್ರಬಂಧದ ದೃಷ್ಟಿಯಲ್ಲಿಯೇ ನೋಡಿದ್ದಾರೆ. (ತುಷಾರ, ಆಗಸ್ಟ್ 1989 ಪುಟ 10).

11. ಮೂರ್ತಿರಾಯರ ಆತ್ಮ ಚರಿತ್ರೆಯನ್ನು ಕುರಿತು ಬರೆಯುವಾಗಲೂ ಶ್ರೀ ಕೆ. ಸತ್ಯನಾರಾಯಣ "ಇವರ ಬದುಕೇ ಒಂದು ಲಲಿತ ಪ್ರಬಂಧ" (ಕನ್ನಡಪ್ರಭ–10. 1990) ಎಂಬ ತಲೆಬರಹದ ಅಡಿಯಲ್ಲಿಯೇ ಬರೆದಿದ್ದಾರೆ.

12. ಮೂರ್ತಿರಾಯರನ್ನು ಕಂಡು ಸಂದರ್ಶನ ಮಾಡಿದ ಈಚೆಗಿನ ಇಬ್ಬರು ಸಂದರ್ಶಕರೂ ತಮ್ಮ ಪ್ರಾಸ್ತಾವಿಕ ಪೀಠಿಕೆಯಲ್ಲಿ ಅವರನ್ನು ಪ್ರಬಂಧಕಾರರೆಂದು ಮಾತ್ರವೇ ಕರೆದಿದ್ದಾರೆ.

(ಎಸ್.ಎಸ್. ಲಕ್ಷ್ಮಿನಾರಾಯಣ ಭಟ್ಟ, ಉದಯವಾಣಿ, ದೀಪಾವಳಿ ವಿಶೇಷಾಂಕ 1993 ಪುಟ 35)

(ಡಾ. ವಿಜಯಾ ಸುಬ್ಬರಾಜ್, ಪ್ರಜಾವಾಣಿ ದೀಪಾವಳಿ ವಿಶೇಷಾಂಕ1993 ಪುಟ 237–239).

ಈ ಕೆಲವು ಮಾದರಿಗಳನ್ನು ಕಂಡಾಗ ಮೂರ್ತಿರಾಯರ ಇನ್ನಿತರ ಸಾಹಿತ್ಯಕ ಆಯಾಮಗಳು ಕನ್ನಡದ ಓದುಗರಿಗೆ ನಿಕಟವಾಗಿ ಪರಿಚಯ ಮಾಡುವ ಕೆಲಸ ಇದುವರೆಗೆ ನಡೆದಿಲ್ಲವೆಂಬ ಅಂಶ ಸ್ವಯಂಸಿದ್ಧವಾಗುತ್ತದೆ. ಮೂರ್ತಿರಾಯರು ನವೋದಯ ಕಾಲದ ಲೇಖಕರಂತೆ ಪ್ರಬಂಧ ಸಾಹಿತ್ಯಕ್ಕೆ ನೀಡಿದ ಕೊಡುಗೆ ಗಮನಾರ್ಹವಾದುದೆಂಬ ವಿಷಯ ನಿರ್ವಿವಾದವಾದದ್ದು. ಆದರೂ ಅವರು ಮಾಡಿರುವ ರೂಪಾಂತರ ಹಾಗೂ ಮೂಲ, ಭಾಷಾಂತರ ಹಾಗೂ ಮೂಲ–ಇತ್ಯಾದಿಗಳ ತುಲನಾತ್ಮಕವಾದ ಅಧ್ಯಯನ ನಡೆದಿಲ್ಲ. ಕೆಲವರಂತೂ ಅವರನ್ನು ಕಾದಂಬರಿಕಾರರ, ಸಣ್ಣ ಕತೆಗಳ ಲೇಖಕರ ಸಾಲಿಗೂ ಸೇರಿಸಿದ್ದಾರೆ. (ಶ್ರೀ ಎಸ್.ವಿ. ಶ್ರೀನಿವಾಸರಾವ್ "ಕನ್ನಡ ಸಾಹಿತಿ ದರ್ಶನ" 1989 ಪುಟ 386–7). ಮೂರ್ತಿರಾಯರು ಷೇಕ್ಸ್‌ಪಿಯರ್‌ನ Tempest ನಾಟಕವನ್ನು ಕನ್ನಡಕ್ಕೆ ಅನುವಾದಿಸಿದರು. ಮಾಸ್ತಿಯವರೂ ಇದೇ ನಾಟಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಕುವೆಂಪುರವರೂ ಇದೇ ನಾಟಕವನ್ನು ಆಧರಿಸಿ, 'ಬಿರುಗಾಳಿ' ಎಂಬ ರೂಪಾಂತರವನ್ನೂ ಬರೆದಿದ್ದಾರೆ. ಇಂತಹ ಅನುವಾದ–ರೂಪಾಂತರ ಹಾಗೂ ಮೂಲಗಳನ್ನು ತೌಲನಿಕವಾಗಿ ಮಾಡಿದ ವಿಮರ್ಶಾತ್ಮಕ ಅಧ್ಯಯನ ಮಾಡುವುದೂ ಸಹ ಈ ಮಹಾ ಪ್ರಬಂಧದ ವ್ಯಾಪ್ತಿಗೆ ಒಳಪಟ್ಟಿದೆ.

ಮೂರ್ತಿರಾಯರ ಸಮಕಾಲೀನ ಲೇಖಕರ ಅಥವಾ ಅವರಿಗಿಂತ ಕಿರಿಯ ಲೇಖಕರ ಸಮಗ್ರ ಕೃತಿಗಳ ಅಧ್ಯಯನ–ವಿಮರ್ಶಾತ್ಮಕ ಕೃತಿಗಳು ಇದುವರೆಗೆ ಒಂದು ಮಿತಿಯಲ್ಲಿ ಕನ್ನಡದಲ್ಲಿ ಬಂದಿವೆ. ಆದರೆ ಮೂರ್ತಿರಾಯರ ಸಮಗ್ರ ಸಾಹಿತ್ಯ ಕೃತಿಗಳನ್ನು ಕುರಿತ ಒಟ್ಟು ಬರಹ ಇದುವರೆಗೆ ಕನ್ನಡದಲ್ಲಿ ಬಾರದಿರುವುದು ಒಂದು ತೀವ್ರವಾದ ಕೊರತೆ ಎನ್ನಿಸಿ, ಈ ಕೊರತೆಯನ್ನು ನೀಗಿಸಲು ಮಾಡಿದ ಇದೊಂದು ನಮ್ರ ಪ್ರಯತ್ನ. ಈ ದಿಶೆಯಲ್ಲಿ ಹಲವು ತೊಡಕುಗಳಿವೆ. ಮೊದಲನೆಯದಾಗಿ ಯಾವೊಬ್ಬ ಹಿರಿಯ ಲೇಖಕ ನೊಬ್ಬನ ಸಮಗ್ರ ಕೃತಿಗಳ ಆಮೂಲಾಗ್ರ ಅಧ್ಯಯನ ಸಾಧ್ಯವಾಗದಿರಬಹುದು. ಏಕೆಂದರೆ ಅಧ್ಯಯನಕ್ಕಾಗಿ ಆಯ್ದುಕೊಂಡ ಲೇಖಕನ ಕೃತಿಗಳ ಸಂಖ್ಯೆ ಅಪರಿಮಿತವಾಗಿದ್ದು ಗ್ರಂಥಗಳ ಗಾತ್ರವೂ ಗಣನೀಯವಾಗಿದ್ದು ಅವುಗಳನ್ನು ನಾನಾ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು ದುಸ್ಸಾಧ್ಯವಾಗಬಹುದು. ಆದರೂ ಭೈರಪ್ಪನವರ ಕಾದಂಬರಿಗಳನ್ನು ಕುರಿತು ಲೀಲಾವತಿ ತೋರಣಗಟ್ಟಿ, ವಿನಾಯಕ ವಾಙ್ಮಯವನ್ನು ಕುರಿತು ಎನ್ಕೆ, ಎಂ. ಎಸ್. ಪುಟ್ಟಣ್ಣನವರ ಜೀವನ–ಸಾಹಿತ್ಯ ಕುರಿತು, ಹೆಚ್. ಎಸ್. ಸುಜಾತಾ, ಜಿ.ಎಸ್.ವಿ. ಆಮೂರರ "ಭುವನದ ಭಾಗ್ಯ" ಮುಂತಾದವರ ಪ್ರಯತ್ನ ಪ್ರಶಂಸನೀಯ. ಇಲ್ಲವೇ ಸಾಹಿತ್ಯದ ಒಂದು ಪ್ರಕಾರವನ್ನು ಕುರಿತು ಇಂತಹ ಗಾಢವಾದ ಅಧ್ಯಯನವೂ ಸಾಧ್ಯ. ಎಲ್.ಎಸ್. ಶೇಷಗಿರಿರಾಯರು, ಗಿರಡ್ಡಿ ಗೋವಿಂದರಾಜ–ಮುಂತಾದವರು ಕಾದಂಬರಿ ಪ್ರಕಾರವನ್ನೂ, ಪರ್ವತವಾಣಿ ಮುಂತಾದವರು ನಾಟಕ ಸಾಹಿತ್ಯವನ್ನೂ ಕುರಿತು ಮಾಡಿದ ಅಧ್ಯಯನ ತಲಸ್ಪರ್ಶಿಯಾದುದು. ಇವಲ್ಲದೇ ಲೇಖಕನೊಬ್ಬನ ಸಮಗ್ರಕೃತಿಗಳ

ಅಲಭ್ಯವಾಗುತ್ತದೆ. ಮೂರ್ತಿರಾಯರು ಬರೆದ ಕೃತಿಗಳ ಸಂಖ್ಯೆ-ಮಾಸ್ತಿ, ಕುವೆಂಪು, ಡಿ.ವಿ.ಜಿ., ಗೋವಿಂದ ಪೈ, ಕಾರಂತ, ತ.ರಾ.ಸು., ಅ.ನ.ಕೃ.-ಮೊದಲಾದವರಿಗೆ ಹೋಲಿಸಿದಾಗ ಬಹಳ ದೊಡ್ಡದೇನೂ ಅಲ್ಲ. ಆದರೆ ಅವರು ಆರಂಭಿಕ ಕಾಲದಲ್ಲಿ ಬರೆದ, ಅನುವಾದಿಸಿದ ರೂಪಾಂತರಿಸಿದ ಕೃತಿಗಳೆಲ್ಲವೂ ಈಗ ಅಲಭ್ಯವಾಗಿವೆ. ಸಾಧ್ಯವಿರುವ ಮಟ್ಟಿಗೆ ಅವರ ಕೃತಿಗಳನ್ನು ಸಂಪಾದಿಸಿ ಅವುಗಳ ಮೌಲ್ಯ ಮಾಪನ ಮಾಡುವ ಪ್ರಯತ್ನ ಈ ಮಹಾ ಪ್ರಬಂಧದಲ್ಲಿ ಮಾಡಲಾಗಿದೆ.

ಮೂರ್ತಿರಾಯರು ಪ್ರಬಂಧಕಾರರೆಂದು ಗುರುತಿಸಲ್ಪಟ್ಟ ಪ್ರಮಾಣದಲ್ಲಿ ವಿಮರ್ಶಕರೆಂದು ಗುರುತಿಸಲ್ಪಟ್ಟಿಲ್ಲ. ಮೂರ್ತಿರಾಯರ ಕಾಲಕ್ಕೆ ವಿಮರ್ಶೆ ಈಗಿನಂತೆ ಬೆಳೆದಿರಲಿಲ್ಲ. ಲೇಖಕರೇ ವಿಮರ್ಶಕರಾಗಿದ್ದರು. ತಮ್ಮ ಪೂರ್ವದ ಅಥವಾ ಪ್ರಾಚೀನ ಕಾಲದ ಸಾಹಿತ್ಯವನ್ನಷ್ಟೇ ಅವರು ವಿಮರ್ಶೆಗೆ ಎತ್ತಿಕೊಳ್ಳುತ್ತಿದ್ದರು. ಮೂರ್ತಿರಾಯರು ತಮ್ಮ ಸಮ ಕಾಲೀನರ ಸಾಹಿತ್ಯ ಕೃತಿಗಳನ್ನು ಕುರಿತು ವಿಮರ್ಶೆಗೆ ತೊಡಗಿದವರಲ್ಲಿ ಮೊದಲಿಗರು. ಜಿ.ಪಿ. ರಾಜರತ್ನಂರವರ "ಗಂಡುಗೊಡಲಿ" ನಾಟಕವನ್ನು ಕುರಿತು ಅವರು ಅದೇ ಹೆಸರಿನಲ್ಲಿ ವಿಮರ್ಶೆಯೊಂದನ್ನು ಬರೆದರು (1934) ಅನಂತರ ಮಾಸ್ತಿಯವರ ಸಣ್ಣಕತೆಗಳನ್ನು ಕುರಿತು ಸ್ವತಂತ್ರವಾದ ವಿಮರ್ಶನ ಗ್ರಂಥವೊಂದನ್ನು ಬರೆದರು (1971) ಹಾಗೆಯೇ ಷೇಕ್ಸ್‌ಪಿಯರ್ ಕವಿಯನ್ನು ಕುರಿತು ವಿಮರ್ಶನ ಗ್ರಂಥವೊಂದನ್ನು ಬರೆದಿದ್ದಾರೆ. ಅಲ್ಲದೆ ಸಂಸ್ಕೃತ ಭಾಷೆಯನ್ನು ಅಧ್ಯಯನ ಮಾಡಿ, ಉತ್ತರಕಾಂಡವನ್ನು ಕುರಿತು ತೌಲನಿಕವಾಗಿ ವಿಮರ್ಶೆ ಮಾಡಿದ್ದಾರೆ. ಈ ಎಲ್ಲಾ ಕೃತಿಗಳನ್ನು ಅಧ್ಯಯನ ಮಾಡಿ, ಅವುಗಳ ಬಗ್ಗೆ ವಿಮರ್ಶಾತ್ಮಕವಾಗಿ ಪರಿಚಯ ಮಾಡಿಕೊಡುವುದೂ ಈ ಅಧ್ಯಯನದ ಉದ್ದೇಶವಾಗಿರುತ್ತದೆ.

ಮೂರ್ತಿರಾಯರು ಆ ಕಾಲದಲ್ಲಿಯೇ ಶಿಶುಸಾಹಿತ್ಯಕ್ಕೂ ತಮ್ಮ ಕೊಡುಗೆಯನ್ನು ನೀಡಿದ್ದಾರೆಂಬ ವಿಷಯ ಹೆಚ್ಚು ಜನರಿಗೆ ತಿಳಿದಿರಲಾರದು. ಅವರು "ಹವಳದ ದ್ವೀಪ" ಹಾಗೂ "ಸುಧೀರ ಮತ್ತು ಶೈಲಳ ಸಾಹಸ" ಎಂಬ ಎರಡು ಕೃತಿಗಳನ್ನು ಈ ಕ್ಷೇತ್ರಕ್ಕೆ ಕೊಟ್ಟಿದ್ದಾರೆ. ಮೊದಲನೆಯದು ಭಾಷಾಂತರ, ಎರಡನೆಯದು ರೂಪಾಂತರ. ಮೂರ್ತಿರಾಯರು ತಾವು ಬಾಲ್ಯದಲ್ಲಿ ಓದಿ ಆನಂದಿಸಿದ ಆರ್. ಎಲ್. ಬ್ಯಾಲಂಟೈನ್‌ನ "The Coral Island" ಎಂಬ ಕೃತಿಯನ್ನು ಆ ಹೆಸರಿನಲ್ಲಿ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಇಲ್ಲಿ ಮೂಲ ಹಾಗೂ ಭಾಷಾಂತರಗಳೆರಡನ್ನೂ ಪರಸ್ಪರ ಹೋಲಿಸಿ ನೋಡುವ ಪ್ರಯತ್ನ ಮಾಡಲಾಗಿದೆ.

ಈ ಪ್ರಬಂಧದ ವ್ಯಾಪ್ತಿಯಲ್ಲಿ ಮೂರ್ತಿರಾಯರು ಬರೆದ ಸಾಹಿತ್ಯ ಕೃತಿಗಳನ್ನು ಆಧರಿಸಿ ಅವರ ಮನೋಧರ್ಮ ಹಾಗೂ ಸಾಹಿತ್ಯಕ್ಷೇತ್ರದಲ್ಲಿ ಅವರ ನೆಲೆಯನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ. ಕೆಲವರ ಪ್ರಕಾರ ಅವರು ಕ್ಲಾಸಿಕಲ್ ಮನೋಧರ್ಮದ ಲೇಖಕರು. (ಡಾ. ಶಾಂತಿನಾಥ ದೇಸಾಯಿ, ಕುವೆಂಪು ವಿಶ್ವವಿದ್ಯಾನಿಲಯದಲ್ಲಿ ವ್ಯವಸ್ಥೆ ಮಾಡಿದ ಮೂರ್ತಿರಾಯರ ಸಾಹಿತ್ಯವನ್ನು ಕುರಿತ ವಿಚಾರ ಸಂಕಿರಣದ ಸಮಾರೋಪ ಭಾಷಣದ ಸಂದರ್ಭದಲ್ಲಿ ಅಪ್ರಕಟಿತ) ಕೆಲವರಿಗೆ ರೊಮ್ಯಾಂಟಿಕ್ ಬರಹಗಾರರು. ಈ ವಾದಗಳ ತುಲನೆಯಲ್ಲಿ ಮೂರ್ತಿರಾಯರ ಮನೋಧರ್ಮವನ್ನು ಪರಿಶೀಲಿಸುವ ಪ್ರಯತ್ನ ಮಾಡಿದೆ.

ವ್ಯಕ್ತಿಚಿತ್ರಗಳನ್ನು ನೀಡಿದ ಮೂರ್ತಿರಾಯರ ಕೃತಿಗಳ ಬಗ್ಗೆ ಹೆಚ್ಚಾಗಿ ಉಲ್ಲೇಖಿಸಲಾಗಿಲ್ಲ. ಅವರು ಚಿತ್ರಿಸಿರುವ ವ್ಯಕ್ತಿಚಿತ್ರಣಗಳು ಅನಾಸಕ್ತ ಮನೋಭಾವದ ದೃಷ್ಟಿಯಿಂದ ಕೂಡಿದೆ. ಅಭಿಮಾನವನ್ನು ಬದಿಗಿರಿಸಿ ಸತ್ಯವನ್ನು ಪ್ರಾಮಾಣಿಕವಾಗಿ ಪ್ರಕಟಿಸಿದ್ದಾರೆ. ರಾಧಾಕೃಷ್ಣನ್, ರಾಲೋ, ಡಿ.ವಿ.ಜಿ., ಶ್ರೀ ಮುಂತಾದವರನ್ನು ಕುರಿತು ಅವರು ಬರೆದ ಶಬ್ದ ಚಿತ್ರಗಳು ಕನ್ನಡದ ಹೆಚ್ಚಿನ ಓದುಗರಿಗೆ ಅಪರಿಚಿತವಾಗಿಯೇ ಉಳಿದಿವೆ. ಈ ಅಧ್ಯಯನದಲ್ಲಿ ಅವುಗಳನ್ನು ಪರಿಚಯಾತ್ಮಕವಾಗಿ ದಾಖಲಿಸುವ ಪ್ರಯತ್ನವನ್ನು ಮಾಡಲಾಗಿದೆ.

ಮೂರ್ತಿರಾಯರು ವೃತ್ತಿಯಿಂದ ಅಧ್ಯಾಪಕರು. ಪ್ರವೃತ್ತಿಯಿಂದ ಬರಹಗಾರರು. ಚಿಂತನೆಯಲ್ಲಿ ಸಾಮಾಜಿಕ ದೃಷ್ಟಿಕೋನವುಳ್ಳವರು. ಅವರ ಬರಹಗಳಲ್ಲಿ ಹಲವು ಕಡೆ ಅವರ ಸಾಮಾಜಿಕ ಚಿಂತನೆಯ ಹೊಳಹನ್ನು ಗುರುತಿಸಿ ಮೂರ್ತಿರಾಯರ ಈ ಮುಖದ ಪರಿಚಯವನ್ನು ಮಾಡಿಕೊಡುವ ಉದ್ದೇಶವೂ ಇದೆ. ಸಾಹಿತ್ಯದ ಅಧ್ಯಾಪಕರೊಬ್ಬರು ಸಾಹಿತ್ಯಾತ್ಮಕವಾಗಿಯೂ ಬದಲಾದ ಬದಲಾಗುತ್ತಿರುವ ಸಾಮಾಜಿಕ ಪರಿಸರ-ಪರಿಸ್ಥಿತಿಗೂ ಹೇಗೆ ಸ್ಪಂದಿಸಿದ್ದಾರೆಂಬುದನ್ನು ಈ ಅಧ್ಯಯನದ ಕಕ್ಷೆಗೆ ಒಳಪಡಿಸಿದೆ.

ಒಬ್ಬ ಲೇಖಕರಾಗಿ ಮೂರ್ತಿರಾಯರು ಯಾವ ಯಾವ ಪ್ರಭಾವಕ್ಕೆ ಒಳಗಾಗಿದ್ದರೆಂಬ ವಿಷಯವೂ ಇಲ್ಲಿ ಅಧ್ಯಯನದ ವಸ್ತು. ಸಾಮಾನ್ಯವಾಗಿ ಇಂಗ್ಲೀಷ್ ಭಾಷೆ-ಸಾಹಿತ್ಯಗಳನ್ನು ಅಧ್ಯಯನ ಮಾಡಿದವರು ಇಂಗ್ಲೀಷ್ ಸಂಸ್ಕೃತಿಯ ಪ್ರಭಾವಕ್ಕೇ ಒಳಗಾಗಿರುತ್ತಾರೆಂಬುದು ಸಾಮಾನ್ಯ ನಂಬಿಕೆ. ಆದರೆ ಮೂರ್ತಿರಾಯರ ಮೇಲೆ ಪ್ರಭಾವ ಬೀರಿದ ಅಂಶಗಳು ಯಾವುವು ಎಂಬುದನ್ನೂ ಇಲ್ಲಿ ಅಧ್ಯಯನ ಮಾಡಲಾಗಿದೆ.

ನವೋದಯ ಕಾಲದ ಲೇಖಕರು ಚಿಂತನೆ ಮಾಡುವ ದಾರಿಗಿಂತ ಮೂರ್ತಿರಾಯರು ಎಲ್ಲಿ ಅವರಿಗಿಂತ ಭಿನ್ನ ರೀತಿಯಲ್ಲಿ ಚಿಂತನೆ ಮಾಡುತ್ತಾರೆ ಎಂಬುದನ್ನೂ ಇಲ್ಲಿ ವಿಚಾರ ಮಾಡಲಾಗುತ್ತದೆ. ಇದರೊಂದಿಗೆ ವೈಚಾರಿಕ ನಿಲುವಿನಲ್ಲಿಯೂ ಮೂರ್ತಿರಾಯರು ಹೇಗೆ ಭಿನ್ನರಾಗುತ್ತಾರೆ ಎಂಬ ವಿಚಾರವನ್ನೂ ಅಧ್ಯಯನ ಮಾಡಲಾಗಿದೆ.

ಪ್ರತಿಯೊಬ್ಬ ವ್ಯಕ್ತಿಯೂ ಸಾಮಾನ್ಯವಾಗಿ ತನ್ನ ಹುಟ್ಟಿದ ಪರಿಸರಕ್ಕೆ ದಾಸನಾಗಿರುತ್ತಾನೆ, ಇಲ್ಲವೇ ಅದರ ವಿರುದ್ಧ ಬಂಡೇಳುತ್ತಾನೆ. ಈ ಹಂತದಲ್ಲಿ ಮೂರ್ತಿರಾಯರ ದಾರಿ ಯಾವುದೆಂಬುದನ್ನೂ ಇಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗುತ್ತದೆ. ಕನ್ನಡ ಸಾಹಿತ್ಯ ಚರಿತ್ರೆ ಕಾಲಘಟ್ಟದಲ್ಲಿ ವಿಭಿನ್ನ ಪ್ರವಾಹಗಳನ್ನು ತನ್ನಲ್ಲಿ ಅಂತರ್ಗತಗೊಳಿಸಿಕೊಂಡಿದೆ. ಬೇರೆ ಬೇರೆ ದೇಶ ಭಾಷೆ-ಸಂಸ್ಕೃತಿಗಳ ಸಂಪರ್ಕಗಳ ಫಲವಾಗಿ ಕನ್ನಡ ಸಾಹಿತ್ಯ ಕ್ಷೇತ್ರಗಳಲ್ಲಿಯೂ ಹೊಸ ಹೊಸ ಆವಿಷ್ಕಾರಗಳು ಕಂಡು ಬಂದವು. ಆತ್ಮಚರಿತ್ರೆ, ಪ್ರವಾಸ ಸಾಹಿತ್ಯ, ವೈಚಾರಿಕ ಮುಂತಾದ ಸಾಹಿತ್ಯ ಪ್ರಕಾರಗಳು ಕನ್ನಡ ಸಾಹಿತ್ಯ ಚರಿತ್ರೆಗೆ ಸೇರ್ಪಡೆಯಾದವು. ಮೂರ್ತಿರಾಯರು ಈ ಸಾಹಿತ್ಯ ಪ್ರಕಾರಗಳಿಗೆ ಹೇಗೆ ಸ್ಪಂದಿಸಿದರು, ನೀಡಿದ ಕೊಡುಗೆ ಏನು ಎಂಬುದನ್ನೂ ಇಲ್ಲಿ ಆಲೋಚನೆ ಮಾಡಲಾಗುತ್ತದೆ.

ಮೂರ್ತಿರಾಯರು ಈ ಶತಮಾನದ ಆದಿಯಿಂದ ಅಂತ್ಯದವರೆಗೆ ನಡೆದ ಹಲವು ಸಾಹಿತ್ಯಾತ್ಮಕ ಚಳುವಳಿಗಳನ್ನು ಪ್ರತ್ಯಕ್ಷವಾಗಿ ಕಂಡವರು. ಜೊತೆಗೆ ಸ್ವಾತಂತ್ರ್ಯ

ಚಳುವಳಿಯನ್ನು ಕಂಡವರು. ಈ ಚಳುವಳಿಗಳಿಗೆ ಮೂರ್ತಿರಾಯರ ಪ್ರತಿಕ್ರಿಯೆಗಳೇನು ಎಂಬುದೂ ಇಲ್ಲಿ ಗಮನಾರ್ಹವಾದ ವಿಷಯವಾಗಿದೆ. ಮೂರ್ತಿರಾಯರು ಯಾವುದೇ ಚಳುವಳಿಯ ಜೊತೆಗೆ ತಮ್ಮನ್ನು ತಾವು ಗುರುತಿಸಿಕೊಂಡವರಲ್ಲ. ಈ ಎಲ್ಲಾ ಚಳುವಳಿ-ಪಂಥಗಳಿಂದ ದೂರ ನಿಂತು ತಮ್ಮ ಸಾಹಿತ್ಯ ಸೃಷ್ಟಿಯನ್ನು ಮುಂದುವರಿಸಿದರು. ಆದರೆ ಅವರ ಸಾಮಾಜಿಕ-ಧಾರ್ಮಿಕ ನಿಲುವುಗಳನ್ನು ಕಂಡು ಅವರನ್ನು ಬಂಡಾಯ ಲೇಖಕರೆಂದು ಕೆಲವರು ಗುರುತಿಸಿರುವುದೂ ಇದೆ. ಮೂರ್ತಿರಾಯರ ಈ ನಿಲುವುಗಳು ಕುವೆಂಪು ಅವರ ನಿಲುವುಗಳೊಂದಿಗೆ ಸಮನ್ವಯಗೊಳ್ಳುತ್ತವೆ. ಹೀಗೆಂದ ಮಾತ್ರಕ್ಕೆ ಅವರನ್ನು ಬಂಡಾಯ ಲೇಖಕರೆಂದು ಗುರುತಿಸುವುದು ಸರಿಯಲ್ಲ. ಏಕೆಂದರೆ ಮೂರ್ತಿರಾಯರ ಸಮಕಾಲೀನ ಲೇಖಕರಲ್ಲಿ ಆಸ್ತಿಕ ಮನೋಭಾವವನ್ನು ಹೊಂದಿದ ಕುವೆಂಪು, ಬೇಂದ್ರೆ, ಮಾಸ್ತಿ, ಪುತಿನ, ಡಿವಿಜಿ, ಗೋವಿಂದ ಪೈ-ಮುಂತಾದವರು ಒಂದು ವರ್ಗದವರು. ಶ್ರೀರಂಗ, ಶಂಬಾ, ಬೀಚಿ-ಮುಂತಾದ ನಾಸ್ತಿಕವಾದಿಗಳು ಮತ್ತೊಂದು ವರ್ಗಕ್ಕೆ ಸೇರುತ್ತಾರೆ. ಬಿ.ಎಂ. ಶ್ರೀಕಂಠಯ್ಯನವರಂತಹ ಕನ್ನಡದ ವೀರಾಭಿಮಾನವುಳ್ಳವರು ಮತ್ತೊಂದು ವರ್ಗ. ಮೂರ್ತಿರಾಯರು ಈ ಯಾವ ವರ್ಗಕ್ಕೂ ಸೇರದೆ ಇದ್ದಾಗ್ಯೂ ಕೆಲವು ವೈಶಿಷ್ಟ್ಯಗಳನ್ನು ನಾವು ಗುರುತಿಸಬಹುದು. ಆಸ್ತಿಕವಾದಿಗಳಲ್ಲದಿದ್ದರೂ ಧಾರ್ಮಿಕ ಆಚರಣೆಗಳಿಗೆ ವಿರೋಧಿಗಳಲ್ಲ. ಅವುಗಳ ಸೌಂದರ್ಯಾನುಭೂತಿಯಲ್ಲಿ ಆಸಕ್ತರು. ವೇದ ಮಂತ್ರ ಘೋಷದ ಸಂಗೀತವನ್ನು ಆಸ್ವಾದಿಸಿದವರು. ಉಪನಿಷತ್ತುಗಳಿಂದ ಪ್ರಭಾವಿತರು. ಅವರ ಬದುಕು-ಬರಹಗಳ ಮೇಲೆ ಉಪನಿಷತ್ತುಗಳ ಪ್ರಭಾವವಿದೆ. ನಾಸ್ತಿಕವಾದಿಗಳಾದರೂ ಕಟುವಾಗಿ, ಉಗ್ರವಾಗಿ ತಮ್ಮ ನಿಲುವನ್ನು ಪ್ರತಿಪಾದಿಸಿದವರಲ್ಲ. ತಮ್ಮ ನಿಲುವನ್ನು ಸೌಮ್ಯವಾಗಿಯೂ, ಹಾಸ್ಯಪ್ರಜ್ಞೆಯಿಂದಲೂ ನಿರೂಪಿಸಿದವರು. ಮೂರ್ತಿರಾಯರ ಈ ಪರಿಮಿತಿಯಿಂದಾಗಿ ಅವರ ನಿಲುವಿನಲ್ಲಿ ಒಂದು ಬಿಗು, ದೃಢತೆಯಿಲ್ಲವಾಗಿ, ಓದುಗರು ಅವರ ಅಭಿಪ್ರಾಯಗಳನ್ನು ಅಷ್ಟಾಗಿ ಗಂಭೀರವಾಗಿಯೂ ಹೇಳದೆ, ಈ ಎರಡರ ನಡುವೆ ಇದ್ದಾರೆ ಮೂರ್ತಿರಾಯರು. ಬಿ.ಎಂ. ಶ್ರೀಯವರಂತೆ ಕನ್ನಡದ ಪರವಾಗಿ ಹೋರಾಟ ಮಾಡಲಿಲ್ಲ. ಆದರೆ ಮೂರ್ತಿರಾಯರು ಸಾಹಿತ್ಯ ರಚನೆ ಮಾಡಿರುವುದು ಕನ್ನಡದಲ್ಲಿ.

"ಕನ್ನಡ ನವೋದಯ ಯುಗದ ಬರಹಗಾರರು ವಿಮರ್ಶೆಯ ಕಾರ್ಯವನ್ನು ತಾವೇ ಮಾಡಬೇಕಾಯಿತು", ಎಂದು ಎಲ್.ಎಸ್. ಶೇಷಗಿರಿರಾಯರು "ಪ್ರಿಯ ಕನ್ನಡ ಬಂಧು" ಎಂಬ ಕೃತಿಯಲ್ಲಿ ಹೇಳುವ ಮಾತು ಸಮರ್ಥನೀಯ. (1990 ಪುಟ 93) ಮೂರ್ತಿರಾಯರು ಸಮಕಾಲೀನ, ಇಂಗ್ಲಿಷ್, ಸಂಸ್ಕೃತ ಕೃತಿಗಳನ್ನು ವಿಮರ್ಶೆ ಮಾಡಿದ್ದರು. ಅವರ ವಿಮರ್ಶಾತ್ಮಕ ಕೃತಿಗಳ ಬಗ್ಗೆ ಈ ಮಹಾಪ್ರಬಂಧದಲ್ಲಿ ವಿಚಾರ ಮಾಡಲಾಗಿದೆ.

ಡಾ. ಎಸ್. ರಾಧಾಕೃಷ್ಣನ್‌ರವರ ಶಿಷ್ಯನಾಗಬೇಕೆಂದು ಅವರು ತತ್ವಶಾಸ್ತ್ರದ ವಿದ್ಯಾರ್ಥಿಯಾದರು. ಇದರಿಂದಾಗಿ ಅವರ ಪ್ರಭಾವಕ್ಕೆ ಒಳಗಾಗಿ ತಾತ್ವಿಕವಾಗಿಯೂ ತಾರ್ಕಿಕವಾಗಿಯೂ ಚಿಂತನೆ ಮಾಡುವುದನ್ನು ಅವರು ರೂಢಿಸಿಕೊಂಡವರು. ಅವರ ಸಾಹಿತ್ಯಾಸಕ್ತಿಯ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳ ಬಗ್ಗೆ ಹಾಗೂ ಬದುಕು-ಬರಹಗಳ ಮೇಲೆ ಪ್ರಭಾವ ಬೀರಿದ ಅವರ ಗುರುಗಳಾದ ಬಿ.ಎಂ.ಶ್ರೀ, ಟಿ.ಎಸ್. ಮೂರ್ತಿ,

ಉಪನಿಷತ್ತು - ಸಂಗೀತ - ಮುಂತಾದವುಗಳ ಬಗ್ಗೆ ಇಲ್ಲಿ ಅಧ್ಯಯನ ಮಾಡಲಾಗುತ್ತದೆ.

ರೊಮ್ಯಾಂಟಿಕ್ ಲೇಖಕರಲ್ಲಿ ಕಂಡು ಬರುವ ಆವೇಶ, ತೀವ್ರವಾದ ಭಾಷಾಭಿಮಾನ, ಪ್ರಾಂತ್ಯಾಭಿಮಾನಗಳು ಮೂರ್ತಿರಾಯರಲ್ಲಿ ಕಂಡುಬರುವುದಿಲ್ಲ. ಕನ್ನಡ ಏಕೀಕರಣ ಚಳುವಳಿ ಸ್ವಾತಂತ್ರ್ಯ ಸಂಗ್ರಾಮಗಳು ಪರಾಕಾಷ್ಠೆಯಲ್ಲಿದ್ದಾಗಲೂ ಮೂರ್ತಿರಾಯರು ಅವುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರಲ್ಲ. ಅವರ ಬರಹ ಈ ರೀತಿಯ ರೊಮ್ಯಾಂಟಿಸಿಸಂನಿಂದ ದೂರವಿದ್ದು ಕ್ಲಾಸಿಕಲ್ ಸಂಪ್ರದಾಯದಿಂದ ಕೂಡಿದೆ. ಕನ್ನಡದಲ್ಲಿ ಪ್ರಗತಿಶೀಲ ಪಂಥ ಪ್ರಬಲವಾಗಿದ್ದಾಗಲೂ ಮೂರ್ತಿರಾಯರು ಈ ಪಂಥಕ್ಕೆ ಕಟ್ಟು ಬೀಳದಿದ್ದರೂ ಅವರ ಧೋರಣೆ, ದೃಷ್ಟಿ, ಯಾವಾಗಲೂ ಪ್ರಗತಿಪರವೆನಿಸಿದೆ. ಇಂತಹ ಅಂಶಗಳು ಈ ಮಹಾಪ್ರಬಂಧದ ವ್ಯಾಪ್ತಿಗೆ ಒಳಪಟ್ಟಿದೆ. ಈ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಈ ಮಹಾಪ್ರಬಂಧವನ್ನು ಬರೆಯುವ ಪ್ರಯತ್ನ ಮಾಡಲಾಗಿದೆ.



# ಅಧ್ಯಾಯ – 2

# ಪ್ರಬಂಧ ಸಾಹಿತ್ಯ

## 2.1 ಆತ್ಮಕಥನಾತ್ಮಕ ಪ್ರಬಂಧಗಳು

ಕನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ಪ್ರಬಂಧ ಸಾಹಿತ್ಯಕ್ಕೆ ಒಂದು ವಿಶಿಷ್ಟ ಸ್ಥಾನ ನೀಡಿ ಅದರ ಪೋಷಣೆಗೆ ಕಾರಣವಾದವರು ಪ್ರೊ. ಎ.ಎನ್. ಮೂರ್ತಿರಾಯರು. ತಾವು ಅಧ್ಯಯನ ಮಾಡಿದ ಇಂಗ್ಲೀಷ್ ಸಾಹಿತ್ಯದಿಂದ ಸ್ಫೂರ್ತರಾಗಿ ಮತ್ತು ತಾವು ಕಂಡ ಸಾಮಾಜಿಕ, ಸಾಹಿತ್ಯಿಕ ಹಾಗೂ ಕೌಟುಂಬಿಕ ಪ್ರಸಂಗಗಳನ್ನು ವಸ್ತುವಾಗಿರಿಸಿಕೊಂಡು ಹಲವು ಪ್ರಬಂಧಗಳನ್ನು ಬರೆದರು. ಈ ಪ್ರಬಂಧಗಳನ್ನು ಹಲವು ವಿಭಾಗಗಳನ್ನಾಗಿ ವಿಂಗಡಿಸಬಹುದು. ಆತ್ಮ ಕಥನಾತ್ಮಕ, ಭಾವಗೀತಾತ್ಮಕ, ನಾಟಕೀಯ, ವಿಮರ್ಶಾತ್ಮಕ – ಹೀಗೆ ಹಲವು ರೀತಿಯ ವೈವಿಧ್ಯಮಯ ಪ್ರಬಂಧಗಳನ್ನು ಮೂರ್ತಿರಾಯರು ಬರೆದಿದ್ದಾರೆ.

ಮೂರ್ತಿರಾಯರ ಪ್ರಬಂಧಗಳಲ್ಲಿ ಗೂಢವಾಗಿಯೋ, ವ್ಯಕ್ತವಾಗಿಯೋ ಪ್ರಕಟವಾಗುವ ವಸ್ತುವೇನೆಂದು ನಾವು ಗುರುತಿಸಲು ಹೊರಟಾಗ ಮೂರ್ತಿರಾಯರ ಮನೋಧರ್ಮ, ವೈವಿಧ್ಯಮಯ ಅಭಿರುಚಿ ಮನಶ್ಶಾಸ್ತ್ರೀಯ ವಿವರಣೆ, ಮಾನವನ ಮನಸ್ಸಿನ ಒಳನೋಟ, ಕೌಟುಂಬಿಕ ಪ್ರಸಂಗಗಳು, ಸಮಾಜ, ರಾಜಕಾರಣಗಳ ಸೂಕ್ಷ್ಮಾವಲೋಕನಗಳನ್ನು ನಾವು ಕಾಣುತ್ತೇವೆ. ಕೆ.ಎಸ್. ನರಸಿಂಹಸ್ವಾಮಿಯವರ ಕೌಟುಂಬಿಕ ಗೀತೆಗಳಂತೆ ಇವರ ಕೌಟುಂಬಿಕ ಪ್ರಬಂಧಗಳು ಒಂದು ಆತ್ಮೀಯತೆಯ ಆವರಣವನ್ನು ಸೃಷ್ಟಿಸುತ್ತವೆ. ಮೂರ್ತಿರಾಯರ ಪ್ರಬಂಧಗಳ ಮತ್ತೊಂದು ಮಹತ್ವದ ಲಕ್ಷಣವೆಂದರೆ, ಅದನ್ನು ಓದುತ್ತಿದ್ದಂತೆಯೇ ನಮ್ಮಲ್ಲಿ ಚಿಂತನೆಗೆ ಒಂದು ಪ್ರಚೋದನೆ ಉಂಟಾಗುತ್ತದೆ. ಡಾ. ಎಸ್. ರಾಧಾಕೃಷ್ಣನ್ ಅವರ ಶಿಷ್ಯನಾಗಬೇಕೆಂಬ ಹಂಬಲದಿಂದ ತತ್ವಶಾಸ್ತ್ರವನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಂಡು ಅಧ್ಯಯನ ಮಾಡಿದರು. ಆದ್ದರಿಂದ ಅವರ ಪ್ರಬಂಧಗಳಲ್ಲಿ ತಾತ್ವಿಕಾಂಶಗಳಿಂದ ಕೆನೆಗಟ್ಟಿದ ವಿಚಾರಗಳಿವೆ. ವೇದ, ಉಪನಿಷತ್, ರಾಮಾಯಣ, ಭಾರತ, ಗೀತೆ ಇತ್ಯಾದಿ ಭಾರತೀಯ ಧರ್ಮ-ಶಾಸ್ತ್ರ ಗ್ರಂಥಗಳನ್ನು ಹಾಗೂ ಬೈಬಲ್ಲನ್ನು ಆಳವಾಗಿ ಅಭ್ಯಾಸ ಮಾಡಿದುದರ ಫಲವಾಗಿ ಅವರ ಪ್ರಬಂಧಗಳಲ್ಲಿ ಈ ಗ್ರಂಥಗಳ ಪ್ರಭಾವವನ್ನು ಗುರುತಿಸಬಹುದು. ಒಂದು ತಾತ್ವಿಕ ಚಿಂತನೆ, ಮುಕ್ತಾಯಗಳು ಓದುಗರ ಭಾವನಾ ಲೋಕದ ಉದಾತ್ತೀಕರಣಕ್ಕೆ ಎಡೆ ಕೊಡುತ್ತವೆ. ಅಲ್ಲಲ್ಲಿ ಅವರು ಉಪಯೋಗಿಸಿದ ಉಪಮೆಗಳು, ದೃಷ್ಟಾಂತಗಳು ಅವರ ಭಾರತೀಯ ತತ್ವಶಾಸ್ತ್ರ

ಜ್ಞಾನವನ್ನು ಪ್ರತಿಬಿಂಬಿಸುತ್ತದೆ. ಮೂರ್ತಿರಾಯರು ಪಾಶ್ಚಿಮಾತ್ಯ-ಅದರಲ್ಲಿಯೂ ಗ್ರೀಕ್ ಹಾಗೂ ಫ್ರೆಂಚ್ ಮಹಾಕಾವ್ಯ ನಾಟಕಾದಿಗಳನ್ನು ವಿಪುಲವಾಗಿ ಅಭ್ಯಸಿಸಿದವರು. ಇದರ ಪ್ರಭಾವವನ್ನೂ ನಾವು ಇವರ ಪ್ರಬಂಧಗಳಲ್ಲಿ ಕಾಣಬಹುದು.

ಇಂಗ್ಲೀಷ್ ಸಾಹಿತ್ಯದ ನಿರಂತರ ಸ್ವಾಧ್ಯಾಯಿಗಳಾಗಿದ್ದ ಮೂರ್ತಿರಾಯರು ಇಂಗ್ಲೀಷ್ ಪ್ರಬಂಧಕಾರರ ಪ್ರಬಂಧಗಳಿಂದ ಸ್ಫೂರ್ತಿ, ಪ್ರಭಾವ, ಪ್ರೇರಣೆಗಳಿಂದಾಗಿ ಹಲವು ಪ್ರಬಂಧಗಳನ್ನು ಬರೆದರು. ಅವರ ಪ್ರಬಂಧ ಸಂಕಲನದ ಹೆಸರುಗಳು ಈ ವಾದವನ್ನು ಸಮರ್ಥಿಸುತ್ತವೆ. ಅವರು ಇಂಗ್ಲೀಷ್ ಭಾಷೆಯ ಸುಪ್ರಸಿದ್ಧ ಶಿಶು ಸಾಹಿತ್ಯ, ಕಾದಂಬರಿ, ಸಣ್ಣಕಥೆ, ಪ್ರವಾಸ ಸಾಹಿತ್ಯ, ನಾಟಕ, ಪ್ರಬಂಧ ವಿಮರ್ಶೆಗಳನ್ನು ಅತ್ಯಂತ ಶ್ರದ್ಧೆಯಿಂದ ಅಭ್ಯಾಸ ಮಾಡಿದವರು. ಈ ಕಾರಣದಿಂದ ಈ ಎಲ್ಲಾ ಸಾಹಿತ್ಯಗಳ ವೈವಿಧ್ಯತೆ ಗಾಢವೂ, ದಟ್ಟವೂ ಆದ ಪ್ರಭಾವ ಇವರ ಪ್ರಬಂಧ ಸಾಹಿತ್ಯದ ಮೇಲೆ ಆಗಿರುವುದನ್ನು ನಾವು ಕಾಣಬಹುದು.

ಮೂರ್ತಿರಾಯರ ಆತ್ಮಚರಿತ್ರೆ ಇತ್ತೀಚೆಗೆ ಪ್ರಕಟವಾಯಿತು. ಅವರ ಪ್ರಬಂಧ ಗಳಲ್ಲಿ ಹಲವು ಅವರ ಆತ್ಮಚರಿತ್ರೆಯೊಂದಿಗಿನ ಹಲವಂಶಗಳೊಂದಿಗೆ ತಾದಾತ್ಮ್ಯವನ್ನು ಹೊಂದಿವೆ. ಈ ನಿಕಟ ಸಾಮೀಪ್ಯವನ್ನು ಕೌಟುಂಬಿಕ, ರಾಜಕೀಯ, ಸಾಮಾಜಿಕ, ಸಾಹಿತ್ಯಾತ್ಮಕ, ವಿಮರ್ಶಾತ್ಮಕ ಅಂಶಗಳೊಂದಿಗೆ ಸಮನ್ವಯಗೊಳಿಸಬಹುದು. ಅವರ ವೈವಾಹಿಕ-ಜೀವನದ ಸರಸವೂ ಪ್ರಬಂಧಕ್ಕೆ ಒಂದು ಸುಂದರ ಸಾಮಗ್ರಿಯನ್ನು ಒದಗಿಸಿದೆ. ಮೂರ್ತಿರಾಯರು ಸ್ವಯಂ ಸಾಹಿತಿಗಳು, ಸಾಹಿತ್ಯ ಬೋಧಕರು. ಆದರೆ ಸಾಹಿತ್ಯ ರಂಗದಲ್ಲಿ ಅತಿ ಅಬ್ಬರ, ವೀರಾವೇಶ, ಅಲಂಕಾರಿಕ ಘೋಷಣೆಗಳು ಅವರಿಗೆ ಹಿಡಿಸವು. ಸಾಹಿತ್ಯವಾಗಲಿ, ಭಕ್ತಿಯಾಗಲಿ ದೈನಂದಿನ ಜೀವನವಾಗಲಿ, ಅದು ಗಂಭೀರವೂ, ನಿರಾಡಂಭರವೂ, ಸರಳವೂ, ಹಿತ-ಮಿತವಾಗಿಯೂ ಇರಬೇಕು ಎಂಬ ಅವರ ಮನೋ ಧರ್ಮದ ಮೂರ್ತಸ್ವರೂಪವೆನಿಸಿದಂತಹ ಪ್ರಬಂಧಗಳೂ ಇವೆ. ಹೀಗೆ ಜೀವನದ ವಿವಿಧ ಸರಕುಗಳನ್ನು ಸಂಗ್ರಹಿಸಿದ ಅವರ ಪ್ರಬಂಧ ಸಾಹಿತ್ಯ ಅವರ ಮನೋಭಾವಕ್ಕೆ ಒಂದು ಸೊಗಸಾದ ನಿದರ್ಶನ.

ಅವರ ಆತ್ಮಚರಿತ್ರೆಯ ಮೈಥಿಲಿ, ಸರೋಜ ಇಲ್ಲಿ ಗೌರಜ್ಜಿಯಾಗಿ ಮೈ ತಳೆದಿದ್ದಾರೆ. ಗೌರಜ್ಜಿ ವಿಧವೆ. ಆದರೆ ಗೌರವಯುಕ್ತ ಜೀವನ ನಡೆಸಿದ ಸಾತ್ವಿಕ ಜೀವ. ಅವರ ಆತ್ಮ ಚರಿತ್ರೆಯ ಅವರ 'ಅಮ್ಮ' ಎಂದರೆ ಅಜ್ಜಿ-ತಂದೆಯ ತಾಯಿ-ಅವರ ಆತ್ಮೀಯತೆಯ ಪ್ರತೀಕವೆನಿಸಿದ್ದಾರೆ. ಅಜ್ಜಿ-ಮೊಮ್ಮಕ್ಕಳ ಭಾವನಾತ್ಮಕ ಸಂಬಂಧ ಅತ್ಯಂತ ಮಧುರವೂ, ಹಿತಕರವೂ, ಆದುದು. ಇಂದಿನ ಗೌರಜ್ಜಿಯ ಮಾನಸಿಕ ತುಡಿತ ಮಿಡಿತ ತಲ್ಲಣಗಳು ಇಲ್ಲಿ ಚಿತ್ರಿತವಾಗಿದೆ. ಶ್ರೀಮತಿ ಎಂ.ಕೆ. ಇಂದಿರಾರವರ "ಫಣಿಯಮ್ಮ" ವನ್ನು ನೆನಪಿಸುವ ಈ ವ್ಯಕ್ತಿ ಚಿತ್ರಣ ಪ್ರಬಂಧ ಮೂರ್ತಿ ರಾಯರ ಸಾಮಾಜಿಕ ಕಳಕಳಿಯ ಪ್ರತೀಕ. ಗೌರಜ್ಜಿಯ ಅನಿವಾರ್ಯ ಏಕಾಕೀತನ, ಅವಳನ್ನು ಆಗಾಗ ಕಾಡುತ್ತಿದ್ದ ಅನಾಥ ಪ್ರಜ್ಞೆ ನಮ್ಮ ಸಾಮಾಜಿಕ ಕ್ರೌರ್ಯದ ಒಂದು ಮುಖ.

'ಲಲಿತೆಯ ವಿದ್ಯಾಭ್ಯಾಸ, ಪ್ರಣಯ ಯಾತ್ರೆ, ದಿವಾನ ಖಾನೆಯ ಅಂದ ಚಂದ, ನಿಲ್ಲುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು, ಜೇಡದ ಅತಿಥಿಗಳು'-ಇಂತಹ

ಪ್ರಬಂಧಗಳನ್ನು ಒಂದು ಗುಂಪಿಗೆ ಸೇರಿಸಬಹುದು. ಮುದ್ದಣ್ಣನವರ ಪತ್ನಿ ಶಾರದಮ್ಮ-ನವರು (ಈಗ ದಿವಂಗತರು) ಇಲ್ಲಿ ಲಲಿತೆಯಾಗಿದ್ದಾರೆ. ಇಲ್ಲಿ ನಾವು ಕಾಣುವುದು ಒಂದು ಸುಂದರವಾದ ಸಂಸಾರದ ಚಿತ್ರಣ. ಪ್ರಸನ್ನಕರವಾದ ವಾತಾವರಣದ ಒಂದು ಕುಟುಂಬದ ಪತಿ-ಪತ್ನಿ, ಅತ್ತೆ-ಸೊಸೆ, ತಾಯಿ-ಮಗ ಮುಂತಾದ ಸಂಬಂಧಗಳ ರಮ್ಯ ವಿವರಣೆ ಇಲ್ಲಿದೆ. ಮದುವೆಯಾದ ಹೊಸತರಲ್ಲಿ ಪತಿ ಲಲಿತೆಗೆ ಇಂಗ್ಲಿಷ್ ಶಿಕ್ಷಣ ಕೊಡಿಸಲು ಮಾಡಿದ ಪ್ರಯಾಸ ಪೂರ್ವಕ ಪ್ರಯತ್ನ ಲಲಿತೆಯ ಪ್ರತಿಕ್ರಿಯೆ-ಇತ್ಯಾದಿಗಳು ಬಹು ವಿನೋದ ಶೈಲಿಯಲ್ಲಿ ಬಂದಿವೆ. ಮನೆಯಲ್ಲಿ ಪತಿಪತ್ನಿಯರು ಗುರುಶಿಷ್ಯರಾಗುವುದು, ಸರಸತೆಯ ವಾತಾವರಣಕ್ಕೆ ಬದಲಾಗಿ ಒಂದು ಗಂಭೀರ ವಾತಾವರಣ ಸೃಷ್ಟಿಯಾಗುವುದು. ಪಂಡಿತ ಜವಹರಲಾಲ್ ನೆಹರೂರವರು ತಂಗಿ ಕೃಷ್ಣಾ ಹತೀಸಿಂಗ್‌ಗೆ ಗಣಿತ ಶಾಸ್ತ್ರವನ್ನು ಬೋಧನೆ ಮಾಡಲು ಹೊರಟಂತಹ ಒಂದು ಚಿತ್ರಣವಿದೆ. ಆದರೆ ಇಂತಹ 'ಮಹಿಳೋದ್ಧಾರ ಕಾರ್ಯಕ್ರಮ' ಎಷ್ಟು ನೀರಸ, ಅರ್ಥಹೀನ, ಶುಷ್ಕ ಎಂಬ ಬಗ್ಗೆ ಇಲ್ಲಿ ವ್ಯಂಗ್ಯವೂ ಇದೆ. ತವರು ಮನೆಗೆ ಹೋದ ಲಲಿತೆ ಶಿಷ್ಯೆಯಾಗಿ ಬರೆದ ಪತ್ರ ಪ್ರಬಂಧಕ ನಾಯಕರಿಗೆ ತುಂಬಾ ನಿರಾಶೆ ತಂದಿತ್ತು. ಅನಂತರ ಇವರ 'ಪ್ರಿಯ ಲಲಿತೆಯಿಂದ' ಬಂದ ಕಾಗದ' ಸಂತಸದ ಹೊನಲನ್ನೇ ಹರಿಸಿತು. ಪತಿ-ಪತ್ನಿಯರು ಪತಿ-ಪತ್ನಿಯರಾಗಿಯೇ ಇದ್ದರೆ ಎಷ್ಟು ಚೆಂದ ಎಂಬ ಸಂದೇಶ ಇಲ್ಲಿದೆ. ಒಂದು ಮಾತಿನಲ್ಲಿ ಹೇಳಬೇಕೆಂದರೆ ಭಾರತೀಯ ದಾಂಪತ್ಯ ಕಲ್ಪನೆಯ ಒಂದು ಪ್ರತಿಮಾ ರೂಪ ಇಲ್ಲಿದೆ. ಪ್ರಬಂಧದ ಮಧ್ಯೆ ಮಿಂಚುವ ಹಾಸ್ಯ ನಮ್ಮ ತುಟಿಯ ಮೇಲೆ ಮುಗುಳು ನಗೆಯನ್ನು ಮಿಂಚಿಸುತ್ತದೆ.

'ಅಷ್ಟು ಹೊತ್ತಿಗೆ ಕೊಬ್ಬರಿ ಸಕ್ಕರೆಯೆಲ್ಲಾ ಅದೃಶ್ಯವಾಗಿ ಲಲಿತೆಯ ತುಟಿಯ ಮೇಲೆ ಸ್ವಲ್ಪ ಮಾತ್ರ ಕಾಣುತ್ತಿತ್ತು. ನನಗೆ ಚೆರಪು ಸಿಕ್ಕಿದ್ದು ಅಷ್ಟೆ.'

(ಸ. ಲ. ಪ್ರ. ಪುಟ 48)

ಈ ಮೇಲಿನ ಸಾಲುಗಳು ಅತ್ಯಂತ ಧ್ವನಿಪೂರ್ಣವಾಗಿದೆ. ಮುದ್ದಣ-ಮನೋರಮೆಯರ ಕಥಾಸಂವಾದ(ಕಥನ-ವಿಮರ್ಶೆ)ದ ತಂತ್ರ ಇಲ್ಲಿ ಪರೋಕ್ಷವಾಗಿ ಅಡಕವಾಗಿದೆ. ಈ ಸಾಲುಗಳನ್ನು ನರಸಿಂಹಸ್ವಾಮಿಯವರ "ಮೈಸೂರು ಮಲ್ಲಿಗೆ"ಯ ಒಂದು ಕವನದ ಭಾಗಕ್ಕೆ ಹೋಲಿಸಬಹುದು.

'ನಿಮ್ಮ ತುಟಿಯೊಳಿರಲು ತಾಂಬೂಲರಾಗ
ನನ್ನ ತುಟಿ ಕೆಂಪಾದುದೇಕಿನಿಯ ಬೇಗ ?

( 1972, ಪುಟ 27)

ಸರೋಜ ನಾರಾಯಣರಾವ್ ಅವರ "ಹಳ್ಳಿಯಿಂದ ದಿಲ್ಲಿಗೆ" ಎಂಬ ಕೃತಿಯ ಮೇಲೆ ಈ ಪ್ರಬಂಧದ ಪ್ರಭಾವವನ್ನು ನಾವು ಗುರುತಿಸಬಹುದು.

ಈ ಪ್ರಬಂಧದ ಇನ್ನೊಂದು ಮುಖ್ಯ ಲಕ್ಷಣವೆಂದರೆ ಸ್ತ್ರೀ ವಿಮೋಚನಾ ಚಳುವಳಿಯ ಬಗ್ಗೆ ಒಂದು ವಿಡಂಬನೆ ಹಾಗೂ ಸ್ತ್ರೀಯರ ಇತಿಮಿತಿಗಳು. ಇಂದು ಆ ಪ್ರಬಂಧ ಬರೆಯುವ ಕಾಲದಲ್ಲಿ ಕೂಡಾ ಅಗ್ಗದ ಜನಪ್ರಿಯತೆ ಪಡೆದು ನಾಯಕರಾಗಲು ಹವಣಿಸುತ್ತಿದ್ದ ಜನ ಕೆಲವು ಘೋಷಣೆಗಳನ್ನು ತಮ್ಮ ಅಸ್ತ್ರವಾಗಿಟ್ಟುಕೊಂಡಿರುತ್ತಾರೆ. ಇವರು ವೇದಿಕೆಯ ಮೇಲೆ ನಿಂತಾಗ ಇಂತಹ ಅರ್ಥಹೀನ ಘೋಷಣೆಗಳನ್ನು ಕೂಗಿ

ಅದೇ ಬಿಂಡವಾಳದಿಂದ ನಾಯಕತ್ವ ಪಡೆಯುವುದೂ ಉಂಟು. ಇಂತಹ ಘೋಷಣೆಗಳ ಜಾಡನ್ನು ಹಿಡಿದು ಹೋದರೆ ಎಂತಹ ಅನರ್ಥ ಸಂಭವಿಸುತ್ತದೆ ಎಂಬ ಧ್ವನ್ಯಾತ್ಮಕ ವಿಚಾರವೂ ಇಲ್ಲಿದೆ, ಪ್ರಾತಿನಿಧಿಕವಾಗಿ ಈ ವಾಕ್ಯಗಳು ಗಮನಾರ್ಹ.

"ವೇದಿಕೆಯ ಮೇಲೆ ನಿಂತು ಈ ಇಪ್ಪತ್ತನೆಯ ಶತಮಾನದಲ್ಲಿ ಸಹ-ನಾಗರೀಕರೆಂದು ಹೇಳಿಕೊಳ್ಳುವ ನಾವು ಹೆಂಗಸರನ್ನು ಅಜ್ಞಾನ ಕೂಪದಲ್ಲಿಯೇ ಇಟ್ಟಿರುವುದನ್ನು ನೋಡಿದರೆ ರಕ್ತ ಕುದಿಯುತ್ತದೆ. ನಾವು ಸಂಪ್ರದಾಯಕ್ಕೆ ಕಟ್ಟುಬಿದ್ದ ಗುಲಾಮರು, ಹೇಡಿಗಳು, ಎಂದು ನಾನು ಗರ್ಜಿಸುತ್ತಿರುವುದು. ಇತ್ತ ನನ್ನ ಪತ್ನಿಗೆ ಇಂಗ್ಲೀಷ್ ಓದಿ ಬರೆಯುವುದಕ್ಕೆ ಬಾರದು, ಹಾಗೆಯೇ ಯೋಚಿಸಿ ನೋಡಿ 'ಇನ್ನೂ ಕಾಲ ಮೀರಿಲ್ಲ' ಈ ಕುಂದನ್ನು ಹೋಗಲಾಡಿಸಿ ಮತ್ತೆ ನಾಲ್ಕು ಜನರಲ್ಲಿ ತಲೆಯೆತ್ತಿಕೊಂಡು ನಡೆಯಬೇಕು ಎಂದುಕೊಂಡು ಕೂಡಲೇ ಲಲಿತೆಗೆ ಒಬ್ಬ ಉಪಾಧ್ಯಾಯಿನಿಯನ್ನು ಗೊತ್ತು ಮಾಡಬೇಕೆಂದು ನಿಶ್ಚಯಿಸಿದ್ದೇನೆ."

(ಅದೇ ಪುಟ 45)

ಮೂರ್ತಿರಾಯರ ಮಾತಿನಲ್ಲಿಯೇ ಇದನ್ನು ವಿಶ್ಲೇಷಿಸಬೇಕೆಂದರೆ ಇದೊಂದು ಕ್ಲೀಷೆ. ಈ ಮೇಲ್ಕಂಡ ವಾಕ್ಯಗಳು ಅತ್ಯಂತ ಅರ್ಥಗರ್ಭಿತ. ಇಂದಿನ ಸಮಾಜದಲ್ಲಿ ವಿದ್ಯಾವಂತರೆನಿಸಿಕೊಂಡ ಜನರ ಸಾಂಗತ್ಯವಿಲ್ಲದ ಅನಿಸಿಕೆಗಳನ್ನು ಬಹು ಸೊಗಸಾಗಿ ಲೇವಡಿ ಮಾಡುತ್ತಾರೆ. ಕಲ್ಪನಾ ಲೋಕದ ಇಂತಹ ಲೆಕ್ಕಾಚಾರಕ್ಕೂ, ವಾಸ್ತವತೆಗೂ ಅಜಗಜಾಂತರವೆಂಬುದನ್ನು:

ನಾನು ಮೆದುಳಿನ ಕೆಲಸಕ್ಕೆ ಕುಳಿತರೆ ಮುಸರೆ ಕೆಲಸವನ್ನು ನೀವು ಮಾಡುತ್ತೀರಾ?

(ಅದೇ ಪುಟ 47)

ಎಂಬ ಲಲಿತೆಯ ಮಾತಿನ ಮೂಲಕ ಇದನ್ನು ದೃಢೀಕರಿಸುತ್ತಾರೆ. ಪರೋಕ್ಷವಾಗಿ ನಿತ್ಯ ಜೀವನದಿಂದ ನಾವು ದೂರವಿರುವ ಶಿಕ್ಷಣವನ್ನು ಕುರಿತು ಮಾರ್ಮಿಕವಾದ ಟೀಕೆಯೂ ಇದೆ.

ಈ ಪ್ರಬಂಧದ ಕೊನೆ ಅತ್ಯಂತ ನಾಟಕೀಯವಾಗಿ ಮುಕ್ತಾಯವಾದ ಘಟ್ಟಕ್ಕೆ ತಲುಪುತ್ತದೆ. ಇದರಲ್ಲಿ ವ್ಯಕ್ತವಾಗಿವ ಧ್ವನಿ ಸಾಂಸಾರಿಕ ಸಾಮರಸ್ಯವನ್ನು ಸಾರುತ್ತದೆ.

ಈಗ ಲಲಿತೆಯೂ ನಾನೂ ಒಟ್ಟಿಗೇ 'ರೋಮಿಯೋ ಜೂಲಿಯೇಟ್' ನಾಟಕವನ್ನು, ಷೆಲ್ಲಿಯ ಗೀತೆಗಳನ್ನು ಓದುತ್ತೇವೆ. ಆದರೆ ಅದು ನನ್ನ ಶಿಕ್ಷಣದ ಮಹಿಮೆಯಲ್ಲ.

( ಅದೇ ಪುಟ 52)

'ಪ್ರಣಯ ಯಾತ್ರೆ' ಇನ್ನೊಂದು ಆತ್ಮಕಥನಾತ್ಮಕ ಪ್ರಬಂಧ. ಇದೊಂದು ಕಥನ ಪ್ರಬಂಧ. ನೂತನ ದಂಪತಿಗಳು ಮಧುಚಂದ್ರಕ್ಕಾಗಿ ಒಂದು ಹಳ್ಳಿಗೆ ಹೋಗಿ ನೆಲೆಸಿ, ಅಲ್ಲಿ ಅವರು ಪಟ್ಟ ಬವಣೆಯನ್ನು ನವಿರಾದ ಹಾಸ್ಯಶೈಲಿಯಿಂದ ವರ್ಣಿಸುತ್ತಾರೆ. ಒಂದು ಮನೋಹರವಾದ ಪ್ರಪಂಚ ನಮ್ಮ ಮುಂದೆ ತೆರೆದುಕೊಳ್ಳುತ್ತದೆ. ಆದರೆ ಅನಿರೀಕ್ಷಿತ ತಿರುವುಗಳು ಒದಗಿ ಮಧುಚಂದ್ರ ಯಾತ್ರೆ ಮುಗಿಯದೆ ಹೋಗುತ್ತದೆ. ಆದರೆ ಈ ವಿಫಲತೆಯಲ್ಲಿಯೂ ಒಂದು ಬಗೆಯ ನಾವೀನ್ಯ, ಸರಸತೆಗಳು ಉಕ್ಕುತ್ತವೆ. ಚೆಲ್ಲುಗಾತಿಯೂ, ರಸಿಕಳೂ ಆದ ಪತ್ನಿ ಕಲಾತ್ಮಕ ದೃಷ್ಟಿಯ ಪತಿ, ಮಗ ಸೊಸೆಯರ

ಸರಸವನ್ನು ಕಂಡು ಸಂತೋಷಿಸುವ ಕಾಲ್ಪನಿಗೆ ನಮ್ಮ ಬಿಂದು ಒಂದು ಕುಟುಂಬ ಇಲ್ಲಿದೆ. ಕಾಫಿ ಮಾಡಲು ಹೋಗಿ, ನೀರು ಇಡಿ ಹೆಂಡತಿಗೆ ಸಹಕರಿಸಲು ಮುಂದಾದಾಗ ಪತ್ನಿಯನ್ನು ಹಾಸ್ಯ ಮಾಡಲು ಹೋಗಿ ಪತಿ ಎದುರಿಸಿದ ಸಮಸ್ಯೆಗಳು ಪ್ರಸನ್ನತೆಯ ಪರಿಸರವನ್ನು ನಿರ್ಮಿಸುತ್ತದೆ. ಧಾರಾಕಾರವಾಗಿ ಬಿದ್ದ ಮಳೆ ಇವರ ಪ್ರಯಾಣ ಯಾತ್ರೆಗೆ ಪೋಷಕವಾಗುವುದಕ್ಕೆ ಬದಲಾಗಿ ರಾತ್ರಿ ಮಲಗದಂತೆ ಮಾಡುತ್ತದೆ. ಪತ್ನಿಯೊಂದಿಗೆ ವಾಯುವಿಹಾರಕ್ಕೆ ಹೋಗಲೆಳಸುವ ಪತಿ, ನಾಚಿ ನೀರಾಗುವ ಪತ್ನಿ-ಹಳ್ಳಿಯ ವಾತಾವರಣದಲ್ಲಿ ಒಂದು ಸುಂದರ ಚಿತ್ರವನ್ನು ಒದಗಿಸುತ್ತದೆ.

ಇಲ್ಲಿಯ ವೈಶಿಷ್ಟ್ಯವೆಂದರೆ ತಾಯಿ, ಮಗ, ಅಣ್ಣ-ತಮ್ಮಂದಿರ, ಪತಿ-ಪತ್ನಿಯರ ಮಧುರ ಸಂಬಂಧ. ತಾವು ಹೋಗಬೇಕೆಂದಿದ್ದ ಮನೆಯಲ್ಲಿ ದೆವ್ವವಿರುವುದೆಂಬ ಸುದ್ದಿ ತಮ್ಮನಿಂದ ಅಣ್ಣನಿಗೆ, ಪತ್ನಿಯ ಮೂಲಕ ತಾಯಿಗೆ ತಲುಪಿ, ತಾಯಿ ಮಗನನ್ನು ಆ ಮನೆಗೆ ಹೋಗಬೇಡವೆಂದು ಪ್ರತಿಬಂಧಿಸುತ್ತಾರೆ. ಈ ಸಂಬಂಧಗಳು ಮೂರ್ತಿರಾಯರ ವೈಯಕ್ತಿಕ ಜೀವನದಲ್ಲಿಯೂ ಮಹತ್ವ ಅಂಶಗಳಾಗಿವೆ. ಮಧುಚಂದ್ರಕ್ಕಾಗಿ ಹೋಗುವ ನವ ದಂಪತಿಗಳು ಕಾಶ್ಮೀರಕ್ಕೋ, ಊಟಿಗೋ ಹೋಗುವ ಸಂಪ್ರದಾಯವಿದೆ. ಆದರೆ ಈ ದಂಪತಿಗಳು ಮಧುಚಂದ್ರಕ್ಕಾಗಿ ಆರಿಸಿಕೊಂಡ ಸ್ಥಳ-ಹೊನ್ನೂರು ಎಂಬ ಹಳ್ಳಿ. ಕೆ.ಎಸ್. ನರಸಿಂಹಸ್ವಾಮಿಯರ ಕೌಟುಂಬಿಕ ಗೀತೆಗಳಲ್ಲಿ ಹೊನ್ನೂರು ಎಂಬ ಹಳ್ಳಿ ಸಾಮಾನ್ಯ. ಕಾರಣ ಮೂರ್ತಿರಾಯರ ಮನೋಧರ್ಮ ಸರಳತೆಯ ಕಡೆ ಹೆಚ್ಚು ಬಾಗಿರುವುದನ್ನು ಕಾಣುತ್ತೇವೆ.

ಈ ಪ್ರಬಂಧ ಆತ್ಮಚರಿತ್ರೆಯ ಒಂದು ಭಾಗ. ಪ್ರಬಂಧಕಾರರ ವೈಯಕ್ತಿಕ ಜೀವನ ಸಂಸಾರ. ದಾಂಪತ್ಯಗಳೇ ಪ್ರಬಂಧದ ವಸ್ತುಗಳು. ಈ ಪ್ರಬಂಧದ ಕೆಲವು ಪ್ರಸಂಗಗಳನ್ನು ಅವರ ಆತ್ಮ ಚರಿತ್ರೆಯಲ್ಲಿ ಪ್ರಕಟವಾದ ಪ್ರಸಂಗಗಳೊಂದಿಗೆ ಸಮನ್ವಯಗೊಳಿಸಿ ನೋಡಬಹುದು.

"ಲಲಿತೆ ತನ್ನ ಶುಭ್ರವಾದ ಹಣೆಯಲ್ಲಿ ಹುಬ್ಬಿನ ನಡುವೆಗಿಂತ ಸ್ವಲ್ಪ ಮೇಲೆ ಸಣ್ಣದಾಗಿ ಕುಂಕುಮದ ಬೊಟ್ಟನ್ನು ಇಟ್ಟು, ಬಂದರೆ, ಅದೆಷ್ಟು ಚಲುವೆಯಾಗಿ ಕಾಣುತ್ತಾಳೆ, ಆದರೆ ಆ ಬೊಟ್ಟನ್ನು ಸ್ವಲ್ಪ ದೊಡ್ಡದು ಮಾಡಿದರೆ ಸಾಕು, ಅದನ್ನು ಹಣೆಯ ಮೇಲೆ ಸ್ವಲ್ಪ ಎತ್ತರದಲ್ಲಿಟ್ಟರೆ ಸಾಕು, ದುಂಡು ಕುಂಕುಮಕ್ಕೆ ಸ್ವಲ್ಪ ಬಾದಾಮಿಯ ಆಕಾರವನ್ನು ಕೊಟ್ಟರೆ ಸಾಕು, ಉಚಿತ ಪ್ರಮಾಣ ಕೆಟ್ಟು, ಹೋಗಿ ಕಲಾವಸ್ತುವಿನಲ್ಲೆ ಇರಬೇಕಾದ ಮಿತಿಯೂ ಹಿಡಿತವೂ ತಪ್ಪಿ ಹೋಗುತ್ತದೆ. ಆದರೆ ನಮ್ಮ ತಾಯಿಗೆ ಕುಂಕುಮವು ಚೆಲುವಿನ ಬೊಟ್ಟಲ್ಲ, ಪವಿತ್ರವಾದ ಸತೀತ್ವದ ಚಿಹ್ನೆ. ಅದು ದೊಡ್ಡದಾದಷ್ಟು, ಪವಿತ್ರತೆಯು ಹೆಚ್ಚೆಂದೇ ಅವರ ನಂಬಿಕೆ. ಅವರ ಮನಸ್ಸು ನೋಯದಿರಲೆಂದು ಲಲಿತೆ ಅವರೆದುರಿಗೆ ಇದ್ದಾಗ ಸ್ವಲ್ಪ ದೊಡ್ಡದಾಗಿ ಅಷ್ಟ ಕುಂಕುಮ ವನ್ನೇ ಇಟ್ಟುಕೊಳ್ಳುವಳು. ಅಳ್ಳಕವಾಗಿ ಜಡೆ ಹೆಣೆದು ಒಂದೆರಡು ಸಂಪಿಗೆ ಅಥವಾ ಗುಲಾಬಿ ಹೂವನ್ನು ಮುಡಿದರೆ ಅವಳು ಬಹು ಸುಂದರವಾಗಿ ಕಾಣುತ್ತಾಳೆ. ಆದರೆ ನಮ್ಮ ತಾಯಿ ಅವಳಿಗೆ ಬಿಗಿಯಾಗಿ ಜಡೆ ಹೆಣೆದು ಮುಡಿ ತುಂಬ ಹೂವು ಮುಡಿದರೆ ಚೆನ್ನಾಗಿರುತ್ತದೆಯೆಂದು ಪ್ರೀತಿಯಿಂದ ನಾಲ್ಕು ಕುಚ್ಚು ಹೂವು ಮುಡಿಸಿ ಬಿಡುತ್ತಿದ್ದರು. ಗಂಡನ ಮನಸ್ಸು ನೊಂದರೂ ನೋಯಲೆಂದು ಲಲಿತೆ ಅತ್ತೆಗೆ ವಿಹಿತವಾಗಿಯೇ

ನಡೆಯುವಳು. ನನ್ನ ಮನಸ್ಸಿನ ನೋವನ್ನು ವಾಸಿ ಮಾಡುವ ಅಮೃತ ತನ್ನಲ್ಲಿದೆಯೆಂದು ಅವಳು ಬಲ್ಲಳು.

(ಅದೇ ಪುಟ 55)

ಈ ವಾಕ್ಯಗಳಲ್ಲಿ ಕಾವ್ಯಾತ್ಮಕವಾದ ಶೈಲಿಯಿದೆ. ಕಾವ್ಯ ಧರ್ಮ, ದಾಂಪತ್ಯಧರ್ಮ ಹಾಗೂ ಲೌಕಿಕ ಧರ್ಮಗಳು ಪರಸ್ಪರ ಮಿಳಿತವಾಗಿವೆ. ಅತ್ತೆ ಸೊಸೆಯರ ನಡುವಣ ಅನ್ಯೋನ್ಯತೆ ಅನುಕರಣೀಯವೂ ಆದರ್ಶವೂ ಆಗಿದೆ.

ಹೆಚ್. ಡಿ. ಥೋರೋನ "ವಾಲ್ಡೆನ್" ಕೃತಿಯನ್ನು ನೆನಪಿಸುವ ಒಂದು ಸನ್ನಿವೇಶ ಈ ಪ್ರಬಂಧದಲ್ಲಿ ನಿರೂಪಿತವಾಗಿದೆ ಅವರು ತಮ್ಮ ಮಧುಚಂದ್ರಕ್ಕಾಗಿ ಆರಿಸಿಕೊಂಡದ್ದು ಒಂದು ಹಳ್ಳಿಯನ್ನಷ್ಟೆ. ಅದರ ಕಾರಣವನ್ನು ಅವರು ಹೀಗೆ ಹೇಳುತ್ತಾರೆ.

ನಾವು ಅಲ್ಲಿಗೆ ಬಂದದ್ದು ಹಳ್ಳಿಯ ಸರಳ ಜೀವನಕ್ಕಾಗಿ

(ಅದೇ ಪುಟ 59)

ಅವರು ತಮ್ಮ ಆತ್ಮಚರಿತ್ರೆಯಲ್ಲಿ ಕಳಲವಾಡಿಯಲ್ಲಿ ತಮ್ಮ ಮಗನ ಫಾರಂನಲ್ಲಿ ತಾವು ನಡೆಸಿದ ಸರಳ ಜೀವನವನ್ನು ವರ್ಣಿಸುತ್ತಾರೆ. ಅವರ ಪ್ರಕೃತಿ ಪ್ರೀತಿ ಸಜೀವವಾದುದು. ಪ್ರಬಂಧದ ಕೊನೆಗೆ ಬರುವ ಸನ್ನಿವೇಶ ಗಾಂಭೀರ್ಯ ಸರಸಗಳ ಹಿತಮಿತ ಬೆರಕೆ. ಸೊಸೆಯ ಅನಾರೋಗ್ಯ ತಿಳಿದ ಅತ್ತೆ ಧಾವಂತದಿಂದ ಹೊನ್ನೂರಿಗೆ ಧಾವಿಸಿ ಬರುತ್ತಾರೆ. ಸೊಸೆಯ ಅನಾರೋಗ್ಯ ತಿಳಿದು ಮಗನನ್ನೂ ಲಘುವಾಗಿ ಆಕ್ಷೇಪಿಸುತ್ತಾರೆ. ರಂಗನಬೆಟ್ಟಕ್ಕೆ ಹೋಗುವ ಕಾರ್ಯಕ್ರಮ ಇವರ ಹುಡುಗಾಟಿಕೆಯಿಂದ ತಪ್ಪಿಹೋಯಿತು. ಬೆಟ್ಟಕ್ಕೆ ಹೋಗಿ ಬರೋಣವೆಂದು ಲಲಿತೆಯ ಅಪೇಕ್ಷೆ. ಲಲಿತೆ ಗಂಡನ ಮೇಲಿನ ಸಾತ್ವಿಕವಾದ ಹುಸಿ ಮುನಿಸಿನಿಂದ ಮೊದಲು ಕೆಮ್ಮಿ ಅತ್ತೆಯಿಂದ ಪತಿಯನ್ನು ಬಯ್ಯಿಸಿ, ತೃಪ್ತಿಪಟ್ಟುಕೊಳ್ಳುತ್ತಾಳೆ. ತನಗೆ ಅಂತಹ ಜ್ವರವಿಲ್ಲವೆಂದು ಬೆಟ್ಟಕ್ಕೆ ಹೋಗಿ ದೇವರ ದರ್ಶನ ಮಾಡಿಕೊಂಡು ಬರೋಣವೆಂದು ಹೇಳುವಾಗ-ಔತಣವಿಲ್ಲದೆಯೇ ಬಂದ ನಿಜವಾದ ಕೆಮ್ಮಿನ ಕಾರಣವಾಗಿ ಊರಿಗೆ ಹಿಂದಿರುಗಬೇಕಾಯಿತು. ಪತಿ-ಪತ್ನಿಯರು ಒಂದಾದರೂ ತಾಯಿಯ ಒತ್ತಾಯದ ಮುಂದೆ ಇವರ ಪ್ರಣಯ ಯಾತ್ರೆ ಕೇವಲ ಇಪ್ಪತ್ತೇ ದಿನಗಳಲ್ಲಿ ಮುಗಿಯಿತು.

'ದಿವಾನಖಾನೆಯ ಅಂದ ಚೆಂದ' ಮೂರ್ತಿರಾಯರ ಜೀವನದರ್ಶನವನ್ನು ಎತ್ತಿ ಹಿಡಿಯುವ ಒಂದು ಪ್ರಬಂಧ. ಒಂದು ರೀತಿಯಲ್ಲಿ ಇದೂ ಒಂದು ಕೌಟುಂಬಿಕ ಪ್ರಬಂಧ. ಓದುಗರ ಒಳಗಣ್ಣನ್ನು ತೆರೆಸಿ ಒಂದು ಅಂತರಂಗ ಜಾಗೃತಿಯನ್ನುಂಟುಮಾಡುವ ತಾತ್ವಿಕ ಪ್ರಬಂಧ. ಈ ಪ್ರಬಂಧದಲ್ಲಿ ಒಂದು ಚಿಂತನಶೀಲ ವಿಚಾರವಿದೆ. ದಿವಾನಖಾನೆಯನ್ನು ಒಂದು ಪ್ರತಿಮೆಯನ್ನಾಗಿರಿಸಿಕೊಂಡು ಅದರ ಸುತ್ತ ಹೆಣೆದ ವಿಚಾರಬಂಧ ಇಂದಿನ ನಾಗರೀಕ ಜೀವನದ ಮರೀಚಿಕೆಯನ್ನು ಯಥಾವತ್ತಾಗಿ ಚಿತ್ರಿಸುತ್ತದೆ. ಲಲಿತೆ ಒಮ್ಮೆ ಇವರ ಸ್ನೇಹಿತರಾದ ರಾಯರ ಮನೆಗೆ ಅರಿಸಿನಕುಂಕುಮಕ್ಕೆ ಹೋಗಬೇಕಾಯಿತು. ಅವರು ಯುದ್ಧಕಾಲದಲ್ಲಿ ಯುದ್ಧಕಾರ್ಯಗಳಿಗೆ ನೆರವಾಗಿ ನಿಂತು ಕೈಗಾರಿಕೆಯ ಕ್ಯಾಪ್ಟನ್ ಆದವರು. ಅವರ ಅಂತಸ್ತು, ದಿವಾನಖಾನೆ, ಅದರ ವೈಭವ-ಇತ್ಯಾದಿಗಳನ್ನು ಕಂಡ ಲಲಿತೆಗೆ ತನ್ನ ಗಂಡನ ಅಂತಸ್ತಿಗೆ ತಕ್ಕಂತೆ ದಿವಾನಖಾನೆಯನ್ನು ಬದಲಾಯಿಸಬೇಕೆಂಬ ಜ್ಞಾನೋದಯವಾಯಿತು. ದಿವಾನಖಾನೆಯನ್ನು ಆಧುನಿಕ ಶೈಲಿಗೆ ಅಳವಡಿಸಲಾಯಿತು.

ಇದು ಅವರ ಮನೋಧರ್ಮಕ್ಕೆ ಮುಳ್ಳಾಯಿತು, ಒಗ್ಗದ ಪರಿಸ್ಥಿತಿಯನ್ನು ತಂದೊಡ್ಡಿತು. ಮಾನಸಿಕ ಸ್ವಾತಂತ್ರ್ಯ, ನಿರಾಳತೆ, ನಿರುಮ್ಮಳತೆ ಇಲ್ಲವಾದವು. ದೇಹ ಮನಸ್ಸುಗಳ ಮೇಲೆ ಯಾವುದೋ ಬಾಹ್ಯ ಪಾರತಂತ್ರ್ಯದ ಭಾರ ಬಿತ್ತು. ಮಗು ರಾಮುವಿನ ಸ್ವಚ್ಛಂದ ವಿಹಾರಕ್ಕೆ ಅದು ಇವರಿಗೆ ನೀಡುತ್ತಿದ್ದ ಮುದದಾನಂದಕ್ಕೂ, ಪ್ರತಿಬಂಧಕವನ್ನುಂಟು ಮಾಡಿತು. 'ಕಿರಾತ ರಾಮುವಿನ ತುಂಟಾಟ, ಅವರಿಗೆ ಅತ್ಯಂತ ಪ್ರಿಯವಾದುದು. ತುಂಟಾಟ ಮಾಡಲು ಹೋಗಿ ರಾಮು ಲಲಿತೆಯ ಕೈಯಿಂದ ಪೆಟ್ಟು ತಿಂದದ್ದೂ ಆಯಿತು.

ಮೂರ್ತಿರಾಯರ ವೈಜ್ಞಾನಿಕ ನಿಲುವು ಈ ಪ್ರಬಂಧದಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿದೆ. ಮನೆಯಲ್ಲಿ ಅವರಿಗೆ ಮಾನಸಿಕ ಸ್ವಾತಂತ್ರ್ಯ ಇರಬೇಕು. ಆದರೆ ಅದಕ್ಕೆ ವ್ಯತಿರಿಕ್ತವಾದ ವಾತಾವರಣವೊಂದು ತಮ್ಮ ಮನೆಯಲ್ಲಿ ಸೃಷ್ಟಿಯಾದುದರ ಹಿನ್ನೆಲೆಯಲ್ಲಿ ಇಂದಿನ ಸಾಮಾಜಿಕ ಅಶಾಂತಿ-ತೊಳಲಾಟಗಳಿಗೆ ನಿಜವಾದ ಕಾರಣವನ್ನು ಕಂಡುಕೊಳ್ಳುತ್ತಾರೆ. ಇಂದು ನಾಗರೀಕತೆ, ವಿಜ್ಞಾನ, ತಂತ್ರಜ್ಞಾನಗಳು ದಿನೇ ದಿನೇ ಬೆಳೆಯುತ್ತಿವೆ. ಮಾನವ ಜೀವನದ ಸುಖ ಶಾಂತಿಗಾಗಿ ಹತ್ತು ಹಲವು ಉಪಕರಣಗಳ ಆವಿಷ್ಕಾರವಾಗಿದೆ. ಮಾನವ ತನ್ನ ಸುಖ ನೆಮ್ಮದಿಗಳು ಇಂತಹ ಬಾಹ್ಯ ವಸ್ತುಗಳಲ್ಲಿದೆ ಯೆಂದು ಭ್ರಮಿಸಿ, ಅವುಗಳ ಸಂಗ್ರಹಣಕ್ಕಾಗಿ ಹೋರಾಡುತ್ತಾನೆ. ಆದರೆ ಅವು ಬಂದು ನಮ್ಮ ನಿಜವಾದ ಅಂತರಂಗದ ಶಾಂತಿ ದೂರವಾಗುವುದನ್ನು ಕಂಡುಕೊಂಡಿದ್ದಾರೆ. ಅವು ತರುವ ಸಂಕಷ್ಟಗಳ ಅರಿವಿಲ್ಲದೆ ನಾವು ಭ್ರಮಾಧೀನವಾದ ಮರೀಚಿಕೆಯ ಬೆನ್ನು ಹತ್ತಿದ್ದೇವೆ. ವಿಜ್ಞಾನ ತಂತ್ರಜ್ಞಾನಗಳು ಮಾನವನಿಗೆ ಪೂರಕವಾಗುವ, ಪೋಷಕವಾಗುವ ಬದಲು ಮಾರಕಗಳಾಗಿವೆ. ಅವರು ಈ ಪ್ರಬಂಧವನ್ನು ಆರಂಭ ಮಾಡುವುದೇ ಒಂದು ಬಗೆಯ ಭೂತದರ್ಶನದಿಂದ.

ಇತ್ತೀಚೆಗೆ ನನ್ನ ಸ್ವಂತ ದಿವಾನಖಾನೆಯನ್ನು ಪ್ರವೇಶಿಸುವ ಧೈರ್ಯ ನನಗೇ ಇಲ್ಲ. (ಅದೇ ಪುಟ 88)

ಅತ್ಯಂತ ಕುತೂಹಲದಿಂದ ನಾವು ಓದನ್ನು ಮುಂದುವರಿಸುತ್ತೇವೆ. ಇದರ ಕಾರಣ ನಮಗೆ ಅಷ್ಟು ಬೇಗ ಸಿಗುವುದಿಲ್ಲ. ಎರಡನೆಯ ಪ್ಯಾರಾದ ಕೊನೆಯಲ್ಲಿ

"ವಾಸ್ತವವಾಗಿ ನೋಡಿದರೆ ಅದರ ಸೌಂದರ್ಯವೇ ಒಂದು ದುಷ್ಟಶಕ್ತಿಯಾಗಿ ಪರಿಣಮಿಸಿ ನನ್ನನ್ನು ಹೊರದೂಡಿಸಿದೆ." ( ಅದೇ ಪುಟ 89)

ಎಂಬ ವಿರುದ್ಧವಾದ ಹೇಳಿಕೆಯನ್ನು ನೀಡಿ ಬೆಚ್ಚಿ ಬೀಳುವಂತೆ ಮಾಡುತ್ತಾರೆ. ಹಾಗಾದರೆ ಸೌಂದರ್ಯ ದುಷ್ಟಶಕ್ತಿಯಾಗಿ ಪರಿಣಮಿಸಿದ್ದು ಹೇಗೆ ? ಸೌಂದರ್ಯ ಎಲ್ಲರಿಗೂ ಪ್ರಿಯವೇ, ಇವರ ದೃಷ್ಟಿಯಲ್ಲಿ ಈ ಸೌಂದರ್ಯ ದುಷ್ಟ ಶಕ್ತಿಯಾಗಿಯೂ ಪರಿಣಮಿಸುತ್ತದೆ. ಸೌಂದರ್ಯ ಪ್ರೇಮಿಯನ್ನು ದೂರ ಮಾಡುತ್ತದೆ. ಹಾಗಾದರೆ ಮೂರ್ತಿರಾಯರು ಕಂಡುಕೊಂಡ ಸೌಂದರ್ಯದ ಆಕರ ಯಾವುದು ? ಸೌಂದರ್ಯ ನೀಡುವುದು ಆನಂದ, ಶಾಂತಿಯನ್ನು; ಅದಕ್ಕೆ ಬದಲಾಗಿ ನಿರಸನವನ್ನುಂಟುಮಾಡಿದ ಬೇಕಾದರೆ ಅದರ ಸ್ವರೂಪ ಎಂತಹದು' ಇದಕ್ಕೆ ಅವರ ಈ ಪ್ರಬಂಧದ ಪ್ರಾರಂಭದ ಸಾಲುಗಳು ಉಲ್ಲೇಖನೀಯ.

ಅಂತರಿಕ್ಷದಲ್ಲಿ ಯಾವ ದಿಕ್ಕಿನಿಂದ ಗಾಳಿ ಬೀಸಿದರೂ ಅದು ನನ್ನ ಕೊಠಡಿಯನ್ನು ತಂಪು ಮಾಡಿರುವುದಿಲ್ಲ. ಮಳೆ ಬಿಸಿಲುಗಳ ಹೊಡೆತವನ್ನು ತಡೆಯುವಂತೆ ಸುತ್ತಲೂ

ಪಡಸಾಲೆಗಳು. ಕೊಠಡಿಯಲ್ಲಿ ಕುಳಿತು ಪೂರ್ವಕ್ಕೂ ಉತ್ತರಕ್ಕೂ ತಿರುಗಿ ನೋಡಿದರೆ ಒಂದು ಕಡೆ ಚಾಮುಂಡಿಯ ಬೆಟ್ಟ, ನಡುವೆ ದೂರದಲ್ಲಿ ಕರೀಘಟ್ಟದ ಶ್ರೇಣಿ, ಇನ್ನೊಂದು ಕಡೆ ಬೆಚ್ಚನೆಯ ಬಿಸಿಲಿನಲ್ಲಿ ಮೆಲುಕು ಹಾಕುವ ಬಸವನಂತೆ, ತನಗೆ ಸಹಜವಾದ ಕ್ರೌರ್ಯವನ್ನು ಮರೆತು ಶಾಂತಮುದ್ರೆಯಿಂದ ವಿಶ್ರಮಿಸುವ ಸಿಂಹದಂತೆ ಹಿರೋಡೆಯ ಬೆಟ್ಟಗಳು. ಅಲ್ಲಿಂದ ಎಡಕ್ಕೆ ತಿರುಗಿದರೆ ನಸು ನೀಲಿಯ ಬಣ್ಣದಿಂದ ಕಂಗೊಳಿಸುತ್ತಾ ನನ್ನ ಕುಲದೈವದ ವಾಸದಿಂದ ಪವಿತ್ರವಾದ ಯದುಗಿರಿ, ನನಗೂ ಈ ಬೆಟ್ಟಗಳಿಗೂ ನಡುವೆ ಹಸಿರು ಹೊಲಗಳು, ತೆಂಗಿನ ತೋಟಗಳು, ನಾನಾ ವಿಧವಾದ ಗಿಡಮರಗಳ ವಿಶಾಲವಾದ ಕಣಿವೆ. ಇದೆಲ್ಲವನ್ನೂ ಕೊಠಡಿಯೊಳಗಿನಿಂದಲೇ ನೋಡುವಂತೆ ಬಿಸಿಲು ಮುಚ್ಚು ಮಾಡಿಸಿ ಆ ಕಡೆಗೆ ದೊಡ್ಡ ಬಾಗಿಲನ್ನಿಟ್ಟಿದ್ದೇನೆ.

(ಅದೇ ಪುಟ 88)

ಇವರ ಆನಂದ-ಶಾಂತಿಯ ಮೂಲ ಮನೆಯ ಹೊರಗಿನ ಪ್ರಕೃತಿ ಸೌಂದರ್ಯ. ಅದು ಸ್ವಾಭಾವಿಕವಾದುದು. ಪ್ರಾಕೃತಿಕವಾದ, ನಿಸರ್ಗ ಸೌಂದರ್ಯ ಅವರ 'ಮನಸ್ಸಿನ ತುಂಬ ಹೃದಯವನ್ನಾಕ್ರಮಿಸಿರುವ' ಕೊಠಡಿಯ ಮೂಲಕ ನೋಡಿ ಸವಿಯುವಂತಹುದು. ಆದರೆ ದಿವಾನಖಾನೆಯು ಲಲಿತೆಯ ಅಭಿರುಚಿಗೆ ಅನುಗುಣವಾಗಿ ಮಾರ್ಪಟ್ಟ ನಂತರ

ಕಿಟಕಿಗಳ ಕೆಳಭಾಗವೆಲ್ಲಾ ಪರದೆಗಳಿಂದ ಮುಚ್ಚಿ ಹೋಗಿತ್ತು.
ಬಾಗಿಲುಗಳಿಂದಲೂ ಪರದೆಗಳು ಇಳಿಯಬಿದ್ದಿದ್ದುವು.

(ಅದೇ ಪುಟ 91)

ಇವರಿಗೂ ಪ್ರಕೃತಿಗೂ ನಡುವೆ ಒಂದು ಪರದೆ (ತಡೆ) ಪ್ರತ್ಯಕ್ಷವಾಯಿತು. ರಾಮು ತನ್ನ ಸಹಜವಾದ ಬಾಲಭಾವದಿಂದ ಕುರ್ಚಿಯ ಮೇಲೆ ಹತ್ತಿ ಕುಣಿದಾಗ ಲಲಿತೆ ಗದರಿಸಿ ಅವನ ಕೆನ್ನೆ ಚಿವುಟುತ್ತಾಳೆ. ಆಗ ಅವರ ಪ್ರತಿಕ್ರಿಯೆ ಎಷ್ಟು ಅಂತಃಕರಣಪೂರ್ವವಾದುದು! ಅವರ ಹೃದಯ ಸಹಜ ವಾತ್ಸಲ್ಯದಿಂದ ನೊಂದಿರಬೇಕು. ಮೂರ್ತಿರಾಯರು ತಮ್ಮ ವಯಸ್ಸನ್ನೂ ಮರೆತು ಮಕ್ಕಳೊಡನೆ ಮಕ್ಕಳಾಗಿ ನಲಿಯಬಲ್ಲರು. ಅವರ ಮೊಮ್ಮಕ್ಕಳು, ಅವರ ಸಮ ವಯಸ್ಕರ ತುಂಟಾಟ, ಚೇಷ್ಟೆಗಳು ಅವರಿಗೆ ಅತ್ಯಂತ ಆತ್ಮೀಯವಾದುವು. ಅಮೇರಿಕಾದಲ್ಲಿ ಒಮ್ಮೆ ಅವರ ಮೊಮ್ಮಗನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಪ್ರಯಾಣ ಮಾಡುತ್ತಿದ್ದರು. ಆಗ ಅವನ ಬೂಟಿನ ಮೊಳೆ ಇವರ ಕಾಲಿಗೆ ತಗುಲಿ ನೋವಾಗುತ್ತಿತ್ತು. ಅವನು ಮತ್ತೊಮ್ಮೆ ಅದೇ ರೀತಿ ಕಾಲನ್ನು ಆಡಿಸಿದರೆ ಅವನನ್ನು ಎತ್ತಿಕೊಳ್ಳುವುದಿಲ್ಲವೆಂದು ಗದರಿಸಿದರು. ಅವರು ಭಾರತಕ್ಕೆ ಮರಳಿದ ಅನಂತರ ಅವರ ಮೊಮ್ಮಗ ರವಿ ತನ್ನನ್ನು ತಾತಾ ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುತ್ತಾರೆಯೇ ಎಂದು ತಂದೆಯನ್ನು ಕೇಳಿದನಂತೆ. ಇವರ ಪ್ರತಿಕ್ರಿಯೆಯನ್ನು ಅವರ ಮಾತುಗಳಲ್ಲಿಯೇ ಕೇಳಬೇಕು.

ಈ ಪ್ರಬಂಧದಲ್ಲಿ ಈ ಹಿಂದೆ ಉಲ್ಲೇಖಿಸಿದ ಸಂದರ್ಭವೊಂದಿಗೆ ಹೋಲುವ ಒಂದು ಪ್ರಸಂಗವಿದೆ. ಲಲಿತೆ ರಾಮುವಿನ ಕೆನ್ನೆ ಚಿವುಟಿದಾಗ ರಾಮು ಅಳತೊಡಗಿದ. ಆಗ ಅವರ ಅಂತಃಕರಣದ ಮಿಡಿತ ಹೀಗಿದೆ:

ನನ್ನ ಮನಸ್ಸಿನಲ್ಲೊಂದು ಪ್ರಶ್ನೆ ತಲೆ ಹಾಕಿತು, ಕುರ್ಚಿಯೋ
ಮಗುವೋ ಯಾವುದು ಹೆಚ್ಚು? (ಅದೇ ಪುಟ 93)

ಆದರೆ ಅವರು ಬಲಿತೆಯನ್ನು ಆಕ್ಷೇಪಿಸುವುದಿಲ್ಲ. ಘಟನೆಯನ್ನು ನಿಷ್ಪಕ್ಷಪಾತವಾಗಿ, ವಸ್ತುನಿಷ್ಠವಾಗಿ ನೋಡುವ ಅವರ ವ್ಯಾವಹಾರಿಕ ಪ್ರತಿಭೆ ಈ ಸಂದರ್ಭದಲ್ಲಿ ಪಾದರಸದಂತೆ ಮಿಂಚುತ್ತದೆ. ಇಲ್ಲಿ ಒಬ್ಬ ತಂದೆಯಾಗಿ ಮೂರ್ತಿರಾಯರು ಒಂದು ಔನತ್ಯವನ್ನು ಸಾಧಿಸಿದ್ದಾರೆ.

ಮಾನವ ನಿರ್ಮಿತ ಕೃತಕ ಸೌಂದರ್ಯದ ಪರಿಮಿತಿಗಳನ್ನು ಇಲ್ಲಿ ಧ್ವನಿಪೂರ್ಣವಾಗಿ ಹೇಳಲಾಗಿದೆ. ಆತ್ಮ ಚರಿತ್ರೆಯಲ್ಲಿ ಅವರು 'ಸುಖ ಸುಖ ಸಾಮಗ್ರಿ' ಎಂಬ ಶೀರ್ಷಿಕೆಯಡಿ ಇಂದಿನ ಐಷಾರಾಮಿ ವಸ್ತುಗಳ ಕಾರಣವಾಗಿ ನಷ್ಟಗೊಂಡ ಮನಶ್ಶಾಂತಿಯ ಬಗ್ಗೆ ಚಿಂತನೆ ನಡೆಸಿದ್ದಾರೆ. ಮಾನವನ ಸ್ಪರ್ಧಾತ್ಮಕ ಮನೋಭಾವ, ಅನುಕರಣೆ, ಅಧಿಕಾರ ಅಂತಸ್ತುಗಳ ಮಿಥ್ಯಾ ಗೌರವ, ಆಡಂಬರ ಪ್ರಿಯತೆಗಳು ಹೇಗೆ ಭ್ರಾಮಕ ಕಲ್ಪನೆಯನ್ನು ಪೋಷಿಸುತ್ತವೆ ಎಂಬುದರ ಬಗ್ಗೆಯೂ ಇಲ್ಲಿ ಹೇಳಿದ್ದಾರೆ. ತಮ್ಮ ಆತ್ಮ ಚರಿತ್ರೆಯಲ್ಲಿ ಅತ್ಯಂತ ಸ್ವಾರಸ್ಯಕರವಾದ ಘಟನೆಯೊಂದನ್ನು ಉಲ್ಲೇಖಿಸುತ್ತಾರೆ. ಅವರ ಮಗ ಡಾ. ನಾಗರಾಜ ಫಿಲಿಪೈನ್ಸ್‌ನಿಂದ ಬರುವಾಗ ತಂದ ಈ ಅಲಂಕಾರಿಕ ಸಾಮಗ್ರಿಗಳ ಬಗ್ಗೆ ಬೇಸರ ಬಂದು ಅವುಗಳನ್ನು ಮಾರಿದಾಗ ರೂ.50,000 ಬಂದಿತಂತೆ. ವೈಜ್ಞಾನಿಕವೂ, ತಾಂತ್ರಿಕವೂ ಆದ ಈ ಭೋಗ್ಯ ವಸ್ತುಗಳು ತರುವ ಆತಂಕವನ್ನು ಕುರಿತು ಅವರ 'ಸಂಜೆಗಣ್ಣಿನ ಹಿನ್ನೋಟ'ದಲ್ಲಿ ಹೇಳುತ್ತಾರೆ. ದಿವಾನಖಾನೆಯ ಕೃತಕತೆ ಎಂತಹವರ ಗಮನಕ್ಕೂ ಬರುವಂತಹುದು. ಈ ಪ್ರಬಂಧವೂ ಸ್ವಾನುಭವಾತ್ಮಕವಾದುದು. ಈ ಕೆಳಗಿನ ಸಾಲುಗಳನ್ನು ಅವರ ಆತ್ಮಚರಿತ್ರೆಯ ಸಾಲುಗಳೊಂದಿಗೆ ಹೋಲಿಸಬಹುದು.

"ಮನೆಯವರೂ ಆಪ್ತಮಿತ್ರರೂ ಹಾಗಿರಲಿ, ಹೊರಗಿನವರು ಬಂದು ಸ್ವಲ್ಪ ಕಾಲ ಅಲ್ಲಿ ಕುಳಿತರೆ ಅವರ ಮನಸ್ಸಿನಲ್ಲಿ ಸಹಾ ಈ ಕೊಠಡಿ ಭಯವನ್ನು ಬಿತ್ತುತ್ತದೆ. ಅವರಲ್ಲಿ ಕೆಲವರು ಸಿಗರೇಟ್ ಸೇದುವವರು. ಅಷ್ಟು ಚೊಕ್ಕಟವಾಗಿಟ್ಟಿರುವ ಕೊಠಡಿಯಲ್ಲಿ ಜಮಖಾನೆಯ ಮೇಲೇನಾದರೂ ಸಿಗರೇಟಿನ ಬೂದಿ ಉದುರಿದರೆ! ಈ ಯೋಚನೆಯೇ ಅವರನ್ನು ಬಾಧಿಸುತ್ತಿರುತ್ತದೆ. ನಶ್ಯ ಹಾಕುವವರ ಪಾಪ ಕೃತ್ಯಗಳಿಗಂತೂ ಮಿತಿಯೇ ಇಲ್ಲ. ಅವರ ಮನಸ್ಸಿನ ಶಂಕೆಯನ್ನು ನೆನೆದು ನಾನು ಎಷ್ಟೋ ವೇಳೆ ಮರುಗಿದ್ದೇನೆ. ಇತ್ತ ಕಡೆ ನಮಗೂ ಶಾಂತಿಯಿಲ್ಲ. ಅತಿಥಿಗಳು ಕೊಠಡಿಯ ಅಂದವನ್ನೆಲ್ಲಿ ಕೆಡಿಸುವರೋ ಎಂಬ ಭಯ ಕೊರೆಯುತ್ತಿರುತ್ತದೆ. ಇಂಥ ವಾತಾವರಣದಲ್ಲಿ ಸೌಹಾರ್ದ ಬೆಳೆಯಲಾದೀತೆ.

(ಅದೇ ಪುಟ 95)

ಆರ್.ಎಲ್. ಸ್ಟೀವನ್‌ಸನ್ ನ 'ದಿ ಐಡಿಯಲ್ ಹೌಸ್' ಪ್ರಬಂಧದ ಪ್ರಭಾವ ಈ ಪ್ರಬಂಧದಲ್ಲಿ ಗುರುತಿಸಬಹುದು.

'ಟೆಲಿಫೋನ್' ಇದೇ ವರ್ಗಕ್ಕೆ ಸೇರಿದ ಪ್ರಬಂಧ. ಆಧುನಿಕ ಸೌಲಭ್ಯಗಳು ನಮಗೆ ನಿರೀಕ್ಷಿತ ಫಲ ಸಿಗದೇ ಅವ್ಯವಸ್ಥೆಗೆ ಈಡಾಗುವ ಸಂದರ್ಭಗಳನ್ನು ಉಲ್ಲೇಖಿಸುತ್ತಾರೆ. ಸರಿಯಾದ ನಂಬರ್‌ಗೆ ನಾವು ರಿಂಗ್ ಮಾಡಿದರೂ ರಾಂಗ್ ನಂಬರಿಗೆ ಹೋಗಿ ಏನೇನೋ ಅವ್ಯವಸ್ಥೆಗೆ ಈಡಾಗುವುದು ಹಲವರ ಅನುಭವ. ಇಂದಿನ ಜಗತ್ತನ್ನು ಸಂಕುಚಿತಗೊಳಿಸಿ, ಕಿರಿದುಗೊಳಿಸಿದುದರಲ್ಲಿ ಟೆಲಿಫೋನ್‌ನದು ಸಿಂಹಪಾಲು. ಇದೊಂದು ವಿನೋದ

ಪ್ರಬಂಧವೆನಿಸಿದರೂ ಇದರ ಹಿಂದೆ ಇಂದಿನ ಸಂಸ್ಥೆಗಳ ಅದಕ್ಷತೆಯ ಕಠೋರ ಸತ್ಯದ ಕರಾಳ ವಾಸ್ತವಿಕತೆಯ ಚಿತ್ರವಿದೆ.

ಆದರೆ ಆ ಯಂತ್ರ ಮನೆಗೆ ಬಂದ ದಿನದ ಸಂತೋಷಕ್ಕಿಂತ ಅದು ಹೋದ ದಿನ ಅನುಭವಿಸಿದ ಶಾಂತಿ ನೂರು ಪಾಲು ಹೆಚ್ಚಿನದು.

(ಅದೇ ಪುಟ 152)

ಎಂಬ ಮಾತು ಕೇವಲ ಆಲಂಕಾರಿಕವಾಗಿ ಬಳಸಿದುದಲ್ಲ. ಇದು ತರುವ ಆನಂದಕ್ಕಿಂತಲೂ ಸಮಸ್ಯೆಗಳೇ ಹೆಚ್ಚು. ಟೆಲಿಫೋನನ್ನು ದೊಡ್ಡ ಮನುಷ್ಯರ ಮನೆಯ ಚೆಲುವೆಗೆ ಹೋಲಿಸಿರುವುದು ಮತ್ತೊಂದು ಸಾಮಾಜಿಕ ಸಮಸ್ಯೆಯ ಮೇಲೆ ಬೆಳಕು ಚೆಲ್ಲುವಂತಹದು.

ಇದರ ಇನ್ನೊಂದು ಮುಖದ ಪರಿಚಯವೂ ನಮಗಾಗುತ್ತದೆ. ಟೆಲಿಫೋನ್‌ನ ದುರುಪಯೋಗ, ಉಪದ್ರವ ಸಮಸ್ಯೆಗಳೂ ಇಲ್ಲಿವೆ. ಇಂಗ್ಲೀಷ್ ಬಾರದ ಶಾಸ್ತ್ರಿಗಳು ಆನಂದಭವನಕ್ಕೆ ರಾಂಗ್ ಮಾಡಿದ ರಿಂಗ್ ದಿವಾನ್...... ರಾವ್‌ಗೆ ಹೋಗಿ, ಆಫೀಸ್‌ಗೆ ಭಾವಿಪತಿಗೆ ಅವನ ಭಾವೀಪತ್ನಿ ಫೋನ್ ಮಾಡಿದಾಗ ಅವನ ಮುಜುಗರ ಅದು ತಂದ ಸಮಸ್ಯೆಗಳು–ಎಲ್ಲವನ್ನೂ ಸೊಗಸಾಗಿ ಹೇಳಿದ್ದಾರೆ. ಟೆಲಿಫೋನ್ ದಿವಾನಖಾನೆಯ ನವೀಕರಣವಾದಂತೆ, ಅಂತಸ್ತು, ಘನತೆಗಳ ಸಂಕೇತವಾಗುತ್ತದೆ. ಇಲ್ಲಿಯೂ ಲಲಿತೆ ಪ್ರವೇಶಿಸಿ ಕ್ಷಣಕಾಲ ಕುಟುಂಬದ ಸನ್ನಿವೇಶವನ್ನು ಸೃಷ್ಟಿಸುತ್ತಾಳೆ.

ಇವುಗಳಲ್ಲಿ ಕೆಲವು ಗಂಭೀರ ಪ್ರಬಂಧಗಳು. ಕೆಲವು ಪ್ರಬಂಧಗಳು ಒಂದು ಯುಗಧರ್ಮಕ್ಕೆ ಅವರು ವ್ಯಕ್ತಪಡಿಸಿದ ಪ್ರತಿಕ್ರಿಯೆ.

'ಅಕ್ಕಿ ಹೆಬ್ಬಾಳು' ಮತ್ತು 'ಬೆಂಗಳೂರು'–ಇವು ಎರಡು ಒಂದು ಗುಂಪಿಗೆ ಸೇರಿದ ಪ್ರಬಂಧಗಳೆಂದು ಪರಿಗಣಿಸಬಹುದಾದರೂ ಈ ಎರಡು ಪ್ರಬಂಧಗಳು ಎರಡು ಬಿಂದುವಿನಿಂದ ಹೊರಟ ಎರಡು ಸರಳ ರೇಖೆಗಳು. ಆದುದರಿಂದ ಎರಡು ಪ್ರಬಂಧಗಳ ನಡುವೆ ಧ್ರುವಾಂತರ ದೂರವಿರುವುದರಿಂದ ಸಧ್ರುವೀಕರಣ ಸಾಧ್ಯವಿಲ್ಲ. ಒಂದು ಅವರ ಜನ್ಮಭೂಮಿ ಇನ್ನೊಂದು ಅವರ ಕರ್ಮಭೂಮಿ. ಒಂದು ಪ್ರಾಕೃತಿಯ ಹಿನ್ನೆಲೆಯ ರಮ್ಯ ವಾತಾವರಣದಿಂದ ಸುಶೋಭಿತವಾದುದು. ಇನ್ನೊಂದು ಜನಾರಣ್ಯ. ಜನ ನಿಬಿಡವಾಗಿ, ಮಾನವ ನಿರ್ಮಿತವಾದ ಕೃತಕ ಹಿನ್ನೆಲೆಯಿಂದ ಕೂಡಿದ್ದು, ಒಂದು ವೇದ ಘೋಷದಿಂದ ಅನುರಣಿತವಾದದ್ದು. ಇನ್ನೊಂದು ಕೈಗಾರಿಕೆಗಳ ಶಬ್ದದಿಂದ ಗಿಜಿಗುಟ್ಟು ವಂತಹುದು. ಒಂದು ಹೊಯ್ಸಳ ಕರ್ನಾಟಕದವರ ಲಂಡನ್, ಇನ್ನೊಂದು ಆಂಗ್ಲ ಸಂಸ್ಕೃತಿಯ ಪ್ರಭಾವಕ್ಕೆ ಸಿಕ್ಕಿದ ಪ್ರದೇಶ. ಒಂದು ಹಳ್ಳಿ, ಇನ್ನೊಂದು ನಗರ. ಒಂದು ಶಿಥಿಲವಾಗುತ್ತಿರುವ ಪರಂಪರಾಗತ ಮೌಲ್ಯದ ಸಂಕೇತವಾದರೆ ಮತ್ತೊಂದು ನಿರಸನವಾಗುವ ಕೇಂದ್ರ. ಒಂದು ಅತ್ಯಂತ ಆತ್ಮೀಯವಾದುದು, ಮತ್ತೊಂದು ಆತ್ಮೀಯತೆಯ ರೇಖೆಯನ್ನೂ ಮೂಡಿಸದಿರುವಂತಹದು. ಒಂದು ಬಾಲ್ಯಕಾಲದ ಸವಿನೆನಪನ್ನು ಉಕ್ಕಿಸುವಂತಹದು, ಮತ್ತೊಂದು ಉದ್ಯೋಗ ಜೀವನದ ನೆನಪುಗಳನ್ನು ಉಕ್ಕಿಸುವಂತಹದು. ಬಿ.ಎ. ಓದುತ್ತಿರುವಾಗ ಹೊರ ಒಳಗಿನ ಕತ್ತಲೆಯಲ್ಲಿ ನಡೆದು ಮನೆ ಸೇರಿದಾಗ ತಂದೆಯ ಅಂತಿಮ ಸಂಸ್ಕಾರವೂ ಮುಗಿದು ಹೋಗಿತ್ತು. ಅದರ ಎರಡನೆಯ ಸಲ ಹೋದಾಗ ಸುಂದರವಾದ ಒಂದು ಪರಂಪರೆಯೇ ಇಲ್ಲವಾಗಿತ್ತು.

ಮೊದಲ ಸಲವೂ ಎರಡನೆಯ ಸಲವೂ ಮನಸ್ಸಿನ ಮೂಲೆಯಲ್ಲಿ ಕಟಿ ನೆನಪೇ ಮನೆ ಮಾಡಿ ಕುಳಿತಿತ್ತು. ಆತ್ಮೀಯತೆಗಿಂತ ಗೌರವ ಪಡೆಯುವವರಾಗಿದ್ದಾರೆ. ಸ್ನೇಹವನ್ನು ಬಯಸುವ ಸ್ಥಳದಲ್ಲಿ ಮರ್ಯಾದೆ ಸಿಕ್ಕಿದರೂ ಅವರಿಗೆ ಸಮಾಧಾನವಿಲ್ಲ. ಕೈತುತ್ತು ಸಿಕ್ಕುತ್ತಿದ್ದಾಗ ಲಭಿಸಿದ ಆನಂದ ಈಗ ಔತಣದ ಅಡಿಗೆ ಮಾಡಿ ಬಡಿಸಿದರೂ ತೃಪ್ತಿಯಿಲ್ಲ. ನಿರೀಶ್ವರವಾದಿಯಾದ ಅವರಿಗೆ ದೇವರ ಅಸ್ತಿತ್ವದಲ್ಲಿ ಅಕ್ಕಿಹೆಬ್ಬಾಳಿನ ಮೇಲಿನ ವ್ಯಾಮೋಹದಿಂದ ಆ ದೈವ ಸಾನಿಧ್ಯ ಅವರಿಗೆ ಪ್ರಿಯವಾಯಿತು. ತನ್ನ ತಂದೆ, ಅಜ್ಜಿ ಪಟ್ಟ ಕಷ್ಟ ಅವರಿಗೆ ನೆನಪಾಯಿತು. 'ಅಕ್ಕಿ ಹೆಬ್ಬಾಳು' ಅವರು ಅನಂತರ ಬರೆದ ಆತ್ಮ ಚರಿತ್ರೆಗೆ ಒಂದು ಪೂರ್ವ ಸಿದ್ಧತೆಯಂತಿದೆ. ಬಾಲ್ಯಕಾಲದ ಸವಿನೆನಪುಗಳು ಅವರ ಹೃದಯಕ್ಕೆ ಲಗ್ಗೆ ಇಟ್ಟಾಗ ಅವರೂ ಬಾಲ್ಯಕ್ಕೆ ಸರಿದು ಅದರಲ್ಲಿಯೇ ತನ್ಮಯರಾಗುತ್ತಾರೆ. ದೇವರ ರಥೋತ್ಸವ ಅತ್ಯಂತ ಸಡಗರ ಸಂಭ್ರಮಗಳಿಂದ ನಡೆದು, ಮುಗಿಲನ್ನು ಮುಟ್ಟುತ್ತಿದ್ದ ವೇದ-ಘೋಷ ಈಗ ಇಲ್ಲ.

ಅದು ಈಗ ದೆವ್ವಗಳ ಊರು

(ಅದೇ ಪುಟ 204)

ಅಕ್ಕಿ ಹೆಬ್ಬಾಳು ಕೇವಲ ಒಂದು ಹಳ್ಳಿಯಲ್ಲ. ಅದೊಂದು ಜೀವಂತ ಸಂಪ್ರದಾಯದ ಪ್ರತೀಕ. ಒಂದು ಕಾಲದ ಪದ್ಧತಿ ಜನ ಜೀವನ, ಅವರ ಸ್ವಭಾವ ಸಂಸ್ಕಾರಗಳು, ಸಹಕಾರಿ ಮನೋಭಾವನೆ-ಒಂದೊಂದೂ ಒಂದು ಕಾದಂಬರಿಯ ವಸ್ತು. ಮೂರ್ತಿರಾಯರ ಮಾನಸಿಕ ಆನಂದದ ಬೇರುಗಳು ಒಣಗದೇ ಹಸಿಯಾಗಿ ಇದ್ದಿದ್ದು ಅಕ್ಕಿ ಹೆಬ್ಬಾಳಿನಲ್ಲಿ. ಗ್ರಾಮೀಣ ಜನ ಪರಿಸರ ಹಿನ್ನೆಲೆ ಮೂರ್ತಿರಾಯರಿಗೆ ಒದಗಿಸಿದ ಶಾಂತಿ ಆನಂದಗಳು ಅಪಾರ. ಇದೊಂದು Pastoral poetry. ಶ್ರೀ ಹೆಚ್.ಎಲ್. ನಾಗೇಗೌಡರವರ 'ನನ್ನೂರು' ಕೃತಿಯನ್ನು ಜ್ಞಾಪಕಕ್ಕೆ ತರುವ ಈ ಪ್ರಬಂಧವನ್ನು ವಿಸ್ತರಿಸಿ ಬರೆದಿದ್ದರೆ ಅಂತಹದೇ ಕಾದಂಬರಿಯಾಗುತ್ತಿತ್ತು. ಅವರಿಗೆ ಕೊಪ್ಪರಿಗೆ ಮಡುವಿನಲ್ಲಿ ಈಜುತ್ತಿದ್ದಾಗ ಸಿಕ್ಕ ಕಲ್ಯಾಣಿದಾಸ ಹಳೆಯ ನೆನಪನ್ನು ಉಕ್ಕಿಸಿ ಹಿಂದಿನ ಅಕ್ಕಿ ಹೆಬ್ಬಾಳನ್ನು ಪುನರುಜ್ಜೀವನಗೊಳಿಸಿದ, ಇವರ ಬಾಲ್ಯದ ಅಕ್ಕಿ ಹೆಬ್ಬಾಳು ಪುನಃ ಜೀವತಳೆದು ಇವರ ಕಣ್ಣ ಮುಂದೆ ಬಂದಿತು. ಇವರಂತೆಯೇ ಇವರಿಗೆ ಹಿತವೂ ಪ್ರಿಯವೂ ಆದ ಹಳೆಯ ನೆನಪುಗಳ ತವನಿಧಿಯಾಗಿದ್ದ ಕಲ್ಯಾಣದಾಸ. ಈ ಪ್ರಬಂಧದ ಭರತವಾಕ್ಯ ಗಮನಾರ್ಹ.

ಅಕ್ಕಿ ಹೆಬ್ಬಾಳು ಮತ್ತೆ ನನಗೆ ಪ್ರಿಯವಾಯಿತು. ಕಲ್ಯಾಣಿದಾಸ ನನ್ನಂತೆಯೇ ಹಿಂದಿನ ನೆನಪುಗಳನ್ನು ಮನಸ್ಸಿನಲ್ಲಿ ಪೋಷಿಸಿಕೊಂಡು ಬಂದಿದ್ದ. ಮೂರು ದಶಕಗಳಿಂದ ನಾನು ಶೇಖರಿಸಿ ಇಟ್ಟಿದ್ದ ನೆನಪಿನ ಸಂಪತ್ತು ವಾಸ್ತವಿಕತೆಯ ಬೆಂಕಿಯಲ್ಲಿ ಸುಟ್ಟು ಹೋಗದೆ ಉಳಿದುಕೊಂಡಿತ್ತು. (ಅದೇ ಪುಟ 208)

ಆರ್ಥರ್ ಕ್ರಿಸ್ಟೋಫರ್ ಬೆನ್ಸನ್ 'The Art of the Essayist' ಎಂಬ ಲೇಖನದಲ್ಲಿ ಹೇಳುವ ಈ ಮಾತು ಈ ಪ್ರಬಂಧಕ್ಕೆ ಚೆನ್ನಾಗಿ ಒಪ್ಪುತ್ತದೆ.

> The essay is the reverie, the frame of mind
> in which a man says, in the words of the
> old son, 'says I to myself, says I' (ಪುಟ 140-1983)

ಅಕ್ಕಿ ಹೆಬ್ಬಾಳಿನ ಜೀವನ ಅವರ ಮನಸ್ಸಿನಲ್ಲಿ ಭೂತಕಾಲದ ಚಿತ್ರವೊಂದನ್ನು

ಬಿಡಿಸಿತು. ಮಾತ್ರವಲ್ಲ ಚಿಂತನಶೀಲವಾದ ವಿಚಾರವನ್ನೂ ಅಭಿವ್ಯಕ್ತಗೊಳಿಸಿತು. ನಾವು ಇಲ್ಲೊಬ್ಬ ಋಷಿ ಸಂತ ಅವಧೂತರನ್ನು ಭೆಟ್ಟಿಯಾಗುತ್ತೇವೆ. ಒಂದು ತಾತ್ತ್ವಿಕ ಔನ್ನತ್ಯವನ್ನು ಸಾಧಿಸಿದ ತತ್ವಜ್ಞಾನಿಯನ್ನು ಎದುರುಗೊಳ್ಳುತ್ತೇವೆ. ಪ್ರಿಯ ಜನರ ವಿರಹದಿಂದ ಬೆಂಡಾದ ವಿರಹಿಯೊಬ್ಬನ ಮನದಳಲು ನಮ್ಮಲ್ಲಿಯೂ ಸಮಾನ ಭಾವನೆಗಳನ್ನು ಕೆರಳಿಸುತ್ತದೆ. ಸಹಜ ಸಂಗೀತ ಪ್ರೇಮಿಗಳಾದ ಮೂರ್ತಿರಾಯರು ಒಳ ಹೊರಗಿನ ಪ್ರಪಂಚವನ್ನು ಗಾನ ಮಾಧ್ಯಮದಿಂದ ಒಂದುಗೂಡಿಸುತ್ತಾರೆ. ಪುಸ್ತಕ-ಜೀವನಗಳ ನಡುವಣ ಅಂತರ ಈಗ ಅವರಿಗೆ ಪ್ರಾಯೋಗಿಕವಾಗಿ ಗಮನಕ್ಕೆ ಬರುತ್ತದೆ. ಜೀವನ ಮನುಷ್ಯನ ಮೇಲೆ ಬೀರಿದ ಪ್ರಭಾವದ ಪರಿಣಾಮವನ್ನು 'ಮುಖದಲ್ಲಿ ನಗೆಗಿಂತ ಭ್ರುಕುಟಿಯೇ ಸಹಜವಾಗಿ ಮೂಡುತ್ತದೆ' ಎಂಬ ಒಂದು ವಾಕ್ಯದಲ್ಲಿ ಅಡಗಿಸುತ್ತಾರೆ.

> ಪುಸ್ತಕವನ್ನೋದುವಾಗ ಎಲ್ಲೆಂದರೆ ಅಲ್ಲಿಗೆ ನಿಲ್ಲಿಸಿ ಮತ್ತೆ ನಿಲ್ಲಿಸಿದ
> ಕಡೆಯಿಂದ ಮುಂದುವರಿಸಬಹುದು. ಜೀವನವನ್ನೂ ಹಾಗೇ ನಿಲ್ಲಿಸಿದ
> ಕಡೆಯಿಂದ ಅದೇ ದಾರಿಯಲ್ಲಿ ಮುಂದುವರಿಸಲಾದೀತೆ-ಜೀವನ
> ನಾವು ನಿಲ್ಲಿಸಿದ ಕಡೆ ನಿಂತಿರುವುದಿಲ್ಲ.

( ಅದೇ ಪುಟ 198)

ಒಂದು ಕಾಲದಲ್ಲಿ ನಾಗರಿಕ ಜೀವನದಿಂದ ದೂರವಾಗಿ ಅರಣ್ಯ ಮಧ್ಯದಲ್ಲಿ ನೆಲೆಸಿದ ಋಷಿಮುನಿಗಳು ಇದೇ ಬಗೆಯ ಜೀವನದರ್ಶನವನ್ನು ಕಂಡುಕೊಂಡರು. ಪ್ರಕೃತಿಯ ಹಾಗೂ ಮಾನವ ಜೀವನದ ರಹಸ್ಯಗಳನ್ನು ಬೇಧಿಸಿ, ಅದರ ಮಥಿತಾರ್ಥವನ್ನು ಮನಗಂಡರು. ಮೂರ್ತಿರಾಯರು ಅಕ್ಕಿ ಹೆಬ್ಬಾಳಿನ ಪರಿಸರದಲ್ಲಿ ಕಂಡುಕೊಂಡ ಜೀವನ ದರ್ಶನ ಈ ಬಗೆಯದು.

'ಬೆಂಗಳೂರು' ಇನ್ನೊಂದು ವರದಿ ರೂಪದ ಪ್ರಬಂಧ. ಅದರ ಭೂತ ಭವಿಷ್ಯತ್ ವರ್ತಮಾನಗಳ ನಿರೂಪಣೆ. ಅಕ್ಕಿಹೆಬ್ಬಾಳು-ಬೆಂಗಳೂರು ನಡುವಣ ಸಾಮ್ಯ-ವ್ಯತ್ಯಾಸಗಳು ಸ್ಪಷ್ಟ. ಅಕ್ಕಿ ಹೆಬ್ಬಾಳಿನಲ್ಲಿ,

> ....... ಆ ಹನುಮಂತರಾಯನ ಗುಡಿ...... ಮನೆಗಳ ಮುಂದಿನ
> ರಂಗವಲ್ಲಿ ಎಲ್ಲಕ್ಕಿಂತಲೂ ಹೆಚ್ಚಾಗಿ ದೇವಾಲಯದ ಗೋಪುರ
> ಇವೊಂದೂ ಇಲ್ಲದೆಯೆ ಇದು ಹೇಗೆ ನಮ್ಮ ಊರಾದೀತು?

(ಅದೇ ಪುಟ 196)

ಆದರೆ ಬೆಂಗಳೂರಿನಲ್ಲಿ ನಿರ್ಮಲ ವಸ್ತ್ರಗಳನ್ನು ಧರಿಸಿ ಪೂಜಾ ಸಾಮಗ್ರಿಗಳನ್ನು ಹೊತ್ತು ತಂದು ನಾಗರಕಲ್ಲುಗಳಿಗೆ ಪೂಜೆ ಮಾಡುವ ಸ್ತ್ರೀಯರನ್ನು ನೋಡಿದರೆ ನಮ್ಮ ಹಳೆಯ ಸಂಸ್ಕೃತಿಯ ನೆನಪು ಬರುತ್ತದೆ. ಮೆಡಿಕಲ್ ಕಾಲೇಜಿನ ಬಳಿ ಇರುವ ಗುಡಿಯಲ್ಲಿ ಈಗಲೂ ಘಂಟೆಯ ಶಬ್ದ ಕೇಳಿ ಬರುತ್ತದೆ

(ಅದೇ ಪುಟ 253–4)

ಅಕ್ಕಿ ಹೆಬ್ಬಾಳಿನ ಹಳೆಯ ಸ್ನೇಹಿತನಿಗಿದ್ದ ನೂರೆಂಟು ಕೆಲಸಗಳಲ್ಲಿ ಹರಟೆಗೆ ಕುಳಿತುಕೊಳ್ಳಲು ವ್ಯವಧಾನವಿಲ್ಲ. ಅವನ ಗದ್ದೆಯ ಪೈರು ಕೊಯ್ಲಾಗಿತ್ತು. ಅಂದೇ ಹೋಗಿ ಭತ್ತವನ್ನು ಅಳೆಸಬೇಕು. ಅವನ ತಮ್ಮ ಅಂಗಡಿಯ ವ್ಯಾಪಾರವನ್ನು ಬಿಟ್ಟು ಬರುವಂತಿಲ್ಲ. (ಅದೇ ಪುಟ 197)

ಬೆಂಗಳೂರಿನಲ್ಲಿ ಒಂದು ಕಡೆಯಿಂದ ಮತ್ತೊಂದಕ್ಕೆ ಆತುರದಲ್ಲಿ ಓಡುವುದು. ಆಪ್ತ ಸ್ನೇಹಿತರೊಡನೆಯೂ ಮಾತಾಡಲೂ ವಿರಾಮವಿಲ್ಲದೇ ಅವರಿಗೆ ಅರ್ಥವಿಲ್ಲದ 'ಹಲೋ'ವನ್ನು ಸಲ್ಲಿಸಿ ಬಸ್ಸಿಗೆ ನುಗ್ಗುವುದು. ಹಣ ಸಂಪಾದಿಸುವುದು......

(ಅದೇ ಪುಟ 258)

ಅಕ್ಕಿ ಹೆಬ್ಬಾಳಿನ ಈಗಿನ ಊರು ಬಸ್ ರಸ್ತೆಯ ಎರಡೂ ಪಕ್ಕದಲ್ಲೂ ಕ್ರಮ ವ್ಯವಸ್ಥೆಗಳಿಲ್ಲದೇ ಬೆಳೆದಿದೆ (ಅದೇ ಪುಟ 196)

ಬೆಂಗಳೂರು ನಗರವು ಆ ಗೋಪುರಗಳ ಗಡಿಯನ್ನು ದಾಟಿ ಮೈಲುಗಟ್ಟಲೆ ಆಚೆಗೆ ಹಬ್ಬಿದೆ. ಸುತ್ತಮುತ್ತ ಇದ್ದ ಹಳ್ಳಿಗಳನ್ನೆಲ್ಲಾ ಈ ನಗರ ಜಂತು ನುಂಗಿ ಜೀರ್ಣಿಸಿಕೊಂಡಿದೆ

(ಅದೇ ಪುಟ 258)

ಅಕ್ಕಿ ಹೆಬ್ಬಾಳು ರಥೋತ್ಸವ ಕಾಲದಲ್ಲಿ ವೇದ ಘೋಷದಿಂದ ಅನುರಣಿತವಾಗುತ್ತಿದ್ದರೆ ಬೆಂಗಳೂರು ಪ್ರಸಿದ್ಧ ಸಂಗೀತಗಾರರ ಸಂಗೀತ ಕಛೇರಿಗಳಿಂದ ಪ್ರತಿಧ್ವನಿಸುತ್ತಿತ್ತು. ಅಕ್ಕಿ ಹೆಬ್ಬಾಳು ಧಾರ್ಮಿಕ ಸಂಪ್ರದಾಯವನ್ನು ತನ್ನಲ್ಲಿ ಲೀನಗೊಳಿಸಿಕೊಂಡಿತ್ತು. ಬೆಂಗಳೂರಿನವರ ಕಲಾಭಿಮಾನವನ್ನು ಅಲ್ಲಗಳೆಯುವಂತಿಲ್ಲ (ಅದೇ ಪುಟ 252)

ಅಕ್ಕಿ ಹೆಬ್ಬಾಳಿನಲ್ಲಿ ಮನೆಗಳ ಮಗ್ಗುಲಲ್ಲಿ ಅಲ್ಲೊಂದು ಇಲ್ಲೊಂದು ಗಾಡಿಗಳು ಅಸ್ತವ್ಯಸ್ತವಾಗಿ ನಿಂತಿವೆ. ಎಲ್ಲಿಯೂ ಹಸಿರು ಕಾಣಿಸದು. ರಂಗವಲ್ಲಿಯಿಲ್ಲ, ತೋರಣವಿಲ್ಲ, ಎಲ್ಲಕ್ಕಿಂತಲೂ ಹೆಚ್ಚಿನ ಕೊರತೆಯೆಂದರೆ ಊರಿನಲ್ಲೊಂದು ಗುಡಿಯ ಗೋಪುರ ಕಾಣಿಸದು. ಇದನ್ನು ನೋಡಿದರೆ ಇದು ಊರು. ಇಂದಿದ್ದು ನಾಳೆ ಹೊರಡುವ ಯಾವುದೋ ದಂಡಿನವರು ಆತುರದಲ್ಲಿ ನಿರ್ಮಿಸಿಕೊಂಡ ಶಿಬಿರ ಎನ್ನುವಂತಿದೆ.

(ಅದೇ ಪುಟ 196)

ಒಂದೆ ಬೆಂಗಳೂರಿನಲ್ಲಿದ್ದ ಪ್ರಕೃತಿ ಸೌಂದರ್ಯದ ಮತ್ತು ನಗರದ ಸೌಲಭ್ಯಗಳ ಮಿಲನ ಬಹುಬೇಗ ನಾಶವಾಗುತ್ತಿದೆ

(ಅದೇ ಪುಟ 258)

"ಮಹಾರಾಜ ಕಾಲೇಜಿನ ಕಾಮನ್ ರೂಂ" ಎಂಬ ಪ್ರಬಂಧ ಮೂರ್ತಿ ರಾಯರ ವೃತ್ತಿ ಜೀವನದ ಒಂದು ಭಾಗ. ಇಲ್ಲಿ ಅವರ ಸಹೋದ್ಯೋಗಿಗಳೊಂದಿಗೆ ಅವರು ಮಾಡಿದ ಕುಚೇಷ್ಟೆ, ಹಾಸ್ಯ, ವ್ಯಂಗ್ಯ-ಎಲ್ಲವೂ ದಾಖಲಾಗಿವೆ. ಮೂರ್ತಿರಾಯರು ಇಂದಿಗೂ ನೆನಪಿನಲ್ಲಿ ಚಿರಂತನವಾಗಿರಿಸಿಕೊಂಡು ಬಂದ ಸ್ಥಳ. ಅವರಿಗೆ ಅಕ್ಕಿ ಹೆಬ್ಬಾಳು ಹೇಗೋ ಹಾಗೆ ಈ ಕಾಮನ್ ರೂಮ್ ಅಧ್ಯಾಪಕರು ಧರಿಸುತ್ತಿದ್ದ ಟೋಪಿ-ಗೌನುಗಳ ವಿಚಾರದಿಂದ ಆರಂಭವಾಗುತ್ತದೆ ಈ ಪ್ರಬಂಧ. ಕಪ್ಪು ಬಣ್ಣದ ಈ ಗೌನಿನ ಬಗ್ಗೆ ಅನಿಸಿಕೆ ಹೀಗೆ:

"ಪಾಶ್ಚಾತ್ಯರಲ್ಲಿ ಕರಿಯ ಬಣ್ಣದ ಉಡುಪನ್ನು ಧರಿಸುವುದು ಯಾರಾದರೂ ಬಂಧುಮಿತ್ರರು ಸತ್ತಾಗ, ಶೋಕ ಸೂಚಕವಾಗಿ. ಕಾಲೇಜಿನಲ್ಲಿ ಇಂಥ ಅಮಂಗಳದ ಉಡುಪನ್ನು ಧರಿಸುವುದೇಕೆ? ಜ್ಞಾನವೆಂದರೆ ಬೆಳಕೇ ಹೊರತು ಕತ್ತಲೆಯಲ್ಲವಷ್ಟೆ. ಈ ವಿಷಯದಲ್ಲಿ ನಮ್ಮವರ ಕಲ್ಪನೆ ಪಾಶ್ಚಾತ್ಯರದಕ್ಕಿಂತ ಉತ್ತಮ. ನಮ್ಮ ಸರಸ್ವತಿಯು 'ಕುಂದೇಂದು ತುಷಾರ ಹಾರ ಧವಳಾ' 'ಶುಭ್ರ ವಸ್ತ್ರಾವೃತಾ'

(ಸ.ಲ.ಪ್ರ ಪುಟ 133)

ಮೂರ್ತಿರಾಯರು ನಾಸ್ತಿಕರಾದಾಗ್ಯೂ ಇಂತಹ ಉದ್ಧೃತ ಭಾಗಗಳನ್ನು ಉದಾಹರಿಸುವಲ್ಲಿ ಅವರೊಬ್ಬ ಗಂಭೀರ ಚಿಂತನ ಶೀಲ ವ್ಯಕ್ತಿಯಾಗುತ್ತಾರೆ. ಜ್ಞಾನ, ವಿದ್ಯೆ, ಪುಸ್ತಕ-ಮುಂತಾದ ವಿಷಯಗಳನ್ನು ಕುರಿತು ಅವರೆಂದೂ ಲಘುವಾಗಿ ಮಾತನಾಡುವವರಲ್ಲ. ಆದರೆ ಕಾಮನ್ ರೂಂನ ಸದಸ್ಯರ ಹಾಸ್ಯ ಚಟುವಟಿಕೆಗಳನ್ನು ಮುಕ್ತವಾಗಿ ವರ್ಣಿಸುತ್ತಾರೆ:ಎಸ್. ಎಸ್. ಸುಬ್ಬರಾಯರು, ರಾಲೋ, ಮ್ಯಾಕಿಂಟಾಷ್, ರಾಧಾಕೃಷ್ಣನ್, ವರದಾಚಾರ್ಯರು, ಜಿ. ಹನುಮಂತರಾವ್, ವೆಂಕಣ್ಣಯ್ಯ-ಮುಂತಾದ ಎಲ್ಲಾ ಅಧ್ಯಾಪಕರ ರೀತಿ, ಹಾಸ್ಯ, ವಿದ್ವತ್ತು-ಎಲ್ಲವೂ ಇಲ್ಲಿವೆ. ಕಾಮನ್ ರೂಂನ 'ಆರೆಂಜ್ ಕ್ಲಬ್' ಸೂಯಿಸೈಡ್ ಕ್ಲಬ್'ಗಳನ್ನು ಕುರಿತು ಬರೆದ ಭಾಗಗಳು ಮೂರ್ತಿರಾಯರ ಮನೋಧರ್ಮದ ಸಂಕೇತ. 'ಆರೇಂಜ್ ಕ್ಲಬ್' ಬಗ್ಗೆ ಹೀಗೆ ಬರೆಯುತ್ತಾರೆ

ದೇವಾಸುರರಿಗೆ ಅಮೃತ ಹಂಚುವುದು ಕಷ್ಟವಾದರೂ ಮೋಹಿನಿ ಅದನ್ನು ಸಮರ್ಪಕವಾಗಿ ನಿರ್ವಹಿಸಿದಳಂತೆ. ಅದೇ ಮೋಹಿನಿ ನಮ್ಮ ಕ್ಲಬ್ಬಿಗೆ ಬಂದಿದ್ದರೆ ಹಂಚುವ ಕೆಲಸ ತನ್ನಿಂದಾಗದೆಂದು ಹೆದರಿ ಓಡಿಹೋಗುತ್ತಿದ್ದಳೇನೋ! (ಅದೇ ಪುಟ144)

ತೀ.ನಂ. ಶ್ರೀಯವರು ಬರೆದ 'ಕಾಸಿನ ಸಂಘ' ಎಂಬ ಪ್ರಬಂಧದ ಸಂಕ್ಷಿಪ್ತ ರೂಪವೂ ಈ ಪ್ರಬಂಧದಲ್ಲಿದೆ. ಅದು ಹೀಗಿದೆ:

ಕೊನೆಗೆ ಕನ್ನಡದ ಜೊತೆಗೆ ಇಂಗ್ಲೀಷ್ ಪದಗಳನ್ನು ಬೆರೆಸಿದ್ದಕ್ಕಾಗಿ ನಮಗೆ ನಾವೇ ಜುಲ್ಮಾನೆ ಹಾಕಿಕೊಂಡೆವು. (ಅದೇ ಪುಟ 148)

ಮೂರ್ತಿರಾಯರ ಹಾಸ್ಯ ಮನೋಧರ್ಮ ಇಲ್ಲಿಯೂ ವ್ಯಕ್ತವಾಗಿದೆ. ಕೆಲವು ನಿದರ್ಶನಗಳು:

ಅವುಗಳಲ್ಲಿ ಮುಖ್ಯವಾಗಿ ಯೂನಿವರ್ಸಿಟಿ ಟೀಚರ್ಸ್ ಅಸೋಸಿಯೇಷನ್ನಿನ ಹೆಸರನ್ನು ಇಲ್ಲಿ ಕಾಣಿಸಬೇಕು. ಅದರ ಹೆಸರಿನ ಪ್ರಥಮಾಕ್ಷರಗಳಾದ U.T.A. ಮೂರನ್ನೂ ಸೇರಿಸಿ ಯಾರೋ ಅದಕ್ಕೆ 'ಊಟ' ಎಂಬ ಬಿರುದು ಕೊಟ್ಟರು.

(ಅದೇ ಪುಟ 148)

ಸರ್ವದಾ ಇಂಗ್ಲೀಷ್‌ನಲ್ಲಿ ಮಾತಾಡುತ್ತಿದ್ದ ಪ್ರಾಣಿಶಾಸ್ತ್ರಾಧ್ಯಾಪಕರೊಬ್ಬರಿಗೆ ಅವರು ಹುಟ್ಟು ಕನ್ನಡಿಗರು-ಏನು ಮಾಡಿದರೂ 'ಬಾಲ' ಎಂಬ ಪದ ನೆನಪಿಗೆ ಬರದೆ "The tail, you know, the tail" ಎಂದು ಹೇಳಬೇಕಾಯಿತು. (ಅದೇ ಪುಟ 149)

'ನಿಲ್ಲುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು' ಎಂಬ ಪ್ರಬಂಧ ಮೂರ್ತಿರಾಯರ ಸ್ವಾನುಭವ ಜನ್ಯವಾದ ಒಂದು ಪ್ರಸಂಗ. ಅವರ ಆತ್ಮಚರಿತ್ರೆಯಲ್ಲಿ ಅದರ ವಾಚ್ಯರೂಪವಿದ್ದರೆ, ಇಲ್ಲಿ ಅದರ ಸೂಚ್ಯರೂಪವಿದೆ. ಲಲಿತೆಯ ಒತ್ತಾಯದಿಂದಾಗಿ ಮನೆಕಟ್ಟಬೇಕಾದ ಪ್ರಸಂಗ ಬಂದಾಗ, ಅದಕ್ಕಾಗಿ ಪ್ರಬಂಧಕಾರರು ಪಟ್ಟ ಬವಣೆ ಇಲ್ಲಿಯ ವಸ್ತು. ಆದರೆ ಹಾಸ್ಯದ ಭರದಲ್ಲಿ ಈ ಬವಣೆ ಮುಚ್ಚಿ ಹೋಗಿದೆ. ಮನೆ ಕಟ್ಟುವ (ಕಟ್ಟಿಸುವ)ಕಷ್ಟದ ಬಗ್ಗೆ ಅವರ ಹಾಸ್ಯದ ಲೇಪ ಹಚ್ಚಿದ ಸಂದೇಶ ಹೀಗಿದೆ.

"ಆದರೆ ಕಷ್ಟವನ್ನು ನಾವು ಅನುಭವಿಸುತ್ತೇವೆ. ಇತರರಿಗಾದರೂ ಅದರಿಂದ ಸುಖವಾಗಲಿ" ಎನ್ನುವ ಸಾಹಸಿಗಳಿಗೆ ನಮ್ಮ ಕೃತಜ್ಞತೆ ಸಲ್ಲಬೇಕು. ಆದ್ದರಿಂದ ನಾನು ಯಾರನ್ನೂ "ಮನೆ ಕಟ್ಟಿ ನೋಡಿ" ಎಂದು ಮೂದಲಿಸುವುದಿಲ್ಲ. "ನಿಲ್ಲುವುದಕ್ಕೆ

ನಿರಳಾಗಿ ಸಣ್ಣದೊಂದು ಗುಟುಕಲು ಕಟ್ಟಿಯೇ ಬಿಡಿ' ಎಂದು ಉತ್ತರವ ಕೊಡುತ್ತೇನೆ. (ಅದೇ ಪುಟ 194)

'ಗಾನ ಪ್ರಪಂಚದ ಅಪೂರ್ಣ ಪ್ರಜ್ಞರು' ಎಂಬ ಪ್ರಬಂಧ ಹಾಸ್ಯದ ಆವರಣದಲ್ಲಿರುವ ಒಂದು ಗಂಭೀರ ಪ್ರಬಂಧ. ಇಲ್ಲಿ ಸಂಗೀತಗಾರ ಹಾಗೂ ಶ್ರೋತೃಗಳಿಬ್ಬರ ಬಗ್ಗೆಯೂ ಮೂರ್ತಿರಾಯರ ಟೀಪಣಿ ಇದೆ. ಇಬ್ಬರಲ್ಲಿಯೂ ಇರುವ ಅಪೂರ್ಣ ಜ್ಞಾನ, ಬೂಟಾಟಿಕೆ, ಸಮರ್ಥನೆ, ಸಾಹಿತ್ಯದ ಬಗ್ಗೆ ಇರುವ ಅರ್ಥಜ್ಞಾನ-ಇವೆಲ್ಲವನ್ನೂ ಇಲ್ಲಿ ಹಾಸ್ಯವತ್ತಾಗಿ ಹೇಳಿದ್ದಾರೆ. ಸಂಗೀತ ಪ್ರೇಮಿಗಳಾದ ಮೂರ್ತಿರಾಯರು ಶಾಸ್ತ್ರೀಯ ಸಂಗೀತದ ಬಗ್ಗೆ ಖಚಿತ ಜ್ಞಾನವನ್ನು ಹೊಂದಿದವರಾದ ಕಾರಣ. ಹಾಡುಗಾರ-ಗಮಕಿಗಳು ಎಲ್ಲೆಲ್ಲಿ ರಾಗ-ತಾಳ-ಸಾಹಿತ್ಯಗಳಿಗೆ ಭಂಗ ತರುತ್ತಾರೆಂದು ಸೋದಾಹರಣವಾಗಿ ಹೇಳಿದ್ದಾರೆ. ಆದರೆ ಎಲ್ಲಿಯೂ ಕೂಡಾ ಮೂರ್ತಿರಾಯರು ಅಂತಹ ವ್ಯಕ್ತಿಗಳ ಹೆಸರುಗಳನ್ನು ಉಲ್ಲೇಖಿಸಿಲ್ಲ. ಶ್ರೋತೃಗಳ ಬಗ್ಗೆ ಅವರ ವ್ಯಂಗ್ಯ ಹೀಗಿದೆ:

ವ್ಯಗ್ರರಾಗಿ ಕುಳಿತು ಗಾನಲಯದ ಪ್ರತಿಯೊಂದು ಬಾಗುತಿರುವನ್ನೂ ಗಮನಿಸುತ್ತಾ ಭಯಂಕರ ಶ್ರದ್ಧೆಯಿಂದ, ಆವೇಶದಿಂದ, ತಾಳ ಹಾಕುತ್ತಿರುತ್ತಾರೆ.

(ಪುಟ 275)

ಅದೇ ರೀತಿ ಗಾಯಕರ ಸಂಗೀತ-ಸಾಹಿತ್ಯ ಜ್ಞಾನದ ಬಗ್ಗೆ ಅವರ ಅನುಭವ ಹೀಗಿದೆ:

ಇವರು ಸಾಹಿತಿಗಳೆ ಅಥವಾ ಸಂಗೀತಗಾರರೆ ಎಂಬುದು ನಿರ್ಧಾರವಾಗಿಲ್ಲ, ಗಮಕಿಗಳ ದೃಷ್ಟಿಯಿಂದ ಅದು ನಿಶ್ಚಿತವಾಗಿ ಉಳಿಯುವುದೇ ಅನುಕೂಲ. ಅವರು ಸಂಗೀತದಲ್ಲಿ ಅರ್ಧ, ಸಾಹಿತ್ಯದಲ್ಲಿ ಅರ್ಧಜ್ಞಾನವನ್ನು ಪಡೆದಿದ್ದೇವೆಂದು ಭಾವಿಸಿದ್ದಾರೆ.

(ಪುಟ 276)

ಮೂರ್ತಿರಾಯರು ಕಂಡ ಗಾನ ಪ್ರಪಂಚದಲ್ಲಿ ವಿಮರ್ಶಕರೂ ಇದ್ದಾರೆ. ಇಂತಹ ವಿಮರ್ಶಕರ ವಿಮರ್ಶೆಯ ತುಣುಕೊಂದನ್ನು ತೆಗೆದುಕೊಂಡು ವಿಮರ್ಶೆ ಮಾಡುತ್ತಾರೆ. ಈ ವರ್ಗದ ವಿಮರ್ಶಕರ ಬಗ್ಗೆ ಅವರ ವಿಷಾದ ಹೀಗಿದೆ:

ಈ ವಿಮರ್ಶಕರ ಜ್ಞಾನ ಪೂರ್ಣವೋ ಅಪೂರ್ಣವೋ ಪರಮೇಶ್ವರ ಬಲ್ಲ.

(ಪುಟ 278)

ಮೂರ್ತಿರಾಯರು ಇತರರನ್ನು ಗೇಲಿ ಮಾಡಿದ ಹಾಗೆ ತಮ್ಮನ್ನು ತಾವೂ ಗೇಲಿ ಮಾಡಿಕೊಂಡಿದ್ದಾರೆ. ಮೂರ್ತಿರಾಯರ ಕೃತಿಗಳಲ್ಲಿ ಇಂತಹ ವಿಮರ್ಶೆ ಸಾಮಾನ್ಯ. ಅದರ ಒಂದು ಮಾದರಿ ಹೀಗಿದೆ:

ಕೊನೆಯದಾಗಿ ನನಗೆ ಪ್ರಿಯರಾದ ಗುಂಪಿನವರ, ಅಂದರೆ ನನ್ನಂಥವರ ವಿಷಯವಾಗಿ ಒಂದೆರಡು ಮಾತು ಹೇಳುತ್ತೇನೆ. ಈ ಮಾತು ಸ್ವಲ್ಪ ಮಟ್ಟಿಗೆ ಆತ್ಮಕಥೆಯಾದರೆ ಕ್ಷಮಿಸಿ ಬಿಡಿ........ಸಂಗೀತದ ಮೂಲಕ ಅವರ ಮೇಲೆ ಸೇಡು ತೀರಿಸಿಕೊಳ್ಳಬೇಕೆನ್ನುವಂಥ ಹೊಟ್ಟೆಯುರಿಯೇನೂ ನನಗಿಲ್ಲ, ನನ್ನ ಸಂಗೀತವನ್ನು ಕೇಳಿ ಅವರು ಆನಂದ ಪಡುತ್ತಾರೆಂಬ ಭ್ರಮೆಯೂ ಇಲ್ಲ,............

(ಪುಟ 278–279)

ಹಾಸ್ಯಗತಿಯಲ್ಲಿ ಸಾಗುತ್ತಾ ಬಂದ ಈ ಪ್ರಬಂಧ ಕೊನೆಯಲ್ಲಿ ಅತ್ಯಂತ ಗಂಭೀರ ರೂಪ ತಾಳುತ್ತದೆ. ಈ ಮೇಲಿನ ಎಲ್ಲಾ ವರ್ಗಕ್ಕೂ ಪ್ರಾಥಮಿಕ ವರ್ಗವೆನಿಸಿದ

ಗಾಯಕರಿಗೆ ಒಂದು ಬೋಧನಾತ್ಮಕವೆನಿಸುವಂತಹ ಶೈಲಿಯಲ್ಲಿ ಈ ಪ್ರಬಂಧವನ್ನು ಮುಗಿಸುತ್ತಾರೆ:

"ಈ ಸಂದರ್ಭದಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವಿದೆ. ಶ್ರೋತೃಗಳನ್ನು ಗಮನಕ್ಕೆ ತಂದುಕೊಳ್ಳದೆ, ಅವರು ಇರಬೇಕೆಂಬ ಅಪೇಕ್ಷೆಯೂ ಇಲ್ಲದೆ, ತಮಗೆ ತಾವೇ ಹಾಡಿಕೊಳ್ಳುವವರು ಯಾರೂ ಉಲ್ಲಾಸವಿಲ್ಲದೆ ಹಾಡುವುದಿಲ್ಲ. ಅಂದ ಮೇಲೆ ಆಗ ನಮ್ಮ ಮನಸ್ಸು ಪ್ರಸನ್ನವಾಗಿರುತ್ತದೆ. ದೇಹದ ನಾಡಿ ಹಿತವಾದ ಲಯಕ್ಕೆ ಮಿಡಿಯುತ್ತಿರುತ್ತದೆ, ನಮಗೂ ಬಾಹ್ಯ ಪ್ರಪಂಚಕ್ಕೂ ದಿವ್ಯವಾದ ಸಾಮರಸ್ಯವಿರುತ್ತದೆ. ನಮ್ಮ ಕಂಠ ಹೇಗಿದ್ದರೇನು, ಶಾಸ್ತ್ರಜ್ಞಾನ ಪರಿಪೂರ್ಣವಾಗಿದ್ದರೇನು ಇಲ್ಲದಿದ್ದರೇನು-ಆ ಸಾಮರಸ್ಯ ಪರಿಪೂರ್ಣವಾಗಿದೆಯಷ್ಟೆ! ಇಂಥ ಚಿತ್ತ ನೈರ್ಮಲ್ಯದಿಂದ ಹೊರಡುವ ಗಾನ ಆ ನೈರ್ಮಲ್ಯವನ್ನು ಮತ್ತಷ್ಟು ನಿರ್ಮಲ ಮಾಡುತ್ತದೆ. ಲೋಕದಲ್ಲಿ ಅವ್ಯಾಜವಾದ ಸತ್ಕರ್ಮ ಹೊರಡಬೇಕಾದರೆ ಇಂಥ ಪ್ರಸನ್ನತೆಯಿಂದ ಪರಿಪೂರ್ಣ ಜ್ಞಾನದ ಹೆಸರಿನಲ್ಲಿ ಅದನ್ನು ಅಲ್ಲಗಳೆಯಬೇಡಿ. (ಪುಟ 279-280)

ಈ ಗಂಭೀರ ಚಿಂತನೆಯ ಮುಂದುವರೆದ ಭಾಗವಾದ 'ಶಾಸ್ತ್ರೀಯ ಸಂಗೀತದಿಂದ ನಾವು ನಿರೀಕ್ಷಿಸಬೇಕಾದುದೇನು?' ಎಂಬ ಲೇಖನದಲ್ಲಿ ಅತ್ಯಂತ ಸಮರ್ಥವಾದ ಹಾಗೂ ಸೋದಾಹರಣವಾದ ರೀತಿಯಲ್ಲಿ ವಿಷಯವನ್ನು ಪ್ರತಿಪಾದಿಸಿದ್ದಾರೆ. ವಿಮರ್ಶಕರ ವಿಮರ್ಶೆಯನ್ನು ಟೀಕಿಸಿದ ಮೂರ್ತಿರಾಯರು ಸಂಗೀತದ ಬಗ್ಗೆ ಓದುಗರಿಗೆ ಉಚಿತ ಜ್ಞಾನವನ್ನು ನೀಡಿ, ಸಂಗೀತದ ವಿಮರ್ಶೆ ಹೇಗಿರಬೇಕೆಂದು ತೋರಿಸಿಕೊಟ್ಟಿದ್ದಾರೆ.

## 2.2 ಭಾವಗೀತಾತ್ಮಕ ಪ್ರಬಂಧಗಳು :

'ಹೂವುಗಳು' ಮತ್ತು 'ಗಾಡಿಯ ಪ್ರಯಾಣ' ಎಂಬ ಎರಡು ಪ್ರಬಂಧಗಳು ಭಾವಗೀತಾತ್ಮಕ ಲಕ್ಷಣಗಳಿಂದ ಕೂಡಿವೆ. ಅವರು ಆಕಾಶವಾಣಿಯ ಸಹನಿರ್ದೇಶಕರಾಗಿದ್ದಾಗಿನ ಕಾಲದಲ್ಲಿ ಒಂದು ಪೂರ್ವ ನಿರ್ದಿಷ್ಟ ಕಾರ್ಯಕ್ರಮ ರದ್ದಾದ ಸಂದರ್ಭದಲ್ಲಿ ಅವರೇ ಸ್ವತಃ ಕಾರ್ಯಕ್ರಮ ನೀಡಲು ಬರೆದ ಪ್ರಬಂಧ 'ಹೂವುಗಳು'. ಒಬ್ಬ ಪ್ರಬಂಧಕಾರನ ಸುಕೋಮಲ ಮನಸ್ಸಿನ ವ್ಯಕ್ತರೂಪ ಈ ಪ್ರಬಂಧ.

ಕ್ರಿಸ್ತನು ಹೇಳಿದ ಮಾತಿನಿಂದ ಈ ಪ್ರಬಂಧ ಆರಂಭವಾಗುತ್ತದೆ. ಮೂರ್ತಿರಾಯರು ಭಾವುಕರಾಗಿ, ಸೌಂದರ್ಯದ ಅನ್ವೇಷಕರಾಗಿ ಈ ಪ್ರಬಂಧವನ್ನು ಬರೆದಿದ್ದಾರೆ. ಹೂವುಗಳನ್ನು ಕಂಡ ಕಣ್ಣು ಅವುಗಳ ಸೌಂದರ್ಯವನ್ನು ಅನುಭವಿಸಿದ ಹೃದಯ-ಇವೆಲ್ಲವೂ ಇಲ್ಲಿವೆ. ಮೂರ್ತಿರಾಯರ ಕವಿತಾ ಹೃದಯ ಈ ಹೂವುಗಳ ಸೌಂದರ್ಯವನ್ನು ಆಸ್ವಾದಿಸಿದಾಗ ಅವರ ಅನುಭವ ಹೀಗಿದೆ:

'ಹೂವುಗಳು' ಭೂದೇವಿಯ ಕವನ, ಆಕೆಯ ಹೃದಯದಲ್ಲಿ ಅಡಗಿರುವ ಸೌಂದರ್ಯಾಕಾಂಕ್ಷೆಯೂ ಸವಿಗನಸುಗಳೂ ರೂಪುಗೊಂಡ ಕವನ. (ಪುಟ 19)

ಡಾ. ಡಿ.ವಿ.ಜಿ. ಯವರ 'ವನಸುಮ' ಎಂಬ ಕವನಕ್ಕೆ ಒಂದು ನಿದರ್ಶನವೆಂಬಂತೆ ಅವರು ತಮ್ಮ ಒಂದು ಅನುಭವವನ್ನು ನಿರೂಪಿಸಿದ್ದಾರೆ. ಗಿಡಗಳ ಮರೆಯಿಂದ ಬಂದ ಸುವಾಸನೆಯನ್ನು ಅನುಸರಿಸಿ ಹೂವನ್ನು ಶೋಧಿಸಿದಾಗ, ಆ ಹೂವು ಅವರಲ್ಲಿ ಉಂಟು ಮಾಡಿದ ಭಾವನೆಗಳು ಹೀಗಿದೆ:

ಮುಳ್ಳುಗಿಡಗಳ ಮರೆಯಿಂದ ತಂಗಾಳಿಯೊಂದಿಗೆ ಚಿಕ್ಕಂದಿನಿಂದಲೂ ಪುಷ್ಪ ಸಹ ಇಲ್ಲದೆ ಹೋಗಬಹುದು. ಆದರೂ ಜನರು ತನ್ನನ್ನು ಗಮನಿಸಲಿ ಬಿಡಲಿ, ತನ್ನ ಅಲ್ಪ ಪ್ರಕೃತಿಯು ತನಗೆ ಕೊಟ್ಟಷ್ಟು ಪರಿಮಳವನ್ನು ಆ ನಿರ್ಜನ ವಾತಾವರಣಕ್ಕೆ ಬೀರುತ್ತಿರುವುದು. ನಿಷ್ಕಾಮಕರ್ಮಿಯೆಂದರೆ ಈ ಹೂವು.

(ಪುಟ 21)

ಹೂವುಗಳ ಬಣ್ಣ, ಆಕಾರ, ಹೋಲಿಕೆಗಳನ್ನು ಕಾವ್ಯಾತ್ಮಕವಾಗಿ ವರ್ಣಿಸಿದ ಮೂರ್ತಿರಾಯರು ನಾಗರಿಕ ಹೂವುಗಳ ಬಗ್ಗೆಯೂ ಇಲ್ಲಿ ಪ್ರಸ್ತಾಪಿಸಿದ್ದಾರೆ. ಕಮಲದ ಬಗ್ಗೆ ಅವರು ಒಂದು ಪ್ಯಾರಾ ಬರೆದಿದ್ದಾರೆ. ಕಮಲ ನಮ್ಮ ಬದುಕಿನ ಮೇಲೆ ಬೀರಿದ ಪ್ರಭಾವವನ್ನು ಕುರಿತು ಒಂದು ಪ್ಯಾರಾ ಬರೆದರೆ, ಗುಲಾಬಿಯನ್ನು ಕುರಿತು ಬರೆದ ಸಾಲುಗಳು, ಗದ್ಯ ಶೈಲಿಯಲ್ಲಿದ್ದರೂ, ಅವುಗಳಲ್ಲಿ ಒಂದು ಗೇಯಾಂಶವಿದೆ. ಭಾವ ಗೀತೆಯ ಮಾಧುರ್ಯವಿದೆ. ಒಂದು ಕಾಲ್ಪನಿಕವಾದ ಸುಖಾನುಭೂತಿ ಇದೆ. ಕಾವ್ಯಾತ್ಮಕ ಶೈಲಿಯಲ್ಲಿ ಬರೆದ ವಾಕ್ಯಗಳು ಹೀಗಿವೆ:

“ಇರಾನಿನ ರಾಜರ ಶೃಂಗಾರವನ, ಇಲ್ಲವೇ ಕಾಶ್ಮೀರದ ಶಾಲಿಮಾರ್ ತೋಟ. ಮೊಗಲ ಬಾದಷಹರ ಉಪವನ ಮತ್ತು ರಂಗಮಹಲು, ಅದರ ಉಪ್ಪರಿಗೆಯ ಮೇಲೆ ನಿಂತು ಯಮುನೆಯು ಪ್ರವಹಿಸುತ್ತಿರುವುದನ್ನು ನೋಡುತ್ತಿರುವ ಸಂಧ್ಯಾರಾಗ ರಂಜಿತವಾದ ಮುಖಗಳುಳ್ಳ ರಮಣಿಯರು, ಗುಲಾಬಿ ತುಂಬಿದ ನೀರಿನಲ್ಲಿ ಸ್ನಾನ ಮಾಡುವಾಗ ಅತ್ತರನ್ನು ಕಂಡು ಹಿಡಿದು ಜಗತ್ತಿಗೆ ದಿವ್ಯ ಪರಿಮಳವನ್ನು ಒದಗಿಸಿಕೊಟ್ಟ ಯೌವ್ವನ ಸುಂದರಿ ನೂರ್‌ಜಹಾನ್- ಈ ನೆನಪುಗಳೆಲ್ಲಾ ಮನಸ್ಸಿಗೆ ಬರುವುವು... ಕಮಲಕ್ಕೆ ಒಂದು ತೆರನಾದ ಗಾಂಭೀರ್ಯ ಹೆಚ್ಚಿರಬಹುದು, ಆದರೆ ಗುಲಾಬಿಗಿರುವ ಸ್ವರ್ಗೀಯ ವರ್ಣವೂ, ಕೋಮಲತೆಯೂ ಹೊಸ ಯೌವ್ವನದ ಸೊಂಪೂ ಇಲ್ಲ. ನಿಜವಾಗಿಯೂ ಅದು ಹೂವುಗಳ ರಾಣಿ.

(ಪುಟ 23)

‘ಗಾಡಿಯ ಪ್ರಯಾಣ’ ‘ಟ್ರಾವಲ್ ಬೈ ಟ್ರೈನ್’ ಎಂಬ ಇಂಗ್ಲೀಷ್ ಪ್ರಬಂಧಕ್ಕೆ ವ್ಯತಿರಿಕ್ತವಾದ ಒಂದು ಪ್ರಬಂಧ. ಆ ಪ್ರಬಂಧದಲ್ಲಿ ರೈಲುಗಾಡಿಯ ಒಳಗಿನ ಪ್ರಪಂಚ ಹಾಗೂ ಪ್ರಯಾಣಿಕರ ಮನಸ್ಸಿನ ಒಳ ತೋಟಿಗಳು ಚಿತ್ರಿತವಾಗಿದ್ದರೆ ಇಲ್ಲಿ ಪ್ರಕೃತಿಯ ಮುಕ್ತ ವಾತಾವರಣದ ನಡುವಣ ಒಂದು ಹಿತಕರವಾದ ಹಾಗೂ ಪ್ರಸನ್ನವಾದ ಪರಿಸರ ಇದೆ. ಎಸ್. ಎಸ್. ವೀರಪ್ಪನವರ “ಪುಣ್ಯಭೂಮಿ” ಹಾಗೂ ಹಾರ್ಡಿಯ “ಅಂಡರ್ ದಿ ಗ್ರೀನ್ ವುಡ್ ಟ್ರೀ” ಕೃತಿಗಳನ್ನು ನೆನಪಿಸುವ ಈ ಪ್ರಬಂಧವೂ ಭಾವ ಗೀತಾತ್ಮಕ ವಾಗಿದೆ, ಕಾವ್ಯಾತ್ಮಕವಾಗಿದೆ. ಈ ಪ್ರಬಂಧದ ಆರಂಭ ಒಂದು ಚಿತ್ರವತ್ತಾದ ಕಾವ್ಯಾತ್ಮಕ ವರ್ಣನೆ.

ಮೇಲೆ ತಿಳಿಯಾದ ನಕ್ಷತ್ರ ಮಂಡಿತವಾದ ಆಕಾಶ, ಮುಂದೆ ಬೆಳದಿಂಗಳಿನಲ್ಲಿ ಇಲ್ಲಿ ಶುಭ್ರವಾಗಿಯೂ ಅಲ್ಲಿ ಅಸ್ಪಷ್ಟವಾಗಿಯೂ ನೆರಳಿನ ನಡುವೆ ನುಸುಳಿಕೊಂಡು ಹೋಗುವ ರಸ್ತೆ, ಮೃದುವಾಗಿ ಬೀಸುವ ತಂಗಾಳಿ, ಎತ್ತುಗಳ ಕೊರಳಿನಲ್ಲಿರುವ ಗೆಜ್ಜೆಯ ಶಬ್ದ-ಈ ಆವರಣದಲ್ಲಿ ಗಾಡಿಯ ಪ್ರಯಾಣವೇ ಹಿತ.

(ಪುಟ 27)

ಇಂತಹ ಮಧುರವಾದ ಪದಪುಂಜಗಳಿಗೆ ಮತ್ತೊಂದು ನಿದರ್ಶನ ಕೊಡ ಬಹುದು:

"ಒಟ್ಟಿನಲ್ಲಿ ರೈಲುರಸ್ತೆಯಲ್ಲಿ ಬಲವೂ, ಕಾಠಿಣ್ಯವೂ ಕಾಣುವುದೇ ಹೊರತು ಮಾರ್ದವ ಕಾಣುವುದಿಲ್ಲ. ಗಾಡಿಯ ರಸ್ತೆಯಾದರೋ ಉದಾರಿಗಳ ಮನಸ್ಸಿನಂತೆ ವಿಶಾಲವಾದದ್ದು. ಬಿಸಿಲಿನಲ್ಲಾಗಲೀ ಬೆಳದಿಂಗಳಿನಲ್ಲಾಗಲಿ ನಮ್ಮನ್ನು ನೋಡಿ ಅದರದಿಂದ ಬರಮಾಡಿಕೊಳ್ಳುವ ನಗೆಯುಂತಿರುವ ಒಂದು ಬಗೆಯ ಧಾವಳ್ಯದಿಂದ ಹೊಳೆಯುವುದು" (ಪುಟ 28)

ಮೂರ್ತಿರಾಯರು ಕೂಡ ಭಾವುಕರಾಗಿ, ಭೂತಕಾಲಕ್ಕೆ ಸರಿದು ಬರೆದ ಪ್ರಬಂಧಗಳಲ್ಲಿ ಇಂತಹ ಕಲ್ಪನಾತ್ಮಕ ಹಾಗೂ ಭಾವುಕ ವರ್ಣನೆಗಳಿವೆ. ನಾಗರಿಕ ಸೌಲಭ್ಯಗಳನ್ನು ವರ್ಡ್ಸ್‌ವರ್ತ್‌ನಂತೆ ತಿರಸ್ಕರಿಸಿ ಮೂರ್ತಿರಾಯರು ತಾವು ಅಧ್ಯಯನ ಮಾಡಿದ ವಿದೇಶೀ ಕಥೆಗಾರರ ದೃಷ್ಟಿಯಿಂದ ಕನ್ನಡದ ಕತೆಗಳನ್ನು ಕಂಡಿದ್ದಾರೆ. ಈ ಪ್ರಬಂಧದ ಮೇಲೆ ಅದರ ಪ್ರಭಾವವಿದೆಯೇ ಹೊರತು ಮುಕ್ತ ದೃಷ್ಟಿ ಇಲ್ಲ. ಜೊತೆಗೆ ಇದು ಒಂದು ಸಾಹಿತ್ಯ ಪ್ರಕಾರವನ್ನು ಕುರಿತು ಗಂಭೀರ ಚಿಂತನೆಯೂ ಅಲ್ಲ, ಹಾಸ್ಯವೂ ಅಲ್ಲ. ಏಕೆಂದರೆ ದಲಿತ-ಬಂಡಾಯ ಸಾಹಿತ್ಯವನ್ನು ಸೂಚ್ಯವಾಗಿ ಹೇಳಿ ಪ್ರಗತಿಪರ ಪಂಥವನ್ನು ವಾಚ್ಯವಾಗಿ ಹೇಳಿ, ಕೆಲವು ಲೇಖಕರನ್ನು ನೇರವಾಗಿ ಉಲ್ಲೇಖಿಸಿದ್ದಾರೆ. ಇಷ್ಟೆಲ್ಲಾ ಆದರೂ ಮೂರ್ತಿರಾಯರ ಒಂದು ಅಭಿಪ್ರಾಯ ಸ್ವಾಗತಾರ್ಹ. ಕೇವಲ ವಿದೇಶೀ ಕಥೆಗಾರರನ್ನು ಅನುಕರಿಸುವವರಿಗೂ ಅವರು ಒಂದು ಕಿವಿ ಮಾತಿನ ಸಂದೇಶ ಹೀಗೆ ನೀಡಿದ್ದಾರೆ:

ಅವು ಎಡ್ಗರ್ ಅಲನ್‌ಪೋ, ಓ ಹೆನ್ರಿ, ಮೋಪಸಾಂತ ಮುಂತಾದ ಕಥೆಗಾರರಿಗೆ ಪ್ರತಿಧ್ವನಿ ಕೊಡದೆ ಹೊಸ ಅನುಭವವನ್ನು ಹೊಸ ರೀತಿಯಲ್ಲಿ ಪ್ರಾಮಾಣಿಕವಾಗಿ ನಿರೂಪಿಸಲಿ.

(ಪುಟ 184)

'ಹರಟೆಯ ಮಲ್ಲ' ಹಾಗೂ 'ಹರಟೆ ಮತ್ತು ಪ್ರಬಂಧ' ಎಂಬ ಎರಡು ಪ್ರಬಂಧಗಳು ಅವರ ಮನೋಧರ್ಮ-ಸಾಹಿತ್ಯಧರ್ಮದ ಪ್ರತೀಕಗಳು. ಹರಟೆಯ ಮಲ್ಲನ ಲಕ್ಷಣಗಳನ್ನು ಈ ಪ್ರಬಂಧದಲ್ಲಿ ಮಂಡಿಸುತ್ತಾ ಹೋಗಿದ್ದಾರೆ. ಈ ಹರಟೆಯ ಮಲ್ಲನ ಬಗ್ಗೆ ಅವರ ವ್ಯಾಖ್ಯಾನ ಹೀಗಿದೆ:

'ಬೋರ್' ಎಂಬ ಪದಕ್ಕೆ 'ಹರಟೆಯ ಮಲ್ಲ' ಎಂದು ಅರ್ಥಕೊಡುವುದು ತಪ್ಪು ಎಂದು ನಿಸ್ಸಂದೇಹವಾಗಿ ಹೇಳುತ್ತೇನೆ.....ಅತನೂ (ಬೋರ್ -ಬೈರಿಗೆಯುವನು)ಹರಟೆಯ ಮಲ್ಲನೂ ಬೇರೆ ಬೇರೆ ವರ್ಗಗಳಿಗೆ ಸೇರಿದವರು ಎಂಬ ಅಭಿಪ್ರಾಯವನ್ನು ಮಂಡಿಸಿ, ಅನಂತರ ಹರಟೆಯ ಮಲ್ಲನ ವಿಷಯ ಮಾತಾಡುತ್ತೇನೆ. (ಪುಟ 209)

ಹರಟೆ ಎಂಬ ಸಾಹಿತ್ಯ ಈಚೆಗೆ ಬೆಳೆದು ಬಂದಿದೆ. ಇದನ್ನೊಂದು ಸಾಹಿತ್ಯ ಪ್ರಕಾರ ಎಂದು ಒಪ್ಪಿಕೊಂಡರೆ ಅದರಿಂದ ನಮಗೆ ಏನೂ ಸಿಗುವುದಿಲ್ಲ ಎಂಬ ಸತ್ಯವನ್ನು ವ್ಯಂಗ್ಯಾರ್ಥದಲ್ಲಿ ಹೀಗೆ ಹೇಳಿದ್ದಾರೆ:

ಹಾಗೇ ಹರಟೆಯಿಂದ ನಮ್ಮ ಮನಸ್ಸು ಹರ್ಷಗೊಂಡು ನಲಿದಾಡುತ್ತದೆಯಾದರೂ ಅದರ ಮೇಲೆ ಗಹನವಾದ ಚಿಂತನೆಯು ಹೊರೆ ಬಿದ್ದು ತ್ರಾಸವಾಗುವುದಿಲ್ಲ. (ಪುಟ 212)

ಹಾಗೆಂದು ಅವರು ಕೇವಲ ವೈಚಾರಿಕತೆ, ಪಾಂಡಿತ್ಯಗಳನ್ನೇ ಗಮನಿಸುವವರಲ್ಲ. ಕೆಲವೊಮ್ಮೆ ಅವುಗಳ ಬೆನ್ನು ಹತ್ತಿ ಹೊರಟ ಗೋಷ್ಠಿಗಳೂ ಹೀಗೆಯೆ ಏನನ್ನೂ ಸಾಧಿಸದೆ ಹೋಗುತ್ತವೆ ಎಂಬುದನ್ನೂ ಅವರು ಹೀಗೆ ಹೇಳಿದ್ದಾರೆ:

ಅಂಥ ಹೊರೆ ಬಿದ್ದರೆ ಅದು ಹರಟೆಯಾಗುವುದಿಲ್ಲ. ವಿದ್ವದ್ಗೋಷ್ಠಿಯೋ ವಾಕ್ಯಾರ್ಥವೋ ಆಗುತ್ತದೆ. (ಪುಟ 212)

ಆದರೂ ಮೂರ್ತಿರಾಯರಿಗೆ ಹರಟೆ ಬೇಡವೆನ್ನಿಸುವುದಿಲ್ಲ. ಅದು ಬೀರುವ ಪರಿಣಾಮವನ್ನು ಅವರು ಸ್ವಾಗತಿಸುತ್ತಾರೆ. ಅವರಿಗೆ ಅತ್ಯಂತ ಇಷ್ಟವಾದ ಈ ಪರಿಣಾಮವನ್ನು ಕುರಿತು ಕೊನೆಯಲ್ಲಿ ಹೀಗೆಂದಿದ್ದಾರೆ:

ಇನ್ನೇನೂ ಇಲ್ಲದಿದ್ದರೂ ಹರಟೆ ಮನಸ್ಸಿಗೆ ಪ್ರಸನ್ನತೆಯನ್ನಾದರೂ ಕೊಡುತ್ತದೆಯಷ್ಟೆ. ಅದೇನು ಕಡಿಮೆಯ ಪ್ರಯೋಜನವೆ! (ಪುಟ 213)

ಇದರ ಮುಂದಿನ ಭಾಗದಂತಿರುವ 'ಹರಟೆ ಮತ್ತು ಪ್ರಬಂಧ'ಗಳ ನಡುವಣ ವ್ಯತ್ಯಾಸವನ್ನು ಗುರುತಿಸಿದ್ದಾರೆ. ಇಂಗ್ಲೀಷ್‌ನ 'ಎಸ್ಸೆ'ಗೆ ಅವರು 'ಲಲಿತ ಪ್ರಬಂಧ' ಎಂಬ ಪದವನ್ನು ನೀಡಿದ್ದಾರೆ. ಪ್ರಬಂಧ-ಪ್ರಬಂಧಕಾರ-ವಸ್ತು-ಗುರಿ-ಇವೆಲ್ಲ ಈ ಪ್ರಬಂಧದ ಚಿಂತನೆಗೆ ಒಳಪಟ್ಟಿವೆ.

ಅವರ ಪ್ರಕಾರ ಹರಟೆಗೆ ಹಲವರು ಬೇಕು. ಪ್ರಬಂಧಕ್ಕೆ ಆಪ್ತ ಮಿತ್ರನೊಬ್ಬನೇ ಸಾಕು. ಲಲಿತ ಪ್ರಬಂಧ ಹಾಗೂ ಭಾವಗೀತೆಗಳ ಬಾಂಧವ್ಯಗಳನ್ನು ಅವರು ಹೀಗೆ ಹೇಳಿ, ಭಾವಗೀತೆಗಳ ಮಾದರಿಗಳನ್ನೂ ಉದಾಹರಿಸಿದ್ದಾರೆ. ಗ್ರಾಮೀಣ ಪರಿಸರವನ್ನು ಚಿತ್ರಿಸಿದ್ದಾರೆ. ಜಾನಪದ ಸೊಗಡು ಇಲ್ಲಿ ಕಂಡುಬರುತ್ತದೆ. ಈ ಪ್ರಬಂಧದ ಕೊನೆಯ ಸಾಲುಗಳಲ್ಲಿ ಅವರ ಬಾಲ್ಯದ ನೆನಪನ್ನು ಕಾವ್ಯಮಯವಾದ ಶೈಲಿಯಲ್ಲಿ ಹೀಗೆ ಬರೆದಿದ್ದಾರೆ.

ಈಗ ನನಗೆ ಮೋಟಾರಿನ ಕನಸಿಗಿಂತಲೂ ಕೆಲವು ವೇಳೆ ಗಾಡಿಯ ಪ್ರಯಾಣದ ಕನಸೇ ಹೆಚ್ಚಾಗಿದೆ. ಬೆಳದಿಂಗಳಲ್ಲಿ ನೆನೆದು ಹರಿಯುತ್ತಿರುವ ಹುಣ್ಣಿಮೆಯ ರಾತ್ರಿ, ಸಾಲುಮರಗಳ ನಡುವೆ ಸುತ್ತಿ ಸುತ್ತಿಕೊಂಡು ಹೋಗುವ ರಸ್ತೆ, ಒಳ್ಳೆಯ ಜಾತಿಯ ಎತ್ತುಗಳು, ತುಯ್ಯುತ್ತಿರುವ ಗಾಡಿ, ಜೊತೆಯಲ್ಲಿ ನನ್ನ ನಲ್ಲೆ,-ಪ್ರಯಾಣವು ನಿಧಾನವಾದರೇನು, ನಿಶ್ಚಿತ ಸ್ಥಳವನ್ನು ಎಂದು ತಲುಪಿದರೇನು ತಲುಪದಿದ್ದರೆ ತಾನೆ ಏನು !
(ಪುಟ 38)

ಈ ಪ್ರಬಂಧ ಅವರ 'ಪ್ರಣಯಯಾತ್ರೆ'ಯ ಪೂರ್ವ ಪೀಠಿಕೆಯಂತಿದೆ. ವಾಸ್ತವ-ಕಲ್ಪನೆಗಳೆರಡರ ಮಿಶ್ರಣವಾದ ಈ ಪ್ರಬಂಧ ಸಾಗಿದಂತೆ, ಗಾಡಿಯ ಪ್ರಯಾಣವೂ, ಮುಂದುವರೆದು ಒಂದು ಹಗಲುಗನಸಿನಲ್ಲಿ ಪರ್ಯವಸಾನವಾಗುತ್ತದೆ.

## 2.3 ಸಾಹಿತ್ಯಾತ್ಮಕ ಪ್ರಬಂಧಗಳು:

ಸಾಹಿತ್ಯಾತ್ಮಕ ಪ್ರಬಂಧಗಳಲ್ಲಿ ಮೂರ್ತಿರಾಯರ ವೈನೋದಿಕ ಪ್ರಜ್ಞೆ ವ್ಯಂಗ್ಯವಾಗಿ ವ್ಯಕ್ತವಾಗಿರುವುದನ್ನು ಕಾಣುತ್ತೇವೆ. ಉದಾಹರಣೆಗೆ 'ಸಾಹಿತಿಯ ಚಹರೆ' ಎಂಬ ಪ್ರಬಂಧದಲ್ಲಿ ಸಾಹಿತಿಗಳ ಬಾಹ್ಯ ಲಕ್ಷಣ, ಬೂಟಾಟಿಕೆ ಹಾಗೂ ಅಬ್ಬರಗಳನ್ನು ಹಾಸ್ಯವತ್ತಾಗಿ ಹೇಳಿದ್ದಾರೆ. ಅವರ ಪ್ರಕಾರ ಶಾಲು ಸಾಹಿತಿಗಳು, ಅವರ ವಿರುದ್ಧ ದಂಗೆಯೆದ್ದ ಜರಿರುಮಾಲಿನ ಅಥವಾ ಮಡಿ ಸಾಹಿತಿಗಳು, ಯುವ ಕವಿಗಳು, ಕಲೆಗಾರ ಸಾಹಿತಿಗಳು- ಹೀಗೆ ಹಲವು ವರ್ಗಗಳಿವೆ. ಇಲ್ಲಿಯೂ ಮೂರ್ತಿರಾಯರು, ಶ್ರೀ, ರಾಜರತ್ನಂ ಮುಂತಾ

ದವರನ್ನು ಕೊಂಚ ಗೇಲಿ ಮಾಡಿದ್ದಾರೆ. ರಾಜರತ್ನಂ ಬಗ್ಗೆ ಹೀಗೆ ಅವರ ಲೇಖನಿಯ ಧ್ವನಿ ಇದೆ:

ಕನ್ನಡದ 'ಯೆಂಡ'ಕುಡಿದು ಮತ್ತರಾದ ಕನ್ನಡ ಪದಗಳನ್ನು ಹಾಡುವ ಈ ಗಾಯಕರನ್ನು ಎಲ್ಲಿ ಹೋದರೆ ಅಲ್ಲಿ ಕಾಣಬಹುದು. (ಪುಟ 169)

ಅದರಂತೆ 'ಸಣ್ಣ ಕಥೆಯ ಹಾವಳಿ' ಎಂಬ ಪ್ರಬಂಧದಲ್ಲಿ ಸಣ್ಣ ಕಥೆಗಳಲ್ಲಿ ಬರುವ ಏಕತಾನತೆಯನ್ನು ಅವರು ಗುರುತಿಸಿದ್ದಾರೆ. ವಸ್ತು ವೈವಿಧ್ಯದ ವಿಪುಲತೆ ಇದ್ದರೂ ಕೂಡಾ ಹಳಸಲು ವಸ್ತುವನ್ನೇ ಈ ಮಾಧ್ಯಮಕ್ಕೆ ಅವರು ಬಳಸುತ್ತಿದ್ದ ರೀತಿಯನ್ನು ಅವರು ಇಲ್ಲಿ ತಮಾಷೆ ಮಾಡಿದ್ದಾರೆ.

## 2.4 ಕಥಾನಾತ್ಮಕ ಪ್ರಬಂಧಗಳು:

ಮೂರ್ತಿರಾಯರು ಸ್ವತಃ ಕಥೆಗಳನ್ನು ಬರೆಯದಿದ್ದರೂ ಅವರು ಸಣ್ಣ ಕಥೆಗಳ ಕ್ಷೇತ್ರದಲ್ಲಿಯೂ ಕೃಷಿ ಮಾಡಿದ್ದಾರೆ, ಪಳಗಿದ್ದಾರೆ. "ಯೋಧನ ಪುನರಾಗಮನ," "ಪಾಶ್ಚಾತ್ಯ ಸಣ್ಣ ಕಥೆಗಳು", "ಹವಳದ ದ್ವೀಪ",-ಮುಂತಾದ ಅನುವಾದಗಳು ಅವರ ಕಥನ ಕಲೆಗೆ ನಿದರ್ಶನ. ಅವರು ಬಾಲ್ಯದಲ್ಲಿ ಇಂಗ್ಲೀಷ್ ಕಥೆಗಳನ್ನು ಓದಿದವರು. 'ಅರೇಬಿಯನ್ ನೈಟ್ಸ್'ನಂತರ ಕಥಾ ಸಂಕಲನವನ್ನೂ ಓದಿಕೊಂಡವರು. ಪ್ರಸ್ತುತ ಅವರ ಕೆಲವು ಪ್ರಬಂಧಗಳಲ್ಲಿ ವ್ಯಕ್ತವಾಗುವ ಕಥನಾಂಶವನ್ನು ಪರಿಶೀಲಿಸಲಾಗಿದೆ.

'ಕೆನ್ಸಿಂಗ್ಟನ್ ಪಾರ್ಕ್' ಎಂಬ ಒಂದು ಪ್ರಬಂಧ ಪೂರ್ಣಚಂದ್ರ ತೇಜಸ್ವಿಯವರ 'ಕರ್ವಾಲೋ' ಕಾದಂಬರಿಯಂತಿದೆ. ಹಾರುವ ಓತಿಯನ್ನು ಬೆನ್ನಟ್ಟಿ ಹೊರಟ ತಂಡದ ಬಗೆಬಗೆಯ ಅನುಭವಗಳಂತೆ, ಇಲ್ಲಿ ಭಟ್ಟರು, ರಾಯರು, ಮುಂತಾದವರೊಂದಿಗೆ ಪಾರ್ಕನ್ನು ನೋಡಲು ಹೊರಟ ಮಿತ್ರವೃಂದಕ್ಕೆ ಅಲ್ಲಿ ಆದ ಅನುಭವ ಅತ್ಯಂತ ನೀರಸ. ಅನಂತರ ಅವರೆಲ್ಲರೂ ದ್ವೀಪವೊಂದಕ್ಕೆ ಭೇಟಿ ನೀಡುತ್ತಾರೆ. ಸೊಗಸಾದ ಊಟ ಮುಗಿದ ನಂತರ ಕೆನ್ಸಿಂಗ್ಟನ್‌ಪಾರ್ಕ್‌ನ ವಿಷಯವಾಗಿ ಲೇಖನವೊಂದನ್ನು ಬರೆಯಬೇಕೆಂಬ ರಾಯರ ಸೂಚನೆಯನ್ನು ಮೂರ್ತಿರಾಯರು ಒಪ್ಪುವುದಿಲ್ಲ. ರಾಯರಿಂದ ಒತ್ತಾಯದ ಪತ್ರ ಬಂದ ನಂತರ ಬರೆದ ಈ ಲೇಖನದಲ್ಲಿ ಪಾರ್ಕ್ ವಿಚಾರವೊಂದನ್ನು ಬಿಟ್ಟು, ಬಾಕಿ ವಿಚಾರಗಳೇ ತುಂಬಿವೆ. ಇಲ್ಲಿ ವ್ಯಕ್ತವಾಗುವುದು ಮೂರ್ತಿರಾಯರ ಕಥನ ಕಲೆ, ಕಥಾವಸ್ತುವೇ ಇಲ್ಲದೆ ಕಥೆ ಹೇಳುವ ಚಮತ್ಕಾರ ಇಲ್ಲಿದೆ.

ಇದರಂತೆ ಮತ್ತೊಂದು ಕಥನಾತ್ಮಕ ಪ್ರಬಂಧ 'ಹೆಂಡತಿಯ ಹೆಸರು' ಹೆಂಡತಿಗೆ ಯಾವ ಹೆಸರನ್ನಿಟ್ಟರೆ ಚೆಂದ, ಸೂಕ್ತ ಎಂದೆಲ್ಲಾ ವಿಚಾರ ಮಾಡುತ್ತಾ ಸಾಗುವ ಈ ಪ್ರಬಂಧ ಕೊನೆಗೂ ಹೆಂಡತಿಯ ಹೆಸರಿನ ಬಗ್ಗೆ ನಿಖರವಾದ ತೀರ್ಮಾನಕ್ಕೆ ಬರುವುದಿಲ್ಲ. ತಾಯ್ನುಡಿಯಲ್ಲಿ ಹೆಂಡತಿಗೆ ಸೂಕ್ತವಾದ ಹೆಸರೇ ಇಲ್ಲವೆಂಬ ತೀರ್ಮಾನ ಇಲ್ಲಿದೆ. ಸ್ವಾನುಭವ ಮಿಶ್ರಿತವಾದ ಈ ಪ್ರಬಂಧದ ವಸ್ತು 'ಹೆಂಡತಿಯ ಹೆಸರು' ಎಂದಾದರೂ ನಮ್ಮ ಕುತೂಹಲವನ್ನು ಉಳಿಸುತ್ತಾ, ಬೆಳೆಸುತ್ತಾ ಹೋಗಿ ಕೊನೆಯಲ್ಲಿ ಯಾವುದೇ ನಿರ್ಣಯಕ್ಕೂ ಬರುವುದಿಲ್ಲ.

'ಕಾರ್ ರಿಪೇರಿ-ನೀನೆ ಮಾಡಿ ನೋಡು' ಎಂಬ ಪ್ರಬಂಧದಲ್ಲಿ ಪ್ರಬಂಧಕಾರರ ಮಿತ್ರ ಗೋಪಾಲ ತಂದ ಕಾರು ಆಗಾಗ್ಗೆ ಕೆಟ್ಟು ಹೋಗುತ್ತಿತ್ತು. ಇಲ್ಲಿ ಮೂರ್ತಿರಾಯರು

ಗೀತಾವಾಕ್ಯವೊಂದನ್ನು ಉಲ್ಲೇಖಿಸಿ ಅವರ ಸುತ್ತ ತಮ್ಮ ಅನುಭವವನ್ನು ವಿವರಿಸಿದ್ದಾರೆ. ಇಲ್ಲಿಯೂ ಸಹ ಅವರ ಹಾಸ್ಯ ಮನೋಭಾವ ವ್ಯಕ್ತವಾಗಿದೆ. ಕಾರ್ ಕೆಟ್ಟು ಮೆಕ್ಯಾನಿಕ್‌ಗೆ ತೋರಿಸಿದಾಗ ಅವನ ಪ್ರತಿಕ್ರಿಯೆ ಹೀಗೆ. 'ಈ ತಂತಿ ನೋಡಿದಿರಾ! ಹಾಳಾಗಿ ಹೋಗಿದೆ.........ಒಂದೊಂದು ಸಲ ಎಂಜಿನಿಯರಿಂಗೆ ಬದಲಾಗಿ ಆಯನೀಯರಿಂಗ್ ಆಗಿ ಹೋಗತ್ತೆ. ಏನು ಮಾಡುವುದು' (ಸ. ಬಿ. ಪ್ರ. ಪುಟ 118)

ಅವರು ಕಾರಿನಿಂದಾಗಿ ಅನುಭವಿಸಿದ ತೊಂದರೆಗಳನ್ನು ಮೂರ್ತಿರಾಯರು ಬಹಳ ತಮಾಷೆಯಿಂದ ವರ್ಣಿಸುತ್ತಾರೆ. ಹಾಸ್ಯವೇ ಮುಂದಾಗಿ ವಸ್ತು ಅಸ್ಪಷ್ಟವಾಗುತ್ತದೆ. ಆದರೆ ಇಲ್ಲಿ ಸ್ವಾನುಭವವೂ ಒಂದು ವಸ್ತುವಾಗುವುದರಿಂದ ಹಾಸ್ಯವೂ ಮುಖ್ಯ ವೆನಿಸುತ್ತದೆ.

'ವ್ಯಾಘ್ರಗೀತೆ'ಯನ್ನು ಮೂರ್ತಿರಾಯರೇ ಸಣ್ಣಕಥೆಗಳ ಗುಂಪಿಗೆ ಸೇರಿಸಿದ್ದಾರೆ. ಶಾನುಭೋಗರೊಬ್ಬರು ಹುಲಿಯ ಕೈಯಿಂದ ಪಾರಾಗಿ ಬಂದ ಕಥೆಯಿದು. ಮೂರ್ತಿ ರಾಯರು ಈ ಕಥೆಯ ನಡುವೆ ಉಪನಿಷತ್ತಿನ, ಗೀತೆಯ, ಗೋವಿನ ಕಥೆಯ ಹಾಗೂ ಬೈಬಲ್‌ನ ಉದ್ಧೃತ ಭಾಗಗಳನ್ನು ಸಂದರ್ಭಾನುಸಾರ ಉಲ್ಲೇಖಿಸಿದ್ದಾರೆ. ಬಹಳ ಮುಖ್ಯವಾಗಿ ಅವರೇ ರಚಿಸಿದ ಒಂದು ಸಂಸ್ಕೃತ ಶ್ಲೋಕವೊಂದನ್ನು ಇಲ್ಲಿ ಉದಾಹರಿ ಸಿದ್ದಾರೆ. ಓದುಗರ ಕುತೂಹಲವನ್ನು ಕೆರಳಿಸುತ್ತಾ, ಪತ್ತೇದಾರಿ ಶೈಲಿಯಲ್ಲಿ ಈ ಕಥನ ಪ್ರಬಂಧವನ್ನು ಬರೆದಿದ್ದಾರೆ. ಹುಲಿಯಿಂದ ತಪ್ಪಿಸಿಕೊಳ್ಳಲು ಅವರು ಅವರ ಖಿರ್ದಿ ಪುಸ್ತಕವನ್ನೇ ಉಪಯೋಗಿಸಿಕೊಂಡಿದ್ದರು. ಹುಲಿಯಿಂದ ಅವರನ್ನು ಉಳಿಸಿದ ಖಿರ್ದಿ ಪುಸ್ತಕಕ್ಕೆ ಸಲ್ಲಿಸಿದ ಗೌರವ ಹಾಗೂ ಶಾನುಭೋಗರನ್ನು ಉಳಿಸಿದ ಹುಲಿಯ ಬಗ್ಗೆ ಹೀಗೆ ಬರೆದಿದ್ದಾರೆ.

"ಆ ಶಾನುಭೋಗರಂತೂ ಈಗ ಇಲ್ಲ. ಆದರೆ ಖಿರ್ದಿ ಪುಸ್ತಕ ಇಂದಿಗೂ ಭದ್ರವಾಗಿದೆ. ದೇವರ ಮಂದಾಸನದ ಮೇಲೆ ಮಂಡಿಸಿ ಶಾನುಭೋಗರ ಸಂತತಿಯವರಿಂದ ಈಗಲೂ ಪೂಜೆಯನ್ನು ಕೈಗೊಳ್ಳುತ್ತಿದೆ. ಅವರೆಲ್ಲರ ಕೃತಜ್ಞತೆಯೂ ಅದಕ್ಕೆ ಸಂದಿದೆ. ಆದರೆ ನಿಜವಾಗಿ ನೋಡಿದರೆ ಶಾನುಭೋಗರು ಉಳಿದದ್ದು ಖಿರ್ದಿ ಪುಸ್ತಕದಿಂದಲ್ಲ, ಹುಲಿಯ ಧರ್ಮಶ್ರದ್ಧೆಯಿಂದ." (ಪುಟ 123)

ಈ ಪ್ರಬಂಧದ ಬಗ್ಗೆ ಒಂದು ಮಾತನ್ನು ಹೇಳಬೇಕೆನಿಸುತ್ತದೆ. ಮೂರ್ತಿರಾಯರು ತಮ್ಮ 'ವ್ಯಾಘ್ರಗೀತೆ'ಯೊಂದನ್ನು ಸಣ್ಣ ಕಥೆಯ ಗುಂಪಿಗೆ ಸೇರಿಸಿದರು. ಆದರೆ ಅವರ ಅಭಿಪ್ರಾಯವನ್ನೂ ಮೀರಿ 'ಕುರುಡ' ಮೊದಲಾದ ಅವರ ಕೌಟುಂಬಿಕ ಪ್ರಬಂಧಗಳೂ ಸಹಾ ಈ ಸಣ್ಣ ಕಥೆಯ ಗುಂಪಿಗೇ ಸೇರುತ್ತವೆ. ಒಳ್ಳೆಯ ಕಥನ ಅಂಶ, ಕಥಾ ವಸ್ತುವಿನ ಬೆಳವಣಿಗೆ ವಿರಾಮವಾದ ಶೈಲಿ-ಇತ್ಯಾದಿಗಳಿಂದ ಇವುಗಳನ್ನು ಸಣ್ಣ ಕಥೆಗಳೆಂದು ವರ್ಗೀಕರಿಸಿದರೆ ಮೂರ್ತಿರಾಯರನ್ನು ಅತ್ಯುತ್ತಮ ಸಣ್ಣ ಕಥೆಗಾರರೆಂದೂ ಪರಿಗಣಿಸ ಬಹುದಾಗುತ್ತದೆ. ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರ ಸಣ್ಣ ಕಥೆಗಳ ಛಾಯೆ ಇವುಗಳಲ್ಲಿ, ವಿಶೇಷವಾಗಿ 'ಕುರುಡ'ದಲ್ಲಿ ಕಂಡು ಬರುತ್ತದೆ. ಅತ್ಯಂತ ವಿರಾಮ ವಾಗಿದ್ದಾಗ ಓದುವ ಈ ಕಥನ ಪ್ರಬಂಧ ಓದುವಾಗಲೂ ಓದಿ ಮುಗಿಸಿದ ಮೇಲೆಯೂ ಮನಸ್ಸು ಯಾವ ಉದ್ವಿಗ್ನತೆಗೂ ಒಳಗಾಗದೆ ವಿರಾಮ ಸ್ಥಿತಿಯಲ್ಲಿಯೇ ಇರುತ್ತದೆ- ವಸ್ತು ಹೊಸತಲ್ಲವಾದರೂ ಅವರಣ, ಪಾತ್ರಸೃಷ್ಟಿ, ಹಾಗೂ ಪ್ರತಿಪಾದಿಸಲ್ಪಟ್ಟ ಮೌಲ್ಯ

ಗಳಿಂದಾಗಿ ಇದಕ್ಕೆ ಒಂದು ಹೊಸತನದ ಮೆರಗು ಬಂದಿದೆ. ಮೂರ್ತಿರಾಯರ ತಾತ್ವಿಕ ನಿಲುವುಗಳು ಇಂತಹ ಕಥನಾಂಶ ಸತ್ವದ ಬರಹಗಳಲ್ಲಿ ಹೆಚ್ಚಾಗಿ ಅಭಿವ್ಯಕ್ತಗೊಂಡಿವೆ. ಅವರ ಪ್ರಬಂಧಗಳಲ್ಲಿ ಅಂತರ್ಗತವಾಗಿ, ಗುಪ್ತಗಾಮಿನಿಯಂತೆ ಪ್ರವಹಿಸುವ ಸಿದ್ಧಾಂತ ಗಳಲ್ಲಿ ಅತ್ಯಂತ ಪ್ರಮುಖವಾದ ಅಂಶ ಇಲ್ಲಿ ಸ್ಫುಟವಾಗಿ ಗೋಚರವಾಗಿದೆ. 'ಸಂಪತ್ ಶುಕ್ರವಾರ' 'ಭಿಕ್ಷಾನ್ನದ ಹುಡುಗ' (ಮುಂದೆ 'ಸಣ್ಣ ಕಥೆಗಳ ಹಾವಳಿ' ಎಂಬ ವಿಮರ್ಶಾತ್ಮಕ ಪ್ರಬಂಧದಲ್ಲಿ ಇದೇ ಕಥೆಯನ್ನೇ ಅವರು ಸೂಚ್ಯವಾಗಿ ಟೀಕಿಸಿದ್ದಾರೆ) ಮುಂತಾದ ಸಣ್ಣ ಕಥೆಗಳ ಸಾಲಿನಲ್ಲಿ ಸೇರಬಹುದಾದ ಈ ಕಥನಾ ಪ್ರಬಂಧದ ಕಲೆಗಾರಿಕೆ ಮೇಲ್ಮಟ್ಟದ್ದು. ಈ ಪ್ರಬಂಧ ಹರಡುವ ಪ್ರಭಾವ ಅತ್ಯಂತ ಹೃದಯ ಸ್ಪರ್ಶಿ. ಓದುಗರ ಹೃದಯ ಪರಿವರ್ತನೆಗೆ ಬೀಜಾರೋಪಣ ಮಾಡುವಂತಹ ಶಕ್ತವಾಕ್ಯಗಳು ಇಲ್ಲಿವೆ. ಇಂತಹ ಸಾಲುಗಳಲ್ಲಿ ನಾವು ಮೂರ್ತಿರಾಯರ ಮಾನವೀಯತೆಯಿಂದ ಕೂಡಿದ ಮನೋ ಧರ್ಮವನ್ನು ಗುರುತಿಸಬಹುದು.

"ನಲವತ್ತು ವರ್ಷ, ಒಂದು ದಿನ ಖಾಯಿಲೆ ಮಲಗಿದರೇ ನಮಗೆ ಬೇಸರ. ಕೆಲವರು ದಿನಾ ಸಾಯುವವರಿಗೆ ಅಳುವವರು ಯಾರು, ಎಂದು ಬಾಯಿ ಬಿಟ್ಟು ಹೇಳಿಯೇ ಬಿಡುವರು. ನಲವತ್ತು ವರ್ಷಗಳಿಂದ ಈಕೆ ತನ್ನ ದುಃಖವನ್ನು ತಡೆದುಕೊಂಡು ಮಗನನ್ನು ಕೈಹಿಡಿದು ತಿರುಗಿಸುತ್ತಿರುವಳು. ಅವಳ ಪ್ರೇಮವೆಷ್ಟು, ಸಹನೆಯೆಷ್ಟು, ಸಾಧಾರಣವಾಗಿ ಇಂಥ ವಿಷಯಗಳು ಕಿವಿಗೆ ಬಿದ್ದರೆ ನಾವು 'ಅಯ್ಯೋ ಪಾಪ' ಎಂದು ಎರಡು ಮಾತಿನ ಕಷ್ಟವನ್ನು ಸಲ್ಲಿಸಿ ಬೇರೆ ಕಡೆ ಮನಸ್ಸನ್ನು ತಿರುಗಿಸುವೆವು. ನಮಗಿರುವ ನೂರೆಂಟು ಆಸಕ್ತಿಗಳಲ್ಲಿ ನಾವು ನಮ್ಮ ಸುಖವನ್ನು ಅರಸಿಕೊಂಡು ಓಡುತ್ತಿರುವ ಆತುರದಲ್ಲಿ, ಇಂಥ ವಿಷಯಗಳಿಗೆ ಹೆಚ್ಚು ಗಮನ ಕೊಡುವಷ್ಟು ವಿರಾಮವೆಲ್ಲಿಯದು. ಆದರೆ ಸ್ವಲ್ಪ ಯೋಚಿಸಿ ನೋಡಿದರೆ ಅರೆ ಘಳಿಗೆ ಮನಸ್ಸನ್ನು ಆ ಕಡೆ ನಿಲ್ಲಿಸಿದರೆ ಎದೆ ಬಿರಿಯು ವಂತಾಗುತ್ತದೆ. ಅಂದೇನೋ ಆ ಕುರುಡನ ಕಣ್ಣಿನಲ್ಲಿ ಇಲ್ಲದ ಬೆಳಕು ನನ್ನ ಹೃದಯವನ್ನು ಆವರಿಸಿಕೊಂಡಿದ್ದ ಮಂಜಿನ ಮುಸುಕನ್ನು ತೆರೆಯಿತು" (ಪುಟ 42-43)

ಮೊದಲ ಐದು ವಾಕ್ಯಗಳು ಹಾಗೂ ಕೊನೆಯ ಒಂದು ವಾಕ್ಯವನ್ನು ಈ ಪ್ಯಾರಾದಿಂದ ಬೇರ್ಪಡಿಸಿದರೆ ಉಳಿದ ಭಾಗ ಒಂದು ಸುಂದರ ಮುಕ್ತಕ ಸ್ವತಂತ್ರವಾಗಿ ನಿಂತು, ಸ್ವಯಂ ಪೂರ್ಣಾರ್ಥದಿಂದ ಶೋಭಿಸುವ ವಾಕ್ಯವೃಂದ ಅತ್ಯಂತ ತಾತ್ವಿ ಕಾಂಶದಿಂದ ಕೂಡಿದವು. ಮೊದಲ ವಾಕ್ಯಗಳಲ್ಲಿ 'ತಿರುಗಿಸುತ್ತಿರುವಳು' ಎಂಬ ಅಪೂರ್ಣ ಕ್ರಿಯಾಪದ, ಕೊನೆಯ ವಾಕ್ಯದ ಕೊನೆಯ ಸಂಪೂರ್ಣ ಕ್ರಿಯಾ ಪದದಲ್ಲಿ ಪರ್ಯ ವಸಾನಗೊಂಡು ಕಥೆಯ ಕ್ರಿಯೆಗೂ ಒಂದು ಪೂರ್ಣ ನಿಲುಗಡೆ ಬರುತ್ತದೆ.

ಮೂರ್ತಿರಾಯರ ಪ್ರಬಂಧಗಳ ಮುಕ್ತಾಯ ಒಂದು ಸಂದೇಶದಲ್ಲಿ ಪರ್ಯವಸಾನ ವಾಗುತ್ತದೆ. ಈ ಪ್ರಬಂಧದಲ್ಲಿ ಅವರು ನೀಡುವ ಸಂದೇಶ ಮಹತ್ವದ್ದು, ಈ ಪ್ರಬಂಧದ ಫಲಶ್ರುತಿ ಕೆಲವು ವಾಕ್ಯಗಳಲ್ಲಿ ಹಿಡಿದಿಟ್ಟಿದ್ದಾರೆ.

"ನನ್ನದು ದೂರದ ಮರುಕ, ಲಲಿತೆಯ ಮರುಕವು ಆ ತಡೆಗಳನ್ನು ದಾಟಿ ಆ ವೃದ್ಧೆಯನ್ನು ಸೇರಿತು, ಹೃದಯವು ಹೃದಯದೊಂದಿಗೆ ಬೆರೆಯಿತು. ನಾನು ಕೊಟ್ಟ ದುಡ್ಡಿಗಿಂತಲೂ ಅವಳು ಕೊಟ್ಟ ಬಟ್ಟೆಗಿಂತಲೂ ಅವಳು ಆಡಿದ ನಾಲ್ಕು ಮಾತುಗಳು ಮುದುಕಿಗೆ ಹೆಚ್ಚು ಸಂತೋಷವುಂಟು ಮಾಡಿರಬೇಕು. ದುಡ್ಡೂ ಬಟ್ಟೆಯೂ ಆ ಭಿಕ್ಷುಕರ

ಶರೀರಕ್ಕೆ ಸ್ವಲ್ಪ ಸುಖ ಕೊಟ್ಟಿರಬಹುದು. ಅಳಿಯನ ಮರುಕದ ಮಾತುಗಳು ಆ ಮುದುಕಿಯ ಹೃದಯದ ನೋವಿಗೆ ಅಮೃತ ಲೇಪವನ್ನು ಹಚ್ಚಿದವು". (ಪುಟ 41)

ಈ ವಾಕ್ಯಗಳು ಮೂರ್ತಿರಾಯರು ತುಂಬಾ ಮೆಚ್ಚಿಕೊಂಡ 'ಮಾನವ ದಯಾಮೃತ' ವನ್ನು ಸಾರಿ ಹೇಳುತ್ತವೆ. ಸ್ವಾಮಿ ಶಿವಾನಂದರ ಆಶ್ರಮದಲ್ಲಿ ಅವರೂ ಅವರ ಪತ್ನಿಯೂ ಒಮ್ಮೆ ಒಂದು ತಿಂಗಳ ಕಾಲ ಇದ್ದರು. ಆಗ ಅವರನ್ನೇ ಕುರಿತ 'ಸ್ವಾಮಿ ಶಿವಾನಂದರು.....' ಎಂಬ ಭಜನೆಯನ್ನು ಕೇಳಿ ಅವರಿಗೆ ತುಂಬಾ ಅಸಹ್ಯವೂ ಜಿಗುಪ್ಸೆಯೂ ಉಂಟಾಯಿತು. ಆದರೆ ಅವರು ಒಂದು ನೊಂದ ಹೆಣ್ಣಿಗೆ ಮಾಡಿದ ಸಹಾಯವನ್ನು ಮೌನಾನಂದರಿಂದ ತಿಳಿದ ಮೂರ್ತಿರಾಯರು ಅವರ ಮಾನವ ದಯಾಮೃತವನ್ನು ತುಂಬಾ ಮೆಚ್ಚಿಕೊಂಡರು.

ಈ ಪ್ರಬಂಧವನ್ನು ಕುರಿತು ಮಳಲಿ ವಸಂತ ಕುಮಾರ್‌ರವರ "ಪ್ರಬಂಧ ಸಾಹಿತ್ಯ"ದಲ್ಲಿ ಅಭಿಪ್ರಾಯ ಒಪ್ಪುವಂತಹುದು:

'ಕುರುಡ' ಮೂರ್ತಿರಾಯರ ಅತ್ಯುತ್ತಮ ಪ್ರಬಂಧಗಳಲ್ಲೊಂದು. ಕಥನ ಗುಣವುಳ್ಳದ್ದು. ಇದು ಕುರುಡ ಮತ್ತು ಆತನ ತಾಯಿಯ ನಲವತ್ತು ವರ್ಷಗಳ ಬದುಕಿನ ಕಾರಣ್ಯಗಳನ್ನು ಹೃದಯಂಗಮವಾಗಿ ಪರಿಚಯಿಸುವುದರ ಜೊತೆಗೆ ಲೇಖಕರ ಮಾನವೀಯತೆ, ಹೃದಯವಂತಿಕೆ, ದಯೆ, ಅನುಕಂಪ ಮುಂತಾದ ಗುಣಗಳನ್ನು ವ್ಯಕ್ತ ಪಡಿಸುತ್ತದೆ.
(ಪುಟ 46, 1978)

## 2.5 ನಾಟಕೀಯ ಪ್ರಬಂಧಗಳು

ಮೂರ್ತಿರಾಯರು ಬರೆದಿರುವ ಪ್ರಬಂಧಗಳಲ್ಲಿ ಕೆಲವು ನಾಟಕೀಯವಾಗಿವೆ. ನಾಟಕಕ್ಕೆ ಅಳವಡಿಸಲು ತುಂಬಾ ಯೋಗ್ಯವೂ ಆಗಿವೆ. 'ಕ್ಲೀಷಾ ಪ್ರವೀಣರ ಸಾಕ್ಷ್ಯ' (ಸಾಹಿತ್ಯ ಸಮಾರಂಭದ ವಿಷಯ) ಎಂಬ ಪ್ರಬಂಧವನ್ನು ನಾಟಕೀಯವಾದ ಸಂವಾದ ಶೈಲಿಯಲ್ಲಿಯೇ ಬರೆದಿದ್ದಾರೆ. ಮೂರ್ತಿರಾಯರ ಕಾಲದ ವಿಮರ್ಶಕರು ಉಪಯೋಗಿಸುತ್ತಿದ್ದ ಕೆಲವು ಶಬ್ದಗಳನ್ನು ಇಲ್ಲಿ ಉಲ್ಲೇಖಿಸಿ, ಶಬ್ದಗಳ ಅರ್ಥವಾ ತಿಳಿಯದೆ, ಕೇವಲ ಚರ್ವಿತ ಚರ್ವಣ ಶಬ್ದಾಡಂಬರವನ್ನು ಇಲ್ಲಿ ವ್ಯಂಗ್ಯವಾಗಿ ಹೀಗೆ ಹೇಳಿದ್ದಾರೆ:

"ಆ ಕಾದಂಬರಿಯನ್ನು ಓದಿ ಆನಂದಿಸಿದ ಕನ್ನಡಿಗನೇ ಇಲ್ಲವೆಂದು ಮುಕ್ತಕಂಠರಾಗಿ ಹೇಳಬಹುದು. ಅದರ ಯಾವುದೊಂದು ಬಂಧ, ಒಂದು ರಚನೆ, ಒಂದು ತಂತ್ರ, ಶೈಲಿಯ ಓಜಸ್ಸು, ತೇಜಸ್ಸು, ಗಾಂಭೀರ್ಯ, ಪಾತ್ರ ನಿರೂಪಣೆಯಲ್ಲಿ ಎದ್ದು ತೋರುವ ಒಂದು ವೈಶಿಷ್ಟ್ಯ, ಒಂದು ವೈವಿಧ್ಯ, ಪಾತ್ರಗಳ ಒರೆ ಕೋರೆಗಳ, ವಿರುಪೇರುಗಳ ಪೃಥಕ್ಕರಣ, ಗ್ರಂಥದಲ್ಲಿ ಕಂಡು ಬರುವ ಒಂದು ಬುನಾದಿ."

ಪ್ರಶ್ನೆ: ಅಂದರೆ?

ಉತ್ತರ : ನಾನೇನು ಕ್ಲೀಷಾ ಪ್ರವೀಣನೋ, ನಿಘಂಟೋ? (ಪುಟ 110)

ಈ ಪ್ರಬಂಧದಲ್ಲಿ ಅಲ್ಲಲ್ಲಿ ಬಿ.ಎಂ. ಶ್ರೀಯವರನ್ನು ಕುರಿತು ಲೇವಡಿ ಇದೆ. ಆ ಕಾಲಕ್ಕೆ ಸಹಜವಾದ ಕನ್ನಡ ಪರ ವಾಕ್ಯಾಲಂಕಾರಯುಕ್ತ ಘೋಷಣೆಗಳು ಕೇಳಿ ಬರುತ್ತಿದ್ದವು. ಇಂತಹ ಒಂದು ಘೋಷಣೆ ಬಿ.ಎಂ.ಶ್ರೀಯವರ "ಇಂಗ್ಲೀಷ್ ಗೀತೆಗಳು" ಕೃತಿಯಲ್ಲಿದೆ.



ಮೊದಲ ತಾಯ ಹಾಲ ಕುಡಿದು
ಲಲ್ಲೆಯಿಂದ ತೊದಲಿ ನುಡಿದು,
ಕೆಳೆಯರೊಡನೆ ಬೆಳೆದು ಬಂದ
ಮಾತದಾವುದು- (ಪುಟ 1 - 1952)

ಇದನ್ನು ಉಪಯೋಗಿಸಿಕೊಂಡು ವ್ಯಂಗ್ಯವಾಗಿ ಹೀಗೆ ಬರೆದಿದ್ದಾರೆ

ತಾವು ಮೊದಲು ತಾಯ ಹಾಲ ಕುಡಿದು ಲಲ್ಲೆಯಿಂದ ತೊದಲಿದ ನಾಲ್ಕು ಮಾತು! (ಪುಟ 111)

ಕರ್ನಾಟಕದ ಏಕೀಕರಣದ ಪ್ರಯತ್ನದಲ್ಲಿ ಕೇಳಿಬಂದ ಘೋಷಣೆಗಳ ಬಗ್ಗೆಯೂ ಅವರ ಕಟಕಿ ಇದೆ. "ಹೌದು, ನಮ್ಮ ಈ ನಾಡು ಹರಿದು ಹಂಚಿ ಹೋಗಿದೆ. ಆದ್ದರಿಂದ ಸಿರಿಗನ್ನಡದ ಡಿಂಗರಿಗರೆಲ್ಲರೂ ಹುರಿದುಂಬಿ ಏಳಬೇಕು, ಮತ್ತೆ ಬಾಳಬೇಕು. ಬೆಚ್ಚದೆಯೆ ಬೆದರದೆಯೆ ಮುನ್ನುಗ್ಗಬೇಕು. ಯಾವ ತೊಡರು ಬಂದರೇನು, ಈಸಬೇಕು, ಇದ್ದು ಜೈಸಬೇಕು. ಏಳ್ಗೆ ಬಾಳ್ಗೆ ಎಂಬುದೇ ನಮ್ಮ ತಾರಕಮಂತ್ರ!" (ಪುಟ 112)

## 2.6 ಪ್ರಬಂಧಗಳ ಸ್ವರೂಪ

ಪ್ರಬಂಧಕಾರರ ಯಾವುದೇ ವಸ್ತುವನ್ನೂ ಆರಿಸಿಕೊಂಡು ಅದರ ಸುತ್ತಲೂ ಎಷ್ಟು ಸುಂದರವಾದ ಆವರಣವನ್ನು ಬೇಕಾದರೂ ಸೃಷ್ಟಿಸಬಹುದು. ಅದು ಪ್ರಬಂಧಕಾರನ ಮನೋಧರ್ಮ, ಅಭಿರುಚಿ, ದೃಷ್ಟಿಕೋನ, ಅಧ್ಯಯನ, ಪ್ರವೃತ್ತಿ-ಇತ್ಯಾದಿಗಳನ್ನು ಅವಲಂಭಿಸಿರುತ್ತದೆ. ಮೂರ್ತಿರಾಯರು ಆರಿಸಿಕೊಂಡ ವಸ್ತು ವೈವಿಧ್ಯತೆಯನ್ನು ಗಮನಿಸಿದಾಗ ಅವರ ಈ ಮೇಲ್ಕಂಡ ಅಂಶಗಳು ವ್ಯಕ್ತವಾಗುತ್ತವೆ. ಮೂರ್ತಿರಾಯರ ಪ್ರಬಂಧಗಳು ಅವರ ವೃತ್ತಿ ಜೀವನದೊಂದಿಗೆ ಹಾಗೂ ವೈಯಕ್ತಿಕ ಜೀವನದೊಂದಿಗೆ ನಿಕಟ ಸಂಬಂಧವುಳ್ಳವು. ಹಲವು ಪ್ರಬಂಧಗಳು ಅವರ ಆತ್ಮ ಚರಿತ್ರೆಯೊಂದಿಗೆ ಸಮನ್ವಯತೆ-ಸಾದೃಶ್ಯವುಳ್ಳವು. ಅವರ ಪ್ರಬಂಧಗಳು ಮಾನವನ ಉನ್ನತೀಕರಣ ಉದಾತ್ತೀಕರಣಕ್ಕೆ ಅಗತ್ಯವಾದ ಚಿಂತನ ಶೀಲತೆಯನ್ನು ಉದ್ಬೋದಗೊಳಿಸುವಂತಹವು. ಅವರ ಸಾಹಿತ್ಯ ಪ್ರಿಯತೆಯನ್ನು ಎತ್ತಿ ಹಿಡಿಯುವ, ಒತ್ತಿ ಹೇಳುವ ಪ್ರಬಂಧಗಳಿವೆ. ವಿಮರ್ಶೆಗಳನ್ನು ಪ್ರಬಂಧ ರೂಪದಲ್ಲಿ ಬರೆದಿರುವುದು, ವಿಮರ್ಶೆ ಹಾಗೂ ಪ್ರಬಂಧ ಗಳನ್ನು ಪರಸ್ಪರ ಸಮೀಕರಿಸಿರುವುದು ಅವರ ಇನ್ನೊಂದು ವೈಶಿಷ್ಟ್ಯ.

ಮೂರ್ತಿರಾಯರು ತಮ್ಮ ಪರಿಸರವನ್ನು ಸೂಕ್ಷ್ಮವಾಗಿ ಅವಲೋಕಿಸಿ ಬರೆದ ಪ್ರಬಂಧಗಳಲ್ಲಿ ಲೌಕಿಕ, ಸಾಮಾಜಿಕ, ರಾಜಕೀಯ, ಕೌಟುಂಬಿಕ ವ್ಯಾಪಾರಗಳ ಸೂಕ್ಷ್ಮ ಚಿತ್ರಗಳಿವೆ. ಅವರೊಬ್ಬ ವಾಸ್ತವವಾದಿ. ಆದ್ದರಿಂದಲೇ ಅವರ ಪ್ರಬಂಧಗಳಲ್ಲಿ ಭಾವುಕತೆ-ಭಾವನಾತ್ಮಕತೆ ಇಲ್ಲ. ಆದರ್ಶವಾದ ಆರ್ಭಟವಿಲ್ಲ. ಯಾವುದೇ ರೀತಿಯ ಕಲ್ಪನೆ ಇಲ್ಲ, ಅವರಿಗೆ ಕಲ್ಪನಾಲೋಕದ ವಿಹಾರಕ್ಕಿಂತಲೂ ವಾಸ್ತವಿಕತೆ ಹೆಚ್ಚು ಪ್ರಿಯ ವೆನಿಸುತ್ತದೆ. ಹಾಸ್ಯ ಮನೋಧರ್ಮವಿದ್ದರೂ ಲಘುವಿಚಾರಗಳಲ್ಲಿ ಅಭಿರುಚಿ ಇಲ್ಲ. ಜಿ.ಶಂ. ಪರಮಶಿವಯ್ಯನವರು 'ಪ್ರಬಂಧಗಳು 1987' ಎಂಬ ಕೃತಿಯಲ್ಲಿ ಹೇಳುತ್ತಾರೆ.

"ಹಾಗೆ ನೋಡಿದರೆ ಲಲಿತ ಪ್ರಬಂಧದ ಸಾಹಿತ್ಯ ಇತರ ಪ್ರಕಾರಗಳಿಗಿಂತ ವಿಚಾರ ಪ್ರಚೋದಕ. ಆದರೆ ಇದು ಪ್ರಚಾರ ಸಾಹಿತ್ಯವಲ್ಲ. ಗೂಢಾರ್ಥ ಇದರಲ್ಲಿ ಇರುವುದಿಲ್ಲ.

ಎಲ್ಲವೂ ಸ್ಪಷ್ಟ, ನೇರ. ಆದುದರಿಂದಲೇ ಇದು ಬಹು ಬೇಗ ನಮ್ಮನ್ನು ತನ್ನತ್ತ ಸೆಳೆದುಕೊಳ್ಳುತ್ತದೆ. ಸಾಹಿತ್ಯಾತ್ಮಕವಾಗಿ ವಿಚಾರವನ್ನು ಪ್ರತಿಪಾದಿಸುವುದೇ ಇದರ ಮುಖ್ಯ ಉದ್ದೇಶ. ಮೂರ್ತಿರಾವ್ ವಿಚಾರಾತ್ಮಕ ಪ್ರಬಂಧಗಳಿಗೆ ಹೆಸರಾದವರು.

(ಪುಟ 6–7– 1988)

ಮೂರ್ತಿರಾಯರ ಆತ್ಮ ಚರಿತ್ರೆಯೂ ಒಂದು ಪ್ರಬಂಧ ಸಂಕಲನದಂತಿದೆ. ಆತ್ಮ ಚರಿತ್ರೆಯಲ್ಲಿ ಬರುವ ಕೆಲವು ಪ್ರವಾಸಭಾಗಗಳು ಅವರ 'ಅಕ್ಕಿ ಹೆಬ್ಬಾಳು' ಪ್ರಬಂಧವನ್ನು ನೆನಪಿಸುತ್ತವೆ. ಅಕ್ಕಿ ಹೆಬ್ಬಾಳಿನಲ್ಲಿ ಅವರು ನಿರೀಕ್ಷಿಸಿದ ತಮ್ಮ ಹಾಗೂ ಇತರರ ಹಾರ್ದಿಕ ಸಂಬಂಧ ಅವರ ಮತ್ತು ಅವರ ಮಕ್ಕಳು, ಮೊಮ್ಮಕ್ಕಳ ನಡುವಣ ಸಂಬಂಧದಂತೆ ಹಿತವೂ ಮಧುರವೂ ಆತ್ಮೀಯವೂ ಆದುದು. "ವಸುಧೈವ ಕುಟುಂಬಕ" ದೃಷ್ಟಿಯನ್ನು ವ್ಯಕ್ತಪಡಿಸುವ ಅವರ ದೃಷ್ಟಿ ವೈಶಾಲ್ಯ ಹಾಗೂ ಹೃದಯ ವೈಶಾಲ್ಯಗಳನ್ನು ನಾವು ಅವರ ಪ್ರಬಂಧಗಳಲ್ಲಿಯೂ ಕಾಣುತ್ತೇವೆ.

ಮೂರ್ತಿರಾಯರಂತೆಯೇ ಅವರ ಸಮಕಾಲೀನ ಪ್ರಬಂಧಗಳಲ್ಲಿ ಅನುಭವದ ಯಥಾವತ್ತಾದ ಚಿತ್ರಣ ಕಾಣುತ್ತೇವೆ. ಕುವೆಂಪುರವರ ಪ್ರಬಂಧಗಳಲ್ಲಿ ಬೇಟೆ, ಪ್ರಕೃತಿ ವೀಕ್ಷಣೆ, ಪ್ರತಿ ವರ್ಣನೆ ಇತ್ಯಾದಿಗಳು ಇಡಿಕಿರಿದಿದೆ- ಆದರೆ ಅನಂತರದ ಪ್ರಬಂಧಗಳಲ್ಲಿ ಅನುಭವದ ಸಾಮಾನ್ಯೀಕರಣದ ಚಿತ್ರಣವಿದೆ. ವೈಯಕ್ತಿಕ ಅನುಭವ, ಕೌಟುಂಬಿಕ ಪರಿಸರ ಮೂರ್ತಿರಾಯರ ಪ್ರಬಂಧಗಳ ಹಾಗೆ ಜೀವಾಳವಾಗಿರದೆ, ಸಾರ್ವಜನಿಕ ಅನುಭವವನ್ನು ತನ್ನದಾಗಿಸಿಕೊಂಡು, ಸಾಮಾಜಿಕ ನಾಗರೀಕ ಪರಿಸರಗಳ ಹಿನ್ನೆಲೆ ಪ್ರಬಂಧಗಳಲ್ಲಿ ಕಾಣಿಸಿತು. ಅನುಭವಕ್ಕೆ ಅತಿಶಯೋಕ್ತಿಯ ಮೆರಗು ಲೇಪಿಸಲ್ಪಟ್ಟಿತು. ಮೂರ್ತಿರಾಯರ ಪ್ರಬಂಧಗಳೂ ಅವರ ನಿಲುವುಗಳನ್ನು ನೇರವಾಗಿ ಅಭಿವ್ಯಕ್ತಿಸುತ್ತಾ ಚಿಂತನ ಶೀಲತೆಯನ್ನು ಗರ್ಭದಲ್ಲಿರಿಸಿಕೊಂಡಿವೆ. ಅನಂತರದ ಪ್ರಬಂಧಗಳು ತಮ್ಮ ಅನುಭವದ ಅಭಿವ್ಯಕ್ತಿಗೆ ವಿವಿಧ ಮಾಧ್ಯಮಗಳನ್ನು ಹಮ್ಮಿಕೊಂಡಿವೆ. ಅತಿಮಾನುಷ ಘಟನೆಗಳು ಸಾರ್ವಜನಿಕ ಸ್ಥಳಗಳು, ಪ್ರಾಣಿಗಳು ಮರಗಿಡಗಳು, ರೋಗಗಳು–ಇತ್ಯಾದಿಗಳು ಪ್ರಬಂಧಕಾರರಿಗೆ ತಮ್ಮ ನಿಲುವುಗಳ ಅಭಿವ್ಯಕ್ತಿ ಸಮರ್ಥನೆ ಸಾಮಾಜಿಕ-ರಾಜಕೀಯ ವಿಡಂಬನೆ, ಸಾಮಾಜಿಕವಾದ ರೂಢಮೂಲ ಮೌಢ್ಯಗಳ ಖಂಡನೆಗಳಿಗೆ ಮಾಧ್ಯಮವಾದವು. ಪು.ತಿ.ನ. ರವರ "ಈಚಲ ಮರದ ಕೆಳಗೆ" ಶಾಂಗೂಲಾಚಾರ್ಯರ "ಪಿತೃಲೋಕದವರೊಂದಿಗೆ ನನ್ನ ಸಂಭಾಷಣೆ." ಅನಂತನಾರಾಯಣರವರ "ಸ್ವಯಂಭೂ(ತ)ದರ್ಶನ," ಹೆಚ್. ಎಸ್.ಕೆ.ಯವರ "ಕಸದ ಬುಟ್ಟಿ" ಮುಂತಾದ ಪ್ರಬಂಧಗಳು ಇದಕ್ಕೆ ನಿದರ್ಶನ. ಆದರೆ ಮೂರ್ತಿರಾಯರು ಇಂತಹ ಯಾವುದೊಂದು ಮಾಧ್ಯಮವನ್ನೂ ಅಳವಡಿಸಿಕೊಳ್ಳದಿರುವುದೊಂದು ವೈಶಿಷ್ಟ್ಯ.

ಕಾಲಕ್ರಮೇಣದ ಪ್ರಬಂಧಗಳಲ್ಲಿ ಸಮಕಾಲೀನ ಸಮಸ್ಯೆಗಳು ಗಂಭೀರವಾದ ಚಿಂತನ ಸ್ವರೂಪವನ್ನು ಪಡೆಯಲಾರಂಭಿಸಿದುವು. ಜನಗಣ ಮನವನ್ನು ಸೆಳೆಯಲು, ವಿಚಾರ ಕ್ರಾಂತಿಯನ್ನು ಉಂಟು ಮಾಡಲು ಪ್ರಬಂಧಗಳು ರಚನೆಯಾದವು. ಅ.ರಾ. ಮಿತ್ರರ 'ಅಷ್ಟಕೋನ,' ಪದ್ಮಾಶ್ರೀರಾಮರ 'ಯಾತಕ್ಕೆ ಮಳೆ ಹೋದವೋ'-ಮುಂತಾದ ಪ್ರಬಂಧಗಳು ಗಂಭೀರ ವಸ್ತುವನ್ನು ಒಳಗೊಂಡು ಚಿಂತನೆಗೆ ಪ್ರಚೋದನೆ ನೀಡುವ ಮಾದರಿಯವು. ಇವನ್ನು ಓದಿ ಮುಗಿಸುತ್ತಿದ್ದಂತೆಯೇ ಸಮಕಾಲೀನ ಸಮಸ್ಯೆಯೊಂದರ

ಘಾತ ನಮ್ಮೆದುರು ಭೀಕರ ಸ್ವರೂಪವನ್ನು ತಾಳಿ ನಿಲ್ಲುತ್ತದೆ. ವರ್ತಮಾನದ ಯಾವುದೋ ಒಂದು ವಾಸ್ತವಿಕ ಸಮಸ್ಯೆ ಭೀಕರ ಭವಿಷ್ಯದ ಕಲ್ಪನೆಯನ್ನು ನಮ್ಮಲ್ಲಿ ಮೂಡಿಸುತ್ತದೆ. ಒಂದು ಕ್ಷಣಕಾಲವಾದರೂ ನಮ್ಮ ಮನಸ್ಸು ಇದರಿಂದ ವ್ಯಗ್ರವಾಗಿ, ವಿಚಲಿತವಾಗಿ ಕಾಣದ ಅಸ್ಪಷ್ಟವಾದ ತೊಳಲಾಟ, ಕಳವಳಕ್ಕೆ ಈಡಾಗುತ್ತದೆ. “ಪ್ರಬಂಧಗಳು 1987” -ಪ್ರಬಂಧ ಸಂಕಲನದ ಮಾದರಿಗಳನ್ನು ಉಲ್ಲೇಖಿಸಬಹುದು. “ ಸ್ಫುಟವಾದ ರೇಖೆಗಳು ಈಗಲೂ ಕಂಗೊಳಿಸುತ್ತವೆ. ಆದರೆ ಗುಡ್ಡದ ಇಳಿಜಾರನ್ನು ಮುಚ್ಚಿದ ಹಸುರು ವಸನವನ್ನು ಈಗಿನ ಧಾರ್ತರಾಷ್ಟ್ರರು ಸೆಳೆದು ಹಾಕಿದ್ದಾರೆ. ಅದರ ಬೆತ್ತಲೆ ಮೈಯ ಮೇಲೆ ಇಟ್ಟಿಗೆ ಗಾರೆಗಳ ಟಾವು ಎದ್ದು ಕಾಣುತ್ತದೆ. ಹಳೆಯ ಊರಿನಲ್ಲೂ ವಿಸ್ತರಣಗಳಲ್ಲೂ ಅಲ್ಲಲ್ಲಿ ಉಸಿರಾಡಲು ಅವಕಾಶ ಕೊಡುತ್ತಿದ್ದ ನಿವೇಶನಗಳೆಲ್ಲಾ ಈಗ ಕಟ್ಟಡಗಳಿಂದ ತುಂಬಿ ಹೋಗಿವೆ. ಹಿಂದೆ ಬೆಂಗಳೂರಿನಲ್ಲಿದ್ದ ಪ್ರಕೃತಿ ಸೌಂದರ್ಯದ ಮತ್ತು ನಗರದ ಸೌಲಭ್ಯಗಳ ಮಿಲನ ಬಹುಬೇಗ ನಾಶವಾಗುತ್ತಿದೆ.”

ಇಲ್ಲಿ ಮೂರ್ತಿರಾಯರು ಅತ್ಯಂತ ಸಂಯಮಪೂರಿತವಾಗಿ ಸಮಕಾಲೀನ ಸಮಸ್ಯೆಯನ್ನು ಚಿತ್ರಿಸಿದ್ದಾರೆ. ಯಾವುದೇ ಭಾವೋದ್ವಿಗ್ನತೆ ಇವರ ಪ್ರಬಂಧಗಳಲ್ಲಿ ಕಾಣಲಾಗುವುದಿಲ್ಲ. ಸಾಮಾಜಿಕ, ಆರ್ಥಿಕ ಹಾಗೂ ನಾಗರೀಕವಾದ ಪ್ರಗತಿ ಪ್ರಕೃತಿ ಸಂಪತ್ತನ್ನು ಹೇಗೆ ಸೂರೆ ಮಾಡಿದೆ ಎಂಬ ಅಂಶವನ್ನು ಬಹು ಗಂಭೀರವಾಗಿ ಹೇಳಿದ್ದಾರೆ. ‘ಹಸುರು ವಸನವನ್ನು ಈಗಿನ ಧಾರ್ತರಾಷ್ಟ್ರರು ಸೆಳೆದು ಹಾಕಿದ್ದಾರೆ’ ಎಂಬ ದೃಷ್ಟಾಂತದಲ್ಲಿ ಒಂದು ವೃಕ್ಷ ಪ್ರಪಂಚ ತೆರೆದುಕೊಳ್ಳುತ್ತದೆ. ಸ್ಥಳನಾಮಗಳ ವಿರೋಧಾಭಾಸ ಹಾಗೂ ಅಸಂಗತತೆಯನ್ನು ಯಾವುದೇ ಕಾವ್ಯಾತ್ಮಕ ಶೈಲಿಯ ಲೇಪವಿಲ್ಲದೆ ನೇರವಾಗಿಯೇ ಹೇಳುತ್ತಾರೆ. ‘ವಿಲ್ಸನ್ ಗಾರ್ಡನ್ನಿನ ಹೆಸರು ಅನ್ವರ್ಥವಲ್ಲ-ಅಲ್ಲಿ ತೋಟವಿಲ್ಲ’ (ಅದೇ ಪುಟ 258)-ಎಂಬ ಒಂದೇ ಪಂಕ್ತಿಯಲ್ಲಿ ಈ ವಾಸ್ತವಿಕ ಕಟುಸತ್ಯವನ್ನು ಬಿಂಬಿಸುತ್ತಾರೆ.

ಮೂರ್ತಿರಾಯರ ಸಮಕಾಲೀನರಾದ ಶ್ರೀಗಳಾದ ಎಂ. ರಾಮರಾವ್,ಕುವೆಂಪು, ಪುತಿನ,ಗೊರೂರು ರಾಮಸ್ವಾಮಿ ಅಯ್ಯಂಗಾರ್-ಮುಂತಾದವರ ಪ್ರಬಂಧಗಳಲ್ಲಿ ಅವರ ಭಾವ ಜೀವನದ ಅಭಿವ್ಯಕ್ತಿ ಇದೆ. ಅವರ ಮನಸ್ಸನ್ನು ಆಳವಾಗಿ, ಗಾಢವಾಗಿ ಸೆರೆಹಿಡಿದ ವಸ್ತುಗಳ ದಟ್ಟವಾದ ಪ್ರಭಾವವಿದೆ. ಪ್ರಕೃತಿ, ಜನಪದ ಜೀವನ, ತಾತ್ವಿಕಾಂಶಗಳ ನಿಬಿಡವಾದ ಸಾಂದ್ರವಾದ ಆವರಣವಿದೆ. ತಮ್ಮ ಅಚ್ಚುಮೆಚ್ಚಿನ ಪ್ರೀತಿಪಾತ್ರವಾದ ಪರಿಸರವನ್ನು ಕಾವ್ಯಾತ್ಮಕವಾದ ಶೈಲಿಯಿಂದ ವರ್ಣಿಸಿ, ಭಾವಸಮಾಧಿಗೇರುವ ಪರಿಸುವ ಪ್ರಯತ್ನವಿದೆ. ಕುವೆಂಪುರವರ ಪ್ರಬಂಧಗಳನ್ನು ಗಮನಿಸಿದಾಗ ಈ ಅಂಶ ಸ್ಪಷ್ಟವಾಗುತ್ತದೆ. ಮಾದರಿಗಾಗಿ ಅವರ ಸುಪ್ರಸಿದ್ಧ ಪ್ರಬಂಧ ಸಂಕಲನ 'ಮಲೆನಾಡಿನ ಚಿತ್ರಗಳು' ನಮ್ಮ ಗಮನ ಸೆಳೆಯುವ ಅಂಶಗಳನ್ನು ಒಳಗೊಂಡಿದೆ. ಹನ್ನೆರಡು ಪ್ರಬಂಧಗಳ ಈ ಸಂಕಲನದ ಮುನ್ನುಡಿಯೇ ಒಂದು ಪ್ರಬಂಧದಂತಿದೆ. ಅವರ ಪ್ರೀತಿಯ ಮಲೆನಾಡು, ಸಂಸ್ಕೃತ ಭೂಯಿಷ್ಠ ಪದಪುಂಜಗಳಿಂದ ಇಡಿಕಿರಿದ ಕಾವ್ಯಶೈಲಿ, ಹಾಗೂ ಆಧ್ಯಾತ್ಮಿಕ ಚಿಂತನೆಗಳ ತ್ರಿವೇಣಿ ಸಂಗಮಗಳ ದರ್ಶನ ನಮಗೆ ಈ ಪ್ರಬಂಧಗಳಲ್ಲಿ ಆಗುತ್ತದೆ. ಹಾಸ್ಯ ಗಂಭೀರತೆಗಳ ಸಂಯೋಜನೆಯೂ ಇಲ್ಲಿ ಹೆಚ್ಚಾಗಿ ಹಾಸ್ಯ ಶೈಲಿಯಲ್ಲಿಯೇ ವಸ್ತುವನ್ನು ವಿಸ್ತರಿಸಲು ಹೊರಟ ಪ್ರಬಂಧಕಾರರು ಪಾರಮಾರ್ಥಿಕವಾದ ಚಿಂತನೆಯ ಕಡೆಗೆ ಪಕ್ಕನೆ

ಹಾಲುಣ್ಣುತ್ತಾರೆ. ನಮ್ಮ ಗುಡಿಸಲ ಮೇಲೆ ಮಾಡಿದ ಮುಗಿಲು ನಗೆ ನಕ್ಕಿ, ಮನಸ್ಸು ಗಂಭೀರ ಚಿಂತನೆಗೆ ತೊಡಗುತ್ತದೆ. ಮೂರ್ತಿರಾಯರಂತೆ ಅವರಿಗೂ ನೆನಪು ಹಾಗೂ ಅನುಭವಗಳೇ ಪ್ರಬಂಧಗಳ ಕೇಂದ್ರ ಬಿಂದು. "ಅವರ ನಿರಾಶೆ ಈಗ ಬೆಳೆಯುತ್ತಿರುವ ನಗರಗಳಲ್ಲಿ ಜನವು ತಪ್ಪಿಕೊಂಡು ಅತ್ತಿತ್ತ ನೋಡಿದವರೆ ಬಯಲಾಗಿ ಪ್ರದೇಶಗಳು ಕೂಡ ಬಿಟ್ಟು, ಬರಿದಾಗಿ ಎಂಥ ಕಾಡಿದು ಎಂಥ ನಾಡಾಯಿತೋ ಎಂದು ಸಂಕಟಪಡುವಂತಹ ಕಾಲ ಬಂದೀತು ನಾಳೆ ನಮ್ಮ ಮಕ್ಕಳು ಮಳೆ ನೋಡಲು ಹೋಗಬೇಕು ಎಲ್ಲಿಗೆ? ಇಂತಹ ವಿಚಿತ್ರ ಹವಾಮಾನಗಳ ವೈಪರೀತ್ಯಕ್ಕೆ ಕಾರಣರ್ಯಾರು? ಯಾಕೆ ಪ್ರಕೃತಿ ನಮ್ಮ ಮೇಲೆ ಮುನಿದಿರುವಳೆ?" (1988 ಪುಟ 202)

ಆದರೆ ಮೂರ್ತಿರಾಯರ ಪ್ರಬಂಧಗಳಲ್ಲಿ ಇಂತಹ ಭವಿಷ್ಯದ್ದರ್ಶನದ ಭೀಕರತೆಯನ್ನು ಎದುರುಗೊಳ್ಳುವ ಭಯವಿಲ್ಲ. ಏಕೆಂದರೆ ಈಚೆಗಿನ ಪ್ರಬಂಧಕಾರರು ಹಿಂದಿನ ಕಾಲವನ್ನೇ ಸುವರ್ಣಯುಗವೆಂದು ತಿಳಿದು ಬರಲಿರುವ ಬವಣೆಯ ವಿರುದ್ಧ ಸಮಾಜವನ್ನು ಎಚ್ಚರಿಸುತ್ತಾರೆ. ಈ ಎಚ್ಚರಿಕೆಯ ಗಂಟೆ ಮೊಳಗುತ್ತಲೇ ಇದೆ. ಸಮಾಜ ತನ್ನ ಪಾಡಿಗೆ ತಾನು 'ಜಗನ್ನಾಥ ಚಕ್ರ'ದಂತೆ ನಿರ್ಲಿಪ್ತವಾಗಿ ಸಾಗುತ್ತಲೇ ಇದೆ. ಬರವಣಿಗೆಯಿಂದ ಸಾಮಾಜಿಕ ಜಾಗೃತಿ ಸಾಧ್ಯವೆಂದು ಈಚಿನ ಪ್ರಬಂಧಕಾರರ ಅಭಿಮತ. ಆದರೆ ಮೂರ್ತಿರಾಯರು ತಾವು ತಮ್ಮ ಬರವಣಿಗೆಗಳಿಂದ ಸಮಾಜವನ್ನು ಎಚ್ಚರಿಸುತ್ತೇನೆಂದು ಕೊಂಡಿಲ್ಲ. ತಮ್ಮ ಒಂದು ಅಂತರಂಗದ ನೋವಿಗೆ ದನಿ ನೀಡುವ ಪ್ರಯತ್ನ ಇದು. ಮೂರ್ತಿರಾಯರ ಪ್ರಬಂಧಗಳಲ್ಲಿ ಇಂತಹ ನಿರಾಶವಾದದ ಎಳೆಯಾಗಲೀ ಸೋಂಕಾಗಲೀ ಇಲ್ಲ. 'ಅನಿಯಂತ್ರಿತವಾಗಿ ಬೆಳೆಯುತ್ತಿರುವ ಬೆಂಗಳೂರನ್ನು ಕುರಿತು ಅವರ ಪ್ರಬಂಧದಲ್ಲಿ ಹೀಗೆ ಬರೆದಿದ್ದಾರೆ.

"ಬೆಂಗಳೂರಿನ ನಾಲ್ಕು ಮೂಲೆಗಳಲ್ಲೂ ಕೆಂಪೇಗೌಡ ಕಟ್ಟಿಸಿದ ಗೋಪುರಗಳಿವೆಯಷ್ಟೆ. ಆತ ಬಹಳ ಆಲೋಚನಾಪರವಾದ ಮನುಷ್ಯನಿದ್ದಿರಬೇಕು. ಊರು ಇಲ್ಲಿಯವರೆಗೆ ಬೆಳೆಯಬಹುದು ಎಂದು ಲೆಕ್ಕಾಚಾರ ಹಾಕಿ ಆ ಗೋಪುರಗಳನ್ನು ಕಟ್ಟಿಸಿದನಂತೆ. ಆತನ ಮನಸ್ಸಿನಲ್ಲಿದ್ದದ್ದು 'ಇಲ್ಲಿಯವರೆಗೆ ಬೆಳೆಯುತ್ತದೆ' ಎಂದೋ ಅಥವಾ 'ಇಲ್ಲಿಂದಾಚೆಗೆ ಬೆಳೆಯಬಾರದು' ಎಂದೋ? ಆ ಗೋಪುರಗಳು ಕೆಂಪೇಗೌಡ ನುಡಿದ ಭವಿಷ್ಯವೋ ಅಥವಾ ಕೊಟ್ಟ ಎಚ್ಚರಿಕೆಯೋ? ನನಗೇನೋ ಅವು ಭವಿಷ್ಯವೂ ಹೌದು, ಎಚ್ಚರಿಕೆಯೂ ಹೌದು ಎನ್ನಿಸುತ್ತದೆ. ಭವಿಷ್ಯ ಎಂದೋ ನಿಜವಾಯಿತು. ಎಚ್ಚರಿಕೆಯನ್ನು ಯಾರೂ ಗಮನಿಸಲಿಲ್ಲ. ನಗರವು ಆ ಗೋಪುರಗಳ ಗಡಿಯನ್ನು ದಾಟಿ ಮೈಲುಗಟ್ಟಲೆ ಆಚೆಗೆ ಹಬ್ಬಿದೆ. ಸುತ್ತಮುತ್ತ ಇದ್ದ ಹಳ್ಳಿಗಳನ್ನೆಲ್ಲಾ ಈ ನಗರಭೂತ ನುಂಗಿ ಜೀರ್ಣಿಸಿಕೊಂಡಿದೆ. ಹಣ್ಣಿನ ತೋಟಗಳು ಈಗ ಮನೆಗಳಾಗಿವೆ. ವಿಲ್ಸನ್ ಗಾರ್ಡನ್ನಿನ ಹೆಸರು ಅನ್ವರ್ಥವಲ್ಲ–ಇಲ್ಲಿ ತೋಟವಿಲ್ಲ. ನರಹರಿರಾಯನ ಗುಡ್ಡದ ಮೇಲಿನ ದೇವಾಲಯ ಇನ್ನೂ ನಿಂತಿದೆ - ಸಂಜೆಗೆಂಪಿನ ಆಕಾಶದ ಹಿನ್ನೆಲೆಯ ಮೇಲೆ ಚಿತ್ರಿಸಿದಂತೆ; ಅವರ ಹಾಗೂ ಪ್ರತಿಪಾದನೆಗಳಲ್ಲಿ ಇಬ್ಬರಿಗೂ ಅಂತರವಿರುವಂತೆ ಸಾಮ್ಯವೂ ಇದೆ. ಇಬ್ಬರಿಗೂ ಜನ್ಮಸ್ಥಳ ಪ್ರಿಯವಾದುದು. ಕುವೆಂಪುರವರ ಕುಪ್ಪಳಿ, ಮೂರ್ತಿರಾಯರ ಅಕ್ಕಿ ಹೆಬ್ಬಾಳು ಪರಿಸರ ಪ್ರಬಂಧಗಳಲ್ಲಿ ವಿಪುಲವಾದ ಸ್ಥಾನಾವಕಾಶಗಳನ್ನು ಪಡೆದಿದೆ. ಕುವೆಂಪುರವರ ತುಂಗಾನದಿ, ಕವಿಶೈಲ, ನವಿಲುಕಲ್ಲು,

ಸಿಬ್ಬಲುಗುಡ್ಡೆಗಳಂತೆ ಮೂರ್ತಿರಾಯರ ಚೆನ್ನಿಗರಾಯನ ಗುಡಿ, ಹೇಮಾವತಿ ನದಿ, ಕೊಪ್ಪರಿಗೆ ಮಡು-ಇತ್ಯಾದಿಗಳು ಶಬ್ದ ಚಿತ್ರ ಪಡೆದಿವೆ. ಕುವೆಂಪುರವರ ತಿಮ್ಮ, ಐತ, ಮೂರ್ತಿರಾಯರ ಕಲ್ಯಾಣಿದಾಸ, ಕಮಲನಾಯಕರು-ಇತಿಹಾಸದ ಗರ್ಭದಿಂದ ಜೀವತಳೆದು ಪುನಃ ನಮ್ಮೆದುರು ಪ್ರತ್ಯಕ್ಷವಾಗುತ್ತಾರೆ. ಕುವೆಂಪುರವರಿಗೆ ಕುಪ್ಪಳ್ಳಿ ಎಂದೊಡನೆಯೇ ಬೇಟೆಯ ಪ್ರಕಾರಗಳು ನೆನಪಾದರೆ ಮೂರ್ತಿರಾಯರಿಗೆ ರಥೋತ್ಸವ ವೇದಘೋಷಗಳು ನೆನಪಾಗುತ್ತವೆ. ಕುವೆಂಪುರವರಿಗೆ ಬಾಲ್ಯವೆಂದರೆ ಬೇಸಾಯ, ದನಕಾವಲು, ಇತ್ಯಾದಿಗಳ ಸ್ಮೃತಿ ಚಿತ್ರಣ ಗರಿಗೆದರುತ್ತದೆ. ಮೂರ್ತಿರಾಯರಿಗೆ ಮೊಸಳೆ ಮರಿ ತಂದುಕೊಡುವೆನೆಂದ ಕಲ್ಯಾಣಿದಾಸನ ಭರವಸೆ ನೆನಪು ಚಿಮ್ಮಿ ಬರುತ್ತದೆ. ಪ್ರಬಂಧದ ವಸ್ತುವನ್ನು ಕುರಿತು ಕುವೆಂಪುರವರು 'ಮಲೆನಾಡಿನ ಚಿತ್ರಗಳು' ಕೃತಿಯ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ.

"ನಮಗೆ ಬೇಕಾದವರು ನಮ್ಮ ಜೀವನ ಅನುಭವಗಳಲ್ಲಿ ಒಲ್ಮೆಯುಳ್ಳವರು. ಬಳಿಯಿದ್ದರೆ ಅವರಿಗೂ ಆ ಬುತ್ತಿಯ ಪರಿಚಯ ಮಾಡಿಕೊಟ್ಟು, ಒಟ್ಟಿಯಾಗಿ ಅನುಭವಿಸುವ ಸುಖವನ್ನು ಇಮ್ಮಡಿಯಾಗಿ ಅನುಭವಿಸಬಹುದು". (ಪುಟ 3-1965)

ಮೂರ್ತಿರಾಯರು ಪ್ರಬಂಧಗಳ ಉದ್ದೇಶ ವ್ಯಾಪ್ತಿಗಳನ್ನು ಕುರಿತು "ಅಲೆಯುವ ಮನ" ಕೃತಿಯ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ:

"ಕೆಲವು ವೇಳೆ ನಮ್ಮ ಆಪ್ತ ಮಿತ್ರರಿಗೆ ಪ್ರಿಯವಾದ ವಿಷಯಗಳನ್ನು ಕೀಟಲೆಗಾಗಿ ಹಾಸ್ಯ ಮಾಡುವ Impish ಮನೋವೃತ್ತಿ ನಮ್ಮೆಲ್ಲರಲ್ಲೂ ಇರುತ್ತದೆ. ಅವರ ಉತ್ಸಾಹದಲ್ಲಿ ನಿಜವಾಗಿ ನಾವೂ ಭಾಗಿಗಳು, ಅವರಿಗೆ ಪ್ರಿಯವಾದ ಈ ವಿಷಯಗಳು ನಮಗೂ ಪ್ರಿಯವೇ ಆದರೂ ಕ್ಷಣಕಾಲ ಆ ಉತ್ಸಾಹದಿಂದ ಹೊರಗೆ ನಿಂತು ಅವರಿಗೆ (ಮತ್ತು ನಮಗೆ) ಮುದ್ದಾದುದನ್ನು ಗೇಲಿ ಮಾಡಬೇಕೆನಿಸುತ್ತದೆ. ಜೀವನದಲ್ಲಿ ನಾವು ಅನುಭವಿಸಬೇಕಾದ ಆನಂದಗಳಲ್ಲಿ ಇದೂ ಒಂದೆಂದು ನನ್ನ ನಂಬಿಕೆ (ಮುನ್ನುಡಿ 1959)

ಪ್ರಬಂಧಕಾರರ ಬರವಣಿಗೆಗಳು ಪ್ರಬಂಧಕಾರರ ವ್ಯಕ್ತಿತ್ವವನ್ನು ಪ್ರತಿಫಲಿಸುವ ಮಾಧ್ಯಮ. ಎಲ್.ಎಸ್. ಶೇಷಗಿರಿರಾವ್ 'ತುಷಾರ' ಪತ್ರಿಕೆಯಲ್ಲಿ ಬರೆದ ಅಭಿಪ್ರಾಯ ಗ್ರಾಹ್ಯ: "ಪ್ರಬಂಧದ ಮೂಲಕ ಪ್ರಬಂಧಕಾರ ತನ್ನ ವ್ಯಕ್ತಿತ್ವವನ್ನು ತೋರಿಸುತ್ತಾ ಹೋಗುತ್ತಾನೆ. ಅವನು ತನ್ನ ವಿಷಯವಾಗಿಯೇ ಮಾತಾಡುತ್ತಿರುತ್ತಾನೆ. ಅದು ಶ್ರೀಮಂತ ವ್ಯಕ್ತಿತ್ವದ ಸಾಹಿತಿಯೊಬ್ಬನ ಆತ್ಮೀಯ ಮಾತುಗಾರಿಕೆ

(ಏಪ್ರಿಲ್ 1988 ಪುಟ 74-75)

ಮೂರ್ತಿರಾಯರು ಆಂಗ್ಲ ಸಾಹಿತ್ಯದಿಂದಲೂ ಪ್ರಭಾವಿತರಾದವರು. ಕುವೆಂಪುರವರು ಭಾರತೀಯ ವೇದೋಪನಿಷತ್ತುಗಳು, ರಾಮಾಯಣ, ಭಾರತ, ಭಾಗವತ, ಸಂಸ್ಕೃತ ಗ್ರಂಥಗಳಿಂದ ಪ್ರಭಾವಿತರಾದವರು. ಪ್ರಬಂಧಕಾರ ತನ್ನ ಜೀವನ ಆಗು ಹೋಗುಗಳನ್ನು ನೆನಪಿನ ಚಿತ್ರಣಗಳನ್ನು ಚಿತ್ರಿಸುತ್ತಾ ತನ್ನ ಮೇಲೆ ಆದ ಪ್ರಭಾವದ ನೆರಳಿನಲ್ಲಿ ಅವುಗಳಿಗೆ ಅಭಿವ್ಯಕ್ತಿ ನೀಡುತ್ತಾ ಹೋಗುತ್ತಾನೆ. ಮೂರ್ತಿರಾಯರು ತಮ್ಮ ಮನೋಧರ್ಮದ ಪ್ರತೀಕವೆನಿಸುವ ಸರಳತೆ, ನಿರಾಡಂಬರತೆಗಳನ್ನು ಅಂತಹದೇ ಶೈಲಿಯಲ್ಲಿ ವಿವರಿಸುತ್ತಾರೆ.

ಪ್ರಬಂಧಕಾರರ ಪ್ರಬಂಧಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅವರ ಮೇಲೆ ಬೀರಿದ ಪ್ರಭಾವಗಳನ್ನು ಸ್ಪಷ್ಟವಾಗಿ ಗುರುತಿಸಬಹುದಾಗುತ್ತದೆ. ಕುವೆಂಪುರವರು

ಭಾರತೀಯ ಸಂಸ್ಕೃತಿ ಸಂಸ್ಕೃತ ಸಾಹಿತ್ಯದಿಂದ, ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು ಜನಪದ ಜೀವನದಿಂದ, ಎಂ. ರಾಮರಾಯರು ಇಂಗ್ಲೀಷ್ ಸಾಹಿತ್ಯದಿಂದ ಸ್ಫೂರ್ತಿ ಪ್ರಭಾವಗಳನ್ನು ಪಡೆದಂತೆ ಮೂರ್ತಿರಾಯರು ಇಂಗ್ಲೀಷ್ ಸಾಹಿತ್ಯದಿಂದ ಪ್ರಭಾವಿತರಾಗಿದ್ದಾರೆ. ಇಂಗ್ಲೀಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಪಡೆದು, ಇಂಗ್ಲೀಷ್ ಮಾಧ್ಯಮದಲ್ಲಿ ಶಿಕ್ಷಣ ಪಡೆದು ಆರಂಭದಿಂದಲೂ ಇಂಗ್ಲೀಷ್ ಪುಸ್ತಕಗಳನ್ನೇ ಓದಿದ ಮೂರ್ತಿರಾಯರು ಹಲವು ಇಂಗ್ಲೀಷ್ ಪ್ರಬಂಧಕಾರರ ಪ್ರಭಾವಕ್ಕೊಳಗಾದರು. "ನಾನು ಮತ್ತು ಓದು" ಎಂಬ ಚಿಕ್ಕ ಪ್ರಬಂಧದಲ್ಲಿ ತಾವು ಓದಿದ ಹಲವು ಲೇಖಕರನ್ನು ಸ್ಮರಿಸಿಕೊಂಡಿದ್ದಾರೆ. ವಿವಿಧ ದೇಶ ಭಾಷೆಗಳ ಹಲವು ಪುಸ್ತಕಗಳು, ಕಥೆ, ಕಾದಂಬರಿ, ವಿಮರ್ಶೆ, ನಾಟಕ, ಪ್ರಬಂಧಗಳನ್ನು ಅವರು ಅಧ್ಯಯನ ಮಾಡಿದರು. ಸರ್ ಥಾಮಸ್, ಬ್ರೌನ್, ಸ್ಟೀಲ್, ಸ್ವಿಫ್ಟ್, ಬರ್ಕ್, ಮಿಲ್, ಕಾರ್ಲೈಲ್, ರಸ್ಕಿನ್, ನ್ಯೂಮನ್, ಮಕಾಲೆ, ಲ್ಯಾಂಬ್, ಇ. ವಿ. ಲ್ಯೂಕಾಸ್ ಮುಂತಾದ ಗದ್ಯ ಲೇಖಕರಿಗೆ ಅವರ ಪ್ರಬಂಧಗಳು ಋಣಿಯಾಗಿವೆ.

ಮೂರ್ತಿರಾಯರ ಗದ್ಯ ಶೈಲಿ ಚಾರ್ಲ್ಸ್ ಲ್ಯಾಂಬ್‌ನ ಶೈಲಿಯಂತೆ ಸರಳ ಮತ್ತು ನೇರ. ಹೇಳುವ ವಿಚಾರವನ್ನು ದೇಸೀ ಶೈಲಿಯಲ್ಲಿಯೇ ಹೇಳುವುದರಿಂದ ಓದುಗರಿಗೆ ಅರ್ಥವಾಗುತ್ತದೆ. 'ಶೀಲಸ್ಯ ಇಯಂ ಶೈಲಿ' ಎಂಬಂತೆ ಮೂರ್ತಿರಾಯರ ನಿರಾಡಂಬರ, ನೇರ, ಸರಳ, ವ್ಯಕ್ತಿತ್ವ ಇವರ ಪ್ರಬಂಧಗಳಲ್ಲಿಯೂ ಅಭಿವ್ಯಕ್ತಿ ಪಡೆದಿದೆ. ವೈಯಕ್ತಿಕವಾಗಿ ಅವರು ಕುಟುಂಬ ವತ್ಸಲರು. ಆದ್ದರಿಂದ ಕೌಟುಂಬಿಕ ಪರಿಸರ ಮೂರ್ತಿರಾಯರ ಪ್ರಬಂಧಗಳ ಪರಿಸರವೂ ಹೌದು. ಪತಿ - ಪತ್ನಿಯ ನಡುವಣ ಮಧುರ ಸಂಬಂಧದ ಮಹತ್ವ ಇವರ ಅಚ್ಚುಮೆಚ್ಚಿನ ವಿಷಯ. ಪ್ರಬಂಧದಲ್ಲಿ ಬರುವ ನಾಯಕನ (ಪ್ರಬಂಧಕಾರರ) ಪತ್ನಿ ಲಲಿತ ಇಲ್ಲಿ ಒಂದು ಸೌಮ್ಯ ಗಂಭೀರ ಪಾತ್ರ. ಮುದ್ದಣನಿಗೆ ಮನೋರಮೆ ಹೇಗೋ ಹಾಗೆ.

ಭಾಷೆಯ ಘಟ್ಟಕ್ಕೆ ಬಂದಾಗ ಮೂರ್ತಿರಾಯರದು ನಿರಾಲಂಕಾರಿಕ ಭಾಷೆ. ಅಲ್ಲೊಂದು ಇಲ್ಲೊಂದು ಸಂಸ್ಕೃತ ಶಬ್ದ ಅದೂ ಪ್ರಾಸಕ್ಕಾಗಿ ಮಿಂಚಿ ಮರೆಯಾಗುತ್ತದೆ. ಆ ಸಂಸ್ಕೃತ ಶಬ್ದವಾದರೋ ಕನ್ನಡಿಗರಿಗೆ ಸಂಸ್ಕೃತ ಭಾಷಾ ಪರಿಚಯವೇ ಇಲ್ಲದವರಿಗೂ ಸಹಾ ಚಿರಪರಿಚಿತವಾದ ಶಬ್ದ. ಹಸುರು ವಸನ (255). ಅಪಪ್ರಥೆ (256). ವ್ಯಾಜ (80). ಶಾಂತೋದ್ವೇಗ (204). ಅನುದ್ರಿಕ್ತ (207). ಲೌಕಿಕ (Layman) (334). (ಸ.ಲ. ಪ್ರ)-ಮುಂತಾದ ಕೆಲವು ಶಬ್ದಗಳು ಅಲ್ಲಲ್ಲಿ ಅಪ್ರಯತ್ನವಾಗಿ ಬರುತ್ತವೆ. ಸಂಸ್ಕೃತ ಇಂಗ್ಲೀಷ್ ಭಾಷೆಗಳೆರಡನ್ನೂ ಆಳವಾಗಿ ಅಧ್ಯಯನ ಮಾಡಿದ್ದರೂ ಅವುಗಳ ಪ್ರಭಾವದ ಛಾಯೆ ಮೇಲುಗೈ ಸಾಧಿಸದಂತೆ ಎಚ್ಚರ ವಹಿಸಿದ್ದಾರೆ. ಸಂಸ್ಕೃತ ಶಬ್ದಗಳನ್ನು ಇಂಗ್ಲೀಷ್ ಪಾರಿಭಾಷಿಕ ಶಬ್ದಗಳಿಗೆ ಪರ್ಯಾಯವಾಗಿ ಅಥವಾ ಸಂವಾದಿಯಾಗಿ ಉಪಯೋಗಿಸುವ ಅಂಧಾಭಿಮಾನವನ್ನು ಅವರು ಗೇಲಿ ಮಾಡುತ್ತಾರೆ. ಈ ವಿಚಾರದ ಬಗ್ಗೆ ಒಂದು ಸ್ವಾರಸ್ಯಕರ ಘಟನೆಯನ್ನು ಉಲ್ಲೇಖಿಸಬಹುದು.

"ನರಸಿಂಹಯ್ಯನವರಿಗೆ ನಿಜವಾಗಿಯೂ ಸತ್ಯವೇ ಬೇಕಾಗಿತ್ತು. ನನಗೆ ಅವರು ಇಂಗ್ಲೀಷ್ ಪದಗಳಿಗೆ ಬದಲಾಗಿ ಉಪಯೋಗಿಸಿದ್ದ ಕೆಲವು ಸಂಸ್ಕೃತ ಪದಗಳು ಬಹಳ ಭಾರವಾಗಿ ಕಂಡವು. ನನ್ನ ಅಭಿಪ್ರಾಯವನ್ನು ಸ್ವಲ್ಪ ಮೊನೆಯುಳ್ಳ ಹಾಸ್ಯದಿಂದ ವ್ಯಕ್ತ

ವಹಿಸಿದೆನಾದರೂ ಅವರು ಕೋಪಗೊಳ್ಳಲಿಲ್ಲ. "ವಿದ್ಯುತ್ಸ್ಪಷ್ಟ ರೇಖಾಯಂತ್ರ ಎನ್ನುವ ಬದಲು ಇಲೆಕ್ಟ್ರೋ ಎನ್ಸಿಫಲೋಗ್ರಾಫ್, ಎಂಬ ಪದವನ್ನೇ ಯಾಕೆ ಉಪಯೋಗಿಸಬಾರದು, ಎಂದು ನನ್ನ ವಾದ. ನಿಮ್ಮ ಇಂಗ್ಲೀಷ್ ಪದ ನನ್ನ ಸಂಸ್ಕೃತ ಪದಕ್ಕಿಂತ ಉಚ್ಚಾರಣೆಗೆ ಸುಲಭವೇನೂ ಅಲ್ಲ, ಸಾಧಾರಣ ಜನರಿಗೆ ಸಂಸ್ಕೃತ ಪದ ಎಷ್ಟು ಅಪರಿಚಿತವೋ ಇಂಗ್ಲೀಷ್ ಪದವೂ ಅಷ್ಟೇ ಅಪರಿಚಿತ. ಆದ್ದರಿಂದ ನಮ್ಮ ವಾದ ಸಂಸ್ಕೃತವನ್ನೇ ಉಪಯೋಗಿಸುತ್ತೇನೆ, ಎಂದು ಅವರ ಉತ್ತರ. ನಾನು ಅವರ ವಾದಕ್ಕೆ ಒಪ್ಪಿಗೆ ಕೊಟ್ಟೆನಾದರೂ ಅವರ ತೀರ್ಮಾನವನ್ನು ವಿರೋಧಿಸಿದೆ. ಅಥವಾ ಇಂಗ್ಲೀಷ್ ಪದಗಳನ್ನು ಹಾಗೇ ಉಳಿಸಿಕೊಳ್ಳುವುದೇ ಒಳ್ಳೆಯದೆಂದು ಇಂದಿಗೂ ನನ್ನ ಮತ." (ಸಂ. ಹಿ. ಪುಟ 335)

"ಕನ್ನಡದ ವಿಷಯದಲ್ಲಿ ಅಂಧೋತ್ಸಾಹವಿಲ್ಲದಿದ್ದರೆ, ವಿಚಾರ ಸಾಹಿತ್ಯಕ್ಕೆ ಹೆಚ್ಚು ಗಮನಕೊಟ್ಟರೆ ಅನುಕೂಲವಾದ ಪರಭಾಷೆಯ ಪದಗಳನ್ನು ಸ್ವಾಗತಿಸುವಷ್ಟು ವಿಶಾಲ ಮನಸ್ಕರಾದರೆ, ಅಕ್ಷರಸ್ಥರಲ್ಲದ ಹಳ್ಳಿಯ ಜನರಿಗೂ ಪರಿಚಿತವಾಗಿರುವ ಪೋಲೀಸ್, ಇಂಜಿನಿಯರ್ ಮುಂತಾದ ಪದಗಳನ್ನು ಹೊರದೂಡಿ ಯಾರಿಗೂ ಅರ್ಥವಾಗದ ಆರಕ್ಷಕ, ಅಭಿಯಂತ, ಮುಂತಾದ ಪದಗಳನ್ನು ಎಳೆದುತರುವ, ಹುಚ್ಚಲ್ಲಿ ಬೆಪ್ಪಲ್ಲಿ ಶಿವಲೀಲೆಯಿಂದ ಪಾರಾದರೆ." (ಅದೇ ಪುಟ 129)

ಮೂರ್ತಿರಾಯರು ಭಾಷಾತ್ಮಕ ನಿಲುವುಗಳನ್ನು ಸಮಗ್ರವಾಗಿ ಅದರೆ ಸಂಕ್ಷಿಪ್ತವಾಗಿ ಪ್ರತಿಪಾದಿಸುವ ಘಟ್ಟ ಇದು. ನವೋದಯ ಕಾಲದಲ್ಲಿ ಮೊಳಗಿದ ಕನ್ನಡ ಕಹಳೆಯ ಆರ್ಭಟಕ್ಕೆ ಘೋರ್ಗರೆತಕ್ಕೆ ಇವರು ಸಂಪೂರ್ಣವಾಗಿ ಕಿವುಡರಲ್ಲದಿದ್ದರೂ ಅತೀ ಆವೇಶ, ಭಾಷಾ ದುರಭಿಮಾನ ಅವರನ್ನು ಕಾಡಲಿಲ್ಲ. ಇಂಗ್ಲೀಷ್ ಭಾಷಾ ಸಾಹಿತ್ಯ ಪ್ರಾಧ್ಯಾಪಕರಾಗಿಯೂ ಸಂಗೀತ ಸಂಸ್ಕೃತಗಳೆರಡರಲ್ಲಿಯೂ ಅದ್ವಿತೀಯ ಪ್ರಭುತ್ವ ಪಡೆದಿದ್ದಾಗ್ಯೂ ಕನ್ನಡ ಭಾಷೆಯಲ್ಲಿ ಲಲಿತ ಶೈಲಿಯಲ್ಲಿ ಸಾಹಿತ್ಯಕೃತಿಗಳನ್ನು ರಚಿಸಿದರು. ಯಾವ ಭಾವಾವೇಶಕ್ಕೂ ಒಳಗಾಗದ ಸಂಯಮ ಪೂರಿತ ಭಾಷಾ ಪ್ರೇಮ ಅವರದು. ಆದ್ದರಿಂದಲೇ ಅವರ ಪ್ರಬಂಧಗಳಲ್ಲಿ ಯಾವುದೇ ಸಂಸ್ಕೃತ ಭೂಯಿಷ್ಠವಾದ ಪದ ಪುಂಜಗಳು, ಸಮಾಸಗಳು ಕಾಣಬರುವುದಿಲ್ಲ. ಅಂತೆಯೇ ವಿದೇಶಿ ಭಾಷಾ ಸಾಹಿತ್ಯದ ನುಡಿಗಟ್ಟುಗಳು, ಪ್ರತಿಮಾ ಸಂವಿಧಾನಗಳು, ಸಾಂಕೇತಿಕ, ಧ್ವನ್ಯಾತ್ಮಕ ಪ್ರಯೋಗಗಳನ್ನು ಅವರು ಬಳಸಿಲ್ಲ. ಕ್ವಚಿತ್ತಾಗಿ ಸಂಸ್ಕೃತ ಅನ್ಯದೇಶ್ಯ ನುಡಿಗಳನ್ನು ಮತ್ತು ರೂಪಕಗಳನ್ನು ಅಲ್ಲಲ್ಲಿ ಪ್ರಯೋಗಿಸಿದ್ದಾರೆ.

ಕಿರಾತರಾಮು (94). ಈಗಿನ ಧಾರ್ತರಾಷ್ಟ್ರರು (258). toute ensemble (110), division of labour (131). ಅಕೆಡೆಮಿಕ್ (133), paying guest, ಕುಂದೇಂದು ತುಷಾರ ಹಾರ ಧವಳಾ (133). ಶುಭ್ರವಸ್ತ್ರಾವೃತಾ (133) (ಸ.ಲ.ಪ್ರ.)

'ವ್ಯಾಘ್ರಗೀತೆ' ಎಂಬ ಪ್ರಬಂಧದಲ್ಲಿ ಉಪಯೋಗಿಸಲಾದ ಉಪನಿಷತ್ ಗೀತೆಗಳ ಉದ್ಧೃತವಾಕ್ಯಗಳನ್ನು ಬಿಟ್ಟರೆ ಇನ್ನೆಲ್ಲಿಯೂ ಸಂಸ್ಕೃತಮಯ ಶೈಲಿ ಕಂಡುಬರುವುದಿಲ್ಲ. ಭಾಷೆಯ ಬಗ್ಗೆ ಮಡಿವಂತಿಕೆ ಇಲ್ಲದ ಮನೋಭಾವ ಅವರದು. ಆದ್ದರಿಂದಲೇ ಅವರ ಬರಹ ಅಯತ್ನತಃ ಸಹಜವಾಗಿದೆ.

ಕುವೆಂಪುರವರ 'ಬಂದನಾ ಹುಲಿರಾಯನು' ಎಂಬ ಕಥನ ಪ್ರಬಂಧ ಮೂರ್ತಿರಾಯರ 'ವ್ಯಾಘ್ರಗೀತೆ'ಯೊಂದಿಗೆ ಹೋಲಿಸಬಹುದು. 'ವ್ಯಾಘ್ರಗೀತೆ' ಹುಟ್ಟಿದ ಸಂದರ್ಭವನ್ನು ಮೂರ್ತಿರಾಯರೇ 'ಅಲೆಯುವ ಮನ'ದ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ:

ಹುಲಿ ಯಾರ ಮೇಲೂ ಹಿಂದಿನಿಂದ ನೆಗೆಯುವುದಿಲ್ಲವೆಂದು ನನ್ನ ಮಿತ್ರರೊಬ್ಬರು ಒಂದು ಥಿಯರಿಯನ್ನು ಮುಂದಿಟ್ಟಿದ್ದರು. 'ವ್ಯಾಘ್ರಗೀತೆ' ಅದನ್ನು ಗೇಲಿ ಮಾಡುವುದಕ್ಕಾಗಿ ಕಟ್ಟಿದ ಕಥೆ.

ಅನಂತರ ಅದು ಆಕಾಶವಾಣಿಯಿಂದ ಪ್ರಸಾರವಾಯಿತು. 'ಜನಪ್ರಗತಿ'ಯಲ್ಲಿ ಪ್ರಕಟವೂ ಆಯಿತು. ಪ್ರಸಾರವನ್ನು ಕೇಳಿದವರೊಬ್ಬರು 'ನಿಮ್ಮ ಕಥೆಯಲ್ಲಿ ಹುಲಿ ಯಾರು ? ಶಾನುಭೋಗರು ಯಾರು? ಎಂದು ಪ್ರಶ್ನೆ ಹಾಕಿದರು. ಹುಲಿ ಶ್ಯಾನುಭೋಗ ರಿಬ್ಬರೂ ಸಂಪೂರ್ಣವಾಗಿ ಕಾಲ್ಪನಿಕ ವ್ಯಕ್ತಿಗಳು. ಮೇಲೆ ತೋರುವ ಹಾಸ್ಯವಲ್ಲದೆ ಈ ಕಥೆಯಲ್ಲಿ ಒಳ ಅರ್ಥ ಏನೇನೂ ಇಲ್ಲ. (ಪುಟ 382)

ಕುವೆಂಪುರವರ 'ಬಂದನಾ ಹುಲಿರಾಯನು' ಎಂಬ ಪ್ರಬಂಧದಲ್ಲಿ ಬರುವ ರಂಗಯ್ಯ 'ವ್ಯಾಘ್ರಗೀತೆ'ಯ ಶ್ಯಾನುಭೋಗರಂತಲ್ಲ. ಅವನು ಬೇಟೆಗಾಗಿಯೇ ಹೋದವನು. ಶ್ಯಾನುಭೋಗರಾದರೋ ಆಕಸ್ಮಿಕವಾಗಿ ಹುಲಿಯ ಕೈಗೆ ಸಿಕ್ಕಿಹಾಕಿ ಕೊಂಡವರು. ಶ್ಯಾನುಭೋಗರು ಜಾಣ್ಮೆಯಿಂದ ಸ್ಥೈರ್ಯದಿಂದ ಪಾರಾದರೆ, ರಂಗಯ್ಯ ಹೆದರಿ, ಕೂಗಿ, ಕಂಡಕಂಡ ದೇವತೆಗೆ ಹರಕೆ ಹೇಳಿ ಅವನ ತಮ್ಮ ಸಿದ್ದಣ್ಣನ ನೆರವಿನಿಂದ ಪಾರಾದವನು. ಒಂದು ಅನುಭವ ನಿರೂಪಣೆ. ಮತ್ತೊಂದು ಕಲ್ಪನೆ. 'ವ್ಯಾಘ್ರಗೀತೆ' ಯಲ್ಲಿ ಮೂರ್ತಿರಾಯರೇ ಸ್ವತಃ ರಚಿಸಿದ ಹಾಗೂ, ಗೀತಾ ಶ್ಲೋಕಗಳು ಸಂದರ್ಭಾನುಸಾರ ಉಲ್ಲೇಖವಾದಂತೆ ಇಲ್ಲಿಯೂ ಸಹಾ 'ನೈನಂಛಿಂದಂತಿ' ಎಂಬ ಉದ್ಧೃತ ಭಾಗ ಇದೆ.

ಕುವೆಂಪುರವರ ಪ್ರಬಂಧವೊಂದರಲ್ಲಿ ಮಿಂಚಿದ ಅವರ ತಾತ್ವಿಕ ಮನೋಭಾವದ ಒಂದು ಪ್ರಾತಿನಿಧಿಕ ಭಾಗವನ್ನು ಉದಾಹರಿಸಬಹುದು. ರೇಷ್ಮೆ ಕಾಯಿಲೆ (ಶ್ಲೇಷ್ಮ ಜ್ವರ) ಯಿಂದ ನರಳುತ್ತಿದ್ದ ಅಣ್ಣಪ್ಪನನ್ನು ನೋಡಲು ಅವರು ಹೋದಾಗ, ಲೌಕಿಕರಂತೆ ಅವರ ಮನಸ್ಸು ಯೋಚಿಸುವುದಕ್ಕೆ ಬದಲಾಗಿ ಯೌಗಿಕ, ಪಾರಮಾರ್ಥಿಕವಾಗಿ ಯೋಚಿಸಲಾರಂಭಿಸಿತು. ಆ ಚಿಂತನಾಧಾರೆ ಸಂಸ್ಕೃತ ಭಾಷಾ ಭೂಯಿಷ್ಠವಾಗಿಯೂ ಆಧ್ಯಾತ್ಮಿಕ ಅನುಭೂತಿಯಿಂದಲೂ ಕೂಡಿದೆ.

"ಲೋಕರೂಢಿಯ ದೃಷ್ಟಿಯಿಂದ ಎಷ್ಟೇ ಅಲ್ಪವಾದುದಾಗಲಿ, ಎಷ್ಟೇ ಮಹತ್ತಾದು ದಾಗಲೀ ಪ್ರತಿಯೊಂದು ವಸ್ತುವನ್ನು ಪ್ರತಿಯೊಂದು ಸನ್ನಿವೇಶವನ್ನು ವಿರಾಟ್ ದೃಷ್ಟಿಯಿಂದ ನೋಡಲೆಳಸುವುದು ನನಗೊಂದು ಹುಚ್ಚು. ಹಾಗೆ ನೋಡಿದರೆ ಅಲ್ಪತ್ವ ಮಹತ್ವಗಳೆಲ್ಲ ಮಾಯವಾಗಿ ಸಮತ್ವ ಮೂಡುತ್ತದೆ. ನಮ್ಮ ಅಹಂಕಾರವೂ ತಗ್ಗಿ ಅಣುವಿನಿಂದ ಹಿಡಿದು ಆಕಾಶದವರೆಗೂ ಅಜ್ಞಾತವಾದ ಇರುವೆಯಿಂದ ಜಗದ್ವಿಖ್ಯಾತ ವಾದ ಮಹಾತ್ಮನವರೆಗೂ ಎಲ್ಲರೂ ಎಲ್ಲವೂ ಮಹಿಮಾಮಯವಾಗಿ, ಅನಿರ್ವಚನೀಯ ವಾದ, ಅಪಾರವಾದ ವಿಶ್ವವ್ಯೂಹದಲ್ಲಿ ಸರ್ವಸಮತ್ವದ ಮತ್ತು ಸರ್ವಮಹತ್ವದ ಅನುಭವವುಂಟಾಗಿ ಹೃದಯದಲ್ಲಿ ಮತ್ಸರತೆಯೂ, ಆನಂದವೂ, ಶಾಂತಿಯೂ

ಮೈದೋರುತ್ತವೆ. ಪ್ರತಿಯೊಂದು ವಸ್ತುವಿನ ಪೂರ್ಣ ಪ್ರಯೋಜನ ವ್ಯಕ್ತವಾಗುವುದು ಅಂತಹ ವಿರಾಟ್ ದೃಷ್ಟಿಯಿಂದಲೇ. ಸೃಷ್ಟಿಯೆಲ್ಲವೂ ಒಂದು ಮಹಾಜಾಲದಂತೆ ಎಂದು ಪ್ರತಿಯೊಂದು ವಸ್ತುವೂ ಜಡವಾಗಿರಲಿ, ಚೇತನವಾಗಿರಲಿ, ಪರಸ್ಪರೋಪಜೀವಿಯೆಂದೂ ಅನೇಕ ಶತಮಾನಗಳ ಹಿಂದೆ ಮೃತ್ಯುಮುಖಿಯಾಗಿದ್ದ ರಾವಣನ ಆರ್ತನಾದ ನಾಳೆ ಸಾಯಲಿರುವ ಸೊಣಪೊಂದರ ರೋಧನಕ್ಕೂ ನಾಳೆ ಅರಳಲಿರುವ ಕುಸುಮವೊಂದರ ಸೌಂದರ್ಯಕ್ಕೂ, ಹೇಗೋ ಸಂಬಂಧಪಟ್ಟಿದೆಯೆಂದು ನನ್ನ ದೃಢವಾದ ನಂಬುಗೆ. ಆದ್ದರಿಂದ ಬಣ್ಣ ಬಣ್ಣದ ಸಣ್ಣ ಹಕ್ಕಿಯೊಂದು ಯಾರೂ ಕಾಣದಂತೆ ಮಲೆನಾಡಿನ ಕಾಡಿನ ಒಂದು ಮರದಲ್ಲಿ ಕುಳಿತು ಪ್ರಾತಃಕಾಲದ ಸ್ವರ್ಣೋತ್ಸವದಲ್ಲಿ ಇಂಪಾಗಿ ಗಾನಗೈಯುತ್ತಿದ್ದರೆ ನಾನು ಆ ಸನ್ನಿವೇಶವನ್ನು ಸರ್ವಕಾಲ ಸರ್ವದೇಶ ರಚಿತವಾದ ವಿರಾಟ್‌ರಂಗ ಭಿತ್ತಿಯಲ್ಲಿಟ್ಟು ನೋಡಿ ಕೇಳಿ ನಲಿಯುತ್ತೇನೆ. ಹಾಗೆ ಮಾಡುವುದರಿಂದ ಸನ್ನಿವೇಶದ ಮಹತ್ವ ನೂರ್ಮಡಿಯಾಗುತ್ತದೆ. ಅದು ಜಗತ್ತಿನಲ್ಲಿ ನಡೆಯುವ ಮತ್ತಾವ ಮಹದ್ವ್ಯಾಪಾರಕ್ಕೂ ಕೀಳಾಗುವುದಿಲ್ಲ. ಬ್ರಹ್ಮವ್ಯೂಹದಲ್ಲಿ ಷೇಕ್ಸ್‌ಪಿಯರ್‌ನ ನಾಟಕ ರಚನೆ ಎಷ್ಟು ಮುಖ್ಯವೋ ಮೊನ್ನೆ ನಡೆದ ಘೋರಯುದ್ಧ ಎಷ್ಟು ಅನಿವಾರ್ಯವೋ, ಅದೂ ಅಷ್ಟೇ ಮುಖ್ಯ, ಅಷ್ಟೇ ಅನಿವಾರ್ಯ ಎಂಬುದು ನನ್ನ ನಂಬುಗೆ. ಭುವನ ಕವಿಯ ಭವ್ಯಸ್ವರಮೇಲದಲ್ಲಿ ನನ್ನ ಒಂದು ಲಲಿತರಾಗವಾದರೆ ಗೂಬೆ ಕೂಡ ಒಂದು ಕೀಚುದನಿ" (ಪುಟ 75)

ಇದು ಕುವೆಂಪುರವರಿಗೇ ವಿಶಿಷ್ಟವಾದ ಕುವೆಂಪು ಶೈಲಿ. ಸಂಸ್ಕೃತ ಭಾಷೆ ಸಾಹಿತ್ಯಗಳ ಮೇಲಿನ ಅಸಾಧಾರಣ ಪಾಂಡಿತ್ಯ ಪ್ರಭುತ್ವಗಳ ಬಲದಿಂದ ಕುವೆಂಪು ಇಲ್ಲಿ ಇಂತಹ ಶೈಲಿಯೊಂದನ್ನು ಹೆಣೆದಿದ್ದಾರೆ. ಇದೂ ಅಲ್ಲದೆ ಅವರು ಬಳಸುವ ಬೈಗುಗೆಂಪು (11) ಎಂಬುವುದು ದೇಶೀಶಬ್ದ. ಸ್ವನಮಹಿಷಾ (15), ತಿಮಿರಬ್ರಹ್ಮ ಸಮಾಧಿ (16), ಘನೀಭೂತವಾದ ಘೋರಾಂಧಕಾರ ಕಾಳ ಪಾಷಣಭಿತ್ತಿಯೋಪಾದಿಯಲ್ಲಿ (17), ಸುಖಮುದ್ರಿತ (88), ನಿರ್ನಿಮೇಷ (89), ದಿವ್ಯವಿಸ್ಮೃತಿ (103), ಕೈವಲ್ಯ ಶೂನ್ಯತೆಯ ಗಭೀರತೆಯನ್ನು (103)-ಮುಂತಾದ ಸಂಸ್ಕೃತ ಶಬ್ದಗಳ ಶಬ್ದಪುಂಜಗಳ ರಿಂಗಣ ಪ್ರಬಂಧಕಾರರಿಗೆ ಅದು ಸಹಜ ಶೈಲಿ ಎನಿಸಿದರೂ ವಾಚಕವೃಂದಕ್ಕೆ ಮೊಸರನ್ನದಲ್ಲಿ ಕಲ್ಲು ಸಿಕ್ಕ ಅನುಭವ. ಜೊತೆಗೆ ಪ್ರಬಂಧದ ಆದಿಮಧ್ಯ ಅಂತ್ಯಗಳಲ್ಲಿ ಓದುಗನನ್ನು ಕುರಿತ ಸಂಬೋಧನೆ, ಪಾಠಕ ಮಹಾಶಯ (64), ಪಾಠಕ (65), ಪಾಠಕನ (65), ಪಾಠಕಮಹಾಶಯ (71) ಮುಂತಾದ ಕಡೆ ಬಂಗಾಳೀ ಸಾಹಿತ್ಯದ ಪ್ರಭಾವ ಸ್ಪಷ್ಟವಾಗಿ ವ್ಯಕ್ತವಾಗಿದೆ. ಇದು ಕುವೆಂಪುರವರ ವಿಶಿಷ್ಟ ಶೈಲಿ.

ಮೂರ್ತಿರಾಯರಿಗೂ ಸಹಾ ಕುವೆಂಪುರವರಂತೆಯೇ ಕನ್ನಡ ಇಂಗ್ಲೀಷ್ ಸಂಸ್ಕೃತ ಮತ್ತು ಫ್ರೆಂಚ್ ಭಾಷೆ ಸಾಹಿತ್ಯಗಳಲ್ಲಿ ಪಾಂಡಿತ್ಯ ಪರಿಶ್ರಮಗಳಿವೆ. ಕುವೆಂಪುರವರ ಈ ಮೇಲ್ಕಂಡ ಉದ್ಧೃತ ಭಾಗವನ್ನು ಓದಿದಾಗ ಒಮ್ಮೆ ಧಿಮಗೆ ಹಳಿತಪ್ಪಿದ ಅನುಭವವಾಗುತ್ತದೆ.

Essay need not concern itself with anything definite ಎಂಬ ವಾಕ್ಯಾರ್ಥವನ್ನು ಸಾಬೀತುಗೊಳಿಸುತ್ತದೆ. ಪ್ರಬಂಧಕಾರರ ಕವಿತಾ ಪ್ರತಿಭೆ, ತಾತ್ವಿಕ ಒಲವು ಹಾಗೂ ಭಾವುಕ ಭಾವನೆಗಳು ಇಲ್ಲಿ ಚೆನ್ನಾಗಿ ಬಿಂಬಿಸಲ್ಪಟ್ಟಿವೆ. ಕುವೆಂಪುರವರ

ಈ ಪ್ರಾಥಕ್ಕಲಿಯನ್ನು ನಾವು ಕಾಣಬಹುದಾದರೆ ಅದು ಕೃಚಿತ್ತಾಗಿ ಬಿ. ಶ್ರೀ ಪಿ. ರಾಮರಾವ್ ರವರ 'ಪಾದಯಾತ್ರೆ' ಕೃತಿಯಲ್ಲಿ ಹೀಗಿದೆ.

"ಸಾಮಾನ್ಯ ಜಗತ್ತಿನ ನೀತಿಗೆ ವ್ಯತಿರಿಕ್ತವಾದ ಕೃತ್ಯವೊಂದು ರಜನಿಯ ಏಕಾಂತತೆಯಲ್ಲಿ ಅಂದು ಅಲ್ಲಿ ನಡೆಯುತ್ತಿತ್ತು"

(1971 : ಪುಟ 107)

## 2.7 ವಿಮರ್ಶಾತ್ಮಕ ಪ್ರಬಂಧಗಳು :

ಮೂರ್ತಿರಾಯರು ಒಳ್ಳೆಯ ವಿಮರ್ಶಕರೆಂದೂ ಹೆಸರು ಪಡೆದವರು. ಎಂ. ಎ. ಕ್ಲಾಸಿಗೆ ಕ್ರಮವಾಗಿ ವಿಮರ್ಶಾತತ್ವಗಳನ್ನು ಬೋಧಿಸುವ ಏರ್ಪಾಟು ಮಾಡಿದ್ದರು. 1929ರಲ್ಲಿ ಅದರ ಜವಾಬ್ದಾರಿಯನ್ನು ಮೂರ್ತಿರಾಯರಿಗೇ ವಹಿಸಿದ್ದರು. ಅವರು ಪಾಠಬೋಧನೆಗೆ ಮಾಡಿಕೊಂಡ ಪೂರ್ವಸಿದ್ಧತೆ, ಮಾಡಿದ ಉಪನ್ಯಾಸಗಳೇ ಒಂದು ಹೆಚ್ಚೊತ್ತಿಗೆಯನ್ನು ಪ್ರಬಂಧದೊಂದಿಗೆ ಮೇಳೈಸಿದ ಬಗೆಯನ್ನು ಆಲೋಚನೆ ಮಾಡಿದೆ.

'ವಿಮರ್ಶಾತ್ಮಕ ಪ್ರಬಂಧಗಳು' ಎಂಬ ಶೀರ್ಷಿಕೆಯೇ ಕುತೂಹಲ ಭರಿತವಾದುದು. ಏಕೆಂದರೆ ವಿಮರ್ಶೆಗಳನ್ನು ಬರೆದು ವಿಮರ್ಶಕರಾದವರಿದ್ದಾರೆ. ಪ್ರಬಂಧವೆಂಬ ಶೀರ್ಷಿಕೆಯಡಿ ಸ್ವತಂತ್ರವಾಗಿ ಬರವಣಿಗೆ ಮಾಡಿದವರಿದ್ದಾರೆ. ಆದರೆ ಇಲ್ಲಿ ಇವೆರಡೂ ಮೇಳವಿಸಿ ಎರಡರ ಸೊಗಡನ್ನೂ ಲಕ್ಷಣಗಳನ್ನೂ ಒಳಗೊಂಡಿದೆ. ಪ್ರಬಂಧಗಳಿಗಾದರೋ ನಿಷಿದ್ಧವಾದ ವಸ್ತು ಯಾವುದೂ ಇಲ್ಲ. ಆದ್ದರಿಂದ ಎಲ್ಲಾ ವಸ್ತುಗಳೂ ಪ್ರಬಂಧಕ್ಕೆ ವಸ್ತುವಾಗಬಲ್ಲವು. ವಿಮರ್ಶೆಗಾದರೋ ಸಾಹಿತ್ಯ, ಸಂಗೀತ, ಕಲೆ ಮುಂತಾದ ಮೂರ್ತವೂ, ದೃಶ್ಯವೂ ಆದ ಒಂದು ಮಾಧ್ಯಮ ಬೇಕು. ವಿಮರ್ಶೆಗೆ ಮಿತಿಯಿದೆ. ಪ್ರಬಂಧಕ್ಕೆ ಲೇಖಕ (ಪ್ರಬಂಧಕಾರ) ಕಲ್ಪಿಸಿದ್ದೇ ಮಿತಿ. ಪ್ರಬಂಧ, ಸ್ವಗತ ಕಥನ. ಆದರೆ ವಿಮರ್ಶೆ ಹೀಗಲ್ಲ. ವಿಮರ್ಶೆಯನ್ನು ಓದುವ ಮೊದಲು ನಾವು ಯಾವುದನ್ನು ಕುರಿತು ವಿಮರ್ಶೆ ಮಾಡಲಾಗಿದೆಯೋ ಆ ವಸ್ತುವನ್ನು ನಾವು ಈ ಮೊದಲೇ ಓದಿರುತ್ತೇವೆ. ಇಲ್ಲವೇ, ವಿಮರ್ಶೆಯನ್ನು ಓದಿದ ಬಳಿಕ ಸಂಬಂಧಿಸಿದ ಸಾಹಿತ್ಯ ಕೃತಿಯನ್ನು ಓದುವ, ಬಿಡುವ ನಿರ್ಧಾರ ಮಾಡುತ್ತೇವೆ. ಆದರೆ ಪ್ರಬಂಧವನ್ನು ಓದುವ ಪೂರ್ವದಲ್ಲಿ ನಮಗದರ ಪೂರ್ವ ಪರಿಚಯವೂ ಇರುವುದಿಲ್ಲ. ಪ್ರಬಂಧ ಒಂದು ಮುಕ್ತಾಯ ವಿಮರ್ಶೆ. ಸಾಹಿತ್ಯ ಕೃತಿಯ ಓದಿಗೆ ಶ್ರೀಕಾರವಾದ್ದರಿಂದ ವಿಮರ್ಶೆ ಒಂದು ಸಾಹಿತ್ಯ ಕೃತಿಯ ಗಂಭೀರ ಮೌಲ್ಯಮಾಪನ ನಿಷ್ಕರ್ಷೆ. ರವಿ ಕಾಣದ್ದನ್ನು ಕವಿ ಕಂಡು ಚಿತ್ರಿಸಿದರೆ, ಕವಿ ತನ್ನ ಕೃತಿಯಲ್ಲಿ ತಾನೇ ಸ್ವತಃ ಕಾಣದ, ಕಂಡರೂ ದೋಷವನ್ನು ಗುಣವೆಂದು ಬಗೆದ ಅಂಶಗಳನ್ನು ವಿಮರ್ಶಕ ವಿಮರ್ಶೆಯ ಕನ್ನಡಿಯಲ್ಲಿ ಕಾಣಿಸುತ್ತಾನೆ. ಆದ್ದರಿಂದ ಆರೋಗ್ಯಕರ ವಿಮರ್ಶೆ ಕವಿಗೆ ಮುಂದಿನ ಕಾವ್ಯ ನಿರ್ಮಿತಿಗೆ ಒಂದು ಮಾರ್ಗದರ್ಶಿಯೂ ಹೌದು. ಆದರೆ ಪ್ರಬಂಧದಲ್ಲಿ ಈ ತೋರುಬೆರಳಾಗಬಲ್ಲ ಅಂಶವಿಲ್ಲ. ಜೊತೆಗೆ ಪ್ರಬಂಧಕಾರ ಗುಣವನ್ನು ದೋಷದ ಸ್ಥಾನಕ್ಕಿಳಿಸಿ, ದೋಷವನ್ನು ಗುಣದ ಸ್ಥಾನಕ್ಕೇರಿಸಿ, ಗುಣವನ್ನು ದೋಷವನ್ನಾಗಿಯೂ, ದೋಷವನ್ನು ಗುಣವಾಗಿಯೂ ಚಿತ್ರಿಸಬಲ್ಲ. ಆ ಮೇರೆ ಮೀರುವ ಸ್ವಾತಂತ್ರ್ಯ ಪ್ರಬಂಧಕಾರನಿಗಿದೆ. ಇಲ್ಲಿ ಕುವೆಂಪು ರವರಿಗೆ ಪ್ರಬಂಧಕ್ಕೆ ಹಿರಿಕಿರಿಯರು ಎಂಬ ಭೇದವಿಲ್ಲ, ಎಳೆಯ ಮಕ್ಕಳು ಸೇರಿ ಆಡಿದ ರಾಮರಾವಣರ ಯುದ್ಧದಿಂದ ಅಜ್ಜಯ್ಯನ ಅಭ್ಯಂಜನದವರೆಗೂ ವಿಷಯಾನು

ಕೂಲಸಿಂಧುವಾಗುತ್ತದೆ. ಆದರೆ ವಿಮರ್ಶೆಗೆ ದ್ರೌಪದಿಯ ಶ್ರೀಮುಡಿ ಮುಂತಹ ವಸ್ತುವೇ ಬೇಕು. ಮೂರ್ತಿರಾಯರಿಗೆ ಪತ್ನಿ ಲಲಿತೆ, ಗೌರಜ್ಜಿ, ದೆವ್ವಗಳನ್ನು ಕುರಿತು ಬರೆಯಲು ಪ್ರಬಂಧದ ವಸ್ತುವೆನಿಸುತ್ತದೆ. ಆದರೆ ವಿಮರ್ಶೆಗೆ ಮಾಸ್ತಿಯವರ ಕಥೆಗಳೋ, ಷೇಕ್ಸ್‌ಪಿಯರ್ ನಾಟಕಗಳೋ, ಪ್ರಾಚೀನ ಸಂಸ್ಕೃತ ಕಾವ್ಯಗಳೋ ಬೇಕು. ಪ್ರಬಂಧಕಾರ ನಿರಂಕುಶಮತಿ, ನಿರಂಕುಶಪ್ರಭು. ವಿಮರ್ಶಕನಿಗೆ ಇಂತಹ ಸ್ವಾತಂತ್ರ್ಯವಿಲ್ಲ. ಅವನು ಗುಣವನ್ನು ಗುಣವೆಂದೂ, ದೋಷವನ್ನು ದೋಷವೆಂದೇ ಹೇಳಬೇಕು. ವಿಮರ್ಶಕ ನಮಗೆ ಇನ್ನೊಂದು ರೀತಿಯಲ್ಲಿ ಗುರುವಾಗಬಲ್ಲ. ಕೃತಿಕಾರ ಒಮ್ಮೊಮ್ಮೆ ಧ್ವನ್ಯಾತ್ಮಕವಾಗಿ ಹೇಳಿದುದನ್ನು ವಿಮರ್ಶಕ ವಿವರಣಾತ್ಮಕವಾಗಿ ಹೇಳಿ, ಸಹೃದಯನಿಗೆ ಅಗೋಚರವಾದ ಅರ್ಥ ಪ್ರಪಂಚವನ್ನು ದೃಗ್ಗೋಚರವನ್ನಾಗಿಸಬಲ್ಲ. ಸೂಚ್ಯವಾದುದು ವಾಚ್ಯವಾಗಿ ಕವಿ ಸಹೃದಯರು ಒಂದೇ ಸ್ತರದಲ್ಲಿ ವಿಹರಿಸಬಲ್ಲರು. ಅದ್ದರಿಂದಲೇ ಎಷ್ಟೋ ಪ್ರೌಢ ಗ್ರಂಥಗಳನ್ನು ವಿಮರ್ಶೆ ವ್ಯಾಖ್ಯಾನಗಳ ನೆರವಿನಿಂದಲೇ ಆಳವಾಗಿ ಅಭ್ಯಾಸ ಮಾಡಲು ಸಾಧ್ಯವಾಗಿದೆ. ಕಾಳಿದಾಸನ ಕೃತಿಗಳಿಗೆ ಮಲ್ಲಿಕಾರ್ಜುನ, ಪಾಣಿನಿಯ ಅಷ್ಟಾಧ್ಯಾಯಿಗೆ ವರರುಚಿ, ಅಮರಕೋಶಕ್ಕೆ ಭಟ್ಟೋಜಿ ದೀಕ್ಷಿತ, ಷೇಕ್ಸ್‌ಪಿಯರ್‌ಗೆ ಎ. ಸಿ. ಬ್ರಾಡ್ಲೆ ಮುಂತಾದ ಘನ ವ್ಯಾಖ್ಯಾನಕಾರರು, ಟೀಕಾಕಾರರು ವಿಮರ್ಶಾತ್ಮಕ ವಿವರಣೆ ನೀಡಿ ಆಯಾ ಸಾಹಿತ್ಯಕೃತಿಗಳ ಅಧ್ಯಯನಕ್ಕೆ ಸುಲಭ ಮಾರ್ಗವನ್ನು ಒದಗಿಸಿದ್ದಾರೆ. ಆದ್ದರಿಂದಲೇ ಒಂದೇ ಕೃತಿಯನ್ನು ಕುರಿತು ಬೃಹತ್ ಪ್ರಮಾಣದಲ್ಲಿ ಕೃತಿಗಳು ಸೃಷ್ಟಿಯಾದವು.

ಮೂರ್ತಿರಾಯರ 'ವಿಮರ್ಶಾತ್ಮಕ ಪ್ರಬಂಧಗಳು' ಇಂತಹ ವೈಶಿಷ್ಟ್ಯಪೂರ್ಣ ಕೃತಿ. ಪರಸ್ಪರ ವಿರುದ್ಧ ಲಕ್ಷಣಗಳನ್ನು ಒಂದುಗೂಡಿಸಿರುವುದೇ ಈ ವೈಶಿಷ್ಟ್ಯಕ್ಕೆ ಆಧಾರ. ಆದರೆ ಮತ್ತೊಂದು ರೀತಿಯಲ್ಲಿ ಹೇಳುವುದಾದರೆ ಪ್ರಬಂಧದ ಅನಂತಮುಖಗಳಲ್ಲಿ ಇದೂ ಒಂದು ಮುಖ. ಲಲಿತ ಪ್ರಬಂಧ, ಕಥನ ಪ್ರಬಂಧ, ಲಘು ಪ್ರಬಂಧ, ಪ್ರವಾಸಾತ್ಮಕ ಪ್ರಬಂಧ, ತಾತ್ವಿಕ ಪ್ರಬಂಧ ಮುಂತಾದವುಗಳಂತೆ ಇದೂ ಒಂದು ಎನ್ನಬಹುದು. ಆದರೆ ವಿಮರ್ಶೆಯನ್ನು ಪ್ರಬಂಧದೊಂದಿಗೆ ಸಂಲಗ್ನಗೊಳಿಸಿ ವಿಮರ್ಶಾತ್ಮಕ ಪ್ರಬಂಧವಾಗಿಸಿದ ಉದ್ದೇಶ ಬಹುಶಃ ವಿಮರ್ಶೆಯ ಪರಿಧಿಯನ್ನು ತುಸು ಹಿಗ್ಗಿಸಿ, ಹೇಳಬೇಕೆನಿಸಿದ್ದನ್ನು ಹೇಳಲು ವಿಮರ್ಶೆಯ ಮಿತಿ ಅಡಚಣೆಯಾದುದರಿಂದಲೋ ಏನೋ, ಪ್ರಬಂಧದ ವ್ಯಾಪ್ತಿ ಅಮಿತವಾದುದರಿಂದ ವಸ್ತುವನ್ನು ವಿಮರ್ಶಾತ್ಮಕ ದೃಷ್ಟಿಕೋನದಿಂದ ಪರೀಕ್ಷಿಸಲು ಅನುಕೂಲವಾಗುತ್ತದೆ ಎಂದೋ ಏನೋ, ಪ್ರಬಂಧದ ಲಾಲಿತ್ಯಕ್ಕೆ ವಿಮರ್ಶೆಯ ಗಂಭೀರತೆಯನ್ನು ತೊಡಿಸಲು, ವಿಮರ್ಶೆಯ ಬಿಗುವಿಗೆ ಪ್ರಬಂಧದ ಪ್ರಸನ್ನತೆಯನ್ನು ಭರಿಸಲು 'ವಿಮರ್ಶಾತ್ಮಕ ಪ್ರಬಂಧಗಳು' ಕೃತಿಯನ್ನು ಬರೆದಿದ್ದಾರೆ.

ಈ ಲೇಖನಗಳು (ಮೂರ್ತಿರಾಯರೇ ಹಾಗೆಂದು ಕರೆದಿದ್ದಾರೆ) ಬೇರೆ ಬೇರೆ ಸಂದರ್ಭದಲ್ಲಿ ಬರೆದವುಗಳು. ಇಲ್ಲಿರುವ ಒಂಬತ್ತು ಲೇಖನಗಳ ಹಿನ್ನೆಲೆ ಒಂಬತ್ತು ವಿಧ. "ರೇಡಿಯೋ ನಾಟಕ ಮತ್ತು ರಂಗಭೂಮಿ" ಆಕಾಶವಾಣಿಯ ಪ್ರಸಾರ ಭಾಷಣವಾಗಿ ಅನಂತರ ಅದು "ಮಿನುಗುಮಿಂಚು" ಕೃತಿಯಲ್ಲಿ ಸ್ಥಾನ ಪಡೆಯಿತು. ಇಲ್ಲಿ ಅದರ ಸ್ಥಾನಪಲ್ಲಟವಾಯಿತಷ್ಟೆ. ಸ್ಥಾನಾಂತರ ಪ್ರಾಪ್ತಿಯ ಏನಃ, ಸ್ಥಾನೋನ್ನತಿಯಾಗಲೀ, ಸ್ಥಾನ ವ್ಯತ್ಯಾಸವಾಗಲೀ ಏನೂ ಇಲ್ಲ. "ಹರಟೆ ಮತ್ತು ಪ್ರಬಂಧ"

"ಮಿನುಗು ಮಿಂಚು" ಪ್ರಬಂಧ ಸಂಕಲನದಲ್ಲಿ ಪ್ರಕಟವಾದ 'ಕರ್ಮವೀರ' ಪತ್ರಿಕೆಗಾಗಿ ಬರೆದ ಲೇಖನ 'ನಮ್ಮ ನಾಟಕ ಹಿಡಿದ ದಾರಿ', 'The Drama at the Crossways' ಎಂಬ ಇಂಗ್ಲೀಷ್ ಭಾಷಣದ ವಿಸ್ತೃತ ಮತ್ತು ಅನುವಾದಿತ ರೂಪ. 'ಸಾಕ್ರಟೀಸ್', 'ಕನಸಿನ ಮನೆ,' 'ಪರದೆಯ ಹಿಂದೆ', 'ಪಾರಸಿಕರು', ಆಯಾ ಕೃತಿಗಳಿಗೆ ಬರೆದ ಮುನ್ನುಡಿಗಳು. 'ಕನ್ನಡನಾಡಿನಲ್ಲಿ ಷೇಕ್ಸ್‌ಪಿಯರ್‌ನ ನಾಟಕಗಳು', ದಿಲ್ಲಿಯ ಸಾಹಿತ್ಯ ಅಕಾಡೆಮಿ ಪ್ರಕಟಿಸುತ್ತಿರುವ Indian Literature ಪತ್ರಿಕೆಗಾಗಿ ಬರೆದ ಇಂಗ್ಲೀಷ್ ಲೇಖನದ ಕನ್ನಡಾನುವಾದ. "ಷೇಕ್ಸ್‌ಪಿಯರ್‌ನ ರಾಜಕೀಯ ದೃಷ್ಟಿ" ಬೆಂಗಳೂರಿನ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ ಮಾಡಿದ ಇಂಗ್ಲೀಷ್ ಭಾಷಣದ ಅನುವಾದ.

ಮೂಲತಃ ಪ್ರಬಂಧಕಾರರಾದ ಮೂರ್ತಿರಾಯರು ಬರೆಯುತ್ತಾ ಪ್ರಬಂಧಕಾರರೇ ಆಗಿ ಬಿಡುತ್ತಾರೆ. ಆದ್ದರಿಂದ ವಿಮರ್ಶೆ ಪ್ರಬಂಧವಾಗಿ ಪ್ರಬಂಧದ ಹಲವು ಮಜಲುಗಳನ್ನು ಹಾದು ಬರುತ್ತದೆ "ಹರಟೆ ಮತ್ತು ಪ್ರಬಂಧ" ಎಂಬ ಲೇಖನದಲ್ಲಿ ಹರಟೆ ಮತ್ತು ಪ್ರಬಂಧಗಳು ಎಲ್ಲಿ ಪರಸ್ಪರ ಭಿನ್ನತೆಯನ್ನು ತಳೆಯುತ್ತದೆ ಎಂದು ವಿವರಿಸಿದ್ದಾರೆ. 'ಹರಟೆ' ಎಂಬ ವಿಭಾಗ ಹರಟೆಯ ರೂಪದಲ್ಲಿಯೇ ಇದೆ. 'ಪ್ರಬಂಧ' ಎಂಬ ವಿಭಾಗ ಪ್ರಬಂಧದ ರೂಪದಲ್ಲಿಯೇ ಇದೆ. ಪ್ರಾಚೀನ ಛಂದಶ್ಶಾಸ್ತ್ರಕಾರರು ಛಂದೋ ಪ್ರಕಾರದ ಲಕ್ಷಣಗಳನ್ನು ವಿವರಿಸಲು ಅದೇ ಛಂದಸ್ಸನ್ನು ಬಳಸಿದರು. ಹಾಗೆಯೇ ಇಲ್ಲಿ ಹರಟೆಯ ಲಕ್ಷಣಗಳಲ್ಲಿ ಹರಟೆಯಂತೆಯೂ, ಪ್ರಬಂಧದ ಲಕ್ಷಣಗಳನ್ನು ಪ್ರಬಂಧದ ರೂಪ ದಲ್ಲಿಯೂ ಬರೆಯಲಾಗಿದೆ. 'ಬೋರ್' ಎಂಬ ಪದಕ್ಕೆ ಹರಟೆಯ ಮಲ್ಲ, ಎಂದು ಅರ್ಥಕೊಡುವುದು ಸರಿಯಲ್ಲ ಎಂದು ಹೇಳಿ ಹರಟೆಯ ಮಲ್ಲನ ಲಕ್ಷಣಗಳು, ಹರಟೆಯ ಪರಿಸರ ಪರಿಣಾಮಗಳನ್ನು ವಿವರಿಸುತ್ತಾರೆ. ಹರಟೆಗೆ ಬೇಕಾದ ಪರಿಕರಗಳ ಪರಿಸರಗಳ ಒಂದು ಸೊಗಸಾದ ವಾತಾವರಣವನ್ನೇ ಸೃಷ್ಟಿಸುತ್ತಾರೆ. ಹರಟೆಯ ಅನಿಶ್ಚಿತತೆಯ ನಡುವೆಯೂ ಒಂದು ಹಿತಕರವಾದ ಅನುಭವದ ಕಾವು ಇದೆ. ಹರಟೆಗೂ ಬೈರಿಗೆಗೂ ಇರುವ ಮುಖ್ಯ ವ್ಯತ್ಯಾಸವೆಂದರೆ ಬೈರಿಗೆಯವನದು ಏಕಮುಖವಾದ, ಏಕಪಕ್ಷೀಯವಾದ ವಾಕ್ಪ್ರವಾಹ. ಆದರೆ ಹರಟೆ ಹಾಗಲ್ಲ. ಇದು ಹಲವಾರು ಮಿತ್ರರು ಸೇರಿ ತಮ್ಮನ್ನು ತಾವು ಮರೆತು ಇತರರನ್ನು ಮೈಮರೆಸುವಂತೆ ಮಾಡುವ ಒಂದು ಪ್ರಕಾರ.

ಇನ್ನೇನೂ ಇಲ್ಲದಿದ್ದರೆ ಹರಟೆ ಮನಸ್ಸಿಗೆ ಪ್ರಸನ್ನತೆಯನ್ನಾದರೂ ಕೊಡುತ್ತದೆಯಷ್ಟೆ. ಅದೇನು ಕಡಿಮೆಯ ಪ್ರಯೋಜನವೆ ! (ಪುಟ 213) ಎಂಬ ಭರತವಾಕ್ಯ ಹರಟೆಯ ಮಹತ್ವವನ್ನು ಸಮಗ್ರವಾಗಿ ಆದರೆ ಸಂಕ್ಷಿಪ್ತವಾಗಿ ಹಿಡಿದಿಟ್ಟಿದೆ.

ಪ್ರಬಂಧದ ಲಕ್ಷಣ, ಪ್ರಬಂಧಕಾರನ ಮನೋವೃತ್ತಿಯ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಮಾಡಿದ್ದಾರೆ. ಸ್ವತಃ ಪ್ರಬಂಧಕಾರರಾದ ಮೂರ್ತಿರಾಯರಿಗೆ ಪ್ರಬಂಧಗಳ ಲಕ್ಷಣ ಹಾಗೂ ಸ್ಥಾನಗಳ ಪರಿಚಯ ಚೆನ್ನಾಗಿದೆ. ತಮ್ಮ ಪ್ರಬಂಧವೊಂದನ್ನೇ ಅವರು ಪ್ರಬಂಧ ಲಕ್ಷ್ಯ- ಲಕ್ಷಣಕ್ಕಾಗಿ ಆರಿಸಿಕೊಳ್ಳುತ್ತಾರೆ.

"ನಮ್ಮ ಸುತ್ತಮುತ್ತ ಎಲ್ಲದರಲ್ಲೂ ಶಿಸ್ತು ವ್ಯವಸ್ಥೆಗಳಿರಬೇಕೆಂದು ಲೋಕವೆಲ್ಲ ಒಪ್ಪುತ್ತದೆ. ನಮಗೂ ಅವುಗಳಲ್ಲಿ ನಂಬಿಕೆಯುಂಟು. ಆದರೆ ಶಿಸ್ತನ್ನೇ ದೇವರ

ಮಂದಾಸನದಲ್ಲಿ ಪ್ರತಿಷ್ಠಿಸಿ ಪೂಜೆ ಮಾಡುವವರನ್ನು ಕಂಡಾಗ ಇದೇನು, ಈ ಹಾಳು ಶಿಸ್ತು ಎನ್ನಿಸಿ, ಅದನ್ನು ವಿರೋಧಿಸುವಂತಾಗುತ್ತದೆ. ಆಗ ನಮ್ಮ ಮನಸ್ಸಿನಲ್ಲಿ ಶಿಸ್ತಿಗಿಂತ ಮುಖ್ಯವಾದ ಬೇರೊಂದು ಮೌಲ್ಯಕ್ಕೆ ಪ್ರಾಧಾನ್ಯ." (ಪುಟ 215)

ಶ್ರೀಯುತರ 'ದಿವಾನಖಾನೆಯ ಅಂದ- ಚೆಂದ' ಎಂಬ ಪ್ರಬಂಧದ ವಸ್ತುವನ್ನು ಇಲ್ಲಿ ಸೂಚ್ಯವಾಗಿ ಧ್ವನಿಸಿದ್ದಾರೆ. ಪ್ರಬಂಧದ ವ್ಯಾಪ್ತಿ ಎಷ್ಟು ಎನ್ನುವುದಕ್ಕೆ ಶಿಸ್ತಿಗಿಂತ ಬೇರೊಂದು ಎಂಬ ಮಾತಿನಲ್ಲಿ ಹಲವಾರು ಅರ್ಥಗಳು ಸ್ಫುರಿಸುವಂತೆ ಮಾಡಿದ್ದಾರೆ. 'ಬೇರೊಂದು' ಎಂಬ ಶಬ್ದಕ್ಕೆ ಸಹೃದಯ ತನ್ನ ಮಾನಸಿಕ ಸ್ತರಕ್ಕೆ ಅನುಗುಣವಾಗಿ ಅರ್ಥಕಲ್ಪನೆ ಮಾಡಿಕೊಳ್ಳಬಹುದು. ಹರಟೆಗೆ ಗುರಿಯಿಲ್ಲ........ ಪ್ರಬಂಧಕ್ಕೆ ಗುರಿಯುಂಟು..... (14) ಎಂಬ ಮಾತು ಎರಡರ ಧ್ರುವಾಂತರವನ್ನು ಸೂಚಿಸುತ್ತದೆ (14). ಪ್ರಬಂಧದ ಲಕ್ಷಣಗಳನ್ನು ವ್ಯಾಖ್ಯಾನಿಸುತ್ತಾ ಅವರು ಹೇಳುತ್ತಾರೆ.

"ಹೀಗೆ ಲಗಾಮುಗಳನ್ನು ಪೂರ್ತಿಯಾಗಿ ಕೈಯಿಂದ ಬಿಡದೆ, ಅದರೆ ಸಡಿಲವಾಗಿ ಹಿಡಿದು, ಮನಸ್ಸನ್ನು ಹರಿಯಬಿಟ್ಟು ಆತ್ಮೀಯನೊಬ್ಬನೊಡನೆ ಆಡಿದ ಮಾತಿನಂತಿರುತ್ತದೆ." ಲಲಿತ ಪ್ರಬಂಧ (11)

ಅವನಲ್ಲಿ ಅದು ಭಗ್ಗನೆ ಹತ್ತಿ ಜ್ವಲಿಸುವುದಿಲ್ಲ. ಮೃದುವಾದ ಶಾಖವನ್ನು ಪ್ರಸರಿಸುತ್ತದೆ. ಅದು ಕೋಲ್ಮಿಂಚಲ್ಲ, ಮಿನುಗು ಮಿಂಚು (11).

ಪ್ರಬಂಧದ ಲಕ್ಷಣಕ್ಕೂ ಸಣ್ಣ ಕಥೆಗಳ ಲಕ್ಷಣಕ್ಕೂ ಇರುವ ವ್ಯತ್ಯಾಸವನ್ನು ವಿಮರ್ಶಾತ್ಮಕವಾಗಿ ಹೇಳುತ್ತಾರೆ.

"A loose sally of the mind" ಎಂಬ ಬಣ್ಣನೆಯನ್ನು ನೆನೆದು ಪ್ರಬಂಧದಲ್ಲಿ ಬಂಧವೇ ಇರಬೇಕಾದ್ದಿಲ್ಲವೆಂದು ಭಾವಿಸಿದರೆ ತಪ್ಪಾಗುತ್ತದೆ. ಎಲ್ಲಾ ಸಾಹಿತ್ಯ ರೂಪಗಳಲ್ಲೂ ಒಂದಲ್ಲ ಒಂದು ರೀತಿಯ ಬಂಧವಿರಬೇಕು, ಐಕ್ಯವಿರಬೇಕು. ಈ ಮಾತಿಗೆ ಪ್ರಬಂಧವೇನೂ ವಿನಾಯಿತಿಯಲ್ಲ. ಇಲ್ಲಿ ಸಣ್ಣ ಕಥೆಯ ಅಥವಾ ನಾಟಕದ ಬಂಧದಷ್ಟು ಬಿಗಿಯಿಲ್ಲ ಅಷ್ಟೆ. (ಪುಟ 13)

ಇದು ವಿಮರ್ಶೆಯೇ ಸರಿ. ಇಂತಹ ಸಣ್ಣ ವಾಕ್ಯಗಳಲ್ಲಿ ವಿಮರ್ಶೆಯ ಸೂತ್ರಗಳನ್ನು ಹೇಳುತ್ತಾ ಹೋಗುತ್ತಾರೆ.

'ರೇಡಿಯೋ ನಾಟಕ ಮತ್ತು ರಂಗಭೂಮಿ' ಎಂಬ ವಿಮರ್ಶಾತ್ಮಕ ಲೇಖನದಲ್ಲಿ ರೇಡಿಯೋ ನಾಟಕ ಹಾಗೂ ರಂಗಭೂಮಿಯ ನಾಟಕಗಳಿಗೂ ಇರುವ ಸಾಮ್ಯ ವ್ಯತ್ಯಾಸಗಳನ್ನು ಗುರುತಿಸುತ್ತಾರೆ. ಈ ಎರಡೂ ಪ್ರಕಾರಗಳೂ ಶ್ರವ್ಯ ಮತ್ತು ದೃಶ್ಯ ತಮ್ಮದೇ ವೈಶಿಷ್ಟಗಳಿಂದ ಪ್ರಖ್ಯಾತವಾಗಿದೆ. ಇದೊಂದು ಪ್ರಬಂಧವೂ ಹೌದು ವಿಮರ್ಶೆಯೂ ಹೌದು. ಇದರೊಂದಿಗೆ ಹಿಂದಿನ ನಾಟಕಗಳ ಬಗೆಗೂ ಉಲ್ಲೇಖಿಸಿದೆ. ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದದ್ದು ನಾಟಕವೆಂದರೆ ಒಂದೇ ಅಲ್ಲ. ರಂಗಭೂಮಿಯ ನಟನಿಗೂ, ರೇಡಿಯೋ ನಟನಿಗೂ ಇರುವ ಸ್ವಾತಂತ್ರ್ಯ ಹಾಗೂ ಮಿತಿಗಳನ್ನು ವಿಮರ್ಶಾತ್ಮಕವಾಗಿ ವಿವರಿಸಲಾಗಿದೆ. ಇಲ್ಲಿ ದಾಖಲಾಗಿರುವಂತೆ ಇಬ್ಬರಿಗೂ ಹಲ ಕೆಲವು ಸ್ವತಂತ್ರ ಅವಕಾಶಗಳೂ ಮಿತಿಗಳೂ ಇವೆ. ಹಾಗೆಯೇ ಈ ಎರಡು ಪ್ರಕಾರಗಳನ್ನು follow ಮಾಡುವ ಶ್ರೋತೃ ಪ್ರೇಕ್ಷಕರ ಮಟ್ಟವೂ ಇಲ್ಲಿ ಮುಖ್ಯ. ಒಂದನ್ನು ಕಿವಿಯಿಂದ ಅರ್ಥ ಮಾಡಿಕೊಂಡರೆ ಮತ್ತೊಂದನ್ನು ಕಣ್ಣಿನಿಂದ ಅರ್ಥ ಮಾಡಿಕೊಳ್ಳುವಂತಹದು. ಒಟ್ಟಿನಲ್ಲಿ

ಎರಡೂ ಪ್ರಕಾರಗಳಿಗೂ ತಮ್ಮದೇ ಆದ ಗುಣಾವಗುಣಗಳಿವೆ. ಈ ಪ್ರಬಂಧದಲ್ಲಿ ವಿಮರ್ಶಾತ್ಮಕವಾದ ಒಂದು ಘಟ್ಟ ಪರಿಣಾಮಕಾರಿಯಾಗಿದೆ. (ಉದ್ಧೃತ ಭಾಗ 'ವಿಮರ್ಶಾತ್ಮಕ ಪ್ರಬಂಧಗಳು' ಕೃತಿಯಿಂದ)

ಅವನಿಗೆ ಮಕ್ಕಳಿಲ್ಲವೆ ?

ಇದ್ದಾರೆ (ಪುಟ 22)

ಈ ಸಂಪಾದವನ್ನು ಕುರಿತು ಮಾಡಿದ ಮೂರು Interpretation ಗಳು ಶುದ್ಧ ವಿಮರ್ಶೆಯ ಮಾದರಿಯಾಗಿದೆ.

ಅವರಿಗೆ ಹೊಗಳಿಕೆಯು ಪುಷ್ಪವೃಷ್ಟಿಯೂ ಇಲ್ಲ, ತೆಗಳಿಕೆಯು ಶಿಲಾವೃಷ್ಟಿಯೂ ಇಲ್ಲ. (ಪುಟ 24) ಎಂಬ ಕಾವ್ಯಾತ್ಮಕ ಶೈಲಿ ಹಾಗೂ ವಿಮರ್ಶೆಯ ಸೊಗಸಾದ ಸಂಗಮ.

'ನಮ್ಮ ನಾಟಕ ಹಿಡಿದ ದಾರಿ' ಎಂಬ ಪ್ರಬಂಧ ಅವರ ಆತ್ಮಚರಿತ್ರೆಯಲ್ಲಿ ಬರುವ 'ಆಗಿನ ನಾಟಕಗಳು' ಎಂಬ ಅಧ್ಯಾಯದ ಪಡಿಯಚ್ಚಿನಂತಿದೆ. ಚಾರ್ಲ್ಸ್ ಲ್ಯಾಂಬ್‌ನ Comedy of the last century ಎಂಬ ಪ್ರಬಂಧದೊಂದಿಗೆ ಹೋಲಿಸಬಹುದಾಗಿದೆ. ಇದೊಂದು ಕರ್ನಾಟಕ ನಾಟಕ ರಂಗಭೂಮಿಯ ಪರಂಪರೆಯನ್ನು ಭೂತವನ್ನು ವರ್ತಮಾನವನ್ನಾಗಿಸುವ ಪ್ರಯತ್ನ. ನಾಟಕದ ಅವನತಿಗೆ ಕಾರಣಗಳು, ಈ ಶತಮಾನದ ಆದಿಭಾಗದ ನಾಟಕಗಳ ಬೆಳವಣಿಗೆ, ಕ್ರಾಂತಿ ಬದಲಾವಣೆ, ಸುಧಾರಣೆಗಳು, ಅಂದಿನ ಉದ್ದಾಮ ನಟರು - ಈ ಅಂಶಗಳ ಕೂಲಂಕಷ ವಿಚಾರಧಾರೆ ಇಲ್ಲಿದೆ. ಇಲ್ಲಿನ ಮತ್ತೊಂದು ಮುಖ್ಯ ಅಂಶವೆಂದರೆ ಒಂದು ತೌಲನಿಕ ವಿಮರ್ಶೆ. ಸಾಫೋಕ್ಲೆಸ್, ಷೇಕ್ಸ್‌ಪಿಯರ್ ಕಾಲದ ರಂಗಭೂಮಿಯ ಬಗ್ಗೆಯೂ ಇಲ್ಲಿ ಸಂಕ್ಷಿಪ್ತವಾಗಿ ಉಲ್ಲೇಖಿಸಲಾಗಿದೆ. ಹೀಗೆ ಪೌರ್ವಾತ್ಯ ಪಾಶ್ಚಿಮಾತ್ಯ ರಂಗಭೂಮಿಗಳ ಬಗ್ಗೆ ತೌಲನಿಕವಾಗಿ ಚರ್ಚಿಸಲಾಗಿದೆ. ಇಲ್ಲಿ ನಾಟಕ, ನಟ, ಪ್ರೇಕ್ಷಕ, ಸಮಾಜ, ಸಂಗೀತ, ಸಾಹಿತ್ಯ ಈ ಪರಸ್ಪರ ಪೂರಕ ಪೋಷಕ ಅಂಶಗಳ ಪರಸ್ಪರ ಸಂಬಂಧಗಳನ್ನು ಕುರಿತು ಮಾಡಿದ ವಿವೇಚನೆ ಅರ್ಥಪೂರ್ಣ.

'ಜನರು ಬೇಡಿದ್ದು ಮದ್ಯ, ಷೇಕ್ಸ್‌ಪಿಯರ್ ಕೊಟ್ಟಿದ್ದು ಅಮೃತ' (ಪುಟ 38)

ಎಂಬಲ್ಲಿ ನಾಟಕ ಜನಾಭಿರುಚಿಯ ಪರಸ್ಪರ ಸಂಬಂಧ ನಾಡಿನ ಒಳ ಹೊರಗೆ ಹೇಗೆ ಹಬ್ಬಿದೆ ಎಂದು ವ್ಯಕ್ತವಾಗಿದೆ. ಷೇಕ್ಸ್‌ಪಿಯರ್, ಕಾಳಿದಾಸ, ಶೂದ್ರಕ, ಕೈಲಾಸಂ, ಶ್ರೀ ಮಾಸ್ತಿ, ಕುವೆಂಪು, ಕಾರಂತ, ಗೋಕಾಕ, ಶ್ರೀರಂಗ , ವಿಸೀ ಮುಂತಾದವರು ನಾಟಕ ಕಲೆಗೆ ನೀಡಿದ ಕೊಡುಗೆಯನ್ನು ಕುರಿತು ಇಲ್ಲಿ ಸ್ವಲ್ಪದರಲ್ಲಿ ಉಲ್ಲೇಖಿಸಿದೆ. ಒಂದು ಮಹಾಪ್ರಬಂಧಕ್ಕೆ ವಿಷಯವಾಗಬಲ್ಲ ವಸ್ತುವನ್ನು ಇಪ್ಪತ್ತು ಪುಟಗಳಲ್ಲಿ ಹಿಡಿದಿಟ್ಟಿರುವುದು ಸೋಜಿಗದ ಸಂಗತಿ.

'ಸಾಕ್ರಟೀಸ್', 'ಪಾರಸಿಕರು', 'ಕನಸಿನ ಮನೆ' ಹಾಗೂ 'ಪರದೆಯ ಹಿಂದೆ' ಈ ನಾಲ್ಕು ಪ್ರಬಂಧಗಳು ಆಯಾ ಕೃತಿಗಳಿಗೆ ಬರೆದ ಮುನ್ನುಡಿಗಳು. ಈ ಮುನ್ನುಡಿಗಳ ವಿಶೇಷ ಲಕ್ಷಣವೆಂದರೆ ಮೂರ್ತಿರಾಯರು ಆ ಕೃತಿಗಳನ್ನು ಕುರಿತು ಮಾಡಿದ ಅಧ್ಯಯನ. ಮುಂದಿನ ಕೃತಿ ಪ್ರವೇಶಕ್ಕೆ ಮೊದಲು ನಮಗೆ ಆರಂಭದಲ್ಲಿ ಸಿಗುವ ಒಂದು ಕಿರುಪರಿಚಯ.

ಮೂರ್ತಿರಾಯರು "ಸಾಕ್ರಟೀಸನ ಕೊನೆಯ ದಿನಗಳು" ಎಂಬ ಕೃತಿಯೊಂದನ್ನು ಅನುವಾದಿಸಿದರು. ತಮ್ಮ ಕೃತಿಗೆ ತಾವೇ ಸ್ವತಃ ಒಂದು ವಿದ್ವತ್ಪೂರ್ಣ ಮುನ್ನುಡಿಯನ್ನು ಬರೆದರು. ಸುಮಾರು 35 ಪುಟಗಳ ದೀರ್ಘವಾದ ಅವತರಣಿಕೆಯಲ್ಲಿ ಸಾಕ್ರಟೀಸನ ಕಾಲದ ಗ್ರೀಸ್ ದೇಶದ ಒಂದು ಚಿತ್ರಣವನ್ನು ನಮ್ಮ ಮುಂದೆ ಬರುವಂತೆ ಮಾಡಿದ್ದಾರೆ. ಅವನ ಕಾಲದ ಸಾಮಾಜಿಕ, ರಾಜಕೀಯ ಪರಿಸ್ಥಿತಿ, ಸಾಕ್ರಟೀಸನ ಜೀವನ, ಅವನ ಜ್ಞಾನಪಾರಮ್ಯ, ಆತ್ಮಸಂಯಮ, ಚಿತ್ತಶುದ್ಧಿ ಈ ಎಲ್ಲದರ ಬಗ್ಗೆಯೂ ಒಂದು ವಿಸ್ತೃತ ವ್ಯಾಖ್ಯಾನ ಇದೆ. ಓದುಗನನ್ನು ಗ್ರೀಸ್ ದೇಶಕ್ಕೆ, ಅದೂ ಆ ಕಾಲಕ್ಕೆ, ಕೊಂಡೊಯ್ಯು ಚಿಂತನೆಗೆ ಎಡೆಮಾಡಿಕೊಡುವಂತಹ ಘಟ್ಟಗಳಿವೆ.

ನಮ್ಮ ಸುಖದುಃಖಗಳು, ಸಣ್ಣಪುಟ್ಟ ಆಸೆಗಳು, ಜೀವನದ ಭ್ರಮೆ - ಇವೆಲ್ಲವನ್ನೂ ತಿಳಿಯಬಲ್ಲವನಾದರೂ ಅವುಗಳನ್ನು ಮೀರಿ ನಿಂತು ಪ್ರಪಂಚವನ್ನು ನೋಡುತ್ತಿದ್ದಾನೆ. ಮರಣವು ಅವನನ್ನು ಜಯಿಸಲಾರದು, ಅವನೇ ಮರಣವನ್ನು ಜಯಿಸಿದ್ದಾನೆ.

(ಪುಟ 78)

ಎಂಬ ಮಾತು ಸಾಕ್ರಟೀಸನ ಜೀವನದ ಮಹತ್ವವನ್ನು ಪ್ರತಿಬಿಂಬಿಸುವಂತಹದು. ಸಾಕ್ರಟೀಸನ ಜೀವನ ಸಾಧನೆ ಸಿದ್ಧಿಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡ ಪ್ರಬಂಧಕಾರರು ಅಂತಹ ಚೇತನದ ಅವತಾರವನ್ನು ಒತ್ತಿ ಹೇಳುತ್ತಾರೆ.

"ಬಗೆಬಗೆಯ ಮಾಯೆಗೂ ರಾಗದ್ವೇಷಾದಿಗಳಿಗೂ ಸಿಕ್ಕಿ ಸತ್ಯದ ಅಚ್ಚಳಿಯದ ನಿರ್ಮಲ ಜ್ಯೋತಿಯನ್ನು ನೋಡಲು ಎಳಸುವುದು ಸಹಾ ಇಲ್ಲದಿರುವ ನಮ್ಮನ್ನು ಕೈ ಹಿಡಿದು ಆ ಕಡೆಗೆ ತಿರುಗಿಸುವವರು ಸಾವಿರ, ಎರಡು ಸಾವಿರ ವರ್ಷಗಳಿಗೆ ಒಬ್ಬೊಬ್ಬ ರಾದರೂ ಬೇಕು". (ಪುಟ 79)

ಮೂರ್ತಿರಾಯರ ಗುರುಗಳಾಗಿದ್ದ ಪ್ರೊ. ಬಿ.ಎಂ. ಶ್ರೀ ಯವರು ಕನ್ನಡಿಸಿದ ಸುಪ್ರಸಿದ್ಧ ಗ್ರೀಕ್ ನಾಟಕಕಾರ ಈಸ್ಕಿಲಸ್‌ನ 'ಪಾರಸಿಕರು' ನಾಟಕಕ್ಕೆ ಬರೆದ ಮುನ್ನುಡಿ 'ಪಾರಸಿಕರು' ಎಂಬ ವಿಮರ್ಶಾತ್ಮಕ ಪ್ರಬಂಧ. ಪ್ರಬಂಧದ ಆರಂಭವಾಕ್ಯಗಳೇ ಒಂದು ಸೈದ್ಧಾಂತಿಕ ನಿಲುವನ್ನು ಕುರಿತು ಸೂಚಿಸುವಂತಿವೆ.

'ಸಾಹಿತ್ಯದಲ್ಲೂ ಕಲೆಯಲ್ಲೂ ಒಂದು ಶತಮಾನದಿಂದ ಮತ್ತೊಂದಕ್ಕೆ ಸ್ಪಷ್ಟವಾದ ಪ್ರಗತಿ ಕಂಡು ಬರುವುದಿಲ್ಲ. ಅಂದರೆ ಹಿಂದಿನ ಸಾಹಿತಿಗಳಿಗಿಂತ ಮುಂದಿನವರು ಉತ್ತಮರಾಗುತ್ತಾರೆಂದು ಧೈರ್ಯವಾಗಿ ಹೇಳಲಾಗುವುದಿಲ್ಲ.' (ಪುಟ 80)

ಇಷ್ಟು ಹೇಳಿ, ಈ ಸಿದ್ಧಾಂತದ ವ್ಯಾಖ್ಯಾನವೋ ಎಂಬಂತೆ ಮುನ್ನುಡಿಯ ವಿಸ್ತಾರ ರೂಪ ಇಪ್ಪತ್ತೊಂದು ಪುಟಗಳಲ್ಲಿ ಹರಿದಿದೆ.

ಈಸ್ಕಿಲಸ್‌ನ ಕಾಲದ ಗ್ರೀಸ್ ದೇಶದ ಸಾಮಾಜಿಕ ರಾಜಕೀಯ, ರಾಷ್ಟ್ರೀಯ ಸ್ಥಿತಿಗತಿಗಳು, ಯುದ್ಧಗಳು ಇತ್ಯಾದಿಗಳನ್ನು ಉಲ್ಲೇಖಿಸಿದ್ದಾರೆ. ಈಸ್ಕಿಲಸ್‌ನ ವೈಯಕ್ತಿಕ ಜೀವನ, ಅವನ ಜೀವನದ ಏರುಪೇರುಗಳೂ ಇಲ್ಲಿ ಚಿತ್ರಿತವಾಗಿವೆ. ಇವರೊಂದಿಗೆ ಇಂದು ಇಂಗ್ಲೀಷ್ ಸಾಹಿತ್ಯ (ನಾಟಕ) ಪ್ರೇಮಿಗಳಿಗೆ ಚಿರಪರಿಚಿತವಾದ, ಪಾರಿಭಾಷಿಕ ಶಬ್ದ–ಟ್ರಾಜಿಡಿಯ ನಿಷ್ಪತ್ತಿ, ಬೆಳವಣಿಗೆ, ಕಾಲಕಾಲಕ್ಕೆ ಆದ ಮಾರ್ಪಾಟುಗಳನ್ನು ಇಲ್ಲಿ ಹೇಳಿದ್ದಾರೆ. ಅದರಲ್ಲೂ ಈಸ್ಕಿಲಸ್‌ನ ಕಾಲಕ್ಕೆ ಮುಂಚೆ ಇದ್ದ ನಾಟಕ ತಂತ್ರ, ಅವನು ಮಾಡಿದ ಸುಧಾರಣೆಗಳು ಇತ್ಯಾದಿಗಳನ್ನೂ ಹೇಳಿದ್ದಾರೆ. ಆದ್ದರಿಂದ ಈ ಪ್ರಬಂಧ ಕೇವಲ

ಔಪಚಾರಿಕವಾದ ಮುನ್ನುಡಿಯಾಗಿರದೆ, ಪಾರಿಭಾಷಿಕವಾಗಿ ವಿಮರ್ಶಾತ್ಮಕ ಲಕ್ಷಣಗಳನ್ನು ಹೊಂದಿದೆ. ಜೊತೆಗೆ ನಮಗೆ ಗ್ರೀಕ್ ನಾಟಕಗಳ ಸ್ವರೂಪದ ಸಂಕ್ಷಿಪ್ತ ಪರಿಚಯವೂ ಆಗುತ್ತದೆ. ಅಂದಿನ ಯುಗಧರ್ಮದ ಪಟ್ಟವಾದ ಪ್ರಭಾವ ಈ ನಾಟಕ ಕೃತಿಯ ಮೇಲೆ ಎಷ್ಟರಮಟ್ಟಿಗೆ ಆಗಿದೆ ಎಂಬ ವಿಚಾರವೂ ಇಲ್ಲಿ ಹೇಳಲಾಗಿದೆ. ಹೀಗೆ ಸ್ವೋಪಜ್ಞತೆ ಮೆರೆಸುವ ಪಾತ್ರ ಎಂತಹ ಮಹತ್ವದ್ದು ಎಂಬುದೂ ನಮಗೆ ಅರಿವಾಗುತ್ತದೆ. ಕವಿ ಕೃತಿಗಳ ಪರಸ್ಪರ ಸಂಬಂಧದ ಬಗ್ಗೆ ಒಂದು ವಿಮರ್ಶಾತ್ಮಕ ವಿಶ್ಲೇಷಣೆಯೂ ಇಲ್ಲಿದೆ.



" 'ಪಾರಸೀಕರು' ಐತಿಹಾಸಿಕ ನಾಟಕವೂ ಹೌದು, ಸಾಹಿತ್ಯವೂ ಹೌದು." (ಪುಟ 86) ಎಂಬ ಮಾತಿನಲ್ಲಿ ಸಾಹಿತ್ಯ ಕೃತಿ ಹಾಗೂ ವಸ್ತುಗಳ ಅವಿನಾದ್ವೈತ ಸಂಬಂಧವೂ ಪರಸ್ಪರ ಸಾಂಗತ್ಯವೂ ವ್ಯಕ್ತವಾಗಿದೆ. ಏಕೆಂದರೆ ಯಾವುದೇ ಸಾಹಿತ್ಯ ಕೃತಿಗೆ ಒಂದು ಕಥಾವಸ್ತು ಅತ್ಯಗತ್ಯ. ಸಾಹಿತ್ಯ ಹಾಗೂ ವಸ್ತುಗಳ ಪರಸ್ಪರ ಸಂಬಂಧವನ್ನು ಡಾ. ಎಸ್. ಎಲ್. ಭೈರಪ್ಪನವರು "ಕಥೆ ಮತ್ತು ಕಥಾವಸ್ತು" ಕೃತಿಯಲ್ಲಿ ಹೀಗೆ ಹೇಳಿದ್ದಾರೆ.

"ತಪ್ಪು ತಿಳುವಳಿಕೆಗೆ ಅವಕಾಶವಾಗದಂತೆ ನಾವು ಇದೇ ಮಾತನ್ನು ಇನ್ನೊಮ್ಮೆ ಹೇಳಬೇಕು. ಜೀವನವೆಲ್ಲವೂ ಇತಿಹಾಸದ ಒಂದು ಭಾಗವೇ. ಆ ಜೀವನವನ್ನು ಕುರಿತು ಬರೆಯುವ ಸಾಹಿತಿಯು ಇತಿಹಾಸದ ಭಾಗವನ್ನೇ ಬರೆಯುತ್ತಾನೆ. ಆದರೆ ಅತ್ಯಂತ ಸಂಕೀರ್ಣವೂ ಬೆಳೆಯುಳಿಸದಳವೂ ಆದ ವಿವರಗಳನ್ನು ಮತ್ತು ಅಸಂಖ್ಯಾತ ಘಟನೆಗಳನ್ನೊಳಗೊಂಡ ಜನಜೀವನದ ಸಮಗ್ರ ಇತಿಹಾಸವನ್ನು ಯಾವ ಇತಿಹಾಸಕಾರನೂ ಬರೆಯಲಾರ. ಒಂದು ದೇಶದ, ಒಂದು ಜನಾಂಗದ ಅಥವಾ ಒಂದು ಪರಂಪರೆಯ ಒಳನಡೆಯ ಒಂದು ಮುಖದಲ್ಲಿ ಸ್ಥೂಲವಾಗಿ ವರ್ಣಿಸುತ್ತಾನೆ. ಅವನು ಚಿತ್ರಿಸುವ ಅಂಶವು ಅನಂತವಾಗಿ ಆಂಶಿಕವಾದುದು. ಆದರೆ ಈ ಆಂಶಿಕ ಗೆರೆಗಳ ಆಧಾರದಿಂದಲೇ ನಾವು ನಮ್ಮ ನೋಟಕ್ಕೆ ಸಿಲುಕದೆ ಮರೆಯಾಗಿ ಹೋಗಿರುವ ಇತರ ವಿವರಗಳನ್ನು ತನ್ನ ವಸ್ತುವನ್ನಾಗಿ ಮಾಡಿಕೊಳ್ಳುವ ಸಾಹಿತ್ಯ ಕೃತಿಯ ವಸ್ತುವನ್ನು ಅದರ ಸರಿಯಾದ ಸ್ಥಾನದಲ್ಲಿ ಕಲ್ಪಿಸಿಕೊಳ್ಳುವುದು ಭವಿಷ್ಯದ ವಾಚಕರಿಗೆ ಸುಲಭವಾಗುತ್ತದೆ. ಆದುದರಿಂದ ಜೀವನದ ಆಳ ವಿಸ್ತಾರಗಳನ್ನು ಮೈದುಂಬಿಕೊಳ್ಳುವ ಸಾಹಿತ್ಯ ಕೃತಿಯು ಐತಿಹಾಸಿಕವಾಗಿ ಪ್ರಸಿದ್ಧವಾದ ಯಾವುದಾದರೊಂದು ಘಟನೆಯೊಡನೆ ತನ್ನ ಸಂಬಂಧವನ್ನು ತೋರಿಸಿಕೊಳ್ಳಬೇಕು.

(1969 ಪುಟ 6–7)

ವಾಚಕ ಹಾಗೂ ಕಥಾವಸ್ತುವಿನ ವ್ಯಾಪ್ತಿಗಳ ನಡುವಿನ ಸಂಬಂಧ ಸುಸ್ಪಷ್ಟವೂ ಅಸ್ಖಲಿತವೂ ಆಗಿದ್ದರೆ ಮಾತ್ರ ಸಾಹಿತ್ಯಾರಾಧನೆ ಸಫಲವಾಗುತ್ತದೆ. ನಾವು ನೇರವಾಗಿ ಕೃತಿಲೋಕವನ್ನು ಪ್ರವೇಶಿಸುವುದಕ್ಕಿಂತ ಅದರ ಪೂರ್ವ ಪರಿಚಯ ನಮಗೆ ಕೊಂಚವಾದರೂ ಇರುವುದು ಒಳ್ಳೆಯದು. ಆದ್ದರಿಂದಲೇ ಮುನ್ನುಡಿಗಳು ಒಂದು ರೀತಿಯ ಮಾನಸಿಕ ಸಿದ್ಧತೆಯನ್ನು ಮಾಡಿಕೊಡುತ್ತವೆ. ಇದೊಂದು ಬಗೆಯ ಮಾನಸಿಕ ಪೂರ್ವ ಸಿದ್ಧತೆ, ತರಬೇತಿ. ಇಂತಹ ರಂಗ ತರಬೇತಿ ನಮಗೆ ಹಲವು ದೃಷ್ಟಿಗಳಿಂದ ಅತ್ಯಗತ್ಯ. ಮೂರ್ತಿರಾಯರ ಈ ಮುನ್ನುಡಿಯಲ್ಲಿ ಗ್ರೀಕ್ ನಾಟಕಗಳನ್ನು ಓದಲು, ಓದಿ ಅರ್ಥ ಮಾಡಿಕೊಳ್ಳಲು ನಮಗೆ (ಗ್ರೀಕೇತರರಿಗೆ)ಒಂದು ರಂಗ ತರಬೇತಿ ಸಂಸ್ಕಾರ ಲಭಿಸುತ್ತದೆ. ಜೊತೆಗೆ ನಾವು ಈಸ್ಕಿಲಸ್‌ನ ಪೂರ್ವನಾಟಕಗಳನ್ನು ಓದಿದ್ದರೆ ನಮಗೆ

ತಲೆದೋರಬಹುದಾದ ಗೊಂದಲ, ಸಂದೇಹ, ಸಂಶಯಗಳು ನಿವಾರಣೆಯಾಗಿ ನಾಟಕ ವಾಚನ ನಿರ್ದುಷ್ಟವೂ, ಸಂಶಯಾತೀತವೂ ಆಗಿ ಮಾರ್ಪಡುತ್ತದೆ. ವಾಚಕ ಸಹೃದಯನಾಗಿ ಆ ಮಟ್ಟಕ್ಕೇರಲು ಅವನಿಗೆ ಕವಿತಾ ಹೃದಯವೂ ಕವಿಗಿರುವ ಸಾಮರ್ಥ್ಯವ ಕಲ್ಪನೆಯೂ ಅಗತ್ಯ. ಆದುದರಿಂದ ಯಾವುದೇ ಕೃತಿಯಿರಲಿ, ಕವಿಯಿಂದ ಅಥವಾ ಇತರರಿಂದ ಬರೆಯಲ್ಪಟ್ಟ ಮುನ್ನುಡಿಗಳು ಕೃತಿಯ ಹೃದಯವನ್ನು ನೇರವಾಗಿ ಪ್ರವೇಶಿಸಲು ವಹಿಸುವ ಪಾತ್ರ ಅತ್ಯಂತ ಮಹತ್ವದ್ದು. ವಾಚಕನಿಗೆ ಮುನ್ನುಡಿಯ ವಿವರಣಾತ್ಮಕವಾದ ಮುನ್ನುಡಿಯ ಅಗತ್ಯವನ್ನು ಡಾ. ಎಸ್. ಎಲ್. ಭೈರಪ್ಪನವರು ಹೀಗೆ ಅಭಿಪ್ರಾಯಪಡುತ್ತಾರೆ.

"ಅದರಲ್ಲಿ ಬರುವ ಜೀವನವು ಯಾವ ಕಾಲಕ್ಕೆ ಯಾವ ದೇಶಕ್ಕೆ ಸೇರಿರುವುದು ಎಂಬ ಪ್ರಜ್ಞೆಯು ಸಾಹಿತಿಯ ಕಲ್ಪನೆಯ ಆಧಾರ ಪ್ರಜ್ಞೆಯಲ್ಲಿರುವಂತೆ ವಾಚಕನ ಪ್ರಜ್ಞೆಯಲ್ಲಿಯೂ ಇರಬೇಕು. ವಾಚಕನ ಸಾಮಾನ್ಯ ಬುದ್ಧಿಗೆ ತಿಳಿದಿರುವ ಒಂದು ಕಾಲವನ್ನೂ ದೇಶವನ್ನೂ, ನಿರ್ದೇಶಿಸುವುದರಿಂದ ಆ ಸಾಹಿತ್ಯ ಕೃತಿಯ ಒಡಲನ್ನು ತನ್ನ ಮನಸ್ಸಿನಲ್ಲಿ ಚಿತ್ರಿಸಿಕೊಳ್ಳುವುದು ಅವನಿಗೆ ಸುಲಭವಾಗುತ್ತದೆ". (ಅದೇ ಪುಟ 7-8)

ಮೂರ್ತಿರಾಯರು ಅಲ್ಲಲ್ಲಿ ಈ ನಾಟಕ ಕನ್ನಡಿಗರಿಗೆ ಹೇಗೆ ಹೊಸತು ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಒಂದು ಭಾಷಾಂತರ ಆ ಭಾಷೆಯನ್ನಾಡುವ ಜನರಲ್ಲಿ ಎಲ್ಲಿ ನಿಲ್ಲುತ್ತದೆ ಎಂಬುದು ಅತಿ ಮುಖ್ಯ. ಏಕೆಂದರೆ ಒಂದು ದೇಶೀಯ ಸಂಸ್ಕೃತಿ, ಪರಂಪರೆ, ಸಂಪ್ರದಾಯ ರೂಢಿಗಳಿಗೆ ಒಗ್ಗಿಕೊಂಡ ಮನಸ್ಸು ತದ್ವಿರುದ್ಧವಾದುದನ್ನು ಬರಮಾಡಿ ಕೊಳ್ಳಲಾರದು, ಒಪ್ಪಲಾರದು. ಸೀತಾರಾಮರ ಆದರ್ಶ ದಾಂಪತ್ಯವನ್ನು ಒಪ್ಪಿಕೊಂಡು ಆರಾಧಿಸಿದ ಭಾರತೀಯ ಮನಸ್ಸು, ಕ್ಲಾಡಿಯಸ್ ದೊರೆ ಹಾಗೂ ಹ್ಯಾಮ್ಲೆಟ್‌ನ ತಾಯಿಯ ಸಂಬಂಧವನ್ನು ಓದಿ ಜಿಗುಪ್ಸೆಪಡುತ್ತದೆ. ಇಂತಹ ಸಂದರ್ಭದಲ್ಲಿ ಮೂರ್ತಿರಾಯರ

"ಕನ್ನಡನಾಡಿನ ಓದುಗರು ಇದನ್ನು ಓದುವಾಗ ಸ್ವಲ್ಪ ಜಡರಾಗಿ ಕುಳಿತು ಕೊಳ್ಳಬಹುದು. ಆದರೆ ಗ್ರೀಕರ ರಕ್ತ ಆಗ ಅತಿ ವೇಗದಿಂದ ಓಡುತ್ತಿದ್ದಿರಬೇಕು." (ಪುಟ 96) ಎಂಬ ತೌಲನಿಕ ಅಭಿಪ್ರಾಯ ಗಮನಾರ್ಹ. ನಾಟಕ ವಸ್ತುವಾದ ಗ್ರೀಕರು ಪಾರಸಿಕರು ಘರ್ಷಣೆಯನ್ನು ವಿವರಿಸುತ್ತಾ,

"ದರ್ಯವೃಷನ ಮುಂದೆ ಮಾತಾಡಲೂ ಧೈರ್ಯವಿಲ್ಲದೆ ಕುನ್ನಿಗಳಂತೆ ನಿಲ್ಲುವ ಪಾರಸಿಕರಿಗೂ 'ತಮ್ಮ ತಾವೆ ಆಳ್ವ' ಗ್ರೀಕರಿಗೂ ಎಷ್ಟು ತಾರತಮ್ಯ."

(ಪುಟ 97)

ಎಂದು ಹೇಳುವ ಮಾತಿನಲ್ಲಿ ಎರಡು ಜನಾಂಗದ ಸ್ವಭಾವದ ಅರ್ಥವಾಗುತ್ತದೆ. ಈ ಪ್ರಬಂಧದ ಉದ್ದಕ್ಕೂ ಪಾತ್ರಗಳ ಘಟನೆಗಳ ವಿಮರ್ಶೆ ನಡೆದಿದೆ. ದರ್ಯವೃಷ, ಕ್ಷಯಾರ್ಷ, ಹುತೌಶ ಮುಂತಾದ ಪಾತ್ರಗಳ ವಿಮರ್ಶಾತ್ಮಕ ಚಿತ್ರಣ ಕಣ್ಣ ಮುಂದೆ ಇದ್ದು, ಕೃತಿಯನ್ನು ಓದಿದಾಗ ನಮಗೆ ಅದರ ಪರಿಪೂರ್ಣತೆಯ ಅರಿವಾಗುತ್ತದೆ. ಆದ್ದರಿಂದಲೇ ಈ ಮುನ್ನುಡಿಯೊಂದು ಮಹತ್ವಪೂರ್ಣವಾದುದು.

ವಿಮರ್ಶಕ ತಾನು ವಿಮರ್ಶೆಗೆ ಕೈಗೆತ್ತಿಕೊಂಡಿರುವ ಕೃತಿಯನ್ನು ತೂಗಿ ನೋಡಿ ಬೆಲೆ ಕಟ್ಟುತ್ತಾನೆ. ಇಲ್ಲಿ ಮೂರ್ತಿರಾಯರು ವಿಮರ್ಶಕನ ನೆಲೆಯಲ್ಲಿ ಒಂದು ಮಾತು ಹೇಳುತ್ತಾರೆ. ಅದು ಈ ಲೇಖನದ ಭರತವಾಕ್ಯವೂ ಹೌದು. ಅವರು ಹೇಳುತ್ತಾರೆ.

“ಇಷ್ಟೆಲ್ಲವು ಹೊಸತು ಕನ್ನಡಿಗನ ಹೊಸತು. ಈ ಶಕ್ತಿ ಬಳೆತರೆ ಎಂಥ ಫಲವನ್ನು ಕೊಡುತ್ತದೆಂಬುದನ್ನು ತಿಳಿಯಬೇಕಾದರೆ `ಆಗಾಮೆಮ್ನನ್' ನಾಟಕವನ್ನು ಓದಬೇಕು. ಶ್ರೀಯವರು ಮನಸ್ಸು ಮಾಡಿದ್ದರೆ ಅದನ್ನು ನಮಗೆ ಕೊಡಬಹುದಾಗಿತ್ತು. ಆ ನಾಟಕಕ್ಕೆ ಅವರ ಕೈ ಚಳಕವೇ ಬೇಕು. ಅಂಥ ಸಹೃದಯತೆಯೇ ಬೇಕು. ಆದರೆ ನಮ್ಮ ಅದೃಷ್ಟ ಮೊಟಕಾಯಿತು. (ಅದೇ ಪುಟ 100)

ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದುದು ವಿಮರ್ಶಕನ ದಿಗ್ದರ್ಶನ. ಒಂದು ಕೃತಿ ಯಾವಾಗಲೂ ಮತ್ತೊಂದು ಕೃತಿಯ ಹಿಂದೋ ಮುಂದೋ ನಿಂತಿರುತ್ತದೆ. ಆ ಕೃತಿಯನ್ನು ಮತ್ತೊಂದು ಕೃತಿಯೊಂದಿಗೆ ಸಮನ್ವಯಗೊಳಿಸಿಕೊಂಡು ಓದಿದಾಗಲೇ ನಮಗದರ ಪೂರ್ಣಸ್ವರೂಪದ ದರ್ಶನವಾಗುತ್ತದೆ. ಎರಡೂ ಕೃತಿಗಳಿಗೆ ಇವರು ಕಟ್ಟಿದ ಸೇತುವೆಯ ಮೇಲೆ ನಾವು ನಡೆದು ಹೋದರೆ ಎರಡು ತೀರಗಳು ಒಂದಾದಂತೆ.

`ಕನಸಿನ ಮನೆ' ಹಾಗೂ `ಪರದೆಯ ಹಿಂದೆ' ಕೃತಿಗಳಿಗೆ ಬರೆದ ಮುನ್ನುಡಿಗೂ ಈ ಮೇಲ್ಕಂಡ ಮಾತುಗಳನ್ನೇ ಅನ್ವಯಿಸಬಹುದು. ಮೊದಲನೆಯ ಮುನ್ನುಡಿ ಕೊಂಚ ಕಿರಿದಾಗಿದರೂ ಮನಶ್ಶಾಸ್ತ್ರೀಯ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾದ ಪಾತ್ರಗಳ ಪರಿಚಯ ಅಪೂರ್ವ. ಎರಡನೆಯ ಮುನ್ನುಡಿ ತುಸು ದೀರ್ಘ. ಸುಮಾರು ಎಂಟು ಪುಟಗಳ ಈ ಮುನ್ನುಡಿ ನಮಗೆ ಆ ಕೃತಿಯನ್ನು ಓದಿ ಅರ್ಥ ಮಾಡಿಕೊಳ್ಳುವಲ್ಲಿ ತುಂಬಾ ನೆರವಾಗುತ್ತದೆ. ಒಂದು ಒಳ್ಳೆಯ ಮುನ್ನುಡಿಯು ಒಳ್ಳೆಯ ಪ್ರಬಂಧವೂ, ವಿಮರ್ಶೆಯೂ ಆಗುತ್ತದೆ ಎಂಬುದನ್ನು ಇಲ್ಲಿ ತೋರಿಸಿಕೊಡಲಾಗಿದೆ.

ಷೇಕ್ಸ್‌ಪಿಯರ್‌ನನ್ನು ಕುರಿತ ಎರಡು ಲೇಖನಗಳು ಎರಡು ರೀತಿಯಾಗಿದೆ. ಒಂದು ಷೇಕ್ಸ್‌ಪಿಯರ್‌ನ ನಾಟಕಗಳು ಕನ್ನಡದಲ್ಲಿ ಭಾಷಾಂತರ ರೂಪಾಂತರಗೊಂಡುದನ್ನು ಕುರಿತಾಗಿದೆ. ಇನ್ನೊಂದು ಷೇಕ್ಸ್‌ಪಿಯರ್ ಕಾಲದ ರಾಜಕೀಯ ಚಿತ್ರಣ. ಷೇಕ್ಸ್‌ಪಿಯರ್ ಎಲ್ಲರಂತೆ ಕನ್ನಡಿಗರಿಗೂ ಚಿರಪರಿಚಿತವಾದ ಕವಿ, ನಾಟಕಕಾರ. ಅವನ ಹಲವು ನಾಟಕಗಳು ಕನ್ನಡ ನಾಡಿನಲ್ಲಿ ಭಾಷಾಂತರವಾದವು, ಮರುಹುಟ್ಟನ್ನೂ ಪಡೆದವು. ಇಂಗ್ಲೀಷ್ ಓದಲು ಬಾರದವರೂ ಸಹಾ ಇಂಗ್ಲೀಷ್ ಬಲ್ಲವರಿಂದ ಓದಿಸಿ ಕೇಳಿ ಅವರ ರೂಪಾಂತರಗಳನ್ನು ಮಾಡಿದರು. ಆದರೆ ಇವು ಸಂಪೂರ್ಣ ದೋಷವಿವರ್ಜಿತವೆಂದು ಹೇಳಲಾಗುವುದಿಲ್ಲ. ಏಕೆಂದರೆ ಇಂಗ್ಲೀಷ್ ಓದಲು, ಓದಿ ಶಬ್ದಾರ್ಥ ಕಲ್ಪನೆ ಮಾಡಲು ಬಂದ ಮಾತ್ರಕ್ಕೆ ಷೇಕ್ಸ್‌ಪಿಯರ್ ಕೃತಿಗಳು ಅರ್ಥವಾದವು ಎಂದು ಹೇಳುವಂತಿಲ್ಲ. ಇಂತಹ ಹಲವು ಸನ್ನಿವೇಶಗಳನ್ನು ಈ ಪ್ರಬಂಧದಲ್ಲಿ ಎತ್ತಿ ತೋರಿಸಿದ್ದಾರೆ. ಎಷ್ಟೋ ವರ್ಷಗಳ ಹಿಂದೆ ಇದ್ದ ಕೃತಿಗಳನ್ನು ಸಂಗ್ರಹಿಸಿ, ಅವುಗಳನ್ನು ಮೂಲದೊಂದಿಗೆ ಹೋಲಿಸಿ ನೋಡುವ ತೌಲನಿಕ ಅಧ್ಯಯನ ಅತ್ಯಂತ ಶ್ರಮಸಾಧ್ಯವಾದುದು. ನಿದರ್ಶನಕ್ಕೆ ಈ ಪಂಕ್ತಿಗಳನ್ನು ಉದಾಹರಿಸಬಹುದು.

ಉದಾಹರಣೆಗೆ ಎಂ.ಎಲ್. ಶ್ರೀಕಂಠೇಶಗೌಡರ ಮ್ಯಾಕ್‌ಬೆತ್‌ನ ರೂಪಾಂತರ (ಪ್ರತಾಪ ರುದ್ರದೇವ -1895)ದಲ್ಲಿ ಮೂಲದಲ್ಲಿರುವ In thunder, lightning or rain–(ಗುಡುಗಿನಲ್ಲಿ, ಮಿಂಚಿನಲ್ಲಿ, ಮಳೆಯಲ್ಲಿ) ಮತ್ತು Fair is foul and foul is fair (ಒಳಿತೇ ಹೊಲ್ಲತೆಯು, ಹೊಲ್ಲತೇ ಒಳಿತು) ಎಂಬ ಪಂಕ್ತಿಗಳು ಬಿಟ್ಟುಹೋಗಿವೆ.

(ಪುಟ 118)

ರೂಪಾಂತರಕಾರರು ಕೆಲವು ಸನ್ನಿವೇಶಗಳನ್ನು ಮಾರ್ಪಾಟು ಮಾಡಿರುವುದನ್ನು ಅವರು ಗುರುತಿಸಿದ್ದಾರೆ. ಇಲ್ಲಿ ರೂಪಾಂತರಕಾರರು ವಹಿಸಿದ ಸ್ವಾತಂತ್ರ್ಯವನ್ನು ಕುರಿತು ಯಾವ ಟೀಕೆ, ಟಿಪ್ಪಣಿ, ಪ್ರತಿಭಟನೆ, ಉಗ್ರ, ತೀಕ್ಷ್ಣ ಪ್ರತಿಕ್ರಿಯೆಯನ್ನು ಮಾಡದಿರುವುದು ಮೂರ್ತಿರಾಯರ ಸಂಯಮಕ್ಕೆ ಸಾಕ್ಷಿ. ಜೊತೆಗೆ ಈ ಮಾರ್ಪಾಟಿಗೆ ಹಿನ್ನೆಲೆಯಾದ ಯುಗಧರ್ಮವನ್ನೂ, ಮೂಲದ ಸ್ವರೂಪದ ಔಚಿತ್ಯಗಳೆರಡನ್ನೂ ಸಮರ್ಥಿಸಿದ್ದಾರೆ.

"ಸಾಹಿತ್ಯಕೃತಿ ಮಂಗಳಾಂತವಾಗಬೇಕೆಂಬ ಹಳೆಯ ಸಂಪ್ರದಾಯಕ್ಕೆ ಮನ್ನಣೆ ಕೊಟ್ಟು, ಮೂಲ ನಾಟಕದ ಮುಕ್ತಾಯವನ್ನು ಬದಲಾಯಿಸಿ ಕೊನೆಯಲ್ಲಿ ಸಣ್ಣದೊಂದು ದೃಶ್ಯವನ್ನು ಸೇರಿಸಿದ್ದಾರೆ....... ಆನಂದರಾಯರಿಗೆ ಈ ಬದಲಾವಣೆ ಸರಿಯಲ್ಲ ಎಂಬ ಯೋಚನೆ ಬಂದಿಲ್ಲ. ಅವರ ದೃಷ್ಟಿಯಲ್ಲಿ ಇದು ಅಪೇಕ್ಷಣೀಯವಾದ ಬದಲಾವಣೆ." (ಪುಟ 119)

ಇಲ್ಲಿ ಮೂರ್ತಿರಾಯರು ಆ ಕಾಲದಲ್ಲಿ (1889) ಆ ರೂಪಾಂತರಕಾರರ ಸ್ಥಾನದಲ್ಲಿ ನಿಂತು ಯೋಚಿಸಿ ಬಹು ಸಾಮ್ಯವಾಗಿ ಹೀಗೆ ಹೇಳುತ್ತಾರೆ. ಪ್ರಬಂಧಕಾರನ ದೃಷ್ಟಿಯಿದು. ಮುಂದಿನ ಪ್ಯಾರಾದಲ್ಲಿ ಮೂರ್ತಿರಾಯರು ವಿಮರ್ಶಕರಾಗಿ ಕಾಣಿಸುತ್ತಾರೆ.

"ಈ ಕೃತಿಗಳು ರೂಪಾಂತರಗಳಾದ್ದರಿಂದ ಕೃತಿಕಾರರಿಗೆ ತಮ್ಮ ಇಚ್ಛೆ ಬಂದಂತೆ ಸೇರಿಸುವ ಬಿಡುವ ಬದಲಾಯಿಸುವ ಹಕ್ಕು ಇದೆ ಎಂದು ಒಪ್ಪೋಣ. ಮಾಡಿದ ಬದಲಾವಣೆ ಎಂಥಾದ್ದು ಎಂಬುದನ್ನು ಗಮನಿಸಿದರೆ ಮೂಲ ನಾಟಕದ ಸ್ವಾರಸ್ಯ, ಅದು ಹಾಗೆ ಹುಟ್ಟಿ ಬೆಳೆದಿದ್ದರ ಸಾರ್ಥಕ್ಯ ಅರ್ಥವಾಗಿಲ್ಲವೆಂದು ಸ್ಪಷ್ಟವಾಗುತ್ತದೆ" (ಪುಟ 119)

ಶ್ರೀಕಂಠೇಶಗೌಡರು, ಕುವೆಂಪು, ಡಿವಿಜಿ, ಮಾಸ್ತಿ ಮುಂತಾದ ಘನವಿದ್ವಾಂಸರ ರೂಪಾಂತರ ಭಾಷಾಂತರಗಳನ್ನು ಮೂಲ ಕೃತಿಗಳೊಂದಿಗೆ ಹೋಲಿಸಿ ಇವು ಎಲ್ಲಿ ನಿಲ್ಲುತ್ತವೆ ಎಂದು ಸ್ಥಾನ ನಿರ್ಣಯವನ್ನೂ ಮಾಡಿದ್ದಾರೆ. ಶ್ರೀಕಂಠೇಶಗೌಡರ "ಪ್ರತಾಪರುದ್ರದೇವ" ಕುವೆಂಪುರವರ "ಬಿರುಗಾಳಿ", "ರಕ್ತಾಕ್ಷಿ" ಡಿವಿಜಿಯವರ "ಮ್ಯಾಕ್‌ಬೆತ್" ಮಾಸ್ತಿಯವರ "ಲಿಯರ್ ಮಹಾರಾಜ" ಮುಂತಾದವುಗಳ ತೌಲನಿಕ ವಿಮರ್ಶೆ ಇಲ್ಲಿದೆ. ಮಾಸ್ತಿಯವರ ಹಲವು ಪ್ರಯೋಗಗಳ ಅಸಾಮಂಜಸ್ಯ (ಬಾಲ ಅಭಿಮನ್ಯು, ಕಂಚಿಯ ಪಂಡಿತ)ವನ್ನು ವಸ್ತುನಿಷ್ಠವಾಗಿ ಹೇಳಿದ್ದಾರೆ.

ಇಲ್ಲಿ ನಮಗೆ ಪ್ರಸ್ತುತವೆನಿಸುವುದು ಮೂರ್ತಿರಾಯರೂ ಸಹಾ ಭಾಷಾಂತರಕಾರರು, ರೂಪಾಂತರಕಾರರು. ತಾವು ಸಾಹಿತ್ಯದ ಈ ಪ್ರಕಾರಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಎಷ್ಟರಮಟ್ಟಿಗೆ ತಮ್ಮ ಹೆದ್ದಾರಿಯ ಎಡಬಲಗಳಲ್ಲಿ ಹೊರಳಿ ನೋಡಿದ್ದಾರೆ ಎಂಬುವುದು ಮುಖ್ಯ. ಏಕೆಂದರೆ ಸಾಹಿತ್ಯದ ಯಾವುದೇ ಪ್ರಕಾರದಲ್ಲಿ ಕೆಲಸ ಮಾಡುತ್ತಿದ್ದಾಗ ಸದೃಶ ಸಾಹಿತ್ಯದ ಗಾಢ ನಿಕಟ ಪರಿಚಯ ಬೇಕಾಗುತ್ತದೆ. ಇಂದಿನ ಪೀಳಿಗೆಗೆ ಈ ರೂಪಾಂತರಗಳು ಅಧ್ಯಯನ ಮಾಡಲು ದೊರಕುವ ಸಾಧ್ಯತೆ ಇಲ್ಲ. ಆದರೆ ಯಾವ ಕಾಲದಲ್ಲಿ ಯಾವ ರೂಪಾಂತರಕಾರರು ಈ ಕೆಲಸವನ್ನು ಎಷ್ಟರ ಮಟ್ಟಿಗೆ ಸಮರ್ಪಕವಾಗಿ ಮಾಡಿದ್ದಾರೆ ಎಂಬ ಒಂದು ಪಥನಿರ್ದೇಶನ (ತೋರು ಬೆರಳಾಗುವ) ಇಲ್ಲಿ ನಮಗೆ ಸಿಗುತ್ತದೆ. ಈ ಪ್ರಬಂಧ ನಮಗೆ ಹಲವು ವಿಧಗಳಲ್ಲಿ ಹತ್ತಿರದ

ದಾರಿಯಾಗಿದೆ. ಕೊಂಚ ವಿಷಯಾಂತರವಾದರೂ ಕ್ರಮದ ಬಗ್ಗೆ ಮಾಡಿದ ಟೀಕೆ ಅರ್ಥಪೂರ್ಣ.

"ಕವಲಿನ ಹಾದಿ"ಗೆ ಮುನ್ನುಡಿ ಬರೆಯಬೇಕಾದ ಸಂದರ್ಭವನ್ನು ಅವರು ತಮ್ಮ "ಚಿತ್ರಗಳು ಪತ್ರಗಳು" ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ.

"ಮೊನ್ನೆ ವಿ. ಸೀತಾರಾಮಯ್ಯನವರ ಮನೆಯಲ್ಲಿ ವಿ.ಎಂ. ಇನಾಂದಾರ (ಕಾದಂಬರಿಕಾರ ಮತ್ತು ವಿಮರ್ಶಕ ಇನಾಮದಾರರು) ನೋಡಿದೆ. ಶ್ರೀ. ಇನಾಮದಾರರು ಹೊಸದೊಂದು ಕಾದಂಬರಿ (ಕವಲಿನ ಹಾದಿ) ಬರೆದಿದ್ದಾರೆ. ಪ್ರೂಫ್‌ಗಳನ್ನು ಕಳಿಸುತ್ತೇನೆ. ಓದಿದರೂ ಎರಡು ಮಾತು ಬರೆಯಿರಿ ಅಂದರು. ಮುನ್ನುಡಿ ಲೇಖಕರ ಗುಂಪಿಗೆ ನಾನು ಸೇರುತ್ತೇನೆ, ಹಾಗೆ ಸೇರಲು ಬೇಕಾದ ಯೋಗ್ಯತೆಯೂ ಇಲ್ಲದಿದ್ದರೂ."

(ಪುಟ 242)

ಈ ಬೆಳವಣಿಗೆಯ ಬಗ್ಗೆ ಅ. ರಾ. ಮಿತ್ರ "ಲಲಿತ ಪ್ರಬಂಧಗಳು" ಕೃತಿಯಲ್ಲಿ ಹೀಗೆಂದಿದ್ದಾರೆ.

"ಅಲ್ಲೊಂದು ಇಲ್ಲೊಂದು ಎಂಬಂತೆ ಬಿಡಿ ಬರಹಗಳಾಗಿ ಕಾಣಿಸಿಕೊಂಡ ಪ್ರಬಂಧ ಪರಂಪರೆ".

ಮೂರ್ತಿರಾಯರು ಈ ವಿವಿಧ ಸಂದರ್ಭಗಳಲ್ಲಿ ನೀಡಿದ ಭಾಷಣಗಳಲ್ಲಿ ಒಂದು "ಷೇಕ್ಸ್‌ಪಿಯರ್‌ನ ರಾಜಕೀಯ ದೃಷ್ಟಿ". ಇದು ಬೆಂಗಳೂರಿನ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ ಅವರು ಮಾಡಿದ ಇಂಗ್ಲೀಷ್ ಭಾಷಣದ ಕನ್ನಡಾನುವಾದ. ಇದು ಹಿರಿಯ ತಲೆಮಾರಿನ ಪ್ರಬಂಧಕಾರರ ಕಾಲಕ್ಕೇ ನಿಂತು ಹೋಯಿತು. ಈಗ ಬಂದ, ಬರುವ ಪ್ರಬಂಧಗಳಲ್ಲಿ ಹೆಚ್ಚಾಗಿ ಪತ್ರಿಕೆಗಳ ಪ್ರಬಂಧ ಅಂಕಣಕ್ಕಾಗಿಯೇ ಬರೆದಂತಹವು. ಇಲ್ಲವೇ ಪುಸ್ತಕ ರೂಪದಿಂದ ಪ್ರಕಟವಾದವುಗಳು.

ಈ ಪ್ರಬಂಧ ಮೂರ್ತಿರಾಯರ ಉತ್ಕೃಷ್ಟ ಪ್ರಬಂಧಗಳಲ್ಲಿ ಒಂದಾದಂತೆ, ಉತ್ಕೃಷ್ಟ ವಿಮರ್ಶೆಗಳಲ್ಲಿಯೂ ಒಂದಾಗಿದೆ. ಒಬ್ಬ ಕೃತಿಕಾರನ ಕೃತಿಗಳನ್ನು ಅವಲಂಬಿಸಿ, ಆ ಕಾಲದ ಸಮಾಜದ ಚಿತ್ರಣ, ರಾಜಕೀಯ ಐತಿಹಾಸಿಕ ದಾಖಲೆಗಳ ನಿರ್ಣಯ, ಕೃತಿಕಾರನ ಒಲವು ನಿಲುವುಗಳು, ರಾಜಕೀಯ, ಸಾಮಾಜಿಕ, ಪಾರಮಾರ್ಥಿಕ ಇತ್ಯಾದಿ ಇವುಗಳನ್ನು ಸ್ಥಾಪಿಸುವ ಅಥವಾ ಸ್ಥಾಪಿಸಲು ಪ್ರಯತ್ನ ಪಡುವುದುಂಟಷ್ಟೆ. ಮೂರ್ತಿರಾಯರು ಇಲ್ಲಿ ಷೇಕ್ಸ್‌ಪಿಯರ್‌ನ ರಾಜಕೀಯ ದೃಷ್ಟಿಯನ್ನು ಅರಸಿಕೊಂಡಿರುವುದು ಅವರ ಸೂಕ್ಷ್ಮವಾದ ಚಿಂತನಶೀಲತೆಗೂ ಹೊಸದನ್ನು ಕಾಣುವ ಹಂಬಲಕ್ಕೂ ಸಾಕ್ಷಿಯಾಗಿದೆ. ಪ್ರಬಂಧದ ಆರಂಭವೇ ಒಂದು ವಿಶಿಷ್ಟವಾದ ಕುತೂಹಲಕರ ಅಂಶದಿಂದ ಆರಂಭವಾಗುತ್ತದೆ.

"ಷೇಕ್ಸ್‌ಪಿಯರ್ ನಾಟಕಕಾರನೇ ಹೊರತು ರಾಜ್ಯಶಾಸ್ತ್ರಜ್ಞನಲ್ಲವಷ್ಟೆ. ಅದ್ದರಿಂದ ಅವನು ಸ್ವವಿರೋಧವಿಲ್ಲದ ಪೂರ್ವಪಕ್ಷಗಳನ್ನು ವಿವರಿಸಬಲ್ಲ, ಚಚ್ಚೌಕವಾದ ರಾಜಕೀಯ ತತ್ವವೊಂದನ್ನು ರೂಪಿಸಿಕೊಂಡಿದ್ದನೆಂದು ನಿರೀಕ್ಷಿಸಲಾಗುವುದಿಲ್ಲ."

(ಪುಟ 136)

"ಮೂರ್ತಿರಾಯರ ಈ ಪ್ರಸ್ತಾವನೆಯೇ ಸಾಕು. ಜನಗಳನ್ನು ಗೆಲ್ಲುವ ಅಥವಾ ಮಂತ್ರಮುಗ್ಧರನ್ನಾಗಿ ಮಾಡುವ ಬಯಕೆಗಿಂತ ಹೆಚ್ಚಾಗಿ ತನ್ನ ಅಲೆಮಾರಿ

ಚಿಂತನೆಗಳೊಂದಿಗೆ ಓದುಗನನ್ನು ಸಹ ಪ್ರಯಾಣಿಕನನ್ನಾಗಿ ಮಾಡಿಕೊಳ್ಳುವ ಕಾತರ ಇರುತ್ತದೆ." (ಲಲಿತ ಪ್ರಬಂಧಗಳು ಪುಟ 6–7)

ಒಂದು ವಿಮರ್ಶಾತ್ಮಕವಾದ ಪ್ರಬಂಧವೂ ಆಗುತ್ತದೆ ಎನ್ನುವುದಕ್ಕೆ ಈ ಲೇಖನವೊಂದು ಸಾಕ್ಷಿ.

ಷೇಕ್ಸ್‌ಪಿಯರ್‌ನ ಐತಿಹಾಸಿಕ ನಾಟಕ ಚಕ್ರವನ್ನು ಆಧರಿಸಿ ಅವರ ರಾಜಕೀಯ ದೃಷ್ಟಿಯನ್ನು ಅರಿಯಲೆತ್ನಿಸುವುದು ಭಾರತೀಯರ ರಾಜಕೀಯ ದೃಷ್ಟಿಯೊಂದಿಗೆ ಎಷ್ಟರಮಟ್ಟಿಗೆ ಸಾಮರಸ್ಯ ಹೊಂದಿದೆ ಎಂದು ಅರಿತುಕೊಳ್ಳಬಹುದು. ಷೇಕ್ಸ್‌ಪಿಯರ್ ಚಿತ್ರಿಸಿದ ರಾಜರು ಎಂಥವರೆಂಬುದನ್ನು ಒಂದೆರಡು ಮಾತುಗಳಲ್ಲಿ ಹೇಳಿದ್ದಾರೆ.

"ರಾಜರೆಲ್ಲ ಉನ್ನತರಲ್ಲ, ಉನ್ನತರೆಲ್ಲ ರಾಜರಲ್ಲ. ಉನ್ನತ ವ್ಯಕ್ತಿಗಳು ಉನ್ನತರಾಗಿರುವುದು ರಾಜತ್ವದಿಂದಾಗಿಯಲ್ಲ. ಲಿಯರ್ ರಾಜನಾಗಿದ್ದವನು, ಆದರೆ ಅವನು ಉನ್ನತನಾದದ್ದು ರಾಜತ್ವದ ಚಿಹ್ನೆಗಳಾದ ವಸ್ತ್ರಗಳನ್ನು ಬಿಸುಟು ಹೊಸ ರೂಪವನ್ನು ಭೇದಿಸಿ ಅಂತರಾಳದಲ್ಲಿ ಹುದುಗಿದ್ದ ಸತ್ಯವನ್ನು ಕಂಡ ಮೇಲೆ. (148–149) ಹಿರಿಯ ಡ್ಯೂಕ್ ಒಳ್ಳೆಯವನು, ಆದರೆ ಶಕ್ತನಲ್ಲ. ವಿಪತ್ತನ್ನು ಸಹಿಸಬಲ್ಲನೇ ಹೊರತು ಎದುರಿಸಿ ಗೆಲ್ಲಲಾರ." (ಪುಟ 149)

ಅವನು (ಬ್ರೂಟಸ್) ಮೃದು ಮನಸ್ಸಿನವನು, ಋಜು ಮಾರ್ಗದಲ್ಲೇ ನಡೆಯಬೇಕೆಂಬ ದೃಢ ನಿಶ್ಚಯವುಳ್ಳವನು. ಆದರೆ ಅವನಿಗೆ ಮಾನವ ಸ್ವಭಾವದ ಪರಿಚಯ ಸಾಲದು. ಅವನು ರೋಮನ್ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲಿಲ್ಲ. ಆದ್ದರಿಂದ ಹೆಚ್ಚು ಕಡಿಮೆ ಮೂಢನಂತೆಯೇ ವರ್ತಿಸಿ ಬದುಕನ್ನು ವ್ಯರ್ಥ ಮಾಡಿಕೊಂಡ. (ಪುಟ 149)

ಷೇಕ್ಸ್‌ಪಿಯರ್‌ನ ನಾಟಕಗಳಲ್ಲಿ ಬರುವ ಶ್ರೀಮಂತರಲ್ಲಿ ಕೆಲವರಾದರೂ ಹುಟ್ಟಿನಿಂದ ನೋಬಲ್ ಆಗಿರುವುದರ ಜೊತೆಗೆ ಗುಣದಿಂದಲೂ 'ನೋಬಲ್' ಆಗಿದ್ದಾರೆ. (ಪುಟ 150)

ಪವಿತ್ರತೆಯ ಕವಚ ಅವನಿಂದ (ರಾಜ) ಜಾರಿ ಬೀಳುತ್ತದೆ. (ಪುಟ 159)

ಇಂತಹ ಚಿಕ್ಕ ವಾಕ್ಯಗಳಲ್ಲಿ ರಾಜಕೀಯ ವ್ಯಕ್ತಿಗಳ ಗುಣದೋಷಗಳನ್ನು ಮೂರ್ತಿರಾಯರು ಸಮರ್ಪಕವಾಗಿ ಕಂಡರಿಸಿದ್ದಾರೆ. ಷೇಕ್ಸ್‌ಪಿಯರ್ ರಾಜನನ್ನು ಕಾಣುವ ದೃಷ್ಟಿ ಎಂತಹದೆಂಬುದನ್ನು ನಾವು ಓದುತ್ತಿದ್ದಂತೆಯೇ ನಮಗೆ ಧ್ವನ್ಯಾತ್ಮಕವಾಗಿ ಭಾರತೀಯ ರಾಜತ್ವದ ಕಲ್ಪನೆ ಕಣ್ಣುಂದೆ ಸುಳಿಯುತ್ತದೆ. ಕೇವಲ ಒಂದೇ ಒಂದು ಅಡಿ ಟಿಪ್ಪಣಿಯನ್ನು ವಿನಾಯಿಸಿದರೆ ಭಾರತೀಯವೆನಿಸಬಹುದಾದ ಯಾವುದೇ ಒಂದು ಉಲ್ಲೇಖದಿಂದಲೂ ಲೇಖನದ ಕೇಂದ್ರಬಿಂದುವನ್ನು ಸಮರ್ಥಿಸಲು ಅವರು ಹೋಗಿಲ್ಲ. ಲೇಖನದ ನಡೆ ಏಕಪ್ರಕಾರದ್ದಾಗಿದ್ದು, ಯಾವುದೇ ಕವಲು ಕೊಂಬೆ ಗೊಂದಲಗಳಿಲ್ಲದೆ ನೇರವೂ ಏಕಮುಖವೂ ಆಗಿದೆ.

ಷೇಕ್ಸ್‌ಪಿಯರ್‌ನ ರಾಜಕೀಯ ದೃಷ್ಟಿಯ ಮೇಲೆ ಬೆಳಕು ಚೆಲ್ಲುವ ಈ ಲೇಖನ ಅವರ ಬಗ್ಗೆಯೂ ಒಂದು ವಿಶಿಷ್ಟವಾದ ಬೆಳಕು ಚೆಲ್ಲುತ್ತದೆ. ಷೇಕ್ಸ್‌ಪಿಯರ್‌ನ ದೃಷ್ಟಿ ಎಷ್ಟರಮಟ್ಟಿಗೆ ವಾಸ್ತವಿಕ ಎಂಬುದನ್ನು ಆ ದೇಶದ ಆ ಕಾಲದ ದೃಷ್ಟಿಯಿಂದ ಹೀಗೆ ಬರೆಯುತ್ತಾರೆ.

"ಷೇಕ್ಸ್‌ಪಿಯರ್, ಮಹಾಕಾವ್ಯಗಳನ್ನು ಮುಗಿಸಿದಾಗ ನಗುತ್ತ ಎದುರು ಪ್ರಾಣಿಯನ್ನೇ ಹೊರತು ಬೇರೆ ಏನನ್ನು ಓದಿಕೊಂಡಿರುವುದಿಲ್ಲ. ಅವನು ನಕ್ಷತ್ರಗಳನ್ನು ನೋಡುವಾಗಲೂ ಹೆಜ್ಜೆಯನ್ನು ಭದ್ರವಾಗಿ ನೆಲದ ಮೇಲೆ ಊರಿರುತ್ತಾನೆ.

(ಪುಟ 160)

ಮೂರ್ತಿರಾಯರು ಈ ಪ್ರಬಂಧಗಳಿಗೆ, ನಾವು ಓದಿದಾಗ ನಮಗೆ ಚೇಂಬರ್ ಲೀನ್ Essays Old and New ಕೃತಿಯಲ್ಲಿ ಹೇಳಿದ ಈ ಮಾತುಗಳನ್ನು ಅನ್ವಯಿಸಬಹುದು.

The essayist is usually a man of scholarly tastes, mature in his wisdom, sound in his judgements. He is fond of literary allusion and illustration. Literary echoing is frequently found within the pages of an essay, and the miracle of reading many books when there is only one before the eyes takes place each day. The reader must understand and follow these references of else there is pleasure lost. (1935, page XXV)

ಅವರ ಪ್ರಬಂಧ ನಾಯಕ ಮನೆ ಬಿಟ್ಟು ಹೊರಹೊರಟಿದ್ದು ಬಲು ವಿರಳ. ಅಪರೂಪಕ್ಕೊಮ್ಮೆ ಅಕ್ಕಿ ಹೆಬ್ಬಾಳು, ಬೆಂಗಳೂರಿಗೆ ಹೋಗಿ ಬರುವುದುಂಟು. ಬೆಂಗಳೂರಿನ ಕೊಳೆಯನ್ನು ಅಕ್ಕಿ ಹೆಬ್ಬಾಳಿನ ಕೊಪ್ಪರಿಗೆ ಮಡುವಿನಲ್ಲಿ ಮನದಣಿಯೆ ಈಸುವುದರ, ಹಾಡುವುದರ ಮೂಲಕ ತೊಳೆದು ಕಳೆದು ನವಚೇತನವಾಗಿ ಮಾನವ ಸ್ವಭಾವದ ವಿಕ್ಷಿಪ್ತತೆ, ವಿಕಾರಗಳ ವಿಶ್ಲೇಷಣೆಯಲ್ಲಿ ತೊಡಗುತ್ತಾನೆ. ಅನಂತರದ ಪ್ರಬಂಧಕಾರರು ಮನೆ ಸೇರಿದ್ದೇ ಅಪರೂಪ. ಅತ್ಯುನ್ನತ ನೀಲಿಮೆಯಲ್ಲಿ ಹಾರುತ್ತಿದ್ದ ಪ್ರಬಂಧಕಾರರನ್ನು ಭೂಮಿಗೆ ಬಗಿದರು. ಇಲ್ಲಿಯ ಕಟುವಾಸ್ತವಿಕತೆಯ ಕೊಳೆಗೆ ಅವನ ಮೂಗನ್ನು ಒತ್ತಿ ಹಿಡಿದರು. ಕಳೆಯೂ ಕೊಳೆಯೂ ಪ್ರಬಂಧ ರೂಪವನ್ನು ತಾಳಲಾರಂಭಿಸಿದವು.

ಅನಂತರ ಪ್ರಬಂಧಕಾರ ಎತ್ತರಕ್ಕೂ ಏರಿದರು, ಕೆಳಕ್ಕೂ ಇಳಿದರು. ಹೆಚ್. ಎಸ್.ಕೆ, ಎನ್. ಕೆ, ಅ. ರಾ. ಮಿತ್ರ, ರಾ. ಕು, ರಾವಬಹದ್ದೂರ್ ಮುಂತಾದವರು ಹಾಸ್ಯ ಶೈಲಿಯಿಂದ ಆರಂಭಿಸಿದರೂ ಅಲ್ಲಲ್ಲೇ ತಾತ್ವಿಕ, ತೌಲನಿಕ ವಿಚಾರಗಳನ್ನು ಪ್ರಬಂಧಗಳ ನಡು ನಡುವೆ ಬಿಗಿದು ಪ್ರಬಂಧಕ್ಕೆ ಒಂದು ತೇಜಸ್ಸನ್ನೂ ಶೋಭೆಯನ್ನೂ ತಂದಿತ್ತರು. ಅವರ ಇನ್ನು ಕೆಲವು ಪ್ರಬಂಧಗಳಂತೂ ಸಂಪೂರ್ಣ ಸಣ್ಣಕಥೆಯ ಸತ್ವವನ್ನೇ ಹೀರಿಕೊಂಡು, ಸಣ್ಣ ಕಥೆಯ ವೇಷವನ್ನೇ ಧರಿಸಿ ಪ್ರಬಂಧದ ಹೆಸರಿನಲ್ಲಿ ಪ್ರಕಟವಾದವು. ಸಣ್ಣ ಸಣ್ಣ ತುಣುಕುಗಳ ಸಂಕಲನಗಳೂ ಪ್ರಬಂಧಗಳಾದವು. ಮೂರ್ತಿರಾಯರು 'ಹರಕೆಗಳು' ಎಂಬ ಪ್ರಬಂಧವನ್ನು ವ್ಯಷ್ಟಿಯ ಮೂಲಕ ಸಮಷ್ಟಿಯ ಸಮಸ್ಯೆಯನ್ನು ಚಿತ್ರಿಸಲು ರಚಿಸಿದರೆ ಅನಂತರ ಮದುವೆ, ಸಂಪ್ರದಾಯ, ಹಬ್ಬ, ಸಮಾರಂಭ, ಅಧ್ಯಕ್ಷತೆ, ಇವೆಲ್ಲವೂ ಲೇವಡಿಯ ರೂಪತಾಳಿ, ಹೊಸಬರು ಅವುಗಳನ್ನು ಓದಿದರೆ ಅವುಗಳ ಬಗ್ಗೆ ಅಲರ್ಜಿ ಅಂಕುರಿಸುವಂತಾಯಿತು.

ಸಾಹಿತ್ಯದ ವಿವಿಧ ಪ್ರಕಾರಗಳೂ, ತಂತ್ರಗಳೂ ಪ್ರಬಂಧದ ಮೈಯನ್ನು ಆವರಿಸಲಾರಂಭಿಸಿದವು. ಪಾಶ್ಚಾತ್ಯ ಸಾಹಿತ್ಯದಲ್ಲಿ Stream of consciousness (ಪ್ರಜ್ಞಾನಪ್ರವಾಹ ತಂತ್ರ) ಎಂಬ ತಂತ್ರವೊಂದಿದೆ. ಇದನ್ನು ಅಳವಡಿಸಿಕೊಂಡ ಕಾಂತರಾಜ ಪಿರ್ಲೆಯವರ 'ಕಾಡುವ ಕಡಲು'ನಂತಹ ಪ್ರಬಂಧಗಳು ಕನ್ನಡದಲ್ಲಿ ಕಾಣಿಸಿಕೊಂಡವು.

ಮೂರ್ತಿರಾಯರ ಪ್ರಬಂಧಗಳಲ್ಲಿ ಪ್ರಬಂಧ ನಿರೂಪಕನ ಪತ್ನಿ ಲಲಿತೆ ಪ್ರಬಂಧಗಳಲ್ಲಿ ಅಂತರ್ಗತಳಾಗಿ ಪ್ರವಹಿಸುತ್ತಾ ಪ್ರಬಂಧಕ್ಕೆ ಒಂದು ತೇಜ ನೀಡಿದಳು. ಅನಂತರ ಅವರು 'ಹೆಂಡತಿಯ ಹೆಸರು' ಎಂಬ ಪ್ರಬಂಧವನ್ನು (1959) ಬರೆದರು. ಇದರ ಪ್ರಭಾವ ಎಷ್ಟರಮಟ್ಟಿಗಾಯಿತೆಂದರೆ ಹೆಂಡತಿಯನ್ನು ಕುರಿತ ಲೇವಡಿ, ವ್ಯಂಗ, ಹಾಸ್ಯ ವಿಡಂಬನೆಗಳಿಂದ ಕೂಡಿದ ಪ್ರಬಂಧಗಳ ಮಹಾಪೂರವೇ ಹರಿದು ಬಂದಿತು. 'ಗಿಡ್ಡ ಹೆಂಡಿತಿ ಲೇಸು' (ಶಂ.ಗು. ಬಿರಾದಾರ) 'ಹೆಂಡತಿ ಬೇಕು – ಬೇಡ'(ಎಂ. ಸಿ. ಮನೋಹರಚಂದ್ರನ್) ಇತ್ಯಾದಿ.

ಮೂರ್ತಿರಾಯರ ಸಮಕಾಲೀನರಾದ ತೀ. ನಂ. ಶ್ರೀ, ಗೊರೂರು, ಎಂ. ವಿ. ಸೀ. ಮುಂತಾದವರ ಕೆಲವು ಮಾದರಿ ಪ್ರಬಂಧಗಳನ್ನು ಗಮನಿಸಬಹುದು. ತೀ. ನಂ. ಶ್ರೀ ಹಾಗೂ ಮೂರ್ತಿರಾಯರು ಅತ್ಯಂತ ಆತ್ಮೀಯರೂ ನಿಕಟವರ್ತಿಗಳೂ ಆಗಿದ್ದರು. ಅವರ ಪ್ರಬಂಧಗಳಲ್ಲಿ ಸ್ವಾನುಭವ, ವ್ಯಕ್ತಿಚಿತ್ರಣ ಹಾಗೂ ಪ್ರವಾಸ ಪತ್ರಗಳು ಸ್ಥಾನ ಪಡೆದಿದೆ. ಅತ್ಯಂತ ಚಿಕ್ಕ ಪ್ರಬಂಧ 'ವೋಟು', 'ಮಮತೆ' ಇತ್ಯಾದಿಗಳಲ್ಲಿ ರಾಜಕೀಯ ವಿಡಂಬನೆಯೂ, ವಾತ್ಸಲ್ಯ ಭಾವವೂ ಹರಿದಾಡಿದೆ. 'ನೆಂಟರು', ಮೂರ್ತಿರಾಯರ 'ಬೇಡದ ಅತಿಥಿಗಳು' ಪ್ರಬಂಧದಂತೆ ವ್ಯಂಗ್ಯವಿನೋದದಿಂದ ಕೂಡಿದೆ. 'ಕಾಸಿನ ಸಂಘ' ಮೂರ್ತಿರಾಯರ 'ಮಹಾರಾಜ ಕಾಲೇಜಿನ ಕಾಮನ್‌ರೂಂ'ನ ಒಂದು ಭಾಗದಂತಿದೆ. ನಾಲ್ಕು ಪ್ರಬಂಧಗಳು ವ್ಯಕ್ತಿ ಸಂಸ್ಥೆ ಚಿತ್ರಣಗಳಾಗಿದ್ದು, ಅವು ಅಲ್ಲಲ್ಲಿ ಆತ್ಮ ಚರಿತ್ರಾತ್ಮಕ ಆಗಿದೆ. ಪ್ರವಾಸ ಪತ್ರಗಳೂ ಪ್ರಬಂಧ ರೂಪದ ಮಾಂತ್ರಿಕ ಸ್ಪರ್ಶ ಪಡೆದು ಪುಟ್ಟ ಪ್ರವಾಸ ಕಥನಗಳಾಗಿವೆ.

ಗೊರೂರುರವರ ಪ್ರಬಂಧಗಳೂ ಹೆಚ್ಚಾಗಿ ಸಾಹಿತ್ಯಾತ್ಮಕ ಹಾಗೂ ಸ್ವಾನುಭವ ಪೂರ್ಣವಾಗಿದೆ. ಮೂರ್ತಿರಾಯರ ಅಕ್ಕಿ ಹೆಬ್ಬಾಳಿನಂತೆ ಗೊರೂರರ 'ಗೋರೂರು'. ಥೋರೋನ 'ವಾಲ್ಡೆನ್' ಕೃತಿಯ ಸಂಕ್ಷಿಪ್ತ ರೂಪಾಂತರದಂತಿರುವ 'ಬೆಟ್ಟದ ಮನೆಯಲ್ಲಿ' ಒಂದು ಅಪೂರ್ವ ಪ್ರಬಂಧ. ಈಟ್ಸ್‌ನ ದಿ ಲೇಕ್ ಐಲ್ ಆಫ್ ಇನ್ನಿಸ್‌ಫ್ರೀ ಕವನವನ್ನು ನೆನಪಿಸುವ ಈ ಪ್ರಬಂಧ ಒಂದು ಕಲ್ಪನೆ. ಮೂರ್ತಿರಾಯರ ಪ್ರಬಂಧಗಳಲ್ಲಿ ಇಂತಹ ಕಲ್ಪನೆ ಇಲ್ಲ. ಕಣ್ಮರೆಯಾಗುತ್ತಿರುವ ಜಾನಪದ ಸಂಸ್ಕೃತಿ ಪರಂಪರೆ ಸಂಪ್ರದಾಯಗಳನ್ನು ಪ್ರಬಂಧಗಳ ಮೂಲಕ ಅಮರಗೊಳಿಸುವ ಪ್ರಯತ್ನ ಗೊರೂರುರವರದು. ಆದರೆ ಮೂರ್ತಿರಾಯರಂತೆ ಎಲ್ಲಿಯೂ ನಿರಾಶೆಯ, ನೋವಿನ ಎಳೆಯಿಲ್ಲ, ದನಿಯಿಲ್ಲ, ಬದಲಾಗಿ ಮೂರ್ತಿರಾಯರಂತೆ ತೀ. ನಂ. ಶ್ರೀಯವರಂತೆ ಒಂದು ಹಾಸ್ಯ, ವಕ್ರೋಕ್ತಿ, ವಿನೋದ ಇಲ್ಲಿವೆ. ಇದರಿಂದ ಒದಗುವ ಗಂಭೀರವಾದ, ಆದರೆ ಹಿತವಾದ ಪ್ರಸನ್ನಭಾವ ಗಮನಾರ್ಹ. ಸ್ವಾನುಭವವೂ ಸಹಾ ಗಂಭೀರವೂ, ಹಾಸ್ಯಪೂರ್ಣವೂ ಆಗಿದೆ. ಆದರೆ ಎಲ್ಲಿಯೂ ಆತ್ಮಪ್ರಶಂಸೆ, ವೈಭವೀಕರಣ, ಮಿತಿಮೀರಿದ ಪೌಳಿ ಮಾಹನ

ಇಲ್ಲ. ಬರವಣಿಗೆಯ ಸಮತೂಕ ಹೀಗೆ ಸಾಧಿತವಾದುದರಿಂದಲೇ ಒಂದು ಸಂಯಮ ಇಲ್ಲಿ ಏರ್ಪಟ್ಟಿದೆ.

ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರ ಪ್ರಬಂಧ ಪ್ರಪಂಚ ಮೂರ್ತಿರಾಯರ ಪ್ರಪಂಚಕ್ಕಿಂತ ಕೊಂಚ ವಿಸ್ತಾರವಾದದ್ದು. ಗೊರೂರರ ಪ್ರಬಂಧಗಳು ಹೇಮಾವತಿ ನದಿ ತೀರದಲ್ಲಿ, ಗ್ರಾಮೀಣ ಪರಿಸರದಲ್ಲಿ ಸೃಷ್ಟಿಯಾಗುತ್ತವೆ. ಜೊತೆಗೆ ಶ್ಯಾನುಭೋಗ, ಪಟೇಲ, ಶಾಲುಸಾಬಿ ಮುಂತಾದ ಗ್ರಾಮಸ್ಥರು ಗೊರೂರರ ಪ್ರಬಂಧಗಳಲ್ಲಿ ಕಾಣ ಸಿಗುತ್ತಾರೆ. ಹೀಗೆ ಗೊರೂರರ ಪ್ರಬಂಧಗಳಲ್ಲಿ ಗ್ರಾಮೀಣ ಪರಿಸರ ಒಂದು ಗುಣವಾಗಿ ಮಾರ್ಪಡುತ್ತದೆ. ಗೊರೂರರಿಗೆ ಹೋಲಿಸಿ ನೋಡಿದಾಗ ಮೂರ್ತಿರಾಯರ ಪ್ರಬಂಧ ವ್ಯಾಪ್ತಿ ಕಿರಿದು. ಜೊತೆಗೆ ಮೂರ್ತಿರಾಯರ ಶಿಷ್ಟ ನಗರ ಪ್ರಜ್ಞೆ ಗೊರೂರರಷ್ಟು ಗ್ರಾಮೀಣ ಪರಸರವನ್ನು ತೀವ್ರವಾಗಿ ಪ್ರವೇಶ ಮಾಡುವುದಿಲ್ಲ.

ಎಂ. ವಿ. ಸೀತಾರಾಮಯ್ಯನವರು ಸಾಹಿತ್ಯಾತ್ಮಕವೂ, ವಿಮರ್ಶಾತ್ಮಕವೂ ಆದ ಪ್ರಬಂಧಗಳನ್ನು ರಚಿಸಿದವರು. ಅವರ ಪ್ರಬಂಧಗಳಲ್ಲಿ ಸ್ವಾನುಭವದೊಂದಿಗೆ ಒಂದು ತಾತ್ವಿಕ ಸಂದೇಶವೂ ಮಿಳಿತವಾಗಿರುತ್ತದೆ. ಅವರು ಬರೆದ "ತುಂಬೆಯ ಹೂ" ಎಂಬ ಪ್ರಬಂಧವನ್ನು ಒಂದು ಮಾದರಿಯನ್ನಾಗಿ ತೆಗೆದುಕೊಳ್ಳಬಹುದು. ಕಮಿಂಗ್ ಟು ದಿ ಸ್ಮಾಲ್ ಕ್ಯಾಲಂಡೈನ್' ಕವನದ ಭಾವವನ್ನು ಉಲ್ಲೇಖಿಸಿ ತಮ್ಮ ಹಾಗೂ ವರ್ಡ್ಸ್‌ವರ್ತ್‌ನ ಪುಷ್ಪ ಪ್ರೇಮವನ್ನು ಅಭಿವ್ಯಕ್ತಗೊಳಿಸಿದ್ದಾರೆ. ಮೂರ್ತಿರಾಯರು 'ಹೂವುಗಳು' ಎಂಬ ಪ್ರಬಂಧದಲ್ಲಿ ಎಂ. ವಿ. ಸೀತಾರಾಮಯ್ಯನವರಂತೆಯೇ ವರ್ಡ್ಸ್‌ವರ್ತ್ ಕವಿಯನ್ನು ಪ್ರಾಸಂಗಿಕವಾಗಿ ಉಲ್ಲೇಖಿಸಿದ್ದಾರೆ. ಸೀತಾರಾಮಯ್ಯನವರು ಇಡೀ ಕವನವನ್ನು ಉಲ್ಲೇಖಿಸಿದರೆ ಮೂರ್ತಿರಾಯರು ಸಂಕ್ಷಿಪ್ತವಾಗಿ ಹೀಗೆನ್ನುತ್ತಾರೆ:

"ಪ್ರತಿಯೊಂದು ಹೂವು ತನ್ನನ್ನು ನಲಿಸುವ ಗಾಳಿಯನ್ನು ಆನಂದದಿಂದ ಸೇವಿಸುವುದೆಂದು ವರ್ಡ್ಸ್‌ವರ್ತ್ ಕವಿಯು ಹೇಳಿದನು." (ಸ. ಲ. ಪು. 20)

ಎಂದು ಒಂದೇ ವಾಕ್ಯದಲ್ಲಿ ಮುಗಿಸಿದ್ದಾರೆ. ಸೀತಾರಾಮಯ್ಯನವರು ತುಂಬೆಯ ಹೂವಿನ ಮಾಧ್ಯಮದ ಮುಖೇನ ಚಿಕ್ಕ ವಸ್ತುವಿನಲ್ಲಿಯೂ ಸೌಂದರ್ಯ ತುಂಬಿದೆ ಎಂಬ ತತ್ವ ಪ್ರತಿಪಾದನೆಗೆ ಹೊರಟಂತೆ ಕಾಣುತ್ತದೆ. ಆದರೆ ಮೂರ್ತಿರಾಯರು ಯಾವುದೇ ಒಂದು ಹೂವಿಗೆ ತಮ್ಮ ಪ್ರಬಂಧವನ್ನು ಸೀಮಿತಗೊಳಿಸದೆ, ಹೂವಿನ ನಿಮಿತ್ತ ಅತ್ತ ಇತ್ತ ನೋಡದೆ ನೇರವಾಗಿ ಸಾಗುತ್ತಾರೆ. ಸೀತಾರಾಮಯ್ಯನವರು ಕೊಂಚ ವಿಷಯಾಂತರ ಮಾಡುವುದು ಇದೆ. ಪ್ರಬಂಧದ ಲಕ್ಷಣವನ್ನು ನಿರೂಪಿಸುವಾಗ 'ಕನ್ನಡ ವಿಶ್ವಕೋಶ'ದಲ್ಲಿ (ಸಂ. 3) ಮಾಡಿದ ವ್ಯಾಖ್ಯಾನವನ್ನು ಸೀತಾರಾಮಯ್ಯ ಹಾಗೂ ಇತರರ ಪ್ರಬಂಧಗಳಿಗೆ ಅನ್ವಯಿಸಬಹುದಾದರೂ ಮೂರ್ತಿರಾಯರ ಪ್ರಬಂಧಗಳಿಗೆ ಅನ್ವಯಿಸುವಂತಿಲ್ಲ.

"ತನ್ನ ಮನಸ್ಸನ್ನು ಅದು ಹೋದಂತೆ ಹರಿಯಬಿಟ್ಟು, ಒಂದು ಕೇಂದ್ರ ಬಿಂದುವಿನ ಸುತ್ತ ಅತ್ತಿತ್ತ ಅಡ್ಡಾಡುತ್ತಾ ಮತ್ತೆ ಮತ್ತೆ ಆ ಬಿಂದುವನ್ನು ಮುಟ್ಟುತ್ತ ಲಲಿತ ಪ್ರಬಂಧದ ಲಕ್ಷಣ ಸಂಜೆ ಸಂಚಾರಕ್ಕೆ ಹೊರಟಂತೆ. ಒಂದು ನಿರ್ದಿಷ್ಟ ಉದ್ದೇಶ ಇಲ್ಲ ಎಂದಲ್ಲ. ಸಂಚಾರವೇ ಉದ್ದೇಶ. ಆದರೆ ಅದು ಇಂಥದೇ ರೀತಿಯಲ್ಲಿ ಆಗಬೇಕು ಎಂಬ ನಿಯಮ ಇಲ್ಲ ಅಷ್ಟೇ. ಮನೆ ಬಿಟ್ಟಾಯಿತು, ಮತ್ತೆ ಮನೆ ಮುಟ್ಟಬೇಕು ಇದೇ ಚೌಕಟ್ಟು. ಕೆರೆ,

ಕೊಳ, ಬೆಟ್ಟ, ಉದ್ಯಾನ, ಇಂಥ ಸುಂದರ ಸ್ಥಾನಗಳಿಗೆ ಹೋಗಿ ಅಲ್ಲಿ ಏಕಾಂಗಿಯಾಗಿ ಕುಳಿತು ಅಲ್ಲಿನ ಚೆಲುವನ್ನು ಸವಿಯಬಹುದು. ಅದರ ವಿವರಗಳನ್ನೆಲ್ಲ ಮನಸ್ಸು ಗ್ರಹಿಸುತ್ತಿರುತ್ತದೆ. ಮಧ್ಯೆ ಮಧ್ಯೆ ಇತರ ಯೋಚನೆಗಳೂ ಸುಳಿಯಬಾರದು ಎಂದಿಲ್ಲವಲ್ಲ. ಇಲ್ಲವೇ ಪೇಟೆಗೆ ಹೋಗಿ ಕಾಯಿಪಲ್ಲೆಗಳನ್ನು ಕೊಂಡು ಸಂಚಾರವನ್ನೂ ವ್ಯವಹಾರವನ್ನೂ ಒಂದುಗೂಡಿಸಬಹುದು. ದಾರಿಯಲ್ಲಿ ಯಾರಾದರೂ ಗುರುತಿನವರು ಸಿಕ್ಕುತ್ತಾರೆ. ಅವರೊಂದಿಗೆ ಅದೂ ಇದೂ ಮಾತನಾಡಬಹುದು. ಆದರೆ ಮತ್ತೆ ಮೂಲ ಉದ್ದೇಶದ ನೆನಪಾಗಿ ಹೊರಡಬಹುದು. ನಮಗೆ ಸಿಕ್ಕಿದ ವ್ಯಕ್ತಿಯ ಬಗ್ಗೆ ನಾವು ನೋಡಿದ ನೋಟಗಳ ಬಗ್ಗೆ ಮತ್ತೆ ಮತ್ತೆ ಮನಸ್ಸು ಚಿಂತಿಸಬಹುದು. ಇದು ಪ್ರಬಂಧದ ರೀತಿ. ತಿರುಗಾಟ ವಿಷಯಾಂತರ ಈ ಸಾಹಿತ್ಯ ಪ್ರಕಾರದ ಮುಖ್ಯ ಗುಣವಾಗಿರುತ್ತದೆ ಮತ್ತು ಅಷ್ಟೇ ಅದು ಅವಗುಣವೂ ಆಗಿರುತ್ತದೆ". (ಪುಟ 737)

ಇಲ್ಲಿ ವಿಷಯಾಂತರದ ಸಮರ್ಥನೆಗೆ ನೀಡಿದ ಸಾಕ್ಷಿ, ತರ್ಕ ಸುಂದರವಾದುದೇನೋ ಹೌದು. ಆದರೆ ವಿಷಯಾಂತರ ಒಮ್ಮೊಮ್ಮೆ ಅವಗುಣವೂ ಹೌದು. ಮೂರ್ತಿರಾಯರ ನಂತರದ ಹಲವು ಪ್ರಬಂಧಕಾರರ ಪ್ರಬಂಧಗಳ ಲಕ್ಷಣಕ್ಕೆ ಹೊಂದಿಕೊಳ್ಳುತ್ತದೆ. ಆದರೆ ಮೂರ್ತಿರಾಯರ ಪ್ರಬಂಧಗಳಲ್ಲಿನ ನಡೆ ನೇರ ದಾರಿಯಲ್ಲಿಯೇ ಸಾಗುತ್ತದೆ.

"ಲಲಿತ ಪ್ರಬಂಧಕಾರರ ಪಂಕ್ತಿಯಲ್ಲಿ ಅಗ್ರ ಸ್ಥಾನದಲ್ಲಿ ನಿಲ್ಲುವವರಲ್ಲಿ ಒಬ್ಬರು ಎ. ಎನ್. ಮೂರ್ತಿರಾವ್. ತಮ್ಮ ಅಪೂರ್ವ ಪ್ರಬಂಧಶಕ್ತಿಯನ್ನು ತಮ್ಮ ಮೂರು ಸಂಕಲನಗಳಲ್ಲಿ ಅವರು ತೋರಿಸಿದ್ದಾರೆ". (ಅದೇ ಪುಟ 738–9)

ಎಚ್ಚೆಸ್ಕೆಯವರು ಮೂರ್ತಿರಾಯರ ಬಗ್ಗೆ 'ಸುಧಾ'ದಲ್ಲಿ ಹೇಳಿದ ಮಾತು ಸಮಂಜಸವಾದುದು. "ಕನ್ನಡಶ್ರೇಷ್ಠ ಲಲಿತ ಪ್ರಬಂಧಕಾರರಲ್ಲಿ ಅವರೊಬ್ಬರು. ಇವರ (ಮೂರ್ತಿರಾಯರ)ಪ್ರಬಂಧಗಳು ಸಣ್ಣ ಕತೆಗಳಂತೆ ಕಂಗೊಳಿಸುತ್ತವೆ. ಭಾವಗೀತೆಯಂತೆ ಬೆಳಗುತ್ತದೆ, ಹಾಸ್ಯ ವ್ಯಂಗ್ಯಗಳಿಂದಲೂ ಕೂಡಿವೆ. ಅವುಗಳಲ್ಲಿಯ ಕಾವು ಬೆಳಕನ್ನು ನೀಡುತ್ತವೆ". (05–08–1990 ಪುಟ 71)

ಈ ಮೇಲಿನ ಅಭಿಪ್ರಾಯಗಳು ಪ್ರಬಂಧಗಳ ಸ್ವರೂಪವನ್ನು ಗಮನಿಸುವಾಗ ಒಂದು ರೀತಿಯ ನಾಟಕೀಯತೆ ಅವರ ಪ್ರಬಂಧಗಳಲ್ಲಿ ಎದ್ದು ಕಾಣುತ್ತದೆ. ಒಂದು ಜೀವಂತ ಪರಿಸರ ನಮ್ಮನ್ನು ತನ್ನಲ್ಲಿ ಅಂತರ್ಗತಗೊಳಿಸಿಕೊಳ್ಳುತ್ತದೆ. ಎಲ್. ಎಸ್. ಶೇಷಗಿರಿರಾಯರು ಹೊಸಗನ್ನಡ ಸಾಹಿತ್ಯ ಕೃತಿಯಲ್ಲಿ ಹೇಳಿದ ಮಾತು ಮೂರ್ತಿರಾಯರ ಕೃತಿಗಳಿಗೆ ಅನ್ವಯವಾಗುವುದಿಲ್ಲ.

"ಲಲಿತ ಪ್ರಬಂಧದಲ್ಲಿ ಪ್ರಬಂಧಕಾರ ಆರಿಸಿದ ವಿಷಯವನ್ನು ತರ್ಕಬದ್ಧವಾಗಿ ಬೆಳೆಸುವುದಿಲ್ಲ". (1988 ಪುಟ 294)

ಪ್ರಬಂಧವ್ಯಾಖ್ಯಾನ ಮೂರ್ತಿರಾಯರ ಪ್ರಬಂಧಗಳಿಗೆ ಅನ್ವಯವಾಗುವುದಿಲ್ಲ. ಏಕೆಂದರೆ ಹೆಚ್. ಎಸ್. ಕೆ. ಯವರ ಮಾತಿನಂತೆ ಅವರ ಪ್ರಬಂಧಗಳು ಸಣ್ಣ ಕತೆಗಳ ಲಕ್ಷಣದಿಂದ ಸಮನ್ವಿತವಾಗಿವೆ. ಆದರೆ ಅವರೇ ಹೇಳಿದ ಈ ನಿಯಮಗಳು ಅವರ ಪ್ರಬಂಧಗಳಿಗೆ ಚೆನ್ನಾಗಿ ಹೊಂದಿಕೊಳ್ಳುತ್ತವೆ.

"ಈ ಪ್ರಕಾರದಲ್ಲಿ ಮುಖ್ಯವಾದ ಅಂಶ ಎಂದರೆ, ಬರಹಗಾರ ಅಹಂಕಾರವೂ ಇಲ್ಲದೆ ಸಂತೋಷವೂ ಇಲ್ಲದೆ ಆತ್ಮೀಯ ಗೆಳೆಯರೊಡನೆ ಮಾತನಾಡುವಂತೆ

ಬರೆಯಬೇಕು, ಎನ್ನುವುದು. ಆತ್ಮಶ್ಲಾಘನೆಯ ನೆರಳು ಬೀಳದಂತೆ ಬರೆಯಬೇಕು ಎನ್ನುವುದು. ದೃಷ್ಟಿಯಲ್ಲಿ ಹೊಸತನ ಇರಬೇಕು. ಬರಹದಲ್ಲಿ ಲವಲವಿಕೆಯು ಇರಬೇಕು. ಅತಿ ಗಾಂಭೀರ್ಯವಾಗಲಿ ಹುಡುಗಾಟಿಕೆಯಾಗಲಿ ಸಲ್ಲದು"

(ಅದೇ ಪುಟ 295)

ಶೇಷಗಿರಿರಾಯರು ಹೇಳಿದ ಈ ಲಕ್ಷಣಗಳು ಸಮಗ್ರ ಪ್ರಬಂಧ ಪ್ರಕಾರಕ್ಕೂ ಮೂರ್ತಿರಾಯರ ಪ್ರಬಂಧಗಳಿಗೆ ಅತ್ಯಂತ ಸಮರ್ಪಕವಾಗಿ ಸಮಂಜಸವಾಗಿ ಅನ್ವಯಿಸ ಬಹುದಾದಂತಹವು. ಮೂರ್ತಿರಾಯರ ಪ್ರಬಂಧಗಳ ಮೌಲ್ಯಮಾಪನವನ್ನು ಅವರು ಹೀಗೆ ಮಾಡಿದ್ದಾರೆ.

"ಈ ಪ್ರಕಾರದಲ್ಲಿ ಅತ್ಯಂತ ಶ್ರೇಷ್ಠ ಸಾಧನೆ ಎ. ಎನ್. ಮೂರ್ತಿರಾಯರದು. ('ಹಗಲುಗನಸುಗಳು' 1937, 'ಅಲೆಯುವ ಮನ' 1957, 'ಮಿನುಗು ಮಿಂಚು' 1962) ಎರಡನೆಯ ಸಂಗ್ರಹದಲ್ಲಿರುವ ಕೆಲವು ಪ್ರಬಂಧಗಳು ಪ್ರಪಂಚದ ಅತ್ಯಂತ ಶ್ರೇಷ್ಠ ಪ್ರಬಂಧಗಳ ಪಂಕ್ತಿಯಲ್ಲಿ ನಿಲ್ಲಬಲ್ಲವು. ಮನುಷ್ಯ ಸ್ವಭಾವದಲ್ಲಿ ಆಸಕ್ತಿ, ಇತರರನ್ನು ತೂಗಿ ನೋಡುವಾಗ ಅನುಕಂಪ, ಸಹನೆ ಒಳ್ಳೆಯದು. ಎಲ್ಲಿದ್ದರೂ ಕಾಣುವ ಕಣ್ಣು, ಒಂದು ವಿಷಯವನ್ನು ಅಥವಾ ಸನ್ನಿವೇಶವನ್ನು ಬೇರೆ ಬೇರೆ ದೃಷ್ಟಿಗಳಿಂದ ಕಾಣುವ ಶಕ್ತಿ, ಚಿಂತನೆ ಹಾಸ್ಯಗಳ ಅನನ್ಯ ಹೆಣಿಗೆ (ಮುಖ್ಯವಾಗಿ ಎರಡನೆಯ ಸಂಗ್ರಹದಲ್ಲಿ) ಸಾಮಾನ್ಯ ಸಂಗತಿಯಿಂದ ಪ್ರಾರಂಭವಾಗಿ, ಸಹಜವಾಗಿ ಆಳವಾದ ಚಿಂತನಾಯುಕ್ತ ಪ್ರಬಂಧ ಸಾಗುವ ವೈಖರಿ ಇವು, ಲವಲವಿಕೆಯ ಪ್ರಸನ್ನವಾದ ಶೈಲಿಯೊಡನೆ ಸೇರಿ ಮೂರ್ತಿರಾಯರನ್ನು ಈ ಕ್ಷೇತ್ರದಲ್ಲಿ ಅದ್ವಿತೀಯರನ್ನಾಗಿ ಮಾಡಿದೆ.

(ಪುಟ 296)

ನವೋದಯ ಕಾಲದಲ್ಲಿ ಅತ್ಯಂತ ಜನಪ್ರಿಯವಾಗಿದ್ದ ಲಲಿತ ಪ್ರಬಂಧದ ಪ್ರಕಾರ ಈಚೀಚೆಗೆ ಕಣ್ಮರೆಯಾಗುತ್ತಿದೆ. ಈಗಲೂ ಎ.ಎನ್. ಮೂರ್ತಿರಾಯರು, ವಿ.ಸೀ., ಪು.ತಿ.ನ., ದ. ಬಾ. ಕುಲಕರ್ಣಿ, ರಾ.ಕು, ಮೊದಲಾದವರ ಹೆಸರು ಕೇಳಿದರೆ ಸಾಕು ತುಂಬ ನವುರಾದ ಭಾವಗೀತಾತ್ಮಕ ಗದ್ಯ ಕಿವಿ ತುಂಬುತ್ತದೆ. ಮತ್ತೆ ಈಗ ಆ ಪ್ರಕಾರಕ್ಕೆ ಓದುವರಿಲ್ಲವೆಂದು ಹೇಳುವಂತಿಲ್ಲ. ಏಕೆಂದರೆ ಕೆಲವು ವರ್ಷಗಳ ಹಿಂದೆ ಶ್ರೀಮತಿ ಸುನಂದಾ ಬೆಳಗಾಂವಕರ ಅವರ "ಕಜ್ಜಾಯ" ಪ್ರಬಂಧ ಸಂಕಲನ ಪ್ರಕಟವಾದಾಗ ಓದುಗರಿಂದ ಬಂದ ಮೆಚ್ಚುಗೆ ಅಷ್ಟಿಷ್ಟಲ್ಲ.

ಮೂರ್ತಿರಾಯರು ಸಮಕಾಲೀನರಲ್ಲಿ ಒಬ್ಬರಾದ ಡಾ. (ಪದ್ಮಶ್ರೀ) ಪು.ತಿ.ನರಸಿಂಹಾಚಾರ್ ರವರ ಪ್ರಬಂಧಗಳೂ ಕೂಡಾ ಕೆಲಮಟ್ಟಿಗೆ ಮೂರ್ತಿರಾಯರ ಪ್ರಬಂಧಗಳಂತೆಯೇ ಒಂದು ಶುಚಿ ಮನೋಧರ್ಮದ ಪ್ರತೀಕಗಳಾಗಿವೆ. ಆದರೆ ಕೆಲವು ಪ್ರಬಂಧಗಳು ಪತ್ರ ರೂಪದಲ್ಲಿರುವುದರಿಂದ ಅವು ಒಂದು ರೀತಿಯ ಪತ್ರ ಪ್ರಬಂಧ ಗಳಾಗಿವೆ. ಆದರೆ ಕೆಲವು ಪ್ರಬಂಧಗಳು ಕಲ್ಪನಾತ್ಮಕವಾಗಿವೆ. ಅವರ "ಈಚಲು ಮರದ ಕೆಳಗೆ", "ಬೀದಿಯ ಬಸವ" ಮುಂತಾದ ಪ್ರಬಂಧಗಳು ಇದಕ್ಕೆ ನಿದರ್ಶನ. ಮೂರ್ತಿ ರಾಯರ ಪ್ರಬಂಧಗಳು ಕೌಟುಂಬಿಕವಾಗಿವೆ. ಒಂದು ಚಿಕ್ಕ ಚೊಕ್ಕ ಸುಖೀ ಸಂಸಾರದ ವಾತಾವರಣ ಪ್ರಪಂಚ ನಮ್ಮ ಮುಂದೆ ತೆರೆದುಕೊಳ್ಳುತ್ತದೆ. ಆದರೆ ಪುತಿನ ರವರ ಪ್ರಬಂಧದ ವ್ಯಾಪ್ತಿ, ಕೊಳ, ನೌಕೆ, ಧಾರ್ಮಿಕ ಸಮಾರಂಭಗಳವರೆಗೂ ಹರಡಿರುವುದನ್ನು

ನಾವು ಕಾಣಬಹುದು. ಪುತಿನರವರು ಸಹಜವಾಗಿ ಸಂಪ್ರದಾಯ, ಆಚಾರ, ನಿಷ್ಠೆಗಳಲ್ಲಿ ಶ್ರದ್ಧೆಯುಳ್ಳವರಾದುದರಿಂದ, ಗೋಕುಲಾಷ್ಟಮಿಯಂತಹ ಧಾರ್ಮಿಕ ಸಮಾರಂಭ ವೊಂದರ ಚಿತ್ರಾತ್ಮಕ ಪ್ರಬಂಧ ಮೂಡಿ ಬರಲು ಅವಕಾಶವಾಯಿತು. ಇದೇ ರೀತಿ 'ರಥ ಸಪ್ತಮಿ', 'ನಾರಾಯಣನ ಗುಡಿಯಲ್ಲಿ', 'ಮೇಲ್ ಮಾಳಿಗೆ ಉತ್ಸವ' ಮುಂತಾದ ವರ್ಣನಾಪರ ಪ್ರಬಂಧಗಳನ್ನೂ ಇದೇ ವರ್ಗಕ್ಕೆ ಸೇರಿಸಬಹುದು.

ಪುತಿನರವರ ಪ್ರಬಂಧದ ಮೇಲೆ ಅವರ ಧಾರ್ಮಿಕ ಮನೋಭಾವ ಮುದ್ರೆ ಇದೆ. ಅವರ ಈ ಧಾರ್ಮಿಕ ಶ್ರದ್ಧೆ ಧರ್ಮಗ್ರಂಥಗಳ ಅಧ್ಯಯನದಿಂದ ಪುಷ್ಟವಾಗಿದೆ. ಆದುದರಿಂದಲೇ ಅವರ ಪ್ರಬಂಧಗಳಲ್ಲಿ ಸಂಸ್ಕೃತ ಶಬ್ದಗಳು ಹಾಸುಹೊಕ್ಕಾಗಿವೆ. ಸುಲಭ ಸರಳ ಗ್ರಾಹ್ಯ ಕನ್ನಡ ಶಬ್ದಗಳನ್ನು ಬಳಸುವ ಕಡೆಗಳಲ್ಲೂ ಸಂಸ್ಕೃತ ಶಬ್ದಗಳೇ ತುಂಬಿಕೊಂಡಿವೆ. ಕನ್ನಡ ಶಬ್ದಗಳ ಸ್ಥಾನವನ್ನು ಸಂಸ್ಕೃತ ಶಬ್ದಗಳು ಆಕ್ರಮಿಸಿಕೊಂಡಿರು ವುದರ ಬಗ್ಗೆ ಸ್ವಯಂ ಪುತಿನರವರೇ "ಸಂಸ್ಕೃತ ಶಬ್ದಗಳ ಪ್ರಾಚುರ್ಯ ಮತ್ತೊಂದು ಕುಂದು" ('ಜಿನ್ನಹ ' ಈಚಲು ಮರದ ಕೆಳಗೆ 1981 ಪುಟ 3)ಎಂದಿದ್ದಾರೆ. ಇದರೊಂದಿಗೆ ಪುತಿನರವರ ಪ್ರಬಂಧಗಳಲ್ಲಿ ಅವರ ಅಧ್ಯಯನದ ಪ್ರಭಾವವನ್ನು ನಾವು ಗಮನಿಸುತ್ತೇವೆ. ಹಳೆಗನ್ನಡ, ಸಂಸ್ಕೃತ, ಇಂಗ್ಲೀಷ್ ಹಾಗೂ ತಮಿಳು ಭಾಷೆ ಸಾಹಿತ್ಯಗಳಿಂದ ಉದ್ಧೃತ ಭಾಗಗಳನ್ನು ಅವರ ಪ್ರಬಂಧಗಳ ನಡುನಡುವೆ ಉಲ್ಲೇಖಿಸಿರುವುದನ್ನು ನಾವು ಕಾಣುತ್ತೇವೆ. ಮೂರ್ತಿರಾಯರ ಪ್ರಬಂಧಗಳಲ್ಲಿ ಇಂತಹ ಉಲ್ಲೇಖಗಳನ್ನು ನಾವು ಎಲ್ಲಿಯೂ ಕಾಣುವುದಿಲ್ಲ. ಅವರಿಗೆ ಪುತಿನರಂತೆಯೇ ಕನ್ನಡ, ಇಂಗ್ಲೀಷ್ ಹಾಗೂ ಸಂಸ್ಕೃತ ಭಾಷೆಗಳ ಜ್ಞಾನ ಅತ್ಯಂತ ಆಳವಾಗಿ ಇರುವುದಾದರೂ ತಾವು ಓದಿದ ಸಾಹಿತ್ಯ ಕೃತಿಗಳಿಂದ ಉದ್ಧೃತ ಭಾಗಗಳನ್ನು ಅವರು ಉಲ್ಲೇಖಿಸುವುದಿಲ್ಲ. ಪುತಿನರವರು ಠಾಕೂರ್, ಗೊರೂರು, ಸಂಸ್ಕೃತ ಧರ್ಮಗ್ರಂಥಗಳ ಭಾಗ, ಗೀತೆ, ಉಪನಿಷತ್, ರಾಮಾಯಣ, ಭಾರತ, ರಾಘವಾಂಕ, ಪಂಪ, ಸಂಸ್ಕೃತ ಮುಕ್ತಕಗಳು ಹಾಗೂ ಸಮಕಾಲೀನರ (ಶ್ರೀನಿವಾಸ, ಗೊರೂರು, ತೀನಂಶ್ರೀ) ಕೃತಿಗಳಿಂದ ಆಯ್ದ ಸನ್ನಿವೇಶ ಗಳನ್ನು ಉಲ್ಲೇಖಿಸುತ್ತಾರೆ. ಮೂರ್ತಿರಾಯರ ಪ್ರಬಂಧಗಳು ಈ ಶೈಲಿಗೆ ಹೊರತಾದುವು. ತಾವು ಓದಿದ ಯಾವುದೇ ಕೃತಿಯಿಂದಲೂ ಅವರು ಉದ್ಧೃತ ಭಾಗಗಳನ್ನು ಉಪಯೋಗಿಸಿ ದವರಲ್ಲ, ಅನಂತರದ ಪೀಳಿಗೆಯವರಾದ ಶ್ರೀ ಅ.ರಾ. ಮಿತ್ರರ ಪ್ರಬಂಧಗಳಲ್ಲಿಯೂ ನಾವು ಪುತಿನರವರ ಶೈಲಿಯನ್ನೇ ಕಾಣುತ್ತೇವೆ. ಅವರ "ಸಂಕಲ್ಪಗಳು", ಎಂಬ ಪ್ರಬಂಧ ಸಂಕಲನ ಇದಕ್ಕೆ ನಿದರ್ಶನ (1985). ಇದಕ್ಕೆ ಕಾರಣ ಶ್ರೀ ಮಿತ್ರರು ಬರೆಯುವ ಕಾಲಕ್ಕಾಗಲೇ ಕನ್ನಡದಲ್ಲಿ ಸಾಕಷ್ಟು ಸಮೃದ್ಧ ಸಾಮಗ್ರಿ ಸಿದ್ಧವಾಗಿತ್ತು. ಅವರು ತಮ್ಮ ಅನುಭವಾತ್ಮಕ ಪ್ರಬಂಧವನ್ನು ವಸ್ತು ಪ್ರಬಂಧವೆಂದೂ ಉಳಿದವುಗಳನ್ನು ಲಲಿತ ಪ್ರಬಂಧಗಳೆಂದೂ ಕರೆದಿದ್ದಾರೆ (ಸಂಕಲ್ಪಗಳು1985 ಮರು ಮುದ್ರಣದ ಪ್ರಸ್ತಾವನೆ ಪುಟ 1) (ಆದರೆ ಕೃತಿಗೆ 'ಪ್ರಬಂಧ ಸಂಗ್ರಹ'ವೆಂದೇ ಶೀರ್ಷಿಕೆ ಇದೆ).

ಪುತಿನರವರ ಪ್ರಬಂಧದ ವ್ಯಾಪ್ತಿ ಮೂರ್ತಿರಾಯರ ಪ್ರಬಂಧಗಳಿಗಿಂತ ಹೇಗೆ ಭಿನ್ನವೊ ಹಾಗೆಯೇ ಉದ್ದೇಶವೂ ಭಿನ್ನ. ಮೂರ್ತಿರಾಯರು ತಮ್ಮ ಪ್ರಬಂಧ ರಚನೆಯ ಉದ್ದೇಶಗಳನ್ನು ಎಲ್ಲಿಯೂ ಇದಮಿತ್ಥಂ ಎಂದು ಹೇಳಿದವರಲ್ಲ. ಆದರೆ ಪುತಿನರವರು "ಈಚಲು ಮರದ ಕೆಳಗೆ" ಪ್ರಬಂಧ ಸಂಕಲನದಲ್ಲಿ ಹೀಗೆಂದಿದ್ದಾರೆ.

ಈ ಬಂಧಗಳ ಧ್ಯೇಯ ಆಲೋಚನಾ ಪ್ರಚೋದನೆ (ಪುಟ 3) ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಅಷ್ಟೇ ಅಲ್ಲದೆ ಅವರು ತಮ್ಮ ಈ ಪ್ರಬಂಧಗಳನ್ನು ಭಾವನಾಲಹರಿ ಚಿತ್ತಲಹರಿಗಳೆಂದು ಕರೆದಿದ್ದಾರೆ.

"ಇಲ್ಲಿ ಸಂಗ್ರಹಿಸಿರುವ ಭಾವನಾಲಹರಿಗಳಲ್ಲಿ ಹಲವಾದರೂ ಪ್ರಬಂಧಗಳ ರೀತಿಯಲ್ಲಿವೆ ಎಂದು ನನ್ನ ಭಾವನೆ.... ಈ ಚಿತ್ತಲಹರಿಗಳು ಓದುಗರ ಮೆಚ್ಚಿಕೆಗೆ ಪಾತ್ರವಾಗಲೆಂದು ನನ್ನ ಆಸೆ". (ಅದೇ ಪುಟ 3)

ತಮ್ಮ ಉದ್ದೇಶವೇನೆಂದು ಅವರು ಮುಂದುವರಿದು ಈ ರೀತಿಯಾಗಿ ಹೇಳುತ್ತಾರೆ.

"ಲೋಕದ ಡೊಂಕನ್ನು ತಿದ್ದಬೇಕೆಂಬ ಚಟ, ಹೊಸ ದೃಷ್ಟಿಯನ್ನು ಮೂಡಿಸಬೇಕು ಹಾಗೂ ಹೊಸ ತತ್ವಗಳನ್ನು ಹರಡಬೇಕೆಂದು. ಇವರೆಡೂ ಇಲ್ಲಿನ ಲೇಖನಗಳಲ್ಲಿ ಅಲ್ಲಲ್ಲಿ ತಲೆ ಹಾಕಿದ್ದರೆ ಅದು ನನ್ನ ದೌರ್ಬಲ್ಯವನ್ನು ತೋರಿಸುತ್ತದೆಯೇ ಹೊರತು ಶಕ್ತಿಯನ್ನಲ್ಲ". (ಅದೇ ಪುಟ 3)

ಆದರೆ ಮೂರ್ತಿರಾಯರಿಗೆ ಪ್ರಬಂಧ ರಚನೆ ಮಾಡುವಾಗ ಇಂತಹ ಯಾವ ಉದ್ದೇಶವೂ ಇದ್ದಂತಿಲ್ಲ. ಕೇವಲ ಸ್ವಾಂತಃಸುಖಾಯಕ್ಕಾಗಿ ಬರೆದವು. ಮೂರ್ತಿರಾಯರ ಪ್ರಬಂಧಗಳು ದೇಸೀ ಶೈಲಿಯಲ್ಲಿ ಬರೆಯಲಾದವು. ಅವರು ಸಂಸ್ಕೃತ ಶಬ್ದಗಳನ್ನಾಗಲೀ, ಕಾವ್ಯ ಭಾಗಗಳನ್ನಾಗಲೀ, ಸುಭಾಷಿತಗಳನ್ನಾಗಲೀ, ಪ್ರಬಂಧಗಳಲ್ಲಿ ಉಲ್ಲೇಖಿಸಿದವರಲ್ಲ. ಇದರಿಂದ ಮೂರ್ತಿರಾಯರ ಪ್ರಬಂಧಗಳು ಒಂದೇ ದಿಕ್ಕಿನತ್ತ ಸಾಗಿದ ವಿಷಯ ವಸ್ತುಗಳನ್ನುಳ್ಳವು. ಪ್ರಬಂಧಗಳು ಹೀಗೆ ನೇರ ಏಕಮುಖವಾಗಿರುವುದರಿಂದ ಓದುಗಾರಿಕೆ ವಿಚ್ಛೇದನಕ್ಕೆ ಒಳಗಾಗುವುದಿಲ್ಲ.

ಮೂರ್ತಿರಾಯರು ಹಾಗೂ ಪುತಿನರವರ ನಡುವೆ ಸಾಮ್ಯಗಳು ಇಲ್ಲವೆಂತಲ್ಲ. ಮೂರ್ತಿರಾಯರ "ಅಕ್ಕಿ ಹೆಬ್ಬಾಳು" ಎಂಬ ಪ್ರಬಂಧವನ್ನು ಪುತಿನರವರ "ನಾರಾಯಣನ ಗುಡಿಯಲ್ಲಿ", "ತಿರುನಕ್ಷತ್ರ" ಪ್ರಬಂಧಗಳೊಂದಿಗೆ ಹೋಲಿಸಬಹುದು. ಮೂರ್ತಿರಾಯರು ಅಕ್ಕಿ ಹೆಬ್ಬಾಳಿಗೆ ಒಂದು ಸಲ ಹೋಗಿ ಅಲ್ಲಿನ ಗತವೈಭವವನ್ನು ನೆನಪಿಗೆ ತಂದುಕೊಂಡು ಸುಖಿಸಿದ ಒಂದು ಸುಂದರ ಘಟನೆಯನ್ನು ಅಕ್ಕಿ ಹೆಬ್ಬಾಳು ಎಂಬ ಪ್ರಬಂಧದಲ್ಲಿ ನಿರೂಪಿಸಿದ್ದಾರೆ. ಕುವೆಂಪುರವರಿಗೆ ಕುಪ್ಪಳ್ಳಿ, ರಾಮಸ್ವಾಮಿ ಅಯ್ಯಂಗಾರ್ಯರಿಗೆ ಗೋರೂರು, ಪುತಿನರವರಿಗೆ ಮೇಲುಕೋಟೆ ಮೌಲ್ಯಗಳನ್ನು ಮೂರ್ತಿರಾಯರು ಸೌಂದರ್ಯದಲ್ಲಿ ತಮ್ಮ ದೃಷ್ಟಿಯ ದೈವತ್ವವನ್ನು ಕಂಡ ಬಗೆ ಇದೆ. ನಾವೂ ಹೀಗೆ ಮತ್ತೊಂದು ವಾಕ್ಯವನ್ನು ಸೇರಿಸಬಹುದು. ಮೂರ್ತಿರಾಯರಿಗೆ ಹಿತವಾದ ಪ್ರಸನ್ನವಾದ ಸಂತೋಷವನ್ನು ಯಾವುದು ನೀಡುವುದೋ ಅದು ದೇವರು.

ಮೂರ್ತಿರಾಯರಿಗೆ ಮೌಲ್ಯಾತ್ಮಕವಾದುದು, ಕಲಾತ್ಮಕವಾದುದು ದೇವರಾದರೆ ಪುತಿನರವರಿಗೆ ಪಾರಮಾರ್ಥಿಕವಾದುದು, ಮಾನವಾತೀತವಾದುದು ಹಾಗೂ ಧಾರ್ಮಿಕವಾದುದು ದೇವರಾಗುತ್ತದೆ. ಅವರ ಸಹಜ ಸ್ವಭಾವಕ್ಕೆ ಭಾಗವತದಂತಹ ಪುರಾಣ ಕಾವ್ಯದಿಂದ ಪ್ರಭಾವಿತರಾದ ಅವರ ಮನಸ್ಥಿತಿಗೆ ದೇವರು ಹೇಗೆ ಕಾಣಿಸುತ್ತಾರೆ ಎಂದು "ರಥ ಸಪ್ತಮಿ"ಯಲ್ಲಿ ಹೀಗೆ ಹೇಳಿದ್ದಾರೆ.

"ಆಮೇಲೆ ನಾರಾಯಣ ಸ್ವಾಮಿಯ ಮುಂದುಗಡೆ ಎಷ್ಟು ವಿನಯದಿಂದ ನಿಲ್ಲುತ್ತಿದ್ದೆ, ಪ್ರಪಂಚದಲ್ಲಿ ಆತನೊಬ್ಬನೇ ಸತ್ವಶಾಲಿಯೆಂದೂ, ಆತನಿಗೆ ಸಾಧ್ಯವಾಗದ್ದು ಯಾವುದೂ ಇಲ್ಲವೆಂದು ನಾನು ಹೇಗೆ ಭಾವಿಸಿಕೊಳ್ಳುತ್ತಿದ್ದೆ".

ನಮ್ಮ ಈ ನಾರಾಯಣ ಮೂರ್ತಿಯನ್ನು ಮನುಷ್ಯರಾಗಲಿ, ದೇವ ಶಿಲ್ಪಿಗಳಾಗಲೀ ಶಿಲೆಯಿಂದ ಕಡೆದರೆಂದರೆ ನಮ್ಮವರು ನಂಬುವುದಿಲ್ಲ. ಈ ವಿಗ್ರಹವು (ಅಪೌರುಷೇಯ) ವೆಂದೂ, ತನಗೆ ತಾನೇ ಉದ್ಭವಿಸಿತೆಂದೂ, ಅವರ ನಂಬಿಕೆ . ಈ ಮೂರ್ತಿಯ ಪ್ರಶಾಂತ ಚಿತ್ ಸೌಂದರ್ಯವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡು, ಅದನ್ನು ಧರಿಸಿಕೊಂಡು ಮನುಷ್ಯ ನೊಬ್ಬನು ಅದನ್ನು ಕಲ್ಲಿನಲ್ಲಿ ಕೆತ್ತಿಟ್ಟನೆಂದರೆ ನನಗೂ ನಂಬುವುದು ದುಸ್ಸಾಧ್ಯ. ಈ ಅಪೌರುಷೇಯತ್ವದ ನಂಬಿಕೆಯು ವೇದಗಳು ಅಪೌರುಷೇಯಗಳೆಂಬ ನಂಬಿಕೆಯಷ್ಟು ಘನವಾದುದು. ಈ ಸುಂದರ ಶ್ಯಾಮ ವಿಗ್ರಹಕ್ಕೆ ನಮ್ಮೂರು ಅದು ಹುಟ್ಟಿದಂದಿನಿಂದ ತನ್ನ ಸರ್ವಸ್ವವನ್ನು ಮೀಸಲಾಗಿಟ್ಟುಬಿಟ್ಟಿದೆ. ಜನತೆಯು ಈ ಮೂರ್ತಿಯನ್ನು ತನ್ನ ನಿಧಿಯೆಂದು, ಅಲ್ಲ ತಂದೆಯೆಂದು ಭಾವಿಸಿಕೊಂಡಿದೆ. ತಮ್ಮ ಸತ್ವವೆಲ್ಲವನ್ನೂ ಈ ಸಂಸಾರೋತ್ತಾರಕನು ತಮಗಾಗಿ ಕಾದಿಟ್ಟುಕೊಂಡಿದ್ದಾನೆ ಎಂದವರ ನಂಬಿಕೆ. ಅವರ ಆಸೆಗಳ ಸಮರ್ಪಣೆ ಇಲ್ಲಿ, ಕಂಬನಿಯ ನಿವೇದನ ಇಲ್ಲಿ, ನೆಚ್ಚಿನ ಭಂಡಾರ ಇಲ್ಲಿ, ಸಂತೋಷದ ಸೂರೆ ಇಲ್ಲಿ. ಈ ಬಾಳಿನಲ್ಲಿ ತಾವು ನಶ್ವರರಿರಬಹುದು. ನೋವಿನಲ್ಲಿ ನರಳಿ, ನಲಿವಿನಲ್ಲಿ ಮೆರೆದು, ಭವದಲ್ಲಿ ಬಂಧಿಗಳಾಗಿರಬಹುದು. ಆದರೆ ಆದಷ್ಟು ಬದುಕಿನಲ್ಲೂ ಅವನು ತನ್ನ ಸೇವೆಗೆ ತಮ್ಮನ್ನು ವಿನಿಯೋಗಿಸಿಕೊಂಡು ಬಾಳಿಗೆ ಹೀಗೆ ಸಾರ್ಥಕತೆಯನ್ನುಂಟುಮಾಡಿದ್ದಾನೆ. ಈ ಬದುಕಾದ ಮೇಲೆ ತನ್ನ ಸನ್ನಿಧಿಗೆ ತಮ್ಮನ್ನು ಕರೆದುಕೊಳ್ಳುತ್ತಾನೆ ಎಂದವರು ತಿಳಿದುಕೊಂಡಿದ್ದಾರೆ. ಈ ಜನಕ್ಕೂ ಈ ಮೂರ್ತಿಗೂ ಇರುವ ತಾತ್ವಿಕ ಸಂಬಂಧ ಇಂಥದೇ ಎಂದು ಹೇಳುವುದು ಕಷ್ಟ. ಒಂದು ಮಾತಿನಲ್ಲಿ ಹೇಳಬಹುದಾದರೆ ಪ್ರಭುವಿಗೂ ಭೃತ್ಯನಿಗೂ, ತಂದೆಗೂ, ಮಗನಿಗೂ ಪ್ರಿಯನಿಗೂ, ಪ್ರೇಯಸಿಗೂ, ಕೆಳೆಯನಿಗೂ, ಗೆಳೆಯನಿಗೂ, ಯಾವ ಸಂಬಂಧಗಳಿವೆಯೋ ಅವುಗಳೆಲ್ಲ ಕ್ಕಿಂತಲೂ ಹೆಚ್ಚು ದೃಢವಾದ ಹೆಚ್ಚು ಗಾಢವಾದ ಹೆಚ್ಚು ನಿಜವಾದ ಸಂಬಂಧವು ನಮ್ಮೂರಿ ನವರಿಗೂ ಈ ಮೂರ್ತಿಗೂ ಇರುತ್ತದೆ ಎನ್ನಬಹುದು. ಕಷ್ಟಗಳ ಸುರಿಮಳೆಯಲ್ಲೂ ಈ ಸಂಬಂಧ ಸಡಿಲುವುದಿಲ್ಲ. ನಾರಾಯಣನು ಕಲ್ಯಾಣದಾಯಕನೆಂಬ ನಚ್ಚು ನಂದುವುದಿಲ್ಲ. (ಪುಟ 40–41)

ಪುತಿನರವರು ಈ ಪ್ರಜ್ಞಾ ಪ್ರವಾಹ ತಂತ್ರದಿಂದ ಈ ವಿಗ್ರಹ ಮಾಧ್ಯಮದಿಂದ ವೈದಿಕ ಕಾಲಕ್ಕೂ ಹೋಗುತ್ತಾರೆ. ಜನರ ದೃಷ್ಟಿಯಿಂದಲೂ ದೇವರನ್ನು ನೋಡುತ್ತಾರೆ. ಜನಜೀವನದಲ್ಲಿ ಆ ದೇಶದ ಸ್ಥಾನವನ್ನು ನಿರ್ದೇಶಿಸುತ್ತಾರೆ. ಅಲೌಕಿಕ, ಪಾರಮಾರ್ಥಿಕ, ಧಾರ್ಮಿಕ ದೃಷ್ಟಿಗಳಿಂದ ದೇವರನ್ನು ಕಾಣುತ್ತಾರೆ. ಇಲ್ಲಿ ಪುತಿನರವರು ಒಂದು ವರ್ಗದ ಭಾವುಕರ-ಪ್ರತಿನಿಧಿಯಾಗಿ ಮಾತನಾಡುತ್ತಾರೆ. ಆದರೆ ಮೂರ್ತಿರಾಯರು ಇಂತಹ ಪ್ರಾತಿನಿಧ್ಯವನ್ನು ವಹಿಸುವುದಿಲ್ಲ. ಪುತಿನರವರಲ್ಲಿ ಬಾಲ್ಯದ ಮುಗ್ಧತೆ ಮುಂದುವರಿದು ಆಧ್ಯಾತ್ಮಿಕತೆಯಲ್ಲಿ ಪರ್ಯವಸಾನವಾದರೆ, ಮೂರ್ತಿರಾಯರಲ್ಲಿ ವಾಸ್ತವಿಕತೆಯ ಸ್ಪರ್ಶ ಪಡೆದ ಆಧ್ಯಾತ್ಮಿಕತೆಯಿದೆ. ಮೂರ್ತಿರಾಯರು ದೇವರನ್ನು ವೈಭವೀಕರಿಸುವುದಿಲ್ಲ. ಮೂರ್ತಿರಾಯರು ಲೌಕಿಕರ ದೃಷ್ಟಿಯಿಂದ ದೇವರನ್ನು ವೈಭವೀಕರಿಸುತ್ತಾರೆ. ಮೂರ್ತಿ

ರಾಯರದು ವಾಸ್ತವಿಕವಾದ ಚಿತ್ರವತ್ತಾದ ವರ್ಣನೆ. ಪುತಿನರವರದು ಭಾವನಾತ್ಮಕ ವರ್ಣನೆ. ಮೂರ್ತಿರಾಯರಿಗೆ ಅಕ್ಕಿ ಹೆಬ್ಬಾಳು ಹೇಗೋ ಹಾಗೆ ಕುವೆಂಪುರವರಿಗೆ ಕುಪ್ಪಳಿ, ನವಿಲುಕಲ್ಲು. ಕುಪ್ಪಳ್ಳಿ ಪ್ರಿಯವಾಗುವುದು ಅಲ್ಲಿಯ ಸೂರ್ಯೋದಯ ಹಾಗೂ ಸುತ್ತ ಮುತ್ತಲ ವನಸಿರಿಯಿಂದಾಗಿ. ರಾಮಸ್ವಾಮಿ ಅಯ್ಯಂಗಾರ್ಯರಿಗೆ ಗೊರೂರು ಪ್ರಿಯ ವಾಗುವುದು ಅಲ್ಲಿಯ ಹೇಮಾವತಿ ನದಿಯಿಂದಾಗಿ, ಶಾಲುಸಾಬಿಯಂತಹ ಆತ್ಮೀಯ ರಿಂದಾಗಿ. ಪುತಿನರವರಿಗೆ ಮೇಲುಕೋಟೆ ಪ್ರಿಯವಾಗುವುದು ಅಲ್ಲಿಯ ತಿರುನಕ್ಷತ್ರದಂದು ನಡೆಯುವ ಶ್ರೀ ರಾಮಾನುಜಾಚಾರ್ಯರ ಉತ್ಸವದಿಂದಾಗಿ. ಕುವೆಂಪುರವರ ಮಲೆನಾಡಿನ ಕುಪ್ಪಳ್ಳಿಯಲ್ಲಿ ಪುಟ್ಟಾಚಾರಿ, ಅಜ್ಜಯ್ಯ, ಓಬು, ಅಣ್ಣಪ್ಪ, ಕಾಡುಕೋಳಿ ಬೇಟೆ, ಜೇನು ಬೇಟೆ, ಕತೆಗಾರ ಮಂಜಣ್ಣ, ಮಲೆನಾಡಿನ ಗೋಪಾಲಕರು ಮುಂತಾದ ಒಂದು ಪುಟ್ಟ ಪ್ರಪಂಚವೇ ತೆರೆದುಕೊಳ್ಳುತ್ತದೆ. ಮೂರ್ತಿರಾಯರ ಅಕ್ಕಿ ಹೆಬ್ಬಾಳು ಅಂದಿನ ಹಾಗೂ ಇಂದಿನ ಎರಡು ಚಿತ್ರಗಳನ್ನು ನಮ್ಮ ಮುಂದೆ ಬಿಚ್ಚಿ ಇಡುತ್ತದೆ. ಅಲ್ಲಿಯ ಕೊಪ್ಪರಿಗೆ ಮಡು, ಕಲ್ಯಾಣಿದಾಸ-ಇವರಿಂದಾಗಿ ಮೂರ್ತಿರಾಯರು ತಮ್ಮ ಕಾಲದ ಅಕ್ಕಿ ಹೆಬ್ಬಾಳನ್ನು ಕಲ್ಪಿಸಿಕೊಳ್ಳುತ್ತಾರೆ. ಕೊಪ್ಪರಿಗೆ ಮಡುವಿನಲ್ಲಿ ಓಂಕಣ್ಣು-ಮುಂಕಣ್ಣು ಲಾಗ ಹಾಕಿ ಈಜಿ, ಮರಳಿನ ಮೇಲೆ ಬಿಸಿಲಿಗೆ ಮೈಯೊಡ್ಡಿ(ಶಾಸ್ತ್ರೀಯ ಸಂಗೀತವನ್ನು) ಹಾಡಿಕೊಂಡ ಮೂರ್ತಿರಾಯರು ಅಕ್ಕಿ ಹೆಬ್ಬಾಳಿನ ಭೂತಕಾಲವನ್ನು ವರ್ತಮಾನವನ್ನಾಗಿ ಸುತ್ತಾರೆ. ಅವರ ಅಲೆಯುವ ಮನಕ್ಕೆ ಒಂದು ಕ್ಷಣಿಕ ಸ್ಥಿರತೆಯನ್ನು ತಂದು ಕೊಟ್ಟ, ಅಲ್ಲಿಯ ದೇವಾಲಯದಲ್ಲಿ ಇರುವ ವಿಗ್ರಹವನ್ನು ಕುರಿತು ಅವರು ಬರೆಯುತ್ತಾರೆ.

"ಆ ಗುಡಿಯಲ್ಲಿ ನೆಲಸಿರುವ ದೈವ ನಿರೀಶ್ವರವಾದಿಯೆನ್ನಬಹುದಾದ ನನಗೂ ಅದೆಷ್ಟು ಪ್ರಿಯವೆಂಬುದನ್ನು ಅವರು ಹೇಗೆ ತಿಳಿದಾರು, ನನಗೆ ಗುಡಿಯಲ್ಲಿರುವ ವಿಗ್ರಹ ದೇವರಲ್ಲ-ಅಥವಾ ದೇವರೆಂದರೆ ಅದೊಂದು ಮಾತ್ರವೇ ಅಲ್ಲ. ಅಲ್ಲಿಯ ಅರೆಗತ್ತಲಿನ ವಾತಾವರಣ, ಸೊಡರುಗಳಿಂದ ಎಣ್ಣೆ ಹರಿದು ಅಲ್ಲಲ್ಲಿ ಕಪ್ಪಾಗಿರುವ ಕಂಬಗಳು, ಮೂಲೆ ಯಲ್ಲಿಟ್ಟಿರುವ ಪ್ರಭಾವಳಿ, ಮೊಣಕಾಲೂರಿ ಗರಿಗೆದರಿ ದೇವರೊಡನೆ ಗಗನಕ್ಕೆ ಹಾರಲು ಸಿದ್ಧವಾಗಿರುವ ಗರುಡ, ಮತ್ತೊಂದು ಮೂಲೆಗೆ ಒರಗಿಸಿರುವ ಮುತ್ತಿನ, ಬಣ್ಣದ ಛತ್ರಿ, ಅದರ ತುದಿಯಲ್ಲಿ ಒಲೆದಾಡುವ ಕುಂಕುಮ ವರ್ಣದ ಗೊಂಡೆಗಳು-ಕಣ್ಣಿಗೆ ಕಟ್ಟಿದಂತಿರುವ ಇವೆಲ್ಲಕ್ಕೂ ನನ್ನ ಪ್ರೇಮ ಮತ್ತು ಒಂದು ಬಗೆಯ ಭಕ್ತಿ ಹರಡಿವೆ. ಆ ಗರ್ಭಗುಡಿಯ ಕತ್ತಲೂ ಸಹಾ ನನಗೆ ಪ್ರಿಯವಾದದ್ದು.,ಅದು ನಮ್ಮ ಮತ್ತು ಪರಮಾತ್ಮನ ಸಂಬಂಧದ ಸಂಕೇತ. ನಾವು ಅಜ್ಞಾನದಲ್ಲಿ ಯಾವುದನ್ನು ಬೆಳಕೆಂದು ಭಾವಿಸುತ್ತೇವೆಯೋ ಅದರಿಂದ ವಿಮುಖರಾಗಿ ಕೆಲಕಾಲ ಮಸಕುಮಸಕಾದ ಅಸ್ಪಷ್ಟ ಪ್ರಪಂಚದಲ್ಲಿ ತೊಳಲಿದ ಮೇಲೆ ತಾನೆ ದೈವಸನ್ನಿಧಿಯ ಅರಿವಾಗಬೇಕಾದರೆ.

ನಮ್ಮೂರಿನ ದೇವರು ನರಸಿಂಹ ಉಗ್ರನರಸಿಂಹನಲ್ಲ. ರಾಕ್ಷಸ ಸಂಹಾರದ ರೋಷವೆಲ್ಲಾ ಕಳೆದ ಲಕ್ಷ್ಮಿಯ ಸಾಮೀಪ್ಯದಿಂದ ಶಾಂತನಾಗಿ ಪ್ರಹ್ಲಾದನನ್ನು ಅನುಗ್ರಹಿಸಿ ಅಭಯ ಹಸ್ತವನ್ನು ತೋರುತ್ತಿರುವ ಪ್ರಸನ್ನಮೂರ್ತಿ-ಲಕ್ಷ್ಮೀನೃಸಿಂಹ. ಭಕ್ತರು ದೇವರಿಗೆ ಬೆಳ್ಳಿಯ ಕೋರೆ ಹಲ್ಲುಗಳನ್ನು ಹೊರಬಿದ್ದಿರುವ ನಾಲಿಗೆಯನ್ನು ಮಾಡಿಸಿದ್ದಾರೆ. ಬೆಳ್ಳಿಯ ಹುಬ್ಬುಗಳ ಕೆಳಗೆ ವಿಚಿತ್ರ ಬೆಳಕಿನಿಂದ ಕಣ್ಣುಗಳು ಹೊಳೆಯುತ್ತವೆ. ಅರಂಗುಲದ ಕೆಂಪು ಅಂಚಿನ ಪಂಚೆಯನ್ನುಡಿಸಿದ್ದಾರೆ. ಅಲಂಕಾರದಲ್ಲಿ ವಿತರಣೆಯಿಲ್ಲವೆನ್ನಬಹುದು. ಅವರ

ಇವ್ರೊಂದೂ ವಿಗ್ರಹದ ಸೌಮ್ಯತೆಗೆ ಕುಂದು ತಂದಿಲ್ಲ. ಅಲ್ಲಿ ಸರ್ವದಾ ಕಾವಲಿರುವ ಸರ್ಪವೂ ಸಹ ಆಗಾಗ ಕಣ್ಣಿಗೆ ಬೀಳುತ್ತದೆಯೇ ಹೊರತು ಯಾರ ಗೊಡವೆಗೂ ಹೋಗುವುದಿಲ್ಲ. ದೇವರು ನಿಜವಾಗಿ ಪ್ರಸನ್ನಮೂರ್ತಿ, ಆದರೂ ಭಕ್ತನಲ್ಲಿ ನಂಬಿಕೆ ತಪ್ಪಿದರೆ ಮಾತ್ರ ಒಂದೊಂದು ವೇಳೆ ಕೆರಳುತ್ತಾನೆ. ಹಿರಣ್ಯಕಶಿಪುವನ್ನು ಕೊಂದಾಗಲೇ ನಾಶವಾಗಬೇಕಾಗಿದ್ದ ಅಂಧಕಾರವು ಮರುಕಳಿಸಿ ತನ್ನ ಬಳಗದವರಲ್ಲಿಯೇ ತನ್ನನ್ನು ಮನೇದೇವರೆನ್ನುವವರಲ್ಲಿಯೇ ಕಾಣಿಸಿಕೊಂಡರೆ ಮತ್ತೆ ಉಗ್ರ ನರಸಿಂಹನ ಅವತಾರವಾಗಬೇಡವೆ."

(ಸ.ಬಿ.ಪ್ರ. ಪುಟ 200-201)

ಮೂರ್ತಿರಾಯರು ನವೋದಯ ಕಾಲದ ಅತ್ಯಂತ ವಾಸ್ತವವಾದಿ ಲೇಖಕರು. ಅವರ ಪ್ರಬಂಧಗಳ ಬಗ್ಗೆ ಅಥವಾ ಪ್ರಬಂಧಕಾರ ಮೂರ್ತಿರಾಯರ ಬಗ್ಗೆ ಕನ್ನಡದ ಹಿರಿಯ ವಿಮರ್ಶಕರಾದ ಪ್ರೊ. ಎಲ್. ಎಸ್. ಶೇಷಗಿರಿರಾಯರ ಈ ಅಭಿಪ್ರಾಯ ಗ್ರಾಹ್ಯ:

Some of the finest minds and best creative talents employed this (Essay) form. The great master of the form is A.N. MOORTHY RAO: some of his essays could find a place in a world anthology of essays. He shows a ripeness of wisdom, a sympathy for the foibles and follies of men, a sweet reasonableness combined with a recognition of the claims of the heart, a refined sense of humour which enables him to laugh at himself as he laughs at others, and a sense of the beauty and goodness in the world, which makes his essays a treasury of sweetness and light. His style has flexibility, lightness of touch, precision and warmth.

– Page 154 A History of Kannada Literature (1983)



# ಅಧ್ಯಾಯ -3

# ವಿಮರ್ಶಾತ್ಮಕ ಕೃತಿಗಳು

## 3.1 ಹಿನ್ನೆಲೆ

ಕನ್ನಡ ಸಾಹಿತ್ಯದಲ್ಲಿ ವಿಮರ್ಶೆ ಈಚೆಗೆ ಹುಲುಸಾಗಿ ಬೆಳೆದಿದೆ. ಆದರೆ ಇದರ ಆರಂಭಿಕ ಘಟ್ಟವನ್ನು ಗುರುತಿಸುವುದು ಕಷ್ಟ. ಏಕೆಂದರೆ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮೈಲಿಗಲ್ಲು ಎಂದು ಪರಿಗಣಿಸಬಹುದಾದ ವಿಮರ್ಶೆಯು ಮೊದಲ ಹಂತ ಇಂಗ್ಲೀಷ್ ಸಾಹಿತ್ಯದ ಪ್ರಭಾವದಿಂದ ಉಂಟಾಯಿತು. ಕನ್ನಡದ ಮೊದಲ ವಿಮರ್ಶಕರು ಇಂದಿನ ವಿಮರ್ಶಕರಂತೆ ಕೇವಲ ವಿಮರ್ಶಕರಾಗಿರಲಿಲ್ಲ. ಕವಿಗಳು ಸಾಹಿತಿಗಳು ವಿಮರ್ಶೆಯನ್ನು ಸಹಾ ಸೃಜನಶೀಲ ಸಾಹಿತ್ಯದಂತೆ ಬೆಳೆಸಿದರು. ಸಾಹಿತ್ಯ ವಿಮರ್ಶೆ ಒಂದು ಪ್ರತ್ಯೇಕ ಸಾಹಿತ್ಯ ಪ್ರಕಾರವಾಗಿ ಬೆಳೆದದ್ದು ತೀರಾ ಇತ್ತೀಚೆಗೆ. ಅದುವರೆಗಿನ ಕವಿಗಳು ಭಾರತೀಯ ತತ್ವಶಾಸ್ತ್ರದಿಂದಲೂ, ಸಂಸ್ಕೃತ-ಹಳೆಗನ್ನಡ ಸಾಹಿತ್ಯದಿಂದಲೂ ವಿಶೇಷವಾಗಿ ಪ್ರಭಾವಿತರಾದವರು. ಆದ್ದರಿಂದ ಅವರ ವಿಮರ್ಶೆಗಳು ಈ ವಿಷಯಕ್ಕಷ್ಟೇ ಸೀಮಿತವಾಯಿತು. ಹೀಗಾಗಿ ಸೃಜನಶೀಲ ಸಾಹಿತ್ಯವನ್ನೂ ವಿಮರ್ಶೆಯನ್ನೂ ಜೊತೆ ಜೊತೆಯಾಗಿ ಸಾಗಿಸಿಕೊಂಡು ಬಂದವರೇ ಹೆಚ್ಚು. ಆದರೂ ಅವರ ವಿಮರ್ಶನಾಶಕ್ತಿ, ಪ್ರತಿಭೆಗಳು ಪ್ರಪಂಚದ ಯಾವ ವಿಮರ್ಶಕನಿಗೂ ಕಡಿಮೆಯಿರಲಿಲ್ಲವೆಂಬ ಸತ್ಯ ನಿರ್ವಿವಾದ. ತಾವು ಅಧ್ಯಯನ ಮಾಡಿದ, ಅಧ್ಯಾಪನ ಮಾಡಿದ ಕೃತಿಗಳಲ್ಲಿನ ಪ್ರಮುಖ ಘಟ್ಟಗಳನ್ನು ವಿಮರ್ಶೆಗೆ ಒಳಪಡಿಸಿದರು. ತಾವು ಸ್ಫೂರ್ತಿ, ಪ್ರೇರಣೆ ಪಡೆದ ಕೃತಿಯನ್ನು ವಿಮರ್ಶಿಸಿದರು. ಹಳೆಗನ್ನಡ ಕಾವ್ಯಗಳನ್ನು ಮೂಲಕಾವ್ಯಗಳ ಪಕ್ಕದಲ್ಲಿಟ್ಟು ತೂಗಿ ನೋಡಲಾರಂಭಿಸಿದರು. ಮೂಲ ಕಾವ್ಯಕ್ಕೂ ಪ್ರೇರಿತ ಕೃತಿಗೂ ಇರುವ ಸಾದೃಶ್ಯ ಅಂತರಗಳನ್ನು ಗುರುತಿಸಲಾರಂಭಿಸಿದರು. ಹೀಗೆ ಒಂದು ರೀತಿಯ ತೌಲನಿಕ ವಿಮರ್ಶೆಯೂ ಆರಂಭವಾಯಿತು. ಇಂತಹ ಅನ್ವಯ ವಿಮರ್ಶೆ ಅಥವಾ ಪ್ರಾಯೋಗಿಕ ವಿಮರ್ಶೆ ಇಂಗ್ಲೀಷ್ ಸಾಹಿತ್ಯದ ಕೊಡುಗೆಯಾಯಿತು. ಕನ್ನಡದಲ್ಲಿ ಇದರ ಬಳಕೆ ಹಿಂದೆ ಬೀಳಲಿಲ್ಲ. ಶ್ರೀಗಳಾದ ಬಿ.ಎಂ. ಶ್ರೀ, ಕುವೆಂಪು, ಮಾಸ್ತಿ, ಎಂ.ಆರ್.ಶ್ರೀ, ಎ.ಆರ್. ಕೃಷ್ಣಶಾಸ್ತ್ರಿ, ಡಿ.ವಿ.ಜಿ., ವಿ.ಸೀ., ಜಿ.ಎಸ್.ಶಿವರುದ್ರಪ್ಪ, ರಂ. ಶ್ರೀ. ಮುಗಳಿ, ಡಾ. ಎಸ್.ಎಲ್. ಭೈರಪ್ಪ, ಕೀರ್ತನಾಥಕುರ್ತಕೋಟಿ, ಅನಕೃ, ತರಾಸು, ಜಿ. ವರದರಾಜರಾವ್, ರಾಳ್ಳಪಲ್ಲಿ ಅನಂತಕೃಷ್ಣಶರ್ಮ, ಬಿ.ಕಾ. ಸುಬ್ಬರಾಯಚಾರ್, ಎಸ್.

ಅನಂತನಾರಾಯಣ, ಪ್ರಭುಶಂಕರ, ಎಸ್.ವಿ. ಪರಮೇಶ್ವರಭಟ್ಟ, ಎಲ್.ಎಸ್. ಶೇಷಗಿರಿರಾವ್, ಎಂ. ಗೋಪಾಲಕೃಷ್ಣ ಅಡಿಗ - ಹೀಗೆ ಈ ಪಟ್ಟಿಯನ್ನು ಇನ್ನೂ ಲಂಬಿಸಬಹುದು.

ಕನ್ನಡದಲ್ಲಿ ಒಬ್ಬ ಕವಿಯ ಸಮಗ್ರ ಕೃತಿಗಳನ್ನು ಕುರಿತ ವಿಮರ್ಶಾಗ್ರಂಥಗಳೂ ರಚಿಸಲ್ಪಟ್ಟಿವೆ. ಶ್ರೀ ಎಂ.ವಿ. ಸೀತಾರಾಮಯ್ಯನವರು, ವಿ. ಸೀತಾರಾಮಯ್ಯನವರು ಇಂತಹ ಹಲವು ವಿಮರ್ಶಾ ಗ್ರಂಥಗಳನ್ನು ಬರೆದರು. ವಿ.ಸೀ. ಯವರು ಪಂಪನ ಬಗ್ಗೆ ಬರೆದ ಇಂಗ್ಲೀಷ್ ವಿಮರ್ಶಾಗ್ರಂಥ ಒಂದು ಪ್ರಮಾಣ ಗ್ರಂಥ. ಎಂ.ಆರ್. ಶ್ರೀ ಯವರ "ವಚನಧರ್ಮಸಾರ" ಒಂದು ಸಾಹಿತ್ಯ ಪ್ರಕಾರವನ್ನು ಕುರಿತ ವಿದ್ವತ್ಪೂರ್ಣ ವಿಮರ್ಶೆ. ಎ.ಆರ್. ಕೃಷ್ಣಶಾಸ್ತ್ರಿಗಳ "ಸಂಸ್ಕೃತ ನಾಟಕ" ಮತ್ತು "ಬಂಕಿಮಚಂದ್ರ" ಒಂದು ಭಾಷೆಯ ಒಂದು ಪ್ರಕಾರವನ್ನು ಒಬ್ಬ ವಿಶ್ವವಿಖ್ಯಾತ ಸಾಹಿತಿಯ ಬದುಕು-ಬರಹಗಳನ್ನು ಕುರಿತ ಕೃತಿಗಳು. ಎಂ.ವಿ. ಸೀತಾರಾಮಯ್ಯನವರ "ಕವಿರಾಜಮಾರ್ಗ", "ನಾಗಚಂದ್ರ" ಮುಂತಾದ ವಿಮರ್ಶನ ಗ್ರಂಥಗಳು ಕನ್ನಡದ ಪ್ರಮಾಣ ಗ್ರಂಥಗಳೂ ಹೌದು. ಮಾಸ್ತಿಯವರ "ರವೀಂದ್ರನಾಥ ಠಾಗೂರ್", "ಆದಿಕವಿ ವಾಲ್ಮೀಕಿ" ಎರಡು ವಿಶೇಷ ವಿಮರ್ಶೆಗಳು. ಮಾಸ್ತಿಯವರು ಕವೀಂದ್ರ ರವೀಂದ್ರರನ್ನು, ಅವರ ಸಾಹಿತ್ಯ ಸಾಧನೆ-ಸಿದ್ಧಿಗಳನ್ನು ಕುರಿತು ವಿಶ್ವದ ವಿಖ್ಯಾತ ವ್ಯಕ್ತಿಗಳು ಬರೆದ ವಿಮರ್ಶೆಗಳನ್ನು ಸಂಪಾದಿಸಿ, ಕನ್ನಡಕ್ಕೆ ಅನುವಾದ ಮಾಡಿಸಿ ಪ್ರಕಟಿಸಿದ (ಆರು) ಸಂಪುಟಗಳು ಕನ್ನಡ ವಿಮರ್ಶಾ ಪ್ರಪಂಚದಲ್ಲಿ ಒಂದು ವಿಕ್ರಮ.

ವಿಮರ್ಶೆಯ ವಿಚಾರ ಬಂದಾಗ ಶ್ರೀ ತೀ.ನಂ. ಶ್ರೀಯವರ ಹೆಸರು ವಿಶೇಷ ಉಲ್ಲೇಖನಾರ್ಹ. ಅವರ "ಸಮಾಲೋಕನ", "ಪಂಪ," "ಕಾವ್ಯ ಸಮೀಕ್ಷೆ", "ಕಾವ್ಯಾನುಭವ", "Imagination in Indian poetics and other literary studies". "ಕಾವ್ಯ ಮೀಮಾಂಸೆ", " ಸಂಸ್ಕೃತ ಕಾವ್ಯ ಮೀಮಾಂಸೆ " ಯ ಗ್ರಂಥಗಳೆಲ್ಲವನ್ನೂ ಆಮೂಲಾಗ್ರವಾಗಿ ಅಧ್ಯಯನ ಮಾಡಿ, ವಿವಿಧ ಮೀಮಾಂಸಕರ ಅಭಿಮತಗಳನ್ನು ಕ್ರೋಢೀಕರಿಸಿದ ಶ್ರೇಯಸ್ಸು ಕೀರ್ತಿ ತೀ.ನಂ.ಶ್ರೀ ಯವರದು. 'ಭಾರತೀಯ ಕಾವ್ಯ ಮೀಮಾಂಸೆ' ಅನಂತರದ ಭಾರತೀಯ ಪಾಶ್ಚಿಮಾತ್ಯ ಕಾವ್ಯ ಮೀಮಾಂಸೆ ಗ್ರಂಥಗಳ ಗಂಭೀರ ಅಧ್ಯಯನ, ತುಲನೆ, ರಚನೆಗಳಿಗೆ ಒಂದು ಹೆದ್ದಾರಿ ತೆರೆಯಿತು. ವಿ.ಎಂ. ಇನಾಂದಾರ್, ಡಾ. ಹೆಚ್. ತಿಪ್ಪೇರುದ್ರಸ್ವಾಮಿ, ಎನ್. ಬಾಲಸುಬ್ರಹ್ಮಣ್ಯ ಮುಂತಾದವರು ಭಾರತೀಯ ಪಾಶ್ಚಿಮಾತ್ಯ ಅಲಂಕಾರ ಶಾಸ್ತ್ರಗಳು ಎಲ್ಲಿ ಪರಸ್ಪರ ಮುಖಾಮುಖಿಯಾಗುತ್ತದೆ, ಎಲ್ಲಿ ಪರಸ್ಪರ ವಿಮುಖವಾಗುತ್ತದೆ ಎಂಬುದನ್ನು ತೌಲನಿಕವಾಗಿ ಅಧ್ಯಯನ-ಗ್ರಂಥ ರಚನೆ ಮಾಡಿದರು. ಆದ್ದರಿಂದ ಕನ್ನಡದ ಅಲಂಕಾರ ಶಾಸ್ತ್ರ ಅಧ್ಯಯನಶೀಲರಿಗೆ ತೀ.ನಂ.ಶ್ರೀ ಯವರು ಆಚಾರ್ಯ ಪುರುಷರೆಂದು ನಿಸ್ಸಂದಿಗ್ಧವಾಗಿ ಹೇಳಬಹುದು.

ಡಾ. ದ. ರಾ. ಬೇಂದ್ರೆಯವರ ಕೊಡುಗೆ ಈ ಕ್ಷೇತ್ರದಲ್ಲಿ ಅತ್ಯಪೂರ್ವವಾದುದು. ಅವರ "ಸಾಹಿತ್ಯದ ವಿರಾಟ್‌ಸ್ವರೂಪ" ಒಂದು ಬೃಹತ್ ಕೃತಿ. ಕನ್ನಡದಲ್ಲಿ ಗಾತ್ರ - ಪ್ರಮಾಣದಲ್ಲಿ ಇಂತಹ ವಿಮರ್ಶಾ ಕೃತಿ ಬಂದಿಲ್ಲವೆಂದರೂ ಅತಿಶಯೋಕ್ತಿಯಲ್ಲ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಶ್ರೀ ಜಿ. ಹನುಮಂತರಾಯರ ಅವಿರತ ಪ್ರಯತ್ನದಿಂದಾಗಿ ಪ್ರಚಾರೋಪನ್ಯಾಸಗಳು ನಡೆಯಲಾರಂಭಿಸಿದ ಮೇಲೆ ಕವಿ ಕೃತಿಗಳನ್ನು ಕುರಿತ ಉಪನ್ಯಾಸಗಳು ಕರ್ನಾಟಕದ ಉದ್ದಗಲಕ್ಕೂ ನಡೆದವು. ಈ ಪ್ರಚಾರೋಪನ್ಯಾಸಗಳು ಕೇವಲ ಉಪನ್ಯಾಸ ಮಾತ್ರವಾಗಿರದೆ ಪಂಡಿತರೂ, ವಿದ್ವಾಂಸರೂ ಅವರಿಂದ ವಿಮರ್ಶೆಗಳೂ ಆಗಿರುತ್ತಿದ್ದವು. ಅಂತಹ ಉಪನ್ಯಾಸ-ವಿಮರ್ಶೆಗಳು ಕಿರುಹೊತ್ತಿಗೆಯ ರೂಪದಲ್ಲಿ ಪ್ರಕಟವಾಗಿ ಒಳ್ಳೆಯ ವಿಮರ್ಶೆಯ ಆಕರ ಗ್ರಂಥಗಳಾದವು (Resource books) ಕನ್ನಡ-ಕನ್ನಡೇತರ ಕವಿ-ಕೃತಿ ಸಾಹಿತ್ಯ ಪ್ರಕಾರಗಳೂ ಇದರಲ್ಲಿ ಸ್ಥಾನ ಪಡೆದಿದ್ದು ಒಂದು ವಿಶೇಷ ಉಲ್ಲೇಖನೀಯವಾದ ವಿಚಾರ.

ಒಬ್ಬ ಕವಿ ಕಾವ್ಯ ಪ್ರಕಾರವನ್ನು ಕುರಿತ ವಿಮರ್ಶಾ ಗ್ರಂಥಗಳೂ ಸಹಾ ಕನ್ನಡದಲ್ಲಿ ಒಂದು ಮಿತಿಯಲ್ಲಿ ಪ್ರಕಟವಾದರೂ ಅವು ಅತ್ಯುತ್ತಮ ವಿಮರ್ಶನ ಗ್ರಂಥಗಳೆಂದೇ ಪರಿಗಣಿಸಲ್ಪಟ್ಟಿವೆ. ಶ್ರೀ. ಎಸ್.ವಿ. ರಂಗಣ್ಣನವರ "ಕಾಳಿದಾಸ ನಾಟಕಗಳ ವಿಮರ್ಶೆ", "ಹೊನ್ನಶೂಲಿ", "ಶೈಲಿ" ಮುಂತಾದ ವಿಮರ್ಶನ ಗ್ರಂಥಗಳನ್ನು ಅಧ್ಯಯನ ಮಾಡುವುದೇ ಒಂದು ಸೊಗಸು. ಶ್ರೀ ಎಲ್. ಎಸ್. ಶೇಷಗಿರಿರಾಯರ "ಆಧುನಿಕ ಇಂಗ್ಲೀಷ್ ಸಾಹಿತ್ಯದಲ್ಲಿ ವಿಮರ್ಶೆಯ ಬೆಳವಣಿಗೆ" ಎಂಬ ಕೃತಿ ಕನ್ನಡಿಗರಿಗೆ ಇಂಗ್ಲೀಷ್ ವಿಮರ್ಶೆ-ವಿಮರ್ಶಕರನ್ನು ಪರಿಚಯಿಸುವ ಒಂದು ಉತ್ಕೃಷ್ಟ ಕೃತಿ. ರಾಯರು ಇಂಗ್ಲೀಷ್ ವಿಮರ್ಶೆಯ ಮೇಲೆ ಸಾಧಿಸಿದ ಅಪ್ರತಿಮ ಪ್ರಭುತ್ವವನ್ನು ಉಳಿಸಿಕೊಳ್ಳುವುದೇ ಒಂದು ವಿಸ್ಮಯಕಾರಕ ಅನುಭವ.

ಕನ್ನಡಿಗರಿಗೆ ಇಂಗ್ಲೀಷ್ ಹಾಗೂ ಇತರೆ ವಿಮರ್ಶನ ಸಾಹಿತ್ಯ ಪರಿಚಯವಾಗದಂತೆ ವಿಮರ್ಶೆ ಒಂದು ಸ್ವತಂತ್ರ ಕವಲಾಗಿ ಬೆಳೆಯಿತು. 1970 ರಿಂದೀಚೆಗೆ ಕೇವಲ ವಿಮರ್ಶಕರೇ ಸೃಷ್ಟಿಯಾದುದು ಒಂದು ವಿಶೇಷ. ವಿಮರ್ಶಾರೂಪದ ಮಹಾಪ್ರಬಂಧಗಳು(ಅಥವಾ ಮಹಾಪ್ರಬಂಧಗಳು ವಿಮರ್ಶಾತ್ಮಕವಾಗಿ) ನಿರೂಪಿಸಲ್ಪಟ್ಟವು. ವಿಮರ್ಶೆಗೆ ಬೇಕಾದ ಸಾಮಗ್ರಿ ತನ್ನದೇ ವಿಶಿಷ್ಟ ಪರಿಭಾಷೆಯಿಂದ ವಿಮರ್ಶಕರಿಗೆ ಲಭ್ಯವಾಯಿತು. ದೈನಿಕಗಳಲ್ಲಿ ವಿಮರ್ಶೆಗಾಗಿ ಅಂಕಣಗಳು ಮೀಸಲಾದವು. ಇನ್ನಿತರ ನಿಯತಕಾಲಿಕಗಳು, ವಿಶೇಷಾಂಕಗಳು, ವಿಮರ್ಶೆಗಾಗಿಯೇ ಜನ್ಮತಾಳಿದ ನಿಯತಕಾಲಿಕಗಳು "ಸಾಕ್ಷಿ", "ಸಂಕ್ರಮಣ", "ಮನ್ವಂತರ", "ರುಜುವಾತು" ವಿಮರ್ಶೆಯ ವಾದ - ವಿವಾದಕ್ಕೆ ಒಳ್ಳೆಯ ಭೂಮಿಕೆಯನ್ನು ವೇದಿಕೆಯನ್ನು ಸೃಷ್ಟಿಸಿದವು. ಇದರಿಂದ ಹತ್ತು ಹಲವು ವಿಮರ್ಶಕರು, ಬೆಳಕಿಗೆ ಬರಲು ಅವಕಾಶವಾಯಿತು. ತಮಗಾಗಿ ಭೂಮಿಕೆಯೊಂದು ಇದೆಯೆಂಬ ಭರವಸೆ ಮೂಡಿದಾಗ ಹಲವು ವಿಮರ್ಶೆಗಳನ್ನು ವಿಮರ್ಶೆಯ ದೃಷ್ಟಿಯಿಂದಲೇ-ಬರೆಯಲು ಸಾಧ್ಯವಾಯಿತು. ಮಾತ್ರವಲ್ಲ, ಸೃಜನೇತರ ಲೇಖಕರು ಒಳ್ಳೆಯ ವಿಮರ್ಶಕರು ವಾಚಕ ಲೋಕಕ್ಕೆ ಪರಿಚಿತರಾದರು. ಪುಸ್ತಕ ಪ್ರಪಂಚದಂತಹ ನಿಯತಕಾಲಿಕಗಳು ವಿಶ್ವವಿಖ್ಯಾತ ಲೇಖಕರನ್ನು ಅವರ ಕೃತಿಗಳನ್ನು ಕುರಿತು ವಿಮರ್ಶಾತ್ಮಕ ವಿಶೇಷಾಂಕಗಳನ್ನು ಪ್ರಕಟಿಸತೊಡಗಿದವು. "ಗ್ರಂಥಲೋಕ" ಹೊಸ ಪ್ರಕಟಣೆಗಳನ್ನು ತನ್ನ ಸದಸ್ಯ ವಾಚಕರಿಗೆ ನೀಡಿ ಅವುಗಳನ್ನು ಕುರಿತು ವಿಮರ್ಶೆಗಳನ್ನು ಪ್ರಕಟಿಸಿತು. ಆಕಾಶವಾಣಿಯೂ ಸಹಾ ಪ್ರಶಸ್ತಿ ವಿಜೇತ ಕೃತಿಗಳ ಬಗ್ಗೆ ಉಪನ್ಯಾಸಗಳನ್ನು ತನ್ನ ಶ್ರೋತೃಗಳಿಗೆ ಪ್ರಸಾರ ಮಾಡುವುದರ ಮೂಲಕ ವಿಮರ್ಶೆಯ ಬೆಳವಣಿಗೆಗೆ

ಸಹಾಯ ನೀಡಿತು. ಸಾಹಿತ್ಯದ ಪರಂಪರೆ, ವಿವಿಧ ಘಟ್ಟಗಳನ್ನು ಕುರಿತು ವಿಚಾರ ಸಂಕಿರಣಗಳು, ಕಮ್ಮಟಗಳು, ವಿಮರ್ಶಾತ್ಮಕ ದೃಷ್ಟಿಕೋನವನ್ನು ಮೂಡಿಸಲು ನೆರವಾದವು.

ಕನ್ನಡ ಭಾಷೆಯಲ್ಲಿ ವಿಮರ್ಶೆಯ ಕಬಂಧ ಬಾಹುಗಳು ಶಾಸ್ತ್ರ ಸಾಹಿತ್ಯವನ್ನೂ ಆವರಿಸಿದವು. ಛಂದಸ್ಸು, ಭಾಷಾಶಾಸ್ತ್ರಗಳಂತಹ ವಿಷಯಗಳೂ ವಿಮರ್ಶೆಯ ವ್ಯಾಪ್ತಿಗೊಳಪಟ್ಟವು. ಛಂದಸ್ಸಿನ ವಿವಿಧ ಪ್ರಯೋಗಗಳು, ವೈವಿಧ್ಯ, ಸೊಗಸು, ಕಾವ್ಯಾತ್ಮಕತೆಗಳೂ ವಿಮರ್ಶಾತ್ಮಕ ಅಧ್ಯಯನದ ಕಕ್ಷೆಗೆ ಬರತೊಡಗಿದವು. ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿ, ಡಿ.ಎಸ್. ಕರ್ಕಿ–ಮುಂತಾದವರು ಛಂದಸ್ಸನ್ನು-ಪ್ರಾಚೀನ ಆಧುನಿಕ-ಕುರಿತು ಮಾಡಿದ ವ್ಯಾಪಕ ವಿಮರ್ಶೆ ಬೆರಗುಗೊಳಿಸುವಂತಹದು. ಭಾಷಾಶಾಸ್ತ್ರ, ವ್ಯಾಕರಣಗಳನ್ನು ಕುರಿತಂತೆ ಡಾ. ಎಂ. ಚಿದಾನಂದಮೂರ್ತಿ, ವಿಲ್ಯಂಮಾಡ್ತಾ, ಡಾ. ಕೆ. ಕುಶಾಲಪ್ಪಗೌಡ–ಮುಂತಾದವರ ಕೊಡುಗೆ ಗಮನಾರ್ಹ. ಪುಸ್ತಕಗಳಿಗೆ ಸ್ವಯಂ ಲೇಖಕರೋ ಅಥವಾ ಮತ್ತೊಬ್ಬರೋ ಬರೆದ ಮುನ್ನುಡಿಗಳೂ ವಿಮರ್ಶಾತ್ಮಕ ನಿಲವು ರೂಪಗಳನ್ನು ತಳೆಯಲಾರಂಭಿಸಿದವು. ಶ್ರೀಯವರ "ಇಂಗ್ಲೀಷ್ ಗೀತೆಗಳು" ಕೃತಿಗೆ ತೀ.ನಂ.ಶ್ರೀ, ಕುವೆಂಪುರವರ "ಕೊಳಲು" ಕವನ ಸಂಕಲನಕ್ಕೆ ಶ್ರೀಯವರು, ಶ್ರೀ ಎಸ್. ವಿ. ಪರಮೇಶ್ವರ ಭಟ್ಟರ ಕೆಲವು "ಇಂಗ್ಲೀಷ್ ಪ್ರಬಂಧಗಳು" ಭಾಷಾಂತರಕ್ಕೆ ಶ್ರೀ ಬಿ.ಎಸ್. ಶ್ಯಾಮರಾವ್‌ರವರು ಬರೆದ ಮುನ್ನುಡಿಗಳೇ ಅಧ್ಯಯನಾರ್ಹ ವಿಮರ್ಶೆಗಳು. ಡಾ. ಡಿ.ವಿ.ಜಿ. ಯವರು "ಉಮರನ ಒಸಗೆ", "ಮ್ಯಾಕ್‌ಬೆತ್" ಗಳಂತಹ ತಮ್ಮ ಕೃತಿಗೆ ತಾವೇ ಬರೆದ ಮುನ್ನುಡಿಗಳು ಒಳ್ಳೆಯ ವಿಮರ್ಶಾತ್ಮಕ ಲೇಖನಗಳು. ಹತ್ತಾರು ಮುನ್ನುಡಿಗಳನ್ನು ಸಂಕಲನ ಮಾಡಿ ಪುಸ್ತಕ ರೂಪದಲ್ಲಿ ಪ್ರಕಟಿಸಿ ವಿಮರ್ಶಕರ ಗಮನ ಸೆಳೆದ ಮುನ್ನುಡಿಕಾರ ವಿಮರ್ಶಕರೂ ಇದ್ದಾರೆ. ವಿಮರ್ಶಾತ್ಮಕ ಲೇಖನ ಪ್ರಬಂಧ ಸಂಕಲನಗಳನ್ನು ಪದವಿ ತರಗತಿಗಳಿಗೆ ಪಠ್ಯಪುಸ್ತಕವಾಗಿ ನಿಯೋಜಿ ಸುವುದರ ದ್ವಾರ ಸಾಹಿತ್ಯವನ್ನು ಸಾಹಿತ್ಯ ವಿಷಯವನ್ನು ಅಧ್ಯಯನ ಮಾಡುವ ವಿದ್ಯಾರ್ಥಿಗಳು ವಿಮರ್ಶೆಯತ್ತ ಗಮನಹರಿಸಲು ಸಾಧ್ಯವಾಯಿತು.

ಈ ಹಿಂದೆ ಹೇಳಿದಂತೆ ಲೇಖಕನೊಬ್ಬನ ಕೃತಿಗಳನ್ನೇ ಅಧ್ಯಯನ ಮಾಡಿ ವಿಮರ್ಶಾತ್ಮಕ ಲೇಖನಗಳನ್ನೋ ಪುಸ್ತಕಗಳನ್ನೋ ಪ್ರಕಟಿಸುವ ಪರಿಪಾಠ ಕನ್ನಡ ಸಾಹಿತ್ಯದಲ್ಲಿ ವಿಮರ್ಶೆಯ ಸಮಗ್ರ ವಿಮರ್ಶೆಯ-ಬೆಳವಣಿಗೆಗೆ ಸಹಾಯವಾಯಿತು. ಭೈರಪ್ಪನವರ ಕೃತಿಗಳನ್ನು ಕುರಿತು ಲೀಲಾವತಿ ತೋರಣಗಟ್ಟೆ, ("ಸಹಸ್ಪಂದನ" ಇನ್ನೊಂದು ವಿಮರ್ಶಾ ಕೃತಿ) ಅನಕೃ ಕೃತಿಗಳನ್ನು ಕುರಿತು ತರಾಸು, ಕಾರಂತರ ಕಾದಂಬರಿಗಳನ್ನು ಕುರಿತು ಅನಂತನಾರಾಯಣ–ಹೀಗೆ ಲೇಖಕರ ಕೃತಿಗಳನ್ನೇ ಕುರಿತು ವಿಮರ್ಶನ ಗ್ರಂಥಗಳು ಬಂದಿವೆ. ವಿನಾಯಕ ವಾಙ್ಮಯ ಕುರಿತು ಎಸ್ಕೆಯವರು ಬರೆದ ವಿಮರ್ಶೆ ವಿಶಿಷ್ಟವಾದುದು.

ಬಹು ಪ್ರಖ್ಯಾತ ವ್ಯಕ್ತಿಗಳಿಗೆ ಸಾಹಿತಿಗಳಿಗೆ ಸನ್ಮಾನ, ಅಭಿನಂದನೆ, ಷಷ್ಠಿಪೂರ್ತಿ ಸಮಾರಂಭ ಶತಮಾನೋತ್ಸವ ಮುಂತಾದ ವಿಶೇಷ ಸಂದರ್ಭಗಳಲ್ಲಿ ಅಭಿನಂದನಾ (ಸಂಭಾವನಾ) ಗ್ರಂಥಗಳನ್ನು ಅರ್ಪಿಸುವ ವಿಶಿಷ್ಟ ಸಂಪ್ರದಾಯವೊಂದು ಈಚೆಗೆ ಅಸ್ತಿತ್ವದಲ್ಲಿ ಬಂದಿದೆ. ಕಾರಂತ, ಪುಟ್ಟಪ್ಪ, ಬೇಂದ್ರೆ, ಗೋವಿಂದಪೈ, ಶ್ರೀ ಎ.ಆರ್.

ಕೃಷ್ಣಶಾಸ್ತ್ರಿ, ನಿರಂಜನ, ಶೇಣಿ ಗೋಪಾಲಕೃಷ್ಣಭಟ್, ಕಮಲಾಹಂಪನಾ, ಅನುಪಮಾ ನಿರಂಜನ, ನಿರಂಜನ, ಮಾಸ್ತಿ, ತೀ.ನಂ.ಶ್ರೀ, ಎಸ್.ವಿ.ಪಿ. ಮಲ್ಲಾಡಿಹಳ್ಳಿ ರಾಘವೇಂದ್ರ ಸ್ವಾಮೀಜಿ ಮುಂತಾದವರ ಸೇವೆ ಸಿದ್ಧಿ ಪ್ರಸಿದ್ಧಿಗಳನ್ನು ಕುರಿತು ಅಭಿನಂದಿಸುವ ಅಭಿನಂದನಾ ಗ್ರಂಥಗಳು ಆಯಾ ಲೇಖಕರ, ಮಹನೀಯರ ಕೃತಿಗಳನ್ನು ಕುರಿತು ವಿಮರ್ಶಾತ್ಮಕ ಲೇಖನಗಳನ್ನು ಒಳಗೊಂಡಿವೆ. ಅಭಿನಂದನಾ ಗ್ರಂಥಗಳು ಹೀಗೆ ಕೇವಲ ಅಭಿನಂದನೆ ಪ್ರಶಂಸೆಗಳಿಗೆ ಮಾತ್ರವೇ ಮೀಸಲಾಗಿರದೆ ವಿಮರ್ಶೆಗೂ ವೇದಿಕೆ ನೀಡಿರುವುದು ಅಭಿನಂದನಾರ್ಹ. ನಾಟಕ, ಕಾದಂಬರಿ, ಕವಿತೆ, ಸಣ್ಣಕತೆ-ಮುಂತಾದ ಸಾಹಿತ್ಯ ಪ್ರಕಾರಗಳನ್ನು ಸಮಗ್ರವಾಗಿ ವಿಮರ್ಶಿಸುವ ಪದ್ಧತಿಯೂ ಈಚೆಗೆ ರೂಢಿಗೆ ಬಂದಿತು. ಕನ್ನಡದ ಸಮಗ್ರ ಸಾಹಿತ್ಯ ಚರಿತ್ರೆಯನ್ನು ಕುರಿತು ಡಾ. ರಂ.ಶ್ರೀ ಮುಗಳಿ ಯವರು (ಎರಡು ಸಂಪುಟ) "ಕವಿಚರಿತೆ" ಎಂಬ ಹೆಸರಿನಲ್ಲಿ ಆರ್. ನರಸಿಂಹಚಾರ್ಯರು, ಡಾ.ಎಂ. ಮರಿಯಪ್ಪ ಭಟ್ಟರು, ತಾ.ಸು. ಶ್ಯಾಮರಾಯರು. ಸಿ. ವೀರಣ್ಣನವರು, ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ ಹಾಗೂ ಡಾ. ಹಾ. ಮಾ. ನಾಯಕ್‌ರವರು ಕನ್ನಡ ಸಾಹಿತ್ಯ ಚರಿತ್ರೆಯ ವಿವಿಧ ಘಟ್ಟಗಳನ್ನು ವಿಮರ್ಶಾತ್ಮಕವಾಗಿ ಬರೆದರು. "ಸಾಹಿತ್ಯ ಹಾಗೂ ಯುಗಧರ್ಮ" ವೆಂಬ ವಿಮರ್ಶಾತ್ಮಕ ಕೃತಿ ಕೀರ್ತಿನಾಥ ಕುರ್ತುಕೋಟಿಯವರ "ಪ್ರಗಲ್ಭ", ಕೃತಿ "ಶ್ರೀ ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ" ಎಂಬ ಶೀರ್ಷಿಕೆಯಡಿ ಬೆಂಗಳೂರು ವಿಶ್ವವಿದ್ಯಾನಿಲಯ ಹತ್ತು ಸಂಪುಟಗಳನ್ನು ಪ್ರಕಟಿಸಿತು. ಡಾ. ಪ್ರಭುಶಂಕರ್‌ರವರ "ಕನ್ನಡದಲ್ಲಿ ಭಾವಗೀತೆ" ಎಸ್. ಅನಂತನಾರಾಯಣರವರ "ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಸಾಹಿತ್ಯದ ಪ್ರಭಾವ", ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿಯವರ "ಚಿತ್ರ ಕಾವ್ಯ" ಮುಂತಾದವು ವಿವಿಧ ವಿಷಯಗಳನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸಿದ ಕೃತಿಗಳು.

ಪ್ರಸ್ತುತ ಈ ಅಧ್ಯಾಯದಲ್ಲಿ ಮೂರ್ತಿರಾಯರ ವಿಮರ್ಶಾ ಗ್ರಂಥಗಳ ಅಧ್ಯಯನ ಸಮೀಕ್ಷೆ ನಡೆಸಲಾಗುವುದು. ಅವರ ವಿಮರ್ಶನ ಗ್ರಂಥಗಳು ಹೀಗಿವೆ.

1) ಗಂಡುಗೊಡಲಿ
2) ಷೇಕ್ಸ್‌ಪಿಯರ್
3) ಮಾಸ್ತಿಯವರ ಕಥೆಗಳು
4) ಬಿ.ಎಂ. ಶ್ರೀಕಂಠಯ್ಯ
5) ಸೀತಾಪರಿತ್ಯಾಗ ಪ್ರಸಂಗ (ಪೂರ್ವ ಸೂರಿಗಳೊಡನೆ)
6) ಸಾಹಿತ್ಯ ಮತ್ತು ಸತ್ಯ
7) ವಿಮರ್ಶಾತ್ಮಕ ಪ್ರಬಂಧಗಳು
8) ಸಂಕೀರ್ಣ ಲೇಖನಗಳು (9 ಲೇಖನಗಳು)

ಮೂರ್ತಿರಾಯರು ಹಳೆಯ ತಲೆಮಾರಿನ ವಿಮರ್ಶಾತ್ಮಕ ಪಂಕ್ತಿಗೆ ಸೇರಿದವರು. ಅವರ ಸಮಕಾಲೀನರಾದ ಕುವೆಂಪು, ಮಾಸ್ತಿ, ಬೇಂದ್ರೆ, ಪುತಿನ-ಮುಂತಾದ ವಿಮರ್ಶಕರ ಸಾಲಿನ ಮೂರ್ತಿರಾಯರು ನಿಲ್ಲುವಂತಹವರು. ಈ ತಲೆಮಾರಿನ ವಿಮರ್ಶಕರು ಇಂದಿನ ವಿಮರ್ಶಕರಂತೆ ಸಮಕಾಲೀನ ಸಾಹಿತ್ಯ ವಿಮರ್ಶೆಯಲ್ಲಿ ತೊಡಗಿದವರಲ್ಲ. ಇವರ ವಿಮರ್ಶೆಯ ವಸ್ತು ಹೆಚ್ಚಾಗಿ ಪ್ರಾಚೀನ ಕಾವ್ಯಗಳು, ಕಾವ್ಯ ಪ್ರಸಂಗಗಳು, ಪಾತ್ರಗಳು-

ಇತ್ಯಾದಿ. ಆದರೆ ಮೂರ್ತಿರಾಯರ ಒಂದು ಭಿನ್ನತೆ ಇರುವುದು ಇಲ್ಲಿಯೇ. ತಮ್ಮ ಸಮಕಾಲೀನರಾದ ಶ್ರೀ ಜಿ.ಪಿ.ರಾಜರತ್ನಂರವರ 'ಗಂಡುಗೊಡಲಿ' ನಾಟಕವನ್ನು ಮಾಸ್ತಿಯವರ ಕಥೆಗಳನ್ನು ಬಿ.ಎಂ. ಶ್ರೀಕಂಠಯ್ಯನವರು ಬದುಕು-ಬರಹಗಳನ್ನು ಕುರಿತಂತೆ ವಿಮರ್ಶೆಗಳನ್ನು ಬರೆದಿದ್ದಾರೆ. ಈ ತಲೆಮಾರಿನವರು ಕನ್ನಡ ಸಾಹಿತ್ಯದ ಆದ್ಯ ಪ್ರವರ್ತಕರಾದುದರಿಂದಲೂ ಅವರ ಕಾಲಕ್ಕೆ ಸಮಕಾಲೀನ ಸಾಹಿತ್ಯ ವಿಪುಲ ಪ್ರಮಾಣದಲ್ಲಿ ಬಂದಿರಲಿಲ್ಲವಾದ್ದರಿಂದಲೂ ಅವರು ಅನಿವಾರ್ಯವಾಗಿ ತಮ್ಮ ಪೂರ್ವಸಾಹಿತ್ಯ ಕೃತಿಗಳನ್ನೇ ವಿಮರ್ಶೆಯ ಒರೆಗಲ್ಲಿಗೆ ಹಚ್ಚುವುದು ಅನಿವಾರ್ಯ ಆಯಿತು.

## 3.2 ಸಾಹಿತ್ಯ ಮತ್ತು ಸತ್ಯ

ಸಾಹಿತ್ಯಕ್ಕೂ ಇತರ ಸಾಹಿತ್ಯಕ ಪರಿಭಾಷೆಗೂ ಇರುವ ನಿಕಟ ಸಂಬಂಧವನ್ನು ವಿಶ್ಲೇಷಿಸುವ ವಿಮರ್ಶಿಸುವ ಪ್ರಯತ್ನ ಪ್ರಾಚೀನ ಆಲಂಕಾರಿಕರಲ್ಲಿಯೂ ಆಧುನಿಕ ವಿಮರ್ಶಕರಲ್ಲಿಯೂ ನಡೆದಿದೆ. "ಭಾರತೀಯ ಕಾವ್ಯ ಮೀಮಾಂಸೆ" ವಿವಿಧ ಪಾರಿಭಾಷಿಕ ಶಬ್ದಗಳನ್ನು ವಿವಿಧ ಮೀಮಾಂಸಕರು ಹೇಗೆ ಕಂಡರೆಂದು ಕ್ರೋಢೀಕರಿಸಿದ ಒಂದು ಮಹಾ ಪ್ರಯತ್ನ, ಅದ್ವಿತೀಯ ಸಾಹಸ. ರಸ, ಕಾವ್ಯ, ರೀತಿ, ಸಹೃದಯ, ಧ್ವನಿ, ಗುಣ, ದೋಷ, ಪ್ರತಿಭೆ, ಕಾವ್ಯದ ಪರಿಕಾರ-ಇತ್ಯಾದಿಗಳನ್ನು ಕುರಿತು ಪ್ರಾಚೀನರಾದ ಹಲವು ಆಲಂಕಾರಿಕರ ಧ್ವನಿಮತಗಳಲ್ಲಿ ಇರುವ ಭಿನ್ನಾಭಿಪ್ರಾಯಗಳು, ಸಹಮತಗಳು ಹಲವು. ಅರ್ವಾಚೀನರಾದ ವಿಮರ್ಶಕರು ವಿಮರ್ಶಿಸಿದರು, ಸಾಹಿತ್ಯದಲ್ಲಿ ಅವುಗಳ ಸ್ಥಾನವೇನೆಂಬುದನ್ನು ಗುರುತಿಸಿದರು, ನಿರ್ಣಯಿಸಿದರು. ಡಾ. ಎಸ್.ಎಲ್. ಭೈರಪ್ಪನವರ "ಸತ್ಯ ಮತ್ತು ಸೌಂದರ್ಯ" "ಸಾಹಿತ್ಯ ಮತ್ತು ಪ್ರತೀಕ" "ಕಥೆ ಮತ್ತು ಕಥಾವಸ್ತು", ಡಾ. ಜಿ.ಎಸ್. ಶಿವರುದ್ರಪ್ಪನವರ "ಸೌಂದರ್ಯ ಸಮೀಕ್ಷೆ", ಡಾ. ಡಿ.ವಿ.ಜಿ. ಯವರ "ಜೀವನ ಸೌಂದರ್ಯ ಮತ್ತು ಸಾಹಿತ್ಯ" "ಸಾಹಿತ್ಯ ಶಕ್ತಿ", ವಿ.ಸೀ. ಯವರ "ಸಾಹಿತ್ಯದಲ್ಲಿ ಅರ್ಥ ಮತ್ತು ಮೌಲ್ಯ"-ಮುಂತಾದ ಆಧುನಿಕ ಕಾಲದ ಹಲವು ಕೃತಿಗಳನ್ನು ಹೆಸರಿಸಬಹುದು. ಹಾಗೆಯೇ ಪ್ರೊ. ಎ.ಎನ್. ಮೂರ್ತಿರಾಯರ "ಸಾಹಿತ್ಯ ಮತ್ತು ಸತ್ಯ" ಎಂಬ ವಿಮರ್ಶಾತ್ಮಕ ಲೇಖನಗಳ ಸಂಕಲನ ಇಂತಹ ಹಲವು ವಿಮರ್ಶೆಗಳನ್ನು ಒಳಗೊಂಡಿದೆ.

ಮೂರ್ತಿರಾಯರು ಸಾಂಪ್ರದಾಯಿಕ ವರ್ಗದ ವಿಮರ್ಶಕರು. ಅವರ ಕಾಲಕ್ಕೆ ಈಗಿನಷ್ಟು ಕನ್ನಡ ಸಾಹಿತ್ಯ ಹೊರವಾಗಿ ಹಚ್ಚಿರಲಿಲ್ಲ. ಸಮಕಾಲೀನ ಸಾಹಿತ್ಯವನ್ನು ವಿಮರ್ಶಿಸುವ ಪದ್ಧತಿ, ರೂಢಿ ಬೆಳೆದು ಬಂದಿದ್ದು ಇತ್ತೀಚೆಗಷ್ಟೆ. ಒಂದು ಸಾಹಿತ್ಯ ಕೃತಿಯ ಅಥವಾ ಭಾಗದ ಒಳಿತು ಕೆಡಕು ಗುಣಾವಗುಣಗಳು, ಗುಣದೋಷಗಳನ್ನು ಕುರಿತು ಉಗ್ರವಾಗಿ ಟೀಕಿಸುವುದಾಗಲೀ, ಖಂಡಿಸುವುದಾಗಲೀ ಸಾಧ್ಯವಿರುತ್ತಿರಲಿಲ್ಲ. ಕನ್ನಡ ನವೋದಯ ಕಾಲದ ಕೃತಿಗಳ ವಿಮರ್ಶೆಯೆಂದರೆ ಅದೊಂದು ಪ್ರಶಂಸಾರ್ಹವಾದ ಪ್ರಯತ್ನವಾದ್ದರಿಂದ ದೋಷಗಳನ್ನು ಎತ್ತಿ ಹೇಳುವ, ಖಂಡಿಸುವ ಪ್ರಶ್ನೆಯೇ ಉದ್ಭವಿಸುತ್ತಿರಲಿಲ್ಲ. ವಸ್ತು, ಪ್ರಯೋಗ, ರೂಪಾಂತರ, ಭಾಷಾಂತರ, ಛಂದೋ ವೈವಿಧ್ಯ ಇವುಗಳನ್ನು ಕುರಿತು ಸ್ವಾಗತಾರ್ಹವಾದ ಪ್ರೋತ್ಸಾಹಕರ(ಉತ್ತೇಜಕ)ವಾದ ಮಾತುಗಳೇ

ವಿಮರ್ಶೆಯಾಗಿತ್ತು. ವಿಮರ್ಶೆಯೆಂದರೆ ಒಂದು ರೀತಿಯ ವ್ಯಾಖ್ಯಾನ. ಈ ಬರಹಗಳಿಂದಾಗಿ ಮೂರ್ತಿರಾಯರು ರಾಮಾಯಣ, ಷೇಕ್ಸ್‌ಪಿಯರ್ ಮುಂತಾದ ಕೃತಿ ಕರ್ತೃಗಳನ್ನು ಕುರಿತು ವಿಮರ್ಶಿಸಿದರು.

"ಸಾಹಿತ್ಯ ಮತ್ತು ಸತ್ಯ" ಅದು ವಿಮರ್ಶಾತ್ಮಕ ಲೇಖನಗಳ ಸಂಕಲನ. ಇದೊಂದು ಸ್ಮಾರಕ ಉಪನ್ಯಾಸಗಳ ಸಂಕಲನ. ಆಕಾಶವಾಣಿಯ ಮೂಲಕ ಮಾಡಿದ ಭಾಷಣದ ವಿಸ್ತೃತ ರೂಪ, ಕನ್ನಡ ಸಾಹಿತ್ಯಪರಿಷತ್ತಿನ ಮಹೋತ್ಸವದಂದು ಮಾಡಿದ ಇಂಗ್ಲೀಷ್ ಭಾಷಣದ ಕನ್ನಡಾನುವಾದ, ಸಂಭಾವನಾ ಗ್ರಂಥಕ್ಕಾಗಿ ಬರೆದ ಲೇಖನ-ಮುಂತಾದ ಲೇಖನಗಳು ಇದರಲ್ಲಿ ಸೇರಿವೆ. ಶ್ರೀ ಬಿ. ಚಂದ್ರಶೇಖರ ಶರ್ಮಾ ಸ್ಮಾರಕೋಪನ್ಯಾಸವಾದ "ಸಾಹಿತ್ಯ ಮತ್ತು ಸತ್ಯ" ಒಂದು ಅಪೂರ್ವ ವಿಮರ್ಶೆ. ಕನ್ನಡದಲ್ಲಿ ಇದು ಒಂದು ಸಮತೂಕದ ವಿಮರ್ಶೆ. ಆರಂಭದಲ್ಲಿ ಶ್ರೀ ಶರ್ಮರ ಬಗ್ಗೆ ಒಂದು ಪ್ರಾಸ್ತಾವಿಕ ಪರಿಚಯ ಲೇಖನವಿದೆ. ಇದು ಸಂಕ್ಷಿಪ್ತವಾದುದಾದರೂ ಸಮಗ್ರವಾದ ಪರಿಚಯ ಲೇಖನ. ಇವರ ಆಪ್ತಮಿತ್ರರಾದ ಶ್ರೀ ಶರ್ಮರ ಶಿಕ್ಷಣ, ವೃತ್ತಿ, ಸಾಧನೆಗಳು ಸಂಕ್ಷಿಪ್ತವಾಗಿ ಹೇಳಿದ್ದಾರೆ. ಇವನ್ನು ವಿಸ್ತರಿಸಿ ಬರೆದಿದ್ದರೆ "ಬಿ.ಎಂ. ಶ್ರೀ ಕಂಠಯ್ಯ"ದಂತೆ ಒಂದು ವಿಮರ್ಶಾತ್ಮಕ ಕೃತಿಯೇ ಆಗುತ್ತಿತ್ತು.

ಸಾಹಿತ್ಯ ಹಾಗೂ ಇತರೆ ಅಮೂರ್ತ ವಿಷಯಗಳನ್ನು ಕುರಿತ ಜಿಜ್ಞಾಸೆಗಳು ಇತ್ತೀಚೆಗೆ ನಡೆಯುತ್ತಿವೆ. ಮೂರ್ತಿರಾಯರ ಕಾಲಕ್ಕೇನೇ ಇಂತಹ ಪ್ರಯತ್ನ ನಡೆದಿತ್ತು. ಹಾಗೆಯೇ ಮೂರ್ತಿರಾಯರು ಈ ವಿಮರ್ಶೆಯಲ್ಲಿ ಸಾಹಿತ್ಯ ಮತ್ತು ಸತ್ಯಗಳ ನಡುವಣ ಸಂಬಂಧವನ್ನು ವಿಶ್ಲೇಷಿಸಿದ್ದಾರೆ. ಸಾಹಿತ್ಯ ಒಮ್ಮೊಮ್ಮೆ ಹತ್ತು ಹಲವು ರಂಜನೀಯ ಉತ್ಪ್ರೇಕ್ಷೆಗಳಿಂದ ಕೂಡಿರುತ್ತದೆ. ಸಾಹಿತ್ಯ ಕೃತಿಯ ಮೂಲ ಸ್ರೋತ ಇಂತಹ ಉಪನದಿಗಳಿಂದ ಪರಿಪುಷ್ಟವಾಗಿ ಪ್ರವಹಿಸುವುದುಂಟು. ಇವುಗಳಲ್ಲಿ ಒಮ್ಮೊಮ್ಮೆ ಮೂಲ ಸ್ರೋತ ಮರೆಯಾಗುವ ಭಯವೂ ಇದೆ. ಪ್ರಧಾನ ವಸ್ತುವಿನ ಅಲಂಕರಣಗಳೇ ವಿಜೃಂಭಿಸಿ, ಮೂಲಮೂರ್ತಿ ಕಣ್ಣಿಗೆ ಮರೆಯಾಗಬಹುದು. ಮೂರ್ತಿರಾಯರ ಈ ವಿಮರ್ಶಾತ್ಮಕ ಉಪನ್ಯಾಸ ಕಾವ್ಯದಲ್ಲಿ ಅಡಕವಾದ ಸತ್ಯವನ್ನು ಉದ್ಧರಿಸುತ್ತದೆ. ಸತ್ಯದ ವಿಚಾರವಾಗಿ ಮಾತಾಡುವಾಗ ಸಾಹಿತ್ಯದಲ್ಲಿ ಮರೆಯಾದ ಸತ್ಯವನ್ನು ಕೆದಕುವಾಗ ಇತಿಹಾಸವೂ ನಮ್ಮ ಮನಸ್ಸನ್ನು ಸೆಳೆಯುತ್ತದೆ. ಮೂರ್ತಿರಾಯರು ಇತಿಹಾಸದ ಸತ್ಯದ Authenticityಯನ್ನು ಪ್ರಶ್ನಿಸುವುದಿಲ್ಲ, ಪ್ರಸ್ತಾವಿಸುತ್ತಾರೆ. ಇತಿಹಾಸಕ್ಕೂ ಸಾಹಿತ್ಯಕ್ಕೂ ಇರುವ ಸಾಮ್ಯವನ್ನು ಗುರುತಿಸುತ್ತಾರೆ. ಐತಿಹಾಸಿಕ ವ್ಯಕ್ತಿಗಳು ಕಾವ್ಯನಾಯಕರಾದಾಗ ಮತ್ತು ಅವರನ್ನು ವೈಭವೀಕರಿಸಿದಾಗ ಈ ಎರಡು ಘಟ್ಟಗಳ ನಡುವಣ ಅಂತರವನ್ನು ವಿಶ್ಲೇಷಿಸಲು ಹಲವು ಉದಾಹರಣೆಗಳನ್ನು ಆಯ್ದುಕೊಂಡಿದ್ದಾರೆ. ಸಂಸ್ಕೃತ, ಇಂಗ್ಲೀಷ್ ಕಾವ್ಯಗಳಿಂದ ಚಿರಪರಿಚಿತ ನಿದರ್ಶನಗಳನ್ನು ತೆಗೆದುಕೊಂಡು ಅವುಗಳನ್ನು ವಿಮರ್ಶಿಸಿದ್ದಾರೆ. ಇಲ್ಲಿ ಕಾವ್ಯ ಸತ್ಯ ಹಾಗೂ ಜೀವನ ಸತ್ಯಗಳೆರಡನ್ನೂ ಮೂರ್ತಿ ರಾಯರು ವಿಮರ್ಶಿಸುತ್ತಾರೆ. ಇಲ್ಲಿ ಅವರು ತೆಗೆದುಕೊಂಡ ಉದಾಹರಣೆಗಳು-ರಾಮ, Hamlet, ಭರ್ತೃಹರಿಯ ಶ್ಲೋಕ, Ozymandias, ವ್ಯಾಸಭಾರತ, ಕ್ಷೇಮೇಂದ್ರನ ಶ್ಲೋಕ ಮುಂತಾದ ಉದಾಹೃತ ಕಾವ್ಯ ಭಾಗಗಳು ಕಾವ್ಯ ಧರ್ಮವನ್ನೂ ಜೀವನ ಧರ್ಮವನ್ನೂ ಬೋಧಿಸುತ್ತವೆ. ಸತ್ಯದಂತೆ ಕಾಣುವ ಭ್ರಮಾತ್ಮಕ (ಕಾವ್ಯ)ಪ್ರಪಂಚದ ನಿಜವಾದ

ಸತ್ಯವನ್ನು ಬೇರ್ಪಡಿಸುವುದು ಹೇಗೆಂಬ ವಿಚಾರ ಇಲ್ಲಿ ಸುಳಿಯುತ್ತದೆ. ಇಲ್ಲೆಲ್ಲಾ ನಾವು ಮೂರ್ತಿರಾಯರು ನಮ್ಮ ಕಣ್ಣಿಗೆ ವಿಮರ್ಶಕರಾಗಿ ಕಾಣುವುದಕ್ಕಿಂತ ಹೆಚ್ಚಾಗಿ ಒಬ್ಬ ತತ್ವಜ್ಞಾನಿ(Philosopher)ಯಾಗಿ ಕಾಣಿಸುತ್ತಾರೆ. ಸತ್ಯದಿಂದ 'ಪರಮಸತ್ಯ' ವನ್ನು ಕಾಣುವ ಕವಿಯು ಸೃಷ್ಟಿಯ ಕಾರ್ಯವನ್ನು ನಿರಂತರವಾಗಿ ಮುಂದುವರಿಸಬೇಕೆಂಬ ತೀರ್ಮಾನ ಅವರದು.

"ಕಲೆ ಮತ್ತು ನೀತಿ" ಎಂಬ ಇನ್ನೊಂದು ವಿಮರ್ಶಾತ್ಮಕ ಲೇಖನ ಸಾಹಿತ್ಯದಲ್ಲಿ (ಕಲೆ ಮತ್ತು) ನೀತಿಯ ಸ್ಥಾನವನ್ನು ಗುರುತಿಸುತ್ತಾರೆ. ಸಾಹಿತ್ಯದ ಉದ್ದೇಶ ನೀತಿ ಬೋಧನೆಯೇ ಆನಂದವೇ ಎಂಬ ವಿವೇಚನೆಗೆ ತೊಡಗಿ ಎರಡಕ್ಕೂ ಇರುವ ವ್ಯತ್ಯಾಸವನ್ನು ಮೊದಲು ಗಮನಿಸಿದ್ದಾರೆ. ಜಯದೇವನ ಕಾವ್ಯ ಆನಂದಕ್ಕಾಗಿ ಇರುವಂತೆ ನೀತಿಬೋಧೆಗಾಗಿ ಸೃಷ್ಟಿಸಿದ ಕಾವ್ಯ ಘಟ್ಟಗಳ ಔಚಿತ್ಯ, ಸಮಂಜಸತೆ ಎಷ್ಟು ಎಂಬ ವಿಮರ್ಶೆ ಇಲ್ಲಿದೆ. ದುರ್ಯೋಧನನ ಶವದ ಬಳಿ ನಿಂತ ಗಾಂಧಾರಿ 'ಯತೋಧರ್ಮ, ತತೋಜಯ' ಎಂಬ ಉಪದೇಶಾತ್ಮಕ ನೀತಿಯನ್ನು ಹೇಳುವುದು ಸಮಂಜಸವಾದೀತೆ ಎಂಬ ಸಂಶಯ ಈ ಲೇಖನ ಓದಿದ ನಮ್ಮ ಮನಸ್ಸಿನಲ್ಲಿ ಸಹಜವಾಗಿ ಮೂಡುತ್ತದೆ. ಒಮ್ಮೊಮ್ಮೆ ನೀತಿ ಬೋಧನೆಗಾಗಿಯೇ ಹೊರಟ ಕಾವ್ಯ ಹೇಗೆ ತನ್ನ ಲಕ್ಷಣಗಳಿಂದ ದೂರ ಸರಿಯುತ್ತದೆ ಎಂಬುದನ್ನು ತೋರಿಸಲು ಅಯೋಧ್ಯಾಕಾಂಡದ 76 ಶ್ಲೋಕಗಳ ಸಂದರ್ಭವನ್ನು ವಿವರಿಸುತ್ತಾ ಜೊತೆಗೆ ನೀತಿ ಸಂದೇಶ ವಸ್ತುಗಳು ಧ್ವನ್ಯಾತ್ಮಕವಾಗಿ ಮೂಡಿ ಬಂದ ಕವಿತೆಗಳನ್ನು ವಿಮರ್ಶಿಸಿದ್ದಾರೆ.

"ಬೇಂದ್ರೆಯವರ 'ನಾನು ಬಡವಿ' ಎಂಬ ಕವನ ಕಾವ್ಯದಲ್ಲಿ ಪ್ರಣಯ ಕಲೆಯಾಗಿ ಮಾರ್ಪಡುತ್ತದೆ ಎನ್ನುವುದಕ್ಕೆ ಒಂದು ಸೊಗಸಾದ ನಿದರ್ಶನ. ಇಲ್ಲಿ ಉಪಯೋಗಿಸಲಾದ ಶಬ್ದಾರ್ಥಗಳ ಶ್ಲೇಷೆಯು ಸೂಚ್ಯ (Implicit) ಆಗಿದೆಯೇ ಹೊರತು ವಾಚ್ಯ (Explicit) ವಾಗಿಲ್ಲ. ಕಾವ್ಯದಲ್ಲಿ ನೀತಿ ಹೇಗೆ ಅಂತರ್ಗತವಾಗಿದೆ ಎಂಬ ಮಾತಿಗೆ ಸಾಕ್ಷಿಯಾಗಿ ಅವರು ನೀಡುವ ಉದಾಹರಣೆ, ಮಾಡಿದ ಎರಡು ವಾಕ್ಯಗಳ ವಿಮರ್ಶೆ ಮೂರ್ತಿರಾಯರ ಸೂಕ್ಷ್ಮಾವಲೋಕನ ಹಾಗೂ ವಿಮರ್ಶಾ ದೃಷ್ಟಿಗೆ ಸಾಕ್ಷಿ. ನಾಟಕವನ್ನು (ದಿ ಟೆಂಪೆಸ್ಟ್) ನೋಡುವವರಿಗೆ ಈ ಮಾತು (ಕ್ಷಮೆದಯೆಗಳಿಂ ಬರುವ ಕರ್ಮವೇ ಘನತರಂ, ಸೇಡಿನಿಂಬಹದಲ್ತು) ಚರ್ಚಿನಲ್ಲಿ ವೇದಿಕೆಯ ಮೇಲಿಂದ ಮಾಡುವ ಉಪದೇಶ ಎನ್ನಿಸುವುದಿಲ್ಲ. ನೀತಿಯೇ ನಾಟಕವಾಗಿ ಅರಳಿದೆ, ಅಥವಾ ನಾಟಕಲತೆಯಿಂದ ಸಹಜವಾಗಿ ನೀತಿ ಪುಷ್ಪ ಅರಳಿದೆ ಎನಿಸುತ್ತದೆ". (ಪುಟ 66)

ಈ ವಿಮರ್ಶಾ ಲೇಖನದಲ್ಲಿ ಹತ್ತು ಹಲವು ಪ್ರಪಂಚದ ಸಾಹಿತ್ಯ ಕೃತಿಗಳಿಂದ ತೆಗೆದ ಉದಾಹರಣೆಗಳು (66) ಇವೆ. ಇದರೊಂದಿಗೆ ಸಂಗೀತ ಪ್ರಿಯರಾದ ಮೂರ್ತಿರಾಯರು ಸಂಗೀತದಲ್ಲಿಯೂ ನೀತಿ, ಆನಂದಗಳ ಸ್ಥಾನವನ್ನು ನಿರ್ಣಯಿಸುತ್ತಾರೆ. (ಸಂಗೀತಕ್ಕೆ ಸಂಬಂಧಿಸಿದ ಹಾಗೆ ಮೂರ್ತಿರಾಯರ ವಿಮರ್ಶೆಯನ್ನು 'ಸಂಗೀತಾ ಜ್ಞಾನಮು ಅರ್ಥವಿನಾ' ಎಂಬ ಸ್ವತಂತ್ರ ವಿಮರ್ಶಾಲೇಖನದಲ್ಲಿ ಕಾಣಬಹುದು). ಈ ವಿಮರ್ಶೆ ಒಂದು ರೀತಿ 'ನೀತಿ ಬೋಧನೆಯೇ ಕಲೆ : ಕಾವ್ಯದ ಪರಮ ಉದ್ದೇಶ' ಎಂಬ ರೂಢ ಮೂಲ ಅಭಿಪ್ರಾಯಕ್ಕೆ ಒಂದು ಪ್ರತಿಕ್ರಿಯೆಯಂತಿದೆ. ಏಕೆಂದರೆ ಕಾವ್ಯ, ಕಲೆ, ಸಂಗೀತಗಳ ದಿವ್ಯ ಸಂದೇಶ ಇಂದು ಹೇಗೆ ಜನಮನವನ್ನು ಸಂಸ್ಕಾರಗೊಳಿಸಿಲ್ಲ ಎಂಬುದನ್ನು ಅವರು

ಕಂಡುಕೊಂಡಿದ್ದಾರೆ. ಈ ಭ್ರಮನಿರಸನವನ್ನು ಅವರು ಇಂದಿನ ಸಾಮಾಜಿಕ, ರಾಜಕೀಯ ಲಕ್ಷಣಗಳಲ್ಲಿ ಒಂದೆಂದು ಸ್ವೀಕರಿಸಿದ್ದಾರೆಯೇ ಹೊರತು ಅದರಿಂದ ಅವರು ಆಕ್ರೋಶಗೊಂಡಿಲ್ಲ. ಆದ್ದರಿಂದಲೇ ಅವರು ಹೇಳುತ್ತಾರೆ.

"......ಕಲೆ ನಮಗೆ ಬೇಡವೆಂದಲ್ಲ, ಅದು ನೀತಿಯೊಡನೆ ಐಕ್ಯವನ್ನು ಸಾಧಿಸಬೇಕಾಗಿಲ್ಲವೆಂದಲ್ಲ-ಅದರ ಮೂಲಕ ನೀತಿಯನ್ನು ಸಾರಿದರೆ ಪ್ರಪಂಚ ಉದ್ಧಾರವಾಗಿ ಹೋಗುತ್ತದೆಂಬ ಭ್ರಮೆಯನ್ನು ಬಿಡಬೇಕು....." (74) ಮೂರ್ತಿರಾಯರ ಸಮಕಾಲೀನರಾದ ಇನ್ನೊಬ್ಬ ವಿಮರ್ಶಕ ದಿ. ಶ್ರೀ ಉ.ಕಾ ಸುಬ್ಬರಾಯಚಾರ್‌ರವರೂ ಇಂತಹದೇ ಒಂದು ಚಿಂತನಪರ ವಿಮರ್ಶೆಯಲ್ಲಿ ಇದೇ ಅಂಶವನ್ನು ವಿಮರ್ಶಿಸಿದ್ದಾರೆ.

ಶ್ರೀ ಉ.ಕಾ. ಸುಬ್ಬರಾಯಚಾರ್‌ರವರು ಇದೇ ವಿಷಯವನ್ನು ಎತ್ತಿಕೊಂಡು ಹೀಗೆ ಹೇಳುತ್ತಾರೆ.

ಕಾವ್ಯವು ನೀತಿ ಬೋಧನೆಗಾಗಿಯೇ ರಚಿಸಲ್ಪಟ್ಟಿದೆಯೇ? ನೀತಿಬೋಧೆಯು ಕಾವ್ಯದ ಉದ್ದೇಶವೆಂದು ಹೇಳುವುದು ಯುಕ್ತವಲ್ಲವೆಂದು ಕೆಲವರ ಮತ. ಏಕೆಂದರೆ ನೀತಿ ಬೋಧೆಗೆ ಹೊರಟ ಕಾವ್ಯದ ಮುಖ್ಯ ಲಕ್ಷಣವಾದ ಆನಂದವು ಹುಟ್ಟದೇ ಹೋಗಬಹುದು. ಕೆಲವು ತತ್ವಗಳನ್ನು ಉದ್ದಕ್ಕೆ ಓದುತ್ತಾ ಹೋದಾಗ ನಮಗೆ ಆನಂದ ಉಂಟಾಗುವುದಿಲ್ಲ.........ಯಾವ ಉತ್ತಮ ಕಾವ್ಯವನ್ನು ಪರಿಶೀಲಿಸಿದರೂ ಅದರಲ್ಲಿ ನೀತಿ ಬೋಧೆ ಧ್ವನಿಪೂರ್ಣವಾಗಿ ಐಕ್ಯವಾಗಿರುತ್ತದೆ. ನೀತಿ ಬೋಧೆ ಇಲ್ಲದ ಉತ್ತಮ ಕಾವ್ಯಗಳನ್ನು ಹುಡುಕಿದರೂ ಸಿಕ್ಕುವುದು ಅಪೂರ್ವ. ಇಲ್ಲವೆಂದೇ ಹೇಳಬಹುದು...... ನೀತಿ ಬೋಧೆಗಾಗಿಯೇ ಹೊರಡುವ ಸಾಹಿತ್ಯ ಕಾವ್ಯವಾಗುವುದಿಲ್ಲ. ಶಾಸ್ತ್ರವಾಗುತ್ತದೆ... ನೀತಿ ಬೋಧೆಯೂ ಕಾವ್ಯದ ಅನಿವಾರ್ಯಅಂಗ. ಆದರೆ ನೀತಿಬೋಧೆಯೇ ಕಾವ್ಯವಲ್ಲ... ಕಲೆಗಿಂತ ಜೀವನವೇ ಸತ್ಯವಾದುದು. ಜೀವನದ ಪ್ರಗತಿಗೆ ವಿರುದ್ಧವಾದ ಕಾವ್ಯ ಎಂದಿಗೂ ಪೂಜಾರ್ಹವಾಗಲಾರದು. ಅದರಿಂದ ಆನಂದವಿಲ್ಲ. ನಾವು ಅಂತಹ ಕಾವ್ಯವಿಲ್ಲದೆ ಬದುಕಬಹುದು, ಆದರೆ ಸತ್ವವಿಲ್ಲದೆ ಬದುಕಲಾರೆವು. ಈ ದೃಷ್ಟಿಯಿಂದ ಕಾವ್ಯದಲ್ಲಿ ನೀತಿಬೋಧೆಯು ಒಂದು ಮುಖ್ಯ ಅಂಗ (ಸಹೃದಯ ಸ್ಪಂದನ 1967 ಪುಟ 18, 19, 20)

ಶ್ರೀ ಉ.ಕಾ. ಸುಬ್ಬರಾಯಚಾರ್‌ರವರ ಅಭಿಮತದಂತೆ ನೀತಿಬೋಧೆ ಕಾವ್ಯ ಕಲೆಯ ಅನಿವಾರ್ಯ ಅಂಗ, ಕಲೆಗಾಗಿ ಕಲೆ ಎಂಬುದನ್ನು ಅವರು ಒಪ್ಪರು. ಹೃದಯಾಹ್ಲಾದಿಕಾರಿಯಾದ ಆನಂದದಾಯಕವೆನಿಸಿದ ಕಲೆ ಮಾನವನ ಜೀವನೋನ್ನತಿಗೆ ಪೋಷಕ ಶಕ್ತಿಯಾಗಿ ಪ್ರಚೋದಕ ಶಕ್ತಿಯಾಗಬೇಕು. ಮೂರ್ತಿರಾಯರ ಅಭಿಮತ ಕೊಂಚ ಭಿನ್ನವಾಗುವುದು ಇಲ್ಲಿಯೇ. ಅವರ ಅಭಿಮತದಂತೆ "ಕಾವ್ಯ ಕಲೆ ಆನಂದ ದಾಯಕವೂ ಹೌದು, ನೀತಿಯ ನೆರಳೂ ಇಲ್ಲದ ಕೃತಿ ಸಾಹಿತ್ಯವಾಗಬಹುದು". (ಸಾ.ಸ. 49)

ನೀತಿಬೋಧೆ ಹೇರಳವಾಗಿ ಮೈಗೂಡಿಸಿಕೊಂಡ ವಿಪುಲ ಪ್ರಮಾಣದಲ್ಲಿದ್ದೂ, ಸ್ವಭಾವ ಸಂಸ್ಕರಣವಾಗದ ಜನರಿದ್ದಾರೆ ಎಂದು(ನೊಂದು)ಕೊಂಡ ಮೂರ್ತಿರಾಯರು "ಮ್ಯಾಕ್‌ಬೆತ್" ನಾಟಕವನ್ನು ಬರೆದು ನಾಲ್ಕು ಶತಮಾನಗಳಾದವು. ಅದನ್ನು ನೋಡಿ, ಓದಿ ಆನಂದಿಸಿದ ಕಲೆಗಾರರು ಇವತ್ತೂ ಸಿಕ್ಕುತ್ತಾರೆ. ತ್ಯಾಗರಾಜರು 'ನಿಧಿ ಚಾಲ ಸುಖಮೋ ರಾಮುನಿ ಸನ್ನಿಧಿ ಸೇವ ಸುಖಮೋ' ಎಂಬ ಪ್ರಶ್ನೆ ಹಾಕಿ ನೀತಿಬೋಧೆ

ಮಾಡಿ ಎರಡು ಶತಮಾನಗಳು ಕಳೆದಿವೆ. ಇವತ್ತು ಪ್ರಪಂಚದಲ್ಲಿ ಸಿಂಹಾಸನಸ್ಥ ವಾಗಿರುವುದು 'ರಾಮುನಿ ಸನ್ನಿಧಿಯಲ್ಲ, ಬರಿಯ ನಿಧಿ' (73) ಎಂದು ನಿರ್ಲಿಪ್ತರಾಗಿ, ಸ್ಥಿತಪ್ರಜ್ಞರಾಗಿ ನುಡಿದರೂ ಸಾಹಿತ್ಯ ಸಂಸ್ಕೃತಿಗಳ ನಡುವಣ ಗಾಢಾಲಿಂಗನಕ್ಕಾಗಿ ಮತ್ತೊಂದು ವಿಮರ್ಶೆಯನ್ನು ಮೀಸಲಾಗಿರಿಸಿದ್ದಾರೆ. ಅದೇ 'ಸಂಸ್ಕೃತಿ ಮತ್ತು ಸಾಹಿತ್ಯ'.

ಈ ವಿಮರ್ಶೆಯಲ್ಲಿ ಸಂಸ್ಕೃತಿಗೆ ಮೊದಲ ಸ್ಥಾನ ನೀಡಲಾಗಿದೆ. ಅನಂತರ ಬರುವಂತಹುದು ಸಾಹಿತ್ಯ. ಸಂಸ್ಕೃತಿಯಂತಹ ಅಮೂರ್ತ ವಿಷಯವನ್ನು ಕುರಿತು ಕನ್ನಡದಲ್ಲಿ ವಿರಳವಾದರೂ ಪ್ರೌಢ ಗ್ರಂಥಗಳ ರಚನೆಯಾಗಿವೆ. ಡಾ. ಡಿ.ವಿ.ಜಿ. ಯವರು 'ಸಂಸ್ಕೃತಿ' ಎಂಬ ಪ್ರೌಢಗ್ರಂಥ ಒಂದನ್ನು ಬರೆದರು. 'ಸಂಸ್ಕೃತಿ ಎಂದರೇನು?' ಎಂಬ ವೈಚಾರಿಕ ಪ್ರಬಂಧವನ್ನು ದಿ. ದೇವುಡು ನರಸಿಂಹಶಾಸ್ತ್ರಿಗಳು ಬರೆದರು. ಆದರೆ ಮೂರ್ತಿ ರಾಯರ ವಿಮರ್ಶಾತ್ಮಕ ಪ್ರಬಂಧ (ಈ ಲೇಖನವನ್ನು ವಿಮರ್ಶಾತ್ಮಕ ಪ್ರಬಂಧ ವೆಂದೇ ಹೆಸರಿಸುವುದು ಸೂಕ್ತ)ಈ ಮುನ್ನ ಉಲ್ಲೇಖಿಸಿದವುಗಳಿಗಿಂತ ಭಿನ್ನ. ಇಲ್ಲಿ ಸಂಸ್ಕೃತಿ ಹಾಗೂ ಸಾಹಿತ್ಯಗಳು ಹೇಗೆ ಪರಸ್ಪರ ಪೂರಕ ಎಂಬುದನ್ನು ವಿವೇಚನೆಗೆ ಒಳಪಡಿಸಿದೆ. ಪ್ರಬಂಧದ ಪ್ರಾರಂಭದಲ್ಲಿಯೇ ಭಾರತೀಯ ರೂಪಕವನ್ನು ಉಪಯೋಗಿಸಿ ಸಾಹಿತ್ಯ ಸಂಸ್ಕೃತಿಗಳ ಅವಿನಾ ಸಂಬಂಧವನ್ನು ಸಮಗ್ರವಾಗಿ ಆದರೆ ಸಂಕ್ಷಿಪ್ತವಾಗಿ ವಿವರಿಸಿದೆ. ಕ್ಷೀರಸಾಗರದ ಮಥನದ ರೂಪಕವನ್ನು ಉಪಯೋಗಿಸಿ ಸಂಸ್ಕೃತಿಯನ್ನು ಅಮೃತಕ್ಕೂ ಸಾಹಿತ್ಯವನ್ನು (ಅಮೃತವನ್ನು) ದೇವತೆಗಳಿಗೆ ವಿತರಿಸಿದ ವಿಶ್ವಮೋಹಿನಿಗೂ ಹೋಲಿ ಸಿದ್ದಾರೆ. ಸಂಸ್ಕೃತಿಯನ್ನು ವ್ಯಾಮೃತವೆಂದು ಹೆಸರಿಸಿ ಅದನ್ನು ಮನುಷ್ಯನ ಭಾವಜೀವನದ ಪ್ರತಿರೂಪವೆಂದು ಸಾಹಿತ್ಯ ವ್ಯಾಸಂಗದಿಂದ ಅದು ಹೇಗೆ ಸಂಸ್ಕೃತವಾಗುತ್ತದೆ ಎಂದು ಹೇಳುತ್ತಾರೆ. ಕಾಲ್ಪನಿಕ ಕಥೆಗಳೂ ಸಹ ಮಾನವನ ಭಾವೋನ್ನತಿಗೆ ಕಾರಣವಾಗುತ್ತವೆ. ಇಲ್ಲಿಯೂ ಸಹ ಈ ಪ್ರಬಂಧವನ್ನು ಸೋದಾಹರಣವಾಗಿ ನಿರೂಪಣೆ ಮಾಡಿದ್ದಾರೆ. ಮಾನವ ಶಕ್ತಿ ಸಾಮರ್ಥ್ಯದ ಅಸೀಮತೆ, ಇತಿಮಿತಿಗಳು ಇಂಗ್ಲೀಷ್ ಸಾಹಿತ್ಯ ಕೃತಿಗಳಿಂದ ಉದ್ಧೃತವಾದ ಭಾಗಗಳಿಂದ ವಿವರಿಸಲ್ಪಟ್ಟಿದೆ. ರಾಮಾಯಣ, ಬೈಬಲ್-ಮುಂತಾದ ಗ್ರಂಥಗಳು ಪ್ರತಿಪಾದಿಸಿದ ಸಂಸ್ಕೃತಿ ಪರವಾದ ಸಂದೇಶಗಳು ಇಲ್ಲಿ ಸಮರ್ಥನೆಗೆ ಒಳಗಾಗಿವೆ. ಶ್ರೀರಾಮನು ವನವಾಸಕ್ಕೆ ಹೊರಡುವಾಗ ಸೀತೆಯನ್ನು 'ಕಾಡಿಗೆ ಬರಬೇಡ' ಎಂದು ಹೇಳಿದಾಗ ಸೀತೆಯ ಸಾತ್ವಿಕ ಕ್ರೋಧ, ಮೂದಲಿಕೆಗಳನ್ನು ವಿಮರ್ಶಾತ್ಮಕವಾಗಿ ನೋಡಿದ ಮೂರ್ತಿರಾಯರ ಸುಸಂಸ್ಕೃತ ದೃಷ್ಟಿಕೋನ ವ್ಯಕ್ತವಾಗುತ್ತದೆ. ಈ ಸಂದರ್ಭದಲ್ಲಿ ಅವರು ಬರೆಯುತ್ತಾರೆ.

"ಆ ಕೋಪದ ಉಗಮಸ್ಥಾನ ಪತಿಪ್ರೇಮ, ಧರ್ಮಶ್ರದ್ಧೆ. ಅಷ್ಟು ಕಟುವಾಗಿ ಮಾತಾಡದಿದ್ದರೆ ರಾಮನ ಜೊತೆಯಲ್ಲಿ ಹೋಗುವುದು ಸಾಧ್ಯವೇ ಇಲ್ಲವೆಂದು ಆಕೆ ಭಯಪಟ್ಟಿದ್ದಳು. ಸಂದರ್ಭದೊಡನೆ ಹೊಂದಿಸಿ ನೋಡಿದರೆ ಆ ಕೋಪ ಒಳ್ಳೆಯ ದಾಗಿಯೇ ಕಾಣುತ್ತದೆ" (83)

ಮೂರ್ತಿರಾಯರ ವಿಶಿಷ್ಟ ವಿಮರ್ಶಾತ್ಮಕ ದೃಷ್ಟಿಕೋನ ಯಾವುದಕ್ಕೂ ಹೊರತಾಗಿಲ್ಲ. 'ತುಕಾರಾಂ' ಚಿತ್ರದ ಒಂದು ಮಧುರ ಸನ್ನಿವೇಶವೂ ಅವರ ಲಕ್ಷ್ಯವನ್ನು ಸೆಳೆದಿದೆ. ತುಕಾರಾಮನು ಹೆಂಡತಿಯನ್ನು ಹತ್ತಿರ ಕೂರಿಸಿ ಅವಳಿಗೂ ರೊಟ್ಟಿಯನ್ನು ಕೊಡಲು ಹೋದಾಗ ಅವನ ಹೆಂಡತಿಯ ಪ್ರತಿಕ್ರಿಯೆ ಅವರ ಸೂಕ್ಷ್ಮಾವಲೋಕನಕ್ಕೆ

ನಿದರ್ಶನ. "ಆಗ ಆಕೆಯ ಮುಖದಲ್ಲಿ ಕ್ಷಣ ಮಾತ್ರ ಅರಳಿದ ಮೆಲುನಗೆಯು ಹೇಗೆ ಅವರ್ಣನೀಯವಾದದ್ದು, ಹೊಳೆದು ಹೋದ ಸೌಂದರ್ಯ ಅಲೌಕಿಕವಾದದ್ದು" (85) ಇಲ್ಲಿ ತುಕಾರಾಂ ಹಾಗೂ ಅವನ ಪತ್ನಿ - ಈ ಇಬ್ಬರ ಸುಸಂಸ್ಕೃತ ವ್ಯಕ್ತಿತ್ವದ ಮಾದರಿಯನ್ನು ನಮ್ಮ ಮುಂದಿರಿಸಿದ್ದಾರೆ. "A disinterested endeavour to learn and propagate the best that is known and thought in the world" ಎಂಬ ಆರ್ನಾಲ್ಡ್‌ನ ವಿಮರ್ಶಾವ್ಯಾಖ್ಯೆ ನಮಗೆ ನೆನಪಾಗುತ್ತದೆ. ಜೊತೆಗೆ Human life and the world are the subjects of a poet. It is critical effort which gives the poet his knowledge of human life and of the world in which it is lived" ಎಂಬ ಆರ್ನಾಲ್ಡ್‌ನ ಹೇಳಿಕೆಯ ಪ್ರಕಾರ ಮೂರ್ತಿರಾಯರ ವಿಮರ್ಶೆ ಇಂತಹ ಸಂದರ್ಭದಲ್ಲಿ ಕಾವ್ಯರೂಪ ತಳೆಯುತ್ತದೆ. ಇಷ್ಟೆಲ್ಲಾ ಉದಾಹರಣೆಗಳು ವಿಮರ್ಶೆಗೆ ಒಳಪಟ್ಟು ಅನಂತರದ ಸಂಸ್ಕೃತಿ ಎಂಬ ನಿರಾಕಾರ ವಸ್ತು ಅವರ ಮಾತಿನ ಸಾಕಾರ-ಮೂರ್ತಿರೂಪ ತಳೆದು ಹೀಗೆ ನಿಲ್ಲುತ್ತದೆ.

'ಮೇಲೆ ಹೇಳಿದ ರೀತಿಯಲ್ಲಿ ಮನಸ್ಸು ಮೃದುವಾಗಿ ನಮ್ಮ ಭಾವಜೀವನ ಹದಕ್ಕೆ ಬಂದು ಸಮರಸವಾದರೆ ನಮ್ಮ ಜೀವನದಲ್ಲೂ ನಾವು ಸೌಂದರ್ಯವನ್ನು ಸಾಧಿಸಿದಂತೆ ಸುಸಂಸ್ಕೃತವಾದಂತೆ'

ಹೆಚ್ಚು ಕಡಿಮೆ ಇದೇ ಅಭಿಪ್ರಾಯವನ್ನು ಡಾ. ಡಿ.ವಿ.ಜಿ. ಯವರೂ ವ್ಯಕ್ತ ಪಡಿಸುತ್ತಾರೆ.

"ವಿದ್ವತ್ತಿಗಿಂತಲೂ ಸಂಸ್ಕೃತಿ ಮಿಗಿಲಾದದ್ದು, ವಿದ್ವತ್ತೆಂದರೆ ಪುಸ್ತಕ ಪಾಂಡಿತ್ಯ, ಸಂಸ್ಕೃತಿ ಎಂದರೆ ಜೀವನದ ಅಂತರಂಗದ ಸೊಬಗು" (ಹೃದಯ ಸಂಪನ್ನರು-ಪುಟ 80)

ದಿ. ದೇವುಡುರವರೂ ಸಹಾ ತಮ್ಮ "ಸಂಸ್ಕೃತಿ ಎಂದರೇನು"? ಎಂಬ ಪ್ರಬಂಧದಲ್ಲಿ ಹೀಗೆಯೇ ಹೇಳುತ್ತಾರೆ.

"ವಜ್ರದ ಕಾಂತಿಗಿಂತ ಸಹಜವಾಗಿ, ತಿಳಿನೀರಿಗಿಂತ ತಿಳಿಯಾಗಿ, ಶುಚಿಯಾಗಿ, ರುಚಿಯಾಗಿ, ಹಿತವಾಗಿ, ಮಿತವಾಗಿ, ಪರಿಪಕ್ವವಾಗಿ, ಯಾರಿಗೂ ಬೇಡವಾಗದೆ ಇರುವ ಮನೋಭಾವ. ಅದರಿಂದ ಮೂಡಿದ ಅದರಿಂದ ಪ್ರೇರಿತವಾದ ನಡೆ ಇವೆರಡೂ ಸಂಸ್ಕೃತಿಯ ಗುರುತುಗಳು" (ಆಧುನಿಕ ಗದ್ಯ ಸಾಹಿತ್ಯ 1973, ಪುಟ 15)

ಹೀಗೆ ಸಂಸ್ಕೃತಿ ಮನುಷ್ಯನ ಬಹಿರಂಗಕ್ಕಿಂತಲೂ ಆಂತರಂಗಿಕ ವ್ಯಕ್ತಿತ್ವ ಜೀವನಕ್ಕೆ ಹೆಚ್ಚಾಗಿ ಸೇರಿದ ವಿಷಯವೆಂಬ ಸತ್ಯವನ್ನು ಮೂರ್ತಿರಾಯರಂತೆ ಇತರ ಹಿರಿಯ ಚಿಂತನಶೀಲರೂ ಅಭಿಪ್ರಾಯ ಪಡುತ್ತಾರೆ.

'ನಮ್ಮ ಸಾಹಿತ್ಯದಲ್ಲಿ ಭಾರತೀಯತೆ' ಎಂಬುದು ಒಂದು ವಿಮರ್ಶಾತ್ಮಕ ಪ್ರಬಂಧವಾದರೂ ಮೂರ್ತಿರಾಯರ ಸಾಂಪ್ರದಾಯಿಕ, ಸ್ವದೇಶೀಯವಾದ ದೃಷ್ಟಿಕೋನ ಇಲ್ಲಿ ಹೇಗೆ ವ್ಯಕ್ತವಾಗಿದೆ ಎಂದು ತಿಳಿಯುತ್ತದೆ. ಕೌಟುಂಬಿಕ ವಾತಾವರಣದಲ್ಲಿ ಅವರ ಸೊಸೆ ಪ್ರಯೋಗಿಸಿದ ಒಂದು ಶಬ್ದ ಜಾಲದಿಂದ, ಅವರ ಅರ್ಥವ್ಯಾಪ್ತಿ ವಿಮರ್ಶೆಯಿಂದ ಆರಂಭಗೊಂಡ ಈ ಲೇಖನ 'ಭಾರತೀಯ' ಎಂಬ ಶಬ್ದವನ್ನೂ ವಿಶ್ಲೇಷಣೆಗೆ ಒಳಪಡಿಸಿ ಅನಂತರ ಅವರು ಸಮಗ್ರ ಲೇಖನದ ಅರ್ಥವ್ಯಾಪ್ತಿಗೆ ತೊಡಗುತ್ತಾರೆ. ಜೊತೆಗೆ ಭಾರತೀಯರಿಗೆ ಭಾರತೀಯ ಸತ್ವ ಸ್ವರೂಪವಿರುವಂತೆ ಪ್ರತಿಯೊಂದು ಭಾಷೆ ಲೇಖಕನಿಗೂ

ಈ 'ದೇಶೀಯತೆ' ಇರುತ್ತದೆ. ಉಪಷ್ಟಂಭಕವಾಗಿ King Richardನ ಉದ್ಧೃತ ಭಾಗದ ಅರ್ಥ ವಿಸ್ತಾರ ಮಾಡುತ್ತಾರೆ. ಪಂಪನ ಸ್ವದೇಶ ಪ್ರೇಮ, ಭಾರತೀಯರ ವೈರಾಗ್ಯ ಪ್ರೇಮ, ಲೌಕಿಕ ತಿರಸ್ಕಾರ ಸಮಕಾಲೀನ ಕವಿ ಲೇಖಕರ ಕೃತಿಗಳನ್ನು ಉಲ್ಲೇಖಿಸುತ್ತಾರೆ. ಕೆಲವೆಡೆ ತೌಲನಿಕವಾದ ವಿಮರ್ಶೆಯೂ ಇದೆ. ಆ್ಯಡ್ಮಿಟಸ್ ಹಾಗೂ ಸಾವಿತ್ರಿಯ ಕಥೆಗೂ ಇರುವ ಸಾಮ್ಯ-ಸಾಮೀಪ್ಯಗಳನ್ನು ಗುರುತಿಸುತ್ತಾರೆ. ಇಲ್ಲಿ ನಾವು ಮುಖ್ಯವಾಗಿ ಗುರುತಿಸಬೇಕಾದದ್ದು ಇಷ್ಟು. ಯಾವುದೇ ದೇಶದ ಮಹಾಕಾವ್ಯವಾಗಿರಲಿ, ಅದರಲ್ಲಿ ಆ ದೇಶದ ಸಂಸ್ಕೃತಿ ಪ್ರತಿಫಲಿತವಾಗಿರುತ್ತದೆ. ಇಲ್ಲಿ ಸಂಸ್ಕೃತಿ ಎಂದರೆ ಆ ದೇಶದ ಅತ್ಯಂತ ಪ್ರಾಚೀನತಮ ಜೀವನದರ್ಶನ. ಬಹಳ ಹಿಂದೆ ಆಗಿ ಹೋದ ಮುನಿಗಳೋ ಚಿಂತನಶೀಲರೋ ಬದುಕನ್ನು ಸಮಗ್ರವಾಗಿ ಹೇಗೆ ಗ್ರಹಿಸಿದ್ದರು ಎಂಬ ಅಂಶ. ಈ ಸಾಂಪ್ರದಾಯಿಕವಾದ ಅಂಶ ಇಡಿಯಾಗಿ ಅಥವಾ ಬಿಡಿಯಾಗಿ ಪ್ರಾತಿನಿಧಿಕವೆನ್ನಬಹುದಾದ ರೀತಿಯಲ್ಲಿ ಹೇಗೆ ಪ್ರಕಾಶಿತವಾಗಿದೆ ಎಂಬ ಅಂಶ ಸಾಹಿತ್ಯ ಮಾಧ್ಯಮದ ಮೂಲಕ ತಿಳಿಯಬಹುದು. ಇಲ್ಲಿ ಮೂರ್ತಿರಾಯರು ಭಾರತೀಯ ನಂಬಿಕೆಗಳಲ್ಲಿ ಒಂದಾದ 'ಕರ್ಮಫಲ' ಹೇಗೆ ವಿವಿಧ ವಸ್ತು ವಿನ್ಯಾಸ, ಮುಕ್ತಕಗಳ ಮೂಲಕ ಮುಖವಾಣಿಯಾಗಿ ಬೆಳಗಿದೆ ಎಂದು ಸೋದಾಹರಣವಾಗಿ ನಿರೂಪಿಸಿದ್ದಾರೆ. ಹಾಗೆಯೇ ಇಂದಿನ ಕವಿಗಳ ಕೃತಿಗಳಲ್ಲಿಯೂ ಅದು ಹೇಗೆ ವ್ಯಕ್ತವಾಗಿದೆ ಎಂದು ಸೂಚಿಸಿದ್ದಾರೆ. ಕುವೆಂಪು, ಪುತಿನ, ಬೇಂದ್ರೆ ಮುಂತಾದ ಭಾರತೀಯ ವೇದೋಪನಿಷತ್ತು, ಸಂಪ್ರದಾಯಗಳಿಂದ ಪ್ರಭಾವಿತರಾದ ಈ ಕವಿಗಳು ಬರೆದ ಕವಿತೆಗಳನ್ನು ಉಲ್ಲೇಖಿಸಿದ್ದಾರೆ. ಮೂರ್ತಿರಾಯರು ಕನ್ನಡ ಸಾಹಿತ್ಯ ವಾಹಿನಿ ಹರಿದು ಬಂದ ಘಟ್ಟಗಳನ್ನು ಗುರುತಿಸಿದ್ದಾರೆ. ಅದರ ಮೇಲಾದ ಪ್ರಭಾವ, ಉಂಟಾದ ಪರಿವರ್ತನೆಗಳನ್ನು ಗುರುತಿಸಿದ್ದಾರೆ. ಸಂಪ್ರದಾಯ ಶರಣತೆಯನ್ನು ಬದಿಗೊತ್ತಿ ಪ್ರಶ್ನಕ ಮನೋವೃತ್ತಿ, ಉಂಟಾದ ಘಟ್ಟವನ್ನು ಎರಡೂ ಸಾಹಿತ್ಯದಲ್ಲಿ ಗುರುತಿಸುತ್ತಾರೆ. ಸಂಪ್ರದಾಯ ಶರಣತೆಯ ಒಂದು ಮುಖವಾದ ವಿಧಿವಿಲಾಸದ ಚಿತ್ರಣ ಗ್ರೀಕ್ ಸಾಹಿತ್ಯದಲ್ಲಿಯೂ ಚಿತ್ರಿಸಲ್ಪಟ್ಟಿದೆ. ಶೇಕ್ಸ್‌ಪಿಯರ್ ರುದ್ರ ನಾಟಕಗಳಲ್ಲಿಯೂ ಚಿತ್ರಿತವಾಗಿದೆ. ನಮಗೂ ನಮ್ಮ ದೇವರಿಗೂ, ಗ್ರೀಕರಿಗೂ, ಗ್ರೀಕ್ ದೇವತೆಗಳಿಗೂ ಇರುವ ಸಂಬಂಧ ಈ ದೇವತೆಗಳನ್ನೂ ಮಾನವನ ಮಟ್ಟಕ್ಕಿಳಿಸಿ, ಅವರನ್ನು ಗೇಲಿ ಮಾಡಿ ತಾವು ಆನಂದಿಸುವ ಸಾಹಿತ್ಯ ಸೃಷ್ಟಿ-ಇವು ಎಲ್ಲ ದೇಶಗಳಲ್ಲಿಯೂ ಸಹಜ. ಈ ವಿಮರ್ಶೆಯ ಕೊನೆಗೆ ನಮ್ಮ ನಿತ್ಯ ಜೀವನದಲ್ಲಿ ಹಾಸು ಹೊಕ್ಕಾಗಿ ಸೇರಿಕೊಂಡಿರುವ ಭಾರತೀಯ ನುಡಿಗಟ್ಟುಗಳನ್ನು ಪಟ್ಟಿ ಮಾಡುತ್ತಾರೆ. "ನಮ್ಮ ಸಾಹಿತ್ಯದಲ್ಲಿ ಭಾರತೀಯತೆ" ಎಂದರೇನು ಎಂಬ ಅಂಶವನ್ನು ಅತ್ಯಂತ ಸರಳವಾಗಿ ಸಮಗ್ರವಾಗಿ ಈ ವಿಮರ್ಶೆಯ ಕೊನೆಯಲ್ಲಿ ಹೀಗೆ ಹೇಳುತ್ತಾರೆ:

"ನಮ್ಮ ಮಿಥಿಕ್‌ಗಳು, ವೇದೋಪನಿಷತ್ತುಗಳು, ಪುರಾಣೇತಿಹಾಸಗಳು, ಇತ್ಯಾದಿಗಳನ್ನು ಉಪಯೋಗಿಸಿಕೊಂಡು ರೂಪುಗೊಳ್ಳುವ ನುಡಿಗಟ್ಟು-ಸಾಂಸ್ಕೃತಿಕ ಭಾಷೆ-ಭಾರತೀಯ. ಅದನ್ನು ಬಳಸಿ ನಾವು ಸಾಧಿಸುವ ಪರಿಣಾಮ-ಸಾರ್ವತ್ರಿಕ ಮತ್ತು ಸಾರ್ವಕಾಲಿಕ"(ಪುಟ 117)

'ಸಾಹಿತ್ಯ ವಿಮರ್ಶೆ' ವಿಮರ್ಶೆಯನ್ನು ಕುರಿತ ವಿಮರ್ಶೆ. ವಿಮರ್ಶೆ-ವಿಮರ್ಶಕರನ್ನು ಕುರಿತ ವಿಮರ್ಶೆಗಳು ಕನ್ನಡ ಸಾಹಿತ್ಯದಲ್ಲಿ ವಿಪುಲ ಪ್ರಮಾಣದಲ್ಲಿ

ಬಂದಿವೆ. ಇತ್ತ ವಿದ್ಯಾನಿಲಯದಲ್ಲಿಯೂ ಪ್ರಾಯೋಗಿಕ ವಿಮರ್ಶೆ ಸಾಹಿತ್ಯ ಅಧ್ಯಯನದ ಒಂದು ಭಾಗವಾಗಿದೆ. ತೌಲನಿಕ ವಿಮರ್ಶೆಯಾಗಿ ಕೃತಿಗಳನ್ನು, ವಿಮರ್ಶೆಯ ಕೃತಿಗಳನ್ನು ಗೊತ್ತುಪಡಿಸಿ ತನ್ಮೂಲಕ ಇಂದಿನ ಸಾಹಿತ್ಯದ ವಿದ್ಯಾರ್ಥಿಗಳಿಗೆ ವಿಮರ್ಶೆಯ ಮೂಲ ಸೂತ್ರಗಳನ್ನು, ಸ್ಥಾನವನ್ನು ಮಹತ್ವವನ್ನು ಬೋಧಿಸುವ ಪ್ರಯತ್ನ ನಡೆದಿದೆ. ಇದರ ಫಲವಾಗಿ ವಿಮರ್ಶೆ ಸಾಹಿತ್ಯದ ಒಂದು ಸ್ವತಂತ್ರ ಶಾಖೆಯಾಗಿ ಬೆಳೆದು ಎಷ್ಟೋ ವಿದ್ಯಾರ್ಥಿಗಳು ಇದರಿಂದ ಪ್ರಭಾವಿತರಾಗಿ, ಆಕರ್ಷಿತರಾಗಿ ವಿಮರ್ಶಕರಾಗಿಯೂ ಖ್ಯಾತರಾದದ್ದೂ ಇದೆ. ಕೃತಿ ವಿಮರ್ಶೆಗೆ ತೊಡಗುವ ಮುನ್ನ ವಿಮರ್ಶೆಯ ಸೂತ್ರ ಕ್ರಮಗಳನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಿದರೆ ಅಂತಹವರ ವಿಮರ್ಶೆ ಅಮೂಲ್ಯವೂ ಉತ್ಕೃಷ್ಟವೂ ಆದ ವಿಮರ್ಶೆ ಎನಿಸುತ್ತದೆ. ವಿಮರ್ಶೆಯ ಇತಿಮಿತಿ ವ್ಯಾಪ್ತಿಯನ್ನರಿಯದೆ ಮಾಡಿದ ವಿಮರ್ಶೆಗಳು ಓದುಗರನ್ನು ದಾರಿತಪ್ಪಿಸಿ ಬರಹಗಾರರನ್ನು ನಿರುತ್ಸಾಹಗೊಳಿಸುತ್ತದೆ. ಆದ್ದರಿಂದ ವಿಮರ್ಶೆಗೂ ಒಂದು ಶಾಸ್ತ್ರೀಯವಾದ ಖಚಿತ ಸ್ವರೂಪವಿದೆ. ಏಕೆಂದರೆ ಒಂದು ಮಿತಿಯಲ್ಲಿ ಪ್ರತಿಯೊಬ್ಬ ಸಹೃದಯನೂ ತನ್ನ ಮಟ್ಟಿಗಾದರೂ ಒಬ್ಬ ವಿಮರ್ಶಕನೇ. ಆದರೆ ಸಾರ್ವಜನಿಕ ಸಾರ್ವಕಾಲಿಕ ವಿಮರ್ಶಕನಾಗಲು ಹತ್ತು ಹಲವು ಯೋಗ್ಯತೆ (Qualification)ಗಳಿರಬೇಕು. ಈ ವಿಚಾರದಲ್ಲಿ ಮೂರ್ತಿರಾಯರು ನಮ್ಮೊಂದಿಗೆ ಸಹಮತ ನೀಡುತ್ತಾರೆ. "ವಿಮರ್ಶೆ ಮನುಷ್ಯನ ಹುಟ್ಟು ಗುಣ. ಸಾಹಿತ್ಯವನ್ನೋದುವವರೆಲ್ಲರೂ ತಮ್ಮ ಶಕ್ತ್ಯನುಸಾರ ವಿಮರ್ಶೆ ಮಾಡುತ್ತಲೇ ಇರುತ್ತಾರೆ" (ಪುಟ 119). ಆದರೆ ವಿಮರ್ಶೆ ವಿಮರ್ಶೆಯಾಗಿರಬೇಕೇ ಹೊರತು ಏಕಮುಖವಾದ ಪ್ರಶಂಸೆಯಾಗಲಿ, ತೆಗಳಿಕೆಯಾಗಲೀ ಆಗಿರಕೂಡದು. ವಿಲಿಯಂ ಷೇಕ್ಸ್‌ಪಿಯರ್‌ನನ್ನು ಕುರಿತು "others abide our question, thou art free" ಎಂಬ Mathew Arnoldನ ಪ್ರಶಂಸೆ ಏಕಮುಖವಾದದ್ದು. ನಿಷ್ಪಕ್ಷಪಾತವಾದ ವಿಮರ್ಶೆ-ವಿಮರ್ಶಕರ ಗೊತ್ತು ಗುರಿಗಳು ಈ ವಿಮರ್ಶೆಯಲ್ಲಿ ವಿಮರ್ಶಾತ್ಮಕವಾಗಿ ಹೇಳಲಾಗಿದೆ. ವಿಮರ್ಶಕನ ಕೆಲಸವನ್ನು ಕುರಿತು ಬಹು ಪರಿಣಾಮಕಾರಿಯಾಗಿ ಹೀಗೆ ಹೇಳುತ್ತಾರೆ.

"ಸಾಹಿತ್ಯ ಸಾಗರದ ಅಲೆಗಳ ಮೇಲೆ ಕುಪ್ಪಳಿಸುವವರಿಗೂ ಆನಂದವಾಗಬಹುದು. ಆದರೆ ಅನರ್ಘ್ಯವಾದ ರತ್ನಗಳು ಸಿಕ್ಕಬೇಕಾದರೆ ಆಳವಾಗಿ ಮುಳುಗಬೇಕು. ಹೀಗೆ ಮುಳುಗಿ ರತ್ನಗಳನ್ನು ತೆಗೆದು ಪ್ರದರ್ಶಿಸುವವನೇ ವಿಮರ್ಶಕ" (119-120)

ಸಾಹಿತ್ಯ ವಿಮರ್ಶೆಗೆ ತೊಡಗುವ ಪ್ರತಿಯೊಬ್ಬ ವಿಮರ್ಶಕನಿಗೂ ಸಾಹಿತ್ಯ ಸೃಷ್ಟಿಯ ಸಾಮರ್ಥ್ಯವಿರಬೇಕು ಎಂಬ ಮಾತಿನ ಮರ್ಮ ನಮಗೆ ಮೂರ್ತಿರಾಯರ ಈ ಕೆಳಗಿನ ಮಾತುಗಳಿಂದ ವಿಶದವಾಗುತ್ತದೆ.

"......... ಕವಿಯಂತೆ ಅವನೂ ಸೃಷ್ಟಿ ಮಾಡಬಲ್ಲವನು. ಸೂಕ್ಷ್ಮವಾಗಿ ನೋಡಿದರೆ ಕಾವ್ಯಕ್ಕೂ ವಿಮರ್ಶೆಗೂ ನಡುವೆ ನಾವು ಕೃತಕವಾದೊಂದು ಕಂದರವನ್ನು ಕಲ್ಪಿಸಿಕೊಂಡಿದ್ದೇವೆ. ಕವಿಯೂ ವಿಮರ್ಶಕನೂ ಒಂದೇ ಗೋತ್ರದವರು. ಇಬ್ಬರಲ್ಲಿ ಹೊರ ಹೊಮ್ಮುವ ತೇಜಸ್ಸು ಒಂದೇ ಶಕ್ತಿಯದು; ಅದು ವಿಮರ್ಶಕನಲ್ಲಿರುವುದಕ್ಕಿಂತ ಕವಿಯಲ್ಲಿ ಹೆಚ್ಚು ಉಜ್ವಲವಾಗಿದೆಯೆಂದು ಬೇಕಾದರೆ ಹೇಳಬಹುದು. ಪ್ರತಿಯೊಬ್ಬ ಕವಿಯಲ್ಲಿಯೂ ವಿಮರ್ಶಕನೊಬ್ಬನು ಅಡಗಿದ್ದಾನೆಂದು ಹೇಳುವುದುಂಟು ; ಅಂತೆಯೇ

ವಿಮರ್ಶಕನಲ್ಲಿಯೂ ಕವಿ ಅಡಗಿದ್ದಾನೆ. ಕವಿಯ ಹೃದಯವಿಲ್ಲದವನು ಎಂದಿಗೂ ವಿಮರ್ಶಕನಾಗಲಾರ......." (ಪುಟ 120).

ಪ್ರೊ. ಜಿ.ಎಸ್. ಶಿವರುದ್ರಪ್ಪನವರೂ ಸಹಾ ಇದೇ ಅಭಿಪ್ರಾಯವನ್ನು ಸಮರ್ಥಿಸುವ ಮಾತನ್ನು ಹೇಳುತ್ತಾರೆ.

"ಕೃತಿಯ ರಸಾನುಭವವನ್ನು ತನ್ನ ಬುದ್ಧಿಯ ಮೂಲಕ ವಿಶ್ಲೇಷಿಸಿಕೊಡುವ ಮುನ್ನ ವಿಮರ್ಶಕನು ಕವಿ ಕೃತಿಯ ಅನುಭವವನ್ನು ತನ್ನಲ್ಲಿ ಪುನಃ ಸೃಷ್ಟಿಸಿಕೊಳ್ಳಬೇಕು. ಕೃತಿ ನಿರ್ಮಾಣವೆನ್ನುವುದು ಹೇಗೆ ಒಂದು ಸೃಷ್ಟಿ ಕಾರ್ಯವೋ ಕೃತಿರಸಾಸ್ವಾದನವೂ ಒಂದು ಬಗೆಯ ಸೃಷ್ಟಿಕಾರ್ಯವೇ....." (ವಿಮರ್ಶೆಯ ಪೂರ್ವ ಪಶ್ಚಿಮ 1977 ಪುಟ 123) ಪ್ರೊ. ಜಿ.ಎಸ್. ಶಿವರುದ್ರಪ್ಪನವರು "ವಿಮರ್ಶಕ ಉತ್ತಮ ವಿಮರ್ಶಕನಾಗ ಬೇಕಾದರೆ ಅವನೂ ಕವಿಯಾಗಲೇಬೇಕಾದ್ದಿಲ್ಲ. ಅತ ಮೊದಲು ಉತ್ತಮವಾದ ಸಹೃದಯನಾದರೆ ಸಾಕು, (ಪುಟ 22) ಎಂದೂ ಹೇಳಿದರೂ.....ಉತ್ತಮ ವಿಮರ್ಶಕ ನಾದವನು ಉತ್ತಮ ಕವಿಯೂ ಆಗಿದ್ದ ಪಕ್ಷದಲ್ಲಿ ಅದೊಂದು ಅಪೂರ್ವ ಸಂಘಟನೆಯೇ" (ಪುಟ 22) ಎಂದು ಮೂರ್ತಿರಾಯರೊಂದಿಗೆ ಸಹಮತವನ್ನು ವ್ಯಕ್ತಪಡಿಸುತ್ತಾರೆ.

ಈ ವಿಮರ್ಶೆ-ವಿಮರ್ಶಕ ಲಕ್ಷಣಗಳನ್ನು ವ್ಯಾಖ್ಯಾನಿಸುವಲ್ಲಿ ಜಿ.ಎಸ್. ಶಿವರುದ್ರಪ್ಪನವರು ಸುಮಾರು 34 ಉದ್ಧೃತ ಭಾಗಗಳನ್ನು ಉಲ್ಲೇಖಿಸುತ್ತಾರೆ ತಮ್ಮ ವಾದವನ್ನು ಸ್ಥಿರೀಕರಿಸುವುದಕ್ಕೆ. ಆದ್ದರಿಂದ ಜಿ.ಎಸ್. ಶಿವರುದ್ರಪ್ಪನವರು ಹೇಳಿರುವುದಕ್ಕಿಂತ ಇತರರ ಅಭಿಪ್ರಾಯಗಳೇ ಇಲ್ಲಿ ಹೆಚ್ಚಾಗಿ ಬಂದಿವೆ.

ಮೂರ್ತಿರಾಯರ ಲೇಖನದಲ್ಲಿ ಒಂದೋ ಎರಡೋ ಇಂತಹ ಪ್ರಾಸಂಗಿಕ ಉಲ್ಲೇಖಗಳು ಬಂದಿವೆಯೇ ಹೊರತು ಯಾವುದೇ ಇತರ ವಿಮರ್ಶಕರ ಅಭಿಪ್ರಾಯ ಗಳನ್ನು ತಮ್ಮ ನೆರವಿಗೆ ಅವರು ತಂದುಕೊಂಡಿಲ್ಲ. ಆದ್ದರಿಂದ ಮೂರ್ತಿರಾಯರು ಸ್ವತಃ ವಿವೇಚನೆಯನ್ನೂ, ಚಿಂತನೆಯನ್ನೂ ಮಾಡಿ ಬರೆದ ವಿಮರ್ಶೆಯಿದು.

'ರೊಮ್ಯಾಂಟಿಸಿಸಂ ಮತ್ತು ವಾಸ್ತವಿಕತೆ' ಎಂಬ ಮತ್ತೊಂದು-ಈ ಕೃತಿಯ ಕೊನೆಯ ವಿಮರ್ಶೆ-ಲೇಖನ ಅವರ ಸಮಕಾಲೀನ ಸಾಹಿತ್ಯ ಪ್ರಜ್ಞೆಗೆ ಸಾಕ್ಷಿ. ಕವಿಗೆ ಸಮಕಾಲೀನತೆಯ ಪ್ರಜ್ಞೆ ಅಗತ್ಯವಿರುವಂತೆ ವಿಮರ್ಶಕನಿಗೂ ಈ ಪ್ರಜ್ಞೆ ಅಗತ್ಯ. ಏಕೆಂದರೆ ಕಾಲಘಟ್ಟಗಳನ್ನು ಹಾದು ಬರುವ ಸಾಹಿತ್ಯವಾಹಿನಿ ತನ್ನ ನಿರಂತರತೆಯನ್ನು ಕಾಯ್ದಿಟ್ಟುಕೊಂಡೇ ಹಲವು ಬದಲಾವಣೆ, ಸುಧಾರಣೆಗಳಿಗೆ ಒಳಗಾಗುತ್ತದೆ. ಇಲ್ಲಿಯೂ ವಿಮರ್ಶೆಯ ಬಗ್ಗೆ, ಸಾಹಿತ್ಯಕ ಪಾರಿಭಾಷಿಕತೆ (ಪರಿಭಾಷೆ) ಯ ಬಗ್ಗೆ ಮೂರ್ತಿರಾಯರ ಒಳನೋಟ, ನಿಖರ ಪ್ರಜ್ಞೆ, ಸೂಕ್ಷ್ಮಾವಲೋಕನ, ತೌಲನಿಕ ಅಧ್ಯಯನಗಳನ್ನು ಕಾಣಬಹುದು. ಈ ಲೇಖನ ಕ್ಲಾಸಿಕಲ್-ರೊಮ್ಯಾಂಟಿಸಿಸಂಗಳ ನಡುವಣ ವ್ಯತ್ಯಾಸವನ್ನು ಹೇಳುವ ಒಂದು ಪ್ರಯತ್ನ. ಪ್ರಾಚೀನ ಗ್ರೀಕ್ ಕಾವ್ಯಗಳು, ಮಹಾಭಾರತವೇ ಮೊದಲಾದ ಕಾವ್ಯಗಳಲ್ಲಿ ರೊಮ್ಯಾಂಟಿಕ್ ಮನೋವೃತ್ತಿಯನ್ನು ಗುರುತಿಸಿದ್ದಾರೆಂದಮೇಲೆ ಮೂರ್ತಿರಾಯರ ವಿಮರ್ಶೆಯ ಪರಿಭಾಷಾಜ್ಞಾನ ಎಷ್ಟು ನಿಶ್ಚಿತವಾದದ್ದೆಂದು ಅರಿವಾಗುತ್ತದೆ.

ರೊಮ್ಯಾಂಟಿಕ್ ಕವಿಗಳಲ್ಲಿ ಕಾಣಸಿಗುವ ಅವಾಸ್ತವಿಕತೆಯನ್ನು ಸರಳ ಸುಂದರ ಉದಾಹರಣೆಗಳಿಂದ ನಿರೂಪಿಸುತ್ತಾರೆ. ಕನ್ನಡದಲ್ಲಿ ಕುವೆಂಪು, ಬೇಂದ್ರೆ, ಪು.ತಿ. ನರಸಿಂಹಾಚಾರ್ಯರು ಮೊದಲಾದವರ ಕೃತಿಗಳಲ್ಲಿ ಕಾಣಬಹುದು. ಎಂಬ ಮಾತಿಗೆ ಅವರ ಕಾವ್ಯ ಲಕ್ಷಣಗಳನ್ನು Liberty, subjectivism and aspiration ಎಂಬ ಮೂರು ಮಾತುಗಳಲ್ಲಿ ಸಂಕ್ಷೇಪಿಸಿದ್ದಾರೆ. ರೊಮ್ಯಾಂಟಿಸಿಸಂನ ಪರವಾದ ವಾದಗಳನ್ನು ಅವರು ಮರೆತಿಲ್ಲ. ಎಷ್ಟರ ಮಟ್ಟಿಗೆ ಅದು ವಾಸ್ತವಿಕತೆಯಿಂದ ಕೂಡಿದೆ ಎಂದು ಚಿಂತನ ನಡೆಸಿದ್ದಾರೆ. ವಾಸ್ತವಿಕ ಹಾಗೂ ಸತ್ಯಗಳ ನಡುವಣ ಸಾಂಗತ್ಯ ಹೇಗೆ ರೊಮ್ಯಾಂಟಿಸಿಸಂನಲ್ಲಿ ಸ್ಥಾನ ಪಡೆದಿದೆ ಎಂಬ ಅಂಶವನ್ನು ವಿಶ್ಲೇಷಿಸುತ್ತಾ 'ರಿಯಲ್' (real) ಎಂಬ ಪದಕ್ಕೆ ಸತ್ಯವಾದದ್ದು, ಎಂಬ ಅರ್ಥವನ್ನೇ ಕೊಟ್ಟರೆ-ಒಟ್ಟಿನಲ್ಲಿ ರೊಮ್ಯಾಂಟಿಕ್ ಕವಿಗಳ ವಾದಕ್ಕೂ ವಾಸ್ತವಿಕ ಕವಿಗಳ ವಾದಕ್ಕೂ ತತ್ವತಃ ನಾವು ಎಣಿಸುವಷ್ಟು ಭೇದವಿಲ್ಲ. (133) ಎಂದು ಬರೆಯುತ್ತಾರೆ.

ಈ ಕೃತಿಯಲ್ಲಿಯೇ ಇದು ಒಂದು ಅತ್ಯಂತ ಚಿಕ್ಕ ಲೇಖನ. ಆದರೆ ಇದು ಒಂದು ಹೊಸ ವಸ್ತುವಿನತ್ತ ಬೆಳಕು ಚೆಲ್ಲುತ್ತದೆ. Romanticism. Classicism ಮುಂತಾದ ಸಾಹಿತ್ಯಕ ಪಾರಿಭಾಷಿಕ ಶಬ್ದಗಳು ನಮಗೆ ಪಾಶ್ಚಿಮಾತ್ಯ ಪ್ರಭಾವದಿಂದ ಲಭಿಸಿದವು. ಅದನ್ನು ನಾವು ನಮ್ಮ ಸಾಹಿತ್ಯಕ್ಕೆ, ಪರಿವರ್ತನೆಗಳಿಗೆ ಅನ್ವಯಿಸತೊಡಗಿದೆವು. ಅಲ್ಲಿ ಸಲ್ಲುವ ಲಕ್ಷಣಗಳು ಇಲ್ಲಿಗೂ ಎಷ್ಟರ ಮಟ್ಟಿಗೆ ಸಲ್ಲುತ್ತವೆ ಎಂಬ ವಿವೇಚನೆ ಇಲ್ಲಿದೆ. ಜೊತೆಗೆ ನವೋದಯ ನಮ್ಮಕ್ಕೆ ಹೇಗೆ ಹೊರಳಿಕೊಂಡಿತು ಎಂಬ ಧ್ವನಿಯೂ ಇಲ್ಲಿದೆ.

ನಮ್ಮಲ್ಲಿ ಕೆಲವರು Romanticism ಶಬ್ದವನ್ನು ನವೋದಯ ಎಂದು ಪರಿವರ್ತಿಸಿಕೊಂಡರು. ಆದರೆ ಮೂರ್ತಿರಾಯರ ಚಿಂತನಶಕ್ತಿಗೆ ಇದು ಸರಿತೋರಲಿಲ್ಲವೋ ಏನೋ, "'ರೋಮ್ಯಾಂಟಿಸಿಸಂ' ಎಂಬ ಪದಕ್ಕೆ ಸರಿಯಾದ ಕನ್ನಡ ಪದ ಸಿಕ್ಕಲಿಲ್ಲವಾದ್ದರಿಂದ ಅದೇ ಇಂಗ್ಲೀಷ್ ಪದವನ್ನು ಬಳಸಿದ್ದೇನೆ" (ಪುಟ 129) ಎಂದೇ ಅವರು ಲೇಖನವನ್ನು ಆರಂಭಿಸಿದ್ದಾರೆ. ಮಾತ್ರವಲ್ಲ, ಈ ಶಬ್ದದ ಹುಟ್ಟು, ಬೆಳವಣಿಗೆ ಅನ್ವಯಗಳನ್ನು ಕುರಿತು ಒಂದು convining ವಿವರಣೆ ನೀಡಿ ಮುಂದುವರಿದು ವಿಷಯ ವಿಶ್ಲೇಷಣೆಗೆ ತೊಡಗುತ್ತಾರೆ.

## 3.3 ಬಿ.ಎಂ. ಶ್ರೀಕಂಠಯ್ಯ

ಕವಿ-ಕೃತಿಗಳಿಬ್ಬರನ್ನೂ ಕುರಿತ ವಿಮರ್ಶೆ ಬೆಳೆದು ಬಂದಿರುವುದು ತೀರಾ ಇತ್ತೀಚೆಗೆ. ಹಿರಿಯ ಕವಿ ಸಾಹಿತಿಗಳಿಗೆ ವಿಶಿಷ್ಟ ಸಂದರ್ಭಗಳಲ್ಲಿ ಅರ್ಪಿಸಿದ ಸಂಭಾವನಾ ಗ್ರಂಥಗಳು ಒಂದು ರೀತಿ ಅವರ ಜೀವನ ಚರಿತ್ರೆ ಹಾಗೂ ಕೃತಿ ವಿಮರ್ಶೆಗಳು ಒಂದೆಡೆ ಸೇರಲು ಅವಕಾಶ ನೀಡಿವೆ. ಇಂಗ್ಲೀಷ್‌ನಲ್ಲಿ Johnson ಬರೆದ Lives of Poets ಇಂತಹ ಒಂದು ಮಾದರಿ. ವಿ.ಸೀ. ಯವರ PAMPA, ಐ.ಬಿ.ಹೆಚ್. ಪ್ರಕಾಶನದ ಕವಿಕೃತಿಮಾಲೆ, ಹೆಚ್ ಎಂ. ಶಂಕರನಾರಾಯಣ್‌ರವರ 'ಕೆಂಪು ನಾರಾಯಣ' ಕುವೆಂಪು, ಬೇಂದ್ರೆ, ವಿ.ಸೀ., ಡಿ.ವಿ.ಜಿ., ವಿನಾಯಕ ವಾಙ್ಮಯ (ಎಸ್ಕೆ)-ಮುಂತಾದವರ ಜೀವನ ವೃತ್ತಾಂತ (Biographics) ಗಳು ಈ ದ್ವಿಮುಖಿ ಕಾರ್ಯವನ್ನು ನಿರ್ವಹಿಸಿವೆ. ಇದರಿಂದ ಸಾಹಿತ್ಯಾಸಕ್ತರಿಗೆ ಕವಿಯ ವೈಯಕ್ತಿಕ ಜೀವನ, ಆತ ಪಡೆದ ಪ್ರಭಾವ, ಪ್ರೇರಣೆ, ಸ್ಫೂರ್ತಿ, ಕೃತಿಗಳ ನೆಲೆ

ಬೆಲೆಗಳು ಪರಿಚಯವಾಗುತ್ತವೆ. ಮೈಸೂರು, ಬೆಂಗಳೂರು, ಕರ್ನಾಟಕ, ವಿಶ್ವವಿದ್ಯಾನಿಲಯಗಳ ಪ್ರಸಾರಾಂಗದ ಉಪನ್ಯಾಸ ಮಾಲೆಯ ಕಿರುಹೊತ್ತಿಗೆಗಳು ಪೂರ್ವಕವಿಗಳನ್ನು ಕುರಿತ ಕಿರುಹೊತ್ತಿಗೆಗಳು ಮತ್ತು ಸಂಶೋಧನಾ ಮಹಾಪ್ರಬಂಧಗಳು ಈ ಕಾರ್ಯವನ್ನು ವ್ಯವಸ್ಥಿತವಾಗಿ ಮಾಡಿವೆ. ಜೀವನ ಚರಿತ್ರೆಗಳು ಸ್ವತಂತ್ರವಾಗಿ ಲೇಖನದ ರೂಪದಲ್ಲೋ ಪುಸ್ತಕ ರೂಪದಲ್ಲೋ ಬಂದಿವೆ. ಒಬ್ಬನೇ ಕವಿಯ ಕೃತಿಗಳ ವಿಮರ್ಶೆಗಳೂ ಪತ್ರಿಕೆಗಳಲ್ಲಿ ಆಯಾ ಪುಸ್ತಕಗಳಿಗೆ ಬರೆದ ಮುನ್ನುಡಿಗಳ ರೂಪದಲ್ಲೋ, ಇಲ್ಲವೇ ಪುಸ್ತಕಗಳ ರೂಪದಲ್ಲಿಯೋ ಬಂದಿವೆ. ಆದರೆ ಕವಿಯ ಜೀವನ ಚರಿತ್ರೆ ಹಾಗೂ ಕೃತಿಗಳ ವಿಮರ್ಶೆಗಳೆರಡೂ ಒಂದೇ ಕೃತಿಯಲ್ಲಿ ಪ್ರಕಟವಾಗಿರುವುದು ವಿರಳ. ಮೂರ್ತಿರಾಯರ 'ಬಿ.ಎಂ.ಶ್ರೀಕಂಠಯ್ಯ' (ಕನ್ನಡ ಹಾಗೂ ಇಂಗ್ಲೀಷ್) ಇಂತಹ ವಿರಳ ಸಾಹಿತ್ಯಗಳಲ್ಲಿ ಒಂದು.

ಶ್ರೀ ಬಿ.ಎಂ. ಶ್ರೀಕಂಠಯ್ಯನವರ ಬಗ್ಗೆ ಮೂರ್ತಿರಾಯರು ಬರೆದ ಈ ಕೃತಿ ಹೆಚ್ಚು Authentic ಆಗಿರುವಂತಹದು. ಇದಕ್ಕೆ ಕಾರಣಗಳು ಬಹು ಸ್ಪಷ್ಟ. ಇಬ್ಬರೂ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದವರು. ಇಂಗ್ಲೀಷ್ ಭಾಷೆಯಿಂದ ಕನ್ನಡಕ್ಕೆ ಭಾಷಾಂತರ-ರೂಪಾಂತರ ಮಾಡಿದವರು. ಇಂಗ್ಲೀಷ್ ಕನ್ನಡ ಹಾಗೂ ಸಂಸ್ಕೃತ ಸಾಹಿತ್ಯಗಳನ್ನು ಆಳವಾಗಿ ಅಭ್ಯಾಸ ಮಾಡಿದವರು. ಗುರು-ಶಿಷ್ಯರು. ಇಂಗ್ಲೀಷ್ ಹಾಗೂ ಇತರ ಭಾಷಾ ಸಾಹಿತ್ಯಗಳಿಂದ ಸ್ಫೂರ್ತಿ ಪಡೆದವರು. ಇಬ್ಬರೂ ಘನ ವಿದ್ವಾಂಸರು, ವಿಮರ್ಶಕರು. ಮೂರ್ತಿರಾಯರು ಶ್ರೀಯವರನ್ನು ಬಹು ಹತ್ತಿರದಿಂದ ಕಂಡ ನಿಕಟವರ್ತಿಗಳು. ಮೂರ್ತಿರಾಯರು ಯಾರ ಬಗ್ಗೆ ಬರೆದರೂ-ತಮ್ಮ ಬಗ್ಗೆ ಬರೆದರೂ ವಸ್ತುನಿಷ್ಠವಾಗಿ-ಪೂರ್ವಗ್ರಹ ಆವೇಶ, ಮುಖಸ್ತುತಿ, ಮಿಥ್ಯಾ ಪ್ರಶಂಸೆಗಳಿಲ್ಲದೆ ಬರೆಯುವ ಗುಣ ಸಾಮರ್ಥ್ಯ ಉಳ್ಳವರು. ಅಭಿಮಾನವನ್ನೊದು ಸತ್ಯವನ್ನು ಬಯಸುವವರು. ಏಕೆಂದರೆ 'ಕೊನೆಗೆ ಉಳಿಯುವುದು ಅಭಿಮಾನವಲ್ಲ, ಸತ್ಯ' ಎಂಬ ಪಾಠ ಅವರಿಗೆ ಅವರ ಗುರುಗಳಾದ ಶ್ರೀಯವರಿಂದಲೇ ಆದದ್ದು. ಇಬ್ಬರೂ ಕನ್ನಡ-ಇಂಗ್ಲಿಷ್ ಭಾಷೆಗಳೆರಡರಲ್ಲಿಯೂ ಸಾಹಿತ್ಯ ರಚನೆ ಮಾಡಿದವರು. ಹೀಗೆ ಒಬ್ಬ ವಿದ್ವಾಂಸ ಮತ್ತೊಬ್ಬ ಘನ ವಿದ್ವಾಂಸನ ಬಗ್ಗೆ ಬರೆದ ಒಂದು ದಾಖಲೆ ಇದು. ಇದು ಸಮಕಾಲೀನತೆಯನ್ನು ಹೊಂದಿದ ವಸ್ತುವಾದ ಕಾರಣ ಇಲ್ಲಿ ಅತಿಶಯೋಕ್ತಿ ಇಲ್ಲ, ವೈಭವೀಕರಣವಿಲ್ಲ. ಅವರಿವರಿಂದ ಸಂಗ್ರಹಿಸಿದ ಮಾಹಿತಿಗಳನ್ನು ಕಲೆ ಹಾಕಿದ ಮಾಲೆಗಾರನ ಕೆಲಸವಲ್ಲ. ತಮಗಿಂತಲೂ ಬಹು ಹಿಂದಿನ ಪ್ರಾಚೀನ ಜೀವನದ ರೂಪುರೇಷೆಗಳನ್ನು ಸಂಗ್ರಹಿಸಲು ಕೆಲವು ವೇಳೆ ಪತ್ರಿಕಾ ಪ್ರಕಟಣೆ ನೀಡಿ ಇಂತಹ ವ್ಯಕ್ತಿಯ ಬಗ್ಗೆ ಯಾರಾದರೂ ತಿಳಿದವರಿದ್ದರೆ ಅಂತಹವರು ತಮಗೆ ತಿಳಿದ ವಿಷಯವನ್ನು ಬರಹದ ಮೂಲಕ ತಿಳಿಸುವಂತೆ ಕೇಳಿಕೊಳ್ಳುತ್ತಾರೆ. ಅಂತಹ ಸಂದರ್ಭದಲ್ಲಿ ವಾಸ್ತವಿಕತೆಗೆ ವೈಯಕ್ತಿಕ ಪೂರ್ವಗ್ರಹಗಳ ಮರಗು ಬಳಿಯಲ್ಪಡುವ ಸಾಧ್ಯತೆ ಹೆಚ್ಚು. ಒಮ್ಮೊಮ್ಮೆ ನಿಖರವಾಗಿ ತಿಳಿದವರು, ಮೌನ ತಾಳಿ ಅದರಿಂದ ಸತ್ಯ ಸಂಗತಿ ದೊರೆಯದಿರುವ ಅವಕಾಶವೂ ಇದೆ. ಆದ್ದರಿಂದ ಹಿಂದಿನವರ ಬಗ್ಗೆ ಇಂದಿನವರು ಎಷ್ಟೇ ಖಚಿತವಾಗಿ ಬರೆದರೂ ಅದರಲ್ಲಿ ಕೊಂಚವಾದರೂ ಅವಾಸ್ತವಿಕತೆ ತಲೆದೋರುವ ಅವಕಾಶವಿದ್ದೇ ಇದೆ. ಆದರೆ ಇಲ್ಲಿ ಅಂತಹ ಸನ್ನಿವೇಶ ಯಾವುದೂ ಇಲ್ಲ. ಅವರಿವರಿಂದ ಕೇಳಿ ತಿಳಿದು ಅನಂತರ ವಿಷಯವನ್ನು

ಕ್ರೋಢೀಕರಿಸಿದ್ದಲ್ಲಿ. ಪ್ರತ್ಯೇಕ ಅವಗಾಹನೆಗೆ ಬಂದ ವಿಚಾರ ಇಲ್ಲಿ ಇದಮಿತ್ಥಂ ಎಂದು ಹೇಳಲಾಗಿದೆ. ಆದ್ದರಿಂದಲೇ ಈ ಕೃತಿಗೆ ಸತ್ವದ, ವಾಸ್ತವಿಕತೆಯ ಹಾಗೂ ನಿಖರತೆಯ ಮೌಲ್ಯಮಾಪನದ ಗೌರವ ಸಲ್ಲಲೇಬೇಕು. ಈ ಬಗೆಯ ಕವಿ ಚರಿತ್ರೆ ಹಾಗೂ ಕವಿ ಕೃತಿ ವಿಮರ್ಶೆಗಳ ಮಿಲನ ಕನ್ನಡದಲ್ಲಿ ವಿರಳವೆಂದೇ ಹೇಳಬೇಕು. ಈ ಕೃತಿ ರಚನೆಗೆ ಹಿನ್ನೆಲೆಯಾದ ಪ್ರೇರಣೆಯು ಹೀಗಿದೆ. "ಪ್ರಾಧ್ಯಾಪಕ ಬಿ. ಎಂ. ಶ್ರೀಕಂಠಯ್ಯನವರು ನನಗೆ ವಿದ್ಯೆ ಕಲಿಸಿದ ಗುರುಗಳು. ಆದ್ದರಿಂದ ಕೆಲವು ವರ್ಷಗಳ ಹಿಂದೆ ನವದೆಹಲಿಯ ಸಾಹಿತ್ಯ ಅಕಾಡೆಮಿಯ ಕಾರ್ಯದರ್ಶಿಗಳು ಶ್ರೀ ಕಂಠಯ್ಯನವರನ್ನು ಕುರಿತು ಸಣ್ಣ ಪುಸ್ತಕವೊಂದನ್ನು ಇಂಗ್ಲೀಷಿನಲ್ಲಿ ಬರೆದುಕೊಡಿ ಎಂದಾಗ ಸಂತೋಷದಿಂದ ಆ ಕೆಲಸವನ್ನು ಒಪ್ಪಿಕೊಂಡೆ. ಈಚೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧಿಕಾರಿಗಳಿಂದ ಅದೇ ವಿಷಯವನ್ನು ಕುರಿತ ಕನ್ನಡ ಪುಸ್ತಕವನ್ನು ಬರೆದುಕೊಡಬೇಕೆಂದು ಆಹ್ವಾನ ಬಂತು. ಈ ಪುಸ್ತಕವು ಸಾಹಿತ್ಯ ಅಕಾಡೆಮಿಗಾಗಿ ಬರೆದ ಇಂಗ್ಲೀಷ್ ಪುಸ್ತಕವನ್ನು ಬಹುಮಟ್ಟಿಗೆ ಅನುಸರಿಸಿದೆ...... " (ಮುನ್ನುಡಿ ಪುಟ 4).

ಇದು ಈ ಪುಸ್ತಕ ರಚನೆಯ ಹಿನ್ನೆಲೆ ಸಂದರ್ಭ. ಇದನ್ನು ಹೇಳಿ ಇನ್ನು ಕೃತಿಯ ಅವಲೋಕನೆಗೆ ಹೊರಡಬಹುದು.

ಇದೊಂದು ವಿಶಿಷ್ಟವಾದ ಕೃತಿ. ಏಕೆಂದರೆ ಇಲ್ಲಿ ಬಹುಮಟ್ಟಿಗೆ ಸಾಮಾನ್ಯ ಧಾಟಿಗಿಂತ ಸ್ವಲ್ಪ ಭಿನ್ನವಾದ ಶೈಲಿಯನ್ನು ಕ್ರಮವನ್ನು ಅನುಸರಿಸಿದ್ದಾರೆ. 34 ಪುಟಗಳಲ್ಲಿ "ಜೀವನ ಚರಿತ್ರೆ" ಮತ್ತು "ವ್ಯಕ್ತಿ, ಪರಿಸರ ಮತ್ತು ಸಮಯ"ಗಳನ್ನು ಅಳವಡಿಸಿದ್ದಾರೆ. ಜೀವನ ಚರಿತ್ರೆಯನ್ನು ಬರೆದು ಮುಗಿಸಿದರೂ ಅವರಿಗೆ ತೃಪ್ತಿಯಾಗದ ಕಾರಣ, ಅಥವಾ ಹೇಳಬೇಕಾದ ವಿವರಗಳು ವಿಭಿನ್ನ ರೀತಿಯಲ್ಲಿರುವ ಕಾರಣವೋ ಏನೋ ಪುನಃ ಮತ್ತೊಂದು ವಿಭಾಗವನ್ನು ಸೇರ್ಪಡೆ ಮಾಡಿದ್ದಾರೆ. ಜೀವನ ಚರಿತ್ರೆಯ ಆರಂಭದಲ್ಲಿ ಕನ್ನಡ ಸಾಹಿತ್ಯದ ಕಾಲಘಟ್ಟವನ್ನು, ಶ್ರೀಯವರ ಕಾಲದ ಸಾಹಿತ್ಯದ ಯುಗಧರ್ಮವನ್ನೂ ಸ್ವಲ್ಪದರಲ್ಲಿ ಹೇಳಿ ಮುಗಿಸಿದ್ದಾರೆ.

ಈ ಪುಸ್ತಕವನ್ನು ಮುಖ್ಯವಾಗಿ ಎರಡು ವಿಭಾಗಗಳನ್ನಾಗಿ ವಿಂಗಡಿಸಿಕೊಳ್ಳಬಹುದು. ಒಂದನೇ ವಿಭಾಗದಲ್ಲಿ ಶ್ರೀಯವರ ಜೀವನ, ವೃತ್ತಿ, ಪ್ರಶಸ್ತಿ, ಅವರ ಜೀವನದ ವಿವಿಧ ಮುಖಗಳ ಪರಿಚಯ ಇದೆ. ಕೊನೆಯ "ನೆನಪುಗಳು", ಎಂಬ ಲೇಖನ ಕೃತಿಗೆ ಉಪಸಂಹಾರ ರೂಪದಂತಿದ್ದರೂ ಜೀವನ ಚರಿತ್ರೆಯೊಂದಿಗೆ ಸೇರ್ಪಡೆಯಾಗಲು ಯೋಗ್ಯವಾದುದು. ಶ್ರೀಯವರು ಅವರ ಗುರುಗಳಾದರೂ ಎಲ್ಲಿಯೂ ಅವರನ್ನು ಅತಿಶಯೋಕ್ತಿಯಿಂದ ವೈಭವೀಕರಿಸುವ ಅಂಧಾಭಿಮಾನವಿಲ್ಲ. ಕೃತಿ ವಿಮರ್ಶೆಯಲ್ಲಿಯೂ ಸಹಾ ವಸ್ತು ನಿಷ್ಠವೂ, ಉದಾರವೂ ಆದ ದೃಷ್ಟಿಯಿದೆ. ಮೇಲಾಗಿ ಸಮತೂಕದ ಅಭಿಪ್ರಾಯವಿದೆ. ಶ್ರೀಯವರ ಗೆಳೆಯರ ಬಳಗ, ಬಾಲ್ಯ, ವಂಶ ಇತ್ಯಾದಿ ವಿವರಗಳಾದ ಬಳಿಕ ಅವರ ಸಾಹಿತ್ಯ ತಪಸ್ಸಿನ ಪರಿಚಯ ಮಾಡಿಕೊಡುತ್ತಾರೆ. "ಆಗಲೇ ಅವರ ಆಲೋಚನಾಶಕ್ತಿ, ಪಕ್ಷಪಾತವಿಲ್ಲದೆ ಎಲ್ಲ ದೃಷ್ಟಿಗಳನ್ನೂ ಪರಿಶೀಲಿಸಿ ನಿರ್ಣಯಕ್ಕೆ ಬರುವ ಸಾಮರ್ಥ್ಯ ಇವು ಎದ್ದು ಕಾಣುತ್ತವೆ" (3) ಎಂಬ ಮಾತಿನಲ್ಲಿ ಶ್ರೀಯವರನ್ನು ಕುರಿತ ಈ ಪುಸ್ತಕದ ಬೀಜವಿದೆ. "ಅವರಲ್ಲಿ (A Handbook of Rhetoric) ಅವರ ಸ್ವಂತ ಪ್ರತಿಭೆಯೇನೂ ಎದ್ದು ತೋರುವಂತಿಲ್ಲವಾದ್ದರಿಂದ ಅದಕ್ಕೆ ಹೆಚ್ಚು ಗಮನ

ಕೊಡಬೇಕಾಗಿಲ್ಲ" (4) ಎಂಬ ಖಚಿತವೂ, ನೇರವೂ ಆದ ಮಾತು ಮೂರ್ತಿರಾಯರ ನಿಷ್ಪಕ್ಷಪಾತ ದೃಷ್ಟಿಕೋನಕ್ಕೆ ನಿದರ್ಶನ. ಶ್ರೀ ಮತ್ತು ಕನ್ನಡದ ಸಂಬಂಧವನ್ನು Silas Marner Eppie ಹಾಗೂ Silas ನ ಸಂಬಂಧಕ್ಕೆ ಹೋಲಿಸಿ ಬರೆಯುತ್ತಾರೆ. ಶ್ರೀಯವರು Oxford, Cambridge ಗೆ ಹೋಗದಿದ್ದರೂ ಸಹಾ ಅವರನ್ನು ಆಂಗ್ಲ ಪ್ರೊಫೆಸರ್‌ಗಳು ಮೆಚ್ಚಿಕೊಂಡ ರೀತಿಯನ್ನು ಉಲ್ಲೇಖಿಸಿದ್ದಾರೆ.

ಶ್ರೀಯವರ ಬಹುಮುಖಿ ಸೇವೆಯ ಪರಿಚಯ ಇಲ್ಲಿ ನಮಗಾಗುತ್ತದೆ. ಅವರ ಅಧ್ಯಯನ, ಅಧ್ಯಾಪನಗಳ ವೈಖರಿಗಳು ನಮಗೆ ಚಿತ್ರಪತ್ತಾಗಿ ದೊರೆಯುತ್ತವೆ. "ಅವರ ಅಧ್ಯಯನ ಋಷಿಗಳ ತಪಸ್ಸಿನಂತೆ" (5) ಎಂಬ ಮಾತು ಸೋದಾಹರಣವಾಗಿ ಸಾರ್ಥಕ್ಯವನ್ನು ಪಡೆಯುತ್ತದೆ. ಅವರು ವರ್ಡ್ಸ್‌ವರ್ತ್ ಕಂಠಗತ ಮಾಡಿಕೊಳ್ಳಲು ಮಾಡುವ ಪ್ರಯತ್ನ - ಹಿರೋಡೆಯ ಬೆಟ್ಟಕ್ಕೆ ಹೋಗಿ ಭಾವಾನುಗುಣವಾಗಿ ಓದುವುದು- ಅವರ ಮನೆಗೆ ಹೋದಾಗ ಡಿವಿಜಿ ಯವರು ಕಂಡ ದೃಶ್ಯ ನಿಜವಾಗಿಯೂ ಮನಸ್ಸಿನಲ್ಲಿ ನಿಲ್ಲುವಂತಹುದು. "ತಾವು ಶಾರದೆಯ ಸಾಮ್ರಾಜ್ಯದಲ್ಲಿ ಗುಪ್ತ ಭಕ್ತರಾಗಿದ್ದುಕೊಂಡು ಸರ್ವಭಾಷಾ ಸರಸ್ವತಿಯ ಪರಮೋಪಾಸಕರಾಗಿ ಜ್ಞಾನಾರ್ಜನೆಯಲ್ಲಿ ತೊಡಗಿದವರು. ಒಂದು ತಪಸ್ಸು ಎಂಬಂತೆ ದೇಶ ವಿದೇಶಗಳ ಪ್ರಾಚೀನ ಮತ್ತು ಅರ್ವಾಚೀನ ಕಾವ್ಯ ಶಾಸ್ತ್ರಗಳ ವಿಶೇಷ ಅಧ್ಯಯನದಿಂದ ತಮ್ಮ ಆತ್ಮ ಸಂಪುಷ್ಟವೂ ಸುಹೃಷ್ಟವೂ ಆಗುವಂತೆ ನೋಡಿಕೊಂಡರು" (ಕನ್ನಡ ನುಡಿ, ಜನವರಿ 1.1984. ಪುಟ 11.12) ಎಂಬ ಶ್ರೀ ಎಸ್. ವಿ. ಪಿ. ಯವರ ಸೂಚ್ಯವಾದ ಮಾತು ಮೂರ್ತಿರಾಯರಲ್ಲಿ ಹೀಗೆ ವಾಚ್ಯರೂಪವನ್ನು ಪಡೆದಿದೆ. "

"ವರ್ಡ್ಸ್‌ವರ್ತ್‌ನ The prelude ಮತ್ತು ಎಕ್ಸ್‌ಕರ್ಷನ್ (Excursion) ಎಂಬ ದೀರ್ಘಕವನಗಳನ್ನು ಅವುಗಳಲ್ಲಿನ ಸಾರವತ್ತಾದ ಭಾಗಗಳನ್ನು ಮಾತ್ರವಲ್ಲ, ಇಡೀ ಕವನಗಳನ್ನು ಅಧ್ಯಯನ ಮಾಡುವುದಕ್ಕಾಗಿ ಶ್ರೀರಂಗಪಟ್ಟಣದಿಂದ ನಾಲ್ಕು ಮೈಲಿ ನಡೆದು ಹಿರೋಡೆ ಬೆಟ್ಟದ ಒಂದು ಬಂಡೆಯ ಮೇಲೆ ಕುಳಿತುಕೊಳ್ಳುತ್ತಿದ್ದರಂತೆ ವ್ಯಾಸಂಗಕ್ಕೆ ಯಾವ ಭಂಗವೂ ಬರದಿರಲೆಂದು. ಹೀಗೆ ಅಧ್ಯಯನ ಮಾಡಿ ಒಂದು ತಿಂಗಳೊಳಗೆ ಅವೆರಡು ಕವನಗಳನ್ನೂ ಮುಗಿಸಿದರೆಂದು ಡಾ. ಡಿ. ವಿ. ಗುಂಡಪ್ಪನವರು ತಮ್ಮ 'ಸಾಹಿತ್ಯೋಪಾಸಕರು' ಎಂಬ ಪುಸ್ತಕದಲ್ಲಿ ಹೀಗೆ ತಿಳಿಸಿದ್ದಾರೆ. ಶ್ರೀಕಂಠಯ್ಯನವರು ಪುರಾತನ ಗ್ರೀಕ್ ಭಾಷೆಯನ್ನು ಕಲಿತಿದ್ದರೆಂದೂ ಈಸ್ಕಿಲಸ್ ಮತ್ತು ಸೊಫೋಕ್ಲಿಸರ ನಾಟಕಗಳನ್ನು ಮೂಲದಲ್ಲೇ ಓದಬಲ್ಲವರಾಗಿದ್ದರೆಂದು ಕೇಳಿದ್ದೇನೆ". (5-6).

ಬಿ. ಎಂ. ಶ್ರೀಕಂಠಯ್ಯನವರ ಅಪಾರವಾದ ವಿದ್ವತ್ತನ್ನು ಗ್ರಹಿಸಿ ಮೂರ್ತಿರಾಯರು ಹೀಗೆ ಬರೆಯುತ್ತಾರೆ. "ಅವರ ಹೊರತು ಮತ್ತಾರೂ ಮಾಡಲಾಗದ ಕೆಲಸವೊಂದಿತ್ತು. ಷೇಕ್ಸ್‌ಪಿಯರ್‌ನ ರುದ್ರನಾಟಕಗಳನ್ನು ಕನ್ನಡಿಸುವುದಕ್ಕೆ ಬೇಕಾದ ಇಂಗ್ಲೀಷ್ ಪಾಂಡಿತ್ಯವೂ ಮತ್ತೊಬ್ಬ ಕವಿಯ ಪ್ರತಿಭೆಗೆ ಹೊಂದಿಕೊಂಡು ಅದೇ ಇದು, ಎನ್ನುವ ಮಟ್ಟಿಗೆ ಹೊಂದಿಕೊಂಡು ಕೆಲಸ ಮಾಡುವ ಪ್ರತಿಭೆಯೂ ನನಗೆ ಕಂಡು ಬಂದಿರುವುದು ಅವರಲ್ಲಿ ಮಾತ್ರ". (10)

ಈ ಕೃತಿಯಲ್ಲಿ ಶ್ರೀಯವರ ಸಮಗ್ರ ಚಿತ್ರಣವೂ ದೊರೆಯುವಂತೆ ಮೂರ್ತಿರಾಯರು ಮಾಡಿದ್ದಾರೆ. ಶ್ರೀಯವರನ್ನು ತಮ್ಮ ಗುರುಗಳನ್ನಾಗಿ ಕಂಡವರು ಅವರು.

ಅವರ ಬೋಧನಾಕ್ರಮ ವಿಶೇಷವಾಗಿ ಷೇಕ್ಸ್‌ಪಿಯರನ ರುದ್ರನಾಟಕಗಳು ಪರಿಷತ್ತಿಗೆ ಕನ್ನಡ ಸಾಹಿತ್ಯಕ್ಕೆ ಮಾಡಿದ ಸೇವೆ, ನಾಡುನುಡಿಗಳ ಪರಂಪರೆಯ ಪರಿಕಲ್ಪನೆ ಮುಂತಾದವುಗಳ ವಿವರ ಪೂರ್ವಕವಾದ ವಿಚಾರಗಳು ಇಲ್ಲಿ ದಾಖಲಾಗಿವೆ. ಶ್ರೀಯವರು ಹೇಗೆ ನವೋದಯ ಕನ್ನಡ ಸಾಹಿತ್ಯದ ಆದ್ಯಪ್ರವರ್ತಕರಾದರು ಎಂದು ತಿಳಿಯಲಪೇಕ್ಷಿಸುವವರು ಈ ಪುಟಗಳತ್ತ ಕಣ್ಣು ಹಾಯಿಸಬೇಕು. ಮೂರ್ತಿರಾಯರಿಗೆ ಶ್ರೀಯವರ ಭಾಷಣಕಲೆ ಹೆಚ್ಚೋ ಬರವಣಿಗೆಯ ಕಲೆ ಹೆಚ್ಚೋ ಎಂಬ ಬಗ್ಗೆ ಒಂದು ದ್ವಂದ್ವ ಬಂದಿರಬೇಕು. ಆದ್ದರಿಂದಲೇ 1935ರಿಂದಾಚೆಗೆ ಅವರು ಹೆಚ್ಚೇನೂ ಬರೆಯಲಿಲ್ಲವೆಂಬುದು ನಿಜ. ಆದರೆ ಬೇಕಾದಷ್ಟು ಭಾಷಣ ಮಾಡಿದರು. ಅನೇಕ ವೇಳೆ ಅವರು ಆಡಿದ ಮಾತು ಸಾಹಿತ್ಯವಾಯಿತು". (ಪುಟ 11) ಎಂದು ತೀರ್ಪು ಕೊಟ್ಟು, ಒಂದು ಬಗೆಯ ಮಾನಸಿಕ ಸಮಾಧಾನಪಟ್ಟುಕೊಂಡಿದ್ದಾರೆ. ಅವರ ಭಾಷಣ ಕಲೆ, ಜನ ಅದಕ್ಕಾಗಿ ಹೊತ್ತ ಹಂಬಲಗಳನ್ನು ಸೋದಾಹರಣವಾಗಿ ವಿವರಿಸಿದ್ದಾರೆ.

ಶ್ರೀಯವರ ಕನ್ನಡ ಸೇವೆಯ ವಿಶ್ವರೂಪದರ್ಶನದ ಮಿಂಚುನೋಟ (Glimpse) ವನ್ನು ನಾವು ಇಲ್ಲಿ ಕಾಣುತ್ತೇವೆ. "ಪರಿಷತ್ತಿನ ಹೆಸರಿನ ಗೊಂದಲ ತಂದ ತಳಮಳ, ವಾದ ವಿವಾದ, ಟೀಕೆಗಳಿಂದ ಅವರು ಎಷ್ಟು ಜರ್ಝರಿತರಾದರು. ಅವರ ಕನ್ನಡ ಪ್ರೇಮವನ್ನು ಸಂಸ್ಕೃತ ದ್ವೇಷವೆಂದು ಜನ ಪರಿಗಣಿಸಿದ್ದರು. ಅವರ ಸಂಸ್ಕೃತ ಪ್ರೇಮ ಕಡಿಮೆ ಎನ್ನುವುದಕ್ಕೆ ಬದಲು ಕನ್ನಡ ಪ್ರೇಮ ಹೆಚ್ಚು ಎಂದುಕೊಳ್ಳೋಣ". (22) ಎಂದ ಮೂರ್ತಿರಾಯರು ಶ್ರೀಯವರ ಪರವಾಗಿ ಒಂದು ಸಮತೋಲನವಾದ ಮಾತನ್ನಾಡುತ್ತಾರೆ. ಶ್ರೀಯವರ ಭಾಷಣ ಕಲೆ ಇಲ್ಲಿ ವಿಶೇಷತಃ ಉಲ್ಲೇಖಿಸಲಾಗಿದೆ. ಉಲ್ಲೇಖಿಸಿದ್ದಾರೆ ಎಂದರೆ ಸಾಲದೇನೋ ಮುಕ್ತಕಂಠದಿಂದ ಶ್ರೀಕಂಠಯ್ಯನವರ ಕಂಠಶ್ರೀಯನ್ನು ಪ್ರಶಂಸೆ ಮಾಡಿದ್ದಾರೆ. ಅವರ ವೈಶಿಷ್ಟ್ಯಗಳಲ್ಲಿ ಸಿಂಹಪಾಲು ಅವರ ಈ ಭಾಷಣ ಕಲೆಗೆ ಲಭಿಸಿದೆ. ವಿ.ಸೀ.ಯವರು ಹೇಳುವಂತೆ "ಯಾವುದನ್ನು ಕುರಿತು ಮಾತನಾಡಿದರೂ ಇಂಗ್ಲೀಷನಲ್ಲಿ ಹೇಗೆ ಧಾರಳವಾಗಿ ವಿದ್ವತ್ಪೂರ್ಣವಾಗಿ ಮಾತನಾಡ ಬಲ್ಲವರಾಗಿದ್ದರೋ ಕನ್ನಡದಲ್ಲಿಯೂ ಹಾಗೇ ಇನ್ನಷ್ಟು ಸಲೀಸಾಗಿ ನುಣುಪಾಗಿ ತಿಳಿಯಾಗಿ, ನಿರರ್ಗಳವಾಗಿ, ನುಡಿಯಬಲ್ಲವರಾಗಿದ್ದರು." ಅವರ ಕನ್ನಡದ ಭಾಷಣವನ್ನು ಕೇಳುವುದು ಒಂದು ದೊಡ್ಡ ಭಾಗ್ಯ, ಹಬ್ಬ. ಇಂಗ್ಲೀಷ್ ಭಾಷಣದಲ್ಲಿ ವರ್ಡ್ಸ್‌ವರ್ತ್, ಷೇಕ್ಸ್‌ಪಿಯರ್, ಕಾರ್ಲೈಲ್ ಬ್ರೌನಿಂಗ್ ಇವರ ವಿಷಯದಲ್ಲಾಗಲೀ 'The burden of the prophets' ಎಂಬುದನ್ನಾಗಲೀ ಅವರ ವಾಗ್ವೈಭವವನ್ನು ಕೇಳಿ ತಲೆದೂಗಿದ್ದ ವಿದ್ವಾಂಸ ವರ್ಗ ಸಮಕ್ಕೆ ಅವರು ಪಂಪ, ಆದಿಪುರಾಣ, ಯಶೋಧರ ಚರಿತೆ, ಪಂಪ ರಾಮಾಯಣಗಳನ್ನು ಕುರಿತು ಆಡಿದ ಮಾತುಗಳ ವೈಭವ ತದ್ರೂಪವನ್ನು. (ಮಹನೀಯರು 1970 ಪುಟ 32-33) ಮೂರ್ತಿರಾಯರ ದೃಷ್ಟಿಯಲ್ಲಿ ಭಾಷಣ ಸೌಂದರ್ಯ ಅಸ್ಥಿರ. ಅಂತಹ ಅಸ್ಥಿರ ಸೌಂದರ್ಯದಿಂದ ಇವರೇಕೆ ಆಕರ್ಷಿತರಾದರೋ, ಆದರೂ ಅವರ ಕನ್ನಡನಾಡಿನ ಸಂಚಾರ, ಸಭೆ ಸಮಾರಂಭಗಳಲ್ಲಿ ಪಾಲ್ಗೊಂಡು ಮಾಡಿದ ಉಪನ್ಯಾಸಗಳು ಇತ್ಯಾದಿಗಳನ್ನು ಮೂರ್ತಿರಾಯರು ಅಸಮಾಧಾನದ ನಡುವೆಯೂ ವರ್ಣಿಸಿದ್ದಾರೆ.

ಶ್ರೀಯವರ ಇನ್ನಿತರ ಸೇವೆಗಳನ್ನೂ ವಿವರಿಸುವಾಗ ಅವರು ಅನ್ಯ ಸೇವಾ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದ್ದರಿಂದ ಆಯಾ ಕ್ಷೇತ್ರಕ್ಕಾದ ಲಾಭವೂ ಸಾಹಿತ್ಯ ರಚನೆಗಾದ

ನಷ್ಟವೂ ಯಾವ ರೀತಿಯದೆಂಬುದನ್ನು ಮೂರ್ತಿರಾಯರು ತೋರಿಸಿಕೊಟ್ಟಿದ್ದಾರೆ. ವಿಶ್ವವಿದ್ಯಾನಿಲಯ ಪ್ರಸಾರಾಂಗ, ಇಂಗ್ಲೀಷಿನ ಸೆಮಿನಾರ್ ಸಂಸ್ಥೆ, ವಯಸ್ಕರ ಶಿಕ್ಷಣ ಸಮಿತಿ, ಕೆ. ಇ. ಬಿ. ಕಾಲೇಜ್ ಮುಂತಾದ ಸಂಸ್ಥೆಗಳ ಜೀವನಾಡಿಯಾಗಿದ್ದವರು. ಮೈಸೂರು ರಿಜಿಸ್ಟ್ರಾರ್ ಆಗಿ ಜೊತೆಗೆ ಕನ್ನಡದ ಗೌರವ ಪ್ರಾಧ್ಯಾಪಕರಾಗಿ ಕೆಲಸ ಮಾಡಿದ್ದವರು.

ಈ ವಿಮರ್ಶೆಯ ವಿಶೇಷ ಲಕ್ಷಣವೆಂದರೆ ಬಿ. ಎಂ. ಶ್ರೀಯವರ ಕಾಲದ ಯುಗಧರ್ಮದ ಮೇಲೆ ವಿಶೇಷವಾದ ಬೆಳಕು ಚೆಲ್ಲುವ ಒಂದು ಅಧ್ಯಾಯ. "ವ್ಯಕ್ತಿ ಪರಿಸರ ಮತ್ತು ಸಮಯ" ತಮ್ಮ ವಿದ್ಯಾರ್ಥಿ ದಿಸೆಯಲ್ಲಿ ಒಮ್ಮೆ ಅವರೊಂದಿಗಿನ ತಮ್ಮ ಭೇಟಿಯೊಂದಿಗೆ ತೆರೆದುಕೊಳ್ಳುವ ಈ ಅಧ್ಯಾಯ ಈ ಶತಮಾನದ ಆದಿಭಾಗದ ಮಾನಸಿಕ ವಾತಾವರಣ ನಮ್ಮ ಮತಧರ್ಮ, ಭಾವ ಜೀವನ, ಬುದ್ಧಿ ಜೀವನ, ಸಮಾಜ ಜೀವನ, ಎಲ್ಲದರ ಮೇಲೂ ಒಳ್ಳೆಯದಕ್ಕೋ, ಕೆಟ್ಟದಕ್ಕೋ ಬೀರಿದ ಪ್ರಭಾವವನ್ನು ಗುರುತಿಸಿ ಆ ಹಿನ್ನೆಲೆಯಲ್ಲಿ ಶ್ರೀಯವರ ವ್ಯಕ್ತಿತ್ವ ಸಾಧನೆ, ಸಿದ್ಧಿ ಸ್ಥಾನಗಳನ್ನು ಗುರುತಿಸಿದ್ದಾರೆ.

ಲೇಖಕ ಕವಿಯ ಕೃತಿಗಳನ್ನು ವಿಮರ್ಶಿಸುವಾಗ ಅವನ/ ಅವಳ ಬದುಕಿನ ಬಗ್ಗೆಯೂ ತಿಳುವಳಿಕೆ ಅಗತ್ಯವೇ ಎಂಬ ಪ್ರಶ್ನೆ ಅತ್ಯಂತ ಜಟಿಲವಾದುದು. ಈ ವಿಚಾರದ ಬಗ್ಗೆ ಪರ ವಿರೋಧವಾದ ವಾದಗಳು ಸಾಕಷ್ಟು ಇವೆ. ಬದುಕು ಬರಹಕ್ಕೆ ಪೂರಕವಾದುದರಿಂದ ಬದುಕಿನ ಬಗೆಗೂ ಲಕ್ಷ್ಯ ಹರಿಸಬೇಕಾದುದು ಅನಿವಾರ್ಯವೆಂಬ ಒಂದು ಅಭಿಪ್ರಾಯ ವಿದ್ದರೆ, ಬದುಕಿನ ಉಚ್ಚ ಮೌಲ್ಯಗಳೂ, ಆದರ್ಶಗಳೂ ಕೇವಲ ಕಲ್ಪನೆಯಿಂದ, ಅಧ್ಯಯನದಿಂದ ಸಾಹಿತ್ಯ ಕೃತಿಯೊಂದರಲ್ಲಿ ಪಡಿ ಮೂಡಿಸುವುದು ಸಾಧ್ಯವೆಂಬ ವಾದವೂ ಇದೆ. ಕೃತಿಯೊಂದನ್ನು ವಿಮರ್ಶಾತ್ಮಕ ದೃಷ್ಟಿಯಿಂದ ವಿಶ್ಲೇಷಿಸುವಾಗ ಕವಿಯ ವೈಯಕ್ತಿಕ ಬದುಕು ವಿಮರ್ಶೆಯ ಮೇಲೆ ತನ್ನ ನೆರಳನ್ನು ಬೀಳಿಸುತ್ತದೆಂಬ ಭಾವನೆಯೂ ಇದೆ. ಕವಿಯ ಶಿಕ್ಷಣ, ವೃತ್ತಿ ಅಧ್ಯಯನದ ಹರಹು, ವೈಯಕ್ತಿಕ ಸಂಪರ್ಕ ಇತ್ಯಾದಿ ಅಂಶಗಳು ಶುದ್ಧ ವಿಮರ್ಶೆಗೆ ನೇರವಾಗಿ ಅಡ್ಡಿಬರಬಹುದೆಂಬ ಶಂಕೆಗೂ ಆಸ್ಪದವಿದೆ. ಇವೆಲ್ಲವುಗಳಿಂದ ತಪ್ಪಿಸಿಕೊಂಡು ಕೃತಿಯೊಂದರ ಶುದ್ಧ ಸಮೀಕ್ಷೆ ನಡೆಸುವುದೆಂದರೆ ಅದೊಂದು ವಸ್ತುನಿಷ್ಠ ವಿಮರ್ಶೆಯೇ ಸರಿ. ಶ್ರೀ ಮೂರ್ತಿರಾಯರು ಬಿ. ಎಂ. ಶ್ರೀಯವರ ಕೃತಿಗಳನ್ನು ಹೀಗೆ ವಸ್ತುನಿಷ್ಠವಾಗಿ ವಿಮರ್ಶಿಸಿ ಒಬ್ಬ Ideal ವಿಮರ್ಶಕರಾಗಿದ್ದಾರೆ.

ಶ್ರೀಯವರು ಮೂರ್ತಿರಾಯರ ಗುರುಗಳು, ಬಹುಶ್ರುತರು. ನವೋದಯ ಕನ್ನಡ ಸಾಹಿತ್ಯದ ಆದ್ಯ ಪ್ರವರ್ತಕರು. ಅವರಿಂದಾಗಿಯೇ ಹಲವು ಕನ್ನಡ ಲೇಖಕರ ಕವಿಗಳ ಸೃಷ್ಟಿಯಾಯಿತು. ಬದುಕಿದ್ದಷ್ಟುಕ್ಕೂ ಹತ್ತು ಹಲವು ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿ ಹೆಸರುಗಳಿಸಿದರು. ಮೂರ್ತಿರಾಯರು ಶ್ರೀಯವರ ವೈಯಕ್ತಿಕ ಹಾಗೂ ವೃತ್ತಿ ಜೀವನದ ಹಲವು ಮುಖಗಳನ್ನು ಪರಿಚಯಿಸಿ ಅನಂತರ ಕೃತಿಗಳ ಮೌಲ್ಯಮಾಪನಕ್ಕೆ ತೊಡಗಿದ್ದಾರೆ. ಆದರೂ ಅವರ ವಿಮರ್ಶೆಯ ಮೇಲೆ ಪೂರ್ವೋಕ್ತ ಯಾವುದೇ ಅಂಶ ತನ್ನ ಪ್ರಭಾವದ ಕರಿನೆರಳನ್ನು ಹಾಯಿಸದೆ ಇರುವುದು ಒಂದು ವೈಶಿಷ್ಟ್ಯ. ವಿಮರ್ಶೆಯ ರೂಪುರೇಷೆಗಳನ್ನೂ ಲಕ್ಷಣಗಳನ್ನೂ ಮೈಗೂಡಿಸಿಕೊಂಡ ಬರಹವನ್ನು ಇಲ್ಲಿ ನಾವು ಕಾಣಬಹುದು.

## ಇಂಗ್ಲೀಷ್ ಗೀತೆಗಳು

ನಮಗೆ ಬಿ.ಎಂ.ಶ್ರೀ ಎಂದ ಕೂಡಲೇ ನೆನಪಿಗೆ ಬರುವುದು 'ಇಂಗ್ಲೀಷ್ ಗೀತೆಗಳು'. ಕಾಲಾನುಕ್ರಮವಾಗಿ ಕೃತಿಗಳ ವಿಂಗಡಣೆ ಮಾಡುವುದಾದರೆ 'ಇಂಗ್ಲೀಷ್ ಗೀತೆಗಳೇ' ಮೊಟ್ಟ ಮೊದಲು ನಮಗೆ ಗೋಚರವಾಗುತ್ತದೆ. ಅದಕ್ಕೂ ಮುಂಚೆ ಬಂದ A hand book of Rhetoric ಎಂಬ ಪುಸ್ತಕದ ಬಗ್ಗೆ ಮೂರ್ತಿರಾಯರು "ಅದರಲ್ಲಿ ಅವರ ಸ್ವಂತ ಪ್ರತಿಭೆಯೇನೂ ಎದ್ದು ತೋರುವಂತಿಲ್ಲವಾದ್ದರಿಂದ ಅದಕ್ಕೆ ಹೆಚ್ಚು ಗಮನ ಕೊಡಬೇಕಾಗಿಲ್ಲ". (4) ಎಂದು ಒಂದೇ ಮಾತಿನಲ್ಲಿ ಅದರ ಮೌಲ್ಯಮಾಪನ ಮಾಡಿ ಮುಗಿಸಿದ್ದಾರೆ. 'ಇಂಗ್ಲೀಷ್ ಗೀತೆಗಳ' ಬಗ್ಗೆ ಮೌಲಿಕವಾದ ವಿಮರ್ಶೆಯನ್ನೇ ಬರೆದಿದ್ದಾರೆ. ಅದನ್ನು ಓದಿ ಆನಂದಪಟ್ಟವರಲ್ಲಿ ಮೂರ್ತಿರಾಯರೂ ಒಬ್ಬರು. "ಇಂಗ್ಲೀಷ್ ಗೀತೆಗಳು" ಕನ್ನಡ ಸಾಹಿತ್ಯ ಲೋಕದಲ್ಲಿ ಮಾಡಿದ ಬದಲಾವಣೆ ಅಪೂರ್ವವಾದದ್ದು. ಇಂಗ್ಲೀಷ್ ಗೀತೆಗಳನ್ನು ಕನ್ನಡೀಕರಿಸಿದವರು ಹಲವರು. ಶ್ರೀಯವರಿಗಿಂತಲೂ ಮುಂಚೆ ಷೇಕ್ಸ್‌ಪಿಯರ್ ಹಾಗೂ ಇತರ ಕವಿಗಳ ಕೃತಿಗಳು ಪೂರ್ಣವಾಗಿಯೋ ಇಲ್ಲವೇ ಭಾಗಶಃವಾಗಿಯೋ ಕನ್ನಡದಲ್ಲಿ ಬಂದಿದ್ದರೂ ಶ್ರೀಯವರು ಮಾಡಿದ ಪ್ರಯತ್ನದ ಪ್ರಭಾವ ಅಭೂತಪೂರ್ವದ್ದು. ಇವುಗಳನ್ನು ವಿಮರ್ಶಿಸಿದವರು, ಓದಿದವರು, ಇವುಗಳಿಂದ ಸ್ಫೂರ್ತಿ ಪಡೆದವರು ನೂರಾರು ಜನ. ಈ ಕುರಿತು ಮೂರ್ತಿರಾಯರು ಹೀಗೆ ಬರೆಯುತ್ತಾರೆ. "ಈ ಶತಮಾನದ ಮೂರನೆಯ ದಶಕದಲ್ಲಿ ವಿದ್ಯಾವಂತರಾದ ಕನ್ನಡಿಗರಿಗೆ ರೋಮಾಂಚನಕಾರಕವಾದ ಎರಡು ಅನುಭವಗಳು ದೊರೆತವು. "ಒಂದು ಶ್ರೀಕಂಠಯ್ಯನವರ ಇಂಗ್ಲೀಷ್ ಗೀತೆಗಳನ್ನು ಓದುವ, ಮತ್ತೊಂದು ಮಾಸ್ತಿ ವೆಂಕಟೇಶ ಅಯ್ಯಂಗಾರರ ಸಣ್ಣ ಕಥೆಗಳನ್ನು ಓದುವ ಸುಯೋಗ. ಈ ಪದ್ಯ ಗದ್ಯಗಳೆರಡರಲ್ಲೂ ಹೊಚ್ಚ ಹೊಸದಾದ ಕನ್ನಡ, ಅದರ ಸರಳತೆ ಲಾಲಿತ್ಯ, ಮಾಧುರ್ಯ ನಮ್ಮ ಅನುಭವವನ್ನೇ ಇವರು ಹೇಳುತ್ತಿದ್ದಾರೆ ಎನ್ನಿಸುವಂತಹ ಆತ್ಮೀಯತೆ ಇವು ಕೊಟ್ಟ ಆನಂದ ಅಷ್ಟಿಷ್ಟಲ್ಲ" (35-36) ಎಂಬ ಎರಡು ವಾಕ್ಯಗಳಲ್ಲಿ ಮಾಸ್ತಿ- ಶ್ರೀಯವರಿಬ್ಬರನ್ನೂ ತೂಗಿದ್ದಾರೆ. ವಿಮರ್ಶೆಯ ಎರಡು ತಟ್ಟೆಯಲ್ಲಿ ಎರಡು ಸಾಹಿತ್ಯ ಪ್ರಕಾರಗಳನ್ನು ಇರಿಸಿ ಅವೆರಡನ್ನೂ ಪರಸ್ಪರ ಸಮನ್ವಯಗೊಳಿಸಿದ್ದಾರೆ. ಇಂಗ್ಲೀಷ್ ಗೀತೆಗಳನ್ನು ವಿವಿಧ ವಿಮರ್ಶಕರು ವಿಭಿನ್ನವಾದ ದೃಷ್ಟಿಕೋನಗಳಿಂದ ವೀಕ್ಷಿಸಿದ್ದಾರೆ. ಈ ಕೃತಿಗೆ ಪ್ರಸ್ತಾವನೆ ಬರೆದ ತೀ.ನಂ.ಶ್ರೀ ಯವರು "ಈ ಎಲ್ಲಾ ಹಿರಿಯರ ಮತ್ತು ಸಮಕಾಲೀನರ ರಚನೆಗಳನ್ನು ಹೋಲಿಸಿ ನೋಡಿದರೆ ಹೊಸಗನ್ನಡ ಕವಿತೆಗೆ ಬಿ. ಎಂ. ಶ್ರೀ ಯವರು ತಮ್ಮ ಇಂಗ್ಲೀಷ್ ಗೀತೆಗಳಿಂದ ಎಂಥ ಮಹೋಪಕಾರ ಮಾಡಿದರೆಂಬುದು ಸ್ಪಷ್ಟವಾಗುತ್ತದೆ. ಸಾಂಪ್ರದಾಯಿಕ ದೃಷ್ಟಿಯಿಂದ ನೋಡಿದರೆ ಇಂಗ್ಲೀಷ್ ಗೀತೆಗಳಲ್ಲಿ ಎಲ್ಲವೂ ಹೊಸದು. ಛಂದಸ್ಸೂ ಹೊಸದು" (ಇಂಗ್ಲೀಷ್ ಗೀತೆಗಳು 1966 ಪುಟ 25) ಎಂಬ ದೃಷ್ಟಿಕೋನವನ್ನು ತಳೆದರೆ ಮಾಸ್ತಿ ಯವರೂ ಹೆಚ್ಚು ಕಡಿಮೆ ಇದೇ ಅಭಿಪ್ರಾಯವನ್ನು ಸಮರ್ಥನೆ ಮಾಡಿದ್ದಾರೆ. "ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಛಂದಸ್ಸಿನಲ್ಲಿ ಹಳೆಯದನ್ನು ಹೊಸದು ಮಾಡಿದ್ದಂತೆ ಶೈಲಿಯಲ್ಲಿಯೂ ಹಳೆಯದನ್ನು ಹೊಸದಾಗಿ ತಂದರು. ಊರ ಮಾತು, ಬಳಕೆಯ ಮಾತು, ಜನದ ನಾಲಿಗೆಯ ಮೇಲೆ ನುಡಿಯುವ ಮಾತು, ಇವರ ಇಂಗ್ಲೀಷ್ ಗೀತೆಗಳಲ್ಲಿ ಬಹಳವಾಗಿ ಕಾಣುತ್ತವೆ". (ನಮ್ಮ

ಹೊಸ ಸಾಹಿತ್ಯದ ಆರಂಭ 1979 ಪುಟ 46–47) ಹೊಸ ಕನ್ನಡ ಮಾತನ್ನೂ ರೂಪಗಳನ್ನೂ ಮಾನ್ಯಮಾಡಿ ಇಂಗ್ಲೀಷ್ ಗೀತೆಗಳನ್ನು ಬರೆದರೆಂದು ಶ್ರೀ ಪಿ. ಟಿ. ಯವರ ವಿಮರ್ಶೆ (ಮಹನೀಯರು 1970 ಪುಟ 32) ರಂ. ಶ್ರೀ ಮುಗಳಿಯವರು ಈ ಕೃತಿಯನ್ನು ಕುರಿತು "ಇಂಗ್ಲೀಷ್ ಕಾವ್ಯದ ಅನುವಾದಕರಲ್ಲಿ ಬಿ. ಎಂ. ಶ್ರೀಕಂಠಯ್ಯ ನವರು ಪ್ರಮುಖರಾದವರು. ಶ್ರೀಯವರು ಹೊಸ ಛಂದಸ್ಸು, ಹೊಸ ಶೈಲಿಗಳ ಪುರಸ್ಕೃತರಾದರು. ಶ್ರೀಯವರು ಮಾತ್ರ ಹಿರಿಯ ಅನುವಾದಕರೂ ಸ್ವತಂತ್ರ ಪ್ರತಿಭೆಯ ಕವಿಗಳೂ ಆಗಿದ್ದು, ಹೊಸ ಕಾವ್ಯದ ಆದ್ಯರಲ್ಲಿ ಒಬ್ಬರೆಂದು ಹೆಸರುವಾಸಿಯಾದವರೂ, ಅವರ ಇಂಗ್ಲೀಷ್ ಗೀತೆಗಳು, ಇಂದು ಹೊಸಗನ್ನಡ ಕಾವ್ಯದ ಚರಿತ್ರೆಯಲ್ಲಿ ಮೈಲುಗಲ್ಲಾಗಿ ಪರಿಣಮಿಸಿತು. ಸಾಮಾನ್ಯವಾಗಿ ಒಳ್ಳೆಯ ಅನುವಾದಕಾರನು ಸ್ವತಂತ್ರ ಪ್ರತಿಭಾಶಾಲಿಯಾದ ಕವಿಯಾಗಿರುತ್ತಾನೆ, ಎಂಬುದಕ್ಕೆ ಶ್ರೀಯವರನ್ನೊಳಗೊಂಡು ಇವರೆಲ್ಲ ನಿದರ್ಶನರಾಗಿರುತ್ತಾರೆ." (ಕನ್ನಡ ಸಾಹಿತ್ಯದ ಇತಿಹಾಸ 1963 ಪುಟ 195) ಎಂದು ಪ್ರಶಂಸೆ ಮಾಡಿ ಮುಂದುವರೆದು, "ಸ್ಥೂಲವಾಗಿ ಇವು (ಇಂಗ್ಲೀಷ್ ಗೀತೆಗಳು) ಭಾಷಾಂತರಗಳಾದರೂ ಸ್ವತಂತ್ರ ಅನುವಾದಗಳೆಂದು ವದತೋವ್ಯಾಘಾತದೋಷಕ್ಕೆ ಗುರಿಯಾಗಿಯೂ ಹೇಳಬಹುದು. ಬಹುಮಟ್ಟಿನ ಅನುವಾದಗಳಲ್ಲಿ ಕವಿ ಮೂಲ ಭಾವವನ್ನು ವಿವರ ವಿವರವಾಗಿ ಅರಿತುಕೊಂಡು ಅದರ ಜೀವಾಳದೊಡನೆ ಒಂದಾಗಿ ಕನ್ನಡ ಛಂದಸ್ಸಿನ ಮತ್ತು ನುಡಿಯ ಹೊಸ ರೂಪಗಳಲ್ಲಿ ಸಹಜಸ್ಫೂರ್ತವಾಗಿ ಎರಕ ಹೊಯ್ದಿದ್ದಾರೆ. ಸೂಕ್ಷ್ಮ ವ್ಯಾಸಂಗಕ್ರಾಂತ ದೃಷ್ಟಿ, ಪ್ರಸನ್ನ ಪ್ರತಿಭೆ ಇವುಗಳಿಂದ ಅನುವಾದ ಕಾರ್ಯವೂ ತುಂಬ ಯಶಸ್ವಿಯಾಗಿದೆ...." (ಅದೇ ಪುಟ 203) ಎಂದಿದ್ದಾರೆ.

ಕರ್ನಾಟಕದ ಇನ್ನೊಬ್ಬ ಸುಪ್ರಸಿದ್ಧ ವಿಮರ್ಶಕರಾದ ಶ್ರೀ ಎಲ್. ಎಸ್. ಶೇಷಗಿರಿ ರಾಯರು ಇಂಗ್ಲೀಷ್ ಗೀತೆಗಳನ್ನು ಮೂಲದೊಂದಿಗೆ ಹೋಲಿಸಿ ನೋಡಿ ಮೌಲ್ಯಾತ್ಮಕ ವಿಮರ್ಶೆ ನಡೆಸಿದವರು. ಶ್ರೀಯವರ ಮಾರ್ಪಾಡು ಎಲ್ಲೆಲ್ಲಿ ಸೊರಗಿದೆ, ಎಲ್ಲೆಲ್ಲಿ ಮೂಲಕ್ಕೆ ಹೊಯ್‌ಕಯ್ಯಾಗಿ, ಸರಿಸಮನಾಗಿ, ಭಾವಪುಷ್ಟಿ, ಮೂಲಭಾವನೆಗಳೊಂದಿಗೆ ಬಂದಿದೆ ಎಂದು ಸವಿವರವಾಗಿ ಸೋದಾಹರಣವಾಗಿ ತೋರಿಸಿಕೊಟ್ಟಿವರು. ಅವರೆ ಒಟ್ಟಿನಲ್ಲಿ ಅವರ ಅಭಿಪ್ರಾಯ ಹೀಗಿದೆ. "ಕವಿ, ಓದುಗರ ಸಂಬಂಧದಲ್ಲಿ 'ಇಂಗ್ಲೀಷ್ ಗೀತೆಗಳು' ಒಂದು ಕ್ರಾಂತಿಯನ್ನೇ ಉಂಟು ಮಾಡಿತು ಎಂಬುದು ಮುಖ್ಯ. ಎತ್ತರದಲ್ಲಿ ನಿಂತು ಬಾಳನ್ನೆಲ್ಲ ಸಮೀಕ್ಷಿಸಿ ಮಾರ್ಗದರ್ಶನ ಮಾಡುವ ವಿದ್ವಾಂಸನಾಗಲಿಲ್ಲ ಕವಿ, ಓದುಗನ ಅನುಭವ ಭಾವನೆಗಳನ್ನು ಹಂಚಿಕೊಂಡ ಆತ್ಮೀಯನಾದ. ಕನ್ನಡದಲ್ಲಿ ಭಾವಗೀತೆಯ ಅಂಶ ಮಾತನಾಡುವವನು ತನ್ನ ಭಾವಗಳಿಗೆ ಅಭಿವ್ಯಕ್ತಿ ನೀಡುವುದು ಭಕ್ತಿಗೀತೆಗಳಿಗೆ ಬಹುಮಟ್ಟಿಗೆ ಸೀಮಿತವಾಗಿತ್ತು. ವಚನಗಳಲ್ಲಿ ದಾಸಸಾಹಿತ್ಯದಲ್ಲಿ ಸುತ್ತಲಿನ ಸಾಮಾಜಿಕ ಜೀವನದ ಸ್ಪಂದನ ಕಂಡಿತು.

ಆದರೆ ಕಾವ್ಯವು ಜೀವನದ ಹೊಸ ಕ್ಷೇತ್ರಗಳಿಗೆ ಮಾನಸಿಕ ವ್ಯಾಪಾರದ ಹೊಸ ಸ್ತರಗಳಿಗೆ 'ಇಂಗ್ಲೀಷ್ ಗೀತೆ'ಗಳಲ್ಲಿ ಚಾಚಿತು. ಜೊತೆಗೆ ಇಲ್ಲಿಯ ಭಾಷೆ ನಿತ್ಯ ಜೀವನದ ಭಾಷೆಯಿಂದ ದೂರವಿಲ್ಲ. ಇದು ನಿತ್ಯ ಜೀವನದ ಭಾಷೆಯೇ ಅಲ್ಲದಿದ್ದರೂ (ಕಾವ್ಯಕ್ಕೆ ಅಗತ್ಯವಾದ ಬಿಗಿಯನ್ನು ಶ್ರೀ ಅವರು ಕಾವ್ಯ ಭಾಷೆಗೆ ತಂದುಕೊಟ್ಟರು) ಆ ಭಾಷೆಯಿಂದ ದೂರವಾದುದಲ್ಲ.

ಶ್ರೀ ಯವರನ್ನು ಕವಿಗಳ ಕವಿ ಎನ್ನಬಹುದು. ಆಧುನಿಕ ಯುಗದಲ್ಲಿ ಕವಿಯಾಗು ಮಾರ್ಗವನ್ನು ತೋರಿಸಿಕೊಟ್ಟವರು ಎಂದು. 'ಇಂಗ್ಲೀಷ್ ಗೀತೆ' ಗಳಲ್ಲಿ ವಸ್ತುವೈವಿಧ್ಯ, ಮಾತ್ರ ಪ್ರಯೋಗಗಳ ಗಣಿಯೇ ಕನ್ನಡ ಕವಿಗಳ ಮುಂದೆ ತೆರೆಯಿತು. ಇದು ಅನುವಾದಗಳ ಸಂಗ್ರಹವಾದ್ದರಿಂದ ಬರ್ನ್ಸ್‌ನ ಪ್ರಣಯದ ಆನಂದ, ಉದ್ವೇಗಗಳಿಂದ ಹಿಡಿದು ಮೂರ್ತ ಜಗತ್ತಿನಿಂದ ಅಮೂರ್ತ ಜಗತ್ತಿಗೆ, ಅಮೂರ್ತ ಜಗತ್ತಿನಿಂದ ಮೂರ್ತ ಜಗತ್ತಿಗೆ ಜಿಗಿಯುವ ಶೆಲ್ಲಿಯ ವಿಶಿಷ್ಟ ಅನುಭವದವರೆಗೆ, ನ್ಯೂಮನ್‌ನ ಗಂಭೀರ ಶರಣಾಗತಿಯವರೆಗೆ ಹಲವು ಮನಸ್ಥಿತಿಗಳ ಅಭಿವ್ಯಕ್ತಿಯನ್ನು ಇಲ್ಲಿ ಕಾಣಲು ಸಾಧ್ಯವಾಯಿತು. ಕಾವ್ಯ ಅತೀ ಗಾಂಭೀರ್ಯದಿಂದ ಮುಕ್ತವಾಯಿತು. ಸುತ್ತಲಿನ ಜಗತ್ತು ತನ್ನ ಸೊಗಸು ರೌದ್ರಗಳನ್ನು ತೆರೆದು ನಿಂತಂತಾಯಿತು. ಕವನದ ಮನೋಧರ್ಮಕ್ಕೆ ತಕ್ಕಂತೆ ಪ್ರಾಸವನ್ನು ಬಿಡುವ, ಬಳಸುವ, ಪಂಕ್ತಿಗಳ ಉದ್ದವನ್ನು ನಿರ್ಧರಿಸುವ ಭಾಷೆಯ ಓಟವನ್ನು ನಿಯಂತ್ರಿಸುವ ಕವನಗಳು ಇಲ್ಲಿ ತರುಣ ಕವಿಯನ್ನು ಸ್ವಾಗತಿಸಿದವು. "ಕಾರಿ ಹೆಗ್ಗಡೆಯ ಮಗಳ"ಲ್ಲಿ ಕಥನ ಕವನ ನಮ್ಮ ಕನ್ನಡದಲ್ಲಿ ಕಾಲಿಟ್ಟಿತು. 'ಇಂಗ್ಲೀಷ್ ಗೀತೆಗಳು' ಚಿನ್ನದ ಗೆರೆ ಎಳೆದಂತೆ ಹೊಸ ಸಾಹಿತ್ಯದ ಪ್ರಾರಂಭವನ್ನು ಸ್ಪಷ್ಟಪಡಿಸಿತು.

ಶ್ರೀ ಯವರ 'ಇಂಗ್ಲೀಷ್ ಗೀತೆ' ಗಳಿಂದ ಸಾಮಾನ್ಯವಾಗಿ ರೊಮ್ಯಾಂಟಿಕ್ ಎಂದು ಕರೆಯುವ ನವೋದಯ ಯುಗ ಪ್ರಾರಂಭವಾಯಿತು. (ಹೊಸಗನ್ನಡ ಸಾಹಿತ್ಯ 1988 ಪುಟ 49–50)

ಈ ಮೇಲ್ಕಂಡ ಕೆಲವು ವಿಮರ್ಶಕರ ವಿಶಿಷ್ಟ, ವಿಭಿನ್ನ ದೃಷ್ಟಿಕೋನಗಳನ್ನು ಉದ್ಧರಿಸಿದ ಉದ್ದೇಶವೆಂದರೆ 'ಮೂರ್ತಿರಾಯರು ಈ ವಿಮರ್ಶಕರ ಸಾಲಿನಲ್ಲಿ ಎಲ್ಲಿ ನಿಲ್ಲುತ್ತಾರೆ' ಎಂದು ತೋರುಬೆರಳಾಗಿಸುವ ಪ್ರಯತ್ನ. ಮೂಲ ಭಾಷಾಂತರ ರೂಪಾಂತರಗಳನ್ನು ತೌಲನಿಕವಾಗಿ ಅಭ್ಯಾಸ ಮಾಡಿದ ಮೂರ್ತಿರಾಯರು ಈ ಸಮಗ್ರ ಕೃತಿಯನ್ನು ವಸ್ತುನಿಷ್ಠವಾಗಿ ವಿಮರ್ಶಿಸಿದ್ದಾರೆ.

## ಅಶ್ವತ್ಥಾಮನ್

'ಶ್ರೀ'ಯವರ ಇನ್ನೊಂದು ಬಹು ಚರ್ಚಿತವೂ ವಿವಾದಾಸ್ಪದವೂ ಆದ ಇನ್ನೊಂದು ಕೃತಿ ಎಂದರೆ 'ಅಶ್ವತ್ಥಾಮನ್'. ಇದು ಸುಪ್ರಸಿದ್ಧ ಗ್ರೀಕ್ ನಾಟಕಕಾರ ಸಾಫೋಕ್ಲಿಸನ "ಏಜಾಕ್ಸ್" ನಾಟಕದ ರೂಪಾಂತರ. ಕನ್ನಡ ಸಾಹಿತ್ಯಕ್ಕೆ ಭಾಷಾಂತರ, ರೂಪಾಂತರ, ಸಂಗ್ರಹ ದರ್ಶನಗಳೂ ಹೊಸದಲ್ಲ. ಪಂಪ, ರನ್ನ, ಕುಮಾರವ್ಯಾಸ, ದುರ್ಗಸಿಂಹ ಮುಂತಾದ ಹಳಗನ್ನಡ ಕವಿಗಳೇ ಇವುಗಳಿಗೆ ನಿದರ್ಶನಗಳಾಗಿ ನಿಲ್ಲಬಲ್ಲರು. ಕೆಂಪುನಾರಾಯಣ, ಅಳಸಿಂಗಾಚಾರ್ಯ, ಬಸವಪ್ಪ ಶಾಸ್ತ್ರಿಗಳೇ ಮುಂತಾದ ಈಚೆಗಿನ ಕವಿಗಳು, ಮುದ್ದಣನಂತಹ 19–20ನೇ ಶತಮಾನದ ಕವಿಯೂ ಸಹಾ ಇಂತಹ ಪ್ರಯತ್ನ ಮಾಡಿದವರ ಸಾಲಿಗೆ ಸೇರುತ್ತಾರೆಂದರೆ ಭಾಷಾಂತರ ರೂಪಾಂತರಗಳ ಪ್ರಭಾವವನ್ನು ಮನಗಾಣಬಹುದು.

20ನೇ ಶತಮಾನ ಸಾಹಿತ್ಯ ರಂಗದಲ್ಲಿ ಹಲವಾರು ಪ್ರತಿಭಟನೆಗಳನ್ನು ಕಂಡಿದೆ. ಎಂ. ಆರ್. ಶ್ರೀಯವರ "ನಾಗರೀಕ", ಎಂ. ಎಂ. ಕಲ್ಬುರ್ಗಿಯವರ 'ಮಾರ್ಗ', ಅಂತಾರಾಷ್ಟ್ರೀಯ ಖ್ಯಾತಿಯ 'ಸೆಟಾನಿಕ್ ವರ್ಸಸ್' ಮುಂತಾದ ಕೃತಿಗಳು ಬಂದಾಗ

ಸಾಹಿತ್ಯ ಕೃತಿಗಳೆಂದೇ ಪ್ರಸಿದ್ಧ. ಶ್ರೀಯವರ 'ಅಶ್ವತ್ಥಾಮನ್' ಕೃತಿಯೂ ಸಹಾ ಇದೇ ಸಾಲಿಗೆ ಸೇರುವಂತಹದು.

ಶ್ರೀಯವರ 'ಅಶ್ವತ್ಥಾಮನ್' ಆಧುನಿಕ ಕನ್ನಡ ಸಾಹಿತ್ಯದ ಪ್ರಪ್ರಥಮ ದುರಂತ ನಾಟಕ. ಹಳೆಗನ್ನಡ ಭಾಷೆ, ಭಾರತದ ಕಥೆ ಹಾಗೂ ಗ್ರೀಕ್ ದುರಂತ ನಾಟಕದ ದಟ್ಟವಾದ ಪ್ರಭಾವ ಇವುಗಳನ್ನು ಸಮನ್ವಯಗೊಳಿಸಿಕೊಂಡ ವಿಶಿಷ್ಟವಾದ ನಾಟಕ ಇದು. ಮಹಾಭಾರತದ ಸೌಪ್ತಿಕ ಪರ್ವದಲ್ಲಿ ಬರುವ ಈ ಕಥೆಯಲ್ಲಿ ಮಾಡಿಕೊಂಡ ಮಾರ್ಪಾಡುಗಳು ಸಂಪ್ರದಾಯ ನಿಷ್ಠತೆಯ ದೃಷ್ಟಿಯಲ್ಲಿ ಅನುಚಿತವಾಗಿ ಕಂಡ ಕಾರಣ ಭಾರೀ ಕೋಲಾಹಲವನ್ನೇ ಉಂಟುಮಾಡಿತು. ಇದೊಂದು ಅತ್ಯುತ್ತಮ ಅವಕಾಶ ನೀಡುವ ಗ್ರಂಥ. ಷೇಕ್ಸ್‌ಪಿಯರನ ನಾಟಕಗಳನ್ನು ಆಧಾರವಾಗಿರಿಸಿಕೊಂಡು ಕಾಲ್ಪನಿಕ ಪಾತ್ರಗಳನ್ನು ಸೃಷ್ಟಿಸಿದ ರೂಪಾಂತರಗಳು ಹಲವಿವೆ. ಆದರೆ ಗ್ರೀಕ್ ದುರಂತ ನಾಟಕವೊಂದನ್ನು ಆಧರಿಸಿ ಪುರಾಣ ಕಥೆಯೊಂದಿಗೆ ಸಮನ್ವಯಗೊಳಿಸಿ ಮಾಡಿದ ರೂಪಾಂತರ ಇದೇ ಮೊದಲನೆಯದು, ಹಾಗೂ ಇದೊಂದೇ.

ಈ ನಾಟಕವನ್ನು ಕುರಿತಂತೆ ವಿವಿಧ ವಿಮರ್ಶಕರು ತೌಲನಿಕವಾಗಿ ಅಧ್ಯಯನ ಮಾಡಿ ತಮ್ಮ ತಮ್ಮ ವಿಮರ್ಶಾತ್ಮಕ ದೃಷ್ಟಿಕೋನಗಳನ್ನು ಮಂಡಿಸಿದ್ದಾರೆ. ನಾಟಕದ ಬಂಧ, ಶೈಲಿ, ಮಾರ್ಪಾಟು, ಪಾತ್ರ ಚಿತ್ರಣ, ಸನ್ನಿವೇಶ ನಿರೂಪಣೆ ಇತ್ಯಾದಿಗಳನ್ನು ತಮ್ಮದಾದ ದೃಷ್ಟಿಕೋನಗಳಿಂದ ವಿಮರ್ಶಿಸಿದ್ದಾರೆ. ಬಿ. ಎಂ. ಶ್ರೀಯವರು ಇದೇ ನಾಟಕ ಸಂವಿಧಾನವನ್ನು, ಇದೇ ಕಡೆಯನ್ನೇ ಆರಿಸಿಕೊಳ್ಳಲು ಕಾರಣವನ್ನು ಮೂರ್ತಿರಾಯರು ಸಮರ್ಪಕವಾಗಿ ಹೀಗೆ ಮಂಡಿಸಿದ್ದಾರೆ.

"ಸೌಪ್ತಿಕ ಪರ್ವದ ಕಥೆಯನ್ನು ತಮ್ಮ ಎರಡನೆಯ ಮೂಲವನ್ನಾಗಿ ಆರಿಸಿಕೊಂಡಿದ್ದರಿಂದ ಶ್ರೀಕಂಠಯ್ಯನವರಿಗೆ ಆದ ಮತ್ತೊಂದು ಪ್ರಯೋಜನವೆಂದರೆ ಅಶ್ವತ್ಥಾಮನ್ ಕ್ರೋಧಕ್ಕೆ ವಿಶಾಲವಾದ ಹಿನ್ನೆಲೆಯನ್ನು ಕೊಡುವುದು ಸಾಧ್ಯವಾದದ್ದು. (68) ಶ್ರೀಕಂಠಯ್ಯನವರು ಮೂಲವನ್ನು ರೂಪಾಂತರಗೊಳಿಸುವಾಗ ಅದಕ್ಕೆ ನೀಡಿದ ಮಾರ್ಪಾಟುಗಳು ಹೇಗೆ ಮಹತ್ವವನ್ನು ಪಡೆದವು ಎಂದೂ ಇಲ್ಲಿ ನಿರೂಪಿಸಿದ್ದಾರೆ.

"......ಎರಡನೆಯ 'ಬಿಗಿದು' ಎಂಬ ಮಾತಿನಲ್ಲಿರುವ ಅಣಕ. ಅಲ್ಲದೇ ಕೃಷ್ಣನ ವಿಷಯದಲ್ಲಿ ಪರಿತಾಪ ತೋರಿಸುವಂತೆ ಇರುವುದು 'ಆಡಿದ ಪಾಪ, ರಾಸಕ್ರೀಡೆ ಯಾಡುವ್ರೊನ್ ಪೆಂಡಿರೋಳ್' ಎಂಬ ಮಾತಿನ ಅಣಕ, 'ನಿನ್ನಿಚ್ಚೆಗೆನ್ನಿಚ್ಚೆಯೇನ್' ಎಂಬುದರಲ್ಲಿರುವ ಮೂದಲಿಕೆ- ಇವೆಲ್ಲ ಶ್ರೀಕಂಠಯ್ಯನವರು ಸೇರಿಸಿದ್ದು" (69)

ಈ ಮಾರ್ಪಾಟೂ ಸಹಾ ಗ್ರಾಹ್ಯವೇ. ಇದು ನಾಟಕ ಕರ್ತೃವಿನ ಸ್ಥಾನವಲ್ಲಿದ್ದು ನಾವು ನೋಡಿದಾಗ, ಆಲೋಚಿಸಿದಾಗ ಅದರ ಔಚಿತ್ಯ ನಮಗೆ ಚೆನ್ನಾಗಿ ಮನವರಿಕೆ ಯಾಗುತ್ತದೆ. ಮೂಲವನ್ನೋ ರೂಪಾಂತರವನ್ನೋ ಒಂದರ ಪಕ್ಕದಲ್ಲಿ ಮತ್ತೊಂದ ನ್ನಿಟ್ಟು ಹೋಲಿಸಿದಾಗ ರೂಪಾಂತರದಲ್ಲಿ ಕಾಣುವ ಸೇರ್ಪಡೆ ಹೊಸದಾದ ಭಾಗಗಳು ನಮಗೆ ರೂಪಾಂತರಕಾರನ ಸ್ವಾತಂತ್ರ್ಯವನ್ನು ಸೂಚಿಸುತ್ತವೆ. ಮೂರ್ತಿರಾಯರು ಈ ವ್ಯತ್ಯಾಸವನ್ನು ಬಹು ಸೂಕ್ಷ್ಮವಾಗಿ ಗಮನಿಸಿದವರು. ಆದರೆ ಅವರ ಬಗ್ಗೆ ತಕ್ಕಣ ತಮ್ಮ ದುಡುಕಿನ ತೀರ್ಮಾನವನ್ನು ಕೊಟ್ಟವರಲ್ಲ. ಬದಲಾಗಿ ಆ ವ್ಯತ್ಯಾಸ ಎಷ್ಟರ

ಮಾತಿಗೆ ಅವಕ್ಕೆ ಹೊಂದಿಕೊಳ್ಳುತ್ತದೆ. ಇದು ಅಗತ್ಯದ ಎಂಬುವುದನ್ನು ಚೆನ್ನಾಗಿ ವಿವರಿಸಿ, ಅದರ ಸಮಂಜಸತೆಯನ್ನು ಹೀಗೆ ಸಮರ್ಥಿಸುತ್ತಾರೆ.

"ಮೇಲೆ ಹೇಳಿದ ಮಾತುಗಳು ದೈವಕ್ಕೆ ಅನ್ವಯಿಸಿದ ಮಾತುಗಳಲ್ಲ, ದೈವವನ್ನು ಚಿತ್ರಿಸಿರುವ ರೀತಿಗೆ ಅನ್ವಯಿಸುವಂಥವು. ಕಲೆಯ ದೃಷ್ಟಿಯಿಂದ ನೋಡಿದರೆ. ಹಾಗೆ ಚಿತ್ರಿಸಿರುವುದು ನಾಟಕಕಾರರ ತಪ್ಪು ಎಂದೂ ಹೇಳುವಂತಿಲ್ಲ. ನಾಟಕಕಾರ ತನ್ನ ಉದ್ದೇಶಕ್ಕೆ ತಕ್ಕಂತೆ ತನ್ನ ಪಾತ್ರಗಳನ್ನು (ದೈವವಾಗಲೀ, ಮಾನವನಾಗಲಿ) ಚಿತ್ರಿಸುತ್ತಾನೆ. ಅವನಿಗೆ ಆ ಹಕ್ಕು ಇದೆ." (69)

ಈ ಮೇಲಿನ ಉದ್ಧೃತ ಭಾಗದ ಮೊದಲ ವಾಕ್ಯ ಅತ್ಯಂತ ಗಮನಾರ್ಹ. ದೈವಕ್ಕೂ ದೈವವನ್ನು ಚಿತ್ರಿಸಿರುವ ರೀತಿಗೂ ನಡುವಣ ಸೂಕ್ಷ್ಮ ಗೆರೆಯನ್ನು ಅವರು ಗುರುತಿಸಿದ್ದಾರೆ. ವಸ್ತು ಸ್ಥಿತಿಯೇ ಬೇರೆ, ಅದರ ಕಲ್ಪನೆಯೇ ಬೇರೆ.

ಬರಹಗಳೆಂಬ ಕನ್ನಡಿಯಲ್ಲಿ ಪ್ರತಿಬಿಂಬಿತವಾಗುವ ಬರಹಗಾರನ ಮನೋಧರ್ಮ ಬಹಳ ಮುಖ್ಯ. ಬರಗಾರನ ಉತ್ಸಾಹ, ಬೇಸರಗಳೆರಡೂ ಅನಿವಾರ್ಯ ಚಿತ್ರಣಗಳಲ್ಲಿ ಪಾಲ್ಗೊಂಡು ಔನ್ನತ್ಯವನ್ನೋ, ಶ್ರೇಷ್ಠತೆಯನ್ನೋ ನೀಡುತ್ತದೆ. ಭೀಮ-ಏಕಲವ್ಯರ ಜಗಳದ ಸನ್ನಿವೇಶದಲ್ಲಿ ಮೂರ್ತಿರಾಯರ ವಿಮರ್ಶಾತ್ಮಕ ದೃಷ್ಟಿಕೋನಕ್ಕೆ ಇಂತಹ ಒಂದು ಅಂಶ ಗೋಚರವಾಗುತ್ತದೆ. ಆ ಸನ್ನಿವೇಶದ ಚಿತ್ರಣದ ಶೈಲಿಗೂ ಮಿಕ್ಕುಳಿದ ಸನ್ನಿವೇಶಗಳ ಚಿತ್ರಣಕ್ಕೂ ಇರುವ ಅಂತರ ಅವರ ಅರಿವಿಗೆ ಬಂದಂತೆ ಕಾಣುತ್ತದೆ. ಸೂಕ್ಷ್ಮದೃಷ್ಟಿಯ ವಿಮರ್ಶಕ ಇಂತಹ ಸಣ್ಣ ಸಣ್ಣ ವಿಚಾರಗಳತ್ತಲೂ ದೃಷ್ಟಿ ಹರಿಸುತ್ತಾನೆ. ಇಂತಹ ಸಂದರ್ಭದಲ್ಲಿಯೇ ಒಬ್ಬ ವಿಮರ್ಶಕ ಇವರು ಎಂಬ ಅಂಶ ಬೆಳಕಿಗೆ ಬರುತ್ತದೆ. ಮೂರ್ತಿರಾಯರು ಆ ಸಂದರ್ಭವನ್ನು ಕುರಿತು ಬರೆಯುತ್ತಾ ಮೂಲವನ್ನು ರೂಪಾಂತರವನ್ನೂ ಪರಸ್ಪರ ಹೀಗೆ ಹೋಲಿಸುತ್ತಾರೆ.

"....ಶ್ರೀಕಂಠಯ್ಯನವರಿಗೆ ಈ ದೃಶ್ಯವನ್ನು ಬರೆಯುವುದು ಬಹಳ ಬೇಸರದ ಕೆಲಸವಾಗಿದ್ದಿರಬೇಕು. ಸೋಫೋಕ್ಲೀಸನ ನಾಟಕದಲ್ಲಿ ಈ ದೃಶ್ಯ (Enter Menelaus ಎಂಬಲ್ಲಿಂದ) 322 ಪಂಕ್ತಿಗಳಷ್ಟು - ಇಡೀ ನಾಟಕದ ಕಾಲುಭಾಗ ಆಗುತ್ತದೆ. ಇದರಲ್ಲಿ 220 ಪಂಕ್ತಿಗಳು ಜಗಳದ ಮಾತುಗಳಿಗೇ ಮೀಸಲು - 'ಅಶ್ವತ್ಥಾಮನ್'ನಲ್ಲಿ ಒಟ್ಟು ದೃಶ್ಯಕ್ಕೆ ಕೊಟ್ಟಿರುವುದು 186 ಪಂಕ್ತಿಗಳು ಮಾತ್ರ. ಜಗಳದ ಮಾತುಗಳು 32 ಪಂಕ್ತಿಗಳೊಳಗೆ ಮುಗಿಯುತ್ತವೆ. ಮೂಲ ನಾಟಕದಲ್ಲಿ ಮಿನಿಲೇಯಸ್, ಅಗಮೆಮ್ನಾನ್‌ರ ಅಧಿಕಾರವನ್ನು, ದೃಶ್ಯವನ್ನು ಮೊಟಕು ಮಾಡುವುದು ಸುಲಭ ಸಾಧ್ಯವಾಯಿತು. ಇದರಿಂದಾಗಿ ಭೀಮ-ಏಕಲವ್ಯರ ಕೂಗಾಟ ಅಬ್ಬರಗಳು ಕಡಿಮೆಯಾದದ್ದು ಮಾತ್ರವಲ್ಲದೆ, ಯುದ್ಧದ ಹೊಲ್ಲತನವನ್ನೂ, ಶಾಂತಿಯ ಹಿರಿಮೆಯನ್ನೂ ಬಣ್ಣಿಸುವ ಭಾಗ ಎದ್ದು ಕಾಣುವಂತಾಯಿತು" (71)

ಈ ಉಲ್ಲೇಖ ನಮ್ಮನ್ನು ಇನ್ನೊಂದು ಪ್ರಪಂಚಕ್ಕೆ ಕೊಂಡೊಯ್ಯುತ್ತದೆ. ಅದು ಶ್ರೀಯುತರ ಅಂತರಂಗಿಕ ಪ್ರಪಂಚ, ಶಾಂತಿಪ್ರೇಮ, ಪ್ರತ್ಯುತ್ಪನ್ನಮತಿ ಹಾಗೂ ವಿವೇಚನಾ ಶಕ್ತಿಗಳನ್ನು ನಮಗೆ ಪರಿಚಯಿಸುತ್ತದೆ. ಶ್ರೀಯುತರು ಕೇವಲ ಹೆಸರು ಪರಿಸರಗಳನ್ನು ಮಾತ್ರವೇ ಬದಲಾಯಿಸಿರುವುದಿಲ್ಲ, ಜೊತೆಗೆ ಅಗತ್ಯಕ್ಕೆ ತಕ್ಕಂಥ ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾರೆ ಎಂಬ ಅಂಶ ಇದರಿಂದ ವ್ಯಕ್ತವಾಗುತ್ತದೆ.

ಇದು "ಅಶ್ವತ್ಥಾಮನ್" ನಾಟಕದ ವಿಮರ್ಶೆಯೂ ಹೌದು. ತೌಲನಿಕ ಸಮೀಕ್ಷೆಯೂ ಹೌದು. ಒಂದು ಕೃತಿ ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ರೂಪಾಂತರಗೊಂಡು ಬಂದಾಗ ತೌಲನಿಕ ಅಧ್ಯಯನಕ್ಕೆ ಸಾಕಷ್ಟು ಸಾಮಗ್ರಿ ದೊರೆಯುತ್ತದೆ. ಇಲ್ಲಿ ಅಂತಹ ಒಂದು ವಸ್ತುನಿಷ್ಠ ತೌಲನಿಕ ಅಧ್ಯಯನವನ್ನು ನಾವು ಕಾಣುತ್ತೇವೆ. ಮೂರ್ತಿರಾಯರು ಶ್ರೀಯವರ ಶಿಷ್ಯರಾದರೂ ಗುರುವೆಂಬ ಅಂಧಾಭಿಮಾನವಿಲ್ಲದೆ - ಶ್ರೀಯವರೇ ಹೇಳಿದಂತೆ ಕೊನೆಗೆ ನಿಲ್ಲುವುದು ಅಭಿಮಾನವಲ್ಲ, ಸತ್ಯ- ಕೃತಿ ಎಂದು ವಿಮರ್ಶೆ ಮಾಡಿದ್ದಾರೆ. ನಿದರ್ಶನಾರ್ಥವಾಗಿ ಈ ಕೆಳಗಿನ ಉಲ್ಲೇಖಗಳನ್ನು ಇಲ್ಲಿ ನೀಡಬಹುದು.

1. ಶ್ರೀಕಂಠಯ್ಯನವರ ನಾಟಕದಲ್ಲಿ ಸೋಫೋಕ್ಲೀಸನದಕ್ಕಿಂತ ಸುಮಾರು 420 ಪಂಕ್ತಿಗಳು ಕಡಿಮೆ ಇವೆ. (66)

2. ಇವು ಮೂಲದಿಂದ ಬಂದುದಲ್ಲ. ಶ್ರೀಕಂಠಯ್ಯನವರು ಸೇರಿಸಿದವು (67)

3. ಈ ಪಾಪ ಪರಂಪರೆಯ ಮರುಕಥನ ಶ್ರೀಕಂಠಯ್ಯನವರೇ ಸೇರಿಸಿದ್ದೆಂಬುದು ಸ್ಪಷ್ಟವಾಗಿ ಇದೆ (72)

4. ಈ ಸಂದರ್ಭಗಳಲ್ಲಿ ಶ್ರೀಕಂಠಯ್ಯನವರ ಬರವಣಿಗೆ ಸ್ವಲ್ಪ ಹದ ತಪ್ಪಿದೆ. ಗ್ರೀಕ್ ಮೂಲದ ಪ್ರಭಾವ ಎಷ್ಟಿರಬೇಕಾಗಿತ್ತೋ ಅದಕ್ಕಿಂತ ಹೆಚ್ಚಾಗಿದೆಯೆಂದು ತೋರುತ್ತದೆ (75)

"ಕಥಾವಸ್ತುವಿನಲ್ಲಿಯೂ 'ಅಶ್ವತ್ಥಾಮನ್' ನಾಟಕವು ಯಾವ ಒಂದು ಮೂಲದ ಅಂಧಾನುಕರಣವಲ್ಲ. ಕಲಾದೃಷ್ಟಿಯಿಂದ ಉತ್ತಮ ಫಲಗಳನ್ನು ಕೊಡುವ ಭಾಗಗಳ ಸಮೀಕರಣ ಮಾತ್ರ. ಕತೆಯ ಬಹುಭಾಗವು ಅದರ ರೀತಿಯೂ ಆಕಾರವೂ ಗ್ರೀಕ್ ನಾಟಕದ ಹಾಗೆಯೇ ಇದೆ. ಮಹಾಭಾರತದಿಂದ ಸಮಂಜಸವಾಗಿ ಸೇರಿಕೊಳ್ಳುವ ಭಾಗವನ್ನೆಲ್ಲ ಸೇರಿಸಿಕೊಂಡಿದೆ. ಎರಡರಲ್ಲಿಯೂ ಅನಾವಶ್ಯಕವಾಗಿ ಕಂಡು ಬಂದ ಭಾಗವನ್ನು ಬಿಟ್ಟಿದೆ. ಅಶ್ವತ್ಥಾಮನ ಆತ್ಮಹತ್ಯೆಯ ದೃಷ್ಟಿಯಿಂದ ಭಾರತದಲ್ಲಿ ಬರುವ ದ್ರೌಪದಿಯು ಅರ್ಜುನನನ್ನು ಸಮಾಧಾನ ಮಾಡುವ ಭಾಗವು ಅನಾವಶ್ಯಕವಾದುದರಿಂದ ಅದನ್ನು ಲೋಪ ಮಾಡಿದೆ. ಹಾಗೆಯೇ ಗ್ರೀಕ್ ನಾಟಕದ ಉತ್ತರಾರ್ಧದಲ್ಲಿ ಬರುವ ಟ್ಯೂಸರಿಗೂ ಅಗಮೆಮ್ನನ್ ಮತ್ತು ಮೆನೆಲೇಯಸ್-ಇವರಿಗೂ ನಡೆದ ಕಲಹವು ಕಲಾದೃಷ್ಟಿಯಿಂದ ನೀರಸವಾಗಿ ಕಾಣುವುದರಿಂದ ಅದರ ಬಹುಭಾಗವು ಕನ್ನಡ ನಾಟಕದಲ್ಲಿ ಲುಪ್ತವಾಗಿದೆ. ಇತಿಹಾಸಗಳೆರಡರಲ್ಲಿಯೂ ಪ್ರಧಾನವಾಗಿರುವ ವಿಧಿವಾದವೂ ಧಾರ್ಮಿಕ ಆವರಣವೂ ಇಲ್ಲಿ ಪೂರ್ಣವಾಗಿ ಉಳಿದುಬಂದಿದೆ. ಅಲ್ಲದೆ ಗ್ರೀಕ್ ನಾಟಕದ ವೈಶಿಷ್ಟ್ಯವಾದ ಮೇಳವು ಕನ್ನಡದ್ದು ಬಹು 'ಸಹಜವಾಗಿ ಸರಳವಾಗಿ ಸ್ವಾರಸ್ಯವಾಗಿ ಸೇರಿಕೊಂಡಿದೆ." ಅಶ್ವತ್ಥಾಮನ್ (1971)

(ಒಂದು ಹಕ್ಕಿ ನೋಟ) ಪುಟ 17- ಎಸ್. ಅನಂತರಂಗಾಚಾರ್.

ಇಂತಹ ಹಲವು ನಿದರ್ಶನಗಳನ್ನು ನೀಡಬಹುದು ಈ ತೌಲನಿಕ ಸಮೀಕ್ಷೆಗೆ. ಪಾತ್ರ, ಹಿನ್ನೆಲೆ ನಾಟಕ ಎಬ್ಬಿಸಿದ ಕೋಲಾಹಲ ಈ ಎಲ್ಲವನ್ನು ಮೂರ್ತಿರಾಯರು ಈ ಕಿರುವಿಮರ್ಶೆಯಲ್ಲಿ ಪ್ರಸ್ತಾವಿಸುತ್ತಾರೆ. ಒಂದು ಸಂಪ್ರದಾಯಬದ್ಧವಾದ ಕುಟುಂಬದ ಹಿನ್ನೆಲೆಯಿಂದ ಬಂದವರಾದರೂ ಮೂರ್ತಿರಾಯರು ಈ ನಾಟಕದ ಕೋಲಾಹಲಕ್ಕೆ

ಕಾರಣವಾದ ಅಶ್ವತ್ಥಾಮನ ಆತ್ಮಹತ್ಯೆಯನ್ನು ರೂಪಾಂತರ ದೃಷ್ಟಿಯಿಂದ ಸ್ವಾಗತಿಸುತ್ತಾರೆ, ಸಮರ್ಥಿಸುತ್ತಾರೆ. ನಾಟಕದ ಎಳೆ ಎಳೆಯನ್ನು ಛಂದಸ್ಸು, ಸಂವಿಧಾನ ಶೈಲಿ, ಹಳೆಗನ್ನಡ ಭಾಷೆ, ಪಾತ್ರ, ಮಾರ್ಪಾಡು - ಈ ಎಲ್ಲವನ್ನೂ ಸಮಗ್ರವಾಗಿ ವಿಮರ್ಶಿಸುತ್ತಾರೆ. ಕೃತಿ - ಕೃತಿಕಾರ ಎರಡನ್ನೂ ವಿಮರ್ಶಿಸುವ ಕ್ರಮ ಆರಂಭವಾದುದು ಇಲ್ಲಿ.

ಒಂದು ಮಾತು ಉಲ್ಲೇಖನಾರ್ಹ. ಶ್ರೀಯವರ ಕೊನೆಗಾಲದ ಬರವಣಿಗೆಯ ಮೇಲೆ ಬೆಳಕು ಚೆಲ್ಲುವ ಅಂಶವದು. ಲೇಖಕನೊಬ್ಬನ ಶೈಲಿ, ಬರಹದ ಬಗ್ಗೆ ಕಾಲಾನುಕ್ರಮಣಿಕೆ ಬಹು ಅಗತ್ಯ. ಷೇಕ್ಸ್‌ಪಿಯರ್ ನಾಟಕಗಳನ್ನು ಕಾಲದ ದೃಷ್ಟಿಯಿಂದ ವಿಂಗಡಿಸಿ, ಅವುಗಳ ಆಧಾರದ ಮೇಲೆ ಅವನ ಮನೋಧರ್ಮದಲ್ಲಾದ ಬದಲಾವಣೆಗಳನ್ನು ಗುರುತಿಸುವ ಪ್ರಯತ್ನ ಮಾಡುವುದುಂಟು. ಶ್ರೀಯವರ ಅಂತಿಮಕಾಲದ ಗದ್ಯವನ್ನು ಕುರಿತ ಮೂರ್ತಿರಾಯರ ಅಭಿಪ್ರಾಯ ಹೀಗಿದೆ.

"ಆದರೆ, ಕೊನೆಕೊನೆಗೆ ಅವರ ಗದ್ಯ-ಅದರಲ್ಲೂ ತಾವಾಗಿ ಕುಳಿತು ಬರೆದ ಗದ್ಯ ಬಹಳ ಪೆಡಸಾಯಿತು. ಆರಂಭವಾದ ವಾಕ್ಯ ಮುಂದಕ್ಕೆ ಹೋಗದೆ ಅಲ್ಲಿ ವಿರಾಮ, ಅರ್ಧ ವಿರಾಮ, ಪೂರ್ಣ ವಿರಾಮಗಳ, ಆಶ್ಚರ್ಯಸೂಚಕ ಚಿಹ್ನೆಗಳ ಮತ್ತು ಅರ್ಥಕ್ಕೆ ಬದಲಾಗಿ ಉದ್ಗಾರವನ್ನು ಸೂಚಿಸುವ ಪದಗಳ ತಡೆಯಿಂದಾಗಿ ನಿಂತುಹೋದಂತೆ ಅಥವಾ ಎಡವಿ ಬಿದ್ದಂತೆ ಅನುಭವವಾಗುತ್ತಿತ್ತು."(106).

ಇಷ್ಟನ್ನು ಹೇಳಿ ಈ ಮಾತಿಗೆ ಉಪಷ್ಟಂಭಕವಾಗಿ ಕೆಲವು ನಿದರ್ಶನಗಳನ್ನು ನೀಡುತ್ತಾರೆ. ಅನಂತರ ಈ ಉಲ್ಲೇಖವನ್ನು ಕುರಿತು-ಈ ಹಿಂದೆ ಹೇಳಿದಂತೆ ವಸ್ತುನಿಷ್ಠವಾಗಿ-ಹೀಗೆ ವಿಮರ್ಶಿಸುತ್ತಾರೆ.

"'ಶೈಲಿ ಹೀಗೇಕೆ ಬಿಕ್ಕಳಿಕೆ'ಯಾಯಿತು? ಇತರರು ಯಾರೂ ಬರೆಯದಂತೆ ಬರೆಯಬೇಕೆಂಬ ಆಸೆಯೇ? ವಿಕೃತ ರೂಪದ ಶೈಲಿಯ ಮೇಲೆ ವ್ಯಾಮೋಹ? ಇಂಥವು ಲೇಖಕರನ್ನು ಕಾಡುವುದುಂಟು. ಆದರೆ ಶ್ರೀಕಂಠಯ್ಯನವರ ವಿಷಯದಲ್ಲಿ ಈ ಕಾರಣಗಳನ್ನು ಕೊಡಲಾಗುವುದಿಲ್ಲ. ಅವರು ಕೃತಕ ಶೈಲಿಗೆ ಮನಸೋತವರಲ್ಲ. ನಿಜವಾದ ಕಾರಣ ಅವರ ಆಲೋಚನೆಯ ಓಟ ಬರವಣಿಗೆಯ ಓಟಕ್ಕಿಂತ ವೇಗವಾಯಿತೆಂಬು ದಿರಬೇಕು. ಅವರ ಹಿಂದಿನ ಗದ್ಯ ಬರವಣಿಗೆಯಲ್ಲಿ ಈ ದೋಷ ಅಷ್ಟಾಗಿ ಕಂಡು ಬರುವುದಿಲ್ಲ. ಪದ್ಯದಲ್ಲಂತೂ ಕಾಣುವುದೇ ಇಲ್ಲ"(107).

ಶ್ರೀಯವರ ಮತ್ತೊಬ್ಬ ಶಿಷ್ಯ ಸುಪ್ರಸಿದ್ಧ ವಿಮರ್ಶಕ-ಬರಹಗಾರ ಶ್ರೀ ಎಸ್.ವಿ. ರಂಗಣ್ಣನವರು ಈ ಹದವನ್ನು ನೋಡುವ ರೀತಿಯೇ ಬೇರೆ. ಅವರ ಪ್ರಕಾರ ಶ್ರೀಯವರ ಈ ಲೇಖನಶೈಥಿಲ್ಯವೂ ಸಮರ್ಥನೀಯವೇ.

"ಕಡೆಯ ಘಟ್ಟದಲ್ಲಾದರೋ ಆದೇಶದ ಅತಿಶಯ, ಭಾವದೌರ್ಬಲ್ಯ, ವಿವೇಚನೆಯ ಇಳಿಮುಖಗಳ ದೆಸೆಯಿಂದ ಶೈಲಿ ಕೇವಲ ಸಡಿಲವಾದದ್ದಷ್ಟೇ ಅಲ್ಲದೆ, ನಿಯತ ಬಂಧವಿಲ್ಲದೆ, ತೋರಿದ ದಾರಿಯಲ್ಲಿ ಹೋಗುವ, ಪೂರ್ವಾಪರ ಯೋಚನೆ ತಪ್ಪಿ, ಯುಕ್ತ ಬೆಳವಣಿಗೆ ಇಲ್ಲದೆ, ರೀತಿಯ ರಹಿತ ರೀತಿಯನ್ನು ಪ್ರಕಟಿಸುವ ಚೆಲ್ಲಾಪಿಲ್ಲಿಯಾದ ಪದರಾಶಿಯಾಯ್ತು. ವಾಕ್ಯದ ಬದಲು ಒಂದೆರಡು ಶಬ್ದ ಹಾಗೆ ನಿಂತ ಪದಗುಂಪುಗಳು, ಗೂಢ ಹಾಸ್ಯ, ಅಪ್ರಾಸಂಗಿಕ ಪರಿಹಾಸ, ಯಾವ ಯಾವದೋ ಪೂರ್ವ

ಕಥಾಸೂಚನೆ, ಇದ್ದಕ್ಕಿದ್ದಂತೆ ಉದ್ಗಾರ, ಒದರಾಟ, ಪರದಾಟ-ಈ ಬಗೆಯ ಮಾತಿನ ಧಾಟಿಯನ್ನು ಏನೆಂದು ನಿರ್ದೇಶಿಸೋಣ? ನನ್ನ ಮಿತ್ರರೊಬ್ಬರು ಅವನ್ನು ಇಂತು ಬಣ್ಣಿಸಿದರು, 'ಬಿ.ಎಂ. ಶ್ರೀಯವರ ಬಿಕ್ಕಳಿಕೆ' ಈ ಶೈಥಿಲ್ಯಕ್ಕೆ, ನಿಶ್ಶಕ್ತಿಗೆ, ಅಡ್ಡಾದಿಡ್ಡಿಗೆ, ಗಮನಗೇಡಿಕೆಗೆ ಕಾರಣವಾಗಬಹುದು? ಮಹಾವ್ಯಕ್ತಿಯ ಪ್ರತಿಯೊಂದು ವಿದ್ಯಮಾನವು ಸದೋಷವಾದರೂ ಪರಿಶೀಲನೆಗೆ ಯೋಗ್ಯ ವಸ್ತು, ಅದರಿಂದ ಪ್ರಯೋಜನ ಯಥೇಷ್ಟ. 'ಶ್ರೀ' ಯವರು ತಮ್ಮ ಪ್ರಯಾಣದ ಕಡೆಗೆ ಮಜಲಿನಲ್ಲಿ ಹತಾಶ ಸಂಕಟಗಳನ್ನು ಬಾಚಿ ತಬ್ಬಿಕೊಂಡರು. ನೊಂದ ಜೀವಕ್ಕೆ ನೋವಿನಲ್ಲಿ ಕೊನೆ. 'ಶ್ರೀ' ಯವರಿಗೆ 'ಟ್ರಾಜಿಡಿ' ಅಥವಾ ರುದ್ರನಾಟಕದ ಮೇಲೆ ಯಾವಾಗಲೂ ವಿರಾಭಿಮಾನ ಇದ್ದಿತಲ್ಲವೆ? ಅವರ ದರ್ಶನದಲ್ಲಿ ಮತದಲ್ಲಿ ನಮ್ಮ ಸಂಸಾರ ಅನೇಕ ರೀತಿಯಲ್ಲಿ ಟ್ರಾಜಿಡಿ (ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ 1970 ಪೀಠಿಕೆ 1 ಪುಟ 24-25).

ಮೂರ್ತಿರಾಯರ ಈ ಕೃತಿಯನ್ನು ನಾವು ಅಧ್ಯಯನ ಮಾಡುವಾಗ ಡಾ. ಜಾನ್‌ಸನ್‌ರವರ ಈ ಮಾತು ನೆನಪಿಗೆ ಬರುತ್ತದೆ.

"To judge rightly of an author we must transport ourselves to his time, and examine what were the wants of his contemporaries, and what were his means of supplying them. That which is easy at one time was difficult at another".

(ಇದೇ ಮಾತನ್ನು ಡ್ರೈಡನ್ ತನ್ನ Preface to Shakespeareನಲ್ಲಿ ಹೇಳುತ್ತಾನೆ. Every man's performance, to be rightly estimated, must be compared with the state of the age in which he lived and with his particular opportunities".

ಶ್ರೀಯವರು 'ಅಶ್ವತ್ಥಾಮನ್' ನಾಟಕದಲ್ಲಿ ಗ್ರೀಕ್ ಪುರಾಣದಿಂದ ಘಟನೆಗಳನ್ನು ಉಲ್ಲೇಖಿಸಿದ್ದಾರೆ. ನಾವು ಕೇವಲ ನಾಟಕವನ್ನು ಮಾತ್ರವೇ ಓದಿದಾಗ, ನಮ್ಮ ಮಟ್ಟದಲ್ಲಿ ಅದನ್ನು ವ್ಯಾಖ್ಯಾನಿಸಬಹುದೇ ಹೊರತು ಮೂಲವನ್ನೇ ಹಿಡಿದು 'ಇದಮಿತ್ಥಂ' ಎಂದು ಹೇಳುವುದು ಕೊಂಚ ಕಷ್ಟ. ಮೂರ್ತಿರಾಯರು ಅಂತಹ ಕಡೆಗಳಲ್ಲಿ ಅಡಿ ಟಿಪ್ಪಣಿಗಳನ್ನು ನೀಡಿ ಮೂಲ ಪೌರಾಣಿಕ ಘಟನೆಯನ್ನು ವಿವರಿಸಿದ್ದಾರೆ. ಅದ್ದರಿಂದ ಇದು ಕೇವಲ ಒಂದು ವಿಮರ್ಶೆ ಮಾತ್ರವಾಗಿರದೆ 'ಅಶ್ವತ್ಥಾಮನ್' ನಾಟಕ ಕೃತಿಗೆ ಒಂದು Guideಕೂಡ ಆಗಿದೆ. ಪುಟ 72ರಲ್ಲಿ 'ಸರ್ಪದುರಿಪಲ್ಲಿಳನ್ ಬಿತ್ತಿದಾ'.....ಎಂಬ ವಾಕ್ಯಕ್ಕೆ ಅವರು ನೀಡಿದ ಅಡಿಟಿಪ್ಪಣಿ ಗಮನಾರ್ಹ.

## ಪಾರಸಿಕರು

ಈಸ್ಕಿಲಸನ The Pearsac ಎಂಬ ನಾಟಕವನ್ನು ಶ್ರೀಯವರು 'ಪಾರಸಿಕರು' ಎಂದು ಭಾಷಾಂತರಿಸಿದರು. ಮೂರ್ತಿರಾಯರು ಆರಂಭದಲ್ಲಿ ಈ ಮೂಲ ಕೃತಿ-ಕರ್ತೃಗಳ ಬಗ್ಗೆ ವಿಮರ್ಶೆ ಮಾಡುತ್ತಾರೆ. ಶ್ರೀಯವರು ಇದೇ ನಾಟಕವನ್ನು ಕನ್ನಡೀಕರಿಸಲು ಮೂರ್ತಿರಾಯರು ಕಾರಣವನ್ನು ತಾವು ಕಿವಿಯಾರೆ ಕೇಳಿದ ಶ್ರೀಯವರ ಮಾತನ್ನು- ನೀಡುತ್ತಾರೆ. ಶೈಲಿಯ ಶೈಥಿಲ್ಯಕ್ಕೆ ಇನು ಅನುವಾದವೆಂದು ಮೂರ್ತಿರಾಯರು

ಶ್ರೀಯವರನ್ನು ಸಮರ್ಥಿಸುತ್ತಾರೆ. ಅವರ ವೈಯಕ್ತಿಕವಾಗಿ ಅವರಿಗೆ ಇದು ಸಮಾಧಾನವಿಲ್ಲ, ಅವರು 'ಅಗಮೆಮ್ನನ್' ಅನ್ನು ಅನುವಾದಿಸಬೇಕಾಗಿತ್ತು. 'ನನಗೆ ಆ ಅದೃಷ್ಟವಿರಲಿಲ್ಲ ಎಂದು ಸುಮ್ಮನಾಗಬೇಕು' ಎಂದು ಸಮಾಧಾನ ತಂದುಕೊಳ್ಳುತ್ತಾರೆ.

## ಹೊಂಗನಸುಗಳು

'ಹೊಂಗನಸುಗಳು' ಕೃತಿಯನ್ನು ವಿಮರ್ಶಿಸುವಾಗ ನಮಗೆ ಒಂದು ಹೊಸ ವಿಚಾರವನ್ನು ಮೂರ್ತಿರಾಯರು ಪರಿಚಯಿಸುತ್ತಾರೆ. 'ಇದರಲ್ಲಿ ಇಂಗ್ಲೀಷ್ ಸಾಹಿತ್ಯಾಭ್ಯಾಸಿಗಳಿಗೆ ಪರಿಚಿತವಾದ ಓಡ್ (ode) ಎಂಬ ಕವನ ರೂಪವನ್ನು ಮೊಟ್ಟಮೊದಲಾಗಿ ಕನ್ನಡಕ್ಕೆ ತಂದಿದ್ದಾರೆ' (97) ಈ ಛಂದೋರೂಪದ ಬಗ್ಗೆಯೂ ಮೂರ್ತಿರಾಯರು ಪ್ರಸ್ತಾಪಿಸುತ್ತಾರೆ. ಶ್ರೀಯವರ ಸಾಫಲ್ಯವನ್ನು ಗುರುತಿಸಿದ್ದಾರೆ.

ಮೂರ್ತಿರಾಯರ 'ಬಿ.ಎಂ. ಶ್ರೀಕಂಠಯ್ಯನವರು' ಅಧ್ಯಯನ ಯೋಗ್ಯಗ್ರಂಥ. ಏಕೆಂದರೆ ಶ್ರೀಯವರು ಇಂಗ್ಲೀಷ್ ಪ್ರೊಫೆಸರ್ ಆಗಿದ್ದವರು. ಸಹಜವಾಗಿ ಅವರ ಸಾಹಿತ್ಯದ ಮೇಲೆ ಇಂಗ್ಲೀಷ್ ಸಾಹಿತ್ಯದ ದಟ್ಟ ಪ್ರಭಾವ ಇರುವುದನ್ನು ಸಹೇತುಕವಾಗಿ ಸಯುಕ್ತಿಕವಾಗಿ ಮೂರ್ತಿರಾಯರು ಗುರುತಿಸಿದ್ದಾರೆ. ಅವರ ಶಿಷ್ಯರಾಗಿ, ಸ್ನೇಹಿತರಾಗಿ ಅವರಂತೆ ಇಂಗ್ಲೀಷ್ ಪ್ರೊಫೆಸರ್ ಆಗಿ ನಿವೃತ್ತರಾದ ಮೂರ್ತಿರಾಯರು ಡಾ. ಜಾನ್ಸನ್‌ನ Lives of poets ಮಾದರಿಯಲ್ಲಿ ಬರೆದ ಈ ಗ್ರಂಥ ಶ್ರೀ ಸಾಹಿತ್ಯ ಅರಿಯಲು ಒಂದು Authority ಆಗಿದೆ.

ಶ್ರೀಯವರನ್ನು ಕುರಿತು ಹೆಚ್ಚು ಕಡಿಮೆ ಅವರ ಸಮಕಾಲೀನರಾದ ಡಿ. ಶ್ರೀ ಕೆ. ಶಂಕರಭಟ್ಟರು ಕಂಡದ್ದು ಬೇರೆ ರೀತಿ. ಸ್ವಲ್ಪ ಹೆಚ್ಚು ವ್ಯಕ್ತಿನಿಷ್ಠರಾಗಿಯೇ ಅವರನ್ನು ಕಂಡಿದ್ದಾರೆ ಅವರು. 'ಶ್ರೀಯವರು ನಮ್ಮ ಹಿರಿಯಾಳುಗಳಲ್ಲಿ ಗಣನೀಯರು' (ವಾಙ್ಮಯ ತಪಸ್ಸು 1967 ಪುಟ 130) ಎಂದು ಅವರ ಸ್ಥಾನವನ್ನು ಗುರುತಿಸಿದ್ದಾರೆ...... 'ಶ್ರೀಯವರ ಹೃದಯವು ಇಂಗ್ಲ ಕನ್ನಡ ಭಾಷೆಗಳ ಘರ್ಷಣೆಯ ವೇದನೆಯನ್ನು ಅನುಭವಿಸಿ ಪಾಕಗೊಂಡ ಹೃದಯ. ಸ್ವಾತಂತ್ರ್ಯವನ್ನು ಕಾಯ್ದುಕೊಂಡು ಸಂಸ್ಕೃತಿಯ ಕಳೆಗೂಡಿ ಸ್ಫುರಿಸುತ್ತಿರುವ ಹೃದಯ' (133) ಎಂದು ಅವರ 'ಹೃದ್ಗತ'ವನ್ನರಿಯಲು ಅವರು ಪ್ರಯತ್ನಿಸಿದ್ದಾರೆ. ಅವರ 'ಅಶ್ವತ್ಥಾಮನ್' ಕುರಿತು 'ವ್ಯಾಕರಣ ಸಮ್ಮತ ಭಾಷೆಯಲ್ಲಿ ಬರೆಯಲ್ಪಟ್ಟ' (138) ಕೃತಿಯೆಂದು ವಿಮರ್ಶಿಸಿದ್ದಾರೆ. ಅವರ ಮಾತುಗಾರಿಕೆಯನ್ನು 'ಅವರಿಗೆ ಸರಸ್ವತಿಯ ಅನುಗ್ರಹದಿಂದ ದೊರೆತ ವರ' (142) ಎಂದು ಪ್ರಶಂಸೆ ಸಲ್ಲಿಸಿದ್ದಾರೆ. (ಮೂರ್ತಿರಾಯರು ಈ ಬಗ್ಗೆ ಕೊಂಚ ವಸ್ತುನಿಷ್ಠವಾಗಿ ವಿಮರ್ಶಿಸಿದ್ದಾರೆ) 'ಅವರ ಹೃದಯ ಒಂದಷ್ಟು ನೊಂದಿರಬೇಕು......ಅವರು ಆಡಬೇಕು. ನಾವು ಕೇಳಬೇಕು.' (142) ಎಂದು ಅವರ ಬಗ್ಗೆ ಪ್ರಶಂಸೆ ಇದೆ. ಮೂರ್ತಿರಾಯರು ಈ ಸಂದರ್ಭದಲ್ಲಿ ಬರೆದುದನ್ನು ಹಿಂದೆ ಕಾಣಿಸಿದೆ. ಮೂರ್ತಿರಾಯರಿಗೆ ಶ್ರೀಯವರು ವೈಯಕ್ತಿಕವಾಗಿ ಗುರುಗಳಾದರೂ ಇಂತಹ ಕಡೆ ಬಿಟ್ಟು ವ್ಯಕ್ತಿಯನ್ನಾಗಿ ಕಂಡು ವಸ್ತುನಿಷ್ಠವಾಗಿಯೇ ವಿಮರ್ಶೆಯ ನ್ಯಾಯ ಸಲ್ಲಿಸಿದ್ದಾರೆ.

ಶ್ರೀಯವರ 'ಅಶ್ವತ್ಥಾಮನ್' ನಾಟಕದ ಕೃಷ್ಣನ ಪಾತ್ರದ ಬಗ್ಗೆ ಅವರ ಅಭಿಪ್ರಾಯ ಅತ್ಯಂತ ನಿರ್ದುಷ್ಟವಾಗಿ ಖಚಿತವಾಗಿ ಹೀಗಿದೆ.

"ಶ್ರೀಯವರ 'ಅಶ್ವತ್ಥಾಮನ್' ನನಗೆ ಬಹು ಮೆಚ್ಚಿಕೆಯಾದ ಕೃತಿ. ಅವರು ಅದರಲ್ಲಿ ಕೃಷ್ಣ ಮಾನವನ (ಬೇಕಾದರೆ ಉದಾತ್ತ ಮಾನವ ಎನ್ನೋಣ) ಮಟ್ಟಕ್ಕೆ ಇಳಿದಿರುವುದನ್ನು ನೆನೆದಾಗ ಅತೃಪ್ತಿಯಾಗುತ್ತದೆ. ಆ ಪಾತ್ರಕ್ಕೆ ಕೃಷ್ಣ ಎಂಬ ಹೆಸರು ಕೊಡದೇ ಬೇರೆ ಯಾವುದಾದರೂ ಹೆಸರು ಕೊಟ್ಟಿದ್ದರೆ ಆ ಅತೃಪ್ತಿ ಇರುತ್ತಿರಲಿಲ್ಲ. ಅಲ್ಲಿಯ ಕೃಷ್ಣ ಮಹಾಭಾರತದ ಕೃಷ್ಣನ ಪಡಿಯಚ್ಚಾಗಬೇಕಾಗಿತ್ತೆಂದಲ್ಲ. ನನ್ನ ಅಭಿಪ್ರಾಯ, ಔನ್ನತ್ಯವನ್ನು ಉಳಿಸಿಕೊಳ್ಳಬೇಕಾಗಿತ್ತೆಂದು" (ಮಾಸ್ತಿಯವರ ಕಥೆಗಳು ಪುಟ 57) ಎಸ್. ಅನಂತರಂಗಾಚಾರ್ ಹೀಗೆ ಬರೆಯುತ್ತಾರೆ" ಒಟ್ಟಿನಲ್ಲಿ ಅವನು (ಕೃಷ್ಣ) ಮನುಷ್ಯನಾಗಿ ಕಂಡರೂ ಅವನ ಸದ್ಗುಣಗಳು ಯಾವ ದೇವತೆಗೂ ಕಡಿಮೆಯಾಗಿಲ್ಲ".

(ಅದೇ ಪುಟ 36)

ಪ್ರೊ. ವಿ.ಎಂ. ಇನಾಂದಾರ್ ಅವರ "ಪಾಶ್ಚಾತ್ಯ ಕಾವ್ಯ ಮೀಮಾಂಸೆ"ಗೆ ಬರೆದ ಮುನ್ನುಡಿಯ ಬಹುಭಾಗ ಒಂದು ಕಿರುವಿಮರ್ಶೆ. ಇದರ ಆರಂಭ ಹಾಗೂ ಮುಕ್ತಾಯಗಳೆರಡೂ ಕಾವ್ಯ ಮೀಮಾಂಸೆ ಹಾಗೂ ವಿಮರ್ಶೆಯನ್ನು ಕುರಿತ ವ್ಯಾಖ್ಯಾನದಂತಿದೆ. ಕಾವ್ಯ ಮೀಮಾಂಸೆ ಎಂದರೇನು ಎಂಬುದನ್ನು ಅವರು ಹೀಗೆ ವಿಶ್ಲೇಷಣೆ ಮಾಡುತ್ತಾರೆ.

"ವಾಸ್ತವವಾಗಿ ಕಾವ್ಯ ಮೀಮಾಂಸೆ ಎಂದರೆ, ಸಾಹಿತ್ಯಾನುಭವ, ತತ್ವಶಾಸ್ತ್ರ, ಸೌಂದರ್ಯಶಾಸ್ತ್ರ, ಕವಿಯ ಮತ್ತು ಸಹೃದಯರ ಮನೋವ್ಯಾಪಾರವನ್ನು ವಿಶ್ಲೇಷಿಸುವ ಮಟ್ಟಿಗೆ ಮನಶ್ಶಾಸ್ತ್ರ ಇವೆಲ್ಲದರ ಸಹಕಾರದಿಂದ ನಳಪಾಕವೊಂದನ್ನು ಇಳಿಸುವುದು. ಇದರ ಅಧ್ಯಯನ ಸಾಹಿತ್ಯಾಸ್ವಾದದಂತೆಯೇ ಆನಂದ ಕೊಡಬಲ್ಲುದು. ಸಾಹಿತ್ಯದ ಸವಿಯು ಸವಿಯಾಗುವುದು ಏಕೆ, ಹೇಗೆ ಎಂಬುದರ ಅರಿವು ಮಾಡಿಕೊಡುವುದೇ ಕಾವ್ಯ ಮೀಮಾಂಸೆಯ ಕೆಲಸ.

........ಸಾಹಿತ್ಯಕ್ಕೂ ವಿಮರ್ಶೆಗೂ ಇರುವ ಸಂಬಂಧಕ್ಕಿಂತ ತತ್ವಕ್ಕೂ ವಿಮರ್ಶೆಗೂ ಇರುವ ಸಂಬಂಧವೇ ಹೆಚ್ಚು ಗಮನ ಸೆಳೆದಂತಿದೆ. ಸಮಗ್ರ ಕಾವ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾಡಿರುವ ವಿಮರ್ಶೆ ಸಾಲದು." (ಪುಟ 7-9)

"ನವೋದಯ ಕಾಲದ ಸಾಹಿತ್ಯ ಆಚಾರ್ಯರ ಮತಕ್ಕೆ ಸೇರದ ಕವಿಗಳ ಕೃತಿಗಳನ್ನು ತೀರ ಕನಿಷ್ಠವೆಂದು ಕಾಣುವುದು ಆ ಕಾಲದ ವಿಮರ್ಶಕರ ಚಾಳಿಯಾಯಿತು. 'ಶ್ರೀ..... ಇಂಥವರು........ ಇಂಥ ಗ್ರಂಥ ಬರೆದಿರುವುದರಿಂದ ಅದು ಚೆನ್ನಾಗಿರಲೇ ಬೇಕು' ಎಂಬ ಮಾತು ಅವರ ನಾಂದಿಯಾಯಿತು. ವಿಮರ್ಶಕರ ಪಕ್ಷ ಮನೋಭಾವ ಪ್ರತಿಪಕ್ಷಗಳ ಹುಟ್ಟಿಗೆ ಕಾರಣವಾಗಿ ಘರ್ಷಣೆಯೊದಗಿತು. ಸಾಹಿತ್ಯ ಸಾಗರದ ಮಂಥನದಿಂದ ಅಮೃತದ ಬದಲು ವಿಷ ಹುಟ್ಟಿತು." (ಯುಗಧರ್ಮ 1952. ಪುಟ 58) ಎಂಬ ಅ.ನ.ಕೃ. ರವರ ಅಭಿಪ್ರಾಯ ಮೂರ್ತಿರಾಯರ ವಿಮರ್ಶೆಯ ಅಧ್ಯಯನದ ವೇಳೆಯಲ್ಲಿ ಒಪ್ಪುವುದು ಸಾಧ್ಯವಿಲ್ಲ.

## 3.4 ಷೇಕ್ಸ್‌ಪಿಯರ್ (ವಿಮರ್ಶೆ)

ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ 250ಪುಟಗಳ ವ್ಯಾಪ್ತಿಯಲ್ಲಿ ಷೇಕ್ಸ್‌ಪಿಯರನ್ನು ಕುರಿತು ಪುಸ್ತಕವೊಂದನ್ನು ಬರೆದುಕೊಡಬೇಕೆಂದು ಮೂರ್ತಿ

ರಾಯರನ್ನು ಕೇಳಿದಾಗ ಅದಕ್ಕಾಗಿ ಬರೆದ ಈ ಕೃತಿಯು ಪೂರ್ವಾರ್ಧವೇ 430 ಪುಟಗಳಷ್ಟು ಗಾತ್ರಕ್ಕೆ ಬೆಳೆಯಿತು. ಇದರ ವಿಸ್ತಾರದ ಅನಿವಾರ್ಯತೆಯ ಬಗ್ಗೆ ಸ್ವತಃ ಮೂರ್ತಿರಾಯರೇ ಹೀಗೆ ಹೇಳುತ್ತಾರೆ.

"ಆ ಮಿತಿಯಲ್ಲೇ (250 ಪುಟ) ಪುಸ್ತಕವನ್ನು ಬರೆಯುವುದು ಸಾಧ್ಯ. ಆದರೆ ಅಂಥ ಪುಸ್ತಕದಿಂದ ಕನ್ನಡಿಗರಿಗೆ ಸಾಕಾದಷ್ಟು ಪ್ರಯೋಜನವಾಗುತ್ತದೆಯೇ ಎಂಬ ಪ್ರಶ್ನೆ ಕೆಲಸಕ್ಕೆ ಕೈಹಾಕಿದೊಡನೆಯೇ ನನ್ನನ್ನು ಕಾಡಲಾರಂಭಿಸಿತು. ಆ ಮಿತಿಯಲ್ಲಿ ಬರೆಯುವವರು ತಮ್ಮ ಓದುಗರಲ್ಲಿ ಷೇಕ್ಸ್‌ಪಿಯರನ ಕೃತಿಗಳ ಪರಿಚಯ- ಓದಿದ್ದರಿಂದಾಗಲೀ ಕೇಳಿದ್ದರಿಂದಾಗಲೀ - ತಕ್ಕಮಟ್ಟಿಗೆ ಇದೆಯೆಂದು ನಿರೀಕ್ಷಿಸ ಬೇಕಾಗುತ್ತದೆ" (ಬಿನ್ನಹ, ಪುಟ 9)

1962ರಲ್ಲಿ ಪ್ರಕಟವಾದ ಈ ಕೃತಿ ಗುಣ-ಮೌಲ್ಯ-ಸ್ವರೂಪಗಳಲ್ಲಿ ವಿಮರ್ಶೆಯ ಸಾಲಿಗೆ ಸೇರಬೇಕಾದದ್ದು. ಮೂರ್ತಿರಾಯರ ಗುರುಗಳು ಬಿ.ಎಂ. ಶ್ರೀಯವರು ಇತರ ಭಾಷೆ ದೇಶ-ಸಾಹಿತ್ಯ-ವಿಶೇಷತಃ ಇಂಗ್ಲೀಷ್ ಭಾಷೆಯಿಂದ ಸಾಹಿತ್ಯ ಕೃತಿಗಳು, ವಿಮರ್ಶೆಗಳು ಕನ್ನಡಕ್ಕೆ ಬ(ತ)ರಬೇಕೆಂದು ಹಂಬಲಿಸಿದ್ದರು. ಆ ಕನಸು ಅವರ ಶಿಷ್ಯರಾದ ಮೂರ್ತಿರಾಯರಿಂದ ನನಸಾಯಿತು. ಈ ಗ್ರಂಥ ಮಾಲೆಯ ಪ್ರಧಾನ ಸಂಪಾದಕರಾದ ಶ್ರೀ ಕುವೆಂಪುರವರೇ ಸ್ವತಃ ಈ ವಿಮರ್ಶನ ಗ್ರಂಥಕ್ಕೆ ವಿದ್ವತ್ಪೂರ್ಣವೂ ವಿಮರ್ಶಾತ್ಮಕವೂ ಆದ ಮುನ್ನುಡಿ ಬರೆದಿದ್ದಾರೆ.

ಮೂರ್ತಿರಾಯರನ್ನು ಅತ್ಯಂತ ಶ್ರೇಷ್ಠ ವಿಮರ್ಶಕರ ಸಾಲಿಗೆ ಸೇರಿಸಿದ ಈ ಕೃತಿ ನವೋದಯ ಕಾಲದ ಅತ್ಯಂತ ಘನ ವಿದ್ವಾಂಸರ ವಿಭಿನ್ನ ಕೊಡುಗೆ. ಎ.ಆರ್. ಕೃಷ್ಣಶಾಸ್ತ್ರಿಗಳವರ 'ಬಂಕಿಮಚಂದ್ರ'ದೊಂದಿಗೆ ಅಥವಾ 'ಭಾಸಕವಿ' ಯೊಂದಿಗೆ ಈ ಕೃತಿಯನ್ನು ಹೋಲಿಸಬಹುದಾಗಿದೆ. ಷೇಕ್ಸ್‌ಪಿಯರನ ಕೃತಿ ಪ್ರಪಂಚ (ಸಾಹಿತ್ಯ ಲೋಕ) ವನ್ನು ಪ್ರವೇಶಿಸಲು ನಮಗೊಂದು ಪೂರ್ವಸಿದ್ಧತೆ ಮಾಡಿಕೊಡುತ್ತಾರೆ. ಷೇಕ್ಸ್‌ಪಿಯರನ ಜೀವನ ಚರಿತ್ರೆ ಹಾಗೂ ಅವನಿಗಿಂತ ಹಿಂದಿನ ನಾಟಕಗಳ ಬಗ್ಗೆ 49 ಪುಟಗಳಷ್ಟು ಹಿನ್ನೆಲೆಯನ್ನು ನೀಡುತ್ತಾರೆ. ಇದರಿಂದಾಗಿ ಷೇಕ್ಸ್‌ಪಿಯರನ ಸ್ಥಾನ ಇಂಗ್ಲೀಷ್ ಸಾಹಿತ್ಯದಲ್ಲಿ ಎಲ್ಲಿ, ಏನು, ನಾಟಕ ಸಾಹಿತ್ಯದ ವಿಕಾಸದ ಘಟ್ಟಗಳೇನು ಎಂಬುದರ ಬಗ್ಗೆ ನಮಗೊಂದು ಸ್ಪಷ್ಟ ಚಿತ್ರಣ ಸಿಗುತ್ತದೆ.

ಎರಡು ಕವನ, 154 ಸಾನೆಟ್ಟುಗಳು ಹಾಗೂ 21 ನಾಟಕಗಳನ್ನು ಮೂರ್ತಿರಾಯರು ಇಲ್ಲಿ ವಿಮರ್ಶೆಗೆ ಆಯ್ಕೆ ಮಾಡಿಕೊಂಡಿದ್ದಾರೆ. ಪ್ರತಿಯೊಂದು ನಾಟಕವನ್ನು ಕುರಿತು ಬರೆಯುವಾಗ ಒಂದು ಕ್ರಮಬದ್ಧವಾದ, ವ್ಯವಸ್ಥಿತವಾದ ಶೈಲಿಯನ್ನು ಅಳವಡಿಸಿ ಕೊಂಡಿದ್ದಾರೆ. ಪೀಠಿಕೆಯಲ್ಲಿ ಷೇಕ್ಸ್‌ಪಿಯರ್ ತನ್ನ ನಾಟಕದ ವಸ್ತುವನ್ನು ತೆಗೆದುಕೊಂಡ ಆಕರ, ಕಾಲವನ್ನು ಕೊಟ್ಟಿದ್ದಾರೆ. ಅನಂತರ ಮುಂದಿನ ಹಂತದಲ್ಲಿ ಕಥಾ ಸಂವಿಧಾನವನ್ನು ಕೊಟ್ಟಿದ್ದಾರೆ. ಇದರಿಂದಾಗಿ ನಾಟಕದ ಪಾತ್ರಗಳು, ಸನ್ನಿವೇಶಗಳು ಓದುಗರಿಗೆ ಚೆನ್ನಾಗಿ ಅರ್ಥವಾಗಿ ಮುಂದಿನ ವಿಮರ್ಶೆ ಸುಲಭಗ್ರಾಹ್ಯವಾಗುತ್ತದೆ. ಮುಂದಿನ ಹಂತದಲ್ಲಿ ನಾಟಕದ ವಿಮರ್ಶೆಯಿದೆ. ಸೂಕ್ತ ಕಂಡ ಕಡೆಯಲ್ಲಿ ನಾಟಕದ ಉದ್ಧೃತ ಭಾಗಗಳ ಉಲ್ಲೇಖಗಳಿವೆ. ನಾಟಕದ ವಿಮರ್ಶೆಯ ಕೊನೆಯಲ್ಲಿ ಒಂದು ಉಪಸಂಹಾರವಿದೆ. ಇಲ್ಲಿಯ ಒಂದು ವೈಶಿಷ್ಟ್ಯ ಎಂದರೆ, ಷೇಕ್ಸ್‌ಪಿಯರ್ ಕೃತಿಗಳನ್ನು ಕುರಿತು ಬಂದಿರುವ

ವಿಪುಲ ಪ್ರಮಾಣದ ವಿಮರ್ಶೆಗಳನ್ನು ಅಧ್ಯಯನ ಮಾಡಿ ಅರಗಿಸಿಕೊಂಡ ಮೂರ್ತಿರಾಯರು ಅವುಗಳ ಪ್ರಭಾವದ ಛಾಯೆಯಲ್ಲಿ ಷೇಕ್ಸ್‌ಪಿಯರ್ ಕೃತಿಗಳನ್ನು ಅರ್ಥ ಮಾಡಿಕೊಂಡು ವಿಮರ್ಶೆ ಮಾಡಿದ್ದಾರೆ. ಯಾವೊಬ್ಬ ವಿಮರ್ಶಕನ ಹೆಸರನ್ನೇ ಆಗಲಿ, ಅಥವಾ ವಿಮರ್ಶೆಯ ಭಾಗಗಳನ್ನಾಗಲೀ ಉಲ್ಲೇಖ ಮಾಡಿಲ್ಲ. ಯಾವೊಬ್ಬ ವಿಮರ್ಶಕನ ಹೇಳಿಕೆಯನ್ನೂ ಉಲ್ಲೇಖಿಸಿ ಅದರ ಪ್ರತಿಪಾದನೆಗಾಗಿ, ಖಂಡನೆಗಾಗಿ ಮೂರ್ತಿರಾಯರು ಹೊರಟಿಲ್ಲ. ಹೀಗಾಗಿ ಓದುಗರಿಗೆ ಒಂದು ಖಚಿತವಾದ, ನಿರ್ದಿಷ್ಟವಾದ ವಿಮರ್ಶಾತ್ಮಕವಾದ, ನಿಚ್ಚಳವಾದ ದಾರಿ ಕಾಣಿಸುತ್ತದೆ. ಓದುಗ ಒಂದು ಖಚಿತ ನಿಲುವಿಗೆ ಬರುತ್ತಾನೆ. ಯಾವುದೇ ದ್ವಂದ್ವ, ಅನಿರ್ದಿಷ್ಟತೆ ಮುಂತಾದ ಗೊಂದಲಕ್ಕೀಡಾಗುವುದಿಲ್ಲ.

ವಿಮರ್ಶಾ ಭಾಗದಲ್ಲಿ ಮೂರ್ತಿರಾಯರು ಪಾತ್ರ , ಘಟನೆ, ಷೇಕ್ಸ್‌ಪಿಯರ್‌ನ ಕಾವ್ಯ ಶೈಲಿ, ಸಾಹಿತ್ಯಗುಣ, ವಿವಾದಾಸ್ಪದ ಸಂಗತಿಗಳ ಕಿರು ವಿಶ್ಲೇಷಣೆ, ತೌಲನಿಕ ನಿರೂಪಣೆ ಇತ್ಯಾದಿಗಳನ್ನು ಚರ್ಚೆ ಮಾಡಿದ್ದಾರೆ. ಪಾತ್ರಗಳನ್ನು ನಾಟಕದ ಸನ್ನಿವೇಶಗಳಿಗೆ ಅನುಗುಣವಾಗಿ, ಘಟನೆಗಳ ಹಿನ್ನೆಲೆಯಲ್ಲಿ ವಿಮರ್ಶೆ ಮಾಡಿದ್ದಾರೆ. ಈ ರೀತಿಯಾಗಿ ನಾಟಕ ವಿಮರ್ಶೆ ಒಂದು ಶಿಸ್ತಿನಲ್ಲಿ ಸಾಗುವಂತೆ ಮಾಡಿದ್ದಾರೆ.

ಷೇಕ್ಸ್‌ಪಿಯರ್ ಸಮಗ್ರ ಕೃತಿಯನ್ನು ನಮ್ಮ ಅಧ್ಯಯನದ ಅನುಕೂಲಕ್ಕೆ ಐದು ವಿಭಾಗಗಳನ್ನಾಗಿ ಮಾಡಿಕೊಳ್ಳಬಹುದು :-

1. ಹಿನ್ನೆಲೆ: ಈ ವಿಭಾಗದಲ್ಲಿ ಮೂರ್ತಿರಾಯರು "ಷೇಕ್ಸ್‌ಪಿಯರ್‌ಗಿಂತ ಹಿಂದಿನ ನಾಟಕ" ಎಂಬ ಅಧ್ಯಾಯದಲ್ಲಿ ಆ ಕಾಲದ ನಾಟಕ, ರಂಗಭೂಮಿ, ಅವುಗಳ ಮೇಲೆ ಪ್ರಾಚೀನ ಸಾಹಿತ್ಯದ ಪ್ರಭಾವ (ನಮ್ಮ ಸಂಸ್ಕೃತ ನಾಟಕಗಳಂತೆ). ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗ ಮಾಡದ ಯುವಕರು ನಾಟಕ ಕಲೆಗೆ ನೀಡಿದ ಕೊಡುಗೆ ಇವುಗಳ ಚರ್ಚೆ ಇದೆ. (ಪುಟ 17)

2. ಕವಿಚರಿತ್ರೆ: ಈ ವಿಭಾಗದಿಂದಲೇ ಕೃತಿ ಆರಂಭದಲ್ಲಿ "ಷೇಕ್ಸ್‌ಪಿಯರ್‌ನ ಜೀವನ ಚರಿತ್ರೆ" ಎಂಬ ಅಧ್ಯಾಯದಲ್ಲಿ ಷೇಕ್ಸ್‌ಪಿಯರ್‌ನ ಕೌಟುಂಬಿಕ ಹಿನ್ನೆಲೆ, ಬಾಲ್ಯ, ವಿದ್ಯಾಭ್ಯಾಸ, ಸಾಂಸಾರಿಕ ಜೀವನ, ಅವನ ಕಾಲದ ರಂಗಭೂಮಿ, ನಾಟಕ ಸಾಹಿತ್ಯ ಪ್ರದರ್ಶನಗಳ ಹಿನ್ನೆಲೆ, ಮನೋಧರ್ಮ, ನಾಟಕ ರಚನೆಯ ಹಿನ್ನೆಲೆ ಇತ್ಯಾದಿ ವಿವರಗಳಿವೆ. (ಪುಟ 32)

3. ಕಾವ್ಯ ವಿಮರ್ಶೆ : ಷೇಕ್ಸ್‌ಪಿಯರ್ ಎಂದೊಡನೆಯೇ ಸಾಮಾನ್ಯ ಓದುಗರಲ್ಲಿ ನಾಟಕಕಾರ ಷೇಕ್ಸ್‌ಪಿಯರ್ ಸ್ಮೃತಿಯಾಗುತ್ತಾನೆಯೇ ಹೊರತು, ಕವಿ ಷೇಕ್ಸ್‌ಪಿಯರ್ ಸ್ಮೃತಿಯಾಗುವುದಿಲ್ಲ. ಇಂಗ್ಲೀಷ್ ಸಾಹಿತ್ಯವನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡದ ಸಾಹಿತ್ಯ ಪ್ರೇಮಿಗಳನ್ನು ಗಮನದಲ್ಲಿ ಇರಿಸಿಕೊಂಡು ಬರೆದಿರುವ ಕಾರಣ, ಮೊದಲಿಗೆ ಮೂರ್ತಿರಾಯರು ಷೇಕ್ಸ್‌ಪಿಯರ್ ಕವಿಯನ್ನು ಪರಿಚಯ ಮಾಡಿಸಿ ಅನಂತರ ನಾಟಕ ಕರ್ತೃ ಷೇಕ್ಸ್‌ಪಿಯರನನ್ನು ಪರಿಚಯ ಮಾಡಿಕೊಡುತ್ತಾರೆ. ಎರಡು ಕಾವ್ಯ ಹಾಗೂ 154 ಸಾಹಿತ್ಯಗಳ ಪರಿಚಯ, ಅವುಗಳ ವಸ್ತು, ವಿಭಾಗ, ಆ ಛಂದಸ್ಸಿನ ಮೂಲ. ಇದೇ ಛಂದಸ್ಸಿನಲ್ಲಿ ಬರೆದ ಇತರ ಕವಿಗಳು, ಅಲಂಕಾರ, ಇಲ್ಲಿ ಮುದ್ರಿತವಾಗಿರಬಹುದಾದ, ಧ್ವನ್ಯಾತ್ಮಕವಾಗಿ ಗುಪ್ತಗಾಮಿನಿಯಾಗಿ ಹರಿಯುತ್ತಿರುವ ಕವಿಯ ವೈಯಕ್ತಿಕ ಜೀವನದ ವಿಚಾರಗಳು ಇತ್ಯಾದಿ ವಿವರಗಳನ್ನು ಚರ್ಚಿಸಲಾಗಿದೆ. (ಪುಟ 16) ಗಮನಾರ್ಹ

ಅಂತಹವರ ಇಂಗ್ಲೀಷ್ ಸಾಹಿತ್ಯದಲ್ಲಿ ಬಹು ಪ್ರಸಿದ್ಧನಾದ ಆಯಾಂಬಿಕ್. ಪೆಂಟಾಮೀಟರ್ ಛಂದಸ್ಸನ್ನು ಕುರಿತು ಒಂದು ವಿವರಣೆಯನ್ನೂ ಕೊಡಲಾಗಿದೆ.

(ಪುಟ 50–51).

4. ನಾಟಕಗಳ ವಿಮರ್ಶೆ : ಓದುಗನಿಗೆ ಸಾಕಷ್ಟು ಅರ್ಹತೆ ಪ್ರೌಢಿಮೆಗಳನ್ನು ಒದಗಿಸಿದ ಮೇಲೆ ಮೂರ್ತಿರಾಯರು ನಮ್ಮನ್ನು (ಓದುಗನನ್ನು) ಷೇಕ್ಸ್‌ಪಿಯರನ ನಾಟಕ ಪ್ರಪಂಚಕ್ಕೆ ಕರೆದೊಯ್ಯುತ್ತಾರೆ. ಈ ವಿಭಾಗ ಹಿಂದಿನ ಮೂರು ವಿಭಾಗಗಳ ಮುಂದುವರೆದ ಭಾಗ; ಅಥವಾ ಹಿಂದಿನ ಮೂರು ವಿಭಾಗಗಳನ್ನು 'ಪೂರ್ವರಂಗ' ಅಥವಾ 'ನೇಪಥ್ಯ'ವೆಂದೂ ಈ ವಿಭಾಗವನ್ನು 'ಉತ್ತರರಂಗ'ವೆಂದೂ ಕರೆಯಬಹುದು. ಹಿಂದೆ ಹೇಳಿದಂತೆ ಈ ವಿಭಾಗದಲ್ಲಿ 21 ನಾಟಕಗಳನ್ನು ವಿಮರ್ಶೆ ಮಾಡಿ, ಪರಿಚಯ ಮಾಡಿಕೊಡುತ್ತಾರೆ. ಈ ಕುರಿತು ಮುಂದೆ ಚರ್ಚಿಸಲಾಗುವುದು (ಪುಟ 315)

5. ಉಪಸಂಹಾರ : ವಾಸ್ತವವಾಗಿ ಪ್ರಸ್ತುತ ವಿಮರ್ಶನಗ್ರಂಥ ಪೂರ್ವಾರ್ಧ ಮಾತ್ರ. ಅರ್ಥಾತ್ ಇದು ಮೊದಲ ಭಾಗ. ಅದ್ದರಿಂದ ಒಂದು ರೀತಿಯಲ್ಲಿ ಅಪೂರ್ಣ ಕೃತಿ. "ಇದಲ್ಲದೆ ಮತ್ತೊಂದು ಹೊತ್ತಿಗೆ, ಇದಕ್ಕೆ ಪೂರಕವಾಗಿ, ಅವರಿಂದಲೇ ಬರಲಿದೆ. ಮುಂದಿನ ಸಂಪುಟದಲ್ಲಿ ಉಳಿದ ರುದ್ರ ನಾಟಕಗಳ ಪರಿಚಯವನ್ನೂ ಕವಿಕಾವ್ಯದ ಸಮಗ್ರ ವಿಮರ್ಶೆಯನ್ನೂ ಮಾಡಿಕೊಡಲಿದ್ದಾರೆ". ಎಂದು ಪ್ರಧಾನ ಸಂಪಾದಕರೂ ಮತ್ತು ಪ್ರಕಟಣಾ ಸಮಿತಿಯ ಅಧ್ಯಕ್ಷರೂ ಆದ ಶ್ರೀ ಕುವೆಂಪುರವರು ತಮ್ಮ ಮುನ್ನುಡಿಯಲ್ಲಿ (ಪುಟ VIII) ಹೇಳಿದ್ದಾರೆ. ಅಲ್ಲದೆ ಸ್ವತಃ ಮೂರ್ತಿರಾಯರು "ಇದಕ್ಕಾಗಿ ಪುಟಗಳ ಮಿತಿಯನ್ನು ಸುಮಾರು ಎಂಟುನೂರಕ್ಕೆ ಹೆಚ್ಚಿಸಿಕೊಂಡು ಪುಸ್ತಕವನ್ನು ನಾನೂರು ಪುಟಗಳ ಎರಡು ಭಾಗಗಳಾಗಿ ಪ್ರಕಟಿಸುವುದು ಒಳ್ಳೆಯದು ಎನ್ನಿಸಿತು. ಸುಮಾರು ಇನ್ನೊಂದು ವರ್ಷದಲ್ಲಿ ಹೊರಬೀಳಲಿರುವ ಈ ಪುಸ್ತಕದ ಉತ್ತರ ಭಾಗದ ಕೊನೆಯಲ್ಲಿ ಷೇಕ್ಸ್‌ಪಿಯರ್ ವಿಮರ್ಶೆ ಹೇಗೆ ಬೆಳೆದಿದೆಯೆಂಬುದನ್ನು ತಿಳಿಸಿ ಮುಖ್ಯವಾಗಿ ಓದಬೇಕಾದ ವಿಮರ್ಶಾ ಗ್ರಂಥಗಳ ಪಟ್ಟಿಯೊಂದನ್ನು ಕೊಡಬೇಕೆಂದಿದ್ದೇನೆ. ಅಗಲೇ ಷೇಕ್ಸ್‌ಪಿಯರನ ರಂಗಸ್ಥಳದ ಮೇಲೂ ಒಂದು ಅಧ್ಯಾಯವನ್ನು ಕೊಡಲಿದ್ದೇನೆ. 'ಹ್ಯಾಮ್ಲೆಟ್' ನಾಟಕವನ್ನು ಕುರಿತ ಅಧ್ಯಾಯಕ್ಕೆ ಟೀಕೆಯಾಗಿ ಈ ವಿಷಯವನ್ನು ವಿವರಿಸಬೇಕೆಂದಿದ್ದೇನೆ" (ಬಿನ್ನಹ ಪುಟ XI, XII, XIII) ಎಂದು ಹೇಳಿದ್ದರೂ, ಕನ್ನಡಿಗರ ದುರ್ದೈವದಿಂದ ಈ ಉತ್ತರ ಭಾಗ ಬರಲಿಲ್ಲ. ಆದರೆ ಸುದೈವವಶಾತ್ ಅನುಬಂಧದ ಮೂರು ಅಧ್ಯಾಯಗಳು ಕೊಂಚ ಮಟ್ಟಿಗೆ ನಮ್ಮ ನಿರಾಶೆಯನ್ನು ದೂರವಾಗಿಸಿವೆ.

**ನಾಟಕಗಳ ವಿಮರ್ಶೆ :**

ಈ ವಿಭಾಗದಲ್ಲಿ ಮೂರ್ತಿರಾಯರು ಒಂದು ವಿಶಿಷ್ಟವಾದ ಕ್ರಮವನ್ನು ಅನುಸರಿಸಿದ್ದಾರೆ. ಈ ಕ್ರಮದಿಂದಾಗಿ ಷೇಕ್ಸ್‌ಪಿಯರನ ನಾಟಕಗಳ ಸಮಗ್ರ ಪರಿಚಯವಾಗುತ್ತದೆ. ಇಲ್ಲಿ ಮೂರ್ತಿರಾಯರು ವಿಮರ್ಶೆಗಿಂತಲೂ ವಾಚಕರಿಗೆ ನಾಟಕಗಳನ್ನು ಚೆನ್ನಾಗಿ ಮನದಟ್ಟು ಮಾಡಿಕೊಡಬೇಕೆನ್ನುವ ಉದ್ದೇಶವನ್ನು ಗಮನದಲ್ಲಿರಿಸಿಕೊಂಡಂತೆ ಕಾಣುತ್ತದೆ. ಅದಕ್ಕಾಗಿ ಕೆಲವು ವಿಶಿಷ್ಟ ಸನ್ನಿವೇಶಗಳನ್ನು ವಿಶ್ಲೇಷಣೆ ಮಾಡುತ್ತಾರೆ. ಅಂತಹ ಘಟನೆ ಅಥವಾ ಸನ್ನಿವೇಶಗಳು ಇತರ ನಾಟಕಗಳಲ್ಲಿ ಹೇಗೆ ಸಾದೃಶ್ಯವನ್ನು

ಹೊಂದಿವೆ ಅಥವಾ ಭಿನ್ನವಾಗಿವೆ. ಎಂದೂ ಉಲ್ಲೇಖಿಸುತ್ತಾರೆ. ಈ ವಿಭಾಗವನ್ನು ನಮ್ಮ ಅಭ್ಯಾಸದ ಅನುಕೂಲತೆಗೆ ಹೀಗೆ ವಿಂಗಡಿಸಿಕೊಳ್ಳಬಹುದು.

(ಅ) **ಪೀಠಿಕೆ :** ಪ್ರತಿಯೊಂದು ನಾಟಕದ ವಿಮರ್ಶೆಯ ಆರಂಭದಲ್ಲಿ ಒಂದು ಕಿರು ವಿಮರ್ಶೆ ಇದೆ. ಇದರಲ್ಲಿ ಷೇಕ್ಸ್‌ಪಿಯರ್ ಮಾಡಿಕೊಂಡ ಮಾರ್ಪಾಟು, ಹೆಚ್ಚುವರಿ ಪಾತ್ರಗಳು, ಆ ನಾಟಕ ರಚನೆಯ ಕಾಲ, ಆ ನಾಟಕದ ಮೂಲ, ಅನಂತರ ವಸ್ತು ಇವುಗಳನ್ನು ಸಂಕ್ಷಿಪ್ತವಾಗಿ ಹೇಳಿದ್ದಾರೆ.

(ಆ) **ಕಥಾ ಸಾರಾಂಶ :** ಅದಾ ನಾಟಕದ ಕಥೆಯನ್ನು ಗದ್ಯರೂಪದಲ್ಲಿ ನೀಡಿದ್ದಾರೆ. ಇದು ಮುಂದಿನ ನಾಟಕದ ವಿಮರ್ಶೆಯನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಲು ಸಹಾಯವಾಗುತ್ತದೆ.

(ಇ) **ವಿಮರ್ಶೆ:** ಈ ವಿಭಾಗದಲ್ಲಿ ನಾಟಕದ ವಿಮರ್ಶೆಯಿದೆ. ಇದರಲ್ಲಿ ಪಾತ್ರ, ಘಟನೆ, ಸನ್ನಿವೇಶಗಳ ವಿಶ್ಲೇಷಣೆಯಿದೆ. ಒಂದು ನಾಟಕದ ಪಾತ್ರ ಅಥವಾ ಸನ್ನಿವೇಶವನ್ನು ಅಗತ್ಯವಿದ್ದಲ್ಲಿ ಮತ್ತೊಂದು ನಾಟಕದ ಪಾತ್ರ ಅಥವಾ ಸನ್ನಿವೇಶದೊಂದಿಗೆ ಹೋಲಿಸಿ ವಿಮರ್ಶಿಸಿದ್ದಾರೆ. ಕೆಲವು ಕಡೆ ಅಂತರವನ್ನೂ ಗುರುತಿಸಿದ್ದಾರೆ. ಷೇಕ್ಸ್‌ಪಿಯರ್‌ನ ಕಾವ್ಯಶೈಲಿ, ಸಾಹಿತ್ಯಗುಣ, ಆ ಕಾಲದ ಪ್ರೇಕ್ಷಕರ ಅಭಿರುಚಿ- ಇತ್ಯಾದಿಗಳನ್ನೂ ಸೋದಾಹರಣವಾಗಿ ನಿರೂಪಿಸಿದ್ದಾರೆ. ಮೂರ್ತಿರಾಯರು ಷೇಕ್ಸ್‌ಪಿಯರ್‌ನ ನಾಟಕಗಳ ಪಾತ್ರಗಳನ್ನು ನಿಷ್ಪಾಕ್ಷಿಕವಾಗಿ ವಿಮರ್ಶಿಸಿದ್ದಾರೆ. ಷೇಕ್ಸ್‌ಪಿಯರ್ ಮಹಾಕವಿ ಎಂಬ ಅಂಧಾಭಿಮಾನ ಅವರದಲ್ಲ. ಅವನ ನಾಟಕದ ಪಾತ್ರಗಳನ್ನು ವಿಮರ್ಶಿಸುವಾಗ ಅವರು ಮುಕ್ತವಾಗಿ ವಿಮರ್ಶಿಸಿದ್ದಾರೆ. ನಿದರ್ಶನವಾಗಿ ಒಂದೆರಡು ಉಲ್ಲೇಖಗಳು -

"ಲಿಯೋನಾಟೋ ತನ್ನ.....ಮತ್ತು ಅವನ ಸೋದರ ಬಹುಮಟ್ಟಿಗೆ ಹೆಸರುಗಳು ಮಾತ್ರ. ಡಾನ್ ಜಾನ್‌ನ ವಿಷಯವೂ ಹೆಚ್ಚು ಹೇಳಬೇಕಾದ್ದಿಲ್ಲ. (290)

ಉದಾತ್ತತೆಯಲ್ಲೂ ಗಾಂಭೀರ್ಯದಲ್ಲೂ ಅಲಿವಿಯ ವಯೊಲಳ ಮಟ್ಟಕ್ಕೆ ಬರಲಾರಳು" (361)

ಇನ್ನು ಕೆಲವು ಷೇಕ್ಸ್‌ಪಿಯರ್‌ನ ಪಾತ್ರಗಳನ್ನು ಹೇಗೆ ಪೂರ್ವಗ್ರಹಪೀಡಿತರಾಗಿ ಕಂಡಿದ್ದಾರೆಂದು ಪ್ರಾತಿನಿಧಿಕವಾಗಿ ತೋರಿಸಬಹುದು.

ಒಟ್ಟು ಅವನ ಮೂವತ್ತಾರು ನಾಟಕಗಳಲ್ಲಿಯ ಪಾತ್ರಗಳು ನಮ್ಮ ಮುಂದೆ ಜೀವಂತ ವಿಶ್ವವನ್ನೇ ತೆರೆದಿರಿಸುವುವು. ಅವುಗಳ ವಾಸ್ತವತೆ ಅಪ್ರತಿಮ. (ಸಂಕ್ಷಿಪ್ತ ಇಂಗ್ಲೀಷ್ ಸಾಹಿತ್ಯ ಚರಿತ್ರೆ : ಪ್ರೊ. ಎಸ್. ರಮಾನಂದ (ಪುಟ 58)

(ಈ) **ಉಪಸಂಹಾರ :** ಇದರಲ್ಲಿ ನಾಟಕದ ನಾಯಕ ಹಾಗೂ ನಾಟಕದ ಬಗ್ಗೆ ಒಂದೆರಡು ಮಾತುಗಳಿವೆ. ನಾಟಕ ಪ್ರಕಾರ ತನ್ನ ಲಕ್ಷಣಗಳನ್ನು ಒಳಗೊಂಡಿದೆಯೇ ಇಲ್ಲವೇ ಎಂಬುದನ್ನು ವಿವೇಚಿಸಿದ್ದಾರೆ.

ಈ ಕೃತಿಯ ಬಗ್ಗೆ ಬರೆಯುತ್ತಾ ಡಾ. ಹಾ.ಮಾ. ನಾಯಕರವರು ಹೇಳಿರುವ ಮಾತುಗಳು ಪೂರ್ವಾರ್ಧ ಸೂಕ್ತವಾಗಿವೆ:

"ಈ ಪುಸ್ತಕ (ಷೇಕ್ಸ್‌ಪಿಯರ್) ಅಪೂರ್ಣವಾಗಿದ್ದು ಅದರ ಉತ್ತರ ಭಾಗವನ್ನು ಮೂರ್ತಿರಾಯರು ಇನ್ನೂ ಬರೆಯಬೇಕಾಗಿದೆ. ಅವರು ಅದನ್ನು ಮುಗಿಸದಿದ್ದರೆ ಅದು

ಕನ್ನಡಕ್ಕಾಗುವ ನಷ್ಟ. ಏಕೆಂದರೆ ಆ ಕೆಲಸವನ್ನು ಅವರಿಗಿಂತ ಸಮರ್ಪಕವಾಗಿ ನಿರ್ವಹಿಸಬಲ್ಲವರು ಈಗ ಯಾರೂ ಕಾಣುತ್ತಿಲ್ಲ" (ಸಂಪರ್ಕ 1982 ಪುಟ 21)

ಮುನ್ನುಡಿಯಲ್ಲಿ ಶ್ರೀ ಕುವೆಂಪುರವರು ಹೇಳಿರುವ "ಪಾಶ್ಚಾತ್ಯ ಕಾವ್ಯಗಳನ್ನು ನಮ್ಮ ಜನರಿಗೆ ನಮ್ಮ ಭಾಷೆಯಲ್ಲಿ ಪರಿಚಯ ಮಾಡಿಕೊಡುವ ದಿಶೆಯಲ್ಲಿ ಶ್ರೀಯುತ ಎ.ಎನ್. ಮೂರ್ತಿರಾಯರ ಈ ಷೇಕ್ಸ್‌ಪಿಯರ್ ಕೃತಿ ಅವರು ಇಟ್ಟ ಒಂದು ದೊಡ್ಡ ಹೆಜ್ಜೆಯಾಗಿದೆ....ಅವರು ಕನ್ನಡದಲ್ಲಿ ಬರೆದಿರುವ ಈ ಗ್ರಂಥ ಅವರ ಹಿರಿಯ ಕಾಣಿಕೆಯೇ ಆಗಿದೆ" (VIII) ಎಂಬ ಮಾತು ಒಪ್ಪುವಂತಹದು.



ಮೂರ್ತಿರಾಯರ ಷೇಕ್ಸ್‌ಪಿಯರ್ ವಿಮರ್ಶಾಕೃತಿಯೊಂದಿಗೆ ಹೋಲಿಸಬಹುದಾದ ಮತ್ತೊಂದು ಕೃತಿ ಎಂದರೆ ಎ.ಆರ್. ಕೃಷ್ಣಶಾಸ್ತ್ರಿಗಳ "ಬಂಕಿಮಚಂದ್ರ" (1960) ಮೂರ್ತಿರಾಯರು ಷೇಕ್ಸ್‌ಪಿಯರ್ ಕೃತಿಗಳನ್ನು ಮೂಲದಲ್ಲಿ ಓದಿ ಅಧ್ಯಯನ ಮಾಡಿದವರು, ಬೋಧಿಸಿದವರು. ಆದರೆ ಕೃಷ್ಣಶಾಸ್ತ್ರಿಗಳು ಬೋಧನೆ ಮಾಡಿದ್ದು ಕನ್ನಡ. ಇದಕ್ಕೆ ಪೂರಕವಾಗಿ ಅವರು ಅಧ್ಯಯನ ಮಾಡಿದ್ದು ಸಂಸ್ಕೃತ ಸಾಹಿತ್ಯ. ಆದರೆ ಬಂಗಾಳಿ ಭಾಷೆ ಹಾಗೂ ಸಾಹಿತ್ಯಗಳನ್ನು ಅವರು ಆಸಕ್ತಿಯಿಂದ ಅಧ್ಯಯನ ಮಾಡಿದವರು. ಮೂರ್ತಿರಾಯರ ಷೇಕ್ಸ್‌ಪಿಯರ್‌ನಂತೆ ಇದೂ ಒಂದು ಬೃಹತ್ ಗ್ರಂಥ. (ಪುಟ 500) ಇದಕ್ಕೂ ಶ್ರೀ ಕುವೆಂಪುರವರೇ ಮುನ್ನುಡಿ ಬರೆದಿದ್ದಾರೆ. ಮೂರ್ತಿರಾಯರ ಕೃತಿ ಪೂರ್ವಾರ್ಧವಾದರೆ ಇದು ಸಮಗ್ರ ಕೃತಿ. ಮೂರ್ತಿರಾಯರಿಗೆ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗವು ಈ ಕೃತಿಯನ್ನು (250 ಪುಟಗಳ ವ್ಯಾಪ್ತಿಯಲ್ಲಿ) ಬರೆದು ಕೊಡುವಂತೆ ಕೇಳಿತ್ತು. ಆದರೆ ಕೃಷ್ಣಶಾಸ್ತ್ರಿಗಳ ಕೃತಿ ಅವರು ಕೇಳಿಕೊಂಡ ಮೇರೆಗೆ ಪ್ರಸಾರಾಂಗವು ಪ್ರಕಟಿಸಿತು. ಮೂರ್ತಿರಾಯರು ತಮ್ಮ ಕೃತಿಯನ್ನು ಬರೆಯುವಾಗ ಕೃಷ್ಣಶಾಸ್ತ್ರಿಗಳ ಕೃತಿಯನ್ನೇ ಬಹುಮಟ್ಟಿಗೆ ಅನುಸರಿಸಿದಂತೆ ತೋರುತ್ತದೆ. ಕೃಷ್ಣಶಾಸ್ತ್ರಿಗಳೂ ಸಹ ತಮ್ಮ ಕೃತಿಯ ಆರಂಭದಲ್ಲಿ ಬಂಕಿಮಚಂದ್ರನ ಹಿನ್ನೆಲೆಯಾಗಿ "ಬಂಗಾಳಿ ಸಾಹಿತ್ಯದ ಸಂಕ್ಷಿಪ್ತ ಚರಿತ್ರೆ" ಎಂಬ ಅಧ್ಯಾಯವನ್ನು (ಪುಟ 20) ಬರೆದಿದ್ದಾರೆ. ಮೂರ್ತಿರಾಯರು "ಷೇಕ್ಸ್‌ಪಿಯರ್‌ಗಿಂತ ಹಿಂದಿನ ನಾಟಕ" ಎಂಬ ಅಧ್ಯಾಯವನ್ನು (ಪುಟ 18) ಬರೆದಿದ್ದಾರೆ. ಕೃಷ್ಣಶಾಸ್ತ್ರಿಗಳು "ಬಂಕಿಮಚಂದ್ರನ ಸಂಕ್ಷಿಪ್ತ ಜೀವನ ಚರಿತ್ರೆ" ಎಂಬ ಅಧ್ಯಾಯದಲ್ಲಿ (ಪುಟ 07) ಬಂಕಿಮಚಂದ್ರನು ಹುಟ್ಟಿದಂದಿನಿಂದ ಮರಣ ಹೊಂದಿದ ದಿನದವರೆಗೆ ಅವನ ಜೀವನ, ಕುಟುಂಬ, ಶಿಕ್ಷಣ, ವೃತ್ತಿ, ಇತ್ಯಾದಿಗಳನ್ನು ಉಲ್ಲೇಖಿಸಿದ್ದಾರೆ. ಮೂರ್ತಿರಾಯರು "ಷೇಕ್ಸ್‌ಪಿಯರ್ ಜೀವನಚರಿತ್ರೆ" ಎಂಬ ಅಧ್ಯಾಯದಲ್ಲಿ (ಪುಟ 32) ಮೇಲ್ಕಂಡ ಅಂಶಗಳೊಂದಿಗೆ ಅವನ ಕಾಲದ ರಂಗಭೂಮಿ ಬೆಳೆದು ಬಂದ ಬಗೆ, ಷೇಕ್ಸ್‌ಪಿಯರ್‌ನ ಜೀವಿತದ ಕೊನೆಯ ದಿನಗಳು - ಇತ್ಯಾದಿ ವಿವರಗಳನ್ನು ಸುದೀರ್ಘವಾಗಿ ವಿವೇಚಿಸಿದ್ದಾರೆ. ಕೃತಿಗಳ ವಿಮರ್ಶೆಯಲ್ಲಿ ಎರಡೂ ಕೃತಿಗಳಿಗೂ ಅತ್ಯಂತ ನಿಕಟ ಸಾಮ್ಯವಿದೆ. ಪೀಠಿಕೆ-ಕಥೆ-ವಿಮರ್ಶೆ-ಈ ಮೂರು ವಿಭಾಗಗಳು ಎರಡೂ ಕೃತಿಗಳ ಸಾಮಾನ್ಯ ಲಕ್ಷಣ. ಆದರೆ ಕೃಷ್ಣಶಾಸ್ತ್ರಿಗಳು ಉದ್ಧೃತ ಭಾಗಗಳನ್ನು ಉಲ್ಲೇಖಿಸುವಾಗ ಮೂಲದ ಭಾಗಗಳನ್ನು ನೀಡದೆ ಕೇವಲ ಕನ್ನಡಾನುವಾದವನ್ನಷ್ಟೇ ನೀಡಿದ್ದಾರೆ. ಮೂರ್ತಿರಾಯರು ಅಗತ್ಯದ ಉದ್ಧೃತ ಭಾಗಗಳನ್ನು ಮೂಲದಲ್ಲಿಯೇ ಉಲ್ಲೇಖಿಸಿ ಅವುಗಳ ಕನ್ನಡಾನುವಾದವನ್ನು ಅನುಬಂಧದಲ್ಲಿ ನೀಡಿದ್ದಾರೆ.

ಕೃಷ್ಣಶಾಸ್ತ್ರಿಗಳು ಆರಂಭದಲ್ಲಿಯೇ "ಬಂಕಿಮಚಂದ್ರನ ಕವಿತೆಗಳು" ಎಂಬ 3ನೇ ಅಧ್ಯಾಯದಲ್ಲಿ (ಪುಟ 7) ಬಂಕಿಮಚಂದ್ರನ ಕವಿತೆಗಳನ್ನು ವಿಮರ್ಶಿಸಿದ್ದಾರೆ. ಮೂರ್ತಿರಾಯರೂ "ವೀನಸ್ ಮತ್ತು ಅಡೋನಿಸ್, ರೇಪ್ ಆಫ್ ಲುಕ್ರಿಸ್ ಮತ್ತು ಸಾನೆಟ್ಟುಗಳು" ಎಂಬ 3ನೇ ಅಧ್ಯಾಯದಲ್ಲಿ (ಪುಟ 16) ಷೇಕ್ಸ್‌ಪಿಯರರ ಕವಿತೆ ಕಾವ್ಯಗಳನ್ನು ವಿಮರ್ಶಿಸಿದ್ದಾರೆ. ಕೃಷ್ಣಶಾಸ್ತ್ರಿಗಳು 4ನೇ ಅಧ್ಯಾಯ "ಬಂಕಿಮಚಂದ್ರನು ಬರೆದ ಮೊದಲನೆಯ ಕಾದಂಬರಿ Rajmohan's wife (ರಾಜಮೋಹನನ ಹೆಂಡತಿ)" (ಪುಟ 13) ಮೂರ್ತಿರಾಯರು 4ನೇ ಅಧ್ಯಾಯ "ಮೊದಲ ನಾಲ್ಕು ಐತಿಹಾಸಿಕ ನಾಟಕಗಳು" (ಪುಟ 30). ಕೃಷ್ಣಶಾಸ್ತ್ರಿಗಳು ಬಂಕಿಮಚಂದ್ರನ ಛಂದಸ್ಸನ್ನು ಕುರಿತು "ಮೇಲೆ ಛಂದಸ್ಸಿನ ಛಾಯೆ ಬರುವಂತೆ ಮೂಲವನ್ನು ಅನುವಾದ ಮಾಡಿದೆ. ನಿರ್ದಿಷ್ಟವಾದ ನಿಯತವಾದ ಯಾವ ಛಂದಸ್ಸನ್ನೂ ಉಪಯೋಗಿಸಿಲ್ಲ"(ಪುಟ 29) ಎಂದು ಅಡಿಟಿಪ್ಪಣಿ ನೀಡಿದರೆ, ಮೂರ್ತಿರಾಯರು ಅಡಿಟಿಪ್ಪಣಿಯಲ್ಲಿ (ಪುಟ 50-51) ಅಯಾಂಬಿಕ್ ಪೆಂಟಾಮೀಟರ್‌ನ ಲಕ್ಷಣ ನೀಡಿದ್ದಾರೆ. ಕೃಷ್ಣಶಾಸ್ತ್ರಿಗಳು 'ಲಲಿತಾ' ಕಥನಕಾವ್ಯದ ಸಾರಾಂಶವನ್ನು ಒಂದು ಪ್ಯಾರಾದಲ್ಲಿ ನೀಡಿದ್ದಾರೆ. ಮೂರ್ತಿರಾಯರು ಪ್ರಾಸಂಗಿಕವಾಗಿ ಷೇಕ್ಸ್‌ಪಿಯರರ ಕಥನ ಕಾವ್ಯಗಳ ಸಾರಾಂಶವನ್ನು ಒಂದೊಂದು ವಾಕ್ಯದಲ್ಲಿ ನೀಡಿದ್ದಾರೆ. ಬಂಕಿಮಚಂದ್ರನು ಪದ್ಯದಿಂದ ಗದ್ಯಕ್ಕೆ ಹೊರಳಿರುವ ಬಗ್ಗೆ ಹೀಗೆ ಬರೆಯುತ್ತಾರೆ:

"ಬಂಕಿಮನು ಮುಂದೆ ಕವಿಯಶಃಪ್ರಾರ್ಥಿಯಾಗಿ ಪದ್ಯಕಾವ್ಯವನ್ನು ಬರೆಯುವ ಗೋಜಿಗೆ ಹೋಗಲಿಲ್ಲ, ಈಶ್ವರ ಚಂದ್ರಗುಪ್ತನು ಗದ್ಯದಲ್ಲಿ ಬರೆಯುವಂತೆ ಸೂಚನೆ ಕೊಟ್ಟನೆಂದು ಹೇಳುತ್ತಾರೆ. ಆದರೆ ಬಂಕಿಮನೇ ತನ್ನ ಬಲಾಬಲಗಳನ್ನು ಕಂಡುಕೊಂಡು, ಮುಂದೆ ಗದ್ಯದಲ್ಲಿ ಕಥೆಕಾದಂಬರಿಗಳನ್ನೂ ಪ್ರಬಂಧಗಳನ್ನೂ ಬರೆಯತೊಡಗಿರಬಹುದು. ಅದಕ್ಕೆ, ಸ್ವಲ್ಪ ಕಾಲ ಬೇಕಾಯಿತು. ಅವನು 'ರಾಜ ಮೋಹನನ ಹೆಂಡತಿ'ಯನ್ನು ಇಂಗ್ಲೀಷ್‌ನಲ್ಲಿ ಬರೆದದ್ದಕ್ಕೆ ಈ ಆದಿಕಾಲದ ಅಧೈರ್ಯವೂ ಭಾಷೆಯ ಅನಿಶ್ಚಿತತೆಯೂ ಒಂದು ಕಾರಣವಾಗಿರಬಹುದು. ಆಮೇಲೆ, ಅವನ ಕಾದಂಬರಿಗಳಲ್ಲಿ ಅಲ್ಲೊಂದು ಇಲ್ಲೊಂದು ಗೀತವೂ ಪದ್ಯವೂ ಬರುತ್ತದೆ. ಇವುಗಳಲ್ಲಿ ಅವನ 'ವಂದೇಮಾತರಂ' ದೇಶಾದ್ಯಂತವೂ ಪ್ರಸಿದ್ಧಿಯನ್ನು ಗಳಿಸಿದೆ. (ಪುಟ 33)

ಷೇಕ್ಸ್‌ಪಿಯರರ ಈ ಸ್ಥಿತ್ಯಂತರದ ಬಗ್ಗೆ ಮೂರ್ತಿರಾಯರು ತಮ್ಮ ಸಹಜವಾದ ಹಾಸ್ಯ ಶೈಲಿಯಲ್ಲಿ ಹೀಗೆ ಬರೆಯುತ್ತಾರೆ :

"ಈ ಜಾತಿಯ ಬರವಣಿಗೆಗೆ ಸಾನೆಟ್ಟಿನ ಹಿಡಿತ, ಅದರಲ್ಲೂ ಚೌಪದಿ ದ್ವಿಪದಿ ಪ್ರಾಸಗಳ ಹಿಡಿತ, ಏನೇನೂ ಒಗ್ಗದು. ಕಣ್ಣೀಟುಗಳನ್ನಿಟ್ಟುಕೊಂಡು ಸರಸವಾಡಿ, ತನ್ನ ಚೆಲ್ಲಾಟಕ್ಕೆ ತಾನೇ ನಕ್ಕು, ಆದರೂ ಅಲ್ಲಿನ ಚಮತ್ಕಾರಕ್ಕೆ ಮನಸೋತು ಬರೆಯುವ ಕಾಲ ಮುಗಿದ ಮೇಲೆ, ಷೇಕ್ಸ್‌ಪಿಯರ್ ನಗುಮುಖದ ಸೌಹಾರ್ದದಿಂದ "ಪುನಃ ಬೇಟಿಯಾಗೋಣ, ಸಮಯ ಬಂದಾಗ ಕರೆಸುತ್ತೇನೆ, ಹೋಗಿ ಬರುವಿರಾ?"ಎಂದು ಉಪಚಾರದ ಮಾತಾಡಿ ಅದನ್ನೆಲ್ಲಾ ಬೀಳ್ಕೊಟ್ಟು ಮುಂದೆ ನಡೆದಿದ್ದಾನೆ. ಉದ್ರಿಕ್ತವಾಗಬಹುದಾದ ಭಾವಗಳನ್ನು ತೀವ್ರವಾದ ಉದ್ರೇಕವಿಲ್ಲದೆ ಮನೋಹರವಾಗಿ ನಿರೂಪಿಸುವುದಕ್ಕೂ ಕೋಮಲತೆಗೂ ಈ ಸಾನೆಟ್ಟುಗಳ ಛಂದೋಮಾರ್ಗವೂ ಶೈಲಿಯೂ

ಪರಿಹೋಗಬಹುದು. ಆದರೆ ರುದ್ರನಾಟಕಗಳಲ್ಲಿನ ಭಯಂಕರ ಅಲೌಕಿಕಲೋಕಗಳಿಗೆ ಏನೇನೂ ಸಾಲದು. ಪ್ರಾಸಬದ್ಧವಾದ ದ್ವಿಪದಿ ಆತನ ಕೊನೆಕೊನೆಯ ನಾಟಕಗಳಲ್ಲೂ ಕಂಡುಬರುತ್ತದೆ. ಆದರೆ ಅಲ್ಲಿ ಅದು ನಿರ್ದಿಷ್ಟವಾದೊಂದು ಪ್ರಯೋಜನಕ್ಕಾಗಿ ಬರುತ್ತದೆ. ಅಲಂಕಾರಕ್ಕಾಗಿ ಅಲ್ಲ". (ಪುಟ 65) ಇದರೊಂದಿಗೆ ಅವರು ಇಂಗ್ಲೆಂಡಿನ ಜನರ ದೇಶಾಭಿಮಾನದ ಕಾರಣವನ್ನು ಷೇಕ್ಸ್‌ಪಿಯರ್‌ಗೆ ಇದ್ದ ನಾಟಕ ಪರಿಚಯದ ಬಗ್ಗೆಯೂ ಹೇಳುತ್ತಾರೆ. ಇಬ್ಬರೂ ಸಂಬಂಧಪಟ್ಟ ವಿಮರ್ಶೆಗಳನ್ನು ಓದಿದ್ದರೂ ಯಾವನೊಬ್ಬ ವಿಮರ್ಶಕನ ಹೆಸರು ಅಥವಾ ಅಭಿಪ್ರಾಯವನ್ನು ಉಲ್ಲೇಖಿಸದೆ ತಮ್ಮ ಸ್ವಂತ ವಿಮರ್ಶಾತ್ಮಕ ಅಭಿಪ್ರಾಯಗಳನ್ನಷ್ಟೇ ಮಂಡಿಸಿದ್ದಾರೆ. ಎರಡೂ ಕೃತಿಗಳನ್ನು ಕುರಿತು ಡಾ. ಪ್ರಭುಶಂಕರ ಹೀಗೆನ್ನುತ್ತಾರೆ :

"ಹೊರಭಾಷೆಯ ಸಾಹಿತ್ಯದ ವಿಮರ್ಶೆಗೆ ಸಂಬಂಧಿಸಿದಂತೆ ಎರಡು ಕೃತಿಗಳನ್ನು ಹೆಸರಿಸಬೇಕು. ಒಂದು ಎ. ಆರ್. ಕೃಷ್ಣಶಾಸ್ತ್ರಿಗಳ ಬಂಕಿಮಚಂದ್ರ, ಎರಡನೆಯದು ಎ. ಎನ್. ಮೂರ್ತಿರಾಯರ ಷೇಕ್ಸ್‌ಪಿಯರ್ (ಅಪೂರ್ಣ). ಅಪೂರ್ವವಾದ ವಿದ್ವತ್ತು, ಅಭಿನಂದನೀಯವಾದ ಸಹೃದಯತೆಗಳು ಎಂಥ ತೂಕವಾದ ವಿಮರ್ಶೆಯನ್ನು ನೀಡಬಲ್ಲವು ಎಂಬುದಕ್ಕೆ ಮೂರ್ತಿರಾಯರ ಕೃತಿ ನಿದರ್ಶನ." (ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ: ಪುಟ 195–196)

ಈ ವಿಮರ್ಶಾ ಕೃತಿಯಲ್ಲಿ ಹಲವು ವೈಶಿಷ್ಟ್ಯಗಳಿವೆ. ಅವುಗಳಲ್ಲಿ ಕೆಲವನ್ನು ಹೀಗೆ ದಾಖಲಿಸಬಹುದು.

1) ಮೂರ್ತಿರಾಯರು ಷೇಕ್ಸ್‌ಪಿಯರ್ ಕವಿಯನ್ನು, ಕೃತಿಗಳನ್ನು ಕುರಿತ ಹಲವು ವಿಮರ್ಶೆಗಳನ್ನು ಅಧ್ಯಯನ ಮಾಡಿದ್ದಾರೆ. ಆ ವಿಮರ್ಶಾತ್ಮಕ ಅಭಿಪ್ರಾಯಗಳ ಬೆಳಕಿನಲ್ಲಿ ಕೃತಿಗಳನ್ನು ವಿಮರ್ಶೆ ಮಾಡುತ್ತಾರೆ. ಆದರೆ ಎಲ್ಲಿಯೂ ವಿಮರ್ಶಕರ ಹೆಸರುಗಳನ್ನಾಗಲೀ ಅಥವಾ ಅವರ ಅಭಿಪ್ರಾಯಗಳನ್ನಾಗಲೀ ಉಲ್ಲೇಖಿಸಿಲ್ಲ. ಅಥವಾ ವಿಮರ್ಶಕರ ವಿಮರ್ಶಾತ್ಮಕ ಅಭಿಪ್ರಾಯಗಳ ಖಂಡನೆ ಪ್ರತಿಪಾದನೆಗಳಿಗೂ ಕೈಹಾಕಿಲ್ಲ. ಹೀಗಾಗಿ ಇದೊಂದು ಸ್ವತಂತ್ರ ಹಾಗೂ ಮೂಲ (fresh) ವಿಮರ್ಶೆಯಾಗಿದೆ. 'ವೆನಿಸ್ ನಗರದ ವರ್ತಕ'ದಲ್ಲಿ ಶೈಲಾಕನ ಪಾತ್ರದ ವಿಮರ್ಶೆ (221–227) ಇದಕ್ಕೊಂದು ಪರಿಣಾಮಕಾರೀ ನಿದರ್ಶನ. ಒಂದು ಸಮತೂಕದ ವಿಮರ್ಶೆ ಇಲ್ಲಿದೆ.

2) ನಾಟಕಗಳನ್ನು ಕೇವಲ ಶುಷ್ಕ ವಿಮರ್ಶೆಗೆ ಒಳಪಡಿಸದೆ ಇತರ ಹೊಸ ಅಂಶಗಳನ್ನೂ ಅವರು ಗಣನೆಗೆ ತೆಗೆದುಕೊಂಡಿದ್ದಾರೆ. ಒಂದು ಕೃತಿಯನ್ನು ಎಷ್ಟೆಲ್ಲಾ ಹಿನ್ನೆಲೆಯಲ್ಲಿ ಬೆಲೆ ಕಟ್ಟಬೇಕೆಂಬುದಕ್ಕೆ ಇದು ಒಂದು ಉತ್ತಮ ನಿದರ್ಶನ. ಪಾತ್ರ ಹಾಗೂ ಘಟನೆಗಳನ್ನು ವಿಮರ್ಶಿಸುವ ಜೊತೆಗೆ ಷೇಕ್ಸ್‌ಪಿಯರ್‌ನ ಕಾವ್ಯ ಗುಣ, ಸಾಹಿತ್ಯ ಶೈಲಿಗಳನ್ನೂ ಗಮನಕ್ಕೆ ತಂದುಕೊಂಡು, ಈ ವಿಮರ್ಶೆಯನ್ನು ಬರೆದಿದ್ದಾರೆ.

3) ವಿವಾದಗ್ರಸ್ತ ವಿಷಯಗಳನ್ನೂ ಮೂರ್ತಿರಾಯರು ಗಮನಿಸಿದ್ದಾರೆನ್ನುವುದಕ್ಕೂ ಈ ಕೃತಿಯಲ್ಲಿ ನಿದರ್ಶನಗಳು ಸಿಗುತ್ತದೆ.[2] ಇಂಥದೇ ವಿವಾದವನ್ನು ಡಿ. ವಿ. ಜಿ. ಯವರೂ ಸಹ ಗಮನಿಸಿದ್ದಾರೆಂಬುದೂ ಗಮನಾರ್ಹವಾದ ವಿಷಯ.[3]

4) ಮೂರ್ತಿರಾಯರ ವಿಮರ್ಶೆಯ ಸಹಜ ಲಕ್ಷಣವೆನಿಸಿದ ತೌಲನಿಕ ಅಧ್ಯಯನವನ್ನೂ ಇಲ್ಲಿ ಗಮನಿಸಬಹುದು.[4]

5) ಮೂರ್ತಿರಾಯರು ತಮ್ಮ ಕಾವ್ಯಾತ್ಮಕ ಶೈಲಿಯಿಂದ ವಿಮರ್ಶೆಯನ್ನು ಒಂದು ಸಾಹಿತ್ಯ ಕೃತಿಯನ್ನಾಗಿ ಮಾರ್ಪಡಿಸಿದ್ದಾರೆ. ಓದುಗರು ಮೂರ್ತಿರಾಯರ ಪದ ವಾಕ್ಯ ವೃಂದಗಳ ಮಾಧುರ್ಯದಿಂದಲೂ ಆಕರ್ಷಿತರಾಗುತ್ತಾರೆ.' ಅಲ್ಲಲ್ಲಿ ಉಪಯೋಗಿಸಿದ ದೇಶ್ಯ, ಅನ್ಯದೇಶ್ಯ ಶಬ್ದಗಳೂ ಸಹ ಸಂದರ್ಭದ ಪರಿಣಾಮಕಾರೀ ಗುಣವನ್ನು ಹೆಚ್ಚಿಸಿವೆ.

6) ಮೂರ್ತಿರಾಯರನ್ನು ಕೇವಲ ಲಲಿತ ಪ್ರಬಂಧಕಾರರೆಂದಷ್ಟೇ ಗುರುತಿಸಲಾಗಿದೆ. ಆದರೆ ಅವರೊಬ್ಬ ಸಮರ್ಥ ಅನುವಾದಕರೂ ಹೌದು. ಅವರ ಅನುವಾದ ಸಾಮರ್ಥ್ಯವನ್ನು ಬಿಂಬಿಸುವ ಕೆಲವು ನಿದರ್ಶನಗಳನ್ನು ಉಲ್ಲೇಖಿಸಬಹುದು. ಷೇಕ್ಸ್‌ಪಿಯರ್ ಕೃತಿಯಲ್ಲಿ ಪ್ರಾಸಂಗಿಕವಾಗಿ ಷೇಕ್ಸ್‌ಪಿಯರ್ ಕವಿಯ ಕೃತಿಗಳಿಂದ ಮೂಲಭಾಗವನ್ನು ಉದ್ಧರಿಸಿದ್ದಾರೆ. ಅನುಬಂಧದಲ್ಲಿ ಅವುಗಳ ಅನುವಾದವನ್ನು ಕೊಟ್ಟಿದ್ದಾರೆ. ಈ ಅನುವಾದಗಳನ್ನು ಪ್ರಾತಿನಿಧಿಕವಾಗಿ ಕೆಲವು ಅನುವಾದಗಳೊಂದಿಗೆ ಹೋಲಿಸಿ ನೋಡಬಹುದು. [6]

ಮೂಲ : Oh, he sits high in all the people's hearts: And that which would appear offence in us his counteance, like richest akhamy, will change to virtue and to worthiness

( ಜೂಲಿಯಸ್ ಸೀಜರ್ I, III, 157–160) ಪುಟ 316)

ಮೂರ್ತಿರಾಯರ ಅನುವಾದ : ಅವನು ಜನತೆಯ ಹೃದಯದಲ್ಲಿ ಉನ್ನತವಾಗಿ ಕುಳಿತಿದ್ದಾನೆ. ನಮ್ಮಲ್ಲಿ ಯಾವುದು ಅಪರಾಧವಾಗಿ ಕಾಣುತ್ತದೋ ಅದಕ್ಕೆ ಅವನ ಒಪ್ಪಿಗೆ ದೊರೆತರೆ, ಅವನ ಆಶ್ರಯವು ರಸತಂತ್ರದಂತೆ ವರ್ತಿಸಿ ಅಪರಾಧವನ್ನೇ "ಇದು ಸದ್ಗುಣ, ಯೋಗ್ಯವಾದದ್ದು" ಎನ್ನುವಂತೆ ಮಾರ್ಪಡಿಸುತ್ತದೆ.

(ಪುಟ 418)

ತೇಜಸ್ವಿನೀ ನಿರಂಜನ : ಓ, ಜನತೆಯ ಹೃದಯದಲ್ಲಿ ಅವನದು ಉನ್ನತಸ್ಥಾನ, ತನ್ನ ರಾಸಾಯನಿಕ ಕ್ರಿಯೆಯಿಂದ ನಮ್ಮಲ್ಲಿ ಕೆಡುಕಾಗಿ ಕಂಡದ್ದನ್ನ ಒಳ್ಳೆಯ ಗುಣವಾಗಿ, ಗಣ್ಯಕಾರ್ಯವನ್ನಾಗಿ, ಮಾರ್ಪಾಡು ಮಾಡುತ್ತಾನೆ ಆತ. (46)

ಡಾ. ಕೆ. ಶಿವರಾಮ ಕಾರಂತ : ಆತನಾದರೆ ಜನತೆಯ ಹೃದಯದಲಿ ಉನ್ನತಾಸೀನ, ನಮ್ಮಲ್ಲಿ ಕೊರತೆಯೆನಿಸುವ ವಸ್ತು, ಪರುಷಶಿಲೆಯ ಸ್ಪರ್ಶವನು ಪಡೆದಂತೆ, ಸದ್ಗುಣವೆನಿಸಿ ಮನ್ನಣೆಗರ್ಹವಕ್ಕು. (21)

ಮೂಲ: We will deliver you the cause, why I, that did love Caesar when I struck him, Have thus proceeded. III (i) 182–84

ಮೂರ್ತಿರಾಯರು : ಸೀಸರನನ್ನು ಕೊಂದಾಗಲೂ ನಾನು ಅವನನ್ನು ಪ್ರೀತಿಸುತ್ತಿದ್ದೆ. ಹೀಗೆ ಮಾಡಿದ್ದೇಕೆ ಎನ್ನುವುದಕ್ಕೆ ಕಾರಣ ತಿಳಿಸುತ್ತೇನೆ. (418)

ತೇಜಸ್ವಿನಿ : ನಿನಗೆ ಕಾರಣವನ್ನ ನೀಡುವೆವು, ಆ ಸೀಜರನನ್ನ ತಿವಿದಾಗಲೂ ಅತನನ್ನು ಪ್ರೀತಿಸಿದ ನಾನು ಹೀಗೇಕೆ ಮಾಡಿದೆನೆಂದು (88)

ಶಿವರಾಮಕಾರಂತರು : ನಿನಗೆ ನಾನಾಗಿ ತಿಳಿಸುವೆನು ಇಂತೇಕೆ ಮಾಡಿದೆನೆಂದು, ಪ್ರೀತಿಸಿದ ಸೀಸರನ ಸದೆದೆನೇಕೆಂದು. (51)

ಮೂಲ : You are my true and honourable wife . As dear to me as are the nuddy drops That visit my sad heart II. I 288–90

ಮೂರ್ತಿರಾಯರು : ನೀನು ಮಾನ್ಯಳಾದ ನನ್ನ ಧರ್ಮಪತ್ನಿ, ನನ್ನ ಹೃದಯಕ್ಕೆ ಬರುವ ರಕ್ತದ ಹನಿಗಳಂತೆಯೇ ನನಗೆ ಪ್ರಿಯಳಾದವಳು (419)

ತೇಜಸ್ವಿನಿ : ನೀನು ನನ್ನ ನಿಜವಾದ ಗೌರವಾನ್ವಿತ ಮಡದಿ, ನನ್ನ ನೊಂದ ಹೃದಯಕ್ಕೆ ಬರುವ ಕೆಂಪು ರಕ್ತ ಹನಿಗಳಷ್ಟೇ ಪ್ರಿಯವಾಗಿರುವೆ ನೀನು (62)

ಶಿವರಾಮಕಾರಂತರು : ನೀನೆನ್ನ ನಿಜಪತ್ನಿ, ಗೌರವಿತ ಸತಿಯು, ಎನ್ನ ದುಃಖಿ ದೆದೆಯಲಿ ಹರಿವ ಕೆನ್ನೆತ್ತರಿಗೆ ನಾಟಿದ ಮುದ್ದುಮಣಿಯು. (32)

ಕೆ. ಎಸ್. ಭಗವಾನ್ : ನೀ ನನ್ನ ನಂಬಿಕೆಯ ಗೌರವಾನ್ವಿತ ಸತಿ ಶಿರೋಮಣಿ, ನನ್ನ ನೊಂದೆದೆಗೆ ಹರಿದು ಬರುವ ಬಿಸಿರಕ್ತದ ಹಾಗೆ ನೀ ನನಗೆ ಪ್ರಿಯಳಾದವಳು. (70)

ಕೆ. ಎಸ್. ಭಗವಾನ್ : ಸೀಸರ್‌ನ ಅಷ್ಟೊಂದು ಪ್ರೀತಿಸಿದ ನಾನೇಕೆ ಅವನನ್ನು ಹೊಡೆದೆ, ಈ ರೀತಿ ವರ್ತಿಸಿದೆ ಎಂಬುದನ್ನು ನಿನಗೆ ಹೇಳುತ್ತೇನೆ. (87)

ಕೆ. ಎಸ್. ಭಗವಾನ್ : ಓ, ಜನರ ಹೃದಯಗಳಲ್ಲವನು ಉಚ್ಚಪೀಠಸ್ಥನಾಗಿಹನು. ಯಾವುದು ನಮ್ಮಲ್ಲಿಪರಾಧವಾಗಿ ಕಾಣುವುದೊ ಅದನ್ನವನ ಗಾಂಭೀರ್ಯ, ಸಿರಿವಂತ ಪರುಷಮಣಿಯಂತೆ, ಸದ್ಗುಣಕೆ ಮಾನ್ಯತೆಗೆ ತಿರುಗಿಸುತ್ತದೆ. (58)

ಇಷ್ಟೆಲ್ಲಾ ಹಿನ್ನೆಲೆಯಲ್ಲಿ ಮೂರ್ತಿರಾಯರ ಅನುವಾದ ಮಿತಿಗಳನ್ನು ಗುರುತಿಸಬೇಕು. ಮೂಲದಲ್ಲಿರುವ `sad` ಎಂಬ ಶಬ್ದವನ್ನು ಮೂರ್ತಿರಾಯರು ತಮ್ಮ ಅನುವಾದದಲ್ಲಿ ತಂದಿಲ್ಲ. ಮೂರ್ತಿರಾಯರ ಪದ್ಯಾನುವಾದ ಇತರ ಪದ್ಯಾನುವಾದ ಗಳೊಂದಿಗೆ ಹೋಲಿಸಿದರೆ ಕೊಂಚ ಪೇಲವ ಎನಿಸುತ್ತದೆ.

**ಅಂತ್ಯ ಟಿಪ್ಪಣಿ**

1. ಇವಳಿಗೆ ಷೇಕ್ಸ್‌ಪಿಯರ್ ಅಷ್ಟೊಂದು ಸೌಂದರ್ಯಾಸ್ವಾದನೆಯ ಶಕ್ತಿಕೊಡ ಬೇಕಾಗಿತ್ತೆ?

"ಮಧುರ ಗಾನವನ್ನು ಕೇಳಿದಾಗ ನಾನು ಹರ್ಷದಿಂದ ನಲಿಯಲಾರೆ" (I am never merry when I hear sweet music – V. i. 69)ಎನ್ನಬೇಕಾದರೆ ಅವಳಿಗೆ ಸಂಗೀತದಲ್ಲಿ ಎಷ್ಟು ಪಕ್ವವಾದ ಅಭಿರುಚಿಯಿರಬೇಕು (216).

ಆದರೆ ಷೇಕ್ಸ್‌ಪಿಯರ್ ಇಲ್ಲಿ ಉಜ್ವಲವಾದ ಭಾಷಣದ ಮಟ್ಟದಿಂದ ಮೇಲಕ್ಕೇರಿ ಉದಾತ್ತವಾದ ಕಾವ್ಯಗುಣವನ್ನು ಸಾಧಿಸಿದ್ದಾನೆಂದು ಹೇಳಲಾಗುವುದಿಲ್ಲ. (279)

ಸೀಸರನ ಕೊಲೆಗಾಗಿ ನಡೆದ ಪಿತೂರಿ, ಕೊಲೆ, ಅದರ ಪರಿಣಾಮ ಇವು ನಾಟಕದಲ್ಲಿ ಮುಖ್ಯವಾದ ಘಟ್ಟಗಳು. ಇಲ್ಲಿ ಉಪಪ್ರಸಂಗಗಳೇನೂ ಇಲ್ಲ. ಕ್ರಿಯೆ ಯಾವ ತೊಡಕೂ ಇಲ್ಲದೆ ಕೊನೆಯ ದುರಂತದ ಕಡೆಗೆ ಸಾಗುತ್ತದೆ. ಆದರೆ ಆ ಕೊನೆಯ ದುರಂತ ಸೀಸರನದ್ದಲ್ಲ. ಆದ್ದರಿಂದ ಈ ನಾಟಕದ ನಾಯಕ ಯಾರು ಎಂಬ ಪ್ರಶ್ನೆ ವಿಮರ್ಶಕರನ್ನು ಬಾಧಿಸಿದೆ. (310)

ಕೊನೆಯ ಅಂಕದಲ್ಲಿ ಬೆಳುದಿಂಗಳಿನ ದೃಶ್ಯ ಅತಿ ಸುಂದರವಾದದ್ದು. ಅದರಲ್ಲಿ ಪ್ರಣಯದ ಉದ್ವೇಗವಿಲ್ಲ. ಆದರೆ ಪ್ರಸನ್ನ ಶಾಂತತೆ ತುಂಬಿದೆ, ಮಧುರವಾದ ಸಂಗೀತದ ನಾದ ತುಂಬಿದೆ. (228)

2. ಈ ನಾಟಕ (ಹೆನ್ರಿVI) ಅದರಲ್ಲೂ ಮೊದಲನೆಯ ಭಾಗ, ಪೂರ್ತಿ ಷೇಕ್ಸ್‌ಪಿಯರ್‌ನದೆ, ಅಥವಾ ಇದರಲ್ಲಿ ಇತರರ ಕೈವಾಡವೂ ಇದೆಯೇ ಎಂಬ ವಿಷಯದಲ್ಲಿ ಬೇಕಾದಷ್ಟು ಭಿನ್ನಾಭಿಪ್ರಾಯವಿದೆ (69). ಆರನೆಯ ಹೆನ್ರಿಯ ನಾಟಕ ಷೇಕ್ಸ್‌ಪಿಯರ್‌ನ ಕೃತಿಗಳಲ್ಲಿ ಮೊದಮೊದಲಿನದೆಂದು ವಿದ್ವಾಂಸರ ಅಭಿಪ್ರಾಯ. ಅವನ ಇತರ ನಾಟಕಗಳಿಗೆ ಬಂದಿರುವ ಪ್ರಸಿದ್ಧಿ ಇದಕ್ಕೆ ಬಂದಿಲ್ಲ.

(ಪ್ರಹಸನತ್ರಯೀ, ಪುಟ 59)

3. ಟೋಬಿಯನ್ನು ಕೆಲವರು ಫಾಲ್‌ಸ್ಟಾಫ್‌ಗೆ ಹೋಲಿಸಿದ್ದಾರೆ. ಇವರಿಬ್ಬರಿಗೂ ಸ್ವಲ್ಪ ಸಾದೃಶ್ಯವಿರುವುದೇನೋ ನಿಜ. ಇಬ್ಬರಿಗೂ ಜೀವನದಲ್ಲಿ ಉನ್ನತವಾದ ಮೌಲ್ಯ ಗಳಿಲ್ಲ, ಇಬ್ಬರೂ ಹಾಸ್ಯಪ್ರಿಯರು, ಫಾಲ್‌ಸ್ಟಾಫ್ ಷ್ಯಾಲೋವಿನಿಂದ ಹಣ ಸುಲಿದು ಕೊಂಡಂತೆ ಟೋಬಿ ಆಂಡ್ರುವಿನಿಂದ ಸುಲಿಯುತ್ತಾನೆ, ಇಬ್ಬರಿಗೂ ಮದ್ಯದ ಚಟ. ಆದರೂ ಟೋಬಿ ಫಾಲ್‌ಸ್ಟಾಫ್‌ಗಿಂತ ಬಹಳ ಹಿಂದೆ ಇದ್ದಾನೆ. ಫಾಲ್‌ಸ್ಟಾಫ್ ಎಷ್ಟೇ ಮದ್ಯವನ್ನು ಹೀರಲಿ, ಅವನಿಗೆ ಅಮಲೇರಿದ್ದು ಒಂದು ಸಾರಿಯೂ ಕಾಣುವುದಿಲ್ಲ. ಟೋಬಿ ಮನೆಯ ಯಜಮಾನಿಯಾದ ಆಲಿವಿಯಳನ್ನು ನೋಡಹೋದಾಗಲೂ ಮತ್ತನಾಗಿಯೇ ಇರುತ್ತಾನೆ. ಫಾಲ್‌ಸ್ಟಾಫ್ ಚಿಂತೆಗೆ ಅವಕಾಶ ಕೊಡುವವನಲ್ಲವಾದರೂ ಅವನಲ್ಲಿ ಒಂದು ಬಗೆಯ ವಿಚಾರಪರತೆಯಿದೆ, ಟೋಬಿಯಲ್ಲಿ ಅಂಥದೇನೂ ಕಾಣು ವುದಿಲ್ಲ. ಟೋಬಿಯನ್ನು ಷ್ಯಾಲೋವಿನಿಂದ ಹಣವನ್ನು ಸುಲಿದ ಫಾಲ್‌ಸ್ಟಾಫ್‌ನೊಡನೆ ಹೋಲಿಸಬಹುದು, ಆದರೆ ಮುಖ್ಯನ್ಯಾಯಾಧೀಶನ ಸಾಲ ಕೇಳಿದ ಫಾಲ್‌ಸ್ಟಾಫ್‌ನೊಡನೆ ಹೋಲಿಸಲಾಗದು. ಹಾಸ್ಯದಲ್ಲಿ ಫಾಲ್‌ಸ್ಟಾಫ್ ಎಂದೂ ಸೋತವನಲ್ಲ, ಅವನಿಗೆ ಸರಿಸಮನಾಗಿ ನಿಂತವರೂ ಯಾರೂ ಇಲ್ಲ. ಇಲ್ಲಿ ಮಯಲಳು ಟೋಬಿಯ ಸರಿಗೂ ಮಾತಾಡಿ ಅವನ ಬಾಯಿ ಕಟ್ಟಬಲ್ಲಳು (III, 73) ಫಾಲ್‌ಸ್ಟಾಫ್‌ನ ವಿಜಯವೆಲ್ಲಾ ಹಾಸ್ಯಾಸ್ತ್ರ ಪ್ರಯೋಗದಿಂದ ಗಳಿಸಿದ್ದು, ಅವನು ಕೋಪವನ್ನು ನಟಿಸಿದನೇ ಹೊರತು ಅದನ್ನು ಆಶ್ರಯಿಸಬೇಕಾಗಲಿಲ್ಲ, ಟೋಬಿ ತಾಳ್ಮೆಗೆಟ್ಟು ಕೋಪದಿಂದ ಮಾತಾಡುತ್ತಾನೆ.

"Will it be ever thus ? Ungracious Wretch,
Fit for the mountains and the barbarous caves.
Where manners we'er were preached; Out of my sight"

ಎಂದು ಟೋಬಿ ಛೀಮಾರಿ ಮಾಡಿಸಿಕೊಂಡಂತೆ ಫಾಲ್‌ಸ್ಟಾಫ್ ಎಂದೂ ಮಾಡಿಸಿಕೊಂಡವನಲ್ಲ, ಹೆನ್ರಿಯಿಂದ ತಿರಸ್ಕೃತವಾಗುವ ದೃಶ್ಯವೊಂದರಲ್ಲಿ ಹೊರತು, ಫಾಲ್‌ಸ್ಟಾಫ್‌ನನ್ನು ಟೋಬಿಯ ಮಗ್ಗುಲಲ್ಲಿ ನಿಲ್ಲಿಸಿದರೆ ಇಬ್ಬರಿಗೂ ಅನ್ಯಾಯ ಮಾಡಿದಂತಾಗುತ್ತದೆ. ಅತ್ತ ಫಾಲ್‌ಸ್ಟಾಫ್‌ನ ಔನ್ನತ್ಯಕ್ಕೆ ಕುಂದು ಬರುತ್ತದೆ, ಇತ್ತ ತನ್ನ ಮಿತಿಯಲ್ಲಿ ಮನೋರಂಜಕನಾದ ಟೋಬಿಯಿಂದ ನಿರೀಕ್ಷಿಸಬಾರದ್ದನ್ನು ನಿರೀಕ್ಷಿಸಿ ದಂತಾಗುತ್ತದೆ. ಈ ನಾಟಕದಲ್ಲಿ ಷೇಕ್ಸ್‌ಪಿಯರ್ ಫಾಲ್‌ಸ್ಟಾಫ್ ಪ್ರತಿಕೃತಿಯನ್ನು ನಿರ್ಮಿಸ ಹೊರಟು ಸೋತಿಲ್ಲ, ಟೋಬಿ ಎಂಬುವನನ್ನು ನಿರ್ಮಿಸಿ ಕೃತಕೃತ್ಯನಾಗಿದ್ದಾನೆ.

ಸರ್ ಜೋಬ್ ಫಾಲ್‌ಸ್ಟಾಫ್‌ನಂತೆಯೇ ಬೆಳೆದಿದ್ದರೆ ಈ ನಾಟಕದ ಸಮತೋಲನಕ್ಕೆ ಕುಂದು ಬರುತ್ತಿತ್ತು. (368–369).

ವೆನಿಸ್ ನಗರದ ವರ್ತಕದ ಕೊನೆಯ ದೃಶ್ಯದಲ್ಲಿ ಷೇಕ್ಸ್‌ಪಿಯರ್ ಶೈಲಾಕನನ್ನು ರಂಗಸ್ಥಳಕ್ಕೆ ತರುವುದಿಲ್ಲ. ಹಾಗೆಯೇ ಶೂನ್ಯದ ತಳಹದಿ, ನಾಟಕದಲ್ಲೂ ಜಾರ್ಜಾನ್ ಕೊನೆಯ ದೃಶ್ಯದಲ್ಲಿ ಬರುವುದಿಲ್ಲ, ಅವನ ಪ್ರಸ್ತಾಪ ಮಾತ್ರ ಬರುತ್ತದೆ (377)

"ಲೇಖಕ ಯಾವುದರ ಬಗ್ಗೆಯೇ ಬರೆಯಲಿ, ವಸ್ತುನಿಷ್ಠನಾಗಿರಬೇಕು ಅತ. ಪೂರ್ವಾಗ್ರಹವಿರಕೂಡದು. ಮನಸ್ಸು ಮುಕ್ತವಾಗಿರಬೇಕು, ಕ್ರೋಧರಹಿತವಾಗಿರಬೇಕು" ಎಂಬ ತ.ರಾ.ಸು. ಅವರ ಅಭಿಪ್ರಾಯಕ್ಕೆ (ಉತ್ಥಾನ. ಜುಲೈ 1983 ಪುಟ 76) ಈ ಕೃತಿಯೊಂದು ಉತ್ತಮ ನಿದರ್ಶನ.

4. ಅವನು ಭಾರತೀಯನಾಗಿದ್ದಿದ್ದರೆ ಚಂದನಗಂಧವನ್ನು ಲೇಪಿಸಿಕೊಂಡು ಬೆಳದಿಂಗಳಿನಲ್ಲಿ ಚಂದ್ರಕಾಂತ ಶಿಲೆಯ ಮೇಲೆ ಮಲಗಿ "ಚಂದ್ರಶ್ಚಂಡಕರಾಯತೇ ಮಲಯಜಾಲೇಪಃಸ್ಫುಲಿಂಗಾಯತೇ" ಎಂದು ವಿಲಪಿಸುತ್ತಿದ್ದನೇನೋ. (356)

ಅವಳು ಹುಟ್ಟಿದಾಗ ಬಹುಶಃ ಹುಣ್ಣಿಮೆಯ ಬೆಳದಿಂಗಳು ಜಗತ್ತನ್ನೆಲ್ಲಾ ಪ್ರಶಾಂತವೂ ಮೃದುಮಧುರವೂ ಆದ ಧಾವಳ್ಯದಲ್ಲಿ ತೋಯಿಸಿತ್ತು. ಅಂಥ ರಾತ್ರಿಯಲ್ಲಿರುವ ಸೌಮ್ಯತೆ, ಸಂಯಮಕ್ಕೆ ಒಳಪಟ್ಟ ಭಾವಸಂಪತ್ತು, ಆ ಅವರಣದಲ್ಲಿ ಗಾನಕ್ಕೆ ಬರುವ ಮಾಧುರ್ಯ, ವ್ಯಕ್ತ ಸೌಂದರ್ಯಕ್ಕಿಂತ ಅಭಿರಾಮತರವಾದ ಅವ್ಯಕ್ತ ಸೌಂದರ್ಯವಿದೆ ಎಂಬ ಸೂಚನೆ ಇವೆಲ್ಲಾ ವಯಲಿನಲ್ಲಿ ಕಾಣುತ್ತವೆ.

5. ಲಕ್ಷ್ಮೀಪುತ್ರ (213). ಇಜ್ಜತ್ (194). God's wrathful agent–ಕುಪಿತ ದೈವದ ಪ್ರತಿನಿಧಿ (202), ಕನಕೋರ್ಣ(216). ವಾಕ್‌ರಚಿತ ಸವಿಸಂದೇಶ (217). ಪರ್ವತಪ್ರಮಾಣ (gross as a mountain) (248). ಘನಾಂದಾರ ಮನುಷ್ಯ (250). ದಾಷತ್ತಿನಿಂದ, ವಂದು (251). ಸಂತೋಷಂ ಜನಯೇತ್ ಪ್ರಾಜ್ಞಃ, ನಂದಾಮ ಶರದಶ್ಶತಂ. (340), ಅತ ಗ್ರೀಕರ ಅಕಿಲೀಸನಂತೆ, ನಮ್ಮ ಕರ್ಣಾರ್ಜುನರಂತೆ (352).

ಸೂರ್ಯನ ಶಾಖದಿಂದ ಹೊರವಾಗಿ ಬೆಳೆದು ಅದೇ ಸೂರ್ಯನ ಕಿರಣಗಳನ್ನು ತಡೆಯುವ ಮಧುವಲ್ಲಿಯ ನಿಕುಂಜವನ್ನು ಸಿದ್ಧಗೊಳಿಸಿದ್ದಾನೆ (304)

## 3.5 ಪೂರ್ವ ಸೂರಿಗಳೊಡನೆ

ಮೂರ್ತಿರಾಯರ ವಿಮರ್ಶಾತ್ಮಕ ಕೃತಿಗಳಲ್ಲಿ ಇದೊಂದು ವಿಶಿಷ್ಟವಾದ ಕೃತಿ. ಏಕೆಂದರೆ ಹಲವು ವರ್ಷ ಇಂಗ್ಲೀಷ್ ಸಾಹಿತ್ಯ ಹಾಗೂ ವಿಮರ್ಶಾ ತತ್ತ್ವಗಳನ್ನು ಬೋಧನೆ ಮಾಡಿದ ಮೂರ್ತಿರಾಯರು ತಮ್ಮ ವಿಮರ್ಶೆಗಾಗಿ ಆಯ್ಕೆ ಮಾಡಿಕೊಂಡ ವಸ್ತು ಅಂದಿನಿಂದ ಇಂದಿಗೂ ಬಹು ಚರ್ಚಿತವಾಗುತ್ತಿರುವ ಸೀತಾ ಪರಿತ್ಯಾಗದ ಪ್ರಸಂಗ. 1981ರಲ್ಲಿ ನ್ಯೂಯಾರ್ಕ್‌ನ, ನ್ಯೂಯಾರ್ಕ್ ಕನ್ನಡ ಕೂಟದವರು ಪ್ರಕಟಿಸಿರುವ ಈ ಕಿರುಕೃತಿ ಈ ಒಂದೇ ವಿಚಾರವನ್ನು ಒಂದು ನೂರಾಹನ್ನೊಂದು ಪುಟಗಳ ವ್ಯಾಪ್ತಿಯನ್ನು ಹೊಂದಿದೆ.

**ತೌಲನಿಕತೆ**

ಒಂದು ಕೃತಿಯನ್ನು ಯಾವೆಲ್ಲ ಹಿನ್ನೆಲೆಗಳಿಂದ ಪರಿಶೀಲಿಸಬೇಕೆಂಬ ಅಂಶ ಇಲ್ಲಿ ಅತ್ಯಂತ ಗಮನಾರ್ಹ. ಸೀತಾ ಪರಿತ್ಯಾಗದ ವಸ್ತು ಹಲವು ನಾಟಕ ವಿಮರ್ಶೆಗಳಿಗೆ

ಆಕರವಾದದ್ದು. ಮೂರ್ತಿರಾಯರು ಈ ಒಂದೇ ವಸ್ತು ಪ್ರಾತಿನಿಧಿಕವಾದ ಪ್ರಮುಖವಾದ ನಾಲ್ಕು ಕೃತಿಗಳಲ್ಲಿ ಯಾವೆಲ್ಲ ಅವಸ್ಥಾಂತರಗಳನ್ನು ಪಡೆದಿದೆ ಎಂಬುವನ್ನು ಸೋದಾಹರಣವಾಗಿ ವಿಮರ್ಶಿಸಿದ್ದಾರೆ. ಈ ಎಲ್ಲಾ ಕೃತಿಗಳನ್ನು ಪರಸ್ಪರ ಹೋಲಿಸುತ್ತಾ, ಅಂತರಗಳನ್ನು ಗುರುತಿಸುತ್ತಾ ಎಲ್ಲಾ ಕೃತಿಗಳ ಬಗ್ಗೆಯೂ ಪರವಾದ ಮತ್ತು ವಿರೋಧವಾದ ವಾದಗಳನ್ನು ಮಂಡಿಸುತ್ತಾ ಹೋಗುತ್ತಾರೆ.

**ಮೂರ್ತಿರಾಯರ ಮನೋಧರ್ಮ**

ಒಂದು ಕೃತಿಯ ಆಯ್ಕೆ ವಿಮರ್ಶಕನ ಅಥವಾ ಚಿಂತಕನ ಮನೋಧರ್ಮದ ಪ್ರತೀಕವಾಗಿರುತ್ತದೆ. ಏಕೆಂದರೆ ಒಬ್ಬ ವ್ಯಕ್ತಿ ತನ್ನ ಮನೋಗತ ವ್ಯಾಪಾರಕ್ಕೂ ಕಾವ್ಯ ಅಥವಾ ಸಾಹಿತ್ಯ ಕೃತಿಗಳಲ್ಲಿ ಬರುವ ಘಟನಾವಳಿಗಳ ವ್ಯಾಪಾರಕ್ಕೂ ಸಾಮ್ಯವನ್ನು ಗುರುತಿಸುತ್ತಾನೆ. ಪಾತ್ರದೊಂದಿಗೆ ತನ್ನನ್ನೂ ಸಮೀಕರಿಸಿಕೊಂಡು ವಿಶ್ಲೇಷಣೆಯನ್ನು ಮಾಡುತ್ತಾನೆ. ಆ ಘಟನೆಯನ್ನು ತಾನೇ ಆ ಪಾತ್ರವಾಗಿ ವಿಶ್ಲೇಷಿಸುತ್ತಾನೆ. "ಸಾಹಿತಿಯು ಅನೇಕ ವೇಳೆ ತನ್ನ ಆಸೆ ಆಕಾಂಕ್ಷೆ, ಸುಖದುಃಖ ಮೊದಲಾದ ವೈಯಕ್ತಿಕ ಅನುಭವಕ್ಕೆ ಅನುಗುಣವಾಗಿ ಪ್ರತಿಮೆಗಳನ್ನು ಸೃಷ್ಟಿಸುತ್ತಾನೆ. ಅವನ ಅನುಭವದ ಹಿನ್ನೆಲೆಯಲ್ಲಿ ಮಾತ್ರ ಈ ಪ್ರತಿಮೆಗಳಿಗೆ ಅರ್ಥವು ದೊರೆಯುತ್ತದೆ" ಎಂಬ ಡಾ. ಎಸ್. ಎಲ್. ಭೈರಪ್ಪನವರ ಹೇಳಿಕೆಯನ್ನು (ಸಾಹಿತ್ಯ ಮತ್ತು ಪ್ರತೀಕ 1971 ಪುಟ 49) ಇಲ್ಲಿ ಅನ್ವಯಿಸಿ, ಸಾಹಿತಿಯ ಸ್ಥಳದಲ್ಲಿ ವಿಮರ್ಶಕ, ಪ್ರತಿಮೆಯ ಸ್ಥಳದಲ್ಲಿ ವಿಮರ್ಶೆ ಎಂಬ ಶಬ್ದವನ್ನು ಇರಿಸಿದರೆ ವಿಮರ್ಶಕನ ಆಯ್ಕೆಯ ಹಿನ್ನೆಲೆಯ ಮನೋಧರ್ಮವನ್ನು ಸ್ಪಷ್ಟಪಡಿಸುತ್ತದೆ.

ಮೂರ್ತಿರಾಯರ ಸುಖೀರಾಜ್ಯದ ಕಲ್ಪನೆ ಇರುವುದು ಒಂದು ಸುಖೀ ಕುಟುಂಬದಲ್ಲಿ. ಅವರ ಆತ್ಮಚರಿತ್ರೆಯಲ್ಲಿ ಹಲವು ಸಂದರ್ಭಗಳಲ್ಲಿ ಈ ಕಲ್ಪನೆ ಸ್ಪಷ್ಟವಾಗಿ ಅಭಿವ್ಯಕ್ತಿ ಪಡೆದಿದೆ. ಜೊತೆಗೆ ಅವರಿಗೆ ಸಮಾಜದಲ್ಲಿ ನೋವಿಗೆ ಬಲಿಯಾದ ಸ್ತ್ರೀಯರ ಬಗ್ಗೆ ಅಪಾರ ಸಹಾನುಭೂತಿ. ಅವರ "ಗೌರಜ್ಜಿ" ಎಂಬ ಲಲಿತ ಪ್ರಬಂಧ ಅವರ ಮಾನಸಿಕವಾದ ಸ್ಪಂದನದ ಅಭಿವ್ಯಕ್ತಿ, ನೊಂದ ಹೆಣ್ಣಿನ ಬವಣೆ, ಬಾಲವಿಧವೆಯ ಸಂಕಷ್ಟಗಳ ಬಗ್ಗೆ ಅವರ ವೈಚಾರಿಕ ನಿಲುವು, ಕ್ರಿಯಾತ್ಮಕವಲ್ಲದಿದ್ದರೂ ಬೌದ್ಧಿಕವಾದದ್ದು. ಅವರ ಕಳಕಳಿ ಪ್ರಾಮಾಣಿಕವಾದದ್ದು. ಇಂದಿನ ಬಂಡಾಯ ಸಂಘಟನೆಗಳು ಕ್ರಿಯಾತ್ಮಕವಾಗಿ ಸ್ಪಂದಿಸುವಂತೆ (ಮಂತ್ರಮಾಂಗಲ್ಯ ಇತ್ಯಾದಿ) ಆ ಕಾಲದಲ್ಲಿಯೂ ಸ್ಪಂದಿಸಿದ್ದಿದ್ದರೆ ಬಹುಶಃ ಮೂರ್ತಿರಾಯರೂ ಸಕ್ರಿಯವಾಗಿ ತಮ್ಮನ್ನು ತಾವು ಅಂತಹ ಚಳುವಳಿಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರೋ ಏನೋ. ಈ ಎಲ್ಲಾ ವೈಚಾರಿಕ ಹಾಗೂ ಅನುಕಂಪದ ದೃಷ್ಟಿ, ಹೆಣ್ಣಿನ ನೋವಿನ ಪ್ರತಿನಿಧಿ ಎನಿಸಿದ ಸೀತೆಯ ಕಡೆಗೆ ಹರಿಯಿತು. ಸೀತೆಯ ಬಗ್ಗೆ ಅವರಿಗೆ ಅಪಾರವಾದ ಗೌರವ ಎನ್ನುವುದಕ್ಕಿಂತಲೂ, ಇಂದಿನ ಜಗತ್ತಿನ ಶೋಷಣೆಗೆ ಒಳಗಾದ ಹೆಣ್ಣಿನ ಪ್ರತಿನಿಧಿಯಾಗಿ ಕಂಡಿದ್ದಾರೆ. ಈ ಸಂದರ್ಭದಲ್ಲಿ ಒಂದು ಮಾತನ್ನು ಮರೆಯಬಾರದು. ಸೀತೆಯ ಸಂಕಷ್ಟಕ್ಕೆ ಕಾರಣವಾದ ರಾಮನನ್ನು ತಾಳ್ಮೆ ತಪ್ಪಿ ಅಥವಾ ಸ್ತ್ರೀಯರ ಬಗ್ಗೆ ಅವರಿಗಿರುವ ಅನುಕಂಪ ಮಿತಿಮೀರಿ ಎಲ್ಲಿಯೂ ಕಟು ಟೀಕೆಗೆ ಒಳಪಡಿಸಿಲ್ಲ. ಬದಲಾಗಿ ರಾಮ ಸಿಲುಕಿಕೊಂಡ ಪರಿಸ್ಥಿತಿಯ ವಿಶ್ಲೇಷಣೆ ಮಾಡಿದ್ದಾರೆ. ಇದು ಅವರ ಸಮತೋಲನ ದೃಷ್ಟಿ. ರಾಮ ಕಂಚುಕಿಯರ

ಸಂವಾದ, ರಾಮನಿಗೆ ವಸಿಷ್ಠರ ಆಜ್ಞೆ (79-81)[1] ಭಾರವಿ ವರ್ಣಿಸಿದ ದಾಂಪತ್ಯ ಜೀವನದ ಚಿತ್ರಣ (86-87)[2], ಕಾಳಿದಾಸ ಬಳಸಿದ `ಇಂದ್ರಿಯಾರ್ಥ' ಶಬ್ದದ ಬಗ್ಗೆ ಅವರ ಸೌಮ್ಯ ವಿರೋಧ (91-92)[3]. "ಬಾಲ್ಯದಲ್ಲಿ ಅವರನ್ನು ಲಾಲಿಸಿ ಪಾಲಿಸುವ ಭಾಗ್ಯ, ಅವರ ಆಟವನ್ನು ನೋಡಿ ನಲಿಯುವ ಭಾಗ್ಯ, ಈ ದಂಪತಿಗಳ ಪಾಲಿಗೆ ಬರಲಿಲ್ಲ. ಅದೆಂಥ ಕೊರತೆ ಎಂಬುದನ್ನು ಮಕ್ಕಳು ಮೊಮ್ಮಕ್ಕಳನ್ನುಳ್ಳವರೆಲ್ಲ ಬಲ್ಲರು"(110) ಎಂಬ ಮಾತು ಅವರ ಅನುಭವ ಜನ್ಯ. `ವಿಮಾನಯಾನೆಯ ಅಂದ ಚೆಂದ', ಲಲಿತ ಪ್ರಬಂಧ ಹಾಗೂ ಅವರ ಆತ್ಮಚರಿತ್ರೆಯಲ್ಲಿ ಪ್ರಾಸಂಗಿಕವಾಗಿ ಉಲ್ಲೇಖಿಗೊಂಡ ಕುಟುಂಬದ ಪರಸ್ಪರ ಸಂಬಂಧ , ಪ್ರೀತಿ ವಾತ್ಸಲ್ಯಗಳು ಈ ಮಾತಿಗೆ ಪೂರಕವಾಗಿವೆ.

**ವಿಮರ್ಶೆಯ ಹಿನ್ನಲೆ**

ಈ ವಿಮರ್ಶೆಯ ಹಿನ್ನೆಲೆ ಬಹು ಸ್ವಾರಸ್ಯಕರವಾದದ್ದು. ವೃತ್ತಿಯಿಂದ ಇಂಗ್ಲೀಷ್ ಸಾಹಿತ್ಯವನ್ನು ಬೋಧಿಸುವ ಮೂರ್ತಿರಾಯರು ಶಿವಮೊಗ್ಗದ ಇಂಟರ್‌ಮೀಡಿಯೆಟ್ ಕಾಲೇಜಿನ ಪ್ರಿನ್ಸಿಪಾಲರಾಗಿ ಬಂದ ಕಾಲದಲ್ಲಿ ಕೆಮಿಸ್ಟ್ರಿ ಅಧ್ಯಾಪಕರಾಗಿದ್ದ ಶ್ರೀ ಕಸ್ತೂರಿ ರಂಗಾಚಾರ್ಯರೊಂದಿಗೆ ಸಂಸ್ಕೃತ ಭಾಷೆ ಸಾಹಿತ್ಯಗಳನ್ನು ಅಧ್ಯಯನ ಮಾಡಿದರು. ಈ ಅಧ್ಯಯನ ಅತ್ಯಂತ ಶಾಸ್ತ್ರೀಯವಾಗಿಯೇ ನಡೆಯಿತು. ಹೀಗೆ ಮೂರ್ತಿರಾಯರು ಕೇವಲ ಅನುವಾದಗಳನ್ನಷ್ಟೇ ಓದದೆ ಮೂಲಕೃತಿಗಳನ್ನೇ ಅಧ್ಯಯನ ಮಾಡಿ ಈ ವಿಮರ್ಶೆ ಬರೆದಿದ್ದಾರೆ.

ಕೇವಲ ಓದಿನಿಂದ ಮಾತ್ರವೇ ತೃಪ್ತರಾಗದ ಮೂರ್ತಿರಾಯರು ಆ ಕಾಲದ ಉದ್ದಾಮ ಪಂಡಿತರೊಡನೆ ಈ ಕುರಿತಾಗಿ ಚರ್ಚೆ ಮಾಡಿದ್ದಾರೆ. ಅವರ ದೂರದ ಬಂಧುಗಳಾದ ಹರಿಭಟ್ಟರೊಂದಿಗೆ ಒಮ್ಮೆ ಇದೇ ವಿಷಯವನ್ನು ಕುರಿತು ಚರ್ಚಿಸಿದ್ದರು. ಅವರು ಹಳೆಯ ಕಾಲದ ವೈದೀಕರಾದರೂ, ಸಂಪ್ರದಾಯಸ್ಥರೇ ಆದರೂ, ರಾಮಾಯಣ ಪಾರಾಯಣ ಮಾಡುವವರೇ ಆದರೂ ಸೀತೆಯನ್ನು ತ್ಯಜಿಸಿದ ರಾಮನನ್ನು "ಶುದ್ಧ ಬೇಕೂಫ್"ಎಂದು ರೇಗಿದ್ದನ್ನು ಅವರು ಉಲ್ಲೇಖಿಸುತ್ತಾರೆ. (ಪುಟ 25-26)

ಆ ಕಾಲದ ಖ್ಯಾತ ವಿದ್ವಾಂಸರೂ, ಸಂಸ್ಕೃತ ಸಾಹಿತ್ಯದಲ್ಲಿ ಘನ ವಿದ್ವಾಂಸರೂ ಆದ ಡಾ. ಡಿ. ವಿ. ಗುಂಡಪ್ಪನವರೊಡನೆ ತಮ್ಮ ಆಕ್ಷೇಪಗಳನ್ನು ಕುರಿತು ವಿಚಾರ ವಿನಿಮಯ ಮಾಡಿಕೊಂಡಿದ್ದರು. (ಪುಟ 50)

ಮೂರ್ತಿರಾಯರ ಸಮಕಾಲೀನರೂ ಅವರ ಹಿತೈಷಿಗಳೂ ಆಗಿದ್ದ ಟಿ. ಎಸ್. ವೆಂಕಣ್ಣಯ್ಯನವರೂ ಸಹ ಈ ವಿಚಾರದಲ್ಲಿ ಭಾಗಿಯಾದವರು. ಅವರೊಂದಿಗೆ ನಡೆದ ಸಂವಾದದ ಸಾರ ಭಾಗವನ್ನು ಅವರು ಹೀಗೆ ಬರೆಯುತ್ತಾರೆ : "ವೆಂಕಣ್ಣಯ್ಯನವರು `ವಾಲ್ಮೀಕಿ ತಾನು ಸೃಷ್ಟಿಸಿದ ರಾಮನನ್ನು ಕಾಣ, ಅವನನ್ನು ಬಲ್ಲವನು ಭವಭೂತಿ' ಎಂದಾಗ ಅವರ ಮನಸ್ಸಿನಲ್ಲಿದ್ದದ್ದು ಬಹುಶಃ ಇದೇ" (ಪುಟ 93). ಈ ವಸ್ತುವಿನ ಆಯ್ಕೆಗೂ ವೆಂಕಣ್ಣಯ್ಯನವರ ಮಾತೇ ಅವರಿಗೆ ಪ್ರೇರಕ (11).

ಇಂತಹ ಬಹು ಚರ್ಚಿತ ವಿಷಯಗಳನ್ನು ಕುರಿತು `ಪೂರ್ವಸೂರಿಗಳು' ಏನು ಹೇಳಿದ್ದಾರೆಂಬುದನ್ನೂ ಅವರು ಅಧ್ಯಯನ ಮಾಡಿದ್ದಾರೆ. ಸುಪ್ರಸಿದ್ಧ ವ್ಯಾಖ್ಯಾನಕಾರರ ವ್ಯಾಖ್ಯಾನಗಳನ್ನೋದಿದ್ದಾರೆ. ಆದರೆ ಆ ವ್ಯಾಖ್ಯಾನಗಳೇ ಅಂತಿಮವೆಂದು ಅವರು ಒಪ್ಪಿ

ಕೊಂಡಿಲ್ಲ. ತಾವು ಸ್ವತಃ ಚಿಂತನೆ ಮಾಡಿ ತಮ್ಮ ಸ್ವಂತ ವ್ಯಾಖ್ಯಾನವನ್ನೂ ನೀಡಿದ್ದಾರೆ (32–33 )[4]

ಸಂಸ್ಕೃತ ಸಾಹಿತ್ಯದಲ್ಲಿ, ಅದರಲ್ಲಿಯೂ ಕಾಳಿದಾಸನ ಕೃತಿಗಳ ಬಗ್ಗೆ ಮಲ್ಲಿನಾಥ ಪ್ರಸಿದ್ಧ ವ್ಯಾಖ್ಯಾನಕಾರ. ಮಲ್ಲಿನಾಥನ ವ್ಯಾಖ್ಯಾನವನ್ನೂ ಅಭ್ಯಾಸ ಮಾಡಿ ಅವನ ಅಭಿಪ್ರಾಯದ ಬಗ್ಗೆಯೂ ಚಿಂತನೆ ಮಾಡಿದ್ದಾರೆ. (ಪುಟ 73)[5]

ಪ್ರಾಚೀನ ಗ್ರಂಥಗಳನ್ನು ಅಧ್ಯಯನ ಮಾಡುವಾಗ ಆ ಕಾವ್ಯದ ಗುಣಗಳನ್ನೂ ಅಧ್ಯಯನ ಮಾಡುವುದು ಒಂದು ರೂಢಿ. ಕಾವ್ಯದ ಅಂಗಗಳಾದ ಛಂದಸ್ಸು, ಅಲಂಕಾರ, ಸಂಧಿ ಸಮಾಸಗಳೂ ಸಹ ಈ ಅಧ್ಯಯನದ ಕಕ್ಷೆಯಲ್ಲಿ ಬರುತ್ತವೆ. ಮೂರ್ತಿರಾಯರು ಇನ್ನೂ ಮುಂದೆ ಹೋಗಿ ಉಪಯೋಗಿಸಿದ ಪರುಷಾಕ್ಷರಗಳನ್ನೂ ಪಾತ್ರ, ಸನ್ನಿವೇಶಗಳ ವಿಶ್ಲೇಷಣೆಯ ಸೌಕರ್ಯಕ್ಕಾಗಿ ಗಮನಿಸಿದ್ದಾರೆ. ಇದು ಹೀಗೆ :

"ರಾವಣಾಂಕ ಪರಿಭ್ರಷ್ಟಾಂ ದೃಷ್ಟ್ವಾಂ ದುಷ್ಟೇನ ಚಕ್ಷುಷಾ" ಈ ಶ್ಲೋಕಾರ್ಧದ ಪದಗಳಲ್ಲಿ ಮಾತ್ರವಲ್ಲ, ಅಕ್ಷರ ಅಕ್ಷರದಲ್ಲೂ ರೋಷವಿದೆ. ಮತ್ತೆ ಮತ್ತೆ ಬರುವ 'ಷ'ಕಾರ 'ಟ'ಕಾರ ಒಂದೊಂದರಲ್ಲೂ ತಿರಸ್ಕಾರ ತುಂಬಿ ತುಳುಕುತ್ತಿದೆ. (ಪುಟ 23).

"ಈ ಶ್ಲೋಕದಲ್ಲಿ ಪದಗಳ ಔಚಿತ್ಯ ಮತ್ತು ಬಿಗಿ ಅಡಕವಾಗಿರುವ ಸೌಂದರ್ಯ, ಅನುಷ್ಟುಪ್‌ನ ವೇಗ ಎಲ್ಲ ನಮ್ಮನ್ನು ಆಕರ್ಷಿಸುತ್ತವೆ. ಎಲ್ಲೆಲ್ಲೂ ಕಾಣಬರುವ ಸರ್ವಸಾಧಾರಣವಾದ ಅನುಷ್ಟುಪ್ ಅನ್ನು ಎಷ್ಟು ಪರಿಣಾಮಕಾರಿಯಾಗಿ ಉಪಯೋಗಿಸ ಬಹುದು ಎನ್ನುವುದಕ್ಕೆ ಇದು ಒಳ್ಳೆಯ ಉದಾಹರಣೆ" (ಪುಟ 75) (64, 90)

"ಈ ಶ್ಲೋಕದಲ್ಲಿ 'ಭರ್ತೃಪ್ರಣಿಹಿತೇಕ್ಷಣಾಂ' ಎಂಬ ವಿಶೇಷಣವನ್ನು ಗಮನಿಸ ಬೇಕು" (ಪುಟ 75)

ಸೀತಾ ಪರಿತ್ಯಾಗದ ಭಾಗವನ್ನಷ್ಟೇ ಅವರು ವಿಮರ್ಶಿಸಿಲ್ಲ. ಅದಕ್ಕೆ ಪೂರಕವಾದ ಸೀತೆಯ ಅಗ್ನಿ ಪ್ರವೇಶದ ಸಂದರ್ಭವನ್ನೂ ತಮ್ಮ ಅಭಿಪ್ರಾಯ ಮಂಡನೆಗೆ ಹಿನ್ನೆಲೆಯಾಗಿ ಉಪಯೋಗಿಸಿಕೊಂಡಿದ್ದಾರೆ. (ಪುಟ 16 ರಿಂದ 42)

ಪ್ರಾಚೀನ ಕಾವ್ಯಗಳಲ್ಲಿ ಪಾಠಾಂತರಗಳೂ ಇವೆ. ಮೂರ್ತಿರಾಯರು ಇಂತಹ ಪಾಠಾಂತರವನ್ನೂ ಕೂಡಾ ಗಮನಿಸಿದ್ದಾರೆ. ಇದು ಅವರ ವಿಮರ್ಶೆಯ ವಸ್ತುವಿನ ವಿಶ್ಲೇಷಣೆಗೆ ಮತ್ತೊಂದು ಆಯಾಮವನ್ನು ಒದಗಿಸುತ್ತದೆ. (102)[6] ವಿಮರ್ಶೆಯಲ್ಲಿ ಪ್ರತಿ ಶಬ್ದವೂ ಹೇಗೆ ಗಮನಾರ್ಹ ಎಂಬುದನ್ನು ಪ್ರಖ್ಯಾತ ಸೋವಿಯತ್ ವಿಮರ್ಶಕ ರೊಬ್ಬರು ಹೀಗೆ ಹೇಳುತ್ತಾರೆ:

**ವಿಮರ್ಶೆ - ತೌಲನಿಕತೆ**

ರಾಮಾಯಣದ ಈ ಸೀತಾಪ್ರತ್ಯಾದೇಶ ಪ್ರಸಂಗ ಹಲವು ನಾಟಕಗಳಿಗೆ ಆಕರವಾಗಿದೆ. ಮೂರ್ತಿರಾಯರು ಇಲ್ಲಿ ನಾಲ್ಕು ಹಿನ್ನೆಲೆಗಳನ್ನು ಆಯ್ದುಕೊಂಡಿದ್ದಾರೆ. ವಾಲ್ಮೀಕಿ ರಾಮಾಯಣದಲ್ಲಿ ಬರುವ ಸೀತೆಯ ಅಗ್ನಿ ಪ್ರವೇಶ, ಉತ್ತರ ಕಾಂಡದ ಸೀತಾ ಪರಿತ್ಯಾಗ, ಕಾಳಿದಾಸನ 'ರಘುವಂಶ'ದಲ್ಲಿ ಬರುವ ಸೀತಾ ಪರಿತ್ಯಾಗ ಹಾಗೂ ಭವಭೂತಿಯ ನಾಟಕ 'ಉತ್ತರರಾಮ ಚರಿತ'

ಮೊದಲ ಎರಡು ಅಧ್ಯಾಯಗಳು ವಾಲ್ಮೀಕಿ ರಾಮಾಯಣದ ಪ್ರಸಂಗ (12-42) ಹಾಗೂ ಉತ್ತರಕಾಂಡದ ಪ್ರಸಂಗಕ್ಕೂ (42–62) ಮೀಸಲಾಗಿವೆ. ಅನಂತರ ಮೂರನೇ ಅಧ್ಯಾಯದಲ್ಲಿ ಕಾಳಿದಾಸ ಈ ಪ್ರಸಂಗಗಳನ್ನು ಹೇಗೆ ಮಾರ್ಪಡಿಸಿಕೊಂಡಿದ್ದಾನೆಂದು ಸಂಕ್ಷೇಪವಾಗಿ ಹೇಳಿ ಅನಂತರ ವಾಲ್ಮೀಕಿ, ಉತ್ತರಕಾಂಡಕಾರ ಹಾಗೂ ಕಾಳಿದಾಸ – ಈ ಮೂವರು ಎಲ್ಲೆಲ್ಲಿ ಭಿನ್ನರಾಗುತ್ತಾರೆ ಎಂಬುದನ್ನೂ ಸೋದಾಹರಣವಾಗಿ, ತೌಲನಿಕವಾಗಿ ವಿಶ್ಲೇಷಣೆ ಮಾಡುತ್ತಾರೆ. ಕಾಳಿದಾಸ ಉಪಯೋಗಿಸಿದ 'ಇಂದ್ರಿಯಾರ್ಥ', ಉತ್ತರಕಾಂಡಕಾರನ 'ಯಾಕಾಜಿತ್' ಹಾಗೂ ವಾಲ್ಮೀಕಿಯ 'ಸಹಧರ್ಮಚರೀ' ಈ ಮೂರೂ ವಿಶೇಷಗಳನ್ನು ತೂಗಿ ನೋಡಿ ಕಾಳಿದಾಸನ ದೋಷವನ್ನೂ ಗುರುತಿಸುತ್ತಾರೆ. (69–70)[7]

ಉತ್ತರಕಾಂಡ ವಾಲ್ಮೀಕೀ ಕೃತವಲ್ಲವೆಂದ ಮಾತ್ರಕ್ಕೆ ಅದು ದೂಷ್ಯವೆಂದೂ, ತ್ಯಾಜ್ಯವೆಂದೂ ಅವರು ತೀರ್ಮಾನಿಸಿಲ್ಲ. ಬದಲಾಗಿ ಅಲ್ಲಿಯೂ ಇರುವ ಉತ್ತಮಾಂಶಗಳನ್ನು ತೌಲನಿಕ ಹಿನ್ನೆಲೆಯಲ್ಲಿ ಗುರುತಿಸಿದ್ದಾರೆ. (ಪುಟ 68)

ಕಾಳಿದಾಸನ ಮಾತುಗಳಲ್ಲಿಯೇ ಕಾಳಿದಾಸ ವಾಲ್ಮೀಕಿಯರನ್ನು ಹೋಲಿಸಿ, ಉತ್ತರಕಾಂಡದ ಸ್ಥಾನ ನಿರ್ಣಯ ಮಾಡಿದ್ದಾರೆ. (76–77)

ಉತ್ತರಕಾಂಡ, ರಘುವಂಶ ಎರಡೂ ಕಾವ್ಯಗಳಲ್ಲಿ ಬಂದಿರುವ ದೋಷಗಳನ್ನೂ ಗುರುತಿಸಿ, ಭವಭೂತಿ ಮಾಡಿಕೊಂಡಿರುವ ಮಾರ್ಪಾಡನ್ನೂ ಗುರುತಿಸಿದ್ದಾರೆ.

ಕಾಳಿದಾಸ ಎಲ್ಲಿ ನಮಗೆ ಒಪ್ಪಿಗೆಯಾಗುತ್ತಾನೆ, ಉತ್ತರಕಾಂಡಕಾರ ಎಲ್ಲಿ ಒಪ್ಪಿಗೆಯಾಗುವುದಿಲ್ಲವೆಂದೂ ಅವರು ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ನಿರೂಪಿಸುತ್ತಾರೆ. (105)[8]

ಮೂರ್ತಿರಾಯರ ಅಭಿಪ್ರಾಯದಲ್ಲಿ "ರಾಮಾಯಣದ ಮೊದಲ ಆರು ಕಾಂಡಗಳನ್ನು ಬರೆದವನು ವಾಲ್ಮೀಕಿ. ಉತ್ತರಕಾಂಡ ವಾಲ್ಮೀಕೀಕೃತವಲ್ಲ". (49)[9]

ಇದೇ ಅಭಿಪ್ರಾಯವನ್ನು ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರೂ ಸಹ ವ್ಯಕ್ತಪಡಿಸುತ್ತಾರೆ. ಅವರ ದೃಷ್ಟಿಯಲ್ಲಿಯೂ ಕೂಡಾ ಉತ್ತರಕಾಂಡ ವಾಲ್ಮೀಕಿ ಕೃತವಲ್ಲ. (ಉತ್ತರಕಾಂಡ ವಿಚಾರ. ಜೀವನ ಕಾರ್ಯಾಲಯ. 1981 ಪುಟ 47)[10]

ಮೂರ್ತಿರಾಯರು ಸೀತೆಯ ದುಃಖಕ್ಕೆ ಕಾರಣನಾದ[11] ರಾಮನನ್ನು ಕುರಿತು ಶ್ಲೋಕ ಒಂದನ್ನು ರಚಿಸಿದ್ದರೂ "ರಾಮನನ್ನು ಪರಿಸ್ಥಿತಿಯ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳುತ್ತಾರೆ.[12] (ಪುಟ 47, 89) (109) ಪಂಪ್ಪಣನ ಕಾವ್ಯದಲ್ಲಿ ಬರುವ ಮನೋರಮೆಯ ಉಗ್ರ ಪ್ರತಿಕ್ರಿಯೆ[13] ಇಲ್ಲಿ ಕಂಡುಬರುವುದಿಲ್ಲ. ಡಾ. ಕೆ. ಕೃಷ್ಣಮೂರ್ತಿಯವರೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.[14]

ಈ ವಿಮರ್ಶೆಯ ಭರತವಾಕ್ಯ[15] ಮೂರ್ತಿರಾಯರ ಮನೋಧರ್ಮ ಹಾಗೂ ಮಾನಸಿಕ ಸಮತೋಲನವನ್ನು ಸೂಚಿಸುತ್ತದೆ. ಇದು ಅವರು ಪ್ರಾಚೀನ ಕೃತಿಗಳ ಪ್ರಮುಖ ಪಾತ್ರಗಳಿಗೆ ಕೊಟ್ಟ ಗೌರವವೂ ಹೌದು. ಕೃತಿಯೊಂದರ ಬಗ್ಗೆ ಇರುವ ಗೌರವ ಬೇರೆ, ನಿಷ್ಪಕ್ಷಪಾತ ದೃಷ್ಟಿಯ ವಿಮರ್ಶೆ ಬೇರೆ. ಮೂರ್ತಿರಾಯರು ಈ ಎರಡನ್ನೂ ಇಲ್ಲಿ ಸಾಧಿಸಿದ್ದಾರೆ.

**ಅಂತ್ಯ ಟಿಪ್ಪಣಿ**

1. ರಾಮ, "ನನ್ನ ತಂದೆಯ ಅನುಚರರಲ್ಲಿ 'ರಾಮಭದ್ರ' ಎಂಬ ಮಾತೇ ಹೆಚ್ಚು ಶೋಭಿಸುತ್ತದೆ. ಹಿಂದಿನ ಪದ್ಧತಿಯಂತೆ ಕರೆ." ಎಂದು ಹೇಳಿ ಅವರ ಶಂಕೆಯನ್ನು ನಿವಾರಿಸುತ್ತಾನೆ.

ವಿಶ್ವಂಭರಾ ಭಗವತೀ ಭವತೀಮಸೂತ ।
ರಾಜಾ ಪ್ರಜಾಪತಿ ಸಮೋ ಜನಕಃ ಪಿತಾತೇ ।
ತೇಷಾಂ ವಧೂಸ್ತ್ವಮಸಿ ನಂದಿನಿಪಾರ್ಥಿವಾನಾಂ ।
ಯೇಷಾಂ ಕುಲೇಷು ಸವಿತಾ ಚ ಗುರುವಯಂ ಚ ।
ತತ್ಕಿಮನ್ಯದಾಶಾಸ್ಮಹೇ ? ಕೇವಲಂ ವೀರಪ್ರಸವಾಭೂಯಾಃ ॥ (ಅಂಕ1)

ಬಳಿಕೆಯ ಮಾತಿನಲ್ಲಿ ಇದರ ಭಾವಾನುವಾದ ಹೀಗಾಗುತ್ತಿದೆ: "ನಿನಗೇನಮ್ಮ! ಭೂದೇವಿಯೇ ನಿನ್ನ ತಾಯಿ, ಬ್ರಹ್ಮಸಮಾನನಾದ ಜನಕ ಮಹಾರಾಜ ನಿನ್ನ ತಂದೆ, ನಮ್ಮಂಥವರನ್ನು ಗುರುಗಳಾಗುಳ್ಳ ಸೂರ್ಯವಂಶದ ಮನೆಗೆ ಸೊಸೆಯಾಗಿ ಬಂದಿದ್ದೀಯೆ. ನಿನಗೆ ಆಶೀರ್ವಾದ ಮಾಡತಕ್ಕದ್ದೇನಿದೆ ' ವೀರಪುತ್ರರ ತಾಯಿಯಾಗು ಎನ್ನಬಹುದು, ಅಷ್ಟೆ. "

2. ಅದ್ವೈತಂ ಸುಖದುಃಖಯೋರನುಗತಂ ಸರ್ವಾಸ್ವವಸ್ಥಾಸು ಯತ್ ।
ವಿಶ್ರಾಮೋ ಹೃದಯಸ್ಯ ಯತ್ರ ಜರಸಾ ಯಸ್ಮಿನ್ನಹಾರ್ಯೋ, ರಸಃ ॥
ಕಾಲೇನಾವರಣಾತ್ಯಯಾತ್ಪರಿಣತೇ ಯತ್ಸ್ನೇಹಸಾರೇ ಸ್ಥಿತಂ ।
ಭದ್ರಂ ಸತ್ಯ ಸುಮಾನುಷಸ್ಯ ಕಥಮಪ್ಯೇಕಂ ಹಿ ತತ್ಪ್ರಾಪ್ಯತೇ ॥ (1-39)

ಸುಖದುಃಖಗಳಲ್ಲಿ ಅದ್ವೈತ, ಜೀವನದ ಎಲ್ಲಾ ಪರಿಸ್ಥಿತಿಗಳಲ್ಲೂ ಅನುಕೂಲವಾಗಿ ಅನುಸರಿಸತಕ್ಕದ್ದು, ಹೃದಯಕ್ಕೆ ನೆಮ್ಮದಿ ಕೊಡುವಂಥಾದ್ದು, ಮುಪ್ಪಿನಲ್ಲೂ ಸವಿ ಇಳಿಯದಂಥಾದ್ದು, ಕಾಲ ಹರಿದಂತೆಲ್ಲ ಇಬ್ಬರ ನಡುವೆ ಇದ್ದ ತಡೆಗಳು ನಾಶವಾಗಿ ಮಾಗಿ ಪ್ರೇಮಸಾರವಾಗಿ ಪರಿಣಮಿಸುವುದು - ಇಂಥ ಅಪೂರ್ವ ದಾಂಪತ್ಯ ಯಾರಿಗೆ ಲಭಿಸುತ್ತದೆಯೋ, ಹೇಗೆ ಲಭಿಸುತ್ತದೆಯೋ, ಅದನ್ನು ಪಡೆದವನು ಧನ್ಯ.

ದಾಂಪತ್ಯ ಪ್ರೇಮದ ಪರಾಕಾಷ್ಠೆಯನ್ನು ಇದಕ್ಕಿಂತ ಸುಂದರವಾಗಿಯೂ ಅರ್ಥಪೂರ್ಣವಾಗಿಯೂ ಬಣ್ಣಿಸಿದ್ದನ್ನು ನಾನು ಇನ್ನೆಲ್ಲೂ ಕಂಡಿಲ್ಲ.

3. ರಾಮನಿಗೆ ಸೀತೆಯಲ್ಲಿರುವ ಪ್ರೇಮ ಗಾಢವಾದದ್ದು, ಗಂಭೀರವಾದದ್ದು, ಪರಿಣತವಾದದ್ದು, ಹೆಂಗರುಳಿನದು ಎಂದೂ ಎನ್ನಬಹುದು. ಅದರ ವಿಷಯದಲ್ಲಿ ಕಾಳಿದಾಸ ಉಪಯೋಗಿಸಿರುವ 'ಇಂದ್ರಿಯಾರ್ಥಾ' ಎಂಬ ಪದವನ್ನು ಸರ್ವಥಾ ಬಳಸಲಾಗದು.

4. ಈ ಶ್ಲೋಕಾರ್ಥಕ್ಕೆ ನಾನು ಮಾಡಿರುವ ಅರ್ಥ ಸರಿಯೆ ಎಂಬ ಸಂದೇಹ ನನಗೆ ಬಂದಿದೆ. ಈ ವ್ಯಾಖ್ಯಾನವಲ್ಲದೆ ಬೇರೆ ವ್ಯಾಖ್ಯಾನವೂ ಸಾಧ್ಯ. ರಾಮನಿಗೆ, 'ಇಲ್ಲಿಂದ ಬೇಗ ಹೊರಡುವುದೊಳ್ಳೆಯದು' ಎನ್ನಿಸಿ ಅವನು ಈ ನೆಪ ಹೇಳಿರಬಹುದು. ಅದೇ ಸರ್ಗದ 39ನೇ ಶ್ಲೋಕದ ಉತ್ತರಾರ್ಧ ಹೀಗಿದೆ : "ಕೈಕೇಯ್ಯಾ ಚೋದ್ಯ ಮಾನಸ್ತು ಮಿಥೋ ರಾಜಾತಮಬ್ರವೀತ್" ಕೈಕೇಯಿಯಿಂದ ರಹಸ್ಯವಾಗಿ ಚೋದಿತನಾಗಿ ದಶರಥ ಹೀಗೆ ಹೇಳಿದ, (ಕೈಕೇಯಿ ಹೇಳಿದ್ದು ರಾಮ ಒಂದು ರಾತ್ರಿ ಇರಲಿ ಎಂದಲ್ಲ) "ಕೈಕೇಯಿ

ರಾಜನ ಕಿವಿಯಲ್ಲಿ ಏನೇ ಹೇಳಲಿ, ಕೈಕೇಯಿಗೆ ನಾನಿರುವುದು ಇಷ್ಟವಿಲ್ಲ. ಏನಾದರೂ ನೆಪ ಹೇಳಿ ಇಲ್ಲಿಂದ ಹೊರಡುವುದು ಒಳ್ಳೆಯದು; ನಾಳೆ ನನ್ನ ಮನಸ್ಸು ಹೇಗಿರುತ್ತೋ!" ಎಂದು ನೆಪ ಹೇಳಿರಬಹುದು.

5. 'ರಾಮನನ್ನು ಖಂಡಿಸಿರುವುದು ಸೀತೆಯ ಸಮಾಧಾನಕ್ಕಾಗಿ' ಎಂದು ಮಲ್ಲಿನಾಥ ತನ್ನ ವ್ಯಾಖ್ಯಾನದಲ್ಲಿ ಸೂಚಿಸಿದ್ದಾನೆ. ಆದರೆ ಅದು ವಾಸ್ತವವಾಗಿ ವಾಲ್ಮೀಕಿಯ ಅಭಿಪ್ರಾಯವೂ ಹೌದು ಎಂದು ನಾವು ನಂಬಬಹುದು.

6. ('ನಾತಿಶೋಚಿತಾ' ಎಂಬ ಪಾಠವನ್ನು ಅಂಗೀಕಾರಿಸಿದರೆ 'ಹೆಚ್ಚಾಗಿ ಮರುಗ ಲಿಲ್ಲ' ಎಂಬ ಅರ್ಥ ಬರುತ್ತದೆ.).

7. ವಾಲ್ಮೀಕಿ, ಉತ್ತರಕಾಂಡಕಾರ, ಕಾಳಿದಾಸ ಮೂವರಲ್ಲೂ ಈ ಅಸಮರ್ಪಕತೆ ಕಾಣುತ್ತದೆ. ಉತ್ತರಕಾಂಡಕಾರ ಉಳಿದವರಿಗಿಂತ ಸ್ವಲ್ಪ ಮೇಲು.

8. ಕಾಳಿದಾಸನ ವಾಲ್ಮೀಕಿ 'ಅಸ್ತ್ಯೇವ ಮನ್ಯುರ್ಭರತಾಗ್ರಜೇಮೇ. (ರಾಮನ ವಿಷಯ ದಲ್ಲಿ ನನಗೆ ಕೋಪವಿದ್ದೇ ಇದೆ) ಎಂದಾಗ ನಾವೂ ಅವನ ಜೊತೆಗೆ ದನಿಗೂಡಿಸುತ್ತೇವೆ. ಆದರೆ ಉತ್ತರ ರಾಮಚರಿತೆಯ ರಾಮನಿಗೆ ನಮ್ಮಿಂದ ಸಲ್ಲುವುದು ಕನಿಕರವೇ ಹೊರತು ಕೋಪವಲ್ಲ.

9. ಉತ್ತರಕಾಂಡಕಾರ ಹಿಂದಿನ ರಾಮನ ಚಿತ್ರದಲ್ಲಿರುವ ದೋಷಗಳನ್ನೆಲ್ಲ ಗಮನಿಸಿ ಒಂದೊಂದಾಗಿ ಅವನ್ನು ನಿವಾರಿಸುವ ಪ್ರಯತ್ನ ಮಾಡಿದಂತಿದೆ. ಅದರಿಂದಲೇ 'ಇದನ್ನು ಬೇರೊಬ್ಬ ಕವಿ ಬರೆದಿರಬಹುದಲ್ಲವೇ?' ಎಂಬ ಸಂದೇಹ ಬರುತ್ತದೆ.

10. ನಮ್ಮ ಹೊಸ ಕವಿ ಇವೆರಡನ್ನೂ ಮುಖ್ಯ ಸಂಗತಿಯನ್ನಾಗಿ ಮಾಡಿ ಒಂದು ಕಾವ್ಯವನ್ನು ರಚಿಸಿದನು. ಅದನ್ನು ಉತ್ತರಕಾಂಡ ಎಂದನು.

11. ಜನಾಪವಾದ ಭೀತಂ ಚ ಜಾನಕೀ ಶೋಕ ಕಾರಣಂ ।
ನಸ್ಮರೇದ್ವಾಲಿ ಹಂತಾರಂ ರಾಘವಂ ಧರ್ಮ ಬಾಹಿರಂ ॥

12. ಇಲ್ಲಿಯ ರಾಮ ತನ್ನ ಮನಸ್ಸಿನಲ್ಲಿರುವುದನ್ನು ಬಚ್ಚಿಡುವ ಪ್ರಯತ್ನ ಮಾಡುವುದಿಲ್ಲ. ಜನಾಪವಾದ ಅವನ ಮೇಲೆ ವಜ್ರಾಘಾತದಂತೆ ಅಪ್ಪಳಿಸಿದೆ.

ಆದರೆ ಇಲ್ಲಿಯ ರಾಮನ ಪ್ರಾಮಾಣಿಕತೆಯ ವಿಷಯದಲ್ಲಿ ಭಿನ್ನಾಭಿಪ್ರಾಯಕ್ಕೆ ಅವಕಾಶವಿಲ್ಲ. ಅವನು ತನ್ನ ನಂಬಿಕೆಗನುಸಾರವಾಗಿ ನಡೆದುಕೊಂಡ, ತನ್ನ ಆದರ್ಶಕ್ಕೆ ಭಂಗ ಬರದಂತೆ ನಡೆದುಕೊಂಡ. ಇಲ್ಲಿ ಸೀತಾ ಪರಿತ್ಯಾಗಕ್ಕೆ ಕಾರಣವಾದದ್ದು ಸ್ವಪ್ರತಿಷ್ಠೆ ಯಲ್ಲ, ಕುಲಪ್ರತಿಷ್ಠೆಯಲ್ಲ ಸಂದೇಹ, ಕ್ರೋಧ, ಮಾತ್ಸರ್ಯಾದಿಗಳಲ್ಲ, ಕರ್ತವ್ಯ ದೃಷ್ಟಿಯೊಂದೇ. ಇಲ್ಲಿಯ ರಾಮನ ಸ್ವಾರ್ಥರಾಹಿತ್ಯವನ್ನಾಗಲೀ, ಪ್ರಾಮಾಣಿಕತೆ ಯನ್ನಾಗಲೀ, ಸೀತೆಯಲ್ಲಿ ಅವನಿಗಿದ್ದ ಪ್ರೇಮವನ್ನಾಗಲಿ ಯಾರೂ ಪ್ರಶ್ನಿಸುವಂತಿಲ್ಲ. ಸೀತೆಯಷ್ಟೇ ಅವನೂ ಸಂಕಟಪಟ್ಟಿದ್ದಾನೆ. ಸೀತೆಯಷ್ಟೇ ಅವನೂ ಪರಿಶುದ್ಧ. ರಾಮನೆದುರು ಕವಲೊಡೆದ ಕರ್ತವ್ಯ ನಿಂತಿತ್ತು. ಅವನು ಆಯ್ದುಕೊಂಡ ದಾರಿ ತಪ್ಪು ಎಂದರೂ ಅದು ವೈಚಾರಿಕ ದೃಷ್ಟಿಯಿಂದ ಮಾತ್ರ ತಪ್ಪು. ಭವಭೂತಿ ಅವನ ಮೇಲೆ ಆ ತಪ್ಪನ್ನೂ ಹೊರಿಸುವುದಿಲ್ಲ. ಕವಲೊಡೆದಿರುವ ಮಾರ್ಗಗಳಲ್ಲಿ ಯಾವುದನ್ನು ಹಿಡಿಯಬೇಕೆಂದು ಸ್ಪಷ್ಟವಲ್ಲದಿರುವಾಗ ಏನು ಮಾಡಬೇಕು? ತನ್ನ ಸುಖದ ದಾರಿಯನ್ನು ಬಿಟ್ಟು ಕಷ್ಟದ ದಾರಿಯನ್ನು ಹಿಡಿಯುವುದು ನೀತಿವಂತನ ಲಕ್ಷಣ. ಅವನು ಸ್ವಾರ್ಥದಿಂದ

ವಂಚಿತನಾಗುವ ಅಪಾಯವಿಲ್ಲ, ಅದ್ದರಿಂದ ರಾಮ ಹಿಡಿದ ದಾರಿ ಪ್ರಶಂಸಾರ್ಹ ಎಂದರೂ ಎನ್ನಬಹುದು.

13. ಸೀತೆಯನಂತುಮಿದುವೇತ ಸೀತಾರಾಮಂ। ಪೋ। ಮಾಣೆ, ಅವನಿಂಗೆತ್ತಣ ಸೀತೆ, ಅಪ್ಪೊಡಿನ್ನಾಕಲ್ಲೆರ್ದೆಯಂ ರಾಮನೋ ಭೀಮನೋ? ಏನ್? (ಶ್ರೀರಾಮಾಶ್ವ ಮೇಧಂ. 44)

14. ಭವಭೂತಿ ತನ್ನ ನಾಟಕ ಸ್ವಾಭಾವಿಕವಾಗಿ, ಅನಿವಾರ್ಯವಾಗಿ, ಸುಖಾಂತ ವಾಗುವಂತೆ ಅದನ್ನು ಬೆಳೆಸಿದ್ದಾನೆ. (109)

ಹೀಗೆ ರಾಮಸೀತೆಯರ, ಜನಕ ವಸಿಷ್ಠಾದಿಗಳ, ಪಾತ್ರಗಳೆಲ್ಲಕ್ಕೂ ಉಜ್ವಲತಮ ಪ್ರಕರ್ಷವನ್ನು ಸಾಧಿಸಿ, ಕಥಾಭಾಗದ ಅಸಮಂಜಸತಾಂಶಗಳೆಲ್ಲವೂ ಅಳಿಸಿಹೋಗುವಂತೆ ಮಾಡಿ, ಸೀತಾರಾಮರಪುನಸ್ಸಮಾಗಮವನ್ನು ನಾಟಕೋಚಿತವಾಗಿ ನಿರ್ವಹಿಸಬೇಕೆಂಬುದೇ ಭವಭೂತಿಯ ಗುರಿ. ಈ ಗುರಿಯನ್ನು ಮುಟ್ಟುವುದರಲ್ಲಿ ಭವಭೂತಿ ಪಡೆದಿರುವ ಯಶಸ್ಸು ಅದ್ವಿತೀಯವಾದುದು, ಅವನು ಕಥೆಯ ಬೇರೆ ಬೇರೆ ಪಾಠಗಳನ್ನೆಲ್ಲ ಕೂಡಿಸಿಕೊಂಡು ನೆಯ್ದಿರುವ ಜಾಣ್ಮೆ ಅದ್ಭುತವಾದುದು, (ಕನ್ನಡ ಉತ್ತರ ರಾಮಚರಿತೆ XXIII).

15. ಅಥವಾ ನಾವು 'ಸುಖ' ಎಂಬುದನ್ನು In the primal sympathy which having been must every be; In the soothing thoughts that spring out of human suffering.

ಕಾಣಬೇಕೋ? ಇದು ನಿರಾಶಾವಾದ ಎನ್ನಬಹುದು. ಇದೇ ಸುಖವಾದರೆ ಸಂಕಟವು ಸುಖಕ್ಕೆ ಅವಶ್ಯಕವಾದ ಹಿನ್ನೆಲೆ !

ನಮಗೆ ಓದುಗರಿಗೆ, ಇದು ಸುಖಾಂತವೇ ಹೌದು, ಇದರ ಫಲಶ್ರುತಿ ಕೊರೆಯಿಲ್ಲದ್ದು. ರಾಮಸೀತೆಯರ ಸಂಕಟದ ಕಥೆ ಯಾವ ಉತ್ಪ್ರೇಕ್ಷೆಯೂ ಇಲ್ಲದೇ ಕೋಟ್ಯಾಂತರ ಜನರ ಸಂಕಟವನ್ನು ಶಮನ ಮಾಡಿದೆ. ಅವರಿಗೆ ನೆಮ್ಮದಿ ಕೊಟ್ಟಿದೆ. ಅದಕ್ಕಿಂತಲೂ ಹೆಚ್ಚಾಗಿ ಮನಃಪ್ರಸಾದ ಕೊಟ್ಟಿದೆ. ನಮ್ಮ ಜೀವನ ವಾಹಿನಿ ಹರಿಯಬೇಕಾದದ್ದು ಹುಚ್ಚು ಹೊಳೆಯಂತೆ ವೇಗದಿಂದಲ್ಲ, ಆರ್ಭಟದಿಂದಲ್ಲ. ವಾಲ್ಮೀಕಿಯ ಮಾತನ್ನೇ ಉಪಯೋಗಿಸಬಹುದಾದರೆ, ಅದು ನಮ್ಮ ಪುಣ್ಯ ನದಿಗಳಂತೆ 'ಪ್ರಸನ್ನ ಸಲಿಲಾ ಶಿವಾ' ಆಗಿ ಹರಿಯಬೇಕು. ಇದು ರಾಮಾಯಣ ಕಥೆಯಿಂದ ನಮಗಾಗುವ ಪ್ರಯೋಜನ : the calm, not the tumult of the heart ಅದು ಸುಖದ tumult ಆಗಲಿ ಅಥವಾ ದುಃಖದ್ದಾಗಲೀ, ಕುಣಿದು ಕುಪ್ಪಳಿಸುವ ಸುಖದ ಮಾತು ಬೇರೆ. ಅದು ಭ್ರಮೆ! 'ತಸ್ಮಾತ್ ಸರ್ವಮಿದಂ ವಿಚಾರ್ಯ ಶಾಂತ್ಯೈ ಮನೋದೀಯತಾಂ.'

ಈ ಸೀತಾರಾಮರು ಎಲ್ಲಿಯವರೋ. ದೇವರೋ, ಮಾನವರೋ, ಇದ್ದರೋ ಇಲ್ಲವೋ. ಅಂತೂ ಅವರು ಬಂದು ಹೃದಯದಲ್ಲಿ ನೆಲಸಿ ನಮ್ಮ ಆತ್ಮೋದ್ಧಾರಕ್ಕೆ ಕಾರಣರಾಗಿದ್ದಾರೆ.

ಕನ್ನಡದ ಇನ್ನೊಬ್ಬರ್ವ ಸುಪ್ರಸಿದ್ಧ ವಿಮರ್ಶಕರಾದ ಡಾ. ಜಿ. ಎಸ್. ಶಿವರುದ್ರಪ್ಪ ನವರ ಅಭಿಪ್ರಾಯವನ್ನು ಮೂರ್ತಿರಾಯರ ಅಭಿಪ್ರಾಯದ ಪಕ್ಕದಲ್ಲಿಟ್ಟು ಹೋಲಿಸಿ

ನೋಡಬಹುದು. ಉತ್ತರಕಾಂಡ ವಾಲ್ಮೀಕಿ ಕೃತವಲ್ಲವೆಂಬ ಅಭಿಪ್ರಾಯವನ್ನು ಅವರೂ ಒಪ್ಪುತ್ತಾರೆ. ಆದರೆ ಅದರ ಪ್ರಭಾವವನ್ನು ಅವರು ಗುರುತಿಸುತ್ತಾರೆ. ಆದರೆ ಶಿವರುದ್ರಪ್ಪನವರಿಗೂ ಮೂರ್ತಿರಾಯರಿಗೂ ಇರುವ ಭಿನ್ನತೆ ಅವರು ಕೇಂದ್ರೀಕರಿಸುವ ಪಾತ್ರಗಳ ಮೇಲೆ. ಶಿವರುದ್ರಪ್ಪನವರು ಈ ಘಟನೆಯ ಮೂಲ ದ್ರವ್ಯವಾದ ರಜಕನನ್ನೇ ಕೇಂದ್ರವಾಗಿರಿಸಿಕೊಂಡಿದ್ದಾರೆ. ಅವರು ತಮ್ಮ ವಿಮರ್ಶೆಗೆ ಕೊಟ್ಟಿರುವ ಶೀರ್ಷಿಕೆಯೇ ಗಮನಾರ್ಹ: "ರಾಮಾಯಣ ಕಥೆಯಲ್ಲಿ ರಜಕನ ಪಾತ್ರ". ಆದರೆ ಮೂರ್ತಿರಾಯರು ರಜಕನ ಪಾತ್ರವನ್ನು ಎಲ್ಲಿಯೂ ಉಲ್ಲೇಖಿಸದೆ, ಜನಾಪವಾದದ ಭೀಕರತೆಗೆ ಬಲಿಯಾದ ರಾಮ - ಸೀತೆಯರ ಮಾನಸಿಕ ಒಳತೋಟಿಯನ್ನು ವಿಶ್ಲೇಷಿಸುತ್ತಾರೆ. ಡಾ. ಶಿವರುದ್ರಪ್ಪನವರ ಅಭಿಪ್ರಾಯ ಹೀಗಿದೆ :

"ಹಾಗೆ ನೋಡಿದರೆ ಸೀತಾಪರಿತ್ಯಾಗದ ಭಾಗವನ್ನೊಳಗೊಳ್ಳುವ ಉತ್ತರಕಾಂಡವೇ ಮಹರ್ಷಿ ವಾಲ್ಮೀಕಿಗಳಿಂದ ರಚಿತವಾದುದಲ್ಲ, ಅದು ಅನಂತರ ಯಾರೋ ಬರೆದು ಸೇರಿಸಿದ್ದು ಎಂದು ವಿದ್ವಾಂಸರನೇಕರ ಏಕಾಭಿಪ್ರಾಯ. ಆದರೂ ಉತ್ತರಕಾಂಡದ ಕಥೆ ಕವಿಗಳ ಪ್ರತಿಭೆಯನ್ನು, ವಿಮರ್ಶಕರ ಬುದ್ಧಿಯನ್ನು ಕೆಣಕಿದೆ. ಕಾಳಿದಾಸನಿಂದ ಹಿಡಿದು ಮುದ್ದಣನ ತನಕ ಆ ವಸ್ತುವಿನ ರಮ್ಯವೇದನೆಗೆ ಮನಸೋಲದವರಿಲ್ಲ. ಹೀಗಾಗಿ ಈ ಭಾಗ ಕವಿಗಳಿಂದ ಹಾಗೂ ಪುರಾಣ ಕರ್ತೃಗಳಿಂದ ಕಾಲದಿಂದ ಕಾಲಕ್ಕೆ ಬದಲಾಯಿಸುತ್ತ ಬೆಳೆಯುತ್ತ ಬಂದಿದೆ. (ಪರಿಶೀಲನ ಪುಟ 106)

ಶಿವರುದ್ರಪ್ಪನವರು ಸೀತಾಪರಿತ್ಯಾಗಕ್ಕೆ ಕಾರಣವೆನ್ನಿಸಬಹುದಾದ ಬೀಜರೂಪೀ ಆರಂಭವನ್ನು ಹೆಚ್ಚು ವಿಮರ್ಶೆಯಿಲ್ಲದೆ ಬರೆಯುತ್ತಾರೆ.

"ಅಯೋಧ್ಯಾಧಿಪತಿಯಾದ ರಾಜಾರಾಮನು ಒಂದು ದಿನ ಸರಸ ಗೋಷ್ಠಿಯಲ್ಲಿ ಇರುವಾಗ ಭದ್ರ ಎನ್ನುವ ತನ್ನ ಗೂಢಚಾರನನ್ನು ಈ ರೀತಿ ಕೇಳುತ್ತಾನೆ.. ಆಗ ಭದ್ರ ಹೇಳುತ್ತಾನೆ...... (ಪುಟ 106) ......ಈ ಮಾತನ್ನು ಕೇಳಿ ರಾಮನು ಸೀತೆಯನ್ನು ಪರಿತ್ಯಜಿಸುವ ನಿರ್ಧಾರವನ್ನು ಹಿಂದೆ ಮುಂದೆ ನೋಡದೆ ಕೈಗೊಳ್ಳುತ್ತಾನೆ. (106)

ಆದರೆ ಮೂರ್ತಿರಾಯರು ಈ ಭಾಗವನ್ನು ಅತ್ಯಂತ ಮಾರ್ಮಿಕವಾಗಿ ಆರಂಭಿಸುತ್ತಾರೆ :

"ಗೂಢಚಾರ ಭದ್ರ (ಅವನಿಗೆ ಆ ಹೆಸರು ಕೊಟ್ಟಿರುವುದರಲ್ಲೇ ಐರನಿ ಇದೆ !) ಇಷ್ಟವಿಲ್ಲದಿದ್ದರೂ ತಿಳಿಸಬೇಕಾಗಿ ಬಂದ ವರ್ತಮಾನ ಅನಿರೀಕ್ಷಿತವಾದದ್ದು. ಜನರು ಆಡಿಕೊಳ್ಳುತ್ತಿದ್ದ ಮಾತು ಇದು. ಭದ್ರನೊಬ್ಬನ ಮಾತಿನ ಆಧಾರದ ಮೇಲಲ್ಲ ರಾಮ ತನ್ನ ನಿಶ್ಚಯಕ್ಕೆ ಬಂದದ್ದು. ಇದನ್ನು ನಾವು ಗಮನಿಸಬೇಕು. (ಪುಟ 45)

ಶಿವರುದ್ರಪ್ಪನವರು ಸೀತಾಪರಿತ್ಯಾಗದ ಶ್ರೀರಾಮನ ನಿರ್ಧಾರವನ್ನು - ಮೂರ್ತಿರಾಯರಿಗೆ ಹೋಲಿಸಿದಾಗ - ಕೊಂಚ ಲಘುವಾಗಿ ಕಂಡಿದ್ದಾರೆನ್ನಬೇಕು

"ಜನಾಭಿಪ್ರಾಯದ ಸಂಗ್ರಹಣಾರ್ಥವಾಗಿ ಸುಳಿಯುತ್ತಿದ್ದ ರಾಜದೂತನೊಬ್ಬನ ಕಿವಿಗೆ ಈ ಮಾತು ಕೇಳಿಸಿತು. ಆತ ಆ ಸುದ್ದಿಯನ್ನು ತಂದ, ರಾಮನ ಕಿವಿಯಲ್ಲಿ ಉಸಿರಿದ. ರಾಮನಿಗೆ ಕಸಿವಿಸಿಯಾಯಿತು. ಕೂಡಲೇ ನಿರ್ಧರಿಸಿದ, ಸೀತೆಯನ್ನು ಈಗಲೇ ಬಿಡುವುದು ಉಚಿತವೆಂದು. ತನ್ನ ತಮ್ಮಂದಿರು ಸೀತೆಯ ಪರವಾಗಿ ವಾದಿಸಿ ಬೋಧಿಸಿ

ಬಗೆಬಗೆಯಾಗಿ ಬೇಡಿಕೊಂಡರೂ ಈ ಸೀತಾಪತಿ ಕೇಳಲೇ ಇಲ್ಲ. ಸೀತೆಯನ್ನು ಮತ್ತೆ ಕಾಡಿಗೆ ಕಳುಹಿಸಿಯೇ ಬಿಟ್ಟ". (108)

ಮೂರ್ತಿರಾಯರು ಈ ಸಂದರ್ಭವನ್ನು ಅತ್ಯಂತ ಗೌರವದ ದೃಷ್ಟಿಯಲ್ಲಿ ಕಂಡಿದ್ದಾರೆ. ಶಿವರುದ್ರಪ್ಪನವರ ಶ್ರೀರಾಮ ನಮ್ಮ ಗೌರವಕ್ಕೆ ಪಾತ್ರನಾಗುವುದಿಲ್ಲ. ಆದರೆ ಮೂರ್ತಿರಾಯರ ರಾಮ ಅತ್ಯಂತ ತೂಕದ ವ್ಯಕ್ತಿಯಾಗಿ ಕಂಗೊಳಿಸುತ್ತಾನೆ.

"ಕೂಡಲೇ ರಾಮ ತನ್ನ ತಮ್ಮಂದಿರಿಗೆ ಹೇಳಿ ಕಳಿಸಿದ. ಅವರು ಬಂದಾಗ ರಾಮನ ಮುಖ 'ಸಂಧ್ಯಾಗತನಾದ ಆದಿತ್ಯನಂತೆ' ನಿಸ್ತೇಜವಾಗಿತ್ತು. ಅವನು ನಮಸ್ಕರಿಸಿದ ತಮ್ಮಂದಿರನ್ನು ತೋಳು ಹಿಡಿದೆತ್ತಿ 'ನೀವೇ ನನ್ನ ಸರ್ವಸ್ವ, ನೀವೇ ನನ್ನ ಜೀವಿತ' ಎಂದು ಹೇಳುತ್ತಾ ಅವರನ್ನು ಅಪ್ಪಿಕೊಂಡು ಜನಾಪವಾದದ ವೃತ್ತಾಂತವನ್ನು ಅವರಿಗೆ ತಿಳಿಸಿ, ಹೀಗೆ ಹೇಳಿದ. (ಪುಟ 45)

ಈ ಕೃತಿಯನ್ನು ಕುರಿತು ಮಾಡಿದ ವಿಮರ್ಶೆಯ ಲಕ್ಷಣ ಹೀಗಿದೆ :

"ಬಹಳ ಸೊಗಸಾದ ಪುಸ್ತಕ ಈ 'ಪೂರ್ವಸೂರಿಗಳೊಡನೆ' ಎಂದು ನಾನು ತಿಳಿದುಕೊಂಡಿದ್ದೇನೆ. ಒಂದು ವೇಳೆ ಮೂರ್ತಿರಾಯರು ಸಾಹಿತ್ಯ ವಿಮರ್ಶೆಯ ಕ್ಷೇತ್ರವನ್ನು ಪ್ರವೇಶ ಮಾಡಿದ್ದರೆ ಅದು ಬಹಳ ಮೌಲಿಕವಾಗಿರಬಹುದಾಗಿತ್ತು. ಹಾಗೆ ಮಾಡಲಿಲ್ಲವಲ್ಲ ಎಂಬ ಕೊರಗು ನನಗೆ ಇಂದಿಗೂ ಇದೆ." (ಪುಟ 2)

ಡಾ. ಜಿ. ಎಸ್. ಶಿವರುದ್ರಪ್ಪನವರು – (ಕುವೆಂಪು ವಿ. ವಿ. ದಲ್ಲಿ ಮೂರ್ತಿರಾಯರ ಕೃತಿಗಳನ್ನು ಕುರಿತ ವಿಚಾರ ಸಂಕಿರಣದ ಉದ್ಘಾಟನಾ ಭಾಷಣದಲ್ಲಿ)

## 3.6 ಶ್ರೀ ಮಾಸ್ತಿಯವರ ಕಥೆಗಳು (ವಿಮರ್ಶೆ 1971)

ಪ್ರೊ. ಎ. ಎನ್. ಮೂರ್ತಿರಾಯರ ವಿಮರ್ಶಾ ಗ್ರಂಥಗಳಲ್ಲಿ ಇದು ಒಂದು ಮಾದರಿ ವಿಮರ್ಶಾಗ್ರಂಥ. ಮೂರ್ತಿರಾಯರು ಪ್ರಾಚೀನ ಸಂಸ್ಕೃತಿ ಕೃತಿಗಳನ್ನು ವಿಮರ್ಶೆ ಮಾಡಿದಂತೆ ಷೇಕ್ಸ್‌ಪಿಯರನ ಕಾವ್ಯ ನಾಟಕಗಳನ್ನು ವಿಮರ್ಶೆ ಮಾಡಬಲ್ಲರು. ಅದರಂತೆಯೇ ಸಮಕಾಲೀನ ಕನ್ನಡ ಸಾಹಿತ್ಯವನ್ನೂ ಸಮಾಲೋಕನ ಮಾಡಿ ವಿಮರ್ಶಿಸ ಬಲ್ಲರೆಂಬುದಕ್ಕೆ "ಶ್ರೀ ಮಾಸ್ತಿಯವರ ಕಥೆಗಳು" ಒಂದು ನಿದರ್ಶನ. ಮೂರ್ತಿರಾಯರ ವಿಮರ್ಶಾತ್ಮಕ ಪ್ರತಿಭೆಗೆ ತಕ್ಕ ವೇದಿಕೆಯನ್ನೊದಗಿಸಿದ ಕ್ಷೇತ್ರ ಕನ್ನಡದಲ್ಲಿ ಆಗ ತಾನೇ ಚಿಗುರೊಡೆಯುತ್ತಿದ್ದ ಸಣ್ಣ ಕಥಾಕ್ಷೇತ್ರ. ಈ ಕ್ಷೇತ್ರದಲ್ಲಿ ವೈವಿಧ್ಯಮಯವಾದ ವ್ಯಾಸಂಗ - ಕೃಷಿ- ಪ್ರಯೋಗಗಳನ್ನು ಮಾಡಿದ ಮಾಸ್ತಿಯವರ ಕಥಾಕ್ಷೇತ್ರದ ವ್ಯಾಪ್ತಿ ವೈಶಿಷ್ಟ್ಯಗಳನ್ನು ಮೂರ್ತಿರಾಯರು ತಮ್ಮ ಈ ವಿಮರ್ಶೆಯಿಂದ ಅನಂತರದ ವಿಮರ್ಶಕರಿಗೆ ಒಂದು ಮೇಲ್ಪಂಕ್ತಿ ಹಾಕಿಕೊಟ್ಟಿದ್ದಾರೆ.

ಈ ವಿಮರ್ಶೆಯಿಂದ ನಾವು ಹಲವು ಅಂಶಗಳನ್ನು ಗುರುತಿಸಬಹುದಾಗಿದೆ. ಅವುಗಳನ್ನು ನಾವು ಹೀಗೆ ಪಟ್ಟಿ ಮಾಡಬಹುದು.

1. ಒಬ್ಬ ಲೇಖಕನ ಒಂದು ಸಮಗ್ರ ಸಾಹಿತ್ಯ ಪ್ರಕಾರದ ಹಿನ್ನೆಲೆಯಲ್ಲಿ ಆ ಲೇಖನದ ಒಂದು ಬಿಡಿ ಕೃತಿಯನ್ನು ವಿಮರ್ಶಿಸಬೇಕು. ಏಕೆಂದರೆ ಒಂದು ಬಿಡಿ ಆ ಇಡಿಯ ಒಂದು ಅಂಗವಾದ ಕಾರಣ ಆ ಬಿಡಿಗೆ ಇತರ ಯಾವುದೋ ಒಂದು

ಜಿಜ್ಞಾಸೆಯೊಂದಿಗೆ ಅವಿನಾಭಾವ್ಯತ ಸಂಬಂಧ ಏರ್ಪಟ್ಟಿರುತ್ತದೆ. ಆದ್ದರಿಂದ ಕೃತಿಯು ಸ್ವತಂತ್ರ ವಿಮರ್ಶೆ ಸಲ್ಲ. ಈ ಹಣೆಗೆ ಒಂದು ಕ್ರಮಬದ್ಧವಾದ ಮಾಗಿದ ಪರಿಪಕ್ವತೆಯ ಸ್ಥಿತಿಯನ್ನು ಸೂಚಿಸುವುದಾದ್ದರಿಂದ ಈ ಪರಸ್ಪರ ಸಾಹಚರ್ಯವನ್ನು ಗುರುತಿಸುವ ತೌಲನಿಕ ಅಧ್ಯಯನ ಅಗತ್ಯ.

2. ಒಂದು ಕೃತಿ ರಚನೆಯಾಗಲು ಬೇಕಾಗುವ ಮೂಲ ಪೋಷಕಾಂಶಗಳು ಯಾವುವು ಎಂಬ ಕಲ್ಪನೆ ವಿಮರ್ಶಕನಲ್ಲಿರಬೇಕು. ಲೇಖಕನ ಕೃತಿಗೂ ಅವನು ತೆಗೆದು ಕೊಂಡ ಮೂಲಕ್ಕೂ ಇರುವ ಸಾಮ್ಯ ಅಂತರಗಳ ಪ್ರಜ್ಞೆ ವಿಮರ್ಶಕನಿಗೆ ಅಗತ್ಯ. ಲೇಖಕ ನಡೆದ ದಾರಿಯ ಜಾಡು ವಿಮರ್ಶಕನಿಗೆ ಗೋಚರವಾಗಿ ಅವನೂ ಲೇಖಕನೊಂದಿಗೆ ಆ ಮೂಲಕ್ಕೆ  ಸಹಯಾತ್ರಿಕನಾಗಬೇಕು.

3. ಒಂದು ಸಾಹಿತ್ಯ ಪ್ರಕಾರವನ್ನೂ ಸಮಗ್ರವಾಗಿ ಅಧ್ಯಯನ ಮಾಡಿದಂತೆ, ಆ ಸಾಹಿತ್ಯ ಪ್ರಕಾರ ಅದೇ ಲೇಖಕನ ಇತರ ಸಾಹಿತ್ಯ ಪ್ರಕಾರದೊಂದಿಗೆ ಬೆಸೆದ ನಂಟನ್ನೂ ಪರಿಶೋಧಿಸಬೇಕು. ಆದ್ದರಿಂದ ವಿಮರ್ಶೆಯೂ ಒಂದು ರೀತಿಯ ಸಂಶೋಧನೆ ಹಾಗೂ ಸೃಜನಶೀಲ ಕಾರ್ಯವೇ ಆಗಿದೆ.

4. ಕವಿಯು ಕೃತಿಯಲ್ಲಿ ಪರೋಕ್ಷವಾಗಿ ಒಂದು ಪಾತ್ರವಾಗಿ ಯಾವುದೋ ಒಂದು ಆಶಯವನ್ನು ವ್ಯಕ್ತಪಡಿಸುತ್ತಾನೆ. ಈ ಆಶಯ ಸೂಚ್ಯವಾಗಿರಬಹುದು ಅಥವಾ ವಾಚ್ಯವಾಗಿರಬಹುದು. ವಾಚ್ಯ ಸಂದೇಶ ಅಥವಾ ಉದ್ದೇಶ ವಾಚಕನಿಗೆ ನೇರವಾಗಿ ಮುಟ್ಟುತ್ತದೆ. ಆದರೆ ಕೃತಿಯಲ್ಲಿ ಗುಪ್ತಗಾಮಿನಿಯಾಗಿ ಪ್ರವಹಿಸುವ ಸೂಚ್ಯ ಸಂದೇಶವನ್ನು ಉತ್ಖನನ ಮಾಡಿ ಅನಾವರಣಗೊಳಿಸಿಕೊಡುವುದು ವಿಮರ್ಶಕನ ಜವಾಬ್ದಾರಿಗಳಲ್ಲೊಂದು.

5. ವಿಮರ್ಶೆ ಸೃಜನಶೀಲ ಸಾಹಿತ್ಯ ರಚನೆಗಿಂತಲೂ ಕಷ್ಟಕರವಾದುದು. ಏಕೆಂದರೆ ಲೇಖಕರ ಬಗೆಗಿರುವ ವೈಯಕ್ತಿಕ ಭಾವನೆಗಳು ನಿಷ್ಪಕ್ಷಪಾತವಾದ ಹಾಗೂ ವಸ್ತುನಿಷ್ಠ ವಿಮರ್ಶೆಗೆ ಅಡ್ಡಿಯಾಗಬಹುದು. ಅದರಲ್ಲಿಯೂ ಸಮಕಾಲೀನ ಲೇಖಕರೊಬ್ಬರ ಕೃತಿ ಗಳನ್ನು ವಿಶೇಷತಃ ಅವರು ಬದುಕಿರುವಾಗಲೇ ವಿಮರ್ಶಿಸುವಾಗ ಪೂರ್ವ ಗ್ರಹಮುಕ್ತ ನಾಗಿ ವಿಮರ್ಶಿಸುವುದು ಮತ್ತೂ ಕಷ್ಟ. ಪ್ರಖ್ಯಾತ ಲೇಖಕರ ಕೃತಿಗಳನ್ನು ಅತಿಶಯೋಕ್ತಿ ಯಿಂದ ವೈಭವೀಕರಿಸದೆ, ಅಪ್ರಖ್ಯಾತರನ್ನು ಅಲಕ್ಷಿಸದೆ ಗುಣದೋಷ ಗಳೆರಡನ್ನೂ ಗುರುತಿಸುವುದೇ ವಿಮರ್ಶಕನ ಗುರುತರ ಹೊಣೆಗಾರಿಕೆ. ಆದರೆ ಈ ಹಂತದಲ್ಲಿ ಗುಣ ಗಳನ್ನು ಮಿತಿಮೀರಿ ಪ್ರಶಂಸಿಸುವುದಾಗಲೀ ದೋಷಗಳನ್ನು ಕಟುವಾಗಿ ಎತ್ತಿ ತೋರಿಸುವುದಾಗಲೀ ಮಾಡದೆ, ಎರಡನ್ನೂ, ಮೃದುವಾಗಿ ಸಮತೂಕವಾಗಿ ಹಿತಕರವಾದ ಧ್ವನಿಯಿಂದ ಹೇಳುವುದು ಅತ್ಯಗತ್ಯ.

ಈ ಮೇಲ್ಕಂಡ, 'ಪಂಚಶೀಲ'ಗಳನ್ನೂ ಮೂರ್ತಿರಾಯರು ನಿರ್ಮಮತೆಯಿಂದ ಸಾಧಿಸಿದ್ದಾರೆ. ವಿಮರ್ಶಕರಿಗೆ ಲೇಖಕರ ಬಗ್ಗೆ ಇರುವ ಅಸೀಮ ಪೂಜ್ಯತೆ ಗೌರವಗಳು ಅವರ ವಸ್ತುನಿಷ್ಠ ಅವಲೋಕನಕ್ಕೆ ಅಡ್ಡಿಯಾಗಿಲ್ಲ. ವಿಮರ್ಶೆ ವಸ್ತುನಿಷ್ಠವಾಗಿದೆಯೇ ಹೊರತು ವ್ಯಕ್ತಿನಿಷ್ಠವಾಗಿಲ್ಲ. ಮಾಸ್ತಿಯವರ ಮುಂದಣ ಸಣ್ಣಕತೆಗಳ ರಚನೆಗ ಒಂದು ದಿಕ್ಸೂಚಿಯಂತಿದೆ ಈ ವಿಮರ್ಶೆ. ಮೂರ್ತಿರಾಯರ ಈ ವಿಮರ್ಶೆಯನ್ನು ಓದುವ ಮುನ್ನ ಮಾಸ್ತಿಯವರ ಸಮಗ್ರ ಸಣ್ಣಕತೆಗಳನ್ನು ಒಮ್ಮೆ ಓದಿ ವಿಮರ್ಶೆಯನ್ನು ಓದಿದ

ಅನಂತರ ವಿಮರ್ಶೆಯ ಬೆಳಕಿನಲ್ಲಿ ಮಾಸ್ತಿಯವರ ಕತೆಗಳನ್ನು ಪುನಃ ಓದಬೇಕು. ಆಗ ನಮ್ಮ ಕಣ್ಣಿಗೆ ಕಾಣಿಸದ ಅಂಶವನ್ನು ವಿಮರ್ಶಕರು ಗುರುತಿಸಿರುವುದು ಗೋಚರವಾಗುತ್ತದೆ. ಒಂದು ನೈಜ ವಿಮರ್ಶೆಯ ಮಹತ್ವ ಆಗ ನಮಗೆ ಅರಿವಾಗುತ್ತದೆ. ಬಿ. ಎಂ. ಶ್ರೀಯವರ ಬದುಕು ಬರಹಗಳನ್ನು ವಿಮರ್ಶಿಸಿದರೆ ಇಲ್ಲಿ ಮಾಸ್ತಿಯವರ ಬದುಕನ್ನು ಕುರಿತು ಬರೆಯದೇ, ಕೇವಲ ಅವರ ಸಣ್ಣಕತೆಗಳನ್ನಷ್ಟೇ ಕುರಿತು ಬರೆದಿದ್ದಾರೆ.

ಮೂರ್ತಿರಾಯರು ಮಾಸ್ತಿಯವರ ಸಣ್ಣ ಕತೆಗಳ ಪರಿಚಯವಾದ ಒಕ್ಕಣೆಯಿಂದ ಈ ವಿಮರ್ಶೆಯನ್ನು ಆರಂಭಿಸಿದ್ದಾರೆ. 1919–20ರಲ್ಲಿ ಅವರು ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ ಅವರ ಗುರುಗಳಾಗಿದ್ದ ದಿ. ಶ್ರೀ ದೀಕ್ಷಿತ ನರಸಿಂಹ ಮೂರ್ತಿಯವರಿಂದ ಮೂರ್ತಿರಾಯರಿಗೆ ಮಾಸ್ತಿಯವರ ಸಣ್ಣ ಕಥಾಲೋಕಕ್ಕೆ ಪ್ರವೇಶ ದೊರೆಯಿತು. ಇಂಗ್ಲೀಷ್ ಸಾಹಿತ್ಯದ ವಿದ್ಯಾರ್ಥಿ ಅಧ್ಯಾಪಕರಾಗಿದ್ದ ಮೂರ್ತಿರಾಯರಿಗೆ, ಆಂಗ್ಲ ಸಣ್ಣಕಥೆಗಳನ್ನು ಓದಿ ಆನಂದಿಸಿದ ಅವರ ವಾಚನಾಭಿರುಚಿಗೆ ಅದೇ ಆಂಗ್ಲ ಸಾಹಿತ್ಯದಿಂದ ಸ್ಫೂರ್ತಿ ಪ್ರೇರಣೆ ಪಡೆದ ಮಾಸ್ತಿಯವರ ಸಣ್ಣಕಥೆಗಳು ಬಹು ಇಷ್ಟವಾದವು. ಅದುವರೆಗೆ ಅಂದರೆ 1920–1967ರ ಅವಧಿಯಲ್ಲಿ ರಚಿತವಾದ 1250 ಪುಟಗಳಿಗಿಂತ ಸ್ವಲ್ಪ ಹೆಚ್ಚಾದ ಎಪ್ಪತ್ತೆಂಟು ಕತೆಗಳನ್ನು ಮೂರ್ತಿರಾಯರು ಅಧ್ಯಯನ ಮಾಡಿದರು. ಅವುಗಳನ್ನು ಕುರಿತು ಒಂದೆರಡು ಕಡೆ ಭಾಷಣ ಮಾಡುವ ಸಂದರ್ಭವೂ ಅವರಿಗೆ ಬಂದಿತು. ಮಿತ್ರರೊಬ್ಬರ ಸಲಹೆಯಂತೆ 10–15 ಪುಟಗಳ ಮಿತಿಯಲ್ಲಿ ಪತ್ರಿಕೆಗೆ ಒಂದು ಲೇಖನವನ್ನು ಬರೆಯಲು ಹೊರಟು ಅದು ತನ್ನ ಮೂಲ ಉದ್ದೇಶಿತ ಮಿತಿಯನ್ನು ದಾಟಿ 151 ಪುಟಗಳ ಪುಸ್ತಕದ ವ್ಯಾಪ್ತಿಯನ್ನು ಪಡೆಯಿತು. ಇದು ಮೇಲೆ ಕಾಣಿಸಿದ ಅವಧಿಯಲ್ಲಿ ಮಾಸ್ತಿಯವರು ರಚಿಸಿದ ಕಥನ ಕವನಗಳನ್ನು ಹೊರತುಪಡಿಸಿ – ಇಲ್ಲಿ ಎಲ್ಲಾ ಎಪ್ಪತ್ತೆಂಟು ಗದ್ಯ ಕತೆಗಳನ್ನೂ ವಿಮರ್ಶೆಗೆ ತೆಗೆದುಕೊಂಡಿಲ್ಲ – ತಮಗೆ ಪ್ರಿಯವೆನಿಸಿದ ಪ್ರಾತಿನಿಧಿಕ ಕತೆಗಳನ್ನಷ್ಟೇ ಆಯ್ಕೆ ಮಾಡಿಕೊಂಡಿದ್ದಾರೆ. ಒಂದು ರೀತಿಯಲ್ಲಿ ಈ ವಿಮರ್ಶೆ ಮಾಸ್ತಿಯವರ ಕತೆಗಳಿಗೆ ವಿಮರ್ಶೆಯ ಚೌಕಟ್ಟನ್ನು ತೊಡಿಸಿದೆ ಎನ್ನುವುದಕ್ಕಿಂತಲೂ ವಿಮರ್ಶೆಯ ಮೂಲ ಸೂತ್ರಗಳನ್ನು ಮಾಸ್ತಿಯವರ ಕತೆಗಳಿಗೆ ಅನ್ವಯಿಸಲಾಗಿದೆ ಎಂದು ಹೇಳುವುದು ಹೆಚ್ಚು ಸೂಕ್ತವೆನಿಸುತ್ತದೆ.

ಮೂರ್ತಿರಾಯರ ಕೃತಿ ವಿಮರ್ಶಾ ಕೃತಿಗಳಲ್ಲಿ ಮೊದಲ ಸ್ಥಾನ ಸಲ್ಲುವುದು ಸಲ್ಲಬೇಕಾಗಿರುವುದು ಈ ಕೃತಿಗೆ. ಈ ಕೃತಿಯನ್ನು ಕುರಿತು ಎಷ್ಟು ದೀರ್ಘವಾದ ವಿಮರ್ಶೆಯನ್ನು ಬೇಕಾದರೂ ಬರೆಯಬಹುದು. ಈ ಕೃತಿ ಒಂದು ರೀತಿಯಲ್ಲಿ ಅಪೂರ್ಣವಾದುದೆನಿಸುತ್ತದೆ. ಅಪೂರ್ಣ ಎಂದು ಹೆಸರಿಸುವುದಕ್ಕಿಂತಲೂ ಷೇಕ್ಸ್‌ಪಿಯರ್‌ನನ್ನೂ ಅವನ ಕೃತಿಗಳನ್ನೂ ಕುರಿತಂತೆ ಇರುವ ಪೂರ್ವಾರ್ಧ ಗ್ರಂಥದಂತೆ ಇದನ್ನು ಪೂರ್ವಾರ್ಧವೆಂದು ಕರೆಯಬಹುದು. ಏಕೆಂದರೆ ವಿಮರ್ಶಕನ ಸಮಕಾಲೀನ ಲೇಖಕನೊಬ್ಬ ತನ್ನ ಲೇಖನ ವ್ಯವಸಾಯವನ್ನು ಮುಂದುವರಿಸುತ್ತಾನೆ. ಹಾಗೇ ಲೇಖಕರ ಲೇಖನ ವ್ಯವಸಾಯ ಮುಂದುವರಿದಂತೆ ಅವರನ್ನು ಬೆನ್ನು ಹಿಡಿದು ಆ ಸಾಹಿತ್ಯ ಪ್ರಕಾರವನ್ನು ವಿಮರ್ಶಿಸುತ್ತಾ ಹೋಗಲು ವಿಮರ್ಶಕನಿಗೆ ಸಾಧ್ಯವಾಗುವುದಿಲ್ಲ. ಏಕೆಂದರೆ ವಿಮರ್ಶಕನ ವಿಮರ್ಶನ ಅಭಿರುಚಿ ಮತ್ತೊಂದು ದಿಕ್ಕಿಗೆ ಹೊರಳಬಹುದು. ಮೂರ್ತಿರಾಯರ ಲೇಖನಾಭಿರುಚಿ, ವಿಮರ್ಶನಾಭಿರುಚಿ ಹೀಗೆ ಬೇರೊಂದು ದಿಕ್ಕಿಗೆ ಹೊರಳಿದ ಕಾರಣ ಮಾಸ್ತಿಯವರ

ಸಣ್ಣಕತೆಗಳನ್ನು ಕುರಿತು ಉತ್ತರಾರ್ಧವನ್ನು ಬರೆಯಲಾಗಲಿಲ್ಲ. ಅಲ್ಲದೇ ಮಾಸ್ತಿಯವರು ಲೇಖನ ಜೀವನದ ಆರಂಭದಲ್ಲಿ ಸಣ್ಣಕತೆಗಳನ್ನು ಬರೆದಂತೆ ಅವರ ಕೊನೆಯ ದಿನಗಳಲ್ಲಿಯೂ ಸಣ್ಣ ಕತೆಗಳನ್ನೇ ಬರೆದರು. ಮೂರ್ತಿರಾಯರು ಮಾಸ್ತಿಯವರ ಸಣ್ಣಕತೆಗಳ ಅಧ್ಯಯನವನ್ನು ಮುಂದುವರಿಸಿದರೂ ಅನಂತರದ ಕತೆಗಳ ವಿಮರ್ಶೆಯನ್ನು ನಡೆಸಲಿಲ್ಲ. ಕಾರಣ ಅವರ ಬರವಣಿಗೆಯ ಅವಸ್ಥಾಂತರ (ಷೇಕ್ಸ್‌ಪಿಯರ್‌ನಂತೆಯೇ ಇದೂ ಸಹ ಪೂರ್ವಾರ್ಧಕ್ಕೇ ನಿಂತಿತು. )

ಮೂರ್ತಿರಾಯರು ಮಾಸ್ತಿಯವರ ಕತೆಗಳನ್ನು ಪುನಃ ಪುನಃ ಅಧ್ಯಯನ ಮಾಡಿ ಆ ಕುರಿತು ಉಪನ್ಯಾಸ ನೀಡಿದ್ದಾರೆ. ಉಪನ್ಯಾಸಗಳ ವಿಸ್ತೃತ ರೂಪವೇ ಈ ವಿಮರ್ಶೆ. ಮೂರ್ತಿರಾಯರ ಪ್ರತಿಯೊಂದು ಕೃತಿಯ ಹಿನ್ನೆಲೆಯಲ್ಲಿ ಆ ಕೃತಿ ರಚನೆಯ ಸ್ಪಷ್ಟ ಉದ್ದೇಶ ವಿಶಿಷ್ಟವಾಗಿರುತ್ತದೆ. ಹಾಗೆಯೇ ಈ ಕೃತಿಯ ಉದ್ದೇಶವೂ ಸಹಾ ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿದೆ.

"ಯಾವುದೊಂದು ಕಥೆಯಲ್ಲಾಗಲೀ ಮಾಸ್ತಿಯವರು ಮಾಡ ಹೊರಟಿರುವುದೇನು ಆ ಪ್ರಯತ್ನ ಎಷ್ಟು ಯಶಸ್ವಿಯಾಗಿದೆ, ಅದು ನಮ್ಮ ಮೇಲೆ ಎಂಥ ಪರಿಣಾಮ ಉಂಟು ಮಾಡುತ್ತದೆ –ಇವನ್ನು ವಿವರಿಸಬೇಕೆಂಬುದು ನನ್ನ ಉದ್ದೇಶ" (ಮುನ್ನುಡಿ ಪುಟ 5)

ಆದ್ದರಿಂದ ಮೂರ್ತಿರಾಯರ ಉದ್ದೇಶ ವಿಮರ್ಶೆಗಿಂತಲೂ ವಿವರಣೆ ನೀಡುವುದೇ ಆಗಿದ್ದರೂ, ಅಯತ್ನತಃ ಇದೊಂದು ವಿಮರ್ಶೆಯಾಗಿಯೇ ಪರಿವರ್ತನೆಯಾಗಿದೆ. ಈ ಕಾರಣದಿಂದ ಇಲ್ಲಿ ಮೂರ್ತಿರಾಯರು ಮಾಸ್ತಿಯವರ ಕತೆಗಳನ್ನು ಆಳವಾಗಿ ಅಧ್ಯಯನ ಮಾಡಿದ್ದಾರೆ. ಈ ಕೃತಿಯಲ್ಲಿ ಮೂರ್ತಿರಾಯರ ಅಧ್ಯಯನ ಸಾತತ್ಯದಿಂದ ಮೂಡಿ ಬಂದ ಕೆಲವು ವೈಶಿಷ್ಟ್ಯಗಳನ್ನು ಹೀಗೆ ಗುರುತಿಸಬಹುದು.

1. ಮೂರ್ತಿರಾಯರ ಅಧ್ಯಯನ ವಿಮರ್ಶೆ ಯಾವಾಗಲೂ ತೌಲನಿಕವಾಗಿಯೇ ನಡೆಯುತ್ತದೆ. ಈ ತೌಲನಿಕ ಸಂಚಾರ ಅದೇ ಲೇಖಕರ ಕೃತಿಗಳೊಂದಿಗೆ ಸಾಗಬಹುದು ಅಥವಾ ಇತರ ಸಾಹಿತ್ಯ ಕೃತಿಗಳೊಂದಿಗೆ ಸಾಗಬಹುದು. ಪಾತ್ರ ಚಿತ್ರಣ, ಘಟನೆಗಳು, ಸಂವಾದ ಇತ್ಯಾದಿಗಳು ತೌಲನಿಕವಾಗಿ ನಡೆದಿರುವುದನ್ನು ನಾವು ಗುರುತಿಸಬಹುದು ಇದರಿಂದಾಗಿ ಇಲ್ಲಿ ಮೂರ್ತಿರಾಯರ ಪ್ರಯತ್ನ ಹೀಗೆ. ಲೇಖಕ ಒಂದು ಸಾಹಿತ್ಯ ಪ್ರಕಾರವನ್ನು ನಿರಂತರವಾಗಿ ಸೃಷ್ಟಿಸುವಾಗ ಅವನ ಮನಸ್ಸಿನಲ್ಲಿ ಹಿಂದಿನ ಕೃತಿಗಳ ಪಾತ್ರಗಳು, ಘಟನೆಗಳು ಮಾಸಿರುವುದಿಲ್ಲ. ಬದಲಾಗಿ ಅಲ್ಲಿ ಹೇಳಲಾಗದ್ದನ್ನು ಪರಸ್ಪರ ವಿರೋಧಾಂಶಗಳನ್ನು ಸೂಕ್ತ ತಿದ್ದುಪಡಿ, ಉದಾತ್ತೀಕರಣಗಳ ಮೂಲಕ ಮತ್ತೊಂದು ಮುಖವನ್ನು ಪರಿಚಯಿಸುತ್ತಾನೆ. ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದ ಮೂರ್ತಿರಾಯರಿಗೆ ಮಾಸ್ತಿಯವರ ಸಣ್ಣಕತೆಗಳು ಇಂಗ್ಲೀಷ್ ಕತೆಗಳನ್ನು ನೆನಪಿಸಿರುವುದು ವಿಶೇಷವಲ್ಲ. ಮಾಸ್ತಿಯವರ ಸಣ್ಣ ಕತೆಗಳಲ್ಲಿಯೇ ಅವರಿಗೆ ಸಾದೃಶ್ಯ-ವ್ಯತ್ಯಾಸಗಳು ಗೋಚರವಾಗಿರುವುದು ಅವರ ಅಗಾಧವಾದ ಅಧ್ಯಯನಶೀಲತೆಗೆ ಸಾಕ್ಷಿ. ಈ ವಿವರಣೆಗಳ ನಡುವೆ ಅಲ್ಲಲ್ಲಿ ಉಲ್ಲೇಖಿಸಿದ ಇಂಗ್ಲೀಷ್ ಪಂಕ್ತಿಗಳೂ ಈ ತುಲನಾತ್ಮಕತೆಗೆ ಒಂದು ಸಹಕರಣವನ್ನು ಹಾಗೂ ಮೆರಗನ್ನು ನೀಡುತ್ತವೆ. ರಂಗಸ್ವಾಮಿ ಹಾಗೂ ಸನ್ಯಾಸಿಯವರ ನಡುವಣ ಮಾನಸಿಕ ವ್ಯಾಪಾರ, ಸಂಘರ್ಷ, ವೈಶಾಲ್ಯಗಳನ್ನು ಗುರುತಿಸಬಲ್ಲರು.

ಪೂರ್ವಾಶ್ರಮದ ಗೌತಮಿಯನ್ನು ಶಕುಂತಲೆಯೊಂದಿಗೆ ತೂಗಬಲ್ಲರು. ಕುಚೇಲ ಹಾಗೂ ಸೋಲಿಗ ರಂಗನ ತಾಯಿಯವರಿಗೆ ದರ್ಶನ ನೀಡಿದ ಕೃಷ್ಣನ ಪಾತ್ರವನ್ನು ಸಾಹಿತ್ಯ ಕ್ಷೇತ್ರದಲ್ಲಿ ಯಾವ ಸ್ಥಾನದಲ್ಲಿಡಬಹುದೆಂದೂ ತೀರ್ಮಾನಿಸಬಲ್ಲರು. ಸಂವಾದಿಯಾಗಿ 'ಅಶ್ವತ್ಥಾಮನ್' ರುದ್ರನಾಟಕದಲ್ಲಿ ಬರುವ ಕೃಷ್ಣನೊಡನೆ ಹೋಲಿಸುತ್ತಾರೆ. ಡಿಸ್ರೇಲಿಯ Ixion in Heaven ಎಂಬ ಕೃತಿ ಹೇಗೆ ಭಗವಂತನ ಅಸ್ತಿತ್ವವನ್ನು ವಿಡಂಬಿಸುತ್ತದೆ, ಅದರ ಅನ್ವಯ ಭಾರತೀಯ ಸಾಹಿತ್ಯ ರಂಗದಲ್ಲಿ ಸಾಧ್ಯವೇ, ಸಾಧುವೇ ಎಂಬುದಾಗಿ ವಿವೇಚಿಸಿದ್ದಾರೆ. ಇಲ್ಲಿಯ ವೈಶಿಷ್ಟ್ಯವೆಂದರೆ ವಾಚಕರು ಕೇಳಬಹುದಾದ ಅಥವಾ ಅವರಿಗೂ ಹೊಳೆಯದ ಹಲವಾರು ಪ್ರಶ್ನೆಗಳನ್ನು ತಾವೇ ಎತ್ತಿ ಅವಕ್ಕೆ ಸಮಾಧಾನ ನೀಡಿದ್ದಾರೆ. ರಂಗನಹಳ್ಳಿಯ ರಾಮ ಅವರಿಗೆ The Musgrase Ritual ಕತೆಯನ್ನು ನೆನಪಿಸುತ್ತದೆ. ಮೋಪಾಸಾ ಓಹೆನ್ರಿ, ವರ್ಡ್ಸ್‌ವರ್ತ್, ಲಿಯರ್, ಮ್ಯಾಕ್‌ಬೆತ್ ಇಬ್ಸೆನ್‌ನ ನೋರಾ Hedonist. Epicurean. Christable. Ancient Mariner. ಎಂ.ಎಸ್. ಪುಟ್ಟಣ್ಣನವರ ಮುಸುಕು ತೆಗೆಯೇ, ಮಾಡಿದ್ದುಣ್ಣೋ ಮಹಾರಾಯ, ಯಶೋಧರ ಚರಿತೆ, ಕುಚೇಲನ ಅರಮನೆ, ಟ್ರಾಯ್‌ನಗರ ಇತ್ಯಾದಿ ದೇಶೀಯ, ವಿದೇಶೀಯ ಸಾಹಿತ್ಯ ಪ್ರತಿಮೆಗಳು ಅವರ ಸ್ಮೃತಿಪಥದಲ್ಲಿ ಬರುತ್ತವೆ. ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ವಿದ್ವಾಂಸರ ದೃಷ್ಟಿಯಲ್ಲಿ ಸಾಹಿತ್ಯದ ಗುಣಲಕ್ಷಣಗಳೂ ಈ ಹಂತದಲ್ಲಿ ಅವರಿಗೆ ನೆನಪಿಗೆ ಬರುತ್ತದೆ.

2. ಪಾತ್ರಗಳಂತೆಯೇ ಘಟನೆಗಳೂ ಸಹಾ ಮೂರ್ತಿರಾಯರ ತೌಲನಿಕ ಪರಿಧಿಗೆ ಒಳಪಡುತ್ತವೆ. ಸುಬ್ಬಣ್ಣ ಹಾಗೂ ಮಸುಮತ್ತಿ ಕತೆಗಳ ನಡುವಣ ಕಥಾವಸ್ತುಗಳನ್ನು ಪರಸ್ಪರ ಹೋಲಿಸಿ ನೋಡುತ್ತಾರೆ. ಅಂತೆಯೇ ಕಥಾನಕದ ತಂತ್ರ ಹಾಗೂ ಶೈಲಿಗಳನ್ನು ಹೀಗೆಯೇ ಒಂದರ ಪಕ್ಕದಲ್ಲಿ ಮತ್ತೊಂದನ್ನಿರಿಸಿ ನೋಡುತ್ತಾರೆ. ಮೊಪಾಸಾನ The Necklace. ಓ ಹೆನ್ರಿಯ The Furnished Room. The Gift of the Magi. Love's Service ಮುಂತಾದ ಕತೆಗಳ ಅನಿರೀಕ್ಷಿತ ಮುಕ್ತಾಯಕ್ಕೂ ಮಾಸ್ತಿಯವರ ಕತೆಗಳ ಅನಿರೀಕ್ಷಿತ ಮುಕ್ತಾಯಕ್ಕೂ ತಾಳೆ ಹಾಕಿ ನೋಡುತ್ತಾರೆ. ಮಾಸ್ತಿಯವರ ಕತೆಗಳಲ್ಲಿಯೇ ಬರುವ ರೂಪಕ ಉಪಮಾನಗಳನ್ನು ಪರಸ್ಪರ ಹೋಲಿಸಿದ್ದಾರೆ. ಛಾಸರನ The Canterbury Tales ಅನ್ನು ಕುರಿತು Here is God's plenty ಎಂಬ Alexander Pope ನ ವಾಕ್ಯವನ್ನು ಮಾಸ್ತಿಯವರ ಪಾತ್ರ ಪ್ರಪಂಚಕ್ಕೆ ಅನ್ವಯಿಸುತ್ತಾರೆ. Shakespeare ಹಾಗೂ ಕಾಳಿದಾಸನ ಕೃತಿಗಳಿಂದ ಸಂವಾದ, ಪಾತ್ರ, ಘಟನೆಗಳನ್ನಂತೂ ಈ ತೌಲನಿಕತೆಗೆ ಮೂಲಮಾನವನ್ನಾಗಿ ಉಪಯೋಗಿಸಿಯೇ ಇದ್ದಾರೆ.

ಮಾಸ್ತಿಯವರ ಭಾವ ಪ್ರಪಂಚ ಬಹು ವಿಸ್ತಾರ, ಸೂಕ್ಷ್ಮ ಹಾಗೂ ಸುಕೋಮಲ. ಮೂರ್ತಿರಾಯರು ಮಾಸ್ತಿಯವರ ಪಾತ್ರಗಳ ಒಳತೋಟಿಯನ್ನು ಮನಶ್ಶಾಸ್ತ್ರೀಯ ಹಿನ್ನೆಲೆಯಲ್ಲಿ ಗುರುತಿಸಿದ್ದಾರೆ. ಸಿಗ್ಮಂಡ್ ಫ್ರಾಯ್ಡ್, ಯೂಂಗ್ ಮುಂತಾದ ಮನಶ್ಶಾಸ್ತ್ರಜ್ಞರನ್ನು ಉಲ್ಲೇಖಿಸದೇ, ತಾವೇ ಒಬ್ಬ ಮನಶ್ಶಾಸ್ತ್ರಜ್ಞರಾಗಿ ಮಾಸ್ತಿಯವರು ಪಾತ್ರಗಳನ್ನು ಯಾವ ಭಾವದಿಂದ ಕಂಡಿದ್ದಾರೆ ಅಥವಾ ಚಿತ್ರಿಸಿದ್ದಾರೆ ಎಂಬ ವಿಶ್ಲೇಷಣೆ ಮಾಡಿದ್ದಾರೆ. ಕಥೆಯಲ್ಲಿ ಶೈಲಿಯಲ್ಲಿ ಹಾಗೂ ಅಭಿವ್ಯಕ್ತಿ ಪಡೆದಿರುವ ಭಾವವನ್ನು ಮೂರ್ತಿರಾಯರು ಗುರುತಿಸಿರುವುದು ಅವರು ಆ ವಿಚಾರಗಳನ್ನು ಚೆನ್ನಾಗಿ ಅರಿತಿರು

ಪ್ರವರ ನಿರ್ವಹಣ. ಇಂತಹ ಪರಕಾಯ ಪ್ರವೇಶ ಸಾಮರ್ಥ್ಯ ಪಾತ್ರಗಳ ಅಂತರಂಗದ ಆಳ ಚೆನ್ನಾಗಿ ಕರತಲಾಮಲಕವಾಗಿದೆ.

'ಹೋಮಕುಂಡದಿಂದ ಬಂದ ಹುಡುಗಿ' ಎಂಬ ಕತೆಯನ್ನು 'Lyrical' ಎಂದೂ 'ಬೀದಿಯಲ್ಲಿ ಹೋಗುವ ನಾರಿ' ಕಥೆಯಲ್ಲಿ ವಿಚಾರದೊಂದಿಗೆ ಭಾವೋತ್ಕರ್ಷ ಹಾಗೂ ಭಾವಕ್ಕೆ ಪ್ರಾಧಾನ್ಯವಿರುವುದರಿಂದ ಇದನ್ನು 'ಭಾವಗೀತೆ' ಎಂದೂ ಕರೆದಿದ್ದಾರೆ. ಈ ಕಥೆಯಲ್ಲಿ "ಭಾವಜ್ಯೋತಿ ಹತ್ತಿಕೊಂಡು ತನ್ನ ಬೆಳಕನ್ನು ಹರಡಿ ಅನಂತರ ಆರಿ ಹೋಗುತ್ತದೆ ಅಥವಾ 'ಇಲ್ಲವಾಗುತ್ತದೆ' ಎಂದರೆ ಉತ್ತಮ" (ಪುಟ 16) ಎಂದು 'ಇಂದಿರೆಯೋ ಅಲ್ಲವೋ' ಎಂಬ ಕತೆಯನ್ನು ವಿಶ್ಲೇಷಿಸಿದ್ದಾರೆ. "ಮೊದಲ ವಾಕ್ಯದಿಂದ ಕೊನೆಯವರೆವರೆಗೂ ಕರುಣೆಯ ಭಾವವಾಹಿನಿ ಶೈಥಿಲ್ಯವಿಲ್ಲದೆ ಎಲ್ಲಿಯೂ ರಾಡಿ ಯಾಗದೆ, ಸ್ವಚ್ಛವಾಗಿ ಹರಿಯುತ್ತದೆ." (ಪುಟ 16) ಎಂಬ ಕಾವ್ಯಾತ್ಮಕ ಶೈಲಿಯ ವಾಕ್ಯ ಮಾಸ್ತಿಯವರ ಆಶಯವನ್ನು ವ್ಯಕ್ತಪಡಿಸುತ್ತದೆ. ಮೂರ್ತಿರಾಯರು 'ಆಶಯ' ಶಬ್ದಕ್ಕೆ ಪರ್ಯಾಯವಾಗಿ 'ಭಾವ' ಶಬ್ದವನ್ನು ಬಳಸಿದ್ದಾರೆ. ಮಾಸ್ತಿಯವರು ಅವಳ ಮನಸ್ಸಿನ (ನಾಗರತ್ನ) ಎರಡು ಭಾವಗಳನ್ನು ಗಮನಿಸಿ, "ಇವರಲ್ಲಿ ನಿಜವಾದ ಭಾವ ಯಾವುದು ಎನ್ನುವಿರಾ ? ಎರಡೂ ನಿಜವಿರಬಾರದೇನು? ಎಂದು ಕೇಳುತ್ತಾರೆ. ...." (ಪುಟ 15) ಎಂಬ ವಾಕ್ಯ ಮೂರ್ತಿರಾಯರು ಮಾಸ್ತಿಯವರ ಮನಶ್ಶಾಸ್ತ್ರೀಯ ಹಿನ್ನೆಲೆಯಲ್ಲಿ ಪಾತ್ರರಚನೆಯನ್ನು ಗುರುತಿಸಿದ್ದಾರೆ.

"ಕತೆಗಳಲ್ಲಿ ಅಭಿವ್ಯಕ್ತಿ ಪಡೆದಿರುವ ಭಾವಾತಿರೇಕಕ್ಕೂ (Sentimentalism) ಭಾವನಾತ್ಮಕಕ್ಕೂ ನಡುವಿನ ಮಾರ್ಗ ತಪ್ಪಿಹೋಗಿದೆಯೆಂದು ತೋರುತ್ತದೆ" (ಪುಟ 50) "ಇಂಥ ದೃಶ್ಯಗಳನ್ನು ಬರೆಯುವಾಗ ಭಾವಶೈಥಿಲ್ಯಕ್ಕೆ ಎಡೆಗೊಡುವ ಸಂಭವ ಉಂಟು" (ಪುಟ 144) ಮುಂತಾದ ವಾಕ್ಯಗಳು ಮೂರ್ತಿರಾಯರು ಹೊಕ್ಕ ಮಾಸ್ತಿಯವರ ಭಾವ ಪ್ರಪಂಚವನ್ನು ಪರಿಚಯಿಸುತ್ತದೆ.

ಸಮಕಾಲೀನ ಲೇಖಕರ ಕೃತಿಗಳ ವಿಮರ್ಶೆ ಕೊಂಚ ಕಷ್ಟ. ಏಕೆಂದರೆ ಪ್ರಶಂಸೆ ಮಾಡುವ ಸಂದರ್ಭಗಳಲ್ಲಿ ಪ್ರಶಂಸೆ ಮಾಡಬಹುದು. ಆದರೆ ವಿಮರ್ಶಕನ ಕಣ್ಣಿಗೆ ಬಿದ್ದ ದೋಷವನ್ನು ಹೇಳಿದರೂ ಕಷ್ಟ, ಬಿಟ್ಟರೂ ಕಷ್ಟ. ಈ ಇಬ್ಬಂದಿತನದಿಂದ ಪಾರಾಗಿ ಯಾವುದೇ ಪೂರ್ವಗ್ರಹವೂ ಇಲ್ಲದೇ ವಸ್ತುನಿಷ್ಠ ವಿಮರ್ಶೆ ಕಷ್ಟ. ಎಷ್ಟೋ ವೇಳೆ ಲೇಖಕ ವಿಮರ್ಶಕರ ನಡುವೆ ಸ್ವಮತ ಸಮರ್ಥನೆಗಾಗಿ ಪ್ರಬಲವಾದ ವಾಗ್ವಾದಗಳೇ ನಡೆದಿವೆ. ಆದರೆ ಬೆಳೆಯುತ್ತಿರುವ ಲೇಖಕನಿಗೆ ವಿಮರ್ಶಕನ ವಸ್ತುನಿಷ್ಠವೂ ರಚನಾತ್ಮಕವೂ ಆದ ವಿಮರ್ಶೆ ಒಂದು ದಾರಿ ದೀಪವಾಗುತ್ತದೆ. ಮೂರ್ತಿರಾಯರು ಇಂತಹ ಯಾವುದೇ ಪೂರ್ವಾಗ್ರಹಕ್ಕೂ ಹಿತಕ್ಕೂ ಒಳಗಾಗದೆ, ವಸ್ತುನಿಷ್ಠವಾದ ವಿಮರ್ಶೆ ಮಾಡಿದ್ದಾರೆ. ಆದರೆ ವಿಮರ್ಶನ ದೃಷ್ಟಿಗೆ ಸರಿತೋರದಿರುವುದನ್ನು ಹೇಳುವುದರಲ್ಲಿಯೂ ಒಂದು ಸುಸಂಸ್ಕೃತ ಶೈಲಿ, ಒರಟುತನವಿಲ್ಲದ ಮೃದುತ್ವ, ಸ್ನೇಹಭಾವ, ಸೌಮ್ಯತೆ ಹಾಗೂ ಲೇಖಕ, ವಾಚಕರು ಒಪ್ಪುವಂತಹ ಧಾಟಿಯನ್ನು ಉಪಯೋಗಿಸಿದ್ದಾರೆ. ಹೀಗೆ ಹೇಳುವಾಗ ಅವರು ವಾಚಕವೃಂದದ ಪ್ರಾತಿನಿಧ್ಯವನ್ನು ವಹಿಸಿಕೊಳ್ಳುತ್ತಾರೆ. ಅವರು ಒಬ್ಬ ವಾಚಕರು. ಮೊದಲು ವಾಚಕ, ಅನಂತರ ವಿಮರ್ಶಕನಷ್ಟೆ ... "ಮಾಸ್ತಿಯವರ ವಿಪುಲವಾದ ಕಥಾ ಸಾಹಿತ್ಯದಲ್ಲಿ ಎಲ್ಲ ಕಥೆಗಳೂ ಎಲ್ಲರಿಗೂ

ಪ್ರಿಯವಾಗುತ್ತವೆಯೆಂದು ನಿರೀಕ್ಷಿಸುವುದು ಸಾಧ್ಯವಿಲ್ಲ. ಆದರೆ 'ಆಚಾರ್ಯರ ಪತ್ನಿ' ಎಂಬ ಕಥೆಯನ್ನು ಮೆಚ್ಚದಿರುವವರು ಅಪರೂಪ ಎಂದು ನನ್ನ ನಂಬಿಕೆ" (ಪುಟ 43) ಎಂಬ ಎರಡು ವಾಕ್ಯವೇ ಒಂದು ಕಿರುವಿಮರ್ಶೆಯಂತಿವೆ. ಇಲ್ಲಿ ಮಾಸ್ತಿಯವರ ಸಣ್ಣ ಕಥೆಗಳ ವ್ಯಾಪಕತೆ, ವಸ್ತುವೈವಿಧ್ಯ ವಾಚಕರ ಭಿನ್ನಾಭಿರುಚಿ ಹಾಗೂ ವಿನಾಯಿತಿಯಿಂದ ಕೂಡಿದ ಸಾರ್ವತ್ರಿಕತೆಗಳು ವ್ಯಕ್ತವಾಗಿದೆ. ಆದರೂ ನಿರೀಕ್ಷಿಸಬಹುದಾದಷ್ಟು - ಮಾಸ್ತಿಯವರಿಂದ ನಿರೀಕ್ಷಿಸಬಹುದಾದಷ್ಟು - ಕಾವ್ಯ ಬಂದಿಲ್ಲ. (51) "ಇದರ ಮತ್ತು ಒಂದೆರಡು ಇತರ ಕಾರಣಗಳಿಂದಾಗಿ ಕೆಲವು ವೇಳೆ ಪದಗಳ ಅನ್ವಯ ಸ್ಪಷ್ಟವಾಗುತ್ತಿರಲಿಲ್ಲ - ಕೆಲವು ವೇಳೆ ಮಾತ್ರ" (94-95) "ಅವರ ಬಂಧ ತೊಡಕಾಯಿತು; ಸ್ಪಷ್ಟತೆ ಸಾಲದು; ಸೃಷ್ಟಿಯ ಮಾಯೆಯ ಒಳಮರ್ಮದ- ಹೀಗೆ ಒಂದರ ಹಿಂದೆ ಒಂದು ಮೂರು ಷಷ್ಠೀ ವಿಭಕ್ತಿಯ ಪದಗಳು ಬಂದರೆ ಕಿವಿಗೆ ಹಿತವಲ್ಲ" (95) "ಆದರೂ ನೇಮಯ್ಯನ ಈ ಬಗೆಯ ಒಳ್ಳೆತನವನ್ನು ಪ್ರತಿ ಸಂದರ್ಭದಲ್ಲಿ ಒತ್ತಿ ಒತ್ತಿ ಕಾಣಿಸಿರುವುದು ಬೇಸರ ತರುತ್ತದೆ. ಆ ಒಳ್ಳೆತನಕ್ಕೆ ಸ್ವಲ್ಪ ಹೆಚ್ಚು ಬಣ್ಣ ಬಳಿದಂತಾಗಿದೆ" (112) "ಆ ಶೈಲಿ ಮಾಸ್ತಿಯವರಿಗೆ ಸಹಜವಾದದ್ದಲ್ಲ" (111) "ಅಲ್ಲಿ ಸಿದ್ಧಿಸಿದ್ದ ಕಲೆ ಇಲ್ಲಿ ಸಿದ್ಧಿಸಿದಂತೆ ಕಾಣುವುದಿಲ್ಲ" (108) ಮುಂತಾದ ವಾಕ್ಯಗಳು ಮೂರ್ತಿರಾಯರ ವಸ್ತುನಿಷ್ಠ ವಿಮರ್ಶೆಗೆ ನಿದರ್ಶನ. ಒಂದು ವಿಚಾರ ಮಂಡನೆ ಅಸ್ಖಲಿತವಾಗಿ, ಖಚಿತವಾಗಿ ಇದಮಿತ್ಥಂ ಎಂದು ಬಿಚ್ಚು ಮಾತಿನಿಂದ ಮೂರ್ತಿರಾಯರು ವಿಮರ್ಶಾತ್ಮಕವಾಗಿ ಹೇಳಿದ್ದಾರೆ. ಮೂರ್ತಿರಾಯರ ವೈಶಿಷ್ಟ್ಯಗಳಲ್ಲಿ ಒಂದಾದ ತೌಲನಿಕತೆಯೂ ಇಲ್ಲಿ ಕಾಣಿಸಿಕೊಂಡಿದೆ. (ಇದರ ವಿಸ್ತೃತ ರೂಪವನ್ನು 'ಪೂರ್ವ ಸೂರಿಗಳೊಡನೆ' ಕೃತಿಯಲ್ಲಿ ಕಾಣಬಹುದು) ಮೂರ್ತಿರಾಯರು ಮಾಸ್ತಿಯವರ ಸಣ್ಣ ಕತೆಗಳನ್ನು ಎಷ್ಟು ಸೂಕ್ಷ್ಮವಾಗಿ ಓದಿದ್ದಾರೆ, ಅವರ ಅಧ್ಯಯನದ ಆಳವೇನು, ಆ ತಾದಾತ್ಮ್ಯ (Involvement) ಮುಂತಾದವುಗಳಿಗೆ 'ರಂಗನಹಳ್ಳಿಯ ರಾಘು' ಕತೆಯಲ್ಲಿ ಕೋಟ್ಸ್‌ನ ಮಾತಿಗೆ ಪ್ರತಿಕ್ರಿಯೆಯನ್ನು ಸೂಚಿಸುತ್ತಾರಾದರೂ ಮರುಕ್ಷಣವೇ ಮಾಸ್ತಿಯವರ ಕಥಾಪ್ರಪಂಚಕ್ಕೆ ಹಿಂತಿರುಗಿ ಆ ಮಾತಿನ ಒಳತಿರುಳನ್ನು ಚೆನ್ನಾಗಿ ಆಲೋಚನೆ ಮಾಡಿ ಒಪ್ಪಿಕೊಳ್ಳುತ್ತಾರೆ. ಇಲ್ಲಿ ಕೋಟ್ಸ್ ಅವರಿಗೆ ಒಂದು ಪಾತ್ರ ಮಾತ್ರವಲ್ಲ. ಪುಸ್ತಕ ಪ್ರಪಂಚದಿಂದ ಹೊರಬಿದ್ದು ಸಾಕಾರರೂಪ ತಾಳಿದ ಒಬ್ಬ ವ್ಯಕ್ತಿ. ಮೂರ್ತಿರಾಯರು ಮಾಸ್ತಿಯವರ ಸಣ್ಣ ಕತೆಗಳನ್ನು ಎಷ್ಟು ಲಕ್ಷ್ಯವಿಟ್ಟು ಓದಿದ್ದಾರೆಂದು ಇಲ್ಲಿ ಸುವಿಧಿತ. ಮಾಸ್ತಿಯವರ ಪರಿಮಿತಿಗಳನ್ನು ನಿರುದ್ವಿಗ್ನರಾಗಿ ಗುರುತಿಸಿದ್ದಾರೆ.

ಗುಣದೋಷಗಳೆರಡನ್ನೂ ಗುರುತಿಸುವುದೇ ವಿಮರ್ಶೆಯ ಅಂತಿಮ ಗುರಿ, ಚರಮಲಕ್ಷ್ಯ. ಮೂರ್ತಿರಾಯರು ಇಲ್ಲಿ ಗುಣಗಳನ್ನೂ ಗುರುತಿಸಿದ್ದಾರೆ, ದೋಷಗಳನ್ನೂ ಹೇಳಿದ್ದಾರೆ. ಆದರೆ ನಗಣ್ಯವಾದ ದೋಷಗಳನ್ನು ಗಣನೀಯವಾದ ಗುಣಗಳು ಹೇಗೆ ಮರೆಮಾಡಿವೆ ಎಂಬುದನ್ನು ತೋರಿಸಿದ್ದಾರೆ. ಈ ಗುಣದೋಷಗಳ ಸಮತೋಲನ ಕೃತಿಗೆ ಹೇಗೆ ಶೋಭೆ ನೀಡಿದೆ ಎಂಬುದನ್ನೂ ನಾವು ಗಮನಿಸಬಹುದು.

"ಒಟ್ಟಿನಲ್ಲಿ ಇಲ್ಲಿ ಮಾಸ್ತಿಯವರ ಕೈ ಸಣ್ಣ ಕಥೆಗಳಲ್ಲಿರುವಷ್ಟು ದೃಢವಾಗಿರುವಂತೆ ತೋರುವುದಿಲ್ಲ. ನರಹರಿಯ ಪ್ರಸಂಗದಂತಹ ಒಂದೆರಡು ಅಂಶಗಳು ಇಲ್ಲದಿದ್ದರೆ ಚೆನ್ನಾಗಿತ್ತು ಎಂಬ ಅಭಿಪ್ರಾಯವನ್ನು ಮೇಲೆ ಕಾಣಿಸಿದ್ದೇನೆ. ಅದು ಸಣ್ಣ ವಿಷಯ.

ಇಲ್ಲಿ ಮುಖ್ಯವಾದ ಕೊರತೆಯೆಂದರೆ ನಾಯಕನ ಪಾತ್ರ ಮೈತುಂಬ ಬರದಿರುವುದು. ಆದರೆ ಈ ಕೊರತೆಗಳು ಹುಡುಕಿ ನೋಡುವ ವಿಮರ್ಶಕನಿಗೆ ಮಾತ್ರ ಕಾಣುತ್ತವೆ. ಕಥನ ಶಕ್ತಿ ಎಲ್ಲೆಲ್ಲೂ ಸೊಗಸಾಗಿದೆ. ಎಡರು ತೊಡರುಗಳಿಲ್ಲದೆ ಕಥೆ ಹರಿಯುವುದರಿಂದ ಮೇಲೆ ಹೇಳಿದ ಕೊರತೆಗಳು ಎಲ್ಲೋ ತೇಲಿ ಹೋಗುತ್ತವೆ. ಹಿರಿಯವರಾದ ದಸ್ತೂರಿಯ ಹೆಗ್ಗಡತಿಯೂ ಮೈಸೂರಿನ ರಾಜಮಾತೆಯೂ ತಾಯಿ ತನ್ನ ಮುದ್ದು ಮಗಳನ್ನು ಆದರಿಸುವಂತೆ ಶಾಂತವ್ವೆಯನ್ನು ಆದರಿಸಿದ್ದು, ರಾಣಿಯು ದಿಟ್ಟತನದಿಂದ ವೈದಿಕನನ್ನು ಎದುರಿಸಿದ್ದು, ಪರಂಗಿಯವರ ಮೋಸದ ಚಿತ್ರ, ಎಲ್ಲಕ್ಕಿಂತ ಹೆಚ್ಚಾಗಿ ವೈದಿಕನ ಚಿತ್ರ ಇಂಥವುಗಳ ಸೊಗಸಿನಲ್ಲಿ ನಾವು ಸಣ್ಣ ಕೊರತೆಗಳಿದ್ದರೂ ಅವನ್ನು ಮರೆಯುತ್ತೇವೆ” (ಪುಟ 121) “ಪೌರಾಣಿಕ ಕತೆಗಳನ್ನೂ ಮಾಸ್ತಿಯವರು ಬರೆದರು. ಹಲವು ಕತೆಗಳ ಮುಕ್ತಾಯ ಮಾಸ್ತಿಯವರ ಕತೆಗಳಲ್ಲಿ ಮುಂದುವರೆದಿರುವುದನ್ನು ನಾವು ಕಾಣುತ್ತೇವೆ. ಕಾಳಿದಾಸ ಬಿಟ್ಟ ಕಡೆಯಿಂದ ಮಾಸ್ತಿಯವರು ಕಥೆಯನ್ನು ಮುಂದುವರಿಸಿದ್ದಾರೆಂಬುದನ್ನು ನೆನಪಿನಲ್ಲಿಡಬೇಕು.”(ಪುಟ 39) ಎಂಬ ಅಡಿ ಟಿಪ್ಪಣಿಯನ್ನು ನಾವು ಮುಂದುವರಿಸಿ ‘ಮಾಸ್ತಿಯವರು ಬಿಟ್ಟ ಕಡೆಯಿಂದ ಮೂರ್ತಿರಾಯರು ಮುಂದುವರಿಸಿದ್ದಾರೆ,’ ಎಂದು ಹೇಳಬಹುದು.

ಮಾಸ್ತಿಯವರ ಹತ್ತು ಹಲವು ಮೂಲಗಳಿಂದ ವಸ್ತುಗಳನ್ನು ಆಯ್ದು ಕತೆಗಳನ್ನು ಬರೆದರು. ಮೂರ್ತಿರಾಯರು ಆ ಮೂಲವನ್ನು ಗುರುತಿಸಿದ್ದಾರೆ. ಅವಶ್ಯವೆನಿಸುವಷ್ಟರ ಮಟ್ಟಿಗೆ ಅಲ್ಲಲ್ಲಿ ಒಂದೊಂದು ಕಿರು ವಿವರಣೆ ನೀಡಿದ್ದಾರೆ. ಓದುಗರಲ್ಲಿರಬಹುದಾದ ಬರಬೇಕಾದ ಸಂದೇಹಗಳನ್ನು ತಾವಾಗಿಯೇ ಎತ್ತಿ ನಿವಾರಿಸಿದ್ದಾರೆ. ಮಾಸ್ತಿಯವರ ಕಥೆಗಳನ್ನು ನಾವು ಓದುವಾಗ ‘ಇದು ಹೇಗೆ ಸಾಧ್ಯ’ ಎಂಬ ಪ್ರಶ್ನೆ ತಲೆದೋರಬಹುದು. ಮೂರ್ತಿರಾಯರು ಅದಕ್ಕೆಲ್ಲಾ ಸಮಂಜಸವಾದ ಸಮರ್ಪಕವಾದ ಉತ್ತರ ನೀಡಿರುವುದರಿಂದ ಮಾಸ್ತಿಯವರ ಕಥೆಗಳಿಗೆ ಇವರ ವಿಮರ್ಶೆ ಒಂದು ಮಾರ್ಗದರ್ಶಿ ವ್ಯಾಖ್ಯಾನದಂತಿದೆ.

ಮೂರ್ತಿರಾಯರು ಯಾವುದೇ ಸಾಹಿತ್ಯ ಕೃತಿಯನ್ನಾಗಲೀ ಅದನ್ನು ಸೂಕ್ತ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವವರು. ಅವರ ಅಪೂರ್ವ ವಿಮರ್ಶಾಗ್ರಂಥವಾದ “ಷೇಕ್ಸ್‌ಪಿಯರ್” ಇದಕ್ಕೊಂದು ಸಾಕ್ಷಿ. ಹಾಗೆಯೇ ಮಾಸ್ತಿಯವರ ಕತೆಗಳು ಸಹ. ಅಲ್ಲಿಯಂತೆ ಇಲ್ಲಿಯೂ ಸಹಾ ಕತೆಗಳ ಮೂಲ ಆಕರಗಳನ್ನು ಸಾಧ್ಯ ಅವಕಾಶವಿರುವಲ್ಲಿ ಗುರುತಿಸಿದ್ದಾರೆ. ‘ಕುಚೇಲನ ಭಾಗ್ಯ’ದಲ್ಲಿ ಬರುವ ಕೃಷ್ಣನ ಪಾತ್ರ ಇದಕ್ಕೊಂದು ನಿದರ್ಶನ. ಶಕುಂತಲೆಯ ಕಥೆಯಿಂದ ಪ್ರೇರಿತವಾದ ಕತೆ ‘ಗೌತಮಿ ಹೇಳಿದ ಕತೆ’ಯ ಒಂದು ಸನ್ನಿವೇಶವನ್ನು ಕಾಳಿದಾಸನ ‘ಶಾಕುಂತಲ’ದ ಮೂರನೇ ಅಂಕದ ಒಂದು ಸನ್ನಿವೇಶದೊಂದಿಗೆ ಸೋದಾಹರಣವಾಗಿ ಸಮನ್ವಯಗೊಳಿಸುತ್ತಾರೆ. ‘ಹೇಮಕೂಟದಿಂದ ಬಂದ ಮೇಲೆ’ ಕತೆಯನ್ನು ಶಾಕುಂತಲ ನಾಟಕದಿಂದ ಹೇಗೆ ಭಿನ್ನವಾಗಿದೆ ಎಂದು ವಿವರಿಸಿದ್ದಾರೆ. ‘ಮಂತ್ರೋದಯ’ ಕತೆಯನ್ನು ವಿಮರ್ಶಿಸುವಾಗ ಮಾಸ್ತಿಯವರು “ಇಲ್ಲಿ ಈಶಾವಾಸ್ಯವನ್ನು ಎಚ್ಚರಿಕೆಯಿಂದಲೂ ಪ್ರೀತಿಯಿಂದಲೂ ಅನುಸರಿಸಿದ್ದಾರೆ. ಹೆಜ್ಜೆಹೆಜ್ಜೆಗೂ ಇಲ್ಲಿ ಉಪನಿಷನ್ಮಂತ್ರದ ನೆನಪು ಬರುತ್ತದೆ - ಭಾವಾನುವಾದ ಮಾತ್ರವಲ್ಲ, ಕೆಲವು ಕಡೆ ಮೂಲಕ್ಕೆ ಹತ್ತಿರವಾದ ಭಾಷಾಂತರ” (ಪುಟ 50) ಎಂದು

ಬರೆದಿದ್ದಾರೆ. ಅಡಿ ಟಿಪ್ಪಣಿಯಲ್ಲಿ ಅನುವಾದ ಹಾಗೂ ಮೂಲಗಳೆರಡನ್ನೂ ಕೊಟ್ಟಿದ್ದಾರೆ. ಮೂರ್ತಿರಾಯರು ವಿದ್ಯಾರ್ಥಿ ಜೀವನದಲ್ಲಿ ಫ್ರೆಂಚ್ ಭಾಷೆಯನ್ನೂ, ಇಂಗ್ಲೀಷ್ ಸಾಹಿತ್ಯವನ್ನೂ ಅಧ್ಯಯನ ಮಾಡಿದವರು. ವೃತ್ತಿ ಜೀವನದಲ್ಲಿ ಸಂಸ್ಕೃತ ಭಾಷೆ, ಸಾಹಿತ್ಯಗಳೆರಡನ್ನೂ ಅಧ್ಯಯನ ಮಾಡಿದ್ದಾರೆ. ಕೆಲವು ವೇಳೆ ಇಲ್ಲಿಯ ವಾಕ್ಯಗಳು ಕಾಳಿದಾಸನ ಹಲವು ಪಂಕ್ತಿಗಳನ್ನು ನೆನಪಿಗೆ ತಂದು ಹರ್ಷ ಕೊಡುತ್ತವೆ (ಪುಟ 51) (ಅಡಿ ಟಿಪ್ಪಣಿ) ಒಂದು ಸಮನ್ವಯ.

ಪ್ರವೃತ್ತಿಯನ್ನು ಬೆಳಸಿಕೊಂಡ ಮೂರ್ತಿರಾಯರಲ್ಲಿ ಪೂರ್ವ - ಪಶ್ಚಿಮಗಳೆರಡರ ಸಾರ ಸಮನ್ವಯತೆ ಇದೆ. ವಿಮರ್ಶೆಗೆ ಕಾವ್ಯ ಮೀಮಾಂಸೆಯ ಅಧ್ಯಯನದ ಹಿನ್ನಲೆಯೂ ಅತ್ಯಗತ್ಯ. ಏಕೆಂದರೆ ವಿಮರ್ಶೆಯ ಪರಿಭಾಷೆಯ ಶಬ್ದಗಳನ್ನು ಅನ್ವಯಿಸುವ ಕ್ರಮ ಅತ್ಯಂತ ಪರಿಣಾಮಕಾರಿಯಾಗಿರುತ್ತದೆ.

ಮೂರ್ತಿರಾಯರಿಗೆ ಭಾರತೀಯ ಪಾಶ್ಚಾತ್ಯ ಕಾವ್ಯ ಮೀಮಾಂಸೆಯ ಮತ್ತು ವಿಮರ್ಶೆಯ ಆಳವಾದ ಪರಿಜ್ಞಾನವಿರುವುದರಿಂದ ವಿಮರ್ಶೆ ಕಾವ್ಯ ಮೀಮಾಂಸೆಯ ಬೆಳಕಿನಲ್ಲಿ ಬೆಳೆದಿದೆ. ಅಲ್ಲಲ್ಲಿ ತಾತ್ವಿಕ ಪರಿಭಾಷೆಯ ಉಲ್ಲೇಖ ವಿಮರ್ಶೆಗೆ ಒಂದು ಮಾಂತ್ರಿಕ ಸ್ಪರ್ಶವನ್ನುಂಟುಮಾಡಿದೆ. ಕನ್ನಡ ಸಂಸ್ಕೃತ ಪಾರಿಭಾಷಿಕ ಶಬ್ದಗಳಿಗೆ ಸಂವಾದಿಯಾದ ಇಂಗ್ಲೀಷ್ ಶಬ್ದಗಳನ್ನು ಆವರಣದಲ್ಲಿ ಕೊಟ್ಟಿರುವುದರಿಂದ ಸನ್ನಿವೇಶದ ಅಥವಾ ಪಾತ್ರದ ಒಟ್ಟು ಪರಿಣಾಮ (Total effect) ತಕ್ಷಣವೇ ಅರ್ಥವಾಗಿ ಮನಸ್ಸಿನಲ್ಲಿ ಆಳವಾಗಿ ಮೂಡುವಂತಿದೆ. ವಸ್ತುವಿನ ರಮ್ಯತೆ (the romantic). ಸಂಕೇತ (Symbol). ಮಿತ್ (Myth). ಅನುಮಾನ (Inference). ಆದರ್ಶೀಕರಣ (Idealisation). ಪ್ರಮಾಣ್ಯ (Dramatic-Lyrical. Authentic). ಭಾವಾತಿರೇಕ (Sentimentalisation). ಅಹಂ (Ego). ಅಗಮ್ಯಗಮನ (Incert. Irony) ಪ್ರಶಾಂತತೆ (Seminity). ಅಲಂಕಾರಿಕ ಶೈಲಿ (Rhetoric). Suspension of disbelief ಡಾಕ್ಯುಮೆಂಟರಿ, ಮೆಲೋಡ್ರಾಮಾ, ಕೋರಸ್, ದುರಂತನಾಯಕ, Insignation makes verse , ಅನಿಕೇತನ, ವಿಶ್ವನಿಕೇತನ, ಹಿಡನಿಸ್ಟ್, ಎಪಿಕ್ಯೂರಿಯನ್, ಪುರಾತನ ಗ್ರೀಕರ ದೇವತೆ ಪಾಲನೆ ಅಧೀನೆ ಸರ್ವಾಸ್ತ್ರ ಸಂಪನ್ನೆಯಾಗಿ..., ರಮ್ಯವಾದ (romantic). ಇತ್ಯಾದಿ ಭಾರತೀಯ- ಪಾಶ್ಚಿಮಾತ್ಯ ಪಾರಿಭಾಷಿಕ ಶಬ್ದಗಳು, ರೂಪಕಗಳು ವಿಮರ್ಶೆಯನ್ನು ಶುಷ್ಕವಾಗಿಸದೆ, ಆಕರ್ಷಕವೂ, ಪಾರಿಭಾಷಿಕವೂ ಆಗಿದೆ.

ಮೂರ್ತಿರಾಯರ ವಿಮರ್ಶೆ(ಯಾವುದೇ ಇರಲಿ) ಸೃಜನಶೀಲ, ಆಕರ್ಷಣೀಯವೂ ಆದ ರಸವತ್ಕೃತಿಯಾಗಲು ಅವರು ಉಪಯೋಗಿಸುವ ಮುಕ್ತಕಗಳೂ ಕಾರಣ. ಸಾಹಿತ್ಯ ಕೃತಿಗಳಲ್ಲಿ ಬರುವ ಘಟನೆಗಳಿಗೆ ಸಿದ್ಧಾಂತ ರೂಪವಾದ ಒಂದು ತೀರ್ಮಾನ ಕೊಡುತ್ತಾರೆ. ಸೈದ್ಧಾಂತಿಕ ನೆಲೆಯ ಇಂತಹ ವಾಕ್ಯಗಳನ್ನು ಬೇರ್ಪಡಿಸಿ, ಸ್ವತಂತ್ರವಾಗಿರಿಸಿ, ಯಾವುದೇ ಸಂದರ್ಭಸೂಚಿಯೂ (Context) ಇಲ್ಲದೆ , ತಮ್ಮದೇ ಆದ ಗಂಭೀರವೂ ಉನ್ನತವೂ ಆದ ಮೌಲ್ಯಗಳಿಂದ ಅವು ಕಂಗೊಳಿಸಬಲ್ಲವು. ಅಷ್ಟೇ ಅಲ್ಲ, ಅಂತಹ ವಾಕ್ಯಗಳು ನಮ್ಮ ನಿತ್ಯದ ಬದುಕಿಗೆ ಪೂರಕವೂ ಆಗಿ ಅನ್ವಯವಾಗಬಲ್ಲವು. ಪಾತ್ರದ ದುರಂತವೋ ಅಥವಾ ಇನ್ನೇನೋ ಒಂದು ಅವಸ್ಥೆಯನ್ನು ಈ ವಾಕ್ಯಗಳು ಸ್ಫುಟವಾಗಿ ವಿವರಿಸುವುದಲ್ಲದೆ, ಆ ಪಾತ್ರ ನಾವೇ ಆಗಿ, ಆ ವಾಕ್ಯ ನಮ್ಮನ್ನೇ ಉದ್ದೇಶಿಸಿ ಹೇಳುವಂತಿದೆ.

ಮಾಸ್ತಿಯವರ ಪಾತ್ರ ಮೂರ್ತಿರಾಯರ ಸಿದ್ಧಾಂತಗಳೆರಡೂ ಸಾಹಿತ್ಯ-ಸಮಾಜದ ಸಮೀಪಕ್ಕೆ ಬರುತ್ತವೆ. ಈ ಕೆಲವು ಉದಾಹರಣೆಗಳನ್ನು ಉಲ್ಲೇಖಿಸಬಹುದು.

"ಅದಕ್ಕೆ ಬದಲು ನಾವು ಈ ಜನತೆ ಉತ್ತಮವಾದದ್ದನ್ನೆಲ್ಲಾ ಭದ್ರವಾಗಿ ಮುಚ್ಚಿಟ್ಟು ಜೀವನದಲ್ಲಿ ಅಲ್ಪವನ್ನು ಬಳಸುತ್ತಿದೆ" ಎಂಬ ನಮ್ಮನ್ನು ಕುರಿತ ಟೀಕೆಯನ್ನು ಮನಸ್ಸಿಗೆ ತಂದುಕೊಳ್ಳುವುದು ಒಳ್ಳೆಯದು. ಆ ಟೀಕೆ ನಿಜ. ಅದೇ ಕೃತಿಯಲ್ಲಿ ಬಹಳ ಕಷ್ಟದ ಕೆಲಸ. ಯಾವುದು ತಾನಾಗಿಯೇ ಪರಿಣಾಮಕಾರಿಯಾಗಬಲ್ಲದೋ ಅದು ಗಮನಕ್ಕೆ ಬರಲು ಅಡ್ಡಿಯಾಗಬಹುದಾದ್ದೆಲ್ಲವನ್ನೂ ಅದರ ಜೊತೆಗೆ ಬರೆದಿರುವ ಸೂಕ್ತವಲ್ಲವಾದ್ದೆಲ್ಲವನ್ನೂ, ದೂರಕ್ಕೆ ಸರಿಸುವುದು. ಅದರೆ ಅದಕ್ಕೆ ಬಣ್ಣ ಹಾಕದಿರುವುದು. ಬಣ್ಣವನ್ನು ಹಾಕಹೊರಟರೆ ಭಾವಾತಿರೇಕ, ವ್ಯಾಖ್ಯಾನ ಮಾಡುವ ಚಟ, ಶೈಲಿಯ ಕೃತಕತೆ-ಇವೆಲ್ಲಕ್ಕೂ ಎಡೆಯಾಗುತ್ತದೆ. ಮೊದಲು ಆ ಸತ್ಯವನ್ನು ನೋಡುವಂತಹ ಪ್ರತಿಭೆ ಇರಬೇಕೆಂಬುದನ್ನು ಎತ್ತಿ ಹೇಳಬೇಕಾಗಿಯೇ ಇಲ್ಲ" (ಪುಟ 79)

"ಅಮೃತಕ್ಕೆ ಬದಲು ವಿಷ ಬಂದು ಅಂಥ ಶೂನ್ಯವನ್ನು ತುಂಬಿದ್ದಕ್ಕೆ ಉದಾಹರಣೆಗಳು ಎಷ್ಟೋ ಸಿಕ್ಕುತ್ತವೆ" (ಪುಟ 81), "ಜೀವನದಲ್ಲಾಗಲೀ, ಅದರ ಪ್ರತಿಬಿಂಬವಾದ ಸಾಹಿತ್ಯದಲ್ಲಾಗಲೀ ಕ್ರಿಯೆ ನಡೆಯುವುದು ಶೂನ್ಯವಾದದ್ದಲ್ಲ, ಯಾವುದೇ ಒಂದು ಕಾಲದಲ್ಲಿ, ಒಂದು ಸ್ಥಳದಲ್ಲಿ ಕರ್ತೃವಿನ ಮನಸ್ಸು ಯಾವುದೋ ಒಂದು ರೀತಿಯಲ್ಲಿ ಒದಗಿ ಬಂದಾಗ" (ಪುಟ 85), "ನೀತಿಯ ವಿಷಯದಲ್ಲಿ 'ತಪ್ಪು' ಎಂಬುದನ್ನು ನಿರ್ಣಯಿಸಿ ತೀರ್ಪು ಕೊಡುವುದು ಕಷ್ಟ, ಮತಧರ್ಮಗಳ ವಿಷಯದಲ್ಲಿ ಅಂಥ ತೀರ್ಪು ಅಸಾಧ್ಯ. ಆದ್ದರಿಂದ ನಮ್ಮ ಸ್ವಂತ ಮತಧರ್ಮಗಳ ವಿಷಯದಲ್ಲಿ ನಮಗಿರುವ ಅಭಿಮಾನ-ಅದು ಇರಬೇಕಾದದ್ದು ಸಹಜ - ಇತರರ ಮತಗಳ ವಿಷಯದಲ್ಲಿ ಅಸಹನೆಯನ್ನು, ದ್ವೇಷವನ್ನೂ ಪ್ರಚೋದಿಸುವ ಮಟ್ಟಕ್ಕೆ ಹೋಗಬಾರದು" (ಪುಟ 86) ಬಹುಶಃ ಸುಖಿ ದಾಂಪತ್ಯವಿರುವ ಕಡೆ ಗಂಡನು ಸುಸಂಸ್ಕೃತನಾದರೆ, ಅವನಿಗೆ ಒಂದಲ್ಲ ಒಂದು ಸಲ ತನ್ನ ಪತ್ನಿಗೆ ನಮಸ್ಕರಿಸಿ ಅವಳನ್ನು ಪೂಜಿಸಬೇಕೆಂಬ ಭಾವನೆ ಬಂದಿರುತ್ತದೆ, ಅವಳ ಪ್ರೇಮವು ಭಗವತಿಯ ಕೃಪೆ ಎನಿಸಿರುತ್ತದೆ" (ಪುಟ 88) "ಸದ್ಗುಣದ ಕೋಟೆಯನ್ನು ಬೇಧಿಸಲು ಸೈತಾನ ಉಪಯೋಗಿಸುವ ಸಾಧನಗಳಲ್ಲಿ ಮುಖ್ಯವಾದ ಎರಡೆಂದರೆ, ಸ್ವಾರ್ಥ ಮತ್ತು ಮಹತ್ವಾಕಾಂಕ್ಷೆ. ಇವೆರಡಕ್ಕೂ ಧರ್ಮ ಶ್ರದ್ಧೆಯ ವೇಷ ಹಾಕಿ ಕಳಿಸಿದರಂತೂ ಕೋಟೆಯನ್ನು ಉರುಳಿಸುವುದು ಬಹು ಸುಲಭ" (ಪುಟ 117)

"ಮಾನವನ ಸ್ವಭಾವ ಸಂಪೂರ್ಣವಾಗಿ ಆವರಣದ ಫಲ ಎಂದು ಹೇಳುವುದು ಕಷ್ಟ. ಆದರೂ ಅದರ ಪ್ರಭಾವ ಗುರುತರವಾದದ್ದು ಎಂಬುದನ್ನು ಅಲ್ಲಗಳೆಯಲಾಗುವುದಿಲ್ಲ" (ಪುಟ 133)

"ನಮ್ಮಲ್ಲಿರುವ ಮರುಕವನ್ನು ಎಂಥ ಪಾಪಿಗೇ ಆಗಲಿ 'ಕೊಡುವುದಿಲ್ಲ' ಎನ್ನಬಾರದು" (ಪುಟ 138)

"ಜೀವನದಲ್ಲಿರುವುದೆಲ್ಲ ಕಲೆಯಲ್ಲ. ಸಹಜವಾಗಿ ಕಾಣದಿರಬಹುದು ಮತ್ತು ಇಲ್ಲದ್ದು ಸಹಜವಾಗಬಹುದು" (ಪುಟ 144) "ಜೀವನದಲ್ಲಿ ಹೇಗೆ ವೈವಿಧ್ಯವಿದೆಯೋ, ವೈವಿಧ್ಯ ಬೇಕೋ ಹಾಗೇ ಸಾಹಿತ್ಯದಲ್ಲೂ ಇದೆ ಮತ್ತು ಬೇಕು" (ಪುಟ 145)

ಮೂರ್ತಿರಾಯರ ವಿಮರ್ಶನ ಶೈಲಿ ನಮಗೆ ಅತ್ಯಂತ ಅಪ್ಯಾಯಮಾನವಾಗುವುದಕ್ಕೆ ಇನ್ನೊಂದು ಕಾರಣ ಇಲ್ಲಿ ಸ್ಪಷ್ಟವಾಗುತ್ತದೆ. 'ಚಂಡಮಾರುತ'ದಲ್ಲಿ ಪ್ರಾಸ್ಪರೋ ದೃಷ್ಟಿಯಲ್ಲಿ ಕಾಣುವ ಕ್ಯಾಲಿಬನ್ ವಿಮರ್ಶಕನ ದೃಷ್ಟಿಕೋನದಲ್ಲಿ ಹೇಗೆ ಕಾಣುತ್ತಾನೆಂದು ವಿಶ್ಲೇಷಿಸಿದ ಹಾಗೆ ಇಲ್ಲಿಯೂ ಸಹಾ ಒಂದು ಪಾತ್ರ ಇನ್ನೊಂದನ್ನು ಕುರಿತು, ಪಾತ್ರದ ಆತ್ಮ ವಿಮರ್ಶೆ-"ಆದ್ದರಿಂದ ಅವರು ಅವನಿಗೆ ಆತ್ಮಶುದ್ಧಿಯಿಲ್ಲ ಎಂದ ಈ ಸಂದರ್ಭದಲ್ಲಿ ಆತ್ಮಶುದ್ಧಿ ನಿಜವಾಗಿಯೂ ಮಾಲಿನಿಗಿಂತ ಅವನಲ್ಲಿ ಹೆಚ್ಚಾಗಿ ಇತ್ತಲ್ಲವೇ?"(ಪುಟ 89) ಮೂರ್ತಿರಾಯರು ವಿಮರ್ಶಕ ದೃಷ್ಟಿಯಲ್ಲಿ ಪೃಥಕ್ಕರಿಸಿದ್ದಾರೆ. ಆದ್ದರಿಂದ ವಿಮರ್ಶಕ ಪಾತ್ರವನ್ನು ಕುರಿತು ತೀರ್ಪು ನೀಡುವ ಪಾತ್ರದೊಂದಿಗೆ ರಾಜಿ ಮಾಡಿಕೊಳ್ಳಬಾರದೆಂಬ ನೆಲೆಯಲ್ಲಿ ಮೂರ್ತಿರಾಯರು ವಿಶಿಷ್ಟರಾಗಿ ಉಳಿಯುತ್ತಾರೆ.

ವಿಮರ್ಶೆಯೂ ಒಂದು ರೀತಿಯಲ್ಲಿ ಸೃಜನಶೀಲ ಸಾಹಿತ್ಯವೇ. ಮೂರ್ತಿರಾಯರ ಕಾವ್ಯಾತ್ಮಕ ಶೈಲಿ ಇದನ್ನು ದೃಢಪಡಿಸುತ್ತದೆ. ಅವರು ಉಪಯೋಗಿಸುವ ರೂಪಕಗಳು ಮನೋಹರವಾಗಿವೆ. ಇದರಿಂದ ವಿಮರ್ಶೆಯೂ ಸೊಗಸಾದ ನಿರೂಪಣೆಯಾಗಿದೆ. ಕೆಲವು ನಿದರ್ಶನಗಳು :

"ಈ ಹೆಣ್ಣು ಮರಕ್ಕೆ ಹಬ್ಬಿಕೊಳ್ಳುವ, ಆಶ್ರಯವಿಲ್ಲದೆ ಬದುಕಲಾರದ ಬಳ್ಳಿಯಲ್ಲ" (ಪುಟ 28) "ಅದಕ್ಕೆ ರುಜು ಇರಲಿಲ್ಲ-ಅವಳ ಜೀವನದಿಂದ ತಾನು ಹೊರಬಿದ್ದದ್ದಕ್ಕೆ ಅದು ಸಂಕೇತ" (ಪುಟ 29-30). ಶಾಕುಂತಲದಿಂದ ಪ್ರೇರಿತವಾದ ಎರಡು ಕಥೆಗಳಲ್ಲೂ ನಮಗೆ ಸಿಕ್ಕುವುದು ಮಾಸ್ತಿಯವರ ಟಂಕಸಾಲೆಯಲ್ಲೇ ಮುದ್ರಿತವಾದ ನಾಣ್ಯ. ಕಾಳಿದಾಸನ ನಾಣ್ಯವಲ್ಲ. ಇಲ್ಲಿ ಮಾಸ್ತಿಯವರ ಮುದ್ರೆ ಅಷ್ಟು ಸ್ಫುಟವಾಗಿಲ್ಲ (ಪುಟ 52) ಬದುಕು ವಿವಿಧ ವರ್ಣಗಳಿಂದ ರಂಜಿತವಾದದ್ದು....(ಪುಟ 52)

ಮೂರ್ತಿರಾಯರು ಅಲ್ಲಲ್ಲಿ ಕೆಲವು ಸಿದ್ಧಾಂತಗಳ ಬೆಳಕಿನಲ್ಲಿ ಮಾಸ್ತಿಯವರ ಪಾತ್ರಗಳನ್ನು ವಿಶ್ಲೇಷಣೆ ಮಾಡಿದ್ದಾರೆ. ತತ್ವವೊಂದನ್ನು ಮೊದಲು ನಿರೂಪಿಸಿ ಅನಂತರ ಅದಕ್ಕೆ ನಿದರ್ಶನವಾಗಿ ಮಾಸ್ತಿಯವರ ಕೃತಿಗಳಿಂದ ಪಾತ್ರ ಅಥವಾ ಘಟನೆಗಳನ್ನು ಉದಾಹರಿಸುವುದೂ ಇದೆ. ಇಂತಹ ತಾರ್ಕಿಕವಾದ ನಿರೂಪಣೆ ಮಾಸ್ತಿಯವರ ಮನೋಧರ್ಮವನ್ನು ಅರಿಯಲು ಸಹಕಾರಿಯೂ ಹೌದು. ಇದು ಮೂರ್ತಿರಾಯರಿಗೆ ತಾನು ಹೇಳುತ್ತಿದ್ದ ವಿಚಾರವಾಗಿ, ಎಂತಹ ನಿಷ್ಕೃಷ್ಟ ಜ್ಞಾನ, ಖಚಿತ ವಿಶ್ವಾಸವಿದೆ ಎಂದು ತೋರಿಸುತ್ತದೆ.

"ಮೊದಲು ಆ ಸತ್ಯವನ್ನು ನೋಡುವಂಥ ಪ್ರತಿಭೆ ಇರಬೇಕೆಂಬುದನ್ನು ಎತ್ತಿ ಹೇಳಬೇಕಾಗಿಯೇ ಇಲ್ಲ. ಮಾಸ್ತಿಯವರು ಮೇಲೆ ಕಾಣಿಸಿರುವ ವಿಷಯದಲ್ಲಿ ದೃಢವಾದ ಹತೋಟಿಯನ್ನಿಟ್ಟುಕೊಂಡಿದ್ದಾರೆ"(ಪುಟ 79)

"ನಮ್ಮ ಸ್ವಂತ ಮತಧರ್ಮಗಳ ವಿಷಯದಲ್ಲಿ ನಮಗಿರುವ ಅಭಿಮಾನ-ಅದು ಇರಬೇಕಾದದ್ದು ಸಹಜ-ಇತರ ಮತಗಳ ವಿಷಯದಲ್ಲಿ ಅಸಹನೆಯನ್ನೂ ದ್ವೇಷವನ್ನೂ ಪ್ರಚೋದಿಸುವ ಮಟ್ಟಕ್ಕೆ ಹೋಗಬಾರದು." ಮಾಸ್ತಿಯವರಲ್ಲಿ ಇಂಥ ಅಸಹನೆ ದ್ವೇಷಗಳ ಸುಳಿವೇ ಇಲ್ಲ. (ಪುಟ 86)

"ಸಾಹಿತ್ಯದಲ್ಲಿ ಸಾಮಾನ್ಯವಾಗಿ ತೀರ ಒಳ್ಳೆಯ ಜನರನ್ನು ಚಿತ್ರಿಸುವುದು ಕಷ್ಟ. ಅಂಥವರು ವ್ಯಕ್ತಿಗಳಾಗುವುದಕ್ಕಿಂತ ಸಂಕೇತಗಳಾಗಿ ಪರಿಣಮಿಸುವ ಸಂಭವ ಹೆಚ್ಚು. ಆದ್ದರಿಂದ ರಾಣಿ ವೀರಮ್ಮಾಜಿಯ ಚಿತ್ರ ಶಾಂತವ್ವೆಯದಕ್ಕಿಂತ ಸ್ಫುಟವಾಗಿರುವುದು ಸ್ವಾಭಾವಿಕ" (ಪುಟ 112)

"ಇಂತಹ ದೃಶ್ಯಗಳನ್ನು ಬರೆಯುವಾಗ ಭಾವ ಶೈಥಿಲ್ಯಕ್ಕೆ (Sentimentalism) ಎಡೆಗೊಡುವ ಸಂಭವವುಂಟು. ಅದನ್ನು ತಪ್ಪಿಸಿಕೊಳ್ಳಹೋಗಿ ಪೇಲವತೆಯ ಹಳ್ಳಕ್ಕೆ ಬೀಳುವುದೂ ಸಾಧ್ಯ. ಮಾಸ್ತಿಯವರು ಇವೆರಡೂ ಅಪಾಯಗಳನ್ನು ತಪ್ಪಿಸಿಕೊಂಡಿದ್ದಾರೆ" (ಪುಟ 114)

ಮೂರ್ತಿರಾಯರು ಸಣ್ಣಕತೆಗಳನ್ನು ವಿಮರ್ಶಿಸಹೊರಟವರು. "ಚೆನ್ನಬಸವ ನಾಯಕ" ಹಾಗೂ "ಚಿಕವೀರರಾಜೇಂದ್ರ"ದಂತಹ ಕಾದಂಬರಿಗಳನ್ನು ಇಲ್ಲಿ ವಿಮರ್ಶಿಸಲು ಏಕೆ ಹೊರಟರು ಎಂಬ ಕುತೂಹಲ ನಮ್ಮನ್ನು ಕಾಡುತ್ತದೆ. ಮೂರ್ತಿರಾಯರ ವಿಮರ್ಶನ ದೃಷ್ಟಿಗೆ ಮಾಸ್ತಿಯವರ ಸಣ್ಣ ಕತೆಗಳ ಲಕ್ಷಣಗಳು ಇಲ್ಲಿಯೂ ಕಂಡು ಬಂದಿವೆ. ಹಲವು ಪಾತ್ರಗಳ ಮುಂದಿನ ಹಂತ ಇಲ್ಲಿ ಮುಂದುವರಿದಿರುವುದನ್ನು ಅವರು ಗಮನಿಸಿದ್ದಾರೆ. ಮಾಸ್ತಿಯವರ ಕಥನ ಶೈಲಿಗೆ ಸಣ್ಣ ಕತೆಗಳ ಕ್ಷೇತ್ರ ಸಾಕಾಗಲಿಲ್ಲ. ಅದರ ವಿಸ್ತಾರವಾದ ಅಭಿವ್ಯಕ್ತಿಗೆ ಇಲ್ಲಿ ವಿಪುಲವಾದ ಅವಕಾಶ ದೊರೆಯಿತು. "ಇದು ದೊಡ್ಡ ಕಾದಂಬರಿಯಾಗಿದ್ದಿದ್ದರೆ ಸುಬೇದಾರರ ಪಾತ್ರ ಆಕರ್ಷಕವಾಗಿ ಬೆಳೆಯಬಹುದಾಗಿತ್ತು. ಈ ಕಥೆಯ ಮಿತಿಯಲ್ಲಿ ಅದಕ್ಕೆ ಹೆಚ್ಚು ಅವಕಾಶವಿಲ್ಲ"(ಪುಟ 78) ಎಂಬ ಮಾತಿನಲ್ಲಿ ಸಣ್ಣಕತೆಗಳಲ್ಲಿ ಕಾದಂಬರಿಯ ಬೀಜವನ್ನು ಅವರು ಗುರುತಿಸಿದ್ದಾರೆ. ಚಿಕವೀರ ರಾಜೇಂದ್ರನಿಗೂ ಸುಬ್ಬಣ್ಣನಿಗೂ ಇರುವ ಅಂತರ, ಎರಡೂ ಕೃತಿಗಳಲ್ಲಿನ ತಂತ್ರ–ಇತ್ಯಾದಿಗಳ ವಿಮರ್ಶೆ ತೌಲನಿಕವಾಗಿದೆ. ಈ ಎರಡೂ ಕಾದಂಬರಿಗಳನ್ನು ಕುರಿತ ವಿಮರ್ಶೆಯೂ ಇಲ್ಲಿ ಸೇರ್ಪಡೆಯಾಗಿರುವ ಕಾರಣವನ್ನು ಅವರು ಎರಡು ಕಡೆ ಹೀಗೆ ನೀಡಿದ್ದಾರೆ. ಮಾಸ್ತಿಯವರ ಕತೆಗಳನ್ನು ಮೂರ್ತಿರಾಯರು ವರ್ಗೀಕರಿಸುವಾಗ (ಈ ವರ್ಗೀಕರಣ ಅವರಿಗೆ ಸಮಾಧಾನ ನೀಡಿಲ್ಲ) ಐತಿಹಾಸಿಕ ವ್ಯಕ್ತಿಗಳನ್ನು ಕುರಿತ ಕಥೆಗಳ ವಿಮರ್ಶೆ ಮಾಡಿದ್ದಾರೆ. ಈ ಕಥಾದ್ರವ್ಯ ಮಾಸ್ತಿಯವರಲ್ಲಿ ಹೇಗೆ ಮುಂದುವರಿದು ಕಾದಂಬರಿ ರಚನೆಗೆ ಪ್ರಚೋದನೆ ನೀಡಿದೆ, ಮಾಸ್ತಿಯವರ ಸಣ್ಣಕತೆಗಳಿಗೂ ಕಾದಂಬರಿಗಳಿಗೂ ಇರುವ ಸಂಬಂಧಗಳೇನು ಎಂದು ಸೂಚಿಸಲು ಈ ಎರಡು ಕಾದಂಬರಿಗಳನ್ನೂ ಇಲ್ಲಿ ವಿಮರ್ಶಿಸಿದ್ದಾರೆ. ಜೊತೆಗೆ ಅವರಿಗೆ ಪ್ರಿಯವಾದ ತೌಲನಿಕ ವಿಮರ್ಶೆಯೂ ಇಲ್ಲಿದೆ. ಆಳಿನಿಂದ ಅರಸನವರೆಗೆ ಇಲ್ಲಿನ Portrait gallery ತುಂಬಿದೆ. ವಿಮರ್ಶಕನ ದೃಷ್ಟಿಯನ್ನು ಮೂರ್ತಿರಾಯರೇ ಹೀಗೆ ಹೇಳಿದ್ದಾರೆ :

'ಒಳ್ಳೆಯದಾಗಲಿ ಕೆಟ್ಟದಾಗಲಿ ಚಿತ್ರಣ ಚೆನ್ನಾಗಿರಬೇಕು ಎನ್ನುವುದು ವಿಮರ್ಶಕನ ದೃಷ್ಟಿ. ಜೊತೆಗೆ, ಆ ಚಿತ್ರ ಓದುಗರ ಮೇಲೆ ಒಳ್ಳೆಯ ಪರಿಣಾಮವುಂಟುಮಾಡುತ್ತದೆಯೇ ಎಂದು ಕೇಳುವುದು ವಿಮರ್ಶಕನಿಗೆ ಅಪ್ರಕೃತವೇನಲ್ಲ,' (ಪುಟ 145)

ಮೂರ್ತಿರಾಯರ ವಿಮರ್ಶೆಯ ಉದ್ದೇಶ–ದೃಷ್ಟಿ ಎರಡೂ ಗಮನಾರ್ಹ. ಇಂದು ತಮ್ಮ ಮುಂದಿರುವ ಕೃತಿಯನ್ನು ಮಾತ್ರವೇ ಕುರಿತು ನಾಲ್ಕು ಸಾಲು ವಿಮರ್ಶೆಯ ಹೆಸರಿನಡಿ ಬರೆಯುವವರು ಈ ಮಾತುಗಳನ್ನು ಅಗತ್ಯ ಗಮನಿಸಬೇಕಾಗಿದೆ.

ಮಾಸ್ತಿಯವರ ಸಣ್ಣಕಥೆಗಳನ್ನು 'ಕಥೆ', 'ನಿರೂಪಣೆ' ಮುಂತಾದ ಪಾರಿಭಾಷಿಕ ಶಬ್ದಗಳ ಹಿನ್ನೆಲೆಯಲ್ಲಿ ಅವುಗಳ 'ರಾಚನಿಕ ಸ್ವರೂಪ'ವನ್ನು ವಿವರಿಸುತ್ತಾ, ಕಾಲಘಟ್ಟದ ಹಿನ್ನೆಲೆಯಲ್ಲಿ ಡಾ.ರಾಜೇಂದ್ರ ಚೆನ್ನಿಯವರು ಈ ಅಭಿಪ್ರಾಯಪಡುತ್ತಾರೆ.

"ವಸ್ತು ವಿವರಗಳ ನುಡಿಗಟ್ಟನ್ನು(Language of facts)ನೆಚ್ಚಿಕೊಂಡು ಬರೆದಿದ್ದು ಅವರ ಸ್ವಂತಿಕೆಯಾಗಿದೆ. ನವೋದಯದ ಪರಿಸರದಲ್ಲಿ ಅಭಿಜಾತ ಮಾರ್ಗದ ನೆಲೆಯೊಂದನ್ನು ಹುಡುಕಿಕೊಂಡಿದ್ದು ಬಹು ದೊಡ್ಡ ಸಾಧನೆ. ತಮ್ಮ ಸಾಹಿತ್ಯ ಪರಿಸರದ ಅಪೇಕ್ಷೆಗಳನ್ನು ದೂರದಲ್ಲಿಟ್ಟು ಬರೆದದ್ದು ಸ್ವಂತಿಕೆಯ ದ್ಯೋತಕವಾಗಿದೆ".

(ಮಾಸ್ತಿಯವರ ಕಥೆಗಳು ಪುಟ 29. 1991)

ಮೂರ್ತಿರಾಯರ ವಿಮರ್ಶೆಯಲ್ಲಿ ಇಂತಹ ಪಾರಿಭಾಷಿಕ ಶಬ್ದಗಳ ಗೊಂದಲವಿಲ್ಲ. ಆ ಕಾರಣ ಅವರ ವಿಮರ್ಶೆಯ ದಾರಿ ನಮಗೆ ಹತ್ತಿರವಾಗುತ್ತದೆ. ಮೂರ್ತಿರಾಯರಂತೆ ಮಾಸ್ತಿಯವರ ಸಣ್ಣ ಕತೆಗಳ ಬಗ್ಗೆ ಸರಳವಾಗಿ ಬರೆದವರು ಶ್ರೀ ಬಿ.ವಿ. ವೈಕುಂಠರಾಜು. ಒಂದು ಮಾದರಿ :

"ಮಾಸ್ತಿಯವರ ವೈಚಾರಿಕ ರೀತಿಯನ್ನು ಒಪ್ಪಬಹುದು. ಬಿಡಬಹುದು - ಅದು ಬೇರೆ ವಿಷಯ-ಆದರೆ ಕನ್ನಡಕ್ಕೆ ಮಾಸ್ತಿಯವರ ನಿಜವಾದ ಕಾಣಿಕೆ ಅವರ ಸಣ್ಣಕತೆಗಳು.

ಕನ್ನಡದಲ್ಲಿ ಮೊದಲು ಸಣ್ಣಕತೆ ಬರೆದವರು ಯಾರು ಎನ್ನುವ ವಿಚಾರವಾಗಿ ಚರ್ಚೆ ಕೆಲವು ವರ್ಷಗಳ ಹಿಂದೆ ನಡೆಯಿತು. ಮೊದಲು ಯಾರು ಕತೆ ಬರೆದವರು ಎನ್ನುವುದು ಐತಿಹಾಸಿಕವಾಗಿ ಮುಖ್ಯವಾಗಿರಬಹುದು. ಆದರೆ ಸಣ್ಣ ಕತೆಗೆ ಭದ್ರವಾದ ಬುನಾದಿ ಹಾಕಿದವರು ಮಾಸ್ತಿಯವರೆ. ಇಷ್ಟು ಸರಳವಾದ, ಪರಿಣಾಮಕಾರಿಯಾದ ಶೈಲಿಯನ್ನು ಕನ್ನಡ ಕಂಡದ್ದೇ ಮೊದಲ ಬಾರಿಗೆ. ಅವರ ಶೈಲಿ ಸರಳ, ನೇರ, ಅಗತ್ಯಕ್ಕೆ ತಕ್ಕಷ್ಟು ಶಬ್ದಗಳು. ಈ ಸರಳತೆ ಐವತ್ತು ವರ್ಷಗಳಾದ ಮೇಲೂ ಅವರ ಬರವಣಿಗೆಯಲ್ಲಿ ಕಾಣುತ್ತಿದೆ."

(ಸಪ್ತಶೃಂಗ 1972 ಪುಟ 82-83)



# ಅಧ್ಯಾಯ-4

## ಅಪರ ವಯಸ್ಕನ ಅಮೇರಿಕ ಯಾತ್ರೆ

ಬ್ರಿಟೀಷರು ಭಾರತವನ್ನು ಆಳುವಾಗ ಬ್ರಿಟನ್ ಭಾರತೀಯರ ಕಾಶಿಯಾಗಿತ್ತು. ಬಾರ್-ಅಟ್-ಲಾ ಹಾಗೂ ಇತರ ಉನ್ನತ ಪದವಿ ಶಿಕ್ಷಣ ಪಡೆಯಲು ಇಂಗ್ಲೆಂಡಿಗೆ ಹೋಗಿ ಬರುವುದು ರೂಢಿಯಾಗಿತ್ತು. ವಿಶ್ವವಿದ್ಯಾನಿಲಯಗಳಲ್ಲಿ ಬೋಧನೆ ಮಾಡುವ ಅಧ್ಯಾಪಕರು ಇಂಗ್ಲೆಂಡಿಗೆ ಹೋಗಿ ಶಿಕ್ಷಣ ಪಡೆಯದಿದ್ದರೆ ಅವರು ವಿಶ್ವವಿದ್ಯಾನಿಲಯಗಳಲ್ಲಿ ಪಾಠ ಹೇಳಲು ಅನರ್ಹರೆಂದೇ ಪರಿಗಣಿಸಲ್ಪಡುತ್ತಿದ್ದರು. ಶ್ರೀಯುವರು ಇಂಥ ಒಂದು ಸಂದರ್ಭದಲ್ಲಿ After all we are all home products ಎಂದು ಕಟಕಿಯಾಡಿದ್ದರಂತೆ. ಡಾ. ಎಸ್. ರಾಧಾಕೃಷ್ಣನ್‌ರಂತಹ ಮಹಾ ಮೇಧಾವಿಗಳನ್ನು 'ನೀವು ಇಂಗ್ಲೆಂಡಿಗೆ ಹೆಚ್ಚಿನ ಶಿಕ್ಷಣಕ್ಕಾಗಿ ಹೋಗುವುದಿಲ್ಲವೇ?' ಎಂದೂ ಕೇಳಿದ್ದರಂತೆ. ಆಗ ಅವರು 'We go, we will go, but not to learn but to teach' ಎಂದು ಹೇಳಿದ್ದರಂತೆ. ನೆಹರೂ, ಗಾಂಧೀಜಿ, ಅರವಿಂದರು, ಟಿ.ಪಿ. ಕೈಲಾಸಂ, ವಿನಾಯಕ ಮುಂತಾದವರೂ ಅಲ್ಲಿ ತಮ್ಮ ಶಿಕ್ಷಣವನ್ನು ಪಡೆದವರು. ಡಾ. ಡಿ. ಸಿ ಪಾವಟೆಯವರು ಕೇಂಬ್ರಿಜ್‌ನ 'ರ್‍ಯಾಂಗ್ಲರ್' ಎಂಬ ಪದವಿಯನ್ನು ಪಡೆದವರು. ಕಾಲಕ್ರಮೇಣ ಇಂಗ್ಲೆಂಡಿನ ಆಕರ್ಷಣೆ ಕಡಿಮೆಯಾಯಿತು. ಭಾರತೀಯರ ಜನಮನವನ್ನು ಅಮೇರಿಕ ಆವರಿಸಿ ಆಳ ತೊಡಗಿತು. ಉನ್ನತ ಶಿಕ್ಷಣ ಹಾಗೂ ವಿದೇಶ ಪ್ರವಾಸವೆಂದರೆ ಅಮೇರಿಕಕ್ಕೇ ಹೋಗ ಬೇಕೆಂಬ ಉತ್ಕಟೇಚ್ಛೆ ಭಾರತೀಯರ ಮನಸ್ಸಿನಲ್ಲಿ ಉದಿಸಿತು. ಹೀಗೆ ಅಮೇರಿಕ ಇಂಗ್ಲೆಂಡನ್ನು ತನ್ನ ಐಹಿಕ, ಶೈಕ್ಷಣಿಕ, ವೈಜ್ಞಾನಿಕ, ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಉಚ್ಛ್ರಾಯ ಸ್ಥಿತಿಯಿಂದ ಸ್ಥಾನಪಲ್ಲಟಗೊಳಿಸಿದ ಕಾರಣ ಹಲವು ಮೇಧಾವಿ ಭಾರತೀಯರಿಗೆ ಅದೇ ವಾಸಸ್ಥಾನವೂ ಆಗಿ ಪರಿವರ್ತಿತವಾಯಿತು. ಇತ್ತೀಚೆಗೆ ಭಾರತದ ವಿವಿಧ ರಾಜ್ಯಗಳಿಂದ ಹೇಗೋ ಹಾಗೆ ಕರ್ನಾಟಕದಿಂದಲೂ ಹಲವು ವಿದ್ಯಾವಂತರು, ಪ್ರತಿಭಾವಂತರು, ಅಮೇರಿಕದಲ್ಲಿ ಶಿಕ್ಷಣ, ಅಲ್ಲಿಯ ಪೌರತ್ವ ಗಳಿಸಿ ಅಲ್ಲೇ ನೆಲೆಸಿಯೂ ನೆಲೆಸಿದ್ದಾರೆ.

ವಿದೇಶ ಪ್ರವಾಸ ಮಾಡಲು ಇಚ್ಛಿಸುವ ಭಾರತದ, ಕರ್ನಾಟಕದ ವ್ಯಕ್ತಿಗಳು ಪ್ರವಾಸದ ಉದ್ದೇಶಗಳನ್ನು ವೈವಿಧ್ಯಮಯವಾಗಿ ಇರಿಸಿಕೊಳ್ಳುವುದೂ ಉಂಟು. ದೇಶ ಪರ್ಯಟನವೆಂಬುದು ಕೆಲವರ ಹವ್ಯಾಸವೂ ಆಗಿರುತ್ತದೆ. ಹೀಗೆ ಅಮೇರಿಕ ಪ್ರವಾಸ ಕೆಲವರ ಹವ್ಯಾಸವಾದರೆ, ಕೆಲವರಿಗೆ ಅಮೇರಿಕದಲ್ಲಿ ನೆಲೆಸಿದ ಮಕ್ಕಳು, ಅಳಿಯಂದಿರು,

ಸೊಸೆಯರು, ಮೊಮ್ಮಕ್ಕಳು, ಸ್ನೇಹಿತರು, ಬಂಧುಗಳು-ಇವರನ್ನು ಕಾಣುವ ಕುತೂಹಲ. ಇನ್ನೂ ಕೆಲವರಿಗೆ ಅಲ್ಲಿಯ ಮಹತ್ವದ ಸಾಧನೆಗಳನ್ನು ಕೇಳಿದ್ದನ್ನೂ ಓದಿರುವುದನ್ನೂ-ಪ್ರತ್ಯಕ್ಷ ಕಾಣುವ ಹಂಬಲ. ಇನ್ನೂ ಕೆಲವರಿಗೆ ಪ್ರಪಂಚ ಪರ್ಯಟನದ ಒಂದು ಭಾಗವಾಗಿ ಅಮೇರಿಕ ಪ್ರವಾಸ. ಇನ್ನೂ ಕೆಲವರಿಗೆ ತಮ್ಮ ಹಾಗೂ ತಮ್ಮವಲ್ಲದ ಕ್ಷೇತ್ರಗಳಲ್ಲಿ ಯಾವೆಲ್ಲ ಮಾರ್ಪಾಟು, ಸುಧಾರಣೆ, ಪ್ರಗತಿ, ಇತ್ಯಾದಿಗಳಿವೆಯೋ ಅವನ್ನು ಕಾಣುವ, ಕಂಡು ಬಂದು ಅದನ್ನು ಅಲ್ಲಿಂದ ಇಲ್ಲಿಗೆ ತಂದು ಪ್ರಾಯೋಗಿಕವಾಗಿ ಅನುಷ್ಠಾನಕ್ಕೆ ತರುವ, ಕಾರ್ಯರೂಪಕ್ಕಿಳಿಸುವ ಆತುರ. ಹೀಗೆ ನಾನಾ ಉದ್ದೇಶ, ಗುರಿ, ಧ್ಯೇಯಗಳು ಅಮೇರಿಕ ಪ್ರವಾಸಕ್ಕೆ.

ಇಂಗ್ಲೆಂಡಿನಲ್ಲಿ ಶಿಕ್ಷಣ ಪಡೆಯಲು ಹಲವು ವರ್ಷಗಳಿದ್ದವರು ತಮ್ಮ ಅನುಭವ ಅನಿಸಿಕೆಗಳನ್ನು ಬರವಣಿಗೆಯ ರೂಪದಲ್ಲಿ ಶಾಶ್ವತಗೊಳಿಸಿದವರು ಕಡಿಮೆ. ತಾವು ಮಾಡಿದ ಪ್ರವಾಸವನ್ನು ಕುರಿತು, ಆ ಕಾಲದ ಅನುಭವವನ್ನು ಕುರಿತು ಅದಕ್ಕೊಂದು ಸಾಹಿತ್ಯಕ ಸ್ವರೂಪ ನೀಡಲು ಪ್ರಯತ್ನಿಸಿದವರು ತೀರಾ ಇತ್ತೀಚಿನವರು. ಪ್ರವಾಸ ಸಾಹಿತ್ಯ ಭಾರತೀಯರಿಗೆ, ಕರ್ನಾಟಕದವರಿಗೆ ಹೊಸತಲ್ಲವಾದರೂ ಅದರ ಕಥಾನಾತ್ಮಕ ಆವರಣವನ್ನು ಕಳಚಿ ಹಾಕಿ ಶುದ್ಧ ಪ್ರವಾಸ ಸಾಹಿತ್ಯ ಪ್ರಕಾರವನ್ನೇ ನಿರ್ಮಿಸಿದವರು 20ನೇ ಶತಮಾನದವರು.

ಎ.ಎನ್. ಮೂರ್ತಿರಾಯರು ಭಾರತ ಹಾಗೂ ವಿದೇಶ ಪ್ರವಾಸ ಮಾಡಿದವರು. ಅಮೇರಿಕಾ ಪ್ರವಾಸ ಮಾಡಿದ ಕರ್ನಾಟಕದ ಖ್ಯಾತರಲ್ಲಿ- ಸುಪ್ರಸಿದ್ಧ ಲೇಖಕರಲ್ಲಿ ಒಬ್ಬರು. ಅಮೇರಿಕವನ್ನು ಸಂದರ್ಶಿಸಿ ಆ ದೇಶದ ಬಗ್ಗೆ ತಮ್ಮ ಅಭಿಪ್ರಾಯ, ದೃಷ್ಟಿಕೋನ, ಮನೋಭಾವಗಳಿಗೆ ಸಾಹಿತ್ಯದ ಮೂರ್ತ ರೂಪ ನೀಡಿದವರಲ್ಲಿ ಕನ್ನಡ ಪ್ರಸಿದ್ಧ ಲೇಖಕರ ಬಳಗವೇ ಬಲು ದೊಡ್ಡದು. ಮೂರ್ತಿರಾಯರಂತೆ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಪ್ರಭುಶಂಕರ, ಬಿ.ಕಾ. ಸುಬ್ಬರಾಯಾಚಾರ್, ಡಾ.ಹೆಚ್.ಕೆ. ರಂಗನಾಥ, ಡಾ. ಕೆ. ಶಿವರಾಮಕಾರಂತ, ಅನುಪಮಾ ನಿರಂಜನ, ಜಿ.ಎಸ್. ಶಿವರುದ್ರಪ್ಪ, ಹೆಚ್.ಎಲ್. ನಾಗೇಗೌಡ, ಟಿ.ಕೆ. ರಾಮರಾವ್, ವ್ಯಾಸರಾಯ ಬಲ್ಲಾಳ... ಮುಂತಾದವರು ಕರ್ನಾಟಕದ ಒಳಗೆ, ಹೊರಗೆ ಮಾಡಿದ ಪ್ರವಾಸಾನುಭವಗಳು ಆಧುನಿಕ ಕನ್ನಡ ಸಾಹಿತ್ಯ ಲೋಕದಲ್ಲಿ ವಿಪುಲವಾಗಿ ಬೆಳೆದಿವೆ.

ಈ 'ಅಂತರ ರಾಷ್ಟ್ರೀಯ' ಅಮೇರಿಕಾ ಪ್ರವಾಸದ ನಿಜವಾದ ಉದ್ದೇಶವೇನೆಂದು ಶೋಧಿಸಿದಾಗ ಒಬ್ಬೊಬ್ಬರದೂ ಒಂದೊಂದು ಉದ್ದೇಶವಾಗಿ ಕಂಡು ಬರುತ್ತದೆ. ಕೆಲವರು ಅಲ್ಲಿಯೇ ನೆಲೆಯಾಗಿರುವ ಮಕ್ಕಳು ಮೊಮ್ಮಕ್ಕಳನ್ನು ಕಾಣಲು ಹೋದವರು. ಇನ್ನು ಕೆಲವರು ಅಲ್ಲಿ ಇರುವ ತಮ್ಮ ಮಕ್ಕಳ ಮೂಲಕ ಆ ದೇಶವನ್ನು ನೋಡಲು ಹೋದವರು. ಅಲ್ಲಿಗೆ ಹೋದ ಅನಂತರ ಅವರವರ ಅಧ್ಯಯನ, ಅಭಿರುಚಿಗಳಿಗೆ ಅನುಗುಣವಾಗಿ ಅಲ್ಲಿಯ ನೆಲ, ಜಲ, ಜನ, ನಿಸರ್ಗ ಸಾಧನೆ ಸಂಪತ್ತುಗಳನ್ನು ಕಂಡವರು. ಅವನ್ನು ಬಣ್ಣಿಸಿದವರು. ಅಲ್ಲಿ ತಮ್ಮ ವೈವಿಧ್ಯಮಯವಾದ ಅನುಭವಗಳನ್ನು ತಮ್ಮದೇ ಆದ ವಿಭಿನ್ನ ಶೈಲಿಗಳಲ್ಲಿ ವರ್ಣಿಸಿದ ಅಮೇರಿಕಾ ಪ್ರವಾಸಿಗಳು ಪರಸ್ಪರರಿಂದ ದೂರ ಸರಿದು ನಿಲ್ಲುತ್ತಾರೆ. ಕಾರಂತರು ಒಬ್ಬ Realist. ಅಲ್ಲಿನ ಖನಿಜ, ಕಲ್ಲು ಪ್ರಕೃತಿಗಳ ಬಗ್ಗೆ ಅವರಿಗೆ ಭೌಗೋಳಿಕ ವ್ಯಾಖ್ಯಾನ ನೀಡುವುದೇ ಒಂದು ಆನಂದ.

ಡಾ. ಪ್ರಭುಶಂಕರ, ಉ.ಕಾ. ಸುಬ್ಬರಾಯಾಚಾರ್-ಮುಂತಾದವರು ಅಮೇರಿಕಾದಲ್ಲಿಯೂ ಆಧ್ಯಾತ್ಮ ಕೇಂದ್ರ, ಶಿಕ್ಷಣ ಸಂಸ್ಥೆಗಳ ಜೊತೆಗೆ ಸಂಬಂಧ, ಸಂಪರ್ಕ ಇರಿಸಿಕೊಂಡಿದ್ದಾರೆ. ವ್ಯಾಸರಾಯ ಬಲ್ಲಾಳರಿಗೆ ಅಮೇರಿಕಾದಲ್ಲಿ ನೆಲೆಸಿದ ಭಾರತೀಯ-ಕನ್ನಡಿಗರ ಕುರಿತಾದ ಅಸ್ಮಿತೆಯನ್ನು ಕೆದಕಿ ಬೆದಕಿ ಗುರುತಿಸುವ ಕೆಲಸ ಇಷ್ಟವಾಗುತ್ತದೆ. ಒಟ್ಟಿನಲ್ಲಿ ಭಾರತದ ಅಂದಿನ-ಇಂದಿನ ಸ್ಥಿತಿಗತಿ, ಭೂತ, ಭವಿಷ್ಯತ್ ವರ್ತಮಾನಗಳನ್ನು ಅಳೆಯಲು ಅಮೇರಿಕಾ ಒಂದು ಅಳತೆಗೋಲಾಗಿ ಪರಿಣಮಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ಅಮೇರಿಕೆಯನ್ನು ನೋಡ ನೋಡುತ್ತಾ ಇಲ್ಲಿಗೂ ಅಲ್ಲಿಗೂ ಇರುವ ಸಾದೃಶ್ಯ, ಅಂತರ, ತಾರತಮ್ಯಗಳು ಸಹಜವಾಗಿ ಮೂರ್ತರೂಪ ತಾಳಿ ಮುಂದೆ ನಿಲ್ಲುತ್ತವೆ. ಭಾರತದಿಂದ ಸಿಡಿದು ಆಚೆ ನಿಂತು ಭಾರತ ಹೇಗೆ ಕಾಣಿಸುತ್ತದೆ, ಅದೂ ಮುಂದುವರಿದ ಒಂದು ದೇಶದ ಬೆಳಕಿನಲ್ಲಿ ಎಂದು ಯೋಚನೆ ಮಾಡುವುದು ವಸ್ತುನಿಷ್ಠವಾಗಿಯೂ ಸಾಧ್ಯವಿದೆ. ಮಾತೃಭೂಮಿಯ ಮೇಲಣ ಮಿತಿ ಮೀರಿದ ಅಭಿಮಾನದಿಂದಲೂ ಸಾಧ್ಯ ಅಥವಾ ಅಮೇರಿಕಾದ ಬಗ್ಗೆ ನಾವು ಈಗಾಗಲೇ ತಳೆದಿರುವ ಪೂರ್ವಗ್ರಹ ಪೀಡಿತ ದೃಷ್ಟಿಕೋನದಿಂದಲೂ ಸಾಧ್ಯ. ಗಗನಯಾತ್ರಿಗಳು ತಾವು ಹುಟ್ಟಿದ ಭೂಮಿಯಿಂದ ನೆಗೆದು ಆಚೆ ಶೂನ್ಯ ಬಾಹ್ಯಾಕಾಶದಲ್ಲಿ ನಿಂತು ನೋಡಿದಾಗ ಬರುವ ಭೂಮಿಯ ಬಗೆಗಿನ ಭಾವನೆಗಳು ಇಲ್ಲಿಯೂ ಬರುವುದು ಸಾಧ್ಯ.

ಮೂರ್ತಿರಾಯರು 1973ರಲ್ಲಿ ಒಮ್ಮೆ, 1976ರಲ್ಲಿ ಒಮ್ಮೆ-ಹೀಗೆ ಎರಡು ಸಲ ಈ ಸಂಪದ್ಭರಿತ ರಾಷ್ಟ್ರವನ್ನು ಕಂಡವರು. ಅವರೇ 'ಅರಿಕೆ' ಮಾಡಿಕೊಂಡಂತೆ ಟಿಪ್ಪಣಿ, ದಿನಚರಿ, ನೆನಪು-ಇತ್ಯಾದಿಗಳ ಮಿಶ್ರಣ, ಅನುಭವೀ ನಿರೂಪಣೆ, 1979 ಹಾಗೂ 1984ರಲ್ಲಿ ಎರಡು ಸಲ ಮುದ್ರಣ ಕಂಡ ಈ ಕೃತಿ ಜನಪ್ರಿಯವಾದುದರಲ್ಲಿ ಆಶ್ಚರ್ಯವೇನೂ ಇಲ್ಲ. 397ಪುಟಗಳಲ್ಲಿ ಹರಿದ ಈ ಪ್ರವಾಸ ಕಥನ ಓದುಗರನ್ನು ತನ್ನತ್ತ ಆಕರ್ಷಿಸುವುದರಲ್ಲಿ ಸಫಲವಾಗುತ್ತದೆ. ತಮ್ಮ ಅನುಭವವನ್ನು ಎಲ್ಲಿಯೂ ಅತಿಶಯೋಕ್ತಿಯಿಂದ ವೈಭವೀಕರಿಸದೆ, ಭಾರತವನ್ನು ಅಂಧಾಭಿಮಾನದಿಂದಾಗಲೀ, ಕೀಳು ದೃಷ್ಟಿಯಿಂದಾಗಲೀ ಕಾಣದೆ ಸಮದೃಷ್ಟಿಯಿಂದ ಕಂಡು ಬರೆದವರು. ಮೂರ್ತಿರಾಯರು ಪ್ರತಿಯೊಂದು ಪಂಕ್ತಿ-ಅಕ್ಷರ ಬರೆಯುವಾಗಲೂ ತಾನು ಭಾರತೀಯ, ಅಮೇರಿಕಾದಲ್ಲಿ ತಾನು ಪರಕೀಯ, ಪ್ರವಾಸಿ ಎಂಬ ಜಾಗೃತಾವಸ್ಥೆಯಲ್ಲಿದ್ದೇ ಬರೆಯುತ್ತಾರೆ. ಆ ಜಾಗೃತ ಪ್ರಜ್ಞೆ ಎಲ್ಲಿಯವರೆಗಿದೆ ಎಂದರೆ, ಮೂರ್ತಿರಾಯರು ಅಮೇರಿಕಾದಲ್ಲಿ ಇರುವಾಗಲೂ ಅಪ್ಪಟ ಭಾರತೀಯರಾಗಿಯೇ ಉಳಿದಿರುತ್ತಾರೆ. ಪ್ರತಿ ಪುಟದಲ್ಲಿಯೂ, ಬರವಣಿಗೆಯೊಂದಿಗೇ ನಿಕಟವಾಗಿ ಕಾಣ ಸಿಗುವ ಮೂರ್ತಿರಾಯರು ಅಮೇರಿಕಾ ಪ್ರವಾಸ ಮುಗಿಸಿ ಭಾರತಕ್ಕೆ ಮರಳಿ ಬಂದ ಮೇಲೂ ಮೊದಲಿನ ಮೂರ್ತಿರಾಯರಾಗಿಯೇ ತಮ್ಮ originalityಯನ್ನು ಕಾದುಕೊಂಡೇ ಉಳಿಯುತ್ತಾರೆ. ಇಲ್ಲಿ ನಮಗೆ ಒಂದು ಆದರ್ಶ ಭಾರತೀಯ ಕುಟುಂಬದ ಹಿರಿಯರನ್ನು ಭೇಟಿಯಾದಷ್ಟು ಸಂತೋಷವೆನಿಸುತ್ತದೆ.

ಈ ಅಮೇರಿಕಾ ಪ್ರವಾಸದ ಉದ್ದೇಶ ಮೂರ್ತಿರಾಯರಿಗೆ ಖಚಿತ ರೂಪ ತಳೆದದ್ದು ಅವರ ಮಗ ರಾಮು ಅಮೇರಿಕಾದಿಂದ ಪತ್ರ ಬರೆದಾಗ. ಎಲ್ಲರಂತೆಯೇ ಅವರಿಗೂ ಹೊರಡುವಾಗ ಆದ ಅನುಭವಗಳು ವಿಚಿತ್ರ. Passport ಹಾಗೂ Visa ಪಡೆಯುವುದರಲ್ಲಿಯೇ ಹಣ್ಣಾದ ಮೂರ್ತಿರಾಯರಿಗೆ ಪ್ರವಾಸ ಪ್ರಯಾಸಕರವಾದುದರಲ್ಲಿ

ಆಶ್ಚರ್ಯವಿಲ್ಲ. ಅಮೇರಿಕಾದಲ್ಲಿಯೂ ಮೂರ್ತಿರಾಯರು ತಮ್ಮ ಸ್ವತ್ವನ್ನು ಉಳಿಸಿಕೊಂಡೇ ಇರುತ್ತಾರೆ. ಅಲ್ಲಿ ಅಮೇರಿಕಾವನ್ನು, ತಮ್ಮ ಮಗ, ಸೊಸೆ, ಮೊಮ್ಮಕ್ಕಳು, ಬೀಗರು ಅವರ ಬಂಧುಗಳು ಹಾಗೂ ತಮ್ಮ ದೂರದ ಸಮೀಪದ ಬಂಧುಗಳನ್ನು ಒಟ್ಟಿಗೆ ಕಾಣುತ್ತಾರೆ. ತಮ್ಮ ಅನುಭವಗಳನ್ನು ವಸ್ತುನಿಷ್ಠವಾಗಿ ವಿವರಿಸುತ್ತಾರೆ. ಭೌತಿಕವಾದಿಯಾಗಿರುವ-ಹಾಗೆಂದೇ ಪ್ರಖ್ಯಾತವಾಗಿರುವ-ಅಮೇರಿಕಾದವರ 'ತಪಶ್ಶಕ್ತಿ'ಯನ್ನು, ನೈರ್ಮಲ್ಯವನ್ನು ಕೊಂಡಾಡುತ್ತಾರೆ. ಅಲ್ಲಿಯ ಜನರ 'ಮಾನವೀಯ ಗುಣ'ಗಳು ಪ್ರಕಟಿತವಾದ ಸಂದರ್ಭವನ್ನು ಕಂಡು ಹಿಗ್ಗುತ್ತಾರೆ. ದೋಸೆ ಮಾರುವ ಹೋಟೆಲ್‌ನವನೊಂದಿಗೆ ತಮ್ಮ ಸಹಜವಾದ ವಿನೋದಪ್ರಿಯತೆಯಿಂದ ಸಲಿಗೆಯಿಂದ ಸರಸವಾಡುತ್ತಾರೆ. ಭಾರತೀಯರ ಪಾಶ್ಚಾತ್ಯೀಕರಣವನ್ನು ಕಂಡು ಭಾರತೀಯತೆಯನ್ನು ತಮ್ಮ ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುತ್ತಾರೆ. ಇಷ್ಟೆಲ್ಲಾ ಅವರೂ ಅವರು ಎಲ್ಲಿಯೂ ರೇಗುವುದಿಲ್ಲ. ಆಕ್ರೋಶ ಪಡುವುದಿಲ್ಲ.

ಒಂದು ರೀತಿಯ ಸಂಯಮಪೂರಿತ ಸೃಷ್ಟಿಯಿಂದಲೇ ಎಲ್ಲವನ್ನೂ ಕಾಣುವ ಮೂರ್ತಿರಾಯರನ್ನು ನಾವು ಪುಸ್ತಕದ ಪುಟ ಪುಟಗಳಲ್ಲಿ ಕಾಣುತ್ತೇವೆ. ಕೆಲವು ಸಲ (ಕಾರಂತರು) ಕೆಲವು ಪ್ರವಾಸಿಗಳು ಕಣ್ಮರೆಯಾಗಿ, ಆ ದೃಶ್ಯಗಳೇ ನಮ್ಮ ಮುಂದೆ ಮೈದಳೆಯುತ್ತವೆ. ಆದರೆ ಇಲ್ಲಿ ಮೂರ್ತಿರಾಯರು ಸಂದರ್ಭ ಸನ್ನಿವೇಶಗಳೊಂದಿಗೆ ತಾದಾತ್ಮ್ಯವನ್ನೂ ಒಂದು ರೀತಿಯ ಅವಿನಾದ್ಭೃತ ಸಂಬಂಧವನ್ನೂ ಇರಿಸಿಕೊಂಡಿರುತ್ತಾರೆ. ನಾವೂ ಅವರೊಂದಿಗಿರುತ್ತೇವೆ. ಅವರೂ ನಮ್ಮ ಜೊತೆಗಿದ್ದು ತಮ್ಮ ಅನುಭವವನ್ನು ನಮ್ಮೊಂದಿಗೆ ಹಂಚಿಕೊಳ್ಳುತ್ತಾರೆ.

ಮೂರ್ತಿರಾಯರಂತೆ "ಅವರ ವಯಸ್ಕರಾದ" ಕಾರಂತರು, ಗೊರೂರರೂ ಅಮೇರಿಕಾ ಪ್ರವಾಸ ಮಾಡಿದವರು. (ಪು.ತಿ.ನ. ಸಹ; ಆದರೆ ಅವರು ಪ್ರವಾಸ ಸಾಹಿತ್ಯಕ್ಕೆ ತಮ್ಮ ಕೊಡುಗೆಯನ್ನು ನೀಡುವ ಮನಸ್ಸು ಮಾಡಲಿಲ್ಲ) ಕಾರಂತರೂ, ಗೊರೂರರೂ ಸಹ ಮೂರ್ತಿರಾಯರಂತೆ ಹಾಸ್ಯ ಪ್ರವೃತ್ತಿಯವರು. ನಗರದರ್ಶಿ ಡ್ರೈವರ್‌ನ ಉಲ್ಲೇಖ ಕಾರಂತರು ಕೇವಲ ವಾಸ್ತವಿಕವಾಗಿ ಮಾಡಿದರೆ ಮೂರ್ತಿರಾಯರು ಅವನ ಮಾತಿನಲ್ಲಿರುವ ಹಾಸ್ಯ ಕೌತುಕವನ್ನು ಜ್ಞಾಪಿಸಿ ಉಲ್ಲೇಖಿಸುತ್ತಾರೆ. ಅಪರಿಚಿತ ಪ್ರದೇಶವಾದ್ದರಿಂದ ಈ ತ್ರಿಮೂರ್ತಿಗಳೂ ಒಮ್ಮೊಮ್ಮೆ ಅಲ್ಲಿ ದಾರಿ ತಪ್ಪುತ್ತಾರೆ. ಈ ದಾರಿತಪ್ಪಿದ ಪ್ರಸಂಗವನ್ನು ಮೂರ್ತಿರಾಯರು ವರ್ಣಿಸುವಾಗ ಅವರ ಹಾಸ್ಯ ಪ್ರಜ್ಞೆಯನ್ನು ಕೊಂಚ ದಿಗಿಲು ದಿಗ್ಭ್ರಮೆಗಳು ಆವರಿಸುತ್ತವೆ. ಗೊರೂರರು ಇದನ್ನು ತಮ್ಮ ಸಹಜ ಹಾಸ್ಯದಿಂದಲೇ ವರ್ಣಿಸುತ್ತಾರೆ.

ಮೂರ್ತಿರಾಯರ ಪ್ರವಾಸ ಕಥನ ಒಂದು ರೀತಿಯಲ್ಲಿ ಅವರ ಆತ್ಮ ಚರಿತ್ರೆಯೂ ಹೌದು. ಅಥವಾ ಅವರು 1989ರಲ್ಲಿ ಪ್ರಕಟಿಸಿದ 'ಸಂಜೆಗಣ್ಣಿನ ಹಿನ್ನೋಟ'ವೆಂಬ ತಮ್ಮ ಆತ್ಮ ಚರಿತ್ರೆಯ ಪೂರ್ವಭಾಗ ಪೀಠಿಕೆಯಂತಿದೆ ಇದು. ಏಕೆಂದರೆ ಮೂರ್ತಿರಾಯರ ಇಬ್ಬರು ಸೊಸೆಯರು (ಡಯಾನ ಮತ್ತು ನ್ಯಾನ್ಸಿ) ಅಮೇರಿಕಾ ದೇಶದವರು. ತಮ್ಮ ಆತ್ಮ ಚರಿತ್ರೆಯ ಉಪಸಂಹಾರವನ್ನು ಅವರು ಅಮೇರಿಕಾದಲ್ಲಿಯೇ ಮಾಡಿದರು. ತಮ್ಮ ಮಕ್ಕಳ ಈ 'ಅಂತರರಾಷ್ಟ್ರೀಯ' ವೈವಾಹಿಕ ಸಂಬಂಧಗಳ ಹಿನ್ನೆಲೆ, ಮುನ್ನೆಲೆ ಹಾಗೂ ತಮ್ಮ ಮಾನಸಿಕ ತುಡಿತ ತಲ್ಲಣಗಳನ್ನು ತಮ್ಮ ಆತ್ಮ ಚರಿತ್ರೆಯಲ್ಲಿಯೂ

ವ್ಯಕ್ತಪಡಿಸಿದ್ದಾರೆ. ಇಲ್ಲಿಯೂ ಅವರ ಪ್ರವಾಸಕ್ಕೆ ಐದು ಅಧ್ಯಾಯಗಳನ್ನು ಮೀಸಲಾಗಿರಿಸಿದ್ದಾರೆ. ರಾಮು-ನ್ಯಾನ್ಸಿಯರ ಮದುವೆಯ ಅಧ್ಯಾಯ ಅವರ ಆತ್ಮಚರಿತ್ರೆಯಲ್ಲಿ ಇದೇ ವಿಚಾರವನ್ನು ಕುರಿತು ಬರೆದ ಭಾಗದ ಪೂರ್ವರಂಗ. ಅವರು ಇಲ್ಲಿ ವಿಸ್ತೃತ ರೂಪವೆಂದರೆ ಅವರ ಅಮೇರಿಕಾ ಬೀಗರನ್ನು ಕುರಿತದ್ದು. ಅವರ ಸಾಮಾಜಿಕ, ಆರ್ಥಿಕ, ಕೌಟುಂಬಿಕ ಹಿನ್ನೆಲೆಗಳು, ಅವರ ಸ್ವಭಾವ, ಮನೋಧರ್ಮ ಇತ್ಯಾದಿಗಳ ಸಂಪೂರ್ಣ ಪರಿಚಯ ಮೂರ್ತಿರಾಯರಿಗೆ ಆದದ್ದು ಇಲ್ಲಿಯೇ. ಸರಳ ಮನೋಭಾವದ, ತೆರೆದ ಮನಸ್ಸಿನ, ನಿರಾಡಂಬರ ಜೀವನದ ಈ ಅಮೇರಿಕನ್ ಬೀಗರೊಂದಿಗೂ ಮೂರ್ತಿರಾಯರ ಪರ್ಯಟನ ಕೆಲವು ದಿನಗಳವರೆಗೆ ನಡೆಯಿತು.

ಮೂರ್ತಿರಾಯರು ತಮ್ಮ ಪ್ರವಾಸ ಕಾಲದಲ್ಲಿ ದಾಖಲಿಸಿದ ವಿಶೇಷವೆಂದರೆ ಅಲ್ಲಿಯ ಸಂಘರ್ಷ ಕಾರಣಗಳು. ಮೂರ್ತಿರಾಯರು ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಅದರ ಆಳಕ್ಕಿಳಿದು, ಎತ್ತರಕ್ಕೆ ಏರಿ, ಸಾಧಕ ಬಾಧಕಗಳನ್ನು ಅರಿಯಬಲ್ಲರೆಂಬುದಕ್ಕೆ ಇದು ನಿದರ್ಶನ ನೀಡಬಹುದು.

ಅಮೇರಿಕಾ ಸ್ವಯಂ ಉದ್ಯೋಗ ಪ್ರಜ್ಞೆಗೆ ಹೆಸರಾದ, ಮಾದರಿಯಾದ ದೇಶ. ಅಲ್ಲಿಯ ಜನ ಎಳವೆಯಿಂದಲೇ ದುಡಿದು ತಿನ್ನುವುದನ್ನು ಕಲಿಸುವ ದೇಶ. ಇದನ್ನು ಮೇಲಿಂದ ಮೇಲೆ ನೋಡಿ, ಮುಕ್ತ ಕಂಠದಿಂದ, ಪ್ರಶಂಸೆ ಮಾಡಿದವರು ಇದ್ದಾರೆ. ಭಾವುಕತೆಯಿಂದ ಕಂಡವರೂ ಇದ್ದಾರೆ. ಆದರೆ ಮೂರ್ತಿರಾಯರು ಈ ಬಾಲ್ಯ ಕಾಲದಲ್ಲಿಯೇ ದುಡಿದು ಗಳಿಸಿ ತಿನ್ನುವ, ತನ್ಮೂಲಕ ಆರಂಭದಲ್ಲೇ ಬರುವ ಆರ್ಥಿಕ ಸ್ವಾತಂತ್ರ್ಯದ ಅನುಕೂಲತೆಗಳನ್ನೂ ಅದರ ದುಷ್ಪರಿಣಾಮಗಳನ್ನೂ ವಿಶದವಾಗಿ ವಿವರಿಸಿದ್ದಾರೆ. ಈ ವಿಚಾರವಲ್ಲಿ ಡಾ. ಜಿ.ಎಸ್. ಶಿವರುದ್ರಪ್ಪನವರು ಈ ಕ್ರಮವನ್ನು ಹೀಗೆ ಚಿತ್ರಿಸುತ್ತಾರೆ.

“......... ಮಗು ತನ್ನ ಪಾಡಿಗೆ ತಾನು ಬದುಕುವುದನ್ನು ರೂಢಿಸಿಕೊಳ್ಳಬೇಕಾಗುತ್ತದೆ. ಮುಂದೆ ಅದು ಬೆಳೆದು ಹದಿಹರೆಯವನ್ನು ತಲುಪಿದಾಗಲಂತೂ ತನ್ನ ಹಿಂದಿನ ಅನುಭವದಿಂದಾಗಿ ಅಪ್ಪ ಅಮ್ಮಂದಿರ ಹಂಗಿಗೆ ಒಳಗಾಗದೆ ತನ್ನ ಕಾಲ ಮೇಲೆ ತಾನು ನಿಲ್ಲಲು, ತನಗೆ ದೊರೆಯುವ ಯಾವುದೇ ಉದ್ಯೋಗವನ್ನಾದರೂ ಅವಲಂಬಿಸುತ್ತದೆ. ಕಾರು ತೊಳೆಯುವುದು, ರೆಸ್ಟೋರೆಂಟುಗಳಲ್ಲಿ ಕೆಲಸ ಮಾಡುವುದು, ಮಾಲ್ ಅಥವಾ ಮಾರಾಟದ ಮಳಿಗೆಗಳಲ್ಲಿ ದುಡಿಯುವುದು, ಎಂಥಾ ಕೆಲಸವಾದರೂ ಸರಿ, ಯಾವುದೇ ಕೀಳರಿಮೆಯಿಲ್ಲದೆ ಈ ಮಕ್ಕಳು ದುಡಿತಕ್ಕೆ ತೊಡಗುತ್ತಾರೆ. ಅಮೇರಿಕನ್ ಸಮಾಜ ಈ ಬಗೆಯ ವ್ಯಕ್ತಿಗೌರವವನ್ನು ಎತ್ತಿ ಹಿಡಿಯುತ್ತದೆ. ಈ ರೀತಿ ಸ್ವಸಂಪಾದನೆಯಿಂದ ಸ್ವತಂತ್ರ ವ್ಯಕ್ತಿತ್ವವನ್ನು, ಧೈರ್ಯವನ್ನು ಬೆಳೆಸಿಕೊಂಡ ಆ ತರುಣ ತರುಣಿಯರು ತಮ್ಮ ಬದುಕಿನ ಸಂಗಾತಿಗಳನ್ನು ತಾವೇ ಆರಿಸಿಕೊಳ್ಳುತ್ತಾರೆ.”

*(ಅಮೇರಿಕಾದಲ್ಲಿ ಕನ್ನಡಿಗ 1988 ಪುಟ 45)*

ವಿ. ಶ್ರೀ ಉ.ಕಾ. ಸುಬ್ಬರಾಯಚಾರ್ಯರೂ ಈ ಸಂಬಂಧವಾಗಿ ಇಬ್ಬರು ಬಾಲಕರೊಡನೆ ನಡೆಸಿದ ಸಂವಾದವನ್ನು ಉಲ್ಲೇಖಿಸಿ ಕೊನೆಗೆ ಹೀಗೆ ಬರೆದಿದ್ದಾರೆ

ಆ ಹುಡುಗ ಕೆಲಸ ಮಾಡುತ್ತಲೇ ನನ್ನೊಡನೆ ಮಾತನಾಡುತ್ತಿದ್ದ. ಕೆಲಸ ನಿಲ್ಲಿಸಿ ನನ್ನ ಬಳಿ ಮಾತನಾಡಲು ಅವನು ಯೋಚಿಸಲಿಲ್ಲ. ಅವನ ಕಾರ್ಯತತ್ಪರತೆಯನ್ನು

ಮೆಚ್ಚಿಕೊಂಡು ಅವನನ್ನು ಬೀಳ್ಕೊಂಡು ನನ್ನ ನಿವಾಸವನ್ನು ಸೇರಿದೆ. ಪ್ರೌಢಶಾಲೆಯಲ್ಲಿರುವಾಗಲೇ ಸ್ವಾವಲಂಬನೆಯ ಕಡೆಗೆ ವಿದ್ಯಾರ್ಥಿಗಳ ಮನಸ್ಸಿರುವುದು ಸಂತೋಷದಾಯಕ ವಿಷಯವೆನ್ನಿಸಿತು ನನಗೆ.

*(ಅಮೇರಿಕದ ಅನುಭವಗಳು 1985 ಪುಟ 23)*

ಆದರೆ ಮೂರ್ತಿರಾಯರು ಇಲ್ಲಿ ಕೊಂಚ ಭಿನ್ನವಾಗಿ ಯೋಚಿಸುತ್ತಾರೆ. ಇದರ ಸಾಧಕ ಬಾಧಕಗಳನ್ನು ಬಾಲ್ಯದಲ್ಲಿಯೇ ಅಮೇರಿಕನ್ ವಿದ್ಯಾರ್ಥಿಗಳಿಗೆ ದೊರೆಯುವ ಆರ್ಥಿಕ ಸ್ವಾತಂತ್ರ್ಯ ಮುಂದೆ ಅವರ ಭವಿಷ್ಯ ಜೀವನದ ಮೇಲೆ ಬೀರುವ ಪ್ರಭಾವಗಳನ್ನು ಗುರುತಿಸುತ್ತಾರೆ. ಇದು ಮೂರ್ತಿರಾಯರ ವೀಕ್ಷಣೆಯೂ ಹೌದು. ಅಮೇರಿಕನ್ನರ ಅಭಿಪ್ರಾಯವೂ ಹೌದು. ಈ ಎರಡನ್ನೂ ಒಟ್ಟು ಸೇರಿಸಿ ಮೂರ್ತಿರಾಯರು ಹೀಗೆ ಬರೆದಿದ್ದಾರೆ.

"ಲಾರಳ ನೆನಪಿನ ಜೊತೆಗೆ ಹದಿಮೂರು ವರ್ಷದ ಇನ್ನೊಬ್ಬ ಹುಡುಗನ ನೆನಪೂ ಬರುತ್ತದೆ. ಅವನ ಹೆಸರನ್ನು ಮರೆತಿದ್ದೇನೆ. ಅವನ ತಂದೆಗೂ 30–35 ಸಾವಿರ ಡಾಲರು ವರಮಾನವುಂಟು. ಆತ ತನ್ನ ಮಗನಿಗೆ ಹುಲ್ಲುಗತ್ತರಿ (Lawn Mower) ಯಂತ್ರವೊಂದನ್ನು ಕೊಂಡುಕೊಟ್ಟಿದ್ದಾರೆ. ವಾರಕ್ಕೊಂದು ಸಲ ಆ ಹುಡುಗ ನಮ್ಮ ಹುಲ್ಲುಗಾವಲನ್ನು ಸರಿ ಮಾಡುವುದಕ್ಕೆ ಬರುತ್ತಾನೆ. ಅದಕ್ಕೆ ಒಂದೋ ಎರಡೋ ಡಾಲರು ಕೊಡಬೇಕು. ಹಾಗೆ ಸಂಪಾದನೆ ಮಾಡಿದ್ದರಲ್ಲಿ ಅರ್ಧ ಭಾಗವನ್ನು ತನಗೆ ಯಂತ್ರವನ್ನು ಕೊಂಡುಕೊಟ್ಟಿದ್ದಕ್ಕಾಗಿ ತಂದೆಗೆ ಕೊಡಬೇಕು. ಇನ್ನರ್ಧ ಅವನ ಸ್ವಂತ ಉಪಯೋಗಕ್ಕೆ".

ನಾನು ನನ್ನ ತಂದೆಯ ಕೃಪೆಗಾಗಿ ಕಾದಿರಬೇಕಾದ್ದಿಲ್ಲ. ಎಂದು ಹೆಮ್ಮೆಯಿಂದ ಹೇಳುತ್ತಾನೆ. ಅವನಿಗೂ ಅವನ ತಂದೆಗೂ ಇದ್ದ ಸಂಬಂಧ ಆರ್ಥಿಕ ವ್ಯವಹಾರದ್ದು. ಅಮೇರಿಕದಲ್ಲಿ ಬಹಳ ಜನರ ಮನಸ್ಸಿಗೆ ಚಿಂತೆ ಇಂದಿರುವ ಹದಿವಯಸ್ಕರ ಸಮಸ್ಯೆಗೂ ಹುಡುಗರ ಆರ್ಥಿಕ ಸ್ವಾತಂತ್ರ್ಯಕ್ಕೂ ಸಂಬಂಧವಿದೆಯೆಂದು ಅಲ್ಲಿಯ ಜನ ಹೇಳುವುದನ್ನು ಕೇಳಿದ್ದೇನೆ. ಅನೇಕ ವೇಳೆ ಆ ವಯಸ್ಸಿನ ಹುಡುಗರಿಗೆ ಆರ್ಥಿಕ ಸ್ವಾತಂತ್ರ್ಯವೂ ಕೈಯಲ್ಲಿ ಹಣವೂ ಇದ್ದರೆ, ಆ ಸ್ವಾತಂತ್ರ್ಯವನ್ನು ಅಲ್ಕೋಹಾಲ್ ಮತ್ತು ಅಮಲು ಮದ್ದುಗಳು ಕಸಿದುಕೊಳ್ಳುತ್ತವೆ. ಈ ಬಗೆಯ ದಾಸ್ಯ (ಮದ್ಯದ ಮತ್ತು ಅಮಲು ಮದ್ದಿನ ದಾಸ್ಯ) ಅಮೇರಿಕದಲ್ಲೂ, ಯೂರೋಪಿನಲ್ಲೂ ವಿಪರೀತ ಹೆಚ್ಚುತ್ತಿದೆಯಂತೆ. "ತಂದೆಯಿಂದ ನನಗಾಗಬೇಕಾದ್ದು ಏನೂ ಇಲ್ಲ, ನನ್ನ ಕಾಲ ಮೇಲೆ ನಾನು ನಿಲ್ಲುತ್ತೇನೆ" ಎಂಬ ಭಾವನೆಗಿಂತ "ತಂದೆ ನನ್ನನ್ನು ಅಕ್ಕರೆಯಿಂದ ನೋಡಿಕೊಳ್ಳುತ್ತಾನೆ, ಬೇಕಾದ್ದನ್ನೆಲ್ಲಾ ತಂದು ಕೊಡುತ್ತಾನೆ" ಎಂಬ ಭಾವನೆಯಿದ್ದರೆ ಒಳ್ಳೆಯದೇನೋ. ತಂದೆಗೆ ಹೊರೆಯಾಗಬಾರದು ಎಂಬ ಭಾವನೆ ಮೆಚ್ಚತಕ್ಕದ್ದು. ಅದು ಹುಟ್ಟುವುದು ಪ್ರೀತಿಯಲ್ಲಿ. ತಂದೆಯಿಂದ ತನಗೆ ಆಗಬೇಕಾದ್ದೇನೂ ಇಲ್ಲ, ಎಂಬ ಭಾವನೆ ಹುಟ್ಟುವುದು ಅಹಂಕಾರದಲ್ಲಿ. ಆರ್ಥಿಕ ಸ್ವಾತಂತ್ರ್ಯ ಮುಂದೆ ಎಂದೋ ಒಂದು ದಿನ ಬರಲೇಬೇಕು, ಬರುತ್ತದೆ. ಹದಿವಯಸ್ಸಿನಲ್ಲೇ ಬರಲೆಂದು ಆತುರಪಡಬೇಕಾದ್ದಿಲ್ಲ" (274)

ಮೂರ್ತಿರಾಯರು ಅಮೇರಿಕಾ ದೇಶವನ್ನು ಪ್ರವಾಸಕ್ಕಾಗಿ ಆಯ್ಕೆ ಮಾಡಿಕೊಂಡ ಉದ್ದೇಶ ಒಂದು, ಅಲ್ಲಿ ಅವರ ಮಗ ಉದ್ಯೋಗಿಯಾಗಿರುವುದು. ಎರಡನೆಯದು

ಅವರದು ವಸ್ತುನಿಷ್ಠ ಪ್ರವಾಸ. ಇಲ್ಲಿ (ಭಾರತದಲ್ಲಿ) ಕುಳಿತು ಅಲ್ಲಿ ನೋಡಬೇಕಾದದ್ದನ್ನು ಯೋಜಿಸಿದವರಲ್ಲ. ಅಥವಾ ಅಲ್ಲಿ ಹೋದ ನಂತರ ಕಾರ್ಯಕ್ರಮ ಪಟ್ಟಿಯನ್ನು (ಪ್ರಭುಶಂಕರ, ಕೆ. ಎಸ್. ಕೆ. ಆರ್., ಜಿ. ಎಸ್.ಎಸ್.) ತಯಾರಿಸಿ ಅದರಂತೆ ಪ್ರವಾಸ ಮಾಡಿದವರೂ ಅಲ್ಲ. ಆ ಹೊಣೆ, ಅವರ ಮಗ, ಸೊಸೆ, ಮೊಮ್ಮಗ, ಬೀಗರ ಮೇಲಿದ್ದುದರಿಂದ ಅವರು ನಿಶ್ಚಿಂತೆಯಿಂದ ಅವರು ಕರೆದೊಯ್ದಲ್ಲಿಗೆ ಹೋದರು. ತೋರಿಸಿದ್ದನ್ನು ನೋಡಿ ಬಂದರು.

ಮೂರ್ತಿರಾಯರ ಪ್ರವಾಸ ಸಾಹಿತ್ಯ ಕೃತಿ Autobiographical touch ಇದ್ದು ಪಡೆದುದರೊಂದಿಗೆ ಒಂದು balanced writing ನ ಎಲ್ಲಾ ಲಕ್ಷಣಗಳನ್ನೂ ಒಳಗೊಂಡಿದೆ. ಇಲ್ಲಿ-- ಅಲ್ಲಿಯ ಲಕ್ಷಣಗಳು, ಪರಿಸ್ಥಿತಿ, ರಾಜಕೀಯ, ಧರ್ಮ, ಸಮಾಜ, ಕುಟುಂಬ, ಶಿಕ್ಷಣ, ಶುಚಿತ್ವ– ಈ ಎಲ್ಲಾ ಅಂಶಗಳನ್ನು ಸಮತೂಕವಾಗಿ ತುಲನೆ ಮಾಡಿ ಬರೆದಿದ್ದಾರೆ. ಜೊತೆಗೆ ಎಲ್ಲಿಯೂ ಅತಿಶಯೋಕ್ತಿಯ ಬಣ್ಣನೆಯಾಗಲಿ, ಭಾರತವನ್ನು ಕುರಿತು ಅಂಧಾಭಿಮಾನವಾಗಲಿ, ಅಮೇರಿಕಾವನ್ನು ಕುರಿತು ಯಾವುದೇ ಪೂರ್ವಗ್ರಹ ಆಗಲೀ ಇಲ್ಲ. ಅಂತಹ ಒಂದೇ ಒಂದು ನಿದರ್ಶನವನ್ನು ಇಲ್ಲಿ ಉಲ್ಲೇಖಿಸ ಬಹುದಾಗಿದೆ.

“ಆ ವಿಶ್ವವಿದ್ಯಾಲಯ (ಫ್ಲಾಸ್‌ಮೂರಿನ ಗವರ್ನರ್ಸ್ ಸ್ಟೇಟ್ ವಿಶ್ವ ವಿದ್ಯಾನಿಲಯ) ಇನ್ನೂ ಹೊಸದು: ನಾಲಕ್ಕಾರು ವರ್ಷಗಳ ಹಿಂದೆ ಸ್ಥಾಪಿಸಿದ್ದು. ಕ್ಷೇತ್ರ ಸೌಂದರ್ಯದ ವಿಷಯದಲ್ಲಿ ಅದು ನಮ್ಮ ಮಾನಸಗಂಗೋತ್ರಿಯೊಡನೆ ಸ್ಪರ್ಧಿಸ ಲಾರದು. ರಾಜಕೀಯದ ವಿಷಯದಲ್ಲಿ ಅದು ನಮ್ಮ ವಿಶ್ವವಿದ್ಯಾಲಯಗಳಿಗಿಂತ ಹಿಂದೆ ಬಿದ್ದಂತೆ ತೋರಲಿಲ್ಲ. ಆದರೆ ನಾನು ಅಲ್ಲಿದ್ದದ್ದು ಅತ್ಯಲ್ಪ ಕಾಲ; ಆದ್ದರಿಂದ ನನ್ನ ಅನುಭವವೂ ಅತ್ಯಲ್ಪ; ಅಲ್ಲದೆ ಮೇಲಿನ ಮಾತಿಗಿರುವ ಆಧಾರ ಕೇವಲ ಕೇಳಿಕೆಯ ಮಾತು” (278–9).

ಇಲ್ಲಿ ಎರಡೂ ದೇಶಗಳ ಶಿಕ್ಷಣ ಸಂಸ್ಥೆಯೊಂದರ ಪ್ಲಸ್ ಹಾಗೂ ಮೈನಸ್ ಪಾಯಿಂಟ್‌ಗಳೆರಡನ್ನೂ ಹೇಳುತ್ತಾರೆ. ಆ ಕುರಿತು ತಾವು ತೀರ್ಮಾನ ನೀಡುವುದಿಲ್ಲ. ಅದಕ್ಕೆ ಕಾರಣವಾದ ಅವರು ತಮ್ಮ ಮಿತಿಯನ್ನೂ ತಮ್ಮ ಗಮನದಲ್ಲಿರಿಸಿಕೊಂಡಿ ರುವುದು ಮೂರ್ತಿರಾಯರ ಸಹಜ ವೈಶಿಷ್ಟ್ಯ. ಇತರ ಹಲವು ಪ್ರವಾಸ ಕೃತಿಗಳಲ್ಲಿ ಕಾಣಬರುವ ಸ್ವದೇಶವನ್ನು, ಮಾತೃಸಂಸ್ಥೆಗಳನ್ನು ಕುರಿತಾದಂತಹ ಭರ್ತ್ಸನೆ, ವ್ಯಂಗ್ಯ, ಆಕ್ರೋಶ, (ಉದಾ: ಪ್ರಭುಶಂಕರ) ಇತ್ಯಾದಿ ಕಟು ಬೆರೆತ ತಿರಸ್ಕಾರ, ಆತ್ಮಪ್ರಶಂಸೆ, ಮೂರ್ತಿರಾಯರ ಕೃತಿಗಳಲ್ಲಿ ನಾವು ಕಾಣುವುದಿಲ್ಲ. ಕೆಲವು ಪ್ರವಾಸ ಕೃತಿಗಳು ದಿನಚರಿಯ ರೂಪದಲ್ಲಿದ್ದರೆ, ಇನ್ನು ಕೆಲವು ವರದಿಯ ರೂಪದಲ್ಲಿರುತ್ತವೆ. ಕೆಲವು ಪ್ರವಾಸ ಕೃತಿಗಳು ನಾವು ಕಂಡ ವಿದೇಶೀಯ ವೈಶಿಷ್ಟ್ಯಗಳ ವಿವರಣೆ, ವರ್ಣನೆ, ಐತಿಹಾಸಿಕ ಹಿನ್ನೆಲೆಗಳ ದಾಖಲೆಗಳನ್ನು ಒದಗಿಸುವಂತಹವುಗಳಾಗಿವೆ. ಕೆಲವರು ಸಪತ್ನೀಕರಾಗಿ ಪ್ರವಾಸ ಮಾಡಿ, ಪತ್ನಿಯ ಪ್ರಶ್ನೆ, ಉಪಪ್ರಶ್ನೆಗಳಿಗೆ ಉತ್ತರ ರೂಪವಾಗಿ ಅಲ್ಲಿಯ ಇತಿಹಾಸ ವಿವರಗಳನ್ನು ಹರಿದು ಬಿಡುವ (ಮುದ್ದಣ– ಮನೋರಮೆ) ಶೈಲಿಯನ್ನು (“ಜಯಶ್ರೀ ಕಂಡ ಜಗತ್ತು”– ಹೊ. ಶ್ರೀನಿವಾಸಯ್ಯ) ಅಳವಡಿಸಿಕೊಂಡಿದ್ದಾರೆ. ಆದರೆ ಮೂರ್ತಿ ರಾಯರ ಪ್ರವಾಸ ಕೃತಿ ಈ ಎಲ್ಲಾ ಕೃತಕತೆಯಿಂದ ಭಿನ್ನವಾಗಿದ್ದು, ನಿರ್ವಿಕಾರವಾದ.

ಸರಳವಾದ ಶೈಲಿಯನ್ನು ಅಳವಡಿಸಿಕೊಂಡಿದೆ. ಅಗತ್ಯವಿರುವ ಕಡೆ ಐತಿಹಾಸಿಕಾಂಶವನ್ನು ಅಡಿ ಟಿಪ್ಪಣಿಯಲ್ಲಿ ಕಾಣಿಸಿದ್ದಾರೆ.

ಕೆಲವು ಪ್ರವಾಸ ಕೃತಿಗಳು ಅಮೇರಿಕಾದ ಚರಿತ್ರೆ ಇತಿಹಾಸ ವರ್ಣನೆಗಳಾಗಿ ಮಾರ್ಪಟ್ಟು, ಪ್ರವಾಸಿಗಳು ಹಿನ್ನೆಲೆಗೆ ಸರಿಯುತ್ತಾರೆ. ಆದರೆ ಮೂರ್ತಿರಾಯರು ಪ್ರವಾಸಿಯಾಗಿಯೇ ಉಳಿದು, ಸಮಗ್ರ ಪ್ರವಾಸದ ಅವಧಿಯಲ್ಲಿ ನಮಗೆ ಕಾಣಿಸುತ್ತಲೇ ಇರುತ್ತಾರೆ. ಅವರ ನವಿರಾದ ಹಾಸ್ಯ ನಮ್ಮನ್ನು ಹಸನ್ಮುಖಿಗಳಾಗಿ ಇರಿಸುತ್ತಾ ನಮ್ಮನ್ನು ತಮ್ಮೊಂದಿಗೆ ಅವರು ಪ್ರವಾಸ ಮಾಡಿಸುತ್ತಾರೆ. ಈ ಮಾನಸಿಕ ವಿಲೀನತೆ (mental involvement ) ನಮ್ಮನ್ನು ಅವರ ಸಹಚರರನ್ನಾಗಿಸುತ್ತದೆ. ಮೂರ್ತಿರಾಯರು ನಿಜವಾಗಿ ಅಮೇರಿಕಾ ಪ್ರವಾಸ ಮಾಡಿದರೆ, ನಾವು ಭಾವನಾತ್ಮಕವಾಗಿ ಪ್ರವಾಸ ಮಾಡುವಂತೆ ಮಾಡಿ ಮನರಂಜಿಸುತ್ತಾರೆ.

ಮೂರ್ತಿರಾಯರು ತಮ್ಮ ಪ್ರವಾಸ ಕೃತಿಗೆ ನೀಡಿದ ಶೀರ್ಷಿಕೆ ವಿಶಿಷ್ಟವಾದುದು. "ಅಮೇರಿಕಾದಲ್ಲಿ ನಾನು", "ನಾ ಕಂಡ ಅಮೇರಿಕಾ" ಇತ್ಯಾದಿ ಶೀರ್ಷಿಕೆಗಳು ಸಾಮಾನ್ಯವಾಗಿದ್ದು, ನಮ್ಮಲ್ಲಿ ಅಂತಹ ಕುತೂಹಲವನ್ನು ಕೆರಳಿಸದೆ ಹೋಗಬಹುದು. ಹಾಸನದ ರಾಜಾರಾಯರ ಇಂಗ್ಲೀಷ್ ಕೃತಿಗಳ ಶೀರ್ಷಿಕೆಯಂತೆ ಮೂರ್ತಿರಾಯರ ಪ್ರವಾಸ ಕೃತಿಯ ಹೆಸರು ಒಂದು ನಿಗೂಢತೆಯನ್ನು ಹಾಗೂ ಓದುಗರ ಕುತೂಹಲವನ್ನು ಸೆರೆ ಹಿಡಿಯುವಲ್ಲಿ, ಕಾದಿರಿಸುವುದರಲ್ಲಿ ಯಶಸ್ವಿಯಾಗಿದೆ. "ಅವರ ವಯಸ್ಸಿನ ಅಮೇರಿಕಾ ಯಾತ್ರೆ" ಎಂಬಲ್ಲಿ ಮೂರ್ತಿರಾಯರ ಅವರ ವಯಸ್ಸು ಅವರ ಪರಿಪಕ್ವತೆಯನ್ನು ಪ್ರತಿನಿಧಿಸುವಂತಹುದಾಗಿದೆ. ಅವರಿಗೆ ಪ್ರವಾಸ ಒಂದು ಯಾತ್ರೆಯಾಗಿದೆಯೇ ಹೊರತು ಕೇವಲ ಪ್ರವಾಸಕ್ಕೆ ಸೀಮಿತವಾಗಿಲ್ಲ. ಅವರ ವಯಸ್ಸು ಹಾಗೂ ಯಾತ್ರೆ ಶಬ್ದಗಳು ಭಾರತೀಯ ಸಂಸ್ಕೃತಿಯಲ್ಲಿ ಜಗತ್ತಿನ ಯಾವುದೇ ಧರ್ಮದಲ್ಲಾದರೂ ಸರಿಯೇ ವಿಶಿಷ್ಟವಾದ ಅರ್ಥವ್ಯಾಪ್ತಿಯನ್ನೂ ಮಹತ್ವವನ್ನೂ ಪಡೆದಿವೆ. ಯಾತ್ರೆಯ ಪರಮೋದ್ದೇಶ ಹಲವು ವರ್ಷಗಳಿಂದ ಮನಸ್ಸನ್ನು ಆವರಿಸಿರುವ ಪುಣ್ಯಸ್ಥಳಗಳನ್ನೂ, ಅಲ್ಲಿರುವ ಪವಿತ್ರ ಮೂರ್ತಿಗಳನ್ನೂ ನೋಡಿ ಸಂತೋಷಿಸುವುದು. ಮೂರ್ತಿರಾಯರಿಗೆ ಅಮೇರಿಕಾ ಅಂತಹ ಒಂದು ಸ್ಥಳವಾಗಿದೆ. ಇಲ್ಲಿ ದೇವತೆಗಳ ನಿರ್ಜೀವ ಮೂರ್ತಿಗಳಿಗೆ ಬದಲಾಗಿ ಮೂರ್ತಿರಾಯರ ಮಕ್ಕಳು, ಸೊಸೆ, ಮೊಮ್ಮಕ್ಕಳು, ಬೀಗರು, ಬಂಧುಗಳು, ಆತ್ಮೀಯರು, ಪರಿಚಿತರು, ಅಪರಿಚಿತರು, ಮೊದಲಾದ ಸಜೀವಿಗಳು ಅವರ ಪಾಲಿನ ಸಂತೋಷ ನೀಡುವ ದೇವತೆಗಳು.

ಅಮೇರಿಕಾದ ಕೆಲವು ಪದ್ಧತಿಗಳು, ಭಾರತೀಯ ಪ್ರವಾಸಿಗಳಿಗೆ ಒಂದು ಅಡಚಣೆಯಾಗಿ ಮಾರ್ಪಟ್ಟರೆ ಅದೇನೂ ಆಶ್ಚರ್ಯವಲ್ಲ, ಏಕೆಂದರೆ ಒಂದು ದೇಶ, ಸಂಸ್ಕೃತಿ, ಪ್ರದೇಶ, ಜನಾಂಗ, ಇನ್ನೊಂದಕ್ಕಿಂತ ಭಿನ್ನವೂ, ಪ್ರತ್ಯೇಕವೂ ಆಗಿರುವುದರಲ್ಲಿ ಸಹಜತೆ ಇದೆ. ನಿದರ್ಶನಾರ್ಥವಾಗಿ ಅಮೇರಿಕಾದ ಜನ ಮುಕ್ಕಾಲು ಮೂರು ವೀಸವಾಲು ಮಾಂಸಾಹಾರಿಗಳು. ಭಾರತೀಯ ಶಾಕಾಹಾರಿಗಳಾದ ಪ್ರವಾಸಿಗಳಿಗೆ ಈ ಆಹಾರ ವ್ಯವಸ್ಥೆಗೆ ಹೊಂದಿಕೊಳ್ಳಲು ಕಷ್ಟವಾಗುತ್ತದೆ. ಅಂತಹ ಸಂದರ್ಭದ ಪ್ರವಾಸಾನುಭವವೂ ಪ್ರವಾಸ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಸ್ಥಾನ ಪಡೆಯುತ್ತದೆ. ಡಾ. ರಾ. ಯ. ಧಾರವಾಡಕರ್ ರವರು, ಈ ವಿಚಾರವನ್ನು ತಮ್ಮ ಅನುಭವವನ್ನಾಗಿ ನಿರೂಪಿಸುವಲ್ಲಿ ವಿಫಲರಾಗಿದ್ದಾರೆ.

"ಪ್ರಭುಪಾದರ ಬಂಗಾರದರಮನೆ" ಎಂಬ ಅಧ್ಯಾಯದಲ್ಲಿ ಬಂಗಾರದರಮನೆಯಲ್ಲಿ 'ಅಭಿಷಿಕ್ತಶ್ರೀಗಂಧ,' ಎಂಬ ಉಪಶೀರ್ಷಿಕೆಯಡಿ, ಸಸ್ಯಾಹಾರದ ಮಹತ್ವವನ್ನು, ಅನುಭವವನ್ನು ಸ್ಥಾಪಿಸುವ, ಮಾಂಸಾಹಾರವನ್ನು ಖಂಡಿಸುವ ವಿಶ್ವದ ವಿಖ್ಯಾತ ನಾಮರ ಹೇಳಿಕೆಗಳ ಸರಮಾಲೆಯನ್ನು ನೀಡಿದ್ದಾರೆ. ಇದರ ಆಕರ ಬಹುಶಃ ಅಲ್ಲಿಯ ಭಕ್ತಿ ವೇದಾಂತ ಬುಕ್ ಟ್ರಸ್ಟ್ ಸಂಸ್ಥೆಯವರು ಪ್ರಕಟಿಸಿದ "ಹೈಯರ್ ಟೇಸ್ಟ್–ಶ್ರೇಷ್ಠ ರುಚಿ"(ಅವರ ಭಾಷೆಯಲ್ಲಿ ಇದು, ಟೇಸ್ಟ್ ) ಇರಬೇಕು.

ಇದು ಈ ಹೇಳಿಕೆಗಳ ಒಂದು ಸಂಕಲನವಾಗಿದೆಯೇ ಹೊರತು ಸಾಹಿತ್ಯ ಭಾಗವಾಗಿ ಮಾರ್ಪಟ್ಟಿಲ್ಲ. (ಈ ಅಧ್ಯಾಯದ ಮುಕ್ತಾಯವೂ ಇದಕ್ಕೆ ಸಂಬಂಧಿಸಿದುದಲ್ಲ. ಅದು ಹರೇ ಕೃಷ್ಣ ಪಂಥದ ಏಳು ಬೀಳುಗಳು, ಅವಸಾನಗಳನ್ನು ಕುರಿತಾದಂತಹುದು) ಆದರೆ ಇವರು 11 ಅಧ್ಯಾಯಗಳನ್ನು ದಾಟಿ ಬರೆದ 'ಅಮೇರಿಕೆಯಲ್ಲಿ ಶಾಕಾಹಾರಿ' ಎಂಬ ಅಧ್ಯಾಯ ಮೂರ್ತಿರಾಯರ 'ಶಾಕಾಹಾರಿಗಳಿಗೊಂದು ಸಂದೇಶ' ಎಂಬ ಅಧ್ಯಾಯದ ಪಡಿನೆಳಲಿನಂತಿದೆ. ಅದೂ ಶಾಕಾಹಾರದೊಂದಿಗೆ ಇತರ ಸೌಲಭ್ಯಗಳನ್ನೂ ಸಂಯೋಜಿಸಿದ್ದಾರೆ. ಆದರೆ ಮೂರ್ತಿರಾಯರು ಈ ಕುರಿತಾಗಿ ಹೇಗೆ ತಮ್ಮದೇ ಆದ ಸ್ವಂತ ದೃಷ್ಟಿಕೋನದಿಂದ ನೋಡಬಲ್ಲರು, ಆಲೋಚಿಸಬಲ್ಲರು ಮತ್ತು ಆ ಪರಿಸರ ಸಂದರ್ಭಗಳನ್ನು ತಮ್ಮ ಅನುಭವದ ಮೂಸೆಯಲ್ಲಿ ಕರಗಿಸಿ ಸುಂದರವಾದ ಸಾಹಿತ್ಯ ಪ್ರತಿಮೆಯನ್ನಾಗಿ ಹೇಗೆ ಎರಕ ಹೊಯ್ಯಬಲ್ಲರು ಎಂಬುದು ಅವರ "ಶಾಕಾಹಾರಿ ಗಳಿಗೊಂದು ಸಂದೇಶ" ಎಂಬ ಅಧ್ಯಾಯ ನಿರೂಪಿಸುತ್ತದೆ. ಇಲ್ಲಿಯೂ ಅವರ ವಿನೋದ, ಸರಸ ಮಡುಗಟ್ಟಿದೆ. ಇತರ ಪ್ರವಾಸಿಗಳು ಅಲ್ಲಿ ತಮಗಾದ ಸಮಸ್ಯೆಗಳನ್ನು ತೋಡಿ ಕೊಂಡರೆ, ಮೂರ್ತಿರಾಯರು ಅಮೇರಿಕದಲ್ಲಿ ತಾವು ಪ್ರವಾಸ ಮಾಡಿದ ಸ್ಥಳಗಳಲ್ಲಿ ದೊರೆಯುವ ಶಾಕಾಹಾರವನ್ನು ಕುರಿತು ಬರೆದಿದ್ದಾರೆ. ಇಲ್ಲಿಯ ಅಲ್ಲಿಯ ಶಾಕಾಹಾರಗಳ ರುಚಿ, ಸಾಮ್ಯಗಳನ್ನು ಕುರಿತು ತಮ್ಮ ವಿಶಿಷ್ಟ ಸಹಜವಾದ ನವಿರು ಶೈಲಿಯಲ್ಲಿ ಬರೆದಿದ್ದಾರೆ. ತಮಗಾದ ಕಷ್ಟವನ್ನು ವರ್ಣಿಸುವುದು ದೊಡ್ಡದಲ್ಲ. ಆದರೆ ಮುಂದೆ ಅಮೇರಿಕೆಗೆ ಹೋಗಲಿರುವ ಶಾಕಾಹಾರಿ ಪ್ರವಾಸಿಗಳಿಗೆ ಇದೊಂದು ಕೈಪಿಡಿ. ಜೊತೆಗೆ ಅಮೇರಿಕ ಎಂದೊಡನೆ ಅಲ್ಲಿಯ ಜನರೆಲ್ಲ ಮಾಂಸಾಹಾರಿಗಳು ಎಂಬ ತಮ್ಮ ತಕ್ಷಣದ ಅಂಧಕಲ್ಪನೆ ದೂರವಾಗಿ ಅಲ್ಲಿಯ ಜನರೂ ಶಾಕಾಹಾರವನ್ನು ತಯಾರಿಸಬಲ್ಲರೆಂಬ ಸತ್ಯ ದರ್ಶನ ನಮಗಾಗುತ್ತದೆ. ಈ ಅಧ್ಯಾಯದ ವೈಶಿಷ್ಟ್ಯವೆಂದರೆ ಅಮೇರಿಕೆಗೆ ಭವಿಷ್ಯತ್ತಿನಲ್ಲಿ ಯಾರಾದರೂ ಶಾಕಾಹಾರಿಗಳಾದ ಪ್ರವಾಸಿಗಳು ಹೋಗಲಿಚ್ಛಿಸಿದ್ದು, ಮಡಿವಂತಿಕೆಯಿಂದ ಕೈಬಿಟ್ಟಿದ್ದಲ್ಲಿ – ಆಹಾರದ ಕಾರಣಕ್ಕಾಗಿ – ಪ್ರವಾಸವನ್ನು ಗಟ್ಟಿ ಮಾಡಿಸುವಂತಹುದು. ಎಷ್ಟೋ ಜನ ಪ್ರವಾಸ ಸಾಮರ್ಥ್ಯ ಅನುಕೂಲ ಅವಕಾಶವಿದ್ದವರೂ ಸಹ ಈ ಆಹಾರ ಅವರಿಗೆ ಒಂದು ದೊಡ್ಡ ಪೆಡಂಭೂತವಾದ ಕಾರಣ ತಮ್ಮ ಪ್ರವಾಸವನ್ನೇ ಕೈ ಬಿಟ್ಟವರೂ ಇದ್ದಾರೆ. ಈ ಅಧ್ಯಾಯವನ್ನು ಓದಿದ ಶುದ್ಧ ಶಾಕಾಹಾರಿಗಳಾದ ಪ್ರವಾಸಿಗಳೂ ಸಹ ಅಮೇರಿಕೆಗೆ ಪ್ರವಾಸದ ಟಿಕೆಟ್ಟನ್ನು ಕೊಳ್ಳಬಹುದು. ಅಮೇರಿಕಾದಲ್ಲೂ ಶಾಕಾಹಾರ ಸಿಗುತ್ತದೆ ಎಂಬ ಆಶ್ವಾಸನೆ ಮೂರ್ತಿರಾಯರು ನೀಡಿ ಇಂತಹವರ ಪ್ರವಾಸವನ್ನು ಸಾಧ್ಯ ಮಾಡಿದ್ದಾರೆ.

ಮೂರ್ತಿರಾಯರು ಏನನ್ನೇ ನೋಡಲಿ ಅದನ್ನು ಪರವಶತೆ, ಭಾವುಕತೆಯಿಂದ ಮುಟ್ಟಿನಿಂತು ನೋಡುವುದಿಲ್ಲ. ಸಹಜವಾದ ಕವಿಹೃದಯದ ಡಾ. ಜಿ. ಎಸ್ ಶಿವರುದ್ರಪ್ಪ

ನವರ, 'ನೆಲದ ಪಾಣಿ ಪೀಠದ ಮೇಲೆ ವಿರಾಜಿಸುವ ವಿಜ್ಞಾನದ ಮಹಾ ಶಿವಲಿಂಗವಂತೆ', (72) 'ಕಲ್ಲು ಅನ್ನುವುದು ತನ್ನ ಘನರೂಪಕ್ಕೆ ಬೇಸತ್ತು, ದ್ರವರೂಪವಾಗಲು ಪ್ರಯತ್ನಿಸಿ', (73) 'ಸಾವಿರ ಕಂಬಗಳ ಹಸಿರು ದೇವಾಲಯ' (94), 'ಕೈಮುಗಿದು ನಿಂತೆ' (168), (ಅಮೇರಿಕದಲ್ಲಿ ಕನ್ನಡಿಗ 1988) ಮುಂತಾದ ಕಾವ್ಯಾತ್ಮಕ ಪ್ರಯೋಗಗಳು ಮೂರ್ತಿರಾಯರಲ್ಲಿಲ್ಲ. ಬದಲಾಗಿ ಇದ್ದುದನ್ನು ಇದ್ದಂತೆ ಹೇಳುವುದು ಅವರ ಸ್ವಭಾವ.

ಶಾಕಾಹಾರಿಗಳಿಗೆ ನೀಡುವ ಸಂದೇಶ ಮೂರ್ತಿರಾಯರ ಇಂಗ್ಲೀಷ್ ಸಾಹಿತ್ಯ ರಸಿಕತೆಗೂ, ಕರ್ನಾಟಕ ಶಾಸ್ತ್ರೀಯ ಸಂಗೀತ ಪ್ರೇಮಕ್ಕೂ ಒಂದು ಸುಂದರ ಉದಾಹರಣೆ. ಅಮೇರಿಕನ್ ತಿಂಡಿಗಳ ಹೆಸರುಗಳ ಇಂಗ್ಲೀಷ್ ಕಾಗುಣಿತ (Spelling)ಗಳನ್ನು ಕಂಸದಲ್ಲಿ ನೀಡಿದ್ದಾರೆ. ಮೆಕರೋನಿ ತಿಂಡಿಯನ್ನು ಕುರಿತ ಒಂದು ಕಿರು ಕವಿತೆಯನ್ನು ಉಲ್ಲೇಖಿಸಿ ಅದರ ಸ್ವರೂಪವನ್ನು ಪರಿಚಯಿಸುತ್ತಾರೆ. ತೋಸ್ತಾದ ಮತ್ತು ಎಂಟೆವಾದಗಳ ಪರಿಚಯದ ಸಂದರ್ಭದಲ್ಲಿ 'ಖಂಡವಿದೆಕೋ' (186) ಎಂಬ ಸಾಲುಗಳನ್ನು ನೆನಪಿಸಿ ಕೊಳ್ಳುತ್ತಾರೆ. ಸ್ವಘಟ್ಟಿಯನ್ನು ಉಪನಿಷತ್ತಿನ ಭಾಷೆಯಲ್ಲಿ ಪರಿಚಯ ಮಾಡಿಕೊಡುತ್ತಾ, ಸ್ವಘಟ್ಟಿ ಹಾಗೂ ಶಾವಿಗೆಗಳ ಸಂಬಂಧವನ್ನು ವಿವರಿಸುತ್ತಾರೆ. 'ಎಂದರೋ ಮಹಾನು ಭಾವುಲು' (188) ಸಂಗೀತಕ್ಕೆ ಮಧ್ಯಮಾವತಿಯು ಮಂಗಳವಿದ್ದಂತೆ, ಊಟಕ್ಕೆ ಬೆರಿಷ್ಟೆ. (191) ಮುಂತಾದ ಹೋಲಿಕೆಗಳು ಅವರ ಸಂಗೀತಪ್ರಿಯತೆಗೆ ಸಾಕ್ಷಿ. ಈ ಅಧ್ಯಾಯಕ್ಕೆ ಸಂಬಂಧಿಸಿದಂತೆ ಅಡಿಂಗ್ಟನ್‌ನ ರೋಜರ್ಸ್‌ನ ದೋಸೆಗಳ "ಜಯೋಪಾಖ್ಯಾನ (Success Stories)"ವನ್ನು ಸುಂದರವಾದ 'ಪೇ'ಕಾನುಪ್ರಾಸದಲ್ಲಿ ನೇಯ್ದು ಕೊಡುತ್ತಾರೆ.

"Roger's pancake take the cake: A connoisseur's compliment! pancake – pleased professor proffers profuse praise: will that do ?" (ಅವರಿಗೆ ರೋಜರ್ಸ್‌ನ ದೋಸೆಯೇ ಲೇಸು. ಪೂರ್ಣಪ್ರಜ್ಞನ ಪ್ರಕೀರ್ತನ, ಪ್ರಭೂತಾನಂದ ಪಡೆದ ಪ್ರಾಧ್ಯಾಪಕನಿಂದ ಪ್ರಶಂಸಾದಾನ) (ಪುಟ 123)

ಇಂಗ್ಲೀಷ್ ಕನ್ನಡಗಳೆರಡರಲ್ಲಿಯೂ (ಇಂಗ್ಲೀಷ್– ಸಂಸ್ಕೃತ) ಪ್ರಾಸಬದ್ಧ ವಾಕ್ಯ ರಚನೆಗಳು. 'ರಾಮನ ಬಳಿಯಲ್ಲಿ ಆಂಜನೇಯ ನಿಲ್ಲುವಂತೆ. ನಮ್ಮ ಮೆಂತ್ಯದ ದೋಸೆ ಮತ್ತು pancakes ಗಳಂತೆ' (122), 'ಇಂದ್ರನ ಪುಷ್ಪಕವಿಮಾನದಲ್ಲಿದ್ದ ಗುಣ (188) ನಮ್ಮ ಹೊಟ್ಟೆಯಲ್ಲಿಯೂ ಇದೆಯಂತೆ, ಆದರೆ ಡೆಸರ್ಟ್ (desert) ತಿನ್ನುವಾಗ ಈ ಥಿಯರಿಯನ್ನು ನೆಚ್ಚಲಾಗದು. (189) ಎಂಬ ಎಚ್ಚರಿಕೆಯನ್ನು ನೀಡುತ್ತಾರೆ. ರೆಸ್ಟೋರಾಂಟುಗಳ Menu card ನಲ್ಲಿರುವ Pink Squirrel ಬೇಕೆಂದು ಅವರ ಬೀಗರೊಂದಿಗೆ ಹೇಳಿದಾಗ ಅವರು ಅದೊಂದು ಮಾದಕ ಪಾನೀಯವೆಂದು ಮೂರ್ತಿ ರಾಯರನ್ನು ತಿದ್ದಿದರು. Coilled Cheese Sandwich ಹಾಗೂ French fry ಎಂಬ ಎರಡು ಚಿರಪರಿಚಿತವಾದ ಹೆಸರುಗಳಿಂದ ಕಾಲಕ್ರಮೇಣ ಮೂರ್ತಿರಾಯರು ಅಮೇರಿಕಾದ ಇತರ ಶಾಕಾಹಾರದ ತಿನಿಸುಗಳನ್ನು ಪ್ರತ್ಯಕ್ಷ ಪರಿಚಯ ಮಾಡಿ ಕೊಂಡರೆಂದರೆ ಶಾಕಾಹಾರದ ಬಗ್ಗೆ ಅವರು ನೀಡಿದ ಭರವಸೆ ನೂರಕ್ಕೆ ನೂರು ನಂಬಬಹುದು.

ಮೂರ್ತಿರಾಯರು ಅಮೇರಿಕಾದಲ್ಲಿ ಪ್ರವಾಸ ಮಾಡುತ್ತಿದ್ದ ಅವಧಿಯಲ್ಲಿಯೂ ಅವರು ಅಪ್ಪಟ ಭಾರತೀಯರಾಗಿಯೇ ಉಳಿಯುತ್ತಾರೆ. ಭಾರತದ ಪ್ರತಿನಿಧಿಗಳಾಗಿಯೇ ನಮಗೆ ಕಾಣಿಸುವ ಮೂರ್ತಿರಾಯರು ಅಮೇರಿಕಾದ ವಿಲಾಸ ವಿಭ್ರಮಗಳಲ್ಲಿ ವಿಸ್ಮಯ ದಿಂದ ಕಳೆದುಹೋಗುವುದಿಲ್ಲ, ದಿಕ್ಕು ತಪ್ಪುವುದಿಲ್ಲ. ಎಲ್ಲಿದ್ದರೂ, ಎಂತಿದ್ದರೂ ಎಂದೆಂದಿಗೂ ಅವರು ಕನ್ನಡಿಗರೇ, ಭಾರತೀಯರೇ. "ಸುನೀಲನ ಜನ್ಮೋತ್ಸವ" ವೆಂಬ ಅಧ್ಯಾಯಕ್ಕೆ ಹೀಗೊಂದು ಪ್ರತ್ಯೇಕವಾದ ಪ್ರಾಮುಖ್ಯತೆಯೂ, ವಿಶಿಷ್ಟ ಸ್ಥಾನವೂ ಇದೆ. ಪ್ರತ್ಯಕ್ಷವಾಗಿ ಸುನೀಲನ ಜನ್ಮೋತ್ಸವದಲ್ಲಿ ಅವರು ಸಕ್ರಿಯವಾಗಿ ಪಾಲ್ಗೊಂಡಿದ್ದರೂ, ಮಾನಸಿಕವಾಗಿ ಅವರು ಭಾರತೀಯ, ಸಾಂಪ್ರದಾಯಿಕ ಜಯಂತ್ಯುತ್ಸವವನ್ನು ಅಯತ್ನತಃ ಸ್ಮರಿಸಿಕೊಂಡು, ಮಾನಸಿಕವಾದ ಆ ವಾತಾವರಣದಲ್ಲಿ ತಲ್ಲೀನರಾಗುತ್ತಾರೆ. ಹಾಗೆಂದು ಈ ಪಾಶ್ಚಿಮಾತ್ಯ ಪದ್ಧತಿಯನ್ನು ಅವರು ಬೀಳ್ಗಳೆದು ನೋಡುವುದೂ ಇಲ್ಲ, ಟೀಕಿಸುವುದೂ ಇಲ್ಲ. ಒಂದರ ಪಕ್ಕದಲ್ಲಿ ಮತ್ತೊಂದನ್ನು ಇರಿಸಿ ನೋಡುತ್ತಾರೆ, ಆದರೂ ಅವರ ಹೃದಯಕ್ಕೆ ಭಾರತೀಯ ಪದ್ಧತಿಯೇ ಹೆಚ್ಚು ಅಪ್ಯಾಯಮಾನ. ತಾವು ಆ ಸಂದರ್ಭವನ್ನು ಕಾಣುವ ಕ್ರಮವನ್ನು ಈ ಅಧ್ಯಾಯದ ಕೊನೆಯಲ್ಲಿ ಹೇಳಿರುವ ಮಾತುಗಳು ಅವರ ಪ್ರಾಮಾಣಿಕತೆಗೂ, ವಿಶಾಲದೃಷ್ಟಿಗೂ ಸಾಕ್ಷಿ. ಅವರ ಭಾರತೀಯತೆ, ಸ್ವಂತಿಕೆ, ನಿರ್ಲಿಪ್ತತೆಗೆ ಅವರು ಅಲ್ಲಲ್ಲಿ ಮಿಂಚಿಸಿದ ಕೆಲವು ವಾಕ್ಯಭಾಗಗಳನ್ನು ಉಲ್ಲೇಖಿಸಬಹುದು.

ಶರಚ್ಚಂದ್ರ ಚಂದ್ರಿಕಾ ಧವಳೆ (20) ನಂದಾಮ ಶರದಶ್ಶತಂ (33) ನಮ್ಮ ಗಾಯತ್ರಿ.......(33) ಅವರ ಸೊಸೆ ನ್ಯಾನ್ಸಿ ಗೌರಿಪೂಜೆಯಲ್ಲಿ ಪಾಲ್ಗೊಂಡ ಸನ್ನಿವೇಶ (41) ಅಂದಹಾಗೆ 'ಮನೆತುಂಬಿಸಿಕೊಳ್ಳುವುದು' ಎಂಬ ಮಾತು ಅದೆಷ್ಟು ಸುಂದರವಾದದ್ದು, ಭಾವಪೂರ್ಣವಾದ್ದು, ಅರ್ಥಪೂರ್ಣವಾದದ್ದು (43). Saying grace ಹಾಗೂ ಪರಿಶಿಂಚನೆ (54–55). ಕ್ಷಂತವ್ಯೋ ಶಂಭೋ (79), ಸಾವಿದಗ್ಧ ಪರಿಷತ್ (87). '3000 ವರ್ಷಗಳ ಹಿಂದಿನ ಯಾವುದೋ ಋಷ್ಯಾಶ್ರಮಕ್ಕೆ ಬಂದೆನೇನೋ ಎನ್ನಿಸಿತು' (127) 'ಮಾತಲಿ' (142). ತದೇಜತಿ, ತನ್ನೈಜತಿ (203). ನಮ್ಮ ಪುರಾಣಗಳಲ್ಲಿ ತ್ರಿಪುರ ಎಂಬುದು, ಒಬ್ಬ ರಾಕ್ಷಸನ ಹೆಸರಷ್ಟೆ (212) ಚಾರ್ವಾಕರು, ಬ್ರಾಹ್ಮೀಸ್ಥಿ (213), ಇದಿ ನ್ಯಾಯಮಾ (215), ಶಬರಿ ಎಷ್ಟು ವರ್ಷ ಕಾದಿದ್ದಳು ರಾಮ ಬರುವನೆಂದು, ಅಹಲ್ಯೆ ಎಷ್ಟು ಶತಮಾನ ಕಾದಿದ್ದಳು (239). ಸುಖೇದುಃಖೇ ಸಮೇಕೃತ್ವಾ (240), ಮಾತಾಕೃಪಾಸಾಗರೀ ಮಹಾಭಯಂಕರೀ (242), ಇಲ್ಲಿ ಪ್ರಕೃತಿದೇವಿ ಶಕ್ತಿರೂಪೇಣ ಸಂಸ್ಥಿತಾ (250) ಇಂತಹ ಹತ್ತು ಹಲವು ಉಲ್ಲೇಖಗಳನ್ನು ಉದಾಹರಿಸಬಹುದು.

ಧಾರವಾಡಕರ್‌ರವರು ರೋಂನಲ್ಲಿದ್ದಾಗ ರೋಮನ್ನರಂತಿರಬೇಕೆಂಬ ಹಳೆಯ ಹಳಸಲು ಹೇಳಿಕೆಯನ್ನು ಕಾರ್ಯರೂಪಕ್ಕೆ ತರುವ ಮುಖವಾಡವನ್ನು ಧರಿಸಿ ಅವರೂ ಈ ಸಾಲಿನಲ್ಲಿ ಮುನ್ನುಗ್ಗಿ (Reduction sale) ಗ್ರೀಟಿಂಗ್ ಕಾರ್ಡ್ ಮೊದಲಾದವು ಗಳನ್ನು ಕೊಂಡಂತೆ (222) ಮೂರ್ತಿರಾಯರು ರೋಮನ್ನರಾಗುವುದಿಲ್ಲ, ಬದಲಾಗಿ ಭಾರತೀಯರಾಗಿಯೇ ಉಳಿದು ತಮ್ಮ ಪರಿಶುದ್ಧತೆಯನ್ನು ಉಳಿಸಿಕೊಳ್ಳುತ್ತಾರೆ. ಹಾಗೆಯೇ ತಮ್ಮ Identity and Originality ಯನ್ನೂ ಸಹ.

ಮೂರ್ತಿರಾಯರು ಅಮೇರಿಕನ್ ಬೀಗರು, ಮಿತ್ರರೊಂದಿಗೆ ಭಾರತೀಯ ಧರ್ಮ, ರಾಜಕಾರಣಗಳನ್ನು ಕುರಿತು ವಿಚಾರ ವಿನಿಮಯ ನಡೆಸುವಲ್ಲಿಯೂ ಒಂದು ವಸ್ತು ನಿಷ್ಠ ಸಮತೋಲನವನ್ನು ಪಾಲಿಸುತ್ತಾರೆಂಬುದು ಅತ್ಯಂತ ಗಮನಾರ್ಹ. ಯಾವುದೇ ದೃಶ್ಯವನ್ನು ವರ್ಣಿಸುವಾಗಲೂ ಇದೇ ರೀತಿಯ ಸರಳ, ಅವರ ತಮ್ಮ ಮಾನಸಿಕ ಭಾವನೆಗಳನ್ನು ಯಥಾವತ್ತಾಗಿ ತಿಳಿಸುತ್ತಾರೆಯೇ ಹೊರತು ಅತಿಶಯೋಕ್ತಿಯಿಂದ ವೈಭವೀಕರಿಸಲು ಹೋಗುವುದಿಲ್ಲ.

1980ರಲ್ಲಿ 'ಸುಧಾ' ನಡೆಸಿದ ವರ್ಷದ ಶ್ರೇಷ್ಠ ಹತ್ತು ಕೃತಿಗಳ ಸಮೀಕ್ಷೆಯಲ್ಲಿ ಕರ್ನಾಟಕದ ಸುಪ್ರಸಿದ್ಧ ಕನ್ನಡಾಂಗ್ಲೋ ವಿದ್ವಾಂಸರೂ, ವಿಮರ್ಶಕರೂ ಆದ ಶ್ರೀ ಎಲ್.ಎಸ್. ಶೇಷಗಿರಿರಾಯರು ಮೂರ್ತಿರಾಯರ ಪ್ರವಾಸ ಕೃತಿಯನ್ನು ಆಯ್ಕೆ ಮಾಡಿರುವುದು ಅತ್ಯಂತ ಸಮಂಜಸವಾದ ವಿಷಯ. ಕೃತಿ ಹಾಗೂ ಕರ್ತೃಗಳೆರಡನ್ನೂ ಕುರಿತ ಶ್ರೀ ಶೇಷಗಿರಿರಾಯರ ಅಭಿಪ್ರಾಯ ಉಲ್ಲೇಖನಾರ್ಹ.

"ಪ್ರವಾಸ ಸಾಹಿತ್ಯ ನಮ್ಮಲ್ಲಿ ಈಚೆಗೆ ಬೆಳೆಯುತ್ತಿರುವ ಪ್ರಕಾರ ಎ.ಎನ್. ಮೂರ್ತಿರಾಯರ "ಅಪರ ವಯಸ್ಕನ ಅಮೇರಿಕಾ ಯಾತ್ರೆ" ಯಾವ ಭಾಷೆಯ ಸಾಹಿತ್ಯಕ್ಕಾದರೂ ಗೌರವ ತಂದುಕೊಡುವ ಕೃತಿ. ಪೂರ್ವ ಪಶ್ಚಿಮಗಳ ಮುಖಾಮುಖಿ ನಮ್ಮ ಕಥೆಗಾರರು ಕಾದಂಬರಿಕಾರರರಿಗೆ ಪ್ರಿಯವಾದ ವಸ್ತು. ನಿಜಜೀವನದಲ್ಲಿ ಒಂದು ಪರಿಪಕ್ವ ಚೇತನ ಇದನ್ನು ಅನುಭವಿಸಿದ ರೀತಿ. ಮನುಷ್ಯ ಸ್ವಭಾವದ ಓರೆ ಕೋರೆಗಳನ್ನೂ ಕ್ಷುದ್ರತನವನ್ನೂ ಕಂಡೂ ಅವುಗಳ ಆಘಾತವನ್ನು ಅನುಭವಿಸಿಯೂ ಮನುಷ್ಯನಲ್ಲಿ ಗೌರವವನ್ನೂ ಅಭಿಮಾನವನ್ನೂ ಉಳಿಸಿಕೊಂಡ, ಸಂಪ್ರದಾಯಕ್ಕೆ ಗಂಟುಬೀಳದಿದ್ದರೂ ಪರಂಪರೆಯ ಮಹತ್ವವನ್ನು ಗುರುತಿಸುವ, ಜೀವನವನ್ನು ಗಂಭೀರವಾಗಿ ಕಂಡು ಚಿಂತಿಸುವಾಗಲೂ ಹಾಸ್ಯ ಪ್ರವೃತ್ತಿ-ತುಂಟತನಗಳನ್ನು ಕಳೆದುಕೊಳ್ಳದ ಬುದ್ಧಿ ಜೀವಿಯಾದರೂ ಅಂತಃಕರಣದ ಪಾತ್ರವನ್ನು ಅರಿಯುವ, ಪ್ಲೇಟೋ-ಅರಿಸ್ಟಾಟಲ್-ವ್ಯಾಸ-ವಾಲ್ಮೀಕಿಗಳನ್ನು ಪ್ರೀತಿಯಿಂದ ಅಧ್ಯಯನ ಮಾಡಿದಂತೆಯೇ ಷೇಕ್ಸ್‌ಪಿಯರ್, ಟಾಲ್‌ಸ್ಟಾಯ್ ಇಬ್ಬರನ್ನೂ ಅಧ್ಯಯನ ಮಾಡಬಲ್ಲ, 'ಬ್ರೈಟರ್ ದ್ಯಾನ್ ಎ ಥೌಸಂಡ್ ಸನ್ಸ್', 'ಸ್ಮಾಲ್ ಈಸ್ ಬ್ಯೂಟಿ ಫುಲ್', 'ಫ್ಯೂಚರ್ ಷಾಕ್' ಗಳಿಗೆ ಸ್ಪಂದಿಸಬಲ್ಲ ಜೀವನದ ಅನುಭವ ಇಲ್ಲಿ ನಿರೂಪಣೆ ಪಡೆದಿದೆ."

*(ಸುಧಾ, 2. ನವೆಂಬರ್ 1980 ಪುಟ 45)*

ಫ್ರಾನ್ಸಿಸ್ ಬೇಕನ್ ಬರೆದ 'ದೇಶ ಸಂಚಾರ' ಎಂಬ ಪ್ರಬಂಧವಲ್ಲಿ ದೇಶ ಸಂಚಾರ ವನ್ನು ಕುರಿತಂತೆ ಹೇಳುವ ವಿಶಿಷ್ಟ ಲಕ್ಷಣಗಳು ಮೂರ್ತಿರಾಯರ ಪ್ರವಾಸ ಕೃತಿಯಲ್ಲಿ ಕಾಣಬಹುದು. ನೋಡಲೂ ಗಮನಿಸಲೂ ತಕ್ಕ ವಸ್ತುಗಳ ಪಟ್ಟಿಯಲ್ಲಿರುವ ಪ್ರೇಕ್ಷಣೀಯ ಸ್ಥಳ ಸಂದರ್ಭಗಳು ಉಪವನ, ಉದ್ಯಾನ, ಉತ್ತಮ ವರ್ಗದ ಜನ ಹೋಗಿ ನೋಡುವ ಪ್ರಹಸನಗಳು..... ಔತಣಗಳು.... ಈ ಎಲ್ಲವೂ ಅವರ ಪ್ರವಾಸ ಆಕ್ರಮಿಸಿದೆ. "ಸಭ್ಯ ಜನ ಬಂದು ಊಟ ಮಾಡುವ ಭೋಜನ ಗೃಹಗಳಿಗೆ" ಪ್ರವಾಸಿ ಹೋಗಬೇಕಂತೆ. ಮೂರ್ತಿರಾಯರು ತಮ್ಮ ಬೀಗರೊಂದಿಗೆ ರೋಜರ್ಸನ ಹೋಟೆಲ್‌ಗೆ ಹೋಗಿ pancake ತಿಂದ ಸಂದರ್ಭ ನೆನಪಿಗೆ ಬರುತ್ತದೆ.

ತನ್ನ ದೇಶದ ರೀತಿ ನೀತಿಗಳನ್ನು ಬಿಟ್ಟು ಪರದೇಶದ ನಡತೆಯನ್ನು ಅನುಸರಿಸುತ್ತಿದ್ದಾನೆ ಎಂದು ಯಾರಿಗೂ ತೋರದಿರಲಿ. ತನ್ನ ಸ್ವದೇಶ ಪದ್ಧತಿಗಳ ಮಧ್ಯೆ ಹೊರದೇಶಗಳಲ್ಲಿ ತಾನು ಕಲಿತದ್ದರಲ್ಲಿ ಮುಖ್ಯವಾದ ಕೆಲವನ್ನು ಅವನು ಚುಚ್ಚಿ ಹೂವಿನಂತೆ ಗುರುತು ಮಾಡಿಟ್ಟಂತೆ ಕಾಣಲಿ ಎಂಬ ಮಾತಿಗೆ ಹಲವು ನಿದರ್ಶನಗಳಿವೆ ಇಲ್ಲಿ. ಅಮೇರಿಕಾದಲ್ಲಿ ಸುಶೀಲನ Birthday Party ಯಲ್ಲಿ ಭಾರತೀಯ ಪದ್ಧತಿಯನ್ನು ನೆನಪಿಸಿಕೊಳ್ಳುವುದು ಒಂದು ಜ್ವಲಂತ ನಿದರ್ಶನ. ಒಟ್ಟಿನಲ್ಲಿ ಬೇಕನ್ ಪ್ರಬಂಧದ ಸಾಕಾರ ರೂಪ ಮೂರ್ತಿರಾಯರ ಪ್ರವಾಸ.

ಕೆಲವು ಪ್ರವಾಸಿಗಳು ಕಂಡ ಘಟನೆ ಅವರಿಗೆ ಕಿರಿದಾಗಿ ಕಂಡರೂ ಮೂರ್ತಿರಾಯರ ದೃಷ್ಟಿಯ ಭೂತಗನ್ನಡಿಯಲ್ಲಿ ವಿಸ್ತಾರವಾದದ್ದು ಇದೆ. ಪ್ರಭುಶಂಕರರ "ಕೊಂಡುಕೊ, ಉಪಯೋಗಿಸು, ಎಸೆ, ಕೊಂಡುಕೊ" ಇದು ವಸ್ತುಗಳ ವಿಷಯದಲ್ಲಿ ಅವರ ಜೀವನ ತತ್ವ (ಪುಟ 40) ಎಂಬ ಸಾಲಿನ ಒಂದು ಪ್ಯಾರಾ ಮೂರ್ತಿರಾಯರ ಪ್ರವಾಸ ಕಥನದಲ್ಲಿ ಒಂದು ಸ್ವತಂತ್ರ ಅಧ್ಯಾಯದ ಹರವನ್ನು ಆಕ್ರಮಿಸಿ ಇಪ್ಪತ್ತು ಪುಟಗಳ ವ್ಯಾಪ್ತಿಯನ್ನು ಪಡೆದಿದೆ. ('ಏನಾದರೂ ಸರಿಯೇ, ಕೊಳ್ಳುತಿರು ತಮ್ಮಾ'- ಅರ್ಥಶಾಸ್ತ್ರಕ್ಕೆ ಅತಿಕ್ರಮ ಪ್ರವೇಶ ಪುಟ 145-164 (ಇಬ್ಬರ ಪುಟ ಸಂಖ್ಯೆಗಳ ಅಂತರವೂ ಗಮನಾರ್ಹ).

ಈ ಕೃತಿಯ ಬಗ್ಗೆ ಪ್ರೊ. ಎಲ್.ಎಸ್. ಶೇಷಗಿರಿರಾಯರು ಹೀಗೆನ್ನುತ್ತಾರೆ:

.....in recent years a host of others have made arm-chair travelling both delightful and educative. A.N. Moorthy Rao's 'Apara Vayaskana Amerikayathre' is the best representative of this class of books.

*-(P.156. A History of Kannada Literature)*

ಡಾ. ತೀ.ನಂ. ಶಂಕರನಾರಾಯಣ ಅವರು ಈ ಕೃತಿಯನ್ನು ಕುರಿತು ಹೇಳಿರುವ ಮಾತು ಸಮಂಜಸ.

ಮೂರ್ತಿರಾಯರು ಅಪರ ವಯಸ್ಸಿನಲ್ಲಿ ಅಮೇರಿಕಕ್ಕೆ ಹೋಗುತ್ತಾರೆ. ಹೀಗಾಗಿ ಅಮೇರಿಕಾದ ಜನಜೀವನ ಹಾಗೂ ಸಂಸ್ಕೃತಿಯನ್ನು ವಿಭಿನ್ನವಾದ ದೃಷ್ಟಿಕೋನದಿಂದ ನೋಡಲು ಅವರಿಗೆ ಸಾಧ್ಯವಾಗಿದೆ. ಎಷ್ಟು ಪರಿಣತ ಮನಸ್ಸಿನಿಂದ ವಿಚಾರ ಮಾಡಬಹುದು ಎಂಬುದು ಇದರಿಂದ ತಿಳಿದು ಬರುತ್ತದೆ. (3)

*(ಕುವೆಂಪು ವಿ.ವಿ. ದಲ್ಲಿ ಏರ್ಪಡಿಸಿದ ವಿಚಾರ ಸಂಕಿರಣದಲ್ಲಿ)*

ಇಷ್ಟೆಲ್ಲಾ ಆದರೂ ಮೂರ್ತಿರಾಯರ ಈ ಕೃತಿಯ ಬಗ್ಗೆ ಕೆಲವು ಪರಿಮಿತಿಗಳನ್ನು ಗುರುತಿಸಬೇಕು. ಮೊದಲನೆಯದಾಗಿ ಸ್ವಭಾವತಃ ಪ್ರಬಂಧಕಾರರಾಗಿರುವ ಮೂರ್ತಿರಾಯರು ಈ ಪ್ರವಾಸಕೃತಿಯನ್ನೂ ಒಂದು ಲಲಿತ ಪ್ರಬಂಧ ಸಂಕಲನವನ್ನಾಗಿಯೇ ಬರೆದಿದ್ದಾರೆ. ಇದೊಂದು ಪ್ರವಾಸ ಕೃತಿಗಿಂತಲೂ ಹೆಚ್ಚಾಗಿ ಪ್ರಬಂಧ ಸಂಕಲನವೇ ಆಗಿದೆ. ಇತರ ಕೆಲವು ಪ್ರವಾಸ ಕೃತಿಗಳಿಗೆ ಹೋಲಿಸಿದಾಗ ಮೂರ್ತಿರಾಯರ ಈ ಕೃತಿ ತನ್ನ ಉದ್ದೇಶವನ್ನು ಸಮರ್ಥವಾಗಿ ಸಾಧಿಸಲು ಸ್ವಲ್ಪ ಮಟ್ಟಿಗೆ ಸೋತಿದೆ. ಒಬ್ಬ ಪ್ರವಾಸಿಗೆ ಅನಿವಾರ್ಯವಾದ ಕುತೂಹಲವನ್ನು ಮೂರ್ತಿರಾಯರು ಒಬ್ಬ ಪ್ರವಾಸಿಯಾಗಿ ಉಳಿಸಿ

ಕೊಂಡಿಲ್ಲ ಅಥವಾ ವ್ಯಕ್ತಪಡಿಸುವುದಿಲ್ಲ. ಇಲ್ಲಿಯೂ ಸಹ ಅವರ ಸಹಜ ಹಾಸ್ಯ ಪ್ರವೃತ್ತಿ ಇಲ್ಲಿ ಉದ್ರೇಕ್ತ ಮಿಂಚಿದ ಕಾರಣ ಪ್ರವಾಸ ಕೃತಿಯ ಗಾಂಭೀರ್ಯಕ್ಕೆ ಶಿಥಿಲವಾಗಿದೆ. ಪ್ರವಾಸ ಕೃತಿಯೊಂದನ್ನು ಓದಿದಾಗ ಓದುಗನಿಗೆ ಆ ದೇಶದ ಸಮಗ್ರ ಚಿತ್ರಣವೊಂದು-ಐತಿಹಾಸಿಕ(ಚಾರಿತ್ರಿಕ), ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಕೌಟುಂಬಿಕ-ಲಭಿಸಬೇಕು. ಅಂತಹ ಯಾವೊಂದು ಚಿತ್ರಣವೂ ಇಲ್ಲಿ ಪೂರ್ಣವಾಗಿ ಚಿತ್ರಿತವಾಗಿಲ್ಲ. ಇದಕ್ಕೆ ಮೂರ್ತಿರಾಯರು ಅಲ್ಲಿ ನಿರ್ಲಿಪ್ತರಾಗಿದ್ದದ್ದೇ ಕಾರಣ. ವಿದೇಶದಲ್ಲಿ ಅವರು ಪ್ರವಾಸಿಯಾಗಿರುವುದಕ್ಕಿಂತಲೂ ಒಬ್ಬ ಬಂಧುವಾಗಿ, ತಂದೆಯಾಗಿ, ಅಜ್ಜನಾಗಿ, ಕಾಣಿಸಿಕೊಳ್ಳುತ್ತಾರೆ. ಅವರ ಕುಟುಂಬದವರೊಂದಿಗೇ ಹೆಚ್ಚು ಕಾಲ ಇದ್ದದ್ದು ಈ ವಿಫಲತೆಗೆ ಪೂರಕ. ಇದರೊಂದಿಗೆ ಈ ಕೃತಿ ಅವರ ಆತ್ಮ ಚರಿತ್ರೆಯಾಗಿ ಮೂಡಿ ಬಂದಿದೆ. ಅವರ ಆತ್ಮ ಚರಿತ್ರೆಯ ಮುಕ್ತಾಯವನ್ನು ಅವರು ಅಮೇರಿಕಾದಲ್ಲೇ ಬರೆದಿದ್ದಾರೆಂಬುದು ಗಮನಾರ್ಹ. ಈ ಪ್ರವಾಸ ಕೃತಿಯಲ್ಲಿ ಮಿತವಾಗಿ ಬಿಂಬಿತವಾದ ಅಮೇರಿಕದ ಚಿತ್ರಣವನ್ನು ತೆಗೆದು ಹಾಕಿದರೆ ಇದು ಅವರ ಆತ್ಮ ಚರಿತ್ರೆಯ ಒಂದು ಭಾಗವೆಂದು ಅನಿವಾರ್ಯವಾಗಿ ಹೇಳಬೇಕಾಗುತ್ತದೆ. ಪ್ರೊ. ಎಲ್.ಎಸ್. ಶೇಷಗಿರಿ ರಾಯರು ಹೇಳಿದ delightful and educative ಎಂಬ ಅಭಿಪ್ರಾಯ ಸಮರ್ಥನೀಯ ವೆನಿಸುವುದಿಲ್ಲ.





# ಅಧ್ಯಾಯ-5

# ವ್ಯಕ್ತಿ ಚಿತ್ರಣ

## 5.1 ಪೀಠಿಕೆ

ಜೀವನ ಚರಿತ್ರೆ ಭಾರತೀಯ ಹಾಗೂ ಕರ್ನಾಟಕ ಸಾಹಿತ್ಯದ ಜಾಯಮಾನಕ್ಕೆ ಹೊಸ ವಿಚಾರವಲ್ಲದಿದ್ದರೂ ಅದನ್ನೂ ಒಂದು ವಿಶಿಷ್ಟವಾದ ಸ್ವತಂತ್ರವಾದ ಸಾಹಿತ್ಯ ಪ್ರಕಾರವೆಂದು ಪರಿಗಣಿಸಲ್ಪಟ್ಟಿದ್ದು ತೀರಾ ಇತ್ತೀಚೆಗೆ. ದಿ. ಶ್ರೀ ಎಂ. ಎಸ್. ಪುಟ್ಟಣ್ಣನವರ 'ಕುಣಿಗಲ್ ರಾಮಾಶಾಸ್ತ್ರಿಗಳ ಚರಿತ್ರೆ' ಕನ್ನಡದ ಮೊದಲ ಜೀವನ ಚರಿತ್ರೆ. ಅಲ್ಲಿಂದ ಆರಂಭವಾದ ಈ ಜೀವನ ಚರಿತ್ರೆಯ ಪ್ರವಾಹ ಕನ್ನಡ ಸಾಹಿತ್ಯ ವಾಹಿನಿಯಲ್ಲಿ ಅತ್ಯಂತ ಪ್ರಮುಖ ಘಟ್ಟವಾಗಿ, ತನ್ನ ಪಾತ್ರವನ್ನು ವಿಸ್ತರಿಸುತ್ತಾ ನಡೆದಿದೆ. ಪೌರಾಣಿಕ, ಐತಿಹಾಸಿಕ, ಸಮಕಾಲೀನರ ಜೀವನವನ್ನು ವಸ್ತುವಾಗಿರಿಸಿಕೊಂಡ ಈ ಪ್ರಕಾರ ಹಲವು ಹಿರಿಯ ಲೇಖಕರ ಹೆಮ್ಮೆಯ ಕೊಡುಗೆಯೂ ಆಗಿದೆ. ಜೀವನ ಚರಿತ್ರೆ ಸಂಶೋಧನಾತ್ಮಕ ಬರವಣಿಗೆಯೂ ಆಗಿದೆ. ಕುವೆಂಪು, ದೇಜಗೌ, ಡಿವಿಜಿ, ಮಾಸ್ತಿ, ಅನಕೃ, ತರಾಸು-ಮುಂತಾದ ಹಿರಿಯ ಕವಿಗಳು ಜೀವನ ಚರಿತ್ರೆಯನ್ನು ವಿಶಿಷ್ಟ ರೀತಿಯಿಂದ ಬೆಳೆಸಿದವರು. ರಂ.ಶ್ರೀ ಮುಗುಳಿ, ತ.ಸು. ಶ್ಯಾಮರಾವ್, ಎಂ. ಮರಿಯಪ್ಪ ಭಟ್, ರಾ. ನರಸಿಂಹಾಚಾರ್ಯ-ಮುಂತಾದವರ ಸಾಹಿತ್ಯ ಕವಿಚರಿತ್ರೆಗಳು ಆಂಶಿಕವಾಗಿ ಜೀವನ ಚರಿತ್ರೆಯ ಅವಿನಾಭಾವ ಸಂಬಂಧದ ಎಳೆಗಳೇ ಆಗಿವೆ. ಈಚೆಗೆ ಐಬಿಹೆಚ್, ಭಾರತ ಭಾರತಿ ಮುಂತಾದ ಪ್ರಕಾಶನಗಳು ಆರಂಭಿಸಿದ ಈ ಸಂಬಂಧದ ಮಾಲೆ ಜೀವನ ಚರಿತ್ರೆಯ ವಿಭಾಗಕ್ಕೆ ಒಂದು ಸ್ಮರಣೀಯ ಕೊಡುಗೆ. ಎಂ.ಎಸ್. ಪುಟ್ಟಣ್ಣ, ದೇವುಡು, ಗುಲ್ವಾಡಿ ವೆಂಕಟರಾಯರು, ರಾ. ನರಸಿಂಹಾಚಾರ್ಯ, ಡಿವಿಜಿ-ಮುಂತಾದ ಆಧುನಿಕ ಲೇಖಕರನ್ನು ಕುರಿತ ಸಂಶೋಧನಾತ್ಮಕ ಮಹಾಪ್ರಬಂಧಗಳೂ ಅವರ ಜೀವನ ಚರಿತ್ರೆಗಳೇ. ಸಂಭಾವನಾ ಗ್ರಂಥಗಳಂತೂ ವಿಶ್ಲೇಷಣಾತ್ಮಕವೂ, ವಿಮರ್ಶಾತ್ಮಕವೂ ಆದ ಜೀವನ ಚರಿತ್ರೆಗಳೇ ಆಗಿವೆ.

ಜೀವನ ಚರಿತ್ರೆಗಳು ಪ್ರಧಾನವಾಗಿ ಎರಡು ಬಗೆ. ಜೀವನ ಚರಿತ್ರೆಕಾರನ ಕಾಲಕ್ಕಿಂತ ಪೂರ್ವದಲ್ಲೇ ಇದ್ದ ವ್ಯಕ್ತಿಗಳನ್ನು ಕುರಿತು ವಸ್ತು ಮಾಹಿತಿಗಳನ್ನು ಸಂಗ್ರಹಿಸಿ ಬರೆಯುವುದು ಒಂದು ಕ್ರಮವಾದರೆ, ತನ್ನ ಸಮಕಾಲೀನರ ಜೀವನವನ್ನೇ ಕುರಿತು ಬರೆಯುವುದು ಮತ್ತೊಂದು ಬಗೆ. ಒಂದು ಪ್ರಕಾರದಲ್ಲಿ ಗತಿಸಿದ ವ್ಯಕ್ತಿಗಳ

ಸಮಕಾಲೀನರನ್ನು, ಕುಟುಂಬದವರನ್ನು, ನಿಕಟವರ್ತಿಗಳನ್ನೂ ಸಂಪರ್ಕಿಸಿ ಸಂದರ್ಶಿಸಿ ಅವರಿಂದ ಅವರ ಜೀವನ ವಿವರಗಳನ್ನು ಸಂಗ್ರಹಿಸುವುದು ಒಂದು ವಿಧಾನ. ಅವರನ್ನು ಕುರಿತ ಬರಹ ಅಥವಾ ಲಿಖಿತ ಸಾಮಗ್ರಿಗಳನ್ನು ದೊರಕಿಸಿಕೊಂಡು ಆ ಆಧಾರದ ಮೇಲೆ ವ್ಯಕ್ತಿಗಳ ಜೀವನ ಚರಿತ್ರೆಯನ್ನು ಬರೆಯುವುದು ಮತ್ತೊಂದು ವಿಧಾನ. ಅವರ ಇಲ್ಲಿ ಅಂತಹ ಸಮಕಾಲೀನರೋ, ನಿಕಟವರ್ತಿಗಳೋ ಅಭಿಮಾನಪೂರ್ವಕವಾಗಿ ವ್ಯಕ್ತಿಯನ್ನು ಅತಿಶಯೋಕ್ತಿಯಿಂದ ವೈಭವೀಕರಿಸುವುದೂ ಸಾಧ್ಯ. ಪೂರ್ವಗ್ರಹ ಪೀಡಿತರಾಗಿ ಬೀಳುಗಳೆಯುವುದೂ ಸಾಧ್ಯ. ಸಮಕಾಲೀನರ ಬಗ್ಗೆ ಬರೆಯುವಾಗ ಕೇವಲ ಗುಣಪಕ್ಷಪಾತಿಯಾಗಿದ್ದು ಬರೆದರೂ, ಏಕಮುಖಿವಾಗುವ ಸಾಧ್ಯತೆ ಇವೆ. ದೋಷ ದೌರ್ಬಲ್ಯವನ್ನು ಕುರಿತು ಬರೆದರೆ, ಅದೂ ಸಹ ಏಕಪಕ್ಷೀಯವಾಗುತ್ತದೆ. ಈ ಎರಡೂ ಹಂತಗಳಲ್ಲಿಯೂ ಜೀವನ ಚರಿತ್ರೆ ಅಪರಿಪೂರ್ಣವಾಗುತ್ತದೆ. ಆದ್ದರಿಂದ ಜೀವನ ಚರಿತ್ರೆಕಾರ ಗುಣದೋಷಗಳ ಸಮತೋಲನವನ್ನು ಕಾಯ್ದುಕೊಂಡು ಎಲ್ಲಿಯೂ ಅತಿಗೆ ಹೋಗದ ಮಿತಿಯಲ್ಲಿರುವ ಕಟ್ಟೆಚ್ಚರ ಹಾಗೂ ಜಾಗೃತ ಪ್ರಜ್ಞೆಯುಳ್ಳವನಾಗಿರಬೇಕು. "ಕಾದಂಬರಿಗೂ, ಸಣ್ಣ ಕತೆಗೂ ಯಾವ ವ್ಯತ್ಯಾಸವಿದೆಯೋ, ಜೀವನ ಚರಿತ್ರೆಗೂ, ವ್ಯಕ್ತಿ ಚಿತ್ರಕ್ಕೂ ಆ ವ್ಯತ್ಯಾಸವಿದೆಯೆಂದು ಹೇಳಬಹುದು" ಎಂಬ ಎಂ.ವಿ. ಸೀತಾರಾಮಯ್ಯನವರ ಮಾತು ಗ್ರಾಹ್ಯ. (ಕನ್ನಡ ಜೀವನ ಚರಿತ್ರೆ 1973 ಪುಟ 193)

ಪ್ರೊ. ಮೂರ್ತಿರಾಯರು ತಮ್ಮ ಸಮಕಾಲೀನರ ಜೀವನ ಚರಿತ್ರೆ ಬರೆದಿದ್ದಾರೆ. ಅಂತಹವರ ವ್ಯಕ್ತಿ ಚಿತ್ರಣಗಳನ್ನು ಚಿತ್ರಿಸಿದ್ದಾರೆ. ಈ ಜೀವನ ಚರಿತ್ರೆ ವ್ಯಕ್ತಿ ಚಿತ್ರಗಳು ಸ್ವತಂತ್ರವಾಗಿ ಸಾಂದರ್ಭಿಕವಾಗಿ ಬಂದಿವೆ. 'ಪ್ರಸಿದ್ಧರು-ಅಪ್ರಸಿದ್ಧರು' ಎರಡೂ ಬಗೆಯವರ ಚಿತ್ರಣವೂ ಮೂರ್ತಿರಾಯರಿಂದ ನಮಗೆ ಸಿಗುತ್ತದೆ. ಮೂರ್ತಿರಾಯರು ಚಿತ್ರಿಸಿದ ವ್ಯಕ್ತಿ ಚಿತ್ರಣಗಳು ಅವರ ಆತ್ಮಚರಿತ್ರೆಯಲ್ಲಿ, ಸ್ವತಂತ್ರ ಗ್ರಂಥಗಳಲ್ಲಿ ಹಾಗೂ ಮುನ್ನುಡಿ, ಭಾಷಾಂತರ, ಅಪ್ರಕಟಿತ ಬಿಡಿ ಲೇಖನಗಳ ರೂಪದಲ್ಲಿ ಮತ್ತು ಸಂಭಾವನಾ ಗ್ರಂಥಗಳಲ್ಲಿ, ಅಭಿನಂದನಾ ಭಾಷಣಗಳಲ್ಲಿ, ಪ್ರವಾಸ ಸಾಹಿತ್ಯದಲ್ಲಿ ಮತ್ತು ತಮ್ಮ ಅನುಭವದ ಕಥನಗಳಲ್ಲಿ ಹಂಚಿ ಹೋಗಿವೆ. ಈ ಎಲ್ಲಾ ಬಿಡಿಗಳನ್ನೂ ಕ್ರೋಢೀಕರಿಸಿ ಇಡಿಯಾಗಿ ಅಧ್ಯಯನ ಮಾಡಿದಾಗ ನಮಗೆ ಸಾಮಾನ್ಯವಾಗಿ ಕಾಣುವ ಕೆಲವು ಅಂಶಗಳು ಇವು. ತಮ್ಮ ಯಾವುದೋ ನಿಲುವನ್ನು ಸಮರ್ಥಿಸಲು ಇತರರನ್ನು ಕೀಳಾಗಿ ಕಂಡವರಲ್ಲ. ಅಪ್ರಸಿದ್ಧರ ದೋಷಗಳ ಉಲ್ಲೇಖ ಅನಿವಾರ್ಯವೆನಿಸಿದಾಗ ಒಂದು ಸಾಂಕೇತಿಕ ಗುಪ್ತನಾಮ ಬಳಸಿದ್ದಾರೆ. ಪ್ರಸಿದ್ಧ ವ್ಯಕ್ತಿಗಳನ್ನು ಕುರಿತು ಬರೆಯುವಾಗ ಯಾವುದೇ ಆವೇಶಕ್ಕೆ ಒಳಗಾಗದೆ ಅವರ ಗುಣದೋಷಗಳೆರಡನ್ನೂ ವಾಚ್ಯವಾಗಿಯೋ ಸೂಚ್ಯವಾಗಿಯೋ ಒಂದು ಸಮತೂಕವನ್ನು ಸಾಧಿಸಿಕೊಂಡು ಬರೆದಿದ್ದಾರೆ. ವಿವರಣೆ ವಸ್ತುನಿಷ್ಠವಾಗಿದೆಯೇ ಹೊರತು ವ್ಯಕ್ತಿನಿಷ್ಠವಾಗಿಲ್ಲ. ದೋಷಗಳನ್ನು ಕುರಿತು ಉಲ್ಲೇಖಿಸುವಾಗಲೂ ಗೌರವಪೂರ್ವಕವಾಗಿ, ಓದುಗರಿಂದಲೂ ಗೌರವ ಪ್ರಚೋದಕ ವಾಗುವ ರೀತಿಯಲ್ಲಿಯೇ ಉನ್ನತ ರೀತಿಯಲ್ಲಿ ಪ್ರೌಢವಾಗಿಯೇ ಉಲ್ಲೇಖಿಸಿದ್ದಾರೆ. ಈ ವ್ಯಕ್ತಿ ಚಿತ್ರಣ ನೀಡುವಾಗ ಮೂರ್ತಿರಾಯರು ಮರೆಯಾಗಿ, ಓದುಗನಿಗೆ ಸರಿದು ವ್ಯಕ್ತಿ ನಮಗೆ ಪ್ರಧಾನವಾಗಿ ಆ ಆವರಣದಲ್ಲಿ ಅಥವಾ ಚೌಕಟ್ಟಿನಲ್ಲಿ ಕಾಣಿಸುತ್ತಾರೆ.

1974ರಲ್ಲಿ ಮೂರ್ತಿರಾಯರು ಬರೆದ B.M. SRIKANTAIAH-ಎಂಬ ಇಂಗ್ಲೀಷ್ ಪುಸ್ತಕ ಅವರ ಮೊದಲ ಸ್ವತಂತ್ರ ಜೀವನ ಚರಿತ್ರೆ. ಅನಂತರ 1975ರಲ್ಲಿ ಇದನ್ನೇ ವಿಸ್ತರಿಸಿ "ಬಿ.ಎಂ. ಶ್ರೀಕಂಠಯ್ಯ" ಎಂಬ ಕೃತಿಯನ್ನು ಬರೆದರು. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ "ಚಿತ್ರಗಳು-ಪತ್ರಗಳು" ಮತ್ತೊಂದು ಸ್ವತಂತ್ರ ವ್ಯಕ್ತಿ ಚಿತ್ರಣ ಸಂಕಲನ. ಅನಂತರ ಹತ್ತು ಹಲವು ವ್ಯಕ್ತಿ ಚಿತ್ರಣಗಳು ಇಂಗ್ಲೀಷ್‌ನಲ್ಲಿ, ಅಭಿನಂದನಾ ಭಾಷಣಗಳಲ್ಲಿ, ಸಂಭಾವನಾ ಗ್ರಂಥಗಳಲ್ಲಿ, ಆತ್ಮಚರಿತ್ರೆಯಲ್ಲಿ, ಪತ್ರಗಳಲ್ಲಿ ಪ್ರವಾಸ ಸಾಹಿತ್ಯದಲ್ಲಿ ದೊರೆಯುತ್ತವೆ. ಇಂಗ್ಲೀಷ್ ಲೇಖನಗಳು ಕೆಲವು ಕನ್ನಡ ಲೇಖನದ ಅನುವಾದಗಳಾಗಿ, ಸಂಕ್ಷಿಪ್ತವಾಗಿಯೂ ಇವೆ. ಹೀಗೆ ವ್ಯಕ್ತಿ ಚಿತ್ರಣಗಳು ಪುನರಾವರ್ತನೆಗೊಂಡಿದ್ದು, ವಸ್ತು ಮೂಲತಃ ಒಂದೇ ಆಗಿದ್ದರೂ ಭಾಷೆ ಶೈಲಿಗಳ ನವೀನತೆಯಿಂದ ಕೂಡಿವೆ.

## 5.2 B.M. SRIKANTAIAH

'B.M. SRIKANTAIAH' ಕೇಂದ್ರ ಸಾಹಿತ್ಯ ಅಕಾಡೆಮಿಯ MAKERS OF INDIAN LITERATURE ಮಾಲಿಕೆಗಾಗಿ 1974ರಲ್ಲಿ ಮೂರ್ತಿರಾಯರು ಇಂಗ್ಲೀಷ್‌ನಲ್ಲಿ ಬರೆದ 64 ಪುಟಗಳ ಪುಸ್ತಕ. ಶ್ರೀಯವರ ಜೀವನ, ವ್ಯಕ್ತಿತ್ವ, ಸಿದ್ಧಿ ಸಾಧನೆಗಳನ್ನು ಕುರಿತು ಇಷ್ಟು ಸಂಗ್ರಹವಾಗಿ ಹೇಳುವುದು ಕಷ್ಟ. ಶ್ರೀಯವರು ಮೂರ್ತಿರಾಯರ ಗುರುಗಳು. ಅವರ ಸಂಪರ್ಕ ಮೂರ್ತಿರಾಯರ ವಿದ್ಯಾರ್ಥಿ ದೆಸೆ ಮುಗಿದ ಮೇಲೂ ಮುಂದುವರೆಯಿತು. ಶ್ರೀಯವರ ವೃತ್ತಿಜೀವನ, ಪ್ರವೃತ್ತಿ ಜೀವನ, ನಿವೃತ್ತಿ ಜೀವನ, ಅಧ್ಯಯನ, ಅಧ್ಯಾಪನ, ಕನ್ನಡ-ಇಂಗ್ಲೀಷ್ ಭಾಷೆ ಸಾಹಿತ್ಯಗಳ ಮೇಲಿನ ಅಪಾರ ಪ್ರಭುತ್ವ ಎಲ್ಲಕ್ಕೂ ಮಿಗಿಲಾಗಿ ಅವರ ಕನ್ನಡ ಪ್ರೇಮ, ಶ್ರೀಮದ್ಗಾಂಭೀರ್ಯ, ಸಲಿಗೆ-ಇವುಗಳನ್ನು ಮೂರ್ತಿರಾಯರು ಯಾವ ಆಡಂಬರ ವಿಶೇಷಣಗಳಿಲ್ಲದ ನಿರಾಡಂಬರದ ಸರಳ ಶೈಲಿಯಿಂದ ಚಿತ್ರಿಸಿದ್ದಾರೆ. ಅವರು ನಂಬಿಕೊಂಡು ಬಂದ ಮೌಲ್ಯಾತ್ಮಕ ಸಿದ್ಧಾಂತಗಳು ಹಾಗೂ ಅದರ ನೇರಕ್ಕೆ ನಡೆದ ನಿಷ್ಠುರ ಎದೆಗಾರಿಕೆಗಳಿಗೆ ಹೆಚ್ಚು ಒತ್ತುಕೊಟ್ಟು ಬರೆದಿದ್ದಾರೆ. ಈ ಪುಸ್ತಕದ ಮುನ್ನುಡಿಯಲ್ಲಿ ಮೂರ್ತಿರಾಯರು ಹೇಳಿರುವ ಈ ಮಾತುಗಳು ಉಲ್ಲೇಖನಾರ್ಹ.

In a sense I have never ceased to be his student since many things he said and did have been an abiding influence in my life. I have here attempted a study of his personality and work. I hope I have brought to bear on it the objectivity which he valued highly.

ಶ್ರೀಯವರು ಒಬ್ಬ ಜಿಜ್ಞಾಸು. ಆದರ್ಶ ಶಿಕ್ಷಕ, ಕನಸುಗಾರ, ಇವೆಲ್ಲವೂ ಒಂದು ಕಿರುಹೊತ್ತಿಗೆಯಲ್ಲಿ ಅಡಕವಾಗಿ ಹೇಳಿದ್ದಾರೆ. ಹಿರಿದನ್ನು ಕಿರಿದರಲ್ಲಿ ಹೇಳಬಲ್ಲ ಸಮರ್ಥತೆ ಮೂರ್ತಿರಾಯರಿಗಿರುವ ಕಾರಣ ಇಲ್ಲಿ ಇಷ್ಟು ಸಂಕ್ಷಿಪ್ತವಾಗಿ ಹೇಳಲು ಸಾಧ್ಯವಾಯಿತು. ಶ್ರೀಯವರಿಗೆ ಷೇಕ್ಸ್‌ಪಿಯರ್ ಎಂತಹ ಅಚ್ಚು ಮೆಚ್ಚಿನ ಕವಿ ಎಂದರೆ ಅವನ ದುರಂತ ನಾಟಕದ ಹಲವು ಭಾಗಗಳು ಅವರಿಗೆ ಕಂಠಸ್ಥವಾಗಿದ್ದವು. ಅವರ ಈ ವಿದ್ವತ್ಪೂರ್ಣ ಪ್ರಭುತ್ವವನ್ನು ಈ ಮೂರು ವಾಕ್ಯಗಳಲ್ಲಿ ಹೀಗೆ ಹೇಳಿದ್ದಾರೆ.

. . . . .. there were somethings which he alone could have done. I do not know any other poet in Karnataka so eminently fitted to translate Shakespearean Tragedy ( I am not so sure about Shakespearean Comedy) or the Oresteian Trilogy. He loved Shakespeare almost to the point of idolatry. (P 6–7)

## 5.3 ಬಿ.ಎಂ. ಶ್ರೀಕಂಠಯ್ಯ

ಶ್ರೀಯವರನ್ನು ಕುರಿತು ಇಂಗ್ಲೀಷ್‌ನಲ್ಲಿ ಕನ್ನಡೇತರರಿಗಾಗಿ ಕೇಂದ್ರ ಸಾಹಿತ್ಯ ಅಕಾಡಮಿಗಾಗಿ ಪುಸ್ತಕವನ್ನು ಮೂರ್ತಿರಾಯರು ಬರೆದುಕೊಟ್ಟರೆ ಕನ್ನಡ ಸಾಹಿತ್ಯ ಪರಿಷತ್ತಿಗಾಗಿ ಅದೇ ವಸ್ತುವನ್ನುಳ್ಳ ಕೃತಿಯೊಂದನ್ನು ಕನ್ನಡಿಗರಿಗಾಗಿ ಬರೆದುಕೊಟ್ಟಿದ್ದಾರೆ. (1975) ವಸ್ತು ಅದೇ ಆದರೂ ಇಲ್ಲಿ ಕೊಂಚ ವಿಸ್ತರಿಸಲಾಗಿದೆ. ಇಂಗ್ಲೀಷ್ ಕೃತಿ ಕೇವಲ 64 ಪುಟಗಳಲ್ಲಿ ಮುಗಿದಿದ್ದರೆ, ಕನ್ನಡ ಅವತರಣಿಕೆ 114 ಪುಟಗಳ ವ್ಯಾಪ್ತಿ ಪಡೆದಿದೆ. ಏಕೆಂದರೆ ಇಂಗ್ಲೀಷ್ ಅವತರಣಿಕೆಯಲ್ಲಿ ಹಲವು ಹೇಳಿಕೆಗಳಿಗೆ ಸಮರ್ಥನೆ, ಪುರಾವೆ, ಪರ-ವಿರೋಧ ಅಂಶಗಳನ್ನು ಮಂಡಿಸಲಾಗಿದೆ. ಶ್ರೀ ಕನ್ನಡದ ಪರಸ್ಪರ ಸಂಬಂಧವನ್ನು ಈ ಎರಡು ಅವತರಣಿಕೆಗಳಲ್ಲಿ ಹೀಗೆ ಭಿನ್ನವಾಗಿ ನಿರೂಪಿಸಲ್ಪಟ್ಟಿದೆ.

Once when I said my friend Prof. T.N. Srikantaiah. that B.M. Srikantaiah saved Kannada from "getting lost in the desert" he said "Kannada saved him too –saved him from getting lost in the desert of self–pity." It was a profoundly true remark. (P 4)

ಈ ಸಂದರ್ಭ ಅವರ ಕನ್ನಡ ಅವತರಣಿಕೆಯಲ್ಲಿ ಹೀಗೆ ವಿಸ್ತರಿಸಲ್ಪಟ್ಟಿದೆ.

"ಒಂದು ಬಾರಿ ನನ್ನ ಮಿತ್ರ ಪ್ರಾ. ತೀ.ನಂ. ಶ್ರೀಕಂಠಯ್ಯನವರೊಡನೆ ಮಾತಾಡುತ್ತಿದ್ದಾಗ, "ಕನ್ನಡ ಸಾಹಿತ್ಯವಾಹಿನಿ ಮರುಭೂಮಿಯ ಕಡೆಗೆ ಸಾಗಿ ಅಲ್ಲಿ ಇಂಗಿ ಹೋಗುತ್ತದೆಯೇನೋ ಎನ್ನುವಂತಿತ್ತು. ಬಿ.ಎಂ. ಶ್ರೀಕಂಠಯ್ಯನವರು ಅದನ್ನು ಉಳಿಸಿದರು" ಎಂದೆ. ಆಗ ತೀ.ನಂ. ಅವರು "ಕನ್ನಡವೂ ಅವರನ್ನು ಉಳಿಸಿತು. ಅವರು ಆತ್ಮಾನುಕಂಪದ ಮರುಭೂಮಿಯ ಕಡೆಗೆ ತಿರುಗಿ ಅವರ ಜೀವನ ವಿಫಲವಾಗುವ ಸಾಧ್ಯತೆಯಿತ್ತು."ಎಂದರು. ನಮ್ಮಿಬ್ಬರಿಗೂ ಆ ಸಂದರ್ಭದಲ್ಲಿ ಜಾರ್ಜ್ ಎಲಿಯಟ್‌ಳ ಸೈಲಸ್ ಮಾರ್ನರ್(George Eliot's Silas Marner)ಕಾದಂಬರಿಯ ನೆನಪಾಯಿತು. "ಜೀವನದಲ್ಲೂ ಮಾನವನಲ್ಲೂ ನಂಬಿಕೆಯನ್ನು ಕಳೆದುಕೊಂಡ - ಹಾಗೆ ಕಳೆದು ಕೊಂಡದ್ದಕ್ಕೆ ಅವನಿಗಾಗಿದ್ದ ಅನ್ಯಾಯವೇ ಕಾರಣ. ಹೇಗೋ ಬದುಕಲ್ಲದ ಬದುಕಿನಲ್ಲಿದ್ದ ಸೈಲಸ್‌ನನ್ನು ಎಪಿ (Eppie)ಎಂಬ ಚಿಕ್ಕ ಮಗುವಿನ ಪ್ರೇಮ ಉಳಿಸಿತು. ಅವನ ಹೃದಯ ಮೃದುವಾಯಿತು"–ಇದೇ ಆ ಕಾದಂಬರಿಯ ವಸ್ತು. ಶ್ರೀಕಂಠಯ್ಯನವರ ಪಾಲಿಗೆ ಕನ್ನಡವೇ ಎಪಿ. ಶ್ರೀಕಂಠಯ್ಯನವರನ್ನು ಉಳಿಸಿದ್ದಕ್ಕಾಗಿ ಕನ್ನಡಕ್ಕೂ, ಕನ್ನಡಕ್ಕೆ ಸುಪಥ ವನ್ನು ತೋರಿಸಿದ್ದಕ್ಕಾಗಿ ಶ್ರೀಕಂಠಯ್ಯವರಿಗೂ ನಾವು ಕೃತಜ್ಞರಾಗಿರಬೇಕು. (ಪುಟ 6)

ಕನ್ನಡದ 'ಕನ್ನಡ ಸಾಹಿತ್ಯವಾಹಿನಿ' ಇಂಗ್ಲೀಷ್‌ನಲ್ಲಿ Kannada ಎಂಬ ಒಂದೇ ಶಬ್ದಕ್ಕೆ ಸೀಮಿತವಾಗಿದೆ. ಹೇಳಿಕೆಯ ಸಮರ್ಥನೆಗಾಗಿ ಕನ್ನಡ ಅವತರಣಿಕೆಯಲ್ಲಿ

ಬಳಸಲಾದ Silas Marnerದ ಕಥಾವಸ್ತು ಇಂಗ್ಲೀಷ್ ಅವತರಣಿಕೆಯಲ್ಲಿಲ್ಲ. ಈ ಪರಸ್ಪರ ಸಂಬಂಧದ ಸತ್ವಲದ ಉಲ್ಲೇಖ ಇಂಗ್ಲೀಷ್‌ನಲ್ಲಿಲ್ಲ.

ಇನ್ನೊಂದು ಉದಾಹರಣೆ :

Like many other students of Prof. Srikantaiah, I too once felt that he was led astray by this siven fame (P 9)

ಕನ್ನಡದಲ್ಲಿ ಇದರ ವಿಸ್ತೃತ ರೂಪ/ವಿವರಣೆ ಹೀಗಿದೆ.

ಅವರ ಶಿಷ್ಯರನೇಕರಂತೆ ನಾನು ಎಷ್ಟೋ ಸಲ "ಇವರು ಈ ಭಾಷಾ ಮಾಡುವ ಚಟಕ್ಕೆ ಏಕೆ ಬಲಿಯಾದರು. ಸೃಷ್ಟಿಯಾದ ಘಳಿಗೆಯಲ್ಲೇ ನಾಶವಾಗುವ ಈ ಭಾಷಾ ಸೌಂದರ್ಯಕ್ಕೆ ಬದಲು ಸ್ಥಿರವಾಗಿ ನಿಲ್ಲುವ ಕಾವ್ಯ ಸೌಂದರ್ಯವನ್ನು ಸೃಷ್ಟಿಸಬಾರದಿತ್ತೇ. ಎಂದುಕೊಂಡಿದ್ದೇನೆ. (ಪುಟ 13)

ಮೂಲದ astray ಮತ್ತು siven fame ಎಂಬ ಶಬ್ದಗಳು ಇಲ್ಲಿ ಕೊಂಚ ಹೆಚ್ಚಾಗಿ ವಿವರಿಸಲ್ಪಟ್ಟಿವೆ. ಜೊತೆಗೆ ಶ್ರೀಯವರು ಮಾಡಬೇಕಾಗಿದ್ದ, ಮಾಡಬಹುದಾಗಿದ್ದ-ಶಾಶ್ವತ ಕಾರ್ಯದ-ಕೆಲಸದ ಬಗ್ಗೆಯೂ ಉಲ್ಲೇಖವಿದೆ.

ಶ್ರೀಯವರ ಬಗ್ಗೆ ಅವರ ಆತ್ಮ ಚರಿತ್ರೆಯಲ್ಲಿಯೂ ಸಾಂದರ್ಭಿಕವಾದ ಉಲ್ಲೇಖವಿದೆ. ಪ್ರಾಸಂಗಿಕವಾಗಿ ಇತರ ಲೇಖನಗಳಲ್ಲಿಯೂ (Mysore in the twenties literary scene) ಅವರನ್ನು ಕುರಿತ ಉಲ್ಲೇಖವಿದೆ. ಇದು ಗುರುವನ್ನು ಕುರಿತ ಒಬ್ಬ ಶಿಷ್ಯನ, ಒಬ್ಬ ಸಾಹಿತಿಯನ್ನು ಕುರಿತ ಒಬ್ಬ ವಿಮರ್ಶಕನ, ಒಬ್ಬ ಇಂಗ್ಲೀಷ್ ಪ್ರಾಧ್ಯಾಪಕನನ್ನು ಕುರಿತು ಮತ್ತೊಬ್ಬ ಇಂಗ್ಲೀಷ್ ಪ್ರಾಧ್ಯಾಪಕನ ಪ್ರಾಮಾಣಿಕ ಅನಿಸಿಕೆ. ಈ ಪ್ರಾಮಾಣಿಕತೆ ಮುನ್ನುಡಿಯ ಅವರ ಈ ಬಿಚ್ಚು ಮಾತುಗಳಲ್ಲಿ ವ್ಯಕ್ತವಾಗಿದೆ.

"ಶ್ರೀಕಂಠಯ್ಯನವರ ಮತ್ತು ಅವರ ಕೃತಿಗಳ ವಿಷಯದಲ್ಲಿ ನನ್ನ ಅಭಿಪ್ರಾಯಗಳಿಗೂ ಇತರರ ಅಭಿಪ್ರಾಯಗಳಿಗೂ ಸಾಮ್ಯವೂ ಇರಬಹುದು, ವಿರೋಧವೂ ಇರಬಹುದು. ನನಗೆ ದೋಷಗಳಂತೆ ಕಂಡ ಕೆಲವು ಅಂಶಗಳನ್ನು ಇಲ್ಲಿ ಕಾಣಿಸುವ ಸಾಹಸ ಮಾಡಿದ್ದೇನಾದರೂ ನನಗೆ ನನ್ನ ಗುರುಗಳಲ್ಲಿರುವ ಗೌರವ ಎಳ್ಳಷ್ಟು ಕುಂದಿಲ್ಲ. 'ಯಾವುದನ್ನೂ ನಿಷ್ಪಕ್ಷಪಾತ ದೃಷ್ಟಿಯಿಂದ ನೋಡಬೇಕು. ಕೊನೆಗೆ ನಿಲ್ಲುವುದು ಅಭಿಮಾನವಲ್ಲ, ಸತ್ಯ' ಎಂಬುದು ಶ್ರೀಕಂಠಯ್ಯನವರು ಕಲಿಸಿದ ಪಾಠ. ಅದಕ್ಕನುಸಾರವಾಗಿ ನಡೆಯುವ ಪ್ರಯತ್ನವನ್ನು ಇಲ್ಲಿ ಮಾಡಿದ್ದೇನೆ".

ಈ ಜೀವನ ಚಿತ್ರಣ ಕೇವಲ ಅಂಧಾಭಿಮಾನದಿಂದ ಬರೆದದ್ದಲ್ಲ. ವ್ಯಕ್ತಿಗಳನ್ನು ಅಸಂಗತವಾಗಿ ಉದಾತ್ತೀಕರಿಸುವುದಾಗಲೀ, ವೈಭವೀಕರಿಸುವುದಾಗಲೀ ಮೂರ್ತಿರಾಯರಿಗೆ ಹಿಡಿಸದು. ಆದ್ದರಿಂದ ಪ್ರಶಂಸೆ-ಖಂಡನೆ ಎರಡೂ ಸಮತೂಕ ಸಾಧಿಸಿವೆ. ಬಿ.ಎಂ. ಶ್ರೀಯವರು ಮೂರ್ತಿರಾಯರ ಗುರುಗಳೇ ಆದರೂ ಅವರ ಒಂದೆರಡು ವೈಪರೀತ್ಯಗಳನ್ನು ಉಲ್ಲೇಖಿಸಿದ್ದಾರೆ. ಶ್ರೀಯವರು ತಾವು Home Product ಆದರೂ Foreign returned ಗಳಿಗೇನೂ ಕಡಿಮೆ ಇಲ್ಲವೆಂದು ತೋರಿಸಲು ತೆಗೆದುಕೊಂಡ ಸವಾಲು ಹೇಗೆ ಪರ್ಯವಸಾನವಾಯಿತೆಂದು ಹೀಗೆ ವಿವರಿಸಿದ್ದಾರೆ.

"ಅವರ ಇಂಗ್ಲೀಷ್ ಸಾಹಿತ್ಯವನ್ನು ಕುರಿತ ಉಪನ್ಯಾಸಗಳು ಹದಗೆಟ್ಟದ್ದು ಇದರಿಂದ ಎಂದು ನನ್ನ ನಂಬಿಕೆ. ತಮಗೆ ಸಾಹಿತ್ಯ ಮಾತ್ರವಲ್ಲದೆ ಇತರ ವಿಷಯಗಳಲ್ಲೂ

ಪಾಂಡಿತ್ಯವುಂಟು, ತಮ್ಮ ಪ್ರವಚನಕ್ಕೆ ಇತರರದಕ್ಕಿಂತ ಹೆಚ್ಚಿನ ವ್ಯಾಪ್ತಿಯುಂಟು ಎಂಬುದು ಎಲ್ಲರಿಗೂ ತಿಳಿಯಲೆಂದು ಅವರು ಮಿತಿಮೀರಿ ಪ್ರಯತ್ನಿಸಿದರು. ಪ್ರಯತ್ನ ಪೂರ್ವಕವಾಗಿ ಮೆಚ್ಚುಗೆಗಳಿಸಹೊರಟಿದ್ದರಿಂದ ಅವರ ಪ್ರವಚನಕ್ಕೆ ಪ್ರದರ್ಶನದ ಸೋಂಕುತಗುಲಿತು, ಸಮತೂಕ ತಪ್ಪಿ ಅನೇಕ ವೇಳೆ ಮುಖ್ಯ ವಿಷಯ ಹಿಂದಾಗಿ ಅಮುಖ್ಯವಾದದ್ದೇ ಮುಂದಾಯಿತು. ತಾವೇ ಚಕ್ರವ್ಯೂಹದ ಕೋಟೆ Image ಯೊಂದನ್ನು ನಿರ್ಮಿಸಿಕೊಂಡು ಅದರಲ್ಲಿ ತಾವೇ ದಾರಿತಪ್ಪಿ ಅಲೆಯುವಂತಾಯಿತು" (ಚಿ.ಪ.ಪು.74)

ಇಲ್ಲಿರುವ ಹಲವು ವ್ಯಕ್ತಿ ಚಿತ್ರಣಗಳೊಂದಿಗೆ, ಆ ವ್ಯಕ್ತಿಗಳೊಂದಿಗೆ ಸಂಬಂಧವಿದ್ದ ಸಂಸ್ಥೆಗಳ ಬಗ್ಗೆಯೂ ಉಲ್ಲೇಖವಿದೆ. ಆದ್ದರಿಂದ ಇದು ಒಂದು ಕೇವಲ ವರದಿ ಆಗಿರದೆ ಒಂದು ಒಳ್ಳೆಯ ಒಳನೋಟ ಕೂಡ ಆಗಿದೆ. ಬಿ.ಎಂ. ಶ್ರೀಯವರ ಚಿತ್ರಣ ಅವರ ಕೃತಿ ವಿಮರ್ಶೆಯೊಂದಿಗೆ 'ಕವಿ ಕಾವ್ಯ ಪರಿಚಯಾತ್ಮಕ' ಲೇಖನವಾಗಿಯೂ ಪರಿಣಮಿಸಿದೆ. ಇಲ್ಲಿಯೂ ಸಹ ವಸ್ತುನಿಷ್ಠತೆಯೇ ಮೇಲುಗೈಯಾಗಿದೆ. 'ಕೊನೆಗೆ ಉಳಿಯುವುದು ಅಭಿಮಾನವಲ್ಲ, ಸತ್ಯ' ಎಂಬ ಶ್ರೀ ವಾಣಿಯನ್ನೇ ಶ್ರೀಯವರಿಗೆ ಅನ್ವಯಿಸಲಾಗಿದೆ. ಶ್ರೀಯವರ ರಾಜಭಕ್ತಿ, ಬಿರುದು, ಉಪನ್ಯಾಸ, ಕಾವ್ಯ, ಮುಂತಾದವುಗಳನ್ನು ನಿಷ್ಪಕ್ಷಪಾತವಾಗಿ ವಿಮರ್ಶಿಸಲಾಗಿದೆ.

"ಅವರಿಗೆ ಈ ಒಣ ಬಿರುದಿನ ಮೇಲೆ ವ್ಯಾಮೋಹ ಏತಕ್ಕೆ ಬಂತು, ಸರಸ್ವತಿಗೆ ಮತ್ತು ಜನತಾ ಜನಾರ್ದನನಿಗೆ ಮಾಡಿದ ಸೇವೆಗೆ 'ರಾಜಸೇವೆ' ಎಂದು ಹೆಸರಿಡಬಹುದೆ? ಇಂಥವರು ದಿವಾನರ ಅನುಚರರಾಗಿ ಅವರೊಡನೆ ಊರೂರು ಸುತ್ತಬೇಕೇ?"

(ಅದೇ ಪುಟ 76–77)

ಇದೇ ವಿಚಾರವನ್ನು ಸಮರ್ಥನೆ ಮಾಡುವ ಒಂದು ಪತ್ರವನ್ನು ತೀ.ನಂ.ಶ್ರೀಯವರಿಗೆ ಬರೆದಿದ್ದರು. ಅದರಲ್ಲಿಯೂ ಸಹ ಶ್ರೀಯವರ ಕೆಲವು ಆತ್ಮ ಪ್ರತ್ಯಯಗಳಿಂದ ತುಂಬಾ ನೊಂದುಕೊಂಡಿದ್ದನ್ನು ಸೂಚಿಸಿದ್ದರು. ಮೂರ್ತಿರಾಯರ ಮಾತಿನಲ್ಲಿಯೇ ಹೇಳಬೇಕಾದರೆ ಅವರ 'ಪ್ರತಿಷ್ಠಾ ಪೂಜಕತೆ' ಮೂರ್ತಿರಾಯರಿಗೆ ಸೇರುತ್ತಿರಲಿಲ್ಲ. ಕಾರಣ ಅವರಿಗೆ ಶ್ರೀಯವರ ಸ್ಥಾನ, ಯೋಗ್ಯತೆ, ವಿದ್ವತ್ತುಗಳನ್ನು ಕುರಿತು ಅಪಾರ ಗೌರವ. ಅಂತಹ ಮಹಾನುಭಾವರು ಅಂತಹ ಪ್ರಶಸ್ತಿ ಪುರಸ್ಕಾರಗಳಿಗೆ ಬಲಿಯಾಗುವರಲ್ಲ ಎಂಬ ಖೇದ ಮೂರ್ತಿರಾಯರಿಗೆ. ತಮ್ಮ ಮಾನಸಿಕ ಅಳಲನ್ನು ಮೂರ್ತಿರಾಯರು ಹೀಗೆ ವ್ಯಕ್ತ ಪಡಿಸುತ್ತಾರೆ.

"ಆತನ ಹೆಮ್ಮೆಗಿಂತ ಶ್ರೀಯವರ ನಮ್ರತೆ ಹೆಚ್ಚಾಯಿತಲ್ಲ ಎಂದು ಮನಸ್ಸಿಗೆ ನೋವಾಯಿತು. ಮಧ್ಯೆ ಒಂದೆರಡು ಸಲ ಯಾವನೋ ಕಾಲ್ಪನಿಕ ವಿರೋಧಿಯೊಬ್ಬನನ್ನು ಅವಹೇಳನ ಮಾಡಿ, ವ್ಯಂಗ್ಯವಾಗಿ ಆತನ ಕ್ಷಮೆ ಬೇಡಿ ಹೊರಟಿದ್ದರಿಂದ ಭಾಷಣ ಕಂಬಿತಪ್ಪಿ ಉರುಳಿತು"(ಚಿ.ಪ.ಪು. 205)

"ಶ್ರೀಕಂಠಯ್ಯನವರಂಥವರು ದಿವಾನರ ಪರಿವಾರದವರಾಗಿ ಏಕೆ ಹೋದರು? ಅದರಲ್ಲಿ ಸಂತೋಷ ಹೇಗೆ ಪಡೆದರು? ಇದು ನನ್ನ ಮನಸ್ಸನ್ನು ನೋಯಿಸಿತು".

(ಅದೇ ಪುಟ 207)

ಅವರ ಶಿಷ್ಯರನೇಕರಂತೆ ನಾನೂ ಎಷ್ಟೋ ಸಲ ಇವರು ಈ ಭಾಷಣ ಮಾಡುವ ಚಟಕ್ಕೆ ಏಕೆ ಬಲಿಯಾದರು? ಸೃಷ್ಟಿಯಾದ ಘಳಿಗೆಯಲ್ಲೇ ನಾಶವಾಗುವ ಈ ಭಾಷಣ

ಸೌಂದರ್ಯಕ್ಕೆ ಬದಲು ಸ್ಥಿರವಾಗಿ ನಿಲ್ಲುವ ಕಾವ್ಯ ಸೌಂದರ್ಯವನ್ನು ಸೃಷ್ಟಿಸಬಹುದಿತ್ತೇ ಎಂದುಕೊಂಡಿದ್ದೇನೆ. *(ಬಿ.ಎಂ. ಶ್ರೀಕಂಠಯ್ಯ 1982 ಪುಟ 13)*

ಮೂರ್ತಿರಾಯರು ಇಷ್ಟು ವಸ್ತುನಿಷ್ಠವಾಗಿ ಬರೆದರು ಶ್ರೀಯವರ ಬಗ್ಗೆ. ಆದರೆ ಹಲವರು ಅವರ ಮೇಲಿನ ಅಭಿಮಾನದಿಂದ ಗೌರವದಿಂದ ವ್ಯಕ್ತಿನಿಷ್ಠವಾಗಿ ಬರೆದರು. ನಿದರ್ಶನಾರ್ಥವಾಗಿ ಈ ಕೆಳಗಿನ ಉಲ್ಲೇಖಗಳು ಗಮನಾರ್ಹ.

"ಅದರಲ್ಲಿ ವಿಮರ್ಶೆಯ ಸಾರಸತ್ವವಿರುತ್ತಿತ್ತು. ಎಂಥವರ ಹೃದಯವನ್ನೂ ಕರಗಿಸುವ ಮೋಡಿ ಇರುತ್ತಿತ್ತು. ಆಳವಾದ ಅನುಭವವನ್ನು ಹೃದ್ಯವಾಗಿ ವ್ಯಕ್ತಪಡಿಸಬಲ್ಲ ವಾಕ್ ಸಾಮರ್ಥ್ಯ ಅವರಲ್ಲಿದ್ದಿತು". (ಅದೇ ಪುಟ 25)

"ಇಂಗ್ಲೀಷ್‌ನಲ್ಲಿ ಹೇಗೋ ಹಾಗೆ ಕನ್ನಡದಲ್ಲಿ, ಕನ್ನಡದಲ್ಲಿ ಹೇಗೋ ಹಾಗೆ ಇಂಗ್ಲೀಷ್‌ನಲ್ಲಿ ಅವರ ವಾಕ್ ಪ್ರವಾಹ ನಿರರ್ಗಳವಾಗಿ, ಅಸ್ಖಲಿತವಾಗಿ, ಲಲಿತ ಮನೋಹರವಾಗಿ ಮುಂದುವರಿಯುತ್ತಿತ್ತು. ಅಂಥ ವಾಕ್ ಪ್ರಭುತ್ವ ಒಂದು ದೈವದತ್ತ ವರ, ಸರಸ್ವತೀ ಪ್ರಸಾದ, ಕನ್ನಡ ಇಂಗ್ಲಿಷ್ ಎರಡು ಭಾಷೆಗಳ ಮೇಲೂ ಅಂಥ ಪ್ರಭುತ್ವವನ್ನು ಪಡೆದವರು, ಸಭಿಕರನ್ನು ಒಂದು ಬಗೆಯ ಸಮ್ಮೋಹನಕ್ಕೆ ಒಳಪಡಿಸಬಲ್ಲವರು, ಎರಡು ಗಂಟೆ ಮೂರು ಗಂಟೆ ಶ್ರೋತೃಗಳನ್ನು ಮಂತ್ರಮುಗ್ಧರಂತೆ ಸೆರೆಹಿಡಿಯಬಲ್ಲವರು ಅವರಿಗೆ ಮೊದಲು ಕರ್ನಾಟಕದಲ್ಲಿ ಯಾರೂ ಇರಲಿಲ್ಲ. ಅವರ ನಂತರವೂ ಬರಲಿಲ್ಲ. ಅಂಥ ವಾಕ್ ಪರಿಣತಿ ಅವರದ್ದಾಗಿತ್ತು". (ಅದೇ ಪುಟ 26)

"ಅಪ್ರಯತ್ನವೆಂಬಂತೆ, ಯಾವ ಅಡೆತಡೆಯೂ ಇಲ್ಲದೆ ಹೊಮ್ಮುತ್ತಿದ್ದ ಮಾತಿನ ಪ್ರಸಾದ ಗುಣ, ಆಯ್ದುಕೊಂಡ ವಿಷಯವನ್ನು ವಿವರವಾಗಿ ವಿಸ್ತರಿಸುವ ರೀತಿ ಅದ್ವಿತೀಯವಾಗಿರುತ್ತಿದ್ದವು. ಅವರ ಭಾಷಣಗಳ ರೀತಿ ಅವರದೇ ಎಂದು ಹೇಳದೆ ವಿಧಿಯಿಲ್ಲ."

*(ಬಿ.ಎಂ. ಶ್ರೀ ಬದುಕು ಬರೆಹ – ವಿ.ಎಂ. ಇನಾಂದಾರ್ 1983 ಪುಟ 27)*

"ಎಲ್ಲೆಲ್ಲೂ ಜನ, ಜನರು ಉತ್ಸುಕತೆಯಿಂದ ಭಾಷಣ ಕೇಳಿದರು. ಹಲವಾರು ಕವನಗಳನ್ನು ಹೇಳಿ ಭಾಷಣ ಮಾಡುತ್ತಿದ್ದರೆ, ಬೆರಗಾಗಿ ಕೇಳುತ್ತಿದ್ದರು. ಶ್ರೀಯವರ ಭಾಷಣ ಕಲೆ ನಿಜಕ್ಕೂ ಅದ್ಭುತ, ಜನ ಸಂತೋಷಗೊಂಡರು."

*(ಕನ್ನಡದ ಕಣ್ವ ಬಿ.ಎಂ. ಶ್ರೀ.– ಹೋ. ಶ್ರೀನಿವಾಸಯ್ಯ 1984 ಪುಟ 22)*

"ಯಾವುದನ್ನು ಕುರಿತು ಮಾತನಾಡಿದರೂ ಇಂಗ್ಲೀಷ್‌ನಲ್ಲಿ ಹೇಗೆ ಧಾರಾಳವಾಗಿ ವಿದ್ವತ್ಪೂರ್ಣವಾಗಿ ಮಾತನಾಡಬಲ್ಲವರಾಗಿದ್ದರೊ, 'ಕನ್ನಡದಲ್ಲಿಯೂ ಹಾಗೇ- ಇನ್ನಷ್ಟು ಸರಸವಾಗಿ, ನುಣುಪಾಗಿ, ತಿಳಿಯಾಗಿ, ನಿರರ್ಗಳವಾಗಿ, ನುಡಿಯಬಲ್ಲವರಾಗಿದ್ದರು. ಅವರ ಕನ್ನಡದ ಭಾಷಣವನ್ನು ಕೇಳುವುದು ಒಂದು ದೊಡ್ಡ ಭಾಗ್ಯ, ಹಬ್ಬ. *(ಮಹನೀಯರು– ವಿ.ಸೀ. 1970 ಪುಟ 32)*

ಇವೆಲ್ಲವೂ ಅಭಿಮಾನವೇ ಹೊರತು 'ಸತ್ಯವಲ್ಲ'. ಇಂತಹ ಸಂದರ್ಭದಲ್ಲಿ ಮೂರ್ತಿರಾಯರು ಅಭಿಮಾನವನ್ನು ಬದಿಗಿರಿಸಿ, 'ಸತ್ಯ'ವನ್ನು-ಅದು ಎಷ್ಟೇ ಕಠೋರವಾಗಿರಲಿ, ಅಪ್ರಿಯವಾಗಿರಲಿ-ಹೇಳುತ್ತಾರೆ. ಇವು ಪ್ರಶಂಸಾಪರವಾದ ಮಾತು, ವಿಮರ್ಶೆಯಲ್ಲ, ವ್ಯಕ್ತಿನಿಷ್ಠ, ವಸ್ತುನಿಷ್ಠವಲ್ಲ. ಮೂರ್ತಿರಾಯರು ಯಾವುದೇ ಪೂರ್ವಗ್ರಹ ಪೀಡಿತರಾಗದೇ ನಿಷ್ಪಕ್ಷಪಾತವಾಗಿ ವಸ್ತುನಿಷ್ಠವಾಗಿ ಬರೆದ ಕಾರಣವೇ ಅದೊಂದು ನೈಜ

ವಿಮರ್ಶೆಯಾಗಿದೆ. ವಿಮರ್ಶಾತ್ಮಕ ಪ್ರಬಂಧಗಳನ್ನು ಬರೆವ ಹಾಗೆ ವಿಮರ್ಶಾತ್ಮಕ ಚಿತ್ರ ಜೀವನ ಚಿತ್ರಣವಾಗಿದೆ.

ಮೂರ್ತಿರಾಯರ 'ಷೇಕ್ಸ್‌ಪಿಯರ್' ಆಂಗ್ಲ ಕವಿ-ಕೃತಿಗಳ ವಿಮರ್ಶೆಯಾದರೆ, 'ಬಿ.ಎಂ. ಶ್ರೀಕಂಠಯ್ಯ' ಕರ್ನಾಟಕದ ವಿಖ್ಯಾತ ಕವಿಗಳೊಬ್ಬರ ಜೀವನ-ಸಾಹಿತ್ಯಕ ಸಾಧನೆಗಳನ್ನು ಕುರಿತ ಕೃತಿ. ಕನ್ನಡ-ಇಂಗ್ಲೀಷ್‌ಗಳೆರಡರಲ್ಲಿಯೂ ಬರೆದಿರುವ ಈ ಕೃತಿ ಮೂರು ವಿಭಾಗಗಳಲ್ಲಿ ಹರಿದಿದೆ. ಮೊದಲನೆಯದರಲ್ಲಿ ಜೀವನಚರಿತ್ರೆಯನ್ನು, ಎರಡನೆಯದರಲ್ಲಿ, "ವ್ಯಕ್ತಿಪರಿಸರ ಮತ್ತು ಸಮಯ"ವೆಂಬ ಶೀರ್ಷಿಕೆಯಡಿ ಅವರ ಬೋಧನಾಕ್ರಮ ಇತ್ಯಾದಿಗಳನ್ನು ಹಾಗೂ ಮೂರನೆಯ ವಿಭಾಗದಲ್ಲಿ ಶ್ರೀಯವರ ಕೃತಿಗಳ ವಿಮರ್ಶೆ ಯನ್ನು ಕೊಟ್ಟಿದ್ದಾರೆ. ಹಾಗೂ ಕೊನೆಯಲ್ಲಿ 'ನೆನಪುಗಳು' ಎಂಬ ಶೀರ್ಷಿಕೆಯಡಿ ಒಂದೆರಡು ನೆನಪುಗಳನ್ನು ಉಲ್ಲೇಖಿಸಿದ್ದಾರೆ. ಮೂರ್ತಿರಾಯರು ಶ್ರೀಯವರನ್ನು ಕುರಿತು ಕನ್ನಡದಲ್ಲಿ 114 ಪುಟಗಳ ಸ್ವತಂತ್ರ ಕೃತಿಯನ್ನು "ಚಿತ್ರಗಳು-ಪತ್ರಗಳು" ಕೃತಿಯಲ್ಲಿ 15 ಪುಟಗಳನ್ನು, ಇಂಗ್ಲೀಷ್‌ನಲ್ಲಿ 64 ಪುಟಗಳ ಸ್ವತಂತ್ರ ಕೃತಿಯನ್ನು-ಹೀಗೆ ಒಟ್ಟು 193 ಪುಟಗಳಷ್ಟು ದೀರ್ಘವಾದ ವ್ಯಕ್ತಿ ಚಿತ್ರಣವೊಂದನ್ನು ನೀಡಿದ್ದಾರೆ.

ಈ ಮೇಲೆ ಉಲ್ಲೇಖಿಸಿದ ಮೂರು ಕಡೆಗಳಲ್ಲಿಯೂ ಶ್ರೀಯವರ ವ್ಯಕ್ತಿತ್ವ, ವರ್ಚಸ್ಸು, ವಿದ್ವತ್ತು, ಬೋಧನಾ ಕ್ರಮ, ದೌರ್ಬಲ್ಯಗಳನ್ನು ಯಾವುದೇ ಅತಿಶಯೋಕ್ತಿ ಇಲ್ಲದೆ ದಾಖಲಿಸಿದ್ದಾರೆ. ಇದರೊಂದಿಗೆ ಶ್ರೀಯವರ ಕಾಲದ ಯುಗ ಧರ್ಮ, ಶ್ರೀಯವರು ಆ ಕಾಲದಲ್ಲಿ ಎದುರಿಸಿದ ಹಲವು ಸಮಸ್ಯೆಗಳು ಅದರಿಂದ ಅವರಿಗಾದ ಮಾನಸಿಕ ಆಘಾತಗಳನ್ನು ವಿವರಿಸಿದ್ದಾರೆ. ಕೃತಿಗಳನ್ನು ವಿಮರ್ಶಿಸುವಾಗಲೂ ಸಹ ಕೊಂಚವೂ ತೂಕ ತಪ್ಪದೆ ವಿಮರ್ಶೆ ಮಾಡಿದ್ದಾರೆ. ಭಾಷಾಂತರ ರೂಪಾಂತರಗಳನ್ನು ಕುರಿತು ಹೇಳುವಾಗ ಮೂಲವನ್ನು ಆಳವಾಗಿ ಅಧ್ಯಯನ ಮಾಡಿ ಎರಡನ್ನೂ ತೌಲನಿಕ ವಾಗಿ ವಿಮರ್ಶಿಸಿದ್ದಾರೆ. ಅಂದಿನ ನವೋದಯ ಕಾಲದ ಸಾಹಿತ್ಯದ ಮೂಲಸ್ರೋತದ ಉಗಮವನ್ನು ಗುರುತಿಸಿದ ಮೂರ್ತಿರಾಯರ ದೃಷ್ಟಿಕೋನ ವಿಶಿಷ್ಟವಾದದ್ದು.

"ಈ ಶತಮಾನದ ಮೂರನೆಯ ದಶಕದಲ್ಲಿ ವಿದ್ಯಾವಂತರಾದ ಕನ್ನಡಿಗರಿಗೆ ರೋಮಾಂಚಕರವಾದ ಎರಡು ಅನುಭವಗಳು ದೊರೆತವು. ಒಂದು ಶ್ರೀಕಂಠಯ್ಯನವರ ಇಂಗ್ಲೀಷ್ ಗೀತೆಗಳನ್ನು ಓದುವ ಸುಯೋಗ, ಈ ಪದ್ಯ ಗದ್ಯಗಳೆರಡರಲ್ಲೂ ಹೊಚ್ಚ ಹೊಸದಾದ ಕನ್ನಡ, ಅದರ ಸರಳತೆ, ಲಾಲಿತ್ಯ, ಮಾಧುರ್ಯ, "ನಮ್ಮ ಅನುಭವ ವನ್ನೇ ಇವರು ಹೇಳುತ್ತಿದ್ದಾರೆ, ಎನ್ನಿಸುವಂಥ ಆತ್ಮೀಯತೆ - ಇವು ಕೊಟ್ಟ ಆನಂದ ಅಷ್ಟಿಷ್ಟಲ್ಲ.

(ಬಿ.ಎಂ. ಶ್ರೀಕಂಠಯ್ಯ 1982 ಪುಟ 35-36)

"ಶ್ರೀಯವರು 'ಕನ್ನಡದ ಕಣ್ವ' ರೆಂದೇ ಹೆಸರಾದವರು. ಅವರ ಕನ್ನಡ ಪ್ರೇಮ ಅದ್ವಿತೀಯವಾದುದು. ಇಂಗ್ಲೀಷ್ ಪ್ರಾಧ್ಯಾಪಕರಾಗಿ ಕನ್ನಡದಲ್ಲಿ ಅವರು ಬರೆದ ಕೃತಿ- ಸಂಖ್ಯೆಯ ದೃಷ್ಟಿಯಿಂದಲ್ಲ, ಗುಣಮಟ್ಟದ ದೃಷ್ಟಿಯಿಂದ-ಗಣನೀಯವಾದುದು. ಇಂತಹ ಅಸಾಮಾನ್ಯ ಕನ್ನಡ ಪ್ರೇಮಿ ಸಭೆಯೊಂದರಲ್ಲಿ ಕನ್ನಡದಲ್ಲೇ ಮಾತಾಡಬೇಕೆಂಬ ಕೂಗು ಬಂದಾಗ 'If you insist on my speaking in Kannada, I cease to be the President of your association' ಎಂದು ತಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸಿದರಂತೆ.

ಅದೂ ಕನ್ನಡ ಸಂಘದ ಉದ್ಘಾಟನೆಯನ್ನು ಮಾಡುವಾಗ, ಕನ್ನಡ ಸಂಘದ ಅಧ್ಯಕ್ಷರಾಗಿ. ಹೀಗೆ ಹೇಳಿ ತಮ್ಮ ಉದ್ಘಾಟನಾ ಭಾಷಣವನ್ನು ಇಂಗ್ಲೀಷ್‌ನಲ್ಲೇ ಆರಂಭಿಸಿ, ಇಂಗ್ಲೀಷ್‌ನಲ್ಲಿಯೇ ಮುಗಿಸಿದರು.”

*(Mysore in the twenties - The Literary scene Page 1)*



## 5.4 ಚಿತ್ರಗಳು - ಪತ್ರಗಳು

1978ರಲ್ಲಿ ಪ್ರಕಟವಾದ ಈ ಕೃತಿ ಮೂರ್ತಿರಾಯರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ತಂದುಕೊಟ್ಟಿತು. ಪುಸ್ತಕದ ಹೆಸರೇ ಸೂಚಿಸುವಂತೆ ಇದು ಎರಡು ವಿಭಿನ್ನ ಆದರೆ ಪರಸ್ಪರ ಪೂರಕ ಸಾಹಿತ್ಯಕ ಪ್ರಕಾರಗಳ ಸಂಗಮ. 334ಪುಟಗಳಲ್ಲಿ 185ಪುಟಗಳು ಮೂರ್ತಿರಾಯರು ಕಂಡ ಹಿರಿತನದ ಅಭಿವ್ಯಕ್ತಿ ಇದೆ. ಉಳಿದ ಪುಟಗಳು ಅವರು ಬರೆದ ಪತ್ರಗಳು.

ಮೊದಲ ಭಾಗದಲ್ಲಿ ಹನ್ನೆರಡು ವ್ಯಕ್ತಿ ಚಿತ್ರಣಗಳಿವೆ. ಒಂದೊಂದು ವ್ಯಕ್ತಿ ಚಿತ್ರವೂ ಒಂದೊಂದು ಬೃಹತ್ ಚರಿತ್ರೆಗೆ ವಸ್ತುವಾಗುವ ಅರ್ಹತೆಯುಳ್ಳವು. ಇವುಗಳಲ್ಲಿ ಇವರ ಗುರುಗಳು, ಮಿತ್ರರು, ಹಿರಿಯರು ಇದ್ದಾರೆ. ಒಬ್ಬೊಬ್ಬರ ವ್ಯಕ್ತಿತ್ವ, ವಿದ್ವತ್ತು, ವೈಶಿಷ್ಟ್ಯ ಒಂದೊಂದು ಬಗೆ. ಮೂರ್ತಿರಾಯರು ಈ ಹನ್ನೆರಡು ವ್ಯಕ್ತಿಗಳೊಂದಿಗೆ ಒಂದಲ್ಲ ಒಂದು ಬಗೆಯ ಸಂಬಂಧ ಹೊಂದಿದವರು. ಅವರ ಅಭಿರುಚಿ, ವೈಯಕ್ತಿಕ, ಆಡಳಿತಾತ್ಮಕ ವೃತ್ತಿಪರವಾದ ಸಂಸ್ಕಾರ, ದಕ್ಷ ವಿನೋದ ಹಾಸ್ಯಪ್ರಜ್ಞೆ, ವಿದ್ವತ್ತು ಪಾಂಡಿತ್ಯಗಳ ಒಂದು ಮಿಂಚು ನೋಟ ಇದೆ. ಮೂರ್ತಿರಾಯರು ಇವೆಲ್ಲವನ್ನು ಪ್ರತ್ಯಕ್ಷ ಕಂಡವರು. ಅವರ ಸಾಕ್ಷ್ಯರೂಪ ಬರಹವಾದ ಕಾರಣ ಇದೊಂದು ಅಧಿಕೃತ ದಾಖಲೆ. ಇಲ್ಲಿ ಮೂರ್ತಿರಾಯರ ಗುರುಗಳು, ಸ್ನೇಹಿತರು, ಸಹೋದ್ಯೋಗಿಗಳು ಇದ್ದಾರೆ. ತಮ್ಮ ಅಭಿಮಾನಕ್ಕೆ ಪಾತ್ರರಾದ ಮಾತ್ರಕ್ಕೆ ಯಾವುದೇ ಅತಿಶಯೋಕ್ತಿಯೂ ಇಲ್ಲದೆ, ವೈಭವೀಕರಣವೂ ಇಲ್ಲದೆ ಯಥಾವತ್ತಾದ ವಾಸ್ತವಿಕ ಚಿತ್ರಣ ನೀಡಿರುವುದು ಮೂರ್ತಿರಾಯರ ವೈಶಿಷ್ಟ್ಯ. ತಮ್ಮ ಮಿತಿಯಲ್ಲಿ ಪರಿಪೂರ್ಣವೆನಿಸುವ ಪ್ರತಿಯೊಂದು ವ್ಯಕ್ತಿ ಚಿತ್ರಣವೂ ಪಾರಸ್ಪರಿಕವಾದ ಸಂಬಂಧವಿರುವಂತಹದು. ಈ ಹಿರಿಯರು ಮೂರ್ತಿರಾಯರ ಕಣ್ಣಿನಲ್ಲಿ ಹೇಗೆ ಕಾಣುತ್ತಾರೆ, ಎಂಬುದಷ್ಟೆ ಅಲ್ಲ, ಇತರ ಹಿರಿಯರು ಈ ಹಿರಿಯರನ್ನು ಹೇಗೆ ಕಂಡಿದ್ದಾರೆ ಎಂಬುವುದೂ ಅಷ್ಟೇ ಮುಖ್ಯ. ಡಿ.ವಿ.ಜಿ. ಯವರ ದೃಷ್ಟಿಯಲ್ಲಿ ರಾಧಾಕೃಷ್ಣನ್‌ರವರ ರಾಜಕೀಯ ಪ್ರವೇಶ (23). ವಾಡಿಯಾ ದೃಷ್ಟಿಯಲ್ಲಿ ಮ್ಯಾಕಿಂಟಾಷ್(35). ರಾಲೋ ದೃಷ್ಟಿಯಲ್ಲಿ ಬಿ.ಎಂ.ಶ್ರೀಕಂಠಯ್ಯನವರು (66). ಹೆಚ್.ಸಿ. ಕವನೀಪತಿ ಭಟ್ಟರ ದೃಷ್ಟಿಯಲ್ಲಿ ತೀ.ನಂ.ಶ್ರೀ (107). ಡಿ.ಎಲ್.ಎನ್. ಮತ್ತು ತೀ.ನಂ.ಶ್ರೀ (120). ಸೊಸೆ ಶಾಸ್ತ್ರಿ ಹಾಗೂ ಶ್ರೀ ಎಸ್.ಆರ್. ಎಸ್. ಶಾಸ್ತ್ರಿಯವರ ದೃಷ್ಟಿಯಲ್ಲಿ ತೀ. ನಂ. ಶ್ರೀ (123). ಸ್ಟಾಲಿನ್ ದೃಷ್ಟಿಯಲ್ಲಿ ರಾಧಾಕೃಷ್ಣನ್ (23). ಎನ್. ಎಸ್. ಸುಬ್ಬರಾಯರ ದೃಷ್ಟಿಯಲ್ಲಿ ಶ್ರೀ (31-32). ಮ್ಯಾಕಿಂಟಾಷ್ ದೃಷ್ಟಿಯಲ್ಲಿ ರಾಧಾಕೃಷ್ಣನ್ ಮತ್ತು ಎಂ. ಹಿರಿಯಣ್ಣ (40). ಶ್ರೀ ಮತ್ತು ರಾಲೋ ಪರಸ್ಪರರ ದೃಷ್ಟಿಯಲ್ಲಿ (65-66). ಎನ್ಸ್‌ರ ದೃಷ್ಟಿಯಲ್ಲಿ ಮ್ಯಾಕಿಂಟಾಷ್ (41-65) ಹೀಗೆ ಪರಸ್ಪರರನ್ನು ಕಂಡ, ಕಾಣುವ ದೃಷ್ಟಿಕೋನವನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಮೂರ್ತಿರಾಯರೇ ಸ್ವತಃ ಕೇಂದ್ರ ಸಾಕ್ಷಿ

ಅಂತರಗಳನ್ನು ದಾಖಲಿಸಿದ್ದಾರೆ. ರಾಧಾಕೃಷ್ಣನ್– ಸುಬ್ಬರಾಯರು (26-29) ರಾಲೋ– ರಾಧಾಕೃಷ್ಣನ್ (42–56). ಶ್ರೀ– ರಾಲೋ (68–69–82). ತೀ ನಂ. ಶ್ರೀ.– ಡಿ. ಎಲ್. ಎನ್. (95–115) ಇತ್ಯಾದಿ.

'ಚಿತ್ರಗಳು' ಎಂಬ ಶೀರ್ಷಿಕೆ ಅತ್ಯಂತ ಅರ್ಥವತ್ತಾದುದು. ಇಲ್ಲಿಯ ವ್ಯಕ್ತಿ ಚಿತ್ರಣಗಳು ಇತಿಹಾಸವಾಗದೇ ವರ್ತಮಾನವಾಗುತ್ತದೆ. ಶಬ್ದ ಚಿತ್ರಣಗಳು ಜೀವ ತಳೆದು ಕಣ್ಣ ಮುಂದೆ ಸುಳಿದಾಡುತ್ತದೆ. ನಾವು ಮೂರ್ತಿರಾಯರೊಂದಿಗೆ ಏಕೀಭವಿಸಿ ಆ ಪಾತ್ರಗಳೊಂದಿಗೆ ವ್ಯವಹರಿಸುತ್ತೇವೆ. ವಿದ್ಯಾರ್ಥಿಗಳಾಗಿ ಆ ಹಿರಿಯ ಮಹಾಮಹೋಪಾಧ್ಯಾಯರ ಸನ್ನಿಧಾನದಲ್ಲಿ ಕುಳಿತುಕೊಳ್ಳುತ್ತೇವೆ. ಅತ್ಯಂತ ಚಿತ್ರವತ್ತಾದ ಶೈಲಿಯಲ್ಲಿ ಮೂರ್ತಿರಾಯರ ವರ್ಣನೆ ಸಾಗುತ್ತದೆ. ಇಲ್ಲಿ ಬರುವ ವ್ಯಕ್ತಿಗಳ ನಡೆ, ನುಡಿ, ಬೋಧನಾಕ್ರಮ, ಹಾಸ್ಯ, ಉಡುಗೆ, ಆಡಂಬರ, ಸರಳತೆ ಇವೆಲ್ಲವೂ ಇಲ್ಲಿ ಜೀವ ತಳೆಯುತ್ತವೆ. ಗುರು–ಶಿಷ್ಯರು, ಸ್ನೇಹಿತರು, ಅಧಿಕಾರಿ-ಸಹೋದ್ಯೋಗಿಗಳು, ಮೇಲಧಿಕಾರಿ-ಅಧೀನಾಧಿಕಾರಿ ಈ ಎಲ್ಲ ಪರಸ್ಪರ ಸಂಬಂಧವೂ ಇಲ್ಲಿ ಗಣನೆಗೆ ಬರುತ್ತದೆ. ಒಂದು ಹಿತವಾದ ಪ್ರಸನ್ನವಾದ, ಆತ್ಮೀಯ ಭಾವ ಪ್ರಪಂಚ ನಮ್ಮ ಮುಂದೆ ತೆರೆದುಕೊಳ್ಳುತ್ತದೆ. ಹೀಗೆ ಅನಾವರಣಗೊಳ್ಳುವ ಲೋಕ ಬಹು ವಿಸ್ಮಯಕರವಾದುದು. 'ಮಹಾರಾಜ ಕಾಲೇಜಿನ ಕಾಮನ್ ರೂಂ' ಅನ್ನು ನಾವು ಪ್ರವೇಶಮಾಡಿ ಅಲ್ಲಿ ಆಸೀನರಾದ, ಅಧ್ಯಯನಮಗ್ನರಾದ ಶಿಕ್ಷಕರನ್ನು ನೋಡುತ್ತೇವೆ.

ರೆವರೆಂಡ್ ಆರ್. ಡಬ್ಲ್ಯು. ಬೂಟ್‌ರವರ ಬೋಧನಾರಮ್ಯತೆಯನ್ನು ಹಾಗೂ ಪರಿಣಾಮಕಾರೀ ಬೋಧನಾಕ್ರಮವನ್ನು ಮೂರ್ತಿರಾಯರು ಅತ್ಯಂತ ಚಿತ್ರವತ್ತಾಗಿ ವರ್ಣಿಸುತ್ತಾರೆ.

"ಅವರ ಬಲಗೈ pinnace ಆಗಿ ಮಾರ್ಪಟ್ಟಿತು. ಹಕ್ಕಿಯ ರೆಕ್ಕೆಗಳಂತೆ flutter ಮಾಡುತ್ತಾ ದೂರದಿಂದ (from far away) ಹತ್ತಿರಕ್ಕೆ ಬಂತು. ಅವರ ಕಣ್ಣೋಟ ಕೈಯನ್ನು ಹಿಂಬಾಲಿಸಿತು. ದೀರ್ಘಸ್ವರ ಭಾವಕ್ಕೆ ಪುಷ್ಟಿಕೊಟ್ಟಿತು, ಕೊನೆಯ ಪಂಕ್ತಿಯಲ್ಲಿರುವ ಉದ್ವೇಗ ದನಿಯಲ್ಲಿ ಅಭಿವ್ಯಕ್ತಿ ಪಡೆಯಿತು. ಅವರ ಪ್ರವಚನದಲ್ಲಿ ಭಾವಾನುಭವಕ್ಕೆ ಪ್ರಾಧಾನ್ಯ" (ಪುಟ 6)

ಹಿರಿಯರ ವ್ಯಕ್ತಿತ್ವದಲ್ಲಿ ಕಾಲಾನುಕ್ರಮ ಕಾಲೋಚಿತವಾದ ಅನಿವಾರ್ಯ ದೋಷವೋ ದೌರ್ಬಲ್ಯವೋ ಉಂಟಾದುದನ್ನು ಹೇಳುವಾಗಲೂ ಸಹ ಬಹಳ ನಮ್ರತೆ ಬೆರೆತ ಗೌರವ ಪೂರ್ವಕ ಧ್ವನಿಯಿಂದಲೇ ಹೇಳಿದ್ದಾರೆ. ಅಪ್ರಿಯ ಸತ್ಯವನ್ನು ಬಹು ಮೃದುವಾಗಿ ಹೇಳುವ ಮೂರ್ತಿರಾಯರು ಈ ಹಿರಿಯರ ವ್ಯಕ್ತಿತ್ವಕ್ಕೆ ಗೌರವ ನೀಡಿ ನಮ್ಮ ಗೌರವಕ್ಕೂ ಪಾತ್ರರಾಗುತ್ತಾರೆ.

"ಕೊನೆಕೊನೆಗೆ ಅವರಿಗೆ ಸ್ವಲ್ಪ, ಎಲ್ಲೋ ಸ್ವಲ್ಪ ವಾಸ್ತವ ಪ್ರಪಂಚಕ್ಕೆ ದೂರವಾದ ಭ್ರಮೆ ಬರುತ್ತಿತ್ತೋ ಏನೋ, ಹೇಳಲಾರೆ. ....ಭಾರತಕ್ಕೆ ಸ್ವಾತಂತ್ರ್ಯ ಬಂದದ್ದನ್ನು ಬಹುಶಃ ಅವರು ಕಾಣಲಿಲ್ಲ". (ಪುಟ 9)

ಶ್ರೀ ಡಿ. ಎಸ್. ಮೂರ್ತಿಯವರ ವ್ಯಕ್ತಿ ಚಿತ್ರಣ ಕೇವಲ ಒಂದು ಜೀವನ ಚರಿತ್ರಾತ್ಮಕ ಲೇಖನಕ್ಕೆ ಮೀಸಲಾಗಿರದೆ ಇಂಗ್ಲೀಷ್ ಕಾವ್ಯ ವಿಮರ್ಶೆಗೂ ಎಡೆ ಕೊಡಲಾಗಿದೆ. ಷೇಕ್ಸ್‌ಪಿಯರ್‌ನ The Merchant of Venice , Mid Summer

Nights Dream. ಟೆನಿಸನ್‌ನ Lotus-Eaters. Ulysses ಟೆನಿಸನ್ ಮತ್ತು ಷೇಕ್ಸ್‌ಪಿಯರ್ ನಡುವಣ ಅಂತರ- ಈ ಮುಂತಾದ ಭಾಗಗಳ ವಿಮರ್ಶೆಯನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಅವರ ಕನ್ನಡ ಸಂಗೀತ ಪ್ರೇಮ ಮೂರ್ತಿರಾಯರಿಗೆ ಚಿರಸ್ಮರಣೀಯ. ಅವರು ತಮ್ಮ ಮೇಲೆ ಬೀರಿದ ಪ್ರಭಾವವನ್ನು ಮೂರ್ತಿರಾಯರು ಈ ಒಂದು ಮಾತಿನಲ್ಲಿ ಹಿಡಿದಿಟ್ಟಿದ್ದಾರೆ.

"ಅವರಿಂದ ನನಗೆ ದೊರೆತದ್ದು ನಿಷ್ಕೃಷ್ಟವಾದ ಜ್ಞಾನವಲ್ಲ, ಸಾಹಿತ್ಯಾಸ್ವಾದನೆಗೆ ಅವಶ್ಯಕವಾದ ಮನೋಧರ್ಮ." (ಪುಟ 14)

ಡಾ. ಎಸ್. ರಾಧಾಕೃಷ್ಣನ್‌ರವರ ಶಿಷ್ಯನಾಗಬೇಕೆಂದೇ ತತ್ವಶಾಸ್ತ್ರವನ್ನು ಮೂರ್ತಿರಾಯರು ಆರಿಸಿಕೊಂಡರು.

"ಅದಕ್ಕೆ ಕಾರಣ ಅಷ್ಟಾಗಿ ತತ್ವಶಾಸ್ತ್ರದ ಮೇಲಿನ ಪ್ರೀತಿಯಲ್ಲ. ಅದರ ವಿಷಯ ನನಗೆ ಏನೇನೂ ತಿಳಿಯದು. ನಿಜವಾದ ಕಾರಣ ರಾಧಾಕೃಷ್ಣನ್ ಅದರ ಪ್ರಾಧ್ಯಾಪಕರಾಗಿದ್ದರೆಂಬುದು". (ಪುಟ 17)

ಎಂದು ಅವರು ಮುಕ್ತ ಮನಸ್ಸಿನಿಂದ ತಮ್ಮ ಅಂತರ್ಯವನ್ನು ಬಹಿರಂಗ ಪಡಿಸಿದ್ದಾರೆ. ಅವರು ಕಂಡ ರಾಧಾಕೃಷ್ಣನ್‌ರವರ ಬಾಹ್ಯರೂಪದ ಒಂದು ಸಂಕ್ಷಿಪ್ತವಾದರೂ ಸಮಗ್ರ ಶಬ್ದ ಚಿತ್ರಣ ಹೀಗಿದೆ.

"ಎತ್ತರವಾದ ನಿಲುವು, ಬಿಸ್ಕತ್ ಬಣ್ಣದ ರೇಷ್ಮೆಯ ನಿಲುವಂಗಿ, ಶುಭ್ರವೂ, ನಿರಾಡಂಬರವೂ ಆದ ಬಿಳಿಯ ಪಂಚೆ ಮತ್ತು ರುಮಾಲು (ಅವಕ್ಕೆ ಜರತಾರಿಯ ಕಳಂಕ ಎಂದೂ ಬಂದಿದ್ದಿಲ್ಲ) ಗಂಟಿಕ್ಕಿದಂತಿರುವ, ಆದರೆ, ಕೋಪಸೂಚಕವಲ್ಲದ ಹುಬ್ಬು, ಯಾವುದೋ ಸಮಸ್ಯೆಯ ಒಳಹೊಗುವಂತಿರುವ ಕಣ್ನೋಟ, ಮುಗುಳುನಗೆಯ ಸುಳಿವು."

(ಪುಟ 17,18)

ಇಂತಹ ಶಬ್ದ ಚಿತ್ರಗಳು ಎಲ್ಲಾ ವ್ಯಕ್ತಿಗಳ ಬಗ್ಗೆಯೂ ದೊರಕುತ್ತವೆ. ವ್ಯಕ್ತಿಗಳ ಬಾಹ್ಯ ಹಾಗೂ ಅಂತರಂಗಿಕ ವ್ಯಕ್ತಿತ್ವಗಳೆರಡೂ ಮೂರ್ತಿರಾಯರು ಹೀಗೆಯೇ ಚಿತ್ರಿಸುತ್ತಾರೆ. ಈ portrait galleryಯಲ್ಲಿ ಮಂಡಿತರಾದ ಪಂಡಿತರ ಒಳಹೊಕ್ಕು ಅಲ್ಲಿರುವ ಅವರ ಅಮೂರ್ತ ವ್ಯಕ್ತಿತ್ವವನ್ನು ಅವರು ಮೂರ್ತ ಸ್ವರೂಪದಿಂದ ನಮ್ಮ ಮುಂದೆ ಅನಾವರಣಗೊಳಿಸುತ್ತಾರೆ. ರಾಧಾಕೃಷ್ಣನ್‌ರವರ ಉಪನ್ಯಾಸವನ್ನು 'ಅಮೃತ ಧಾರೆ' ಎಂದು ಕರೆದಿರುವ ಮೂರ್ತಿರಾಯರು ಹೀಗೆ ಬರೆದಿದ್ದಾರೆ.

"ಅವರಂತೆ ಸಮಸ್ಯೆಯ ಹೃದಯಕ್ಕೆ ನೇರವಾಗಿ ನುಗ್ಗಿ ಆ ಕೇಂದ್ರದಿಂದ ವಿಚಾರ ಪುಷ್ಪವನ್ನು ಅರಳಿಸುವ ಶಕ್ತಿಯುಳ್ಳವರು ಅಪರೂಪ. ರಾಧಾಕೃಷ್ಣನ್‌ರು ಕೇವಲ ಉಪನ್ಯಾಸಕರಲ್ಲ, ಇಂದ್ರಜಾಲಿಕರು". (ಪುಟ 18)

ಎಂದು ಅವರ ಉಪನ್ಯಾಸಕಲೆಯನ್ನೂ ಅದರ ಪರಿಣಾಮವನ್ನು ಪ್ರಶಂಸಿಸುತ್ತಾರೆ. ಆದರೆ ಆ ಉಪನ್ಯಾಸ ಕಲೆಯ ಇನ್ನೊಂದು ಮುಖವನ್ನು ಮೂರ್ತಿರಾಯರು ಸ್ವಾನುಭವಪೂರ್ವಕವಾಗಿ ವಿಶ್ಲೇಷಿಸುತ್ತಾರೆ.

ಅವರ ಪ್ರವಚನದ ಲಾಲಿತ್ಯ ಕೆಲವು ವೇಳೆ ದೋಷವಾಗಿ ಪರಿಣಮಿಸುತ್ತಿತ್ತು.

(ಪುಟ 19)

ಆ 'ದೋಷ'ವೆನಿಸಬಹುದಾದ ರಾಧಾಕೃಷ್ಣನ್‌ರವರ ಪ್ರತಿಭೆಯನ್ನು ಗುರುತಿಸುತ್ತಾರೆ. ರಾಧಾಕೃಷ್ಣನ್‌ರವರ ಶಿಷ್ಯರು ಅವರ ಉಪನ್ಯಾಸದಿಂದ ಸ್ವಾಧ್ಯಾಯ ಎಲ್ಲಿದೆಯೋ ಅರಿಯುವ ಎತ್ತರಕ್ಕೆ ಏರಿದರು. ಇದಕ್ಕಿಂತ ಸೊಗಸಾದ ಉಪನಿಷತ್ತಿನ ಉಪಮೆಯನ್ನು ಅವರು ಕೊಡುತ್ತಾರೆ.

" 'ತಪಸಾ ಬ್ರಹ್ಮ ವಿಜಿಜ್ಞಾಸಸ್ವ' 'ತಪೋಬ್ರಹ್ಮ ಇತಿ ಹೇಳುವ ಬದಲು ಬ್ರಹ್ಮದ ಸ್ವರೂಪ ಇದು' ಎಂದು ಹೇಳಿಬಿಟ್ಟರು....... ಅದಕ್ಕೆ ಶಿಷ್ಯರೇ ಜವಾಬ್ದಾರರೆನ್ನುವುದೂ ಸಾಧ್ಯ". (ಪುಟ 19)

ಈ ವಿಷಯವನ್ನು ಎರಡು ಮಗ್ಗಲುಗಳಿಂದ ಗಮನಿಸುತ್ತಾರೆ. ಹೇಳಬೇಕಾದ್ದನ್ನು ಸಹ ಬಹಳ ನಮ್ರತೆ, ಸಂಕೋಚಗಳಿಂದ ಹೇಳುತ್ತಾರೆ. ಹೀಗೆ ಹೇಳುವಾಗಲೂ ತಮ್ಮ ಮಾತೇ ಕೊನೆಯ ಮಾತು, ಕಾರಣ ತಾನು ಅವರ ಶಿಷ್ಯ. ಆದ್ದರಿಂದ ಅವರನ್ನು ಚೆನ್ನಾಗಿ ಬಲ್ಲೆ. ಎಂಬ ಯಾವುದೇ ತೀರ್ಪನ್ನು ನೀಡುವ ನ್ಯಾಯಾಧೀಶರ ಕೆಲಸ ಅವರು ಮಾಡುವುದಿಲ್ಲ. ಬದಲು ಹೀಗೆಂದಿದ್ದಾರೆ.

"ಈ ಮಾತನ್ನು ಬಹಳ ಹಿಂಜರಿಕೆಯಿಂದ ಹೇಳುತ್ತಿದ್ದೇನೆ. ನನ್ನ ಅಭಿಪ್ರಾಯ ಸರಿಯೇ ಎಂಬ ವಿಷಯದಲ್ಲಿ ನನಗೇ ಸಂದೇಹವಿದೆ". (ಪುಟ 19) ಎಂಬ ನಮ್ರ ವಾಣಿಯನ್ನೇ ಮುಂದಿರಿಸುತ್ತಾರೆ. ಡಾ. ರಾಧಾಕೃಷ್ಣನ್‌ರವರು 1921 ರಲ್ಲಿ ಕಲ್ಕತ್ತಾ ವಿಶ್ವವಿದ್ಯಾನಿಲಯಕ್ಕೆ ತತ್ವಶಾಸ್ತ್ರ ಪ್ರಾಧ್ಯಾಪಕರಾಗಿ ಹೊರಟ ದಿನದ ಬೀಳ್ಕೊಡಿಗೆಯನ್ನು ಮೂರ್ತಿರಾಯರು ಕೊಡುವ ಪೀಠಿಕೆ ಹಾಗೂ ನಿರೂಪಣೆಗಳಲ್ಲಿ ನಾವೂ ಸೇರಿ ಹೋಗುತ್ತೇವೆ. ಈ ವಿವರಣೆ, ವರ್ಣನೆ, ಚಿತ್ರ ಅತ್ಯಂತ ಚಿತ್ರವತ್ತಾಗಿದ್ದು ಅಖಂಡ ಅಪೂರ್ವ ಚಿತ್ರ ನಮ್ಮ ಕಣ್ಣ ಮುಂದೆ ಬಂದು ನಿಲ್ಲುತ್ತದೆ.

"ಅವರಿಗೆ ಕೊಟ್ಟಂಥ ವೈಭವದ ಬೀಳ್ಕೊಡಿಗೆ ಯಾವ ಚಕ್ರವರ್ತಿಗೂ ದೊರೆತಿರಲಾರದು. ಅಥವಾ ವೈಭವ ಎಂಬ ಪದ ಸರಿಯಲ್ಲ. ಅಂದಿನ ವಾತಾವರಣದಲ್ಲಿದ್ದದ್ದು ವೈಭವಕ್ಕಿಂತ ಹೆಚ್ಚಾಗಿ ಹೃದಯದಿಂದ ನೇರವಾಗಿ ಹೊರಹೊಮ್ಮಿದ ಗುರುಭಕ್ತಿ. ಗುರುಪ್ರೇಮ ಹಾಗೆ ಹೊರಹೊಮ್ಮುವುದಕ್ಕೆ ಯಾರ ನೇತೃತ್ವವೂ ಬೇಕಾಗಿಲ್ಲ, ಯಾರ ಪ್ರೇರಣೆಯೂ ಬೇಕಾಗಿಲ್ಲ. ಬೀಳ್ಕೊಡಿಗೆ ವ್ಯವಸ್ಥೆಯನ್ನು ಹೀಗೆ ಮಾಡಬೇಕು ಎಂದು ಯಾರೂ ಯೋಚಿಸಿದಂತೆ ಸಹ ಕಾಣಲಿಲ್ಲ. ಭಕ್ತಿ ಪ್ರೇಮಗಳ ಚಿಲುಮೆ ಹಠಾತ್ತಾಗಿ ಕಾಲೇಜಿನ ವಿದ್ಯಾರ್ಥಿಗಳೆಲ್ಲರಲ್ಲೂ ಉಕ್ಕಿ ಬಂತು". (ಪುಟ 21)

ಈ ಉಪೋದ್ಘಾತನ ವಿಸ್ತರಣೆಯು ಅತ್ಯಂತ ಚಿತ್ರವತ್ತಾಗಿದೆ. ಸಹಜವಾಗಿದೆ. ಅವರ ಸಹಜ ಸರಳ ಶೈಲಿಗೆ ಒಂದು ನಿದರ್ಶನ. ಅವರು ಉಪಯೋಗಿಸಿದ 'ಚಿಲುಮೆ' ಎಂಬ ಉಪಮೆ ನಮ್ಮೆದುರೇ ಪುಟಿದಂತೆ ಭಾಸವಾಗುತ್ತದೆ.

ಸುಬ್ಬರಾಯರನ್ನು ರಾಧಾಕೃಷ್ಣನ್‌ರವರಿಗೆ ಮೂರ್ತಿರಾಯರು ಹೋಲಿಸುವ ಶೈಲಿ ಅತ್ಯಂತ ಸರಳವಾದುದು, ಆದರೆ ಅಷ್ಟೇ ಶಕ್ತಿಯುತವಾದುದು.

"ರಾಧಾಕೃಷ್ಣನ್ ಇಲ್ಲಿ ಹೆಸರು ಮಾಡಿ ಇಂಗ್ಲೆಂಡಿಗೆ ಹೋದರು. ಸುಬ್ಬರಾಯರು ಇಂಗ್ಲೆಂಡಿನಲ್ಲಿ ಹೆಸರು ಮಾಡಿ ಇಲ್ಲಿಗೆ ಬಂದರು" (ಪುಟ 26) ಯಾರನ್ನೇ ಆಗಲಿ ಯಾವ ಘಟನೆಯನ್ನೇ ಆಗಲಿ ವಿಶ್ಲೇಷಿಸುವಾಗ ಮೂರ್ತಿರಾಯರು ವಾಗಾಡಂಬರವನ್ನು ಪ್ರದರ್ಶಿಸುವವರಲ್ಲ. ಅವರಲ್ಲಿ ವಚೋವಿಲಾಸವನ್ನು ನಾವು ನಿರೀಕ್ಷಿಸುವಂತಿಲ್ಲ. ಆದರೆ

ಪಾಟೀಲವಿಧೇಯತೆಯನ್ನು ನಾವು ಧಾರಾಳವಾಗಿ ಕಾಣಬಹುದು. ಇಲ್ಲಿಯೂ ಸಹ ನಾವು ಇದೇ ಪರಿಯನ್ನು ಕಾಣುತ್ತೇವೆ. ಈ ಎರಡು ವ್ಯಕ್ತಿತ್ವಗಳ ಎರಡು ದ್ವಂದ್ವಗಳನ್ನು ಬಹು ಸಮರ್ಥವಾದ ರೀತಿಯಲ್ಲಿ ತೂಗಿ ನೋಡಿದ್ದಾರೆ. ಯಾವುದೇ ಕಾವ್ಯಾಲಂಕಾರ ವಿಶೇಷಣಗಳೂ ಇಲ್ಲದೆ ಅತ್ಯಂತ ನಿರಾಡಂಬರ ಶೈಲಿಯಲ್ಲಿ ಈ ಚಿತ್ರವನ್ನು ಬಿಡಿಸಿದ್ದಾರೆ.

ಹೀಗೆಯೇ 'ಮನುಷ್ಯರು ಮುಟ್ಟಿದ ಗುಬ್ಬಿ, ಮ್ಯಾಕಿಂಟಾಷರು', (35) 'ಆತ್ಮ ಸಂತೋಷಕ್ಕಾಗಿ, ಪಾಠವನ್ನು ಆತ್ಮಾನಂದದ ಗಾನವನ್ನಾಗಿಸಿದ ಪ್ರವಚನಕಾರರು, ರಸಿಕರು, ಸಹೃದಯಿಗಳು, ಒಳ್ಳೆಯ ವಿಮರ್ಶಕರೂ' ಆದ ರಾಲೋ, (69) ನಮ್ಮ ಸಾಹಿತ್ಯ ಪ್ರಾಂತ್ಯದಲ್ಲಿದ್ದ ಬಂಜರು ಭೂಮಿಯನ್ನು ನಂದನವನವಾಗಿ ಮಾರ್ಪಡಿಸುವುದರಲ್ಲಿ ಮೊದಲಿಗರಾದ, ಘನ ವಿದ್ವಾಂಸರಾದ ಶ್ರೀಯವರು (76) 'ಪರಿಪಕ್ವ' ಸಂಸ್ಕಾರವುಳ್ಳ ಮಹನೀಯರಾದ ಟಿ. ಎಸ್. ವೆಂಕಣ್ಣಯ್ಯನವರು (89), ನಿರ್ದಿಷ್ಟವಾದೊಂದು ಕ್ರಮ, ಶಿಸ್ತು, ಅಚ್ಚುಕಟ್ಟುಗಳಂತಹ ಗುಣಗಳನ್ನು ಮೈಗೂಡಿಸಿಕೊಂಡ ತೀನಂಶ್ರೀ (91). ಮೈಸೂರು ಆಕಾಶವಾಣಿಯನ್ನು ಕಟ್ಟಿ ಬೆಳೆಸಿದ ಡಾ. ಎಂ. ವಿ. ಗೋಪಾಲ ಸ್ವಾಮಿಯವರು, ಸಂಸ್ಕೃತಿ ಪ್ರಚಾರಕ್ಕಾಗಿ ದುಡಿದ ಕೆ. ಹನುಮಂತಯ್ಯನವರು ಈ ಮುಂತಾದ ಭಿನ್ನ ವ್ಯಕ್ತಿತ್ವದ ಭಿನ್ನ ವ್ಯಕ್ತಿಗಳು ನಮ್ಮ ಮುಂದೆ ಪುನಃ ಜೀವತಳೆದು ಸುಳಿಯುವಂತೆ ಬರೆದಿದ್ದಾರೆ. ಒಂದು ಭೂತಕಾಲದ ಘಟನಾವಳಿ - ಅಂದಿನ ಸಮಾಜ, ಶಿಕ್ಷಣರಂಗ, ರಾಜಕಾರಣ, ಸರ್ಕಾರಿ, ನೌಕರವರ್ಗ, ಗುರುಶಿಷ್ಯ ಸಂಬಂಧ, ಶಿಕ್ಷಕರ ಸಮರ್ಪಣ ಮನೋಭಾವ - ವರ್ತಮಾನವಾಗುತ್ತದೆ. ಅಂದಿನ ಸಾಮಾಜಿಕ ಭದ್ರತೆ ಇಂದಿನ ಸಾಮಾಜಿಕ ಶಿಥಿಲತೆ ವಿದಳನಗಳೊಂದಿಗೆ ತೂಗಿ ನೋಡುವಂತಹುದು.

ಈ ಹಿರಿಯರೊಂದಿಗೆ ಮೂರ್ತಿರಾಯರು ಅತ್ಯಂತ ನಿಕಟ ಸಂಪರ್ಕವನ್ನು ಹೊಂದಿರುವುದರಿಂದ ಒಂದು ತಾದಾತ್ಮ್ಯ ಅಲ್ಲಿ ನೆಲೆಸಿದೆ. ಆದ್ದರಿಂದಲೆ ಇದೊಂದು ಅಧಿಕೃತ ದಾಖಲೆ. ಒಂದು ಮಿತವಾದ ಪ್ರಮಾಣದಲ್ಲಿ ಮೂರ್ತಿರಾಯರು ಬರೆದರೂ ಅದೇ ಒಂದು ಹಿತವಾದ ಗರಿಷ್ಠತೆಯಲ್ಲಿ ಶೋಭಿಸುತ್ತದೆ. ಅಂತೆಯೇ ಅವರ ಈ ಕೃತಿಯಲ್ಲಿ ಇಷ್ಟೊಂದು ವಿಷಯವನ್ನು ಅಡಕಗೊಳಿಸಲು ಸಾಧ್ಯವಾಯಿತು. ಇಲ್ಲಿ ಇನ್ನೊಂದು ವೈಶಿಷ್ಟ್ಯವನ್ನೂ ನಾವು ಗಮನಿಸಬಹುದು. ಈ ಜೀವಂತ ರೇಖಾ ಚಿತ್ರಗಳೊಡನೆ ಹೆಣೆದಿರುವ ಇತರ ಎಳೆಗಳು. ಹೀಗಾಗಿ ಮೂಲಚಿತ್ರ ವರ್ಣರಂಜಿತವಾದ ಪ್ರಭಾವಳಿಗಳೊಂದಿಗೆ ಒಂದು ಆಕರ್ಷಕ ಶಿಲ್ಪವಾಗುತ್ತದೆ. ಸಾಹಿತ್ಯ ವಿಮರ್ಶೆ, ಆತ್ಮ ವಿಮರ್ಶೆ ಹಾಗೂ ಅಂದಿನ ಸಾಮಾಜಿಕ ಚಿತ್ರಣದೊಂದಿಗೆ ಈ ಚಿತ್ರಗಳ ಪ್ರಾಣ ರಕ್ತ ಮಾಂಸಗಳೊಂದಿಗೆ ಶರೀರ ಸುಕುಮಾರತೆಯನ್ನೂ ಚೆಲುವನ್ನೂ ಹೆಚ್ಚಿಸಿಕೊಂಡಿವೆ. ಮೂರ್ತಿರಾಯರ ಕೆಲವು ಶಿಕ್ಷಕರು ಸೊಗಸಾದ ವಿಮರ್ಶಕರೂ ಆಗಿದ್ದರು. ರಾಲೋ ಇಂತಹ ವರ್ಗಕ್ಕೆ ಸೇರಿದವರು. ಮೂರ್ತಿರಾಯರು ವಿಮರ್ಶಾತ್ಮಕ ಕೃತಿಗಳನ್ನು ರಚಿಸಲು ಇದೇ ಪ್ರಭಾವವೂ ಕಾರಣವಾಗಿದ್ದಿರಬಹುದು.

ಹತ್ತು ಹಲವು ಹಿರಿಯ ಹೆಗ್ಗಳಿಕೆ ಇಂದು ನಮಗೆ ತಿಳಿಯುವುದು ಇಂತಹ ಸ್ಮೃತಿಚಿತ್ರಗಳಿಂದ. ನಾವು ಒಮ್ಮೊಮ್ಮೆ ವ್ಯಕ್ತಿಗಳನ್ನು ಕಿಂವದಂತಿಗಳಿಂದ, ಅವರ ಕ್ಷೇತ್ರಗಳಿಂದ ಅಳೆಯಲು ಹೊರಡುತ್ತೇವೆ. ರಾಜಕಾರಣಿಗಳನ್ನು - ಅವರು ಎಂತಹ ರಾಜನೀತಿ ವಿಶಾರದರೇ ಇರಲಿ, ಮುತ್ಸದ್ದಿ, ವಿದ್ವಾಂಸ, ಸಮಾಜ ಸೇವಕ, ಸಜ್ಜನನೇ ಇರಲಿ -

ನಾವು ಪೂರ್ವಗ್ರಹ ಪೀಡಿತರಾಗಿಯೇ ನೋಡುತ್ತೇವೆ. ಕಾರಣ ನಾವು ಅವರನ್ನು ದೂರದಿಂದ ನೋಡುತ್ತೇವಲ್ಲದೆ ಹತ್ತಿರದಿಂದ ಕಂಡು ಅರ್ಥಮಾಡಿಕೊಳ್ಳುವ ಅನುಭವವಿರುವುದಿಲ್ಲ. ಶ್ರೀ ಕೆ. ಹನುಮಂತಯ್ಯನವರ ಬಗ್ಗೆಯೂ ನಾವು ಇದೇ ಸಿದ್ಧಾಂತವನ್ನು ಅನ್ವಯಿಸಿಕೊಳ್ಳಬಹುದು. ಅವರು ಕರ್ನಾಟಕದಲ್ಲಿ ಮಾಡಿದ ಅವಿಸ್ಮರಣೀಯವೂ ಶಾಶ್ವತವೂ ಆಗಿರುವ ಹಲವಾರು ಕೆಲಸಗಳಲ್ಲಿ ಸಂಸ್ಕೃತಿ ಪ್ರಚಾರ ಇಲಾಖೆಯೂ ಒಂದು. ಕೆ. ಹನುಮಂತಯ್ಯನವರು ಆರಂಭಿಸಿದ ಈ ಇಲಾಖೆ ಅಸ್ತಿತ್ವಕ್ಕೆ ಬರುವಲ್ಲಿಂದ ಹಿಡಿದು, ಅದು ಪೂರ್ಣ ಪ್ರಮಾಣದ ಸ್ವತಂತ್ರ ಇಲಾಖೆಯಾಗುವವರೆಗೂ ಮೂರ್ತಿರಾಯರು ಆ ಸಂಸ್ಥೆ ಹಾಗೂ ಸಂಸ್ಥಾಪಕರ ಸಮೀಪವರ್ತಿಗಳಾಗಿದ್ದವರು. ಅನಂತರ ಅದರ ಅಧ್ಯಕ್ಷರೂ ಆಗಿ ಅದರ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿದವರು. ಅದಕ್ಕೆ ಮೊದಲು ಈ ಇಲಾಖೆಯ ಕೆಲಸ ಕಾರ್ಯಗಳಲ್ಲಿ ನೆರವಾಗಲು ಏರ್ಪಡಿಸಿದ ಸಮಿತಿಯ ಸದಸ್ಯರಾಗಿದ್ದವರು. ಇಂತಹ ಒಂದು ಇಲಾಖೆಯನ್ನು ಸ್ಥಾಪಿಸುವ ಸನ್ನಾಹಗಳು ನಡೆದೊಡನೆ ಆ ಬಗ್ಗೆ ಬಂದ ಲಘುವಾದ ಟೀಕಾಸ್ತ್ರಗಳು ಮೂರ್ತಿರಾಯರ ಕಿವಿಗೆ ಬಿದ್ದದ್ದನ್ನು ಅವರು ಉಲ್ಲೇಖಿಸುತ್ತಾರೆ. ಜೊತೆಗೆ ಕೆ. ಹನುಮಂತಯ್ಯನವರನ್ನು ಹೀಗಳೆದೂ ಮಾತು ಬಂದಿದ್ದು ಇದೆ. ಮೂರ್ತಿರಾಯರು ಇದನ್ನೆಲ್ಲಾ ಬಹು ನಿರ್ಲಿಪ್ತತೆಯಿಂದ ಬರೆದಿದ್ದಾರೆ.

"ಇಂಥ ಮಾತುಗಳಲ್ಲಿ ವಿಶೇಷವೇನೂ ಇಲ್ಲ. ಎಲ್ಲರೂ ತುಳಿದು ಸಿದ್ಧವಾಗಿರುವ ದಾರಿಯನ್ನೇ ತುಳಿಯುವುದರಲ್ಲಿ ತೃಪ್ತರಾಗದೆ ಹೊಸದೊಂದು ಪ್ರಯತ್ನಕ್ಕೆ ಕೈಹಾಕು ವವರೆಲ್ಲ ಇಂಥ ಮಾತನ್ನು ಕೇಳಬೇಕಾಗುತ್ತದೆ. (ಪುಟ 171)

"ಹೀಗೆಂದವರನ್ನು ನಾವೇನೂ ಹಳಿಯಬೇಕಾಗಿಲ್ಲ. ಪ್ರಜಾಪ್ರಭುತ್ವವಿರುವಲ್ಲಿ ಇಂಥ ಟೀಕೆ ಬರುವುದು ಸ್ವಾಭಾವಿಕವೇ. ರಾಜಕೀಯ ಸರ್ಕಸ್ಸಿನಲ್ಲಿ ಇಂಥ ಲಾಗಗಳು ಅಪರೂಪವೇನಲ್ಲ". (ಪುಟ 173)

ಇದರೊಂದಿಗೆ ಇಂತಹ ಒಂದು ಶಿಕ್ಷಣದ ಅಂಗಸಂಸ್ಥೆ ಸ್ವತಂತ್ರವಾಗಿ ರೂಪು ಗೊಂಡು ಕಾರ್ಯನಿರ್ವಹಿಸಬೇಕಾದ ಅವಶ್ಯಕತೆಯನ್ನು, ಜನಮನದ ಸಂಸ್ಕಾರವನ್ನು ತಿದ್ದುವಲ್ಲಿ ಜನಮನೋಭಾವದ ಹಿನ್ನೆಲೆಯಲ್ಲಿ ಮೂರ್ತಿರಾಯರು ವಿಶ್ಲೇಷಿಸಿ ಸಮರ್ಥಿಸುವ ರೀತಿ ಅನನ್ಯವಾದುದು. ಇಂತಹ ಒಂದು ಸ್ವತಂತ್ರ ಇಲಾಖೆಯನ್ನು ಹುಟ್ಟುಹಾಕಿದ ಹಿನ್ನೆಲೆಯನ್ನೂ, ತನ್ಮೂಲಕ ಶ್ರೀ ಕೆ. ಹನುಮಂತಯ್ಯನವರ ಹಿರಿಯ ನಡವಳಿಕೆಯನ್ನೂ ನಮಗೆಲ್ಲ ಮನದಟ್ಟಾಗುವಂತೆಯೂ, ಗೌರವ ಜನಿಸುವಂತೆಯೂ ಕೆಲವೇ ಮಾತುಗಳಲ್ಲಿ ಹೇಳಿದ್ದಾರೆ. ಇಲ್ಲಿಯೂ ತನ್ನ ಅಭಿಮಾನ ಗೌರವಕ್ಕೆ ಪಾತ್ರರಾದ ಶ್ರೀ ಕೆ. ಹನುಮಂತಯ್ಯನವರನ್ನು ಕುರಿತು ಅಲಂಕಾರಿಕ ಅತಿಶಯೋಕ್ತಿ ಏನೂ ಇಲ್ಲ. ವಾಸ್ತವ ಚಿತ್ರಣವನ್ನು ಯಥಾವತ್ತಾಗಿ ಸರಳವಾಗಿ ಹೀಗೆ ಬರೆದಿದ್ದಾರೆ.

"ಶ್ರೀ ಹನುಮಂತಯ್ಯನವರೇ ಸ್ವಲ್ಪ ಹೊತ್ತು ಆ ವಿಷಯ ಮಾತಾಡಿದರು. ಸರಳತೆ, ಸೌಜನ್ಯ, ಉತ್ಸಾಹದಿಂದ ಕೂಡಿದ ಮಾತು. ನಮ್ಮನ್ನು ಕರೆಸಿದ್ದು 'ಹೀಗೆ ಮಾಡುತ್ತೇವೆ', ಎಂದು ತಿಳಿಸುವುದಕ್ಕಲ್ಲ. 'ಹೇಗೆ ಮಾಡಬೇಕು ಎಂಬುದನ್ನು ನಮ್ಮೊಡನೆ ಆಲೋಚಿಸುವುದಕ್ಕೆ', ಎಂಬ ಭಾವನೆ ಸಭಿಕರ ಮನಸ್ಸಿಗೆ ಬರುವಂತಿತ್ತು ಅವರ ಮಾತು. ಈ ಬಗೆಯ ಮರ್ಯಾದೆ ಇತ್ತೀಚಿನ ರಾಜಕೀಯ ವಾತಾವರಣದಲ್ಲಿ ಅಷ್ಟೇನೂ

ಸಾಮಾನ್ಯವಲ್ಲ. ಆ ದಿನ ಸಭೆಯಲ್ಲಿದ್ದವರಿಗೆ 'ಈತ ಸಾಹಿತ್ಯ ಸಂಸ್ಕೃತಿಗಳ ವಿಷಯದಲ್ಲಿ ನಿಜವಾಗಿಯೂ ಅಭಿಮಾನವುಳ್ಳವರು, ಈ ಯೋಜನೆಯಿಂದ ದೇಶಕ್ಕೆ ಪ್ರಯೋಜನ ವಾದೀತು' ಎನ್ನಿಸಿತು."

(ಪುಟ 170–171)

ಮೂರ್ತಿರಾಯರು ಬರೆದ ಈ ಜೀವನ ಚಿತ್ರಗಳು ಜೀವನ ವೃತ್ತಾಂತ, ಆತ್ಮ ವೃತ್ತಾಂತವೂ ಆಗಿದೆ. ಪ್ರತಿಯೊಂದು ವ್ಯಕ್ತಿಚಿತ್ರದೊಂದಿಗೆ ಮೂರ್ತಿರಾಯರ ವ್ಯಕ್ತಿತ್ವವೂ ಸಹ ಅಭಿನ್ನವಾಗಿ ಸೇರಿ ಹೋಗಿರುವುದರಿಂದ ಒಂದು ಬಗೆಯ ಅವಿನಾದ್ವೈತ ಸಂಬಂಧವುಂಟಾಗಿದೆ. ಇದರೊಂದಿಗೆ ಆ ಕಾಲದ ಸಾಮಾಜಿಕ ಚಿತ್ರಣವೂ ಸಹ ಅಲ್ಲಲ್ಲಿ ವ್ಯಕ್ತವಾಗಿದೆ. ಶಿಕ್ಷಕರ, ಭಾಷಾಮುನಷಿಗಳು, ಶಿಕ್ಷಕರ ಗೌನು, ಪೇಟಾಗಳು, ರುಮಾಲು, ಸೂಟು, ಆ ಕಾಲದ ಕಾಲೇಜಿನ ಪಾಠಪಟ್ಟಿ, (Syllabus) ಇತ್ಯಾದಿಗಳ ಒಂದು ಮಿಂಚುನೋಟ ನಮಗೆ ದೊರೆಯುತ್ತದೆ. "ಆ ಕಾಲದಲ್ಲಿ ಪ್ರತಿಷ್ಠಾ ಪೂಜಕರ ಪವಿತ್ರಕಾಶಿ ಇದ್ದದ್ದು ಇಂಗ್ಲೆಂಡಿನಲ್ಲಿ, ಅಮೇರಿಕದಲ್ಲಲ್ಲ". (ಪುಟ 25) ಎಂಬ ಮಾತು ಅಂದಿನ ವಿದ್ಯಾವಂತರ ಮನೋಭಾವವನ್ನೂ, ಇಂದಿನವರ ವಿದೇಶೀ ವ್ಯಾಮೋಹವನ್ನೂ ಬಹು ಸ್ಪಷ್ಟವಾಗಿ ಬಿಂಬಿಸುತ್ತದೆ. ಮೂರ್ತಿರಾಯರು ವಿದ್ಯಾರ್ಥಿಯಾಗಿದ್ದ ಕಾಲ ಒಂದು ಕಡೆ ಬ್ರಿಟೀಷರ ಅಭಿಮಾನಿಗಳಿಂದ ಕೂಡಿದ್ದರೆ ಮತ್ತೊಂದು ಕಡೆ ಗಾಂಧೀಜಿಯವರು ಸ್ವಾತಂತ್ರ್ಯ ಹೋರಾಟಕ್ಕಾಗಿ ಭಾರತವನ್ನು ಅಣಿಗೊಳಿಸುತ್ತಿದ್ದ ಆಗಿನ ಬ್ರಿಟಿಷ್ ಭಾರತದಲ್ಲಿದ್ದಂತೆ ಇಲ್ಲಿಯೂ ಇಂಗ್ಲೆಂಡಿನಿಂದ ಇಲ್ಲಿಗೆ ಬಂದ ಇಂಗ್ಲೀಷ್ ಅಧ್ಯಾಪಕರು ಪಾಠ ಹೇಳುತ್ತಿದ್ದರು. ಇಂತಹ ಸಂಕ್ರಮಣಕಾಲದಲ್ಲಿ ಮೂರ್ತಿರಾಯರ ವಿದ್ಯಾರ್ಥಿ ಜೀವನ ಸಾಗಿತ್ತು. ಇಲ್ಲಿ ಆ ಸ್ವಾತಂತ್ರ್ಯ ಹೋರಾಟದ ಚಿತ್ರ ಸೂಚ್ಯವಾಗಿಯೂ ಅದರ ಪ್ರತಿಕ್ರಿಯೆ ವಾಚ್ಯವಾಗಿಯೂ ಬಂದಿವೆ. ರಾಲೋರವರ You and your Psychology (63) ಎನ್. ದೇಶಿಕಾಚಾರ್ಯರ ದೇಶಾಭಿಮಾನ ಸೂಚಕವಾದ ಅಂಗ್ಲ ಬಿಂಡನ್ (7–8). ಮ್ಯಾಕಿಂಟಾಷರು ಅಸಹನೆಯೇನೂ ಇಲ್ಲದೆ Is' pose w'll ha't do it. Pch. Yes, we must do't Pch (40) ಎಂದು ತೋರಿದ ಪ್ರತಿಕ್ರಿಯೆ ಮುಂತಾದ ಪ್ರತಿಕ್ರಿಯೆಗಳನ್ನು ಇಲ್ಲಿ ಉಲ್ಲೇಖಿಸಿದ್ದಾರೆ.

ಮೂರ್ತಿರಾಯರ ಸಂಗೀತ ಪ್ರೇಮ ಅದಮ್ಯವಾದುದು. ಇಲ್ಲಿ ಅದಕ್ಕೂ ಒಂದು ಸ್ಥಾನ ಸಿಕ್ಕಿದೆ. ರಾಲೋ ಸಾಹಿತ್ಯವನ್ನು ಬೋಧಿಸುತ್ತಿದ್ದ ರೀತಿಯನ್ನು ಹೋಲಿಸಲು "ಒಮ್ಮೆ ಕಾಲೇಜಿನ ಉಪನ್ಯಾಸ ಮಂದಿರದಲ್ಲಿ ನಡೆದ ಬಿಡಾರಂ ಕೃಷ್ಣಪ್ಪನವರ ಹಾಡುಗಾರಿಕೆಯನ್ನು ಬಳಸಿದ್ದಾರೆ: 'ಬಿಡಾರಂ ಕೃಷ್ಣಪ್ಪನವರು ಬಿಡಾರಂ ಕೃಷ್ಣಪ್ಪನವರನ್ನು ಸಂತೋಷಪಡಿಸಲು ಹಾಡಿದ್ದು.' (ಅವರ ಸಂತೋಷ ಶ್ರೋತೃಗಳ ಸಂತೋಷದ ಫಲ ಎಂದರೂ ಎನ್ನಬಹುದು. ಅಂಥ ಸಂದರ್ಭಗಳು ವಿಶ್ಲೇಷಣೆಗೆ ಸಿಕ್ಕುವುದಿಲ್ಲ) ಅಂಥ ಒಂದೆರಡು ಕಛೇರಿಗಳನ್ನು ಕೇಳುವ ಭಾಗ್ಯ ನನಗೆ ದೊರೆತಿದೆ." (53) ಬಿ.ಎಂ. ಶ್ರೀಯವರು ಓದಿದ John of Gaunt ನ ಮಾತುಗಳನ್ನು ಓದಿದ್ದನ್ನು ಕೇಳಿ ನನಗೆ ಮನೋಹರವಾದ ಸಂಗೀತವನ್ನು ಕೇಳಿದಂತೆ ಅನುಭವವಾಯಿತು." (ಪುಟ 71) ಎಂದು ಬರೆದಿದ್ದಾರೆ. ಈ ರೂಪಕ ಗುಣದಿಂದ ನಮಗೆ ಮೂರ್ತಿರಾಯರ ಸಂಗೀತ ಪ್ರೇಮವೂ ಸಂದರ್ಭದ ಮಹತ್ವವೂ ಅರಿವಾಗುತ್ತದೆ. ಸಂಗೀತದ ಉಪಮೆ - ಸಾಹಿತ್ಯ ಬೋಧನೆಗೆ

ನೀಡಲು ಮುಖ್ಯ ಕಾರಣ ಮೂರ್ತಿರಾಯರ ಸಾಹಿತ್ಯ ಸಂಗೀತ ಪ್ರೇಮದ ಸಮನ್ವಯತೆ.

ವಿಮರ್ಶೆ ಮೂರ್ತಿರಾಯರ ಮತ್ತೊಂದು ಕ್ಷೇತ್ರ. ಅವರು ಬಿ. ಎ. ತರಗತಿಯ ಕೊನೆಯ ವರ್ಷದಲ್ಲಿರುವಾಗ ರಾಲ್ಲೋ ಬೋಧಿಸಿದ 'ಕಿಂಗ್ ಲಿಯರ್' ನಾಟಕದ ಒಂದು ಕಿರು ವಿಮರ್ಶಾತ್ಮಕ ಚಿತ್ರವನ್ನು ಇಲ್ಲಿ ನೆನಪಿಸಿಕೊಳ್ಳುತ್ತಾರೆ.

"ಕ್ರೋಧಮತ್ತ ಲಿಯರ್, ತನ್ನ ವೃದ್ಧಾಪ್ಯಕ್ಕೂ ಬ್ರಹ್ಮಾಂಡದ ವೃದ್ಧಾಪ್ಯಕ್ಕೂ ಸಾಮ್ಯವನ್ನು ಕಾಣುವ ಲಿಯರ್, ಸತ್ಯವನ್ನು ಕಂಡ ಹುಚ್ಚ ಲಿಯರ್, ಕರುಣೆಬೇಡುವ ಲಿಯರ್.." (ಪುಟ 55)

ಮುಂತಾದ ಲಿಯರ್ ಪಾತ್ರದ ಪರಿಳಿತಗಳನ್ನು ವಿಮರ್ಶನ ದೃಷ್ಟಿಯಿಂದ ಅರ್ಥೈಸಿಕೊಳ್ಳುತ್ತಾರೆ.

ಇಲ್ಲಿ ವ್ಯಕ್ತಿಚಿತ್ರಗಳು ಮಾತ್ರವಲ್ಲ ಹಲವು ವ್ಯಕ್ತಿಗಳು ಸೃಷ್ಟಿಸಿದ ಚಿತ್ರಗಳೂ ಇವೆ. ರಾಲೋರವರ ಅತ್ಯಂತ ಚಿತ್ರವತ್ತಾಗಿ ಬೋಧನೆ ಮಾಡಿದ 'ಅಗಮೆಮ್ನನ್' ನಾಟಕದ ದುಃಖಾಂತ ದೃಶ್ಯ, ಲಿಯರ್ ಮಹಾರಾಜ (54-55) , ರಾಧಾಕೃಷ್ಣನ್ ಸ್ಕಾಟ್ ಸಂಸ್ಥೆಯಲ್ಲಿ ಮಾಡಿದ ಉಪನ್ಯಾಸ (20) ಬೂಟ್‌ರವರು ಬೋಧಿಸಿದ 'The Revenge' (6) ರಾಲೋರವರನ್ನು ನೆನಸಿಕೊಳ್ಳುವ ಚಿತ್ರ (ಪುಟ 68) ಬಿ.ಎಂ. ಶ್ರೀಯವರ ಉಪನ್ಯಾಸಕಲೆ (75) ತೀ. ನಂ. ಶ್ರೀಯವರ ಕ್ರಮ, ಶಿಸ್ತು, ಅಚ್ಚುಕಟ್ಟು (91) ಇತ್ಯಾದಿ ಚಿರಚಿತ್ರಗಳು ಮೂರ್ತಿರಾಯರ ಮನಸ್ಸಿನಲ್ಲಿ ಹಸಿರಾಗಿದೆ. ಆ ಮಾನಸಿಕ ಚಿತ್ರಗಳು ನಮ್ಮ ಮುಂದೆಯೂ ಮೂಡುವಂತೆ ಮಾಡುತ್ತಾರೆ. ಆದ್ದರಿಂದಲೇ 'ಚಿತ್ರಗಳು' ಎಂಬ ಈ ಪುಸ್ತಕದ ಹೆಸರು ಅತ್ಯಂತ ಅನ್ವರ್ಥವಾಗಿಯೂ ಇದೆ.

ವೈದಿಕ ಸಾಹಿತ್ಯ ಮೂರ್ತಿರಾಯರು ಅಭ್ಯಾಸ ಮಾಡಿದ ಕ್ಷೇತ್ರಗಳಲ್ಲಿ ಒಂದು. ಇದು ಕೇವಲ ಗಿಳಿಪಾಠವಾಗದೆ ಜೀವನ ಪಾಠವೂ ಆಯಿತು. ವಿಶೇಷವಾಗಿ ಉಪನಿಷತ್ತುಗಳ ಗಾಢವಾದ ಪ್ರಭಾವವನ್ನು ನಾವು ಈ ಕೃತಿಯಲ್ಲಿ ಗುರುತಿಸುತ್ತೇವೆ. ಪರಿಸರದ ಪರಿಣಾಮವನ್ನು ಒತ್ತಿ ಹೇಳಲು ಅವರು ಸಂಗೀತದ ಉಪಮೆಯನ್ನೋ ರೂಪಕವನ್ನೋ ನೀಡಿದಂತೆ ಅಲ್ಲಲ್ಲಿ ಉಪನಿಷತ್ತಿನ ವಾಕ್ಯಗಳನ್ನು ಉದಾಹರಿಸಿ, ಸನ್ನಿವೇಶದ ರಮ್ಯತೆಯನ್ನು ಅರ್ಷ ಭಾರತದ ಹಿನ್ನಲೆಯಲ್ಲಿ ಸಮರ್ಥಿಸುವುದುಂಟು. ಇದು ನಮ್ಮ ಮನಸ್ಸಿನಲ್ಲಿ ಆಧುನಿಕ ಪ್ರಾಚೀನ ಭಾರತದ ಸಮನ್ವಯತೆಯ ಚಿತ್ರ ಮೂಡಿಸುತ್ತದೆ. ಅರ್ವಾಚೀನ ಭಾರತದ ಅಥವಾ ಒಂದು ಘಟನೆಯ ಸಮರ್ಥ ಮಂಡನೆಗೆ ಪ್ರಾಚೀನ ಭಾರತದ ಘಟನೆಯನ್ನು ತಂದು ಅದರ ಮಹತ್ವವನ್ನೋ ಅಂತರವನ್ನೋ ವಿಷದೀಕರಿಸುತ್ತಾರೆ. 'ಬ್ರಹ್ಮ'. 'ಸಮಿತ್ಪಾಣಿ' ಮುಂತಾದ ಪಾರಿಭಾಷಿಕ ಶಬ್ದಗಳು ಅವರಿಗೆ ಇಂದೂ ಜೀವಂತ. ಅವು ಕೇವಲ ಕಂಠಸ್ಥ ಅಲ್ಲ, ಬದಲು ಸದಾ ಸಮೀಪವಿರುವಂತಹವು. ರಾಧಾಕೃಷ್ಣನ್‌ರವರ ಉಪನ್ಯಾಸದ ಪ್ರಭಾವವನ್ನು ವಿವರಿಸುತ್ತಾ 'ತಪಸಾಬ್ರಹ್ಮ ವಿಜಿಜ್ಞಾಸಸ್ವ ತಪೋ ಬ್ರಹ್ಮ ಇತಿ' ಹೇಳುವ ಬದಲು 'ಬ್ರಹ್ಮ ಸ್ವರೂಪ ಇದು' ಎಂದು ಹೇಳಿಬಿಟ್ಟರು. (19) ಎಂದು ಬರೆಯುತ್ತಾರೆ. ಮೂರ್ತಿಯವರಿಂದ ಅವರಿಗೆ ದೊರೆತ ಶಿಕ್ಷಣ 'ಪುರಾತನಕಾಲದ ಗುರುಕುಲಗಳಲ್ಲಿ ಅಂತೇ ವಾಸಿಗಳಿಗೆ' ದೊರೆಯುವಂತಹುದು (17) ರಾಲೋರವರನ್ನು, ಒಂದು ಸಂದರ್ಭದಲ್ಲಿ, 'ಈತ

ಭಾರತದ ಶತ್ರು' ಪುಟ (63) ಎಂದು ಪರಿಗಣಿಸಿದರೂ 'ಯಾನಿಅಸ್ಮಾಕಂ ಸುಚರಿತಾನಿ ತಾನಿತ್ವಯೋಪಾಸ್ಯಾನಿ ನೋ ಇತರಾಣಿ' ಎಂಬ ಉಪನಿಷದ್ವಾಕ್ಯವನ್ನು (56) ಅವರಿಗೆ ಅನ್ವಯಿಸುತ್ತಾರೆ. ತಮ್ಮ ಗುರುಗಳಾಗಿದ್ದ ಶ್ರೀಯವರನ್ನು ಕುರಿತ ವ್ಯಕ್ತಿಚಿತ್ರವನ್ನು 'ತನ್ಮಾಮವತು ತದ್ವಕ್ತಾರಮವತು, ಅವತು ಮಾಂ, ಅವತು ವಕ್ತಾರಂ' ಎಂಬ ಭರತವಾಕ್ಯದೊಡನೆ ಮುಗಿಸುತ್ತಾರೆ. (ಪುಟ 83). ಶ್ರೀಯವರಿಗೆ ಗೌರವ ಸಲ್ಲಿಸುವಾಗ ಕಾಳಿದಾಸನ 'ಪುರಾಣಮಿತ್ಯೇವ' (ಪುಟ 83), ಗರಿಮಾ, ಲಘಿಮಾ, ಶಯ್ಯೆ ಎಂಬ ವಾಕ್ಯ ಆಕಾಶವಾಣಿಯ ನೆನಪಾದೊಡನೆ, 'ಸ್ಮರ್ತವ್ಯಾವಯಮಾದರೇಣ ಭವತಾ' (170) ಮುಂತಾದ ಸಂಸ್ಕೃತ ಶ್ಲೋಕ ಭಾಗಗಳು ಅವರಿಂದ ಉಲ್ಲೇಖಿಸಲ್ಪಡುತ್ತವೆ. ಇಂಗ್ಲೀಷ್ ನುಡಿಗಟ್ಟುಗಳಂತೆಯೇ (Imp. 199 Introvert ಸ್ವಭಾವ 131 ಮ್ಯಾರಾಥಾನ್ ಸಂಭಾಷಣೆ -111) ಇತ್ಯಾದಿಗಳಂತೆ ಉಪನಿಷತ್ತಿನ ಉಲ್ಲೇಖಗಳು ಸಂದರ್ಭಾನುಸಾರ ಸಮರ್ಥನೆಗೆ ಒದಗುತ್ತದೆ. ಸರ್ ಎಂ.ವಿ.ಯವರ ಬಗ್ಗೆ ಬರೆಯುವಾಗ ಬರೆದ ವಾಕ್ಯ ಅತ್ಯಂತ ಗಮನಾರ್ಹ.

"ಅವರು (ಸರ್ ಎಂ. ವಿ.) ಇಹ ಜೀವನವನ್ನು ಬದಿಗಿಟ್ಟು ಆಧ್ಯಾತ್ಮಿಕ ಜೀವನವನ್ನು ಗಗನಕ್ಕೇರಿಸುವುದಿಲ್ಲ ನಿಜ. ಆದರೆ ನಮ್ಮ ಉಪನಿಷತ್ತುಗಳು ತಾನೆ ಹಾಗೆ ಮಾಡುತ್ತವೇನು?....... ಡಾ. ವಿಶ್ವೇಶ್ವರಯ್ಯ ಉಪನಿಷತ್ತಗಳ ಶ್ರುತಿಗೆ ಸೇರುವಂಥ ಜೀವನ ನಡೆಸುತ್ತಿದ್ದಾರೆ." (ಸರ್ ಎಂ. ವಿಶ್ವೇಶ್ವರಯ್ಯ - ವ್ಯಕ್ತಿ ಮತ್ತು ಐತಿಹ್ಯ)

ಮೂರ್ತಿರಾಯರು ವೇದ ಜಡರಲ್ಲ, ಅಧ್ಯಯನ - ಅನುಷ್ಠಾನ ಎರಡೂ ಪರಸ್ಪರ ಪೂರಕ ಉಪನಿಷತ್ತುಗಳಂತೆಯೇ ಅವರಿಗೆ ಬೈಬಲ್ ಕೂಡಾ ಅಧ್ಯಯನಯೋಗ್ಯ, ಅನುಷ್ಠಾನ ಯೋಗ್ಯ ಗ್ರಂಥ. ಉಪನಿಷದ್ವಾಕ್ಯಗಳನ್ನು ಉಲ್ಲೇಖಿಸಿದಂತೆಯೇ ಬೈಬಲ್ಲಿನ ಸೂಕ್ತಿಗಳನ್ನು ಸಹ ಉಲ್ಲೇಖಿಸುತ್ತಾರೆ. "ಬೈಬಲ್‌ನ ಸೆಂಚ್ಯೂರಿಯನ್ ಹೇಳಿದಂತೆ I say to a man `go` and he goeth, to another `come` and he cometh! ನನ್ನ ಮನಸ್ಸಿನಲ್ಲಿ ಈ ಅನಿಸಿಕೆ ಸುಳಿದು ಹೋಯಿತು". ಈ ಹೇಳಿಕೆ ಮೂರ್ತಿರಾಯರ ಪರಧರ್ಮ ಸಹಿಷ್ಣುತೆಗೆ ಸಾಕ್ಷಿ. ಕೆಲವು ಸಂಸ್ಕೃತ - ಇಂಗ್ಲೀಷ್ ಉಲ್ಲೇಖಗಳು ಆ ಭಾಷೆ ಬಾರದ ಓದುಗರಿಗೆ ಕೊಂಚ ತೊಡಕನ್ನುಂಟುಮಾಡುತ್ತವೆ.

ಮೂರ್ತಿರಾಯರಿಗೆ ಬದುಕು ಬರಹ, ಜೀವನ ಸಾಹಿತ್ಯ ಬೇರೆ ಬೇರೆಯಲ್ಲ ಅವು ಪರಸ್ಪರ ಸಂಬಂಧವುಳ್ಳವು. ಆದ್ದರಿಂದ ಸಾಹಿತ್ಯ ವಿಮರ್ಶೆ ಹೇಗೋ ಹಾಗೆಯೇ ಜೀವನ ವಿಮರ್ಶೆಯೂ ಸಹ. ಅಲ್ಲಲ್ಲಿ ತಮ್ಮ ಜೀವನವನ್ನೇ ಅವರು ವಿಮರ್ಶೆಗೆ ಒಳಪಡಿಸಿರುವುದೂ ಇದೆ. ಒಂದು ರೀತಿಯ ಸ್ವವಿಮರ್ಶೆ ಇಲ್ಲಿದೆ. ತಮ್ಮ ಸ್ವಭಾವವನ್ನು ಅವರು ಅಲ್ಲಲ್ಲಿ ಮುಚ್ಚು ಮರೆಯಿಲ್ಲದೆ ವ್ಯಕ್ತಪಡಿಸಿದ್ದಾರೆ. 'ನನ್ನದು ಮುಖೇಡಿ ಸ್ವಭಾವ'(10). '......... ಅದರ (ತತ್ವಶಾಸ್ತ್ರದ) ವಿಷಯ ನನಗೆ ಏನೇನೂ ತಿಳಿಯದು' (ಪುಟ17) 'ಅರ್ಥಶಾಸ್ತ್ರ ಮಾತ್ರ ನನಗೆ ಒಗ್ಗಿ ಬರಲೇ ಇಲ್ಲ' (26) 'ನಾನು ಎಷ್ಟೋ ಪುಸ್ತಕಗಳನ್ನು 3-4ಸಾರಿ ಕೊಂಡಿದ್ದೇನೆ ಕಳೆದುಕೊಂಡಿದ್ದೇನೆ' (ಪುಟ 91), 'ನನ್ನ ಮನೋಧರ್ಮಕ್ಕೆ (ಅಲಸಿಕೆಗೆ)......' (93)- ಮುಂತಾಗಿ ತಮ್ಮನ್ನು ತಾವೇ ವಿಮರ್ಶೆಗೆ ಒಳಪಡಿಸಿಕೊಂಡಿದ್ದಾರೆ. ಬೇರೆಯವರನ್ನು ವಿಮರ್ಶಿಸುವ ಸಂದರ್ಭ ಬಂದಾಗ ಎಕ್ಸ್ (40), ಕವಿಗ (103), ಹಿರಿಯರು (129), ಎ.ಬಿ.ಸಿ. (138), ಎಕ್ಸ್ (141) ರಾಯರು

(144) ಪಘಘ (147). ಚಪ್ಪುಸಿ ಚಿಕ್ಕಣ್ಣ (158) ಶ್ರೀ ಕಶ್ಚಿದಸ್ಮ (208) – ಮುಂತಾಗಿ ನಿಜನಾಮಧೇಯಗಳನ್ನು ಮರೆಸಿ ಗುಪ್ತನಾಮಗಳ ಮೂಲಕ ನಿರ್ದೇಶಿಸಿದ್ದಾರೆ.

ಮೂರ್ತಿರಾಯರು ರಚಿಸಿದ ಈ ಜೀವನ ಚರಿತ್ರೆ ಒಂದು ರೀತಿಯಲ್ಲಿ ಅವರ ಆತ್ಮ ಚರಿತ್ರೆಯ ಒಂದು ಭಾಗವೂ ಹೌದು. ಕಾರಣ ಇಲ್ಲೆಲ್ಲಾ ಮೂರ್ತಿರಾಯರ ಪ್ರಾತಿನಿಧ್ಯ ಇದೆ. ಇಂಗ್ಲೀಷ್- ಸಂಸ್ಕೃತ ನುಡಿಗಟ್ಟುಗಳು Old man of the sea. ಗರಿಮಾ, ಲಘಿಮಾ, ಶಯ್ಯೆ, Dismal Science. ಓಡು ವರದಿ ಇತ್ಯಾದಿ, 'ಈ ವಿಮರ್ಶಕ ವಾತಾಪಿಗೆ ಜೀರ್ಣೋಭವ ಎಂದು ಹೇಳುವ ಅಗಸ್ತ್ಯ ಶಕ್ತಿ ನಮ್ಮಲ್ಲಿ ಪ್ರಬಲವಾಗಬೇಕು'. (95) ಮ್ಯಾರಾಥಾನ್ ಸಂಭಾಷಣೆ (111)– ಮುಂತಾದ ಭಾರತೀಯ – ಪಾಶ್ಚಿಮಾತ್ಯ ಪುರಾಣ ರೂಪಕಗಳ ಹದವಾದ ಬೆರಕೆ ಅವರ ಬರವಣಿಗೆಗೆ ಒಂದು ತೇಜಸ್ಸನ್ನು, ಶಕ್ತಿಯನ್ನು ನೀಡಿವೆ. ಒಟ್ಟಿನಲ್ಲಿ ಆ ಕೃತಿಯು ಪೂರ್ವಾರ್ಧ ಹತ್ತು ಹಲವು ಕೋನಗಳಿಂದ ಅಭ್ಯಾಸ ಯೋಗ್ಯ.

ಉಪನಿಷತ್ತುಗಳು ಎತ್ತಿಹಿಡಿದಿರುವ ಜೀವನ ಮೌಲ್ಯಗಳನ್ನು ಮೂರ್ತಿರಾಯರು ತಮ್ಮ ಬದುಕಿನುದ್ದಕ್ಕೂ ಸಾಧಿಸಿಕೊಂಡು ಬಂದಿದ್ದಾರೆ.

ನನ್ನ ಜೀವನ ದೃಷ್ಟಿ: ಕುರ್ವನ್ನೇವೇಹ ವೇದ ಕರ್ಮಾಣಿ ಜಿಜಿವಿಷೇತ್ ಶತಗ್ಂ ಸಮಾಃ ॥

ಬಯಕೆ: ಅನಾಯಾಸೇನ ಮರಣಂ ವಿನಾದೈನ್ಯೇನ ಜೀವನಂ ॥

*(ತರಂಗ 25, 1984 ಪುಟ 26)*

ಈ ಕೃತಿಯ ಮೌಲ್ಯ ಹಾಗೂ ಮಿತಿಗಳನ್ನು ಡಾ. ಪ್ರಭುಶಂಕರ ಗುರುತಿಸಿರುವುದು ಸೂಕ್ತವಾಗಿದೆ.

"ಇದೊಂದು ಅಪೂರ್ವ ಪುಸ್ತಕ. ಅನೇಕ ದೃಷ್ಟಿಗಳಿಂದ ಅಪೂರ್ವವಾದದ್ದು. ಸದ್ದುಗದ್ದಲಗಳಿಲ್ಲದೇ ಮನೆಯ ಬಾಗಿಲಿಗೆ ಬಂದು ಒಳಗೆ ಬರಬಹುದೇ ಎಂದು ಕೇಳಿ ನಾವು ಉತ್ತರ ಕೊಡುವ ಮೊದಲೇ ಒಳಗೆ ಬಂದು, ಆತ್ಮೀಯವಾಗಿ ನೆಲಸಿ, 'ಓ ಇವರು ನಮ್ಮಿಂದ ಏನೋ ಪಡೆಯಬಂದವರಲ್ಲ. ನಮಗೆ ಏನನ್ನೋ ನೀಡಲು ಬಂದವರು' ಎಂಬ ಭಾವನೆ ನಮಗೆ ಬರುವಂತೆ ಮಾಡುವ ಜನ್ಮ ಜನ್ಮಾಂತರದ ಬಂಧುಗಳಂತಹ ಪುಸ್ತಕ ಇದು. ಪುಸ್ತಕ ಎಂದು ಬರೆಯುವುದಕ್ಕೆ ಹೋಗದೆ ತಾನಾಗಿಯೇ ಪುಸ್ತಕವಾದ ಪುಸ್ತಕ ಇದು. ಆದ್ದರಿಂದಲೇ ಇದಕ್ಕೆ ಇಂಥ........"

*(ಕನ್ನಡ ಭಾರತಿ 1984 ಪುಟ 255)*

"(........ಪುಸ್ತಕದ ದೊಡ್ಡ ದೋಷ ಇದು) ಪದಗಳನ್ನು ಇರಲಿ, ಸಂಭಾಷಣೆಯನ್ನು ಕೆಲವು ವೇಳೆ ತುಂಬಾ ಸೊಗಸಾದ ಮುಖ್ಯವಾದ ಪ್ಯಾರಾಗಳನ್ನು ಇಂಗ್ಲೀಷ್‌ನಲ್ಲಿ ಗುಪ್ಪೆಗುಪ್ಪೆಯಾಗಿ ಕೊಟ್ಟುಬಿಟ್ಟಿದ್ದಾರೆ.

ಇಂಗ್ಲೀಷಿನ ಗಂಧಗಾಳಿಯಿಲ್ಲದ, ಆದರೆ ಇಂಥ ಪುಸ್ತಕಗಳನ್ನು ಪೂರ್ತಿ ಸವಿಯಬೇಕೆಂಬ ಆಸೆಯುಳ್ಳ ಕನ್ನಡಿಗರು ಇರುತ್ತಾರೆ ಎಂಬುದು ಈ ಬುದ್ಧಿವಂತರಿಗೆ ಹೊಳೆಯದೇ ಹೋದದ್ದು ಆಶ್ಚರ್ಯ. ಅಲ್ಲದೆ ಇಂಥ ಪುಸ್ತಕಗಳನ್ನು ಓದುವಾಗ ಇಂಗ್ಲೀಷ್ ಕಲಿಯದವರು ಎಂಬ ಕೀಳರಿಮೆ ಮೇಲೇಳುವ ಸಂಭವ ಇರುತ್ತದೆ. ಇನ್ನೂ ಒಂದು ಅಪಾಯ ಉಂಟು. ಮಧ್ಯಮಧ್ಯ ಇಷ್ಟೊಂದು ಇಂಗ್ಲೀಷನ್ನು ಕಂಡ ಓದುಗರಲ್ಲಿ

ಕೆಲವರು ಇಂಥ ಪುಸ್ತಕಗಳ ತಂಟೆಯೇ ಬೇಡ ಎಂದು ಇಡೀ ಪುಸ್ತಕವನ್ನೇ ಓದದೆ ಹೋಗುವ ಸಂಭವವೂ ಉಂಟು.)" (ಅದೇ ಪುಟ 260)

ಡಾ. ಹಾ. ಮಾ ನಾಯಕರು ಈ ಕೃತಿಯ ಬಗ್ಗೆ ಹೀಗೆ ಬರೆದಿದ್ದಾರೆ:

"ಮಗ ಸೊಸೆಯರಿಗೆ ಬರೆದ ಕಾಗದಗಳಿಗೆ ಮಾತ್ರ ಈ ಸಂಪುಟದಲ್ಲಿ ಸ್ಥಾನವಿಲ್ಲ ವೆಂದೇ ಈ ವಿಮರ್ಶಕ ಭಾವಿಸುತ್ತಾನೆ. ಆ ಆರು ಕಾಗದಗಳು ತುಂಬ ಸ್ವಾರಸ್ಯವಾಗಿದ್ದರೂ ಕೂಡ ಪುಸ್ತಕದಲ್ಲಿ ಚಿತ್ರಿತವಾದ ಪರಿಸರಕ್ಕೆ ಹೊಂದಿಕೊಳ್ಳುವುದಿಲ್ಲ... ಕನ್ನಡ ನವೋದಯದ ಹಿನ್ನೆಲೆಯೂ ಕಾಣಿಸಿಕೊಳ್ಳುತ್ತದೆ.

ಇಂಥ ಸಂದರ್ಭಗಳಲ್ಲಿ ಆತ್ಮ ಕಥನ ಸ್ವರೂಪ ಕಾಣಿಸಿಕೊಳ್ಳುವುದು ಅಸಹಜ ವಾದುದೇನಲ್ಲ...ವ್ಯಕ್ತಿ ಚಿತ್ರಗಳು ಪ್ರಬಂಧ ಸಾಹಿತ್ಯದ ಒಂದು ಭಾಗವೇ ಆಗಿರುವುದರಿಂದ ಪ್ರಬಂಧಕಾರ ಮೂರ್ತಿರಾಯರು ಇಲ್ಲಿ ಸಫಲರಾಗಿದ್ದಾರೆ...ವ್ಯಕ್ತಿ ಜೀವನ ವ್ಯವಹಾರ ಗಳಿಗೆ ಸಂಬಂಧಿಸಿದ ಎಷ್ಟೋ ಪ್ರಸಂಗಗಳನ್ನು ಯಾವುದೇ ಭಾಷ್ಯವಿಲ್ಲದೆ ನಿರೂಪಿಸುತ್ತಾರೆ." *(ಗ್ರಂಥ ಲೋಕ, ಜನವರಿ 01. 1987 ಪುಟ 33. 34. 35)*

ಆದರೆ ಈ ಮಾತು ಒಪ್ಪುವಂತಹುದಲ್ಲ.

ಮೂರ್ತಿರಾಯರು 'ಶ್ರೀ' ಅವರ ವಿಷಯದಲ್ಲಿ ಹೇಳುವುದೆಲ್ಲ ಸತ್ಯವೇ ಇರಬಹುದು. ಆದರೆ ಅದನ್ನು ಹೇಳಿರುವ ರೀತಿಯಲ್ಲಿ ಮಿಕ್ಕವರ ಬಗ್ಗೆ ಬರೆಯುವಾಗ ತೋರುವ ಮುಕ್ತಗುಣ ಕಾಣಿಸುವುದಿಲ್ಲ. ಸ್ವಲ್ಪ ಕಾಯ್ದಿರಿಸುವಿಕೆಯ ಲಕ್ಷಣಗಳು ತೋರುತ್ತದೆ. (ಅದೇ ಪುಟ 35)

## 5.5 ವ್ಯಕ್ತಿ ಚಿತ್ರಗಳು

ಮೂರ್ತಿರಾಯರ "ಸಮಗ್ರ ಲಲಿತ ಪ್ರಬಂಧಗಳು" ಕೃತಿಯಲ್ಲಿ ನಾಲ್ಕು ವ್ಯಕ್ತಿ ಚಿತ್ರಣಗಳಿವೆ. ಮೂರ್ತಿರಾಯರು ತಮ್ಮ ನಿಕಟವರ್ತಿಗಳೊಡನೆ ಒಡನಾಡಿದ ಸ್ವಾನು ಭವಗಳ ಬೆಳಕಿನಲ್ಲಿ ಈ ವ್ಯಕ್ತಿ ಚಿತ್ರಣಗಳನ್ನು ಬರೆದಿದ್ದಾರೆ. ಈ ವ್ಯಕ್ತಿಗಳು ಮೂರ್ತಿ ರಾಯರ ವೈಯಕ್ತಿಕ ಜೀವನದಲ್ಲಿ ವಹಿಸಿದ ಪಾತ್ರ, ಅವರು ಬೀರಿದ ಪ್ರಭಾವ, ಅವರ ವಿಶೇಷ ಗುಣಸ್ವಭಾವಗಳನ್ನು ಸಂಕ್ಷಿಪ್ತವಾಗಿ ಬರೆದಿದ್ದಾರೆ. ಇವುಗಳಲ್ಲಿ ಮೊದಲನೆಯದು "ಟಿ.ಎಸ್. ವೆಂಕಣ್ಣಯ್ಯನವರು."

### ಟಿ.ಎಸ್.ವೆಂಕಣ್ಣಯ್ಯ

ವೆಂಕಣ್ಣಯ್ಯನವರು ಮೂರ್ತಿರಾಯರಿಗೆ ಪಾಠ ಹೇಳಿದ ಗುರುಗಳಲ್ಲ. ಆದರೂ ಅವರ ಬದುಕಿಗೆ ಪಾಠ ಹೇಳಿದವರು. ಮೂರ್ತಿರಾಯರ ಬರವಣಿಗೆಗೆ ಪ್ರೋತ್ಸಾಹ ನೀಡಿದವರು. ಅವರೊಂದಿಗೆ ಸ್ನೇಹ ಸಲಿಗೆಯಿಂದ ಇದ್ದವರು. ಮೂರ್ತಿರಾಯರು ಸ್ವಯಂ ನಾಸ್ತಿಕರೇ ಆದರೂ, ಅಗಡಿಯ ಸಾಧುಗಳ ವಿಷಯದಲ್ಲಿ ವೆಂಕಣ್ಣಯ್ಯ ನವರಿಗಿದ್ದ ಗೌರವವನ್ನು ಪ್ರಶ್ನಿಸಿದವರಲ್ಲ. ಆದರೆ ಅಂತಹ ಒಂದು ಸಂದರ್ಭದಲ್ಲಿ ಮೂರ್ತಿರಾಯರು ತಮ್ಮ ಮನೋಭಾವವನ್ನು ವ್ಯಕ್ತಪಡಿಸಿದಾಗ, ವೆಂಕಣ್ಣಯ್ಯನವರ ಪ್ರತಿಕ್ರಿಯೆಯ ಮೂಲಕ ಆ ಎತ್ತರವನ್ನು ಕಂಡು ಅವರನ್ನು ಗೌರವಿಸಿದವರು.

ಮೂರ್ತಿರಾಯರ ವೈಯಕ್ತಿಕ ಜೀವನದ ಮೇಲೆ ಅವರು ಬೀರಿದ ಪ್ರಭಾವವನ್ನು ಮೂರ್ತಿರಾಯರು ಹೀಗೆ ಸ್ಮರಿಸಿಕೊಂಡಿದ್ದಾರೆ :

"ಮಾನವ ಬದುಕನ್ನು ಹೇಗೆ ಎದುರಿಸಬೇಕು, ಹೇಗೆ ನಿರ್ವಹಿಸಬೇಕು ಎಂಬುದು, ಅವರು ನನಗೆ ಬೋಧನೆಯಾಗಿ ಕಾಣದಂತೆ ಬೋಧಿಸಿದ ಕಲೆ." (ಪುಟ 320)

ವೆಂಕಣ್ಣಯ್ಯನವರು ಮೂರ್ತಿರಾಯರಿಗೆ ಪಾಠ ಹೇಳಿದ ಗುರುಗಳಲ್ಲವಾದರೂ, ಅವರನ್ನು ಗುರುಗಳನ್ನಾಗಿ ಕಂಡವರು. ವೆಂಕಣ್ಣಯ್ಯನವರ ಆ ಮುಖವನ್ನೂ ಇಲ್ಲಿ ಚಿತ್ರಿಸಿದ್ದಾರೆ. ಆದ್ದರಿಂದಲೇ ಈ ವ್ಯಕ್ತಿ ಚಿತ್ರಣದಲ್ಲಿ ಮೂರ್ತಿರಾಯರು ವೆಂಕಣ್ಣಯ್ಯನವರ ವೃತ್ತಿಪರ ಜೀವನವನ್ನೂ ಪರಿಚಯಿಸುತ್ತಾರೆ. ಆ ಮೂಲಕವಾಗಿ ವೆಂಕಣ್ಣಯ್ಯನವರು ಸಾಧಿಸಿದ ಔನ್ನತ್ಯವನ್ನೂ ನಮ್ಮ ಮುಂದಿಡುತ್ತಾರೆ.

ಅವರು ಡಿ.ವಿ. ಗುಂಡಪ್ಪನವರಿಗೆ "ಮನುಷ್ಯ ಮಾತ್ರದವರನ್ನು ಕುರಿತು ಇಂಥ ಮಾತನ್ನು ಹೇಳಬಹುದೆ? ನಾನೇನೋ ಪಾಠ ಹೇಳಿದ್ದರಿಂದಾಗಿ 'ಗುರು' ಎನಿಸಿಕೊಂಡಿದ್ದೇನೆ. ಆದರೆ ಆತ್ಮಪರೀಕ್ಷೆ ಮಾಡಿಕೊಂಡಾಗ ನನ್ನಲ್ಲಿ ತ್ರಿಮೂರ್ತಿಗಳ ಲಕ್ಷಣವೇನೂ ಕಾಣಲಿಲ್ಲ" ಎಂದು ಹೇಳಿ ನಕ್ಕರಂತೆ (321)

.....ವೆಂಕಣ್ಣಯ್ಯನವರಿಗೆ ಶಿಷ್ಯರು ಕೇವಲ ಶಿಷ್ಯರಲ್ಲ-ಸಹಾನ್ವೇಷಕರು: ಸತ್ಯಾನ್ವೇಷಣೆಯ ಕೆಲಸದಲ್ಲಿ ಸಹಾಯಕರು. (321)

ಮೂರ್ತಿರಾಯರು "ಆಷಾಢಭೂತಿ" ನಾಟಕವನ್ನು ಬರೆದದ್ದು ವೆಂಕಣ್ಣಯ್ಯನವರ ಆತ್ಮೀಯವಾದ ಪ್ರೋತ್ಸಾಹದಿಂದಲೇ. ಮೂರ್ತಿರಾಯರು ಆ ಸನ್ನಿವೇಶವನ್ನು ಮುಕ್ತಕಂಠರಾಗಿ ಬರೆದಿದ್ದಾರೆ. ಮಾತ್ರವಲ್ಲ, ಆ ನಾಟಕದ ವ್ಯವಸ್ಥೆಯನ್ನೂ ಅವರೇ ಮಾಡಿಸಿದ ಸಂದರ್ಭ ಹೀಗಿದೆ. ಮೂರ್ತಿರಾಯರು ತಮ್ಮ ಬರವಣಿಗೆಯ ಬಗ್ಗೆ ತಾವೇ ಬೇಸರಪಟ್ಟುಕೊಂಡು ಕುಳಿತಿದ್ದಾಗ, ಅಲ್ಲಿಗೆ ಬಂದ ವೆಂಕಣ್ಣಯ್ಯನವರು ಹಸ್ತಪ್ರತಿಯನ್ನು ಓದಿ ನೋಡಿ ಹೀಗೆಂದರು :

"ಅಲ್ಲಾರಿ, ಯಾವುದು ಚೆನ್ನಾಗಿದೆ ಯಾವುದು ಚೆನ್ನಾಗಿಲ್ಲ ಅನ್ನೋದೇ ಗೊತ್ತಿಲ್ಲ ನಿಮಗೆ. ನೀವು ಸಾಹಿತ್ಯ ಏನು ಪಾಠ ಹೇಳೀರಿ? ಸೊಗಸಾಗಿ ಬರೆದಿದ್ದೀರಿ, ಇದನ್ನು ನೀರಸ ಅಂತೀರಲ್ಲ" ಎಂದರು. ಅವರ ನಿಂದಾಪ್ರಶಂಸೆ ಅರ್ಥವಾಗಿ ನನಗೂ ನಗು ಬಂತು. ಆಮೇಲೆ ಅವರು, "ಬೇಗ ಬರೆದು ಮುಗಿಸಿ ನಮ್ಮ ಮನೆಯಲ್ಲಿ ಓದಬೇಕು ಎಂದರು." ಹಾಗೆ ಓದಿದ್ದೂ ಆಯಿತು, ಅವರ ಸಲಹೆಯಂತೆ ಕರ್ನಾಟಕ ಸಂಘದ ವಾರ್ಷಿಕೋತ್ಸವದ ಅಂಗವಾಗಿ ಪಂಜೆಮಂಗೇಶರಾಯರ ಅಧ್ಯಕ್ಷತೆಯಲ್ಲಿ ಅದರ ಪ್ರದರ್ಶನವೂ ಆಯಿತು. ಕರ್ನಾಟಕ ಸಂಘವೇ ಅದನ್ನು ಪ್ರಕಟಿಸುವ ಏರ್ಪಾಡೂ ಆಯಿತು". (ಪುಟ 32)

ವೆಂಕಣ್ಣಯ್ಯನವರ ಅತಿ ದೊಡ್ಡ ಗುಣವಾದ ಮತ್ತೊಬ್ಬರ ಮನಃಸ್ಥಿತಿಯನ್ನು ಅರಿತು ಸಮಾಧಾನ ಸಾಂತ್ವನ ನೀಡುವಂತಹ ಗುಣವನ್ನು ತಮ್ಮ ಅನುಭೂತಿಗೆ ಬಂದ ಘಟನೆಯನ್ನು ಮೂರ್ತಿರಾಯರು ವಿವರಿಸುತ್ತಾರೆ. ಒಮ್ಮೆ ಮೂರ್ತಿರಾಯರ ಮನಸ್ಸು ಕದಡಿ ಹೋಗಿ ಆತ್ಮಾನುಕಂಪಕ್ಕೆ ಎಡೆಮಾಡಿ ಕೊಟ್ಟ ಸಂದರ್ಭದಲ್ಲಿ ವೆಂಕಣ್ಣಯ್ಯನವರು ಅವರನ್ನು ಸಮಾಧಾನಪಡಿಸಿದ್ದನ್ನು ಮೂರ್ತಿರಾಯರು ಸ್ಮರಿಸಿಕೊಳ್ಳುತ್ತಾರೆ. ವೆಂಕಣ್ಣಯ್ಯನವರು ಮೂರ್ತಿರಾಯರ ಹೆಗಲ ಮೇಲೆ ಕೈಯಿಟ್ಟಾಗ ಅವರಿಗಾದ ಅನುಭವ ಹೀಗೆ :

"ಅವರ ಸ್ಪರ್ಶದಲ್ಲಿ ಅದೇನು ಗುಣವಿತ್ತೋ ಕಾಣೆ. ಎಂದೂ ನನ್ನ ಸುಖದುಃಖಗಳನ್ನು ಇತರರೊಡನೆ ಹೇಳಿಕೊಳ್ಳದ ನಾನು ತೀರ ಅಪರಿಚಿತರಾದ ಅವರೆದುರಿಗೆ ನನ್ನ ಮನವನ್ನೆಲ್ಲ ತೋಡಿಕೊಂಡೆ" (ಪುಟ 324)

ಉದಾತ್ತ ಗುಣಸ್ವಭಾವಗಳನ್ನು ಬೆಳೆಸಿಕೊಂಡ ವೆಂಕಣ್ಣಯ್ಯನವರ ವ್ಯಕ್ತಿ ಚಿತ್ರಣ ಒಂದು ಕಿರುಲೇಖನವಾದರೂ, ಸಾಹಿತ್ಯ ಬದುಕಿನ ಮೇಲೆ ಬೀರುವ-ಬೀರಬಹುದಾದ ಪ್ರಭಾವಕ್ಕೆ ಒಂದು ಉತ್ತಮ ನಿದರ್ಶನ. ವೆಂಕಣ್ಣಯ್ಯನವರ ದೃಷ್ಟಿ, ಸಾಧನೆಗಳೇನೂ ಇಲ್ಲಿ ಬಂದಿಲ್ಲ. ಅವರ ಬಾಹ್ಯ ಲಕ್ಷಣಗಳಾಗಲಿ, ಉಡುಗೆ-ತೊಡುಗೆಗಳಾಗಲಿ ಇಲ್ಲಿ ಉಲ್ಲೇಖಿತಗೊಂಡಿಲ್ಲ. ಮೂರ್ತಿರಾಯರ ಹಾಗೂ ವೆಂಕಣ್ಣಯ್ಯನವರ ನಿಕಟ ಸಾಮೀಪ್ಯ ಬಾಂಧವ್ಯಗಳು ಇಲ್ಲಿ ಪ್ರಧಾನವಾಗಿ ನಿರೂಪಿತವಾಗಿದೆ. ವೆಂಕಣ್ಣಯ್ಯನವರ ವ್ಯಕ್ತಿತ್ವ ಎಷ್ಟು ಉತ್ತುಂಗದ್ದು ಎಂಬ ವಿಚಾರವನ್ನು ಮೂರ್ತಿರಾಯರು ಒಂದು ಅನನ್ಯ ಸಾಮಗ್ರಿಯೊಂದಿಗೆ ವರ್ಣಿಸಿದ್ದಾರೆ :

"ಮ್ಯಾಥ್ಯೂ ಆರ್ನಾಲ್ಡ್ ಷೇಕ್ಸ್‌ಪಿಯರನನ್ನು ಕುರಿತು ಬರೆದ ಸಾನೆಟ್ಟು others abide our question: thou art free" ಎಂಬ ಮಾತಿನಿಂದ ಆರಂಭವಾಗುತ್ತದೆ. ವೆಂಕಣ್ಣಯ್ಯನವರ ಪರಿಪಕ್ವವಾದ ಸಾತ್ವಿಕ ಸ್ವಭಾವ, ಅಪ್ರಯತ್ನತಃ ಎಲ್ಲರನ್ನೂ ಒಲಿಸಿಕೊಳ್ಳುವ ಶಕ್ತಿ, ಕದಡಿದ ಮನಸ್ಸಿಗೆ ನೆಮ್ಮದಿ ತರುವ ಶಕ್ತಿ–ಇವುಗಳ ವಿಷಯದಲ್ಲಿ ಮೇಲೆ ಉದಾಹರಿಸಿದ ವಾಕ್ಯವನ್ನು ಹೇಳಬಹುದು. ಹಿರಿಯರಾಗಲಿ ಕಿರಿಯರಾಗಲಿ ಅವರನ್ನು ಕುರಿತು ಒಂದೇ ಒಂದು ಸಣ್ಣ ಮಾತಾಡಿದ್ದನ್ನು ನಾನು ಕಂಡಿಲ್ಲ.(ಪುಟ 325)

ಈ ವ್ಯಕ್ತಿ ಚಿತ್ರಣದ ಒಂದು ಸೂಚ್ಯರೂಪ 'ಬೇಡದ ಅತಿಥಿಗಳು' ಎಂಬ ಪ್ರಬಂಧದಲ್ಲಿಯೂ ಬರುತ್ತದೆ. ಆ ಪ್ರಬಂಧದಲ್ಲಿ ವೆಂಕಣ್ಣಯ್ಯನವರ ಹೆಸರಿನ ಉಲ್ಲೇಖವಿಲ್ಲ. ಆದರೆ, ವ್ಯಕ್ತಿ ಚಿತ್ರಣದ ಒಂದು ಘಟನೆ ಓದುತ್ತಿದ್ದಂತೆ ಆ ಪ್ರಬಂಧದಲ್ಲಿ ಉಲ್ಲೇಖಿತ "ಹಿರಿಯರು" ವೆಂಕಣ್ಣಯ್ಯನವರೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

ಒಂದೊಂದು ಸಾರಿ ನನ್ನ ಮಿತ್ರರೊಬ್ಬರು ನಾಲ್ಕಾರು ಗೆಳೆಯರನ್ನು ಊಟಕ್ಕೆ ಕರೆದಿದ್ದರು. ತಮ್ಮಲ್ಲಿ ವಿಶೇಷ ವಿಶ್ವಾಸವಿಟ್ಟಿದ್ದ ಗುರುಗಳೊಬ್ಬರನ್ನು ಮಾತ್ರ ಯಾವುದೋ ಕಾರಣಕ್ಕಾಗಿ ಕರೆದಿರಲಿಲ್ಲ. ಅಕಸ್ಮಾತ್ತಾಗಿ ಹಿರಿಯರು ಅಲ್ಲಿಗೆ ಬಂದು ನಾವೆಲ್ಲ ಸೇರಿದ್ದನ್ನು ಕಂಡರು. ಬಿಟ್ಟಿ ರಸದೂಟವನ್ನು ಗಿಟ್ಟಿಸುವವರ ಮುಖದ ಮೇಲೆ ಮಾತ್ರ ಕಾಣಬಹುದಾದ ಕಳೆ ನಮ್ಮ ಮುಖದಲ್ಲಿ ತೇಲುತ್ತಿದ್ದಿರಬೇಕು. ಅವರು "ಓಹೋ, ನನ್ನನ್ನು ಬಿಟ್ಟು ಊಟಕ್ಕೆ ಏರ್ಪಾಡು ಮಾಡಿರುವ ಹಾಗೆ ಕಾಣುತ್ತೆ, ಅದೆಲ್ಲಾ ನಡೆಯುವುದಿಲ್ಲ" ಎಂದು ನಗುತ್ತಾ ಹೇಳಿ ತಾವೂ ಊಟಕ್ಕೆ ನಿಂತರು. ಅವರ ಸೌಜನ್ಯವನ್ನೂ, ದೊಡ್ಡತನವನ್ನೂ ಕಂಡು ನನಗೆ ಆದ ಸಂತೋಷ ಹೇಳತೀರದು. ಅವೊತ್ತು ಆಹ್ವಾನವಿಲ್ಲದವರೇ ಎಲ್ಲರಿಗಿಂತಲೂ ಹೆಚ್ಚು ಪ್ರಿಯರಾದ ಅತಿಥಿಯಾದರು.

*(ಸ.ಲ.ಪ್ರ. ಪುಟ 245–6)*

ಒಂದು ದಿನ ಶ್ರೀಕಂಠಯ್ಯ ನಾಲ್ಕಾರು ಜನರನ್ನು ಊಟಕ್ಕೆ ಕರೆದಿದ್ದರು. ವಿಶೇಷ ಸಂದರ್ಭವೇನೂ ಇಲ್ಲ: ಸ್ನೇಹಿತರ ಕೂಟ, ಅಷ್ಟೆ. ಹಿರಿಯರೊಬ್ಬರಿದ್ದರೆ ನಮ್ಮ ಲಂಗುಲಗಾಮಿಲ್ಲದ ಹರಟೆಗೆ ಅಡ್ಡಿಯಾದೀತು ಎಂದುಕೊಂಡು ವೆಂಕಣ್ಣಯ್ಯನವರನ್ನು ಕರೆದಿರಲಿಲ್ಲ. ಮಧ್ಯಾಹ್ನ 12 ಘಂಟೆ. ನಾವೆಲ್ಲ ಹರಟುತ್ತ ಕೂತಿದ್ದೇವೆ. ಆಗ ಮಾರ್ಕೆಟ್

ನಿಂದ ಮನೆಗೆ ವಾಪಸ್ಸಾಗುತ್ತಿದ್ದ ವೆಂಕಣ್ಣಯ್ಯನವರು ಅನಿರೀಕ್ಷಿತವಾಗಿ ಶ್ರೀಕಂಠಯ್ಯನಿಗೆ ಹೇಳಬೇಕಾಗಿದ್ದ ಏನನ್ನೋ ಜ್ಞಾಪಿಸಿಕೊಂಡು-ಅಲ್ಲಿಗೆ ಬಂದರು. ನಮ್ಮೆಲ್ಲರ ಮುಖದಲ್ಲೂ ಬಿಟ್ಟಿ ಊಟ ದೊರಕಿಸಿಕೊಂಡವರ ಕಳೆ ತೇಲುತ್ತಿದ್ದಿರಬೇಕು. ಅವರು ನಸುನಗುತ್ತ "ಏನು ಶ್ರೀಕಂಠಯ್ಯ, ನನ್ನ ಬಿಟ್ಟು ಏನೋ ಪಾರ್ಟಿ ನಡೆಸುತ್ತಾ ಇರುವ ಹಾಗೆ ಕಾಣುತ್ತೆ? ಅದೆಲ್ಲ ನಡೆಯುವುದಿಲ್ಲ. ತಾಳಿ, ಮನೆಗೆ ಹೋಗಿ ಬಟ್ಟೆ ಬದಲಾಯಿಸಿ ಕೊಂಡು ಬರುತ್ತೇನೆ" ಎಂದು ಹೊರಟವರು 10 ನಿಮಿಷ ಕಳೆಯುವುದ ರೊಳಗೆ ಬಂದೇ ಬಂದರು. ನಮ್ಮೆಲ್ಲರಿಗೂ ಆದ ಸಂತೋಷ ಅಷ್ಟಿಷ್ಟಲ್ಲ. ಶ್ರೀಕಂಠಯ್ಯ ಆಮೇಲೆ ನನ್ನೊಡನೆ"ಇವತ್ತು ಮಾಡಿದ ತಪ್ಪನ್ನು (ವೆಂಕಣ್ಣಯ್ಯನವರನ್ನು ಕರೆಯದಿದ್ದ ತಪ್ಪನ್ನು)ಇನ್ನು ಜನ್ಮವಿರುವವರೆಗೂ ಮಾಡುವುದಿಲ್ಲ"ಎಂದು ಹೇಳಿದರು.

*(ಟಿ. ಎಸ್. ವೆಂಕಣ್ಣಯ್ಯನವರು) (321-2)*

ಮೂರ್ತಿರಾಯರ ಮೇಲೆ ವೆಂಕಣ್ಣಯ್ಯನವರು ಬೀರಿದ ಪ್ರಭಾವ ಎಷ್ಟು ಅಪಾರ ವಾದದ್ದು ಎಂದರೆ ಅವರ ಮತ್ತೊಂದು ಪ್ರಬಂಧವಾದ "ನೀಳಕಂಠ"ಎಂಬ ಪ್ರಬಂಧ ದಲ್ಲಿಯೂ ವೆಂಕಣ್ಣಯ್ಯನವರು ಅವರನ್ನು ಸಮಾಧಾನ ಪಡಿಸಿದ ಘಟನೆ ವಿವರ ಪೂರ್ಣವಾಗಿ ಬರುತ್ತದೆ. ಈ "ನೀಳಕಂಠ"ಪ್ರಬಂಧದಲ್ಲಿ ಉಲ್ಲೇಖಿತವಾದ ಕೆಲವು ಮಾದರಿ ಭಾಗಗಳನ್ನು"ಟಿ.ಎಸ್. ವೆಂಕಣ್ಣಯ್ಯನವರು"ವ್ಯಕ್ತಿ ಚಿತ್ರಣದ ಕೆಲವು ಮಾದರಿ ಭಾಗಗಳೊಂದಿಗೆ ಹೋಲಿಸಬಹುದು.

ಕೆಲವು ದಶಕಗಳ ಹಿಂದಿನ ಮಾತು: ಒಂದು ದಿನ ಸಂಜೆ ನಾನು ಮೈಸೂರಿನ ಬಳಿ ಇರುವ ಕುಕ್ಕನಹಳ್ಳಿ ಕೆರೆಯ ಏರಿಯ ಮೇಲೆ ಕುಳಿತಿದ್ದೆ. ಆ ದಿನ ಕೆಲವು ಕಾರಣಗಳಿಂದಾಗಿ ನನ್ನ ಮನಸ್ಸಿಗೆ ಬಹಳ ಯಾತನೆಯಾಗಿತ್ತು. ಯೌವನದಲ್ಲಿ ಸಂಕಟಕರವಾದ ಸನ್ನಿವೇಶ ಬಂದಾಗ ನಾವು 'ನನ್ನಂತೆ ಸಂಕಟವನ್ನು ಅನುಭವಿಸಿದವರು ಮತ್ತೊಬ್ಬರಿಲ್ಲ' ಎಂದು ಭ್ರಮೆಗೊಂಡು ಅದರಿಂದ ಏನೋ ಒಂದು ಬಗೆಯ ಹೆಚ್ಚಳವನ್ನು ಪಡೆಯುತ್ತೇವೆ. ಕೆಲವು ವೇಳೆ ಸ್ನಾಯುಗಳು ನೋಯುವಾಗ ನಾವು ಆ ಭಾಗವನ್ನು ಮರ್ಧಿಸಿ ನೋವನ್ನು ಹೆಚ್ಚು ಮಾಡಿ ಆ ಮೂಲಕ ಒಂದು ಬಗೆಯ ಸಮಾಧಾನವನ್ನು ಪಡೆಯುತ್ತೇವಷ್ಟೆ. ಹಾಗೇ ನಮ್ಮ ಸಂಕಟವನ್ನು ಉತ್ಪ್ರೇಕ್ಷಿಸಿ, ಸನ್ನಿವೇಶವನ್ನು ನಾಟಕದ ಸನ್ನಿವೇಶದಂತೆ ಕಲ್ಪಿಸಿಕೊಂಡು ನಮ್ಮ ನೊಂದ ಹೃದಯವನ್ನು ಮನಸ್ಸಿನ ರಂಗಸ್ಥಳದ ಮೇಲೆ ಪ್ರದರ್ಶಿಸುತ್ತಾ-ದುರಂತ ನಾಯಕರಂತೆ ದುಃಖದಲ್ಲಿ ಓಲಾಡುತ್ತೇವೆ. ಈ ಬಗೆಯ ಆತ್ಮಾನುಕಂಪವು ಮಾನಸಿಕ ಆರೋಗ್ಯದ ದೃಷ್ಟಿಯಿಂದ ಅಪಾಯಕರವಾದ ಹವ್ಯಾಸ. ಆ ಸಂಜೆ ನಾನು ಬಹುಶಃ ಇಂಥ ಸ್ಥಿತಿಯಲ್ಲಿದ್ದೆ.

*(ಸ.ಲ.ಪ್ರ. ಪುಟ 316)*

ಒಂದು ಸಂಜೆ ಕೆಲವು ಕಾರಣಗಳಿಂದಾಗಿ ನನ್ನ ಮನಸ್ಸು ಬಹಳ ಕದಡಿ ಹೋಗಿತ್ತು. ಆತ್ಮಾನುಕಂಪಕ್ಕೆ ಎಡೆಗೊಟ್ಟಿತ್ತು. ಕುಕ್ಕನಹಳ್ಳಿ ಕೆರೆಯ ಏರಿಯ ಕಲ್ಲು ಬೆಂಚಿನ ಮೇಲೆ ನಿರ್ವಿಣ್ಣನಾಗಿ ಕುಳಿತಿದ್ದೆ.

*(ಸ.ಲ.ಪ್ರ. ಪುಟ 323)*

ಆದರೆ ಅವರ ಹಸ್ತಸ್ಪರ್ಶ ನನ್ನ ಮನಸ್ಸಿನ ತಳಮಳವನ್ನು ಹೇಗೋ ಕಡಿಮೆ ಮಾಡಿತ್ತು.

*(ಅದೇ ಪುಟ 317)*

ಅವರ ಸ್ಪರ್ಶದಲ್ಲಿ ಅದೇನು ಗುಣವಿತ್ತೋ ಕಾಣೆ (ಅದೇ ಪುಟ 324)

ಕೊನೆಯಲ್ಲಿ ಅವರು, "ನೋಡಿ ನಮಗೆಲ್ಲ ಸುಖಬೇಕು. ಅದು ಬಂದಾಗ, 'ಇದನ್ನೇಕೆ ಕೊಟ್ಟೆ?' ಎಂದು ನಾವು ದೇವರಿಗೆ ಪ್ರಶ್ನೆ ಹಾಕುವುದಿಲ್ಲ. 'ದುಃಖವನ್ನೇಕೆ ಕೊಟ್ಟೆ?' ಎಂಬ ಪ್ರಶ್ನೆಯನ್ನು ಮಾತ್ರ ಹಾಕುತ್ತೇವೆ. 'ದುಃಖ ನಮಗೆ ಬರತಕ್ಕದ್ದಲ್ಲ. ನಾವೇನೂ ತಪ್ಪು ಮಾಡಿಲ್ಲ' ಎನ್ನುತ್ತೇವೆ. 'ಸುಖ ನಮಗೆ ಸಲ್ಲತಕ್ಕದ್ದಲ್ಲ, ಅದಕ್ಕಾಗಿ ನಾವು ದುಡಿದಿಲ್ಲ' ಎಂದು ಮಾತ್ರ ಹೇಳುವುದಿಲ್ಲ. ಎರಡನ್ನೂ ಅನುಭವಿಸಬೇಕು. ನಿಮಗೆ ಅಮಿಶ್ರಿತ ಸುಖವನ್ನೇ ಕೊಡುತ್ತೇನೆ ಎಂದು ದೇವರೇನಾದರೂ ಕರಾರು ಬರೆದುಕೊಟ್ಟಿದ್ದಾನೆಯೇ?" ಎಂದರು. (ಅದೇ ಪುಟ 319)

ಕೊನೆಗೆ, "ಮೂರ್ತಿರಾವ್, ನಿಮ್ಮನ್ನು ಯಾವಾಗಲೂ ಸುಖವಾಗಿ ಇಟ್ಟಿರುತ್ತೇನೆ ಅಂತ ದೇವರೇನಾದರೂ ಬಾಂಡು ಬರೆದುಕೊಟ್ಟಿದ್ದಾನೇನು? ಭ್ರಾಂತಿ! ಏಕೆ............ ನೀವು ಸುಖಪಟ್ಟಾಗ, ದೇವರು ನನಗೆ ಸುಖ ಕೊಟ್ಟಿದ್ದೇಕೆ? ಎಂಬ ಪ್ರಶ್ನೆ ಹಾಕಿಕೊಂಡಿರ' ಇಲ್ಲ. ದುಃಖ ಬಂದಾಗ ಮಾತ್ರ ಆ ಪ್ರಶ್ನೆ ಹಾಕುತ್ತಿದ್ದೀರಲ್ಲ?".

(ಸ.ಲ.ಪ್ರ. ಪುಟ 325)

ಈ ವ್ಯಕ್ತಿ ಚಿತ್ರಣ ವೆಂಕಣ್ಣಯ್ಯನವರ ಮರಣದ ದಿನದ ಒಂದು ಘಟನೆಯೊಂದಿಗೆ ಮುಗಿಯುತ್ತದೆ. ಆ ದಿನ ಅವರ ವಿದ್ಯಾರ್ಥಿನಿ ಲಲಿತ ಕಣ್ಣೀರು ಸುರಿಸುತ್ತಾ ಹೇಳಿದ ಮಾತಿನಿಂದ ವೆಂಕಣ್ಣಯ್ಯನವರು ವಿದ್ಯಾರ್ಥಿಗಳ ಜೀವನದಲ್ಲಿ ಎಂತಹ ಅಚ್ಚಳಿಯದ ಪ್ರಭಾವದ ಮುದ್ರೆಯನ್ನೊತ್ತಿದ್ದರು ಎಂಬ ಅಂಶವನ್ನು ಮೂರ್ತಿರಾಯರು ನಿರೂಪಿಸುತ್ತಾರೆ. ವ್ಯಕ್ತಿ ಚಿತ್ರಣಗಳಲ್ಲಿ ಮೂರ್ತಿರಾಯರು ತಮ್ಮ ದೃಷ್ಟಿಯಿಂದ ಒಬ್ಬ ವ್ಯಕ್ತಿಯನ್ನು ಕಂಡಂತೆ, ಮತ್ತೊಬ್ಬರ ದೃಷ್ಟಿಯಲ್ಲಿಯೂ ಅವರು ಹೇಗೆ ಕಾಣಿಸುತ್ತಾರೆಂಬ ವಿಚಾರವನ್ನು ಪರಿಶೀಲಿಸುತ್ತಾರೆ. ಆ ಸಂದರ್ಭ ಕೆಲವೇ ವಾಕ್ಯಗಳಾದರೂ ಹೃದಯ ಸ್ಪರ್ಶಿಯಾಗಿವೆ. ಯಾವುದೇ ವಿಶೇಷಣ ವರ್ಣನೆಗಳಿಲ್ಲದೆ, ಸರಳವಾಗಿ ಬರೆಯಲ್ಪಟ್ಟಿದ್ದರೂ, ಓದುಗರಲ್ಲಿ ಸ್ಪಂದನವನ್ನುಂಟು ಮಾಡುವ ಈ ವ್ಯಕ್ತಿ ಚಿತ್ರಣ ವೆಂಕಣ್ಣಯ್ಯನವರಿಗೆ ಸಲ್ಲಿಸಿದ ಒಂದು ಶ್ರದ್ಧಾಂಜಲಿ.

"ಅವರು ಸತ್ತ ದಿನ ಬೆಳಗ್ಗೆ ನಾನು ಇಂಗ್ಲೀಷ್ ಆನರ್ಸ್ ಕ್ಲಾಸಿನ ವಿದ್ಯಾರ್ಥಿಗಳನ್ನು ಸ್ಪೆಷಲ್ ಕ್ಲಾಸಿಗಾಗಿ ಬರ ಹೇಳಿದ್ದೆ. ವೆಂಕಣ್ಣಯ್ಯನವರು ತೀರಿಕೊಂಡರೆಂಬ ವರ್ತಮಾನ ತಿಳಿದ ಮೇಲೆ ವಿದ್ಯಾರ್ಥಿಗಳಿಗೆ 'ಕ್ಲಾಸು ನಡೆಯುವುದಿಲ್ಲ' ಎಂದು ತಿಳಿಸಲು ಹೋದೆ. ಅಲ್ಲಿ ಒಬ್ಬಳೇ ಒಬ್ಬ ವಿದ್ಯಾರ್ಥಿನಿ ಅವಳ ಹೆಸರೂ ನೆನಪಿದೆ. ಲಲಿತ ಕಣ್ಣೀರು ಸುರಿಸುತ್ತ ಕುಳಿತಿದ್ದಳು. "ಯಾಕಮ್ಮ ಏನಾಯಿತು?" ಎಂದು ಕೇಳಿದ್ದಕ್ಕೆ ಅವಳ ಉತ್ತರ "ವೆಂಕಣ್ಣಯ್ಯನವರು ಹೋಗಿಬಿಟ್ಟರೆಂಬ ವರ್ತಮಾನ ತಿಳಿಯಿತು. ನಮ್ಮ ತಂದೆ ಸತ್ತ ದಿನದ ನೆನಪು ಬಂತು" ....ಎಂದಳು."

ವೆಂಕಣ್ಣಯ್ಯನವರ ಪುಣ್ಯಸ್ಮರಣೆ (ಅದೇ ಪುಟ 325)

ಒಂದೇ ವಸ್ತು ಪ್ರಬಂಧ ಹಾಗೂ ವ್ಯಕ್ತಿ ಚಿತ್ರಣ ವಿಭಿನ್ನ ಶೈಲಿಗಳಲ್ಲಿ ಬಳಕೆಯಾಗಿರುವುದನ್ನು ಕಾಣಬಹುದು.

ಈ ಗುಂಪಿಗೆ ಸೇರುವ ಮತ್ತೊಂದು ವ್ಯಕ್ತಿ ಚಿತ್ರಣ 'ಎಂ.ಆರ್. ಶ್ರೀನಿವಾಸಮೂರ್ತಿ ನೆನಪುಗಳು.' ವ್ಯಕ್ತಿ ಚಿತ್ರಣ ಹಾಗೂ ಕೃತಿ ವಿಮರ್ಶೆಗಳು ಪರಸ್ಪರ ಮೇಳೈಸಿಕೊಂಡಿವೆ.

ವೆಂಕಣ್ಣಯ್ಯನವರಂತೆ ಅವರು ಮೂರ್ತಿರಾಯರಿಗೆ ಗುರುಗಳಾಗಿರಲಿಲ್ಲ. ವೆಂಕಣ್ಣಯ್ಯನವರು ತಮಗೆ ಗುರುಗಳಲ್ಲವೆಂಬ ಮಾತನ್ನು ನೇರವಾಗಿ ಹೇಳಿದ್ದಾರೆ. ಆದರೆ ಎಂ. ಆರ್. ಶ್ರೀ ಯವರ ಬಗ್ಗೆ ಹೀಗೆ ಹೇಳುತ್ತಾರೆ.

"ನಾನು ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗ ಅವರು ಮೈಸೂರಿನಲ್ಲಿದ್ದಿದ್ದರೆ ನಾನು ಅವರ ಶಿಷ್ಯನಾಗಬಹುದಿತ್ತು". *(ಅದೇ ಪುಟ 326)*

ಅಪವಾದವೆಂಬಂತೆ ಮೂರ್ತಿರಾಯರು ಎಂ. ಆರ್. ಶ್ರೀ ಯವರ ಬಾಹ್ಯ ರೂಪದ ಶಬ್ದ ಚಿತ್ರಣ ಹೀಗೆ ನೀಡುತ್ತಾರೆ.

"...... ಎತ್ತರವಾದ ಆಳು, ಗೌರವರ್ಣ, ಸಣಕಲೂ ಅಲ್ಲದ, ಸ್ಥೂಲವೂ ಅಲ್ಲದ ಮೈಕಟ್ಟು, ಮುಗುಳುನಗೆ ಸುಳಿದಾಡುತ್ತಿದ್ದ ಮಾಟವಾದ ಮುಖ, ವೇದಿಕೆಯ ಮೇಲೆ ನಿಂತರೆ ಸಾಕು, ಸಭಾಸದರನ್ನು ಆಕರ್ಷಿಸುವಂಥ ಸ್ಫುರದ್ರೂಪಿ ಶ್ರೀನಿವಾಸ ಮೂರ್ತಿಗಳು. ಅವರ ದಿರಿಸು ಕೂಡ ಅನವದ್ಯ. ಜರಿ ಪಂಚೆ, ಜರಿ ರುಮಾಲು, ಲಕ್ಷಣವಾದ ಸರ್ಜ್ ಅಂಗಿ, ಅದರ ಮೇಲೆ (ಸಾಮಾನ್ಯವಾಗಿ) ಜರಿ ಅಂಚಿನ ಉತ್ತರೀಯ. ಅವರನ್ನು ನೋಡಿದರೆ ಹೇಗಿದ್ದರೇನಂತೆ ಎಂದು ತೃಪ್ತಿಪಟ್ಟುಕೊಳ್ಳುವ ಮನುಷ್ಯನಲ್ಲ ಈತ. ಈತನದ್ದು ಕಲೆಗಾರನ ದೃಷ್ಟಿ. ಪ್ರತಿಯೊಂದೂ ಅಚ್ಚುಕಟ್ಟಾಗಿರಬೇಕು ಎನ್ನುವಂತಿತ್ತು."
*(ಅದೇ ಪುಟ 326)*

ಬಿ.ಎಂ. ಶ್ರೀಯವರ ಭಾಷಣ ಕಲೆಯನ್ನು ಮೂರ್ತಿರಾಯರು ಮೆಚ್ಚಿಕೊಂಡರೂ, ಅವರು ಅದಕ್ಕಾಗಿ ಇರಿಸಿಕೊಂಡ ವ್ಯಾಮೋಹವನ್ನು ಮೂರ್ತಿರಾಯರು ಒಪ್ಪಿಕೊಂಡವರಲ್ಲ. ಕೇವಲ ಅವರ ಭಾಷಣ ಕಲೆಯನ್ನು ಮೆಚ್ಚಿಕೊಂಡವರು. ಆ ಬಗ್ಗೆ ಬರೆದ ವಾಕ್ಯಗಳು ಮೂರ್ತಿರಾಯರ ಸ್ವಾನುಭವವೂ ಹೌದು, ವಾಸ್ತವ ಸತ್ಯವೂ ಹೌದು. ಇಲ್ಲಿ ಎಂ.ಆರ್.ಶ್ರೀಯವರ ವ್ಯಕ್ತಿ ಚಿತ್ರಣದಷ್ಟೇ ಅವರ ಕೃತಿಗಳ ವಿಮರ್ಶೆಯೂ ಇದೆ. ಅವರ ಜನಪ್ರಿಯ ಕೃತಿ "ರಂಗಣ್ಣನ ಕನಸಿನ ದಿನಗಳು" ಕುರಿತು ಒಂದು ದೀರ್ಘ ವಿಶ್ಲೇಷಣೆ ಇದೆ. ಮೂರ್ತಿರಾಯರು ಸ್ವತಃ ಉಪಾಧ್ಯಾಯರಾದ ಕಾರಣ, ಈ ಕೃತಿಯಲ್ಲಿ ಬರುವ ಉಪಾಧ್ಯಾಯರ ಬಗ್ಗೆ ಅವರ ಚಿಂತನೆ, ಲಕ್ಷ್ಯ ಹರಿದಿದೆ. ಎಂ.ಆರ್. ಶ್ರೀ ಹಾಗೂ ರಂಗಣ್ಣನ ಅಭೇದ ಚಿತ್ರಣವನ್ನು ಗುರುತಿಸುತ್ತಾರೆ. ಜೊತೆಗೆ ಅಂದಿನ ಶಿಕ್ಷಣ ವ್ಯವಸ್ಥೆ ಈ ಕೃತಿಯಲ್ಲಿ ಹೇಗೆ ಬಿಂಬಿತವಾಗಿದೆ ಎಂಬುದನ್ನೂ ಅವರು ಗುರುತಿಸಿದ್ದಾರೆ. ಇಲ್ಲಿ ಎಂ.ಆರ್. ಶ್ರೀಯವರನ್ನು ಮರೆತು ಅವರ ಕೃತಿಗಳ ಬಗ್ಗೆ ಒಂದು ವಸ್ತು ನಿಷ್ಠವಾದ ನಿಲುವನ್ನೂ ವ್ಯಕ್ತಪಡಿಸುತ್ತಾರೆ.

'ಕವಿಯ ಸೋಲು ನನಗೆ ಅಷ್ಟಾಗಿ ಹಿಡಿಸಲಿಲ್ಲ.'
*(ಅದೇ ಪುಟ 326)*

ಇಲ್ಲಿ ಮೂರ್ತಿಯವರ ಲೇಖನಿ ಸ್ವಲ್ಪ ಗುರಿತಪ್ಪಿದೆ. ಇದೊಂದು ನ್ಯೂನತೆಯನ್ನು ಬಿಟ್ಟರೆ 'ರಂಗಣ್ಣನ ಕನಸಿನ ದಿನಗಳು' ಉತ್ತಮವಾದ ಕೃತಿ.
*(ಅದೇ ಪುಟ 328)*

ಎಂ. ಆರ್.ಶ್ರೀಯವರ ಕೃತಿಗಳ ಬಗ್ಗೆ ಬರೆದಂತೆ, ಅವರ ಹಾಗೂ ತಮ್ಮ ನಡುವಿನ ಅಭಿಪ್ರಾಯಭೇದವನ್ನೂ ಉಲ್ಲೇಖಿಸುತ್ತಾರೆ. ಬಿ. ಎಂ. ಶ್ರೀ ಯವರು ಹೇಳಿದ "ಕೊನೆಗೆ ಉಳಿಯುವುದು ಅಭಿಮಾನವಲ್ಲ, ಸತ್ಯ" ಎಂಬ ಪ್ರಭಾವ ಇಲ್ಲಿ ಸ್ಪಷ್ಟವಾಗಿದೆ.

"ಪರಿಷತ್ತಿನ ವಾತಾವರಣದ ವಿಷಯದಲ್ಲಿ ಅವರು ಹೇಳಿದ ಒಂದೆರಡು ಮಾತು ನನಗೆ ಸರಿ ಎನ್ನಿಸಲಿಲ್ಲ. ಅದು ಸಣ್ಣ ವಿಷಯ."

*(ಅದೇ ಪುಟ 330)*

ಮೂರ್ತಿ - ಮೂರ್ತಿರಾಯರ ನಡುವಣ ವೈಯಕ್ತಿಕ ಬಾಂಧವ್ಯ ಕೆಲವೇ ದಿನಗಳದ್ದಾದರೂ, ಅವರ ವಿಶಿಷ್ಟ ಗುಣ ಸ್ವಭಾವವನ್ನು ಅವರು ಗುರುತಿಸಿ ಗೌರವಿಸುತ್ತಾರೆ. ಎಂ.ಆರ್.ಶ್ರೀಯವರು ಪರಿಷತ್ತಿನ ಅಧ್ಯಕ್ಷರಾಗಿದ್ದ ಕಾಲದಲ್ಲಿ ಅವರೇ ಮೂರ್ತಿರಾಯರನ್ನು ಅದರ ಕಾರ್ಯದರ್ಶಿ ಸ್ಥಾನಕ್ಕೆ ಒಪ್ಪಿಸಿದರು. ಆ ಕಾಲದಲ್ಲಿ ಮೂರ್ತಿರಾಯರು ಮೂರ್ತಿಯವರನ್ನು ಬಹಳ ಹತ್ತಿರದಿಂದ ಕಂಡವರು. ದೂರದಲ್ಲಿ ನಿಂತು ಅವರ ಭಾಷಣ ಕೇಳಿ, ಅವರ ಬಾಹ್ಯ ಉಡುಗೆ ತೊಡುಗೆಗಳನ್ನು ಕಂಡು ಅವರನ್ನು ಮೆಚ್ಚಿಕೊಂಡಂತೆ, ಅವರ ಒಳಹೊಕ್ಕು ಅವರ ವಿಶಿಷ್ಟ ಗುಣಗಳನ್ನು ತಮ್ಮ ಅನುಭವಕ್ಕೆ ತಂದುಕೊಂಡವರು. ಮೂರ್ತಿಯವರ ಒಂದು ಒಳವ್ಯಕ್ತಿತ್ವದ ಶಬ್ದ ಚಿತ್ರಣ ಹೀಗಿದೆ.

"...... ಅವರ ಗಂಭೀರ ಸ್ವಭಾವ, ಕರ್ತವ್ಯ ನಿಷ್ಠೆ, ಅದಕ್ಕೆ ಹೊಂದಿಕೊಂಡು ಬಂದ ಮಾನವತೆ, ಹಾಸ್ಯ ಪ್ರವೃತ್ತಿ ಇವೆಲ್ಲಕ್ಕೂ ನಾನು ಮನಸೋತೆ. ಮೂರ್ತಿಯವರ ಸಹವಾಸ ದೊರೆತದ್ದಕ್ಕಾಗಿ ಅದನ್ನು ಸ್ವಾಗತಿಸಿದೆ." *(ಅದೇ ಪುಟ 330)*

ಮೂರ್ತಿಯವರ ಕೊನೆಯ ದಿನವನ್ನೂ ಅವರು ನಿರುದ್ವಿಗ್ನರಾಗಿ ಚಿತ್ರಿಸುತ್ತಾರೆ. ಇಲ್ಲಿಯೂ ಕೂಡಾ ಸರಳವಾದ ಶೈಲಿಯಿಂದ ಅವರ ಅಂತಿಮಕ್ಷಣವನ್ನು ಅವರು ಎಲ್ಲರಿಗೂ ಚಿರಪರಿಚಿತವಾದ ಒಂದು ನಿದರ್ಶನದೊಂದಿಗೆ ಬರೆಯುತ್ತಾರೆ.

"ಕೆಲವು ವೇಳೆ ದೀಪ ನಂದಿಹೋಗುವುದಕ್ಕೆ ಮುಂಚೆ ಅದರ ಪ್ರಕಾಶ ಹೆಚ್ಚುತ್ತದೆಯಷ್ಟೆ. ಮೂರ್ತಿಯವರ ವಿಷಯದಲ್ಲಿ ಅದದ್ದು ಹಾಗೆಯೇ. ಅದೇ ಬೆಳಿಗ್ಗೆ 10 – 15 ರ ಹೊತ್ತಿಗೆ ಅವರು ತೀರಿಕೊಂಡರು. ಗುಂಡಪ್ಪನವರೂ ಶ್ರೀನಿವಾಸರಾಯರೂ ನಾನೂ ಹೋಗಿ ಅವರಿಗೆ ಅಂತ್ಯ ಗೌರವ ಸಲ್ಲಿಸಿ ಭಾರವಾದ ಮನಸ್ಸನ್ನು ಹೊತ್ತು ಮನೆಗೆ ಮರಳಿದೆವು." *(ಅದೇ ಪುಟ 331)*

ವೆಂಕಣ್ಣಯ್ಯನವರ ವ್ಯಕ್ತಿತ್ವವನ್ನು ಲಲಿತೆಯ ದೃಷ್ಟಿಯಿಂದ ಚಿತ್ರಿಸಿದಂತೆ, ಎಂ.ಆರ್. ಶ್ರೀಯವರು, ನಿಟ್ಟೂರು ಶ್ರೀನಿವಾಸರಾಯರು, ತೀ.ನಂ. ಶ್ರೀ ಹಾಗೂ ಡಿ.ವಿ. ಗುಂಡಪ್ಪನವರ ದೃಷ್ಟಿಯಲ್ಲಿ ಹೇಗೆ ಕಾಣಿಸುತ್ತಾರೆ ಎಂದೂ ಅವರು ಉಲ್ಲೇಖಿಸುತ್ತಾರೆ. ಗುಂಡಪ್ಪನವರು ತಮ್ಮ "ಜ್ಞಾಪಕ ಚಿತ್ರಶಾಲೆ"ಯಲ್ಲಿ ಬರೆದ ಶೋಕ ವಾಕ್ಯವನ್ನು ಸಮರ್ಥಿಸಿ "ಗುಂಡಪ್ಪನವರು ಬಡಪಟ್ಟಿಗೆ ಕಣ್ಣೀರು ಹಾಕುವವರಲ್ಲ" (331) ಎಂದು ಈ ವ್ಯಕ್ತಿ ಚಿತ್ರಣವನ್ನು ಮುಗಿಸುತ್ತಾರೆ.

### ಆರ್.ಎಲ್. ನರಸಿಂಹಯ್ಯ

"ಪ್ರೊ. ಆರ್.ಎಲ್. ನರಸಿಂಹಯ್ಯನವರು" ಎಂಬ ವ್ಯಕ್ತಿ ಚಿತ್ರಣ ಮೂರ್ತಿರಾಯರು ನರಸಿಂಹಯ್ಯನವರನ್ನು ಮೊದಲು ಕಂಡ ಹಿನ್ನೆಲೆಯಿಂದ ಆರಂಭಗೊಂಡು, ಮೂರ್ತಿರಾಯರು ಅವರಲ್ಲಿ ಕಂಡ ಗುಣಗಳೊಂದಿಗೆ ಮುಗಿಯುತ್ತದೆ. ಮೂರ್ತಿರಾಯರ ಹಾಗೂ ನರಸಿಂಹಯ್ಯನವರ ಸ್ನೇಹ ಗಟ್ಟಿಯಾದದ್ದು, ಇಬ್ಬರ ರಾಮಾಯಣದ ಅಧ್ಯಯನದ ಸಂಬಂಧದಲ್ಲಿ. ವೃತ್ತಿಯಿಂದ ಅವರು ವಿಜ್ಞಾನಿಯಾದರೂ, ಅವರ

ಸಾಂಪ್ರದಾಯಿಕ ಮುಖವನ್ನು ಮೂರ್ತಿರಾಯರು ಕಂಡು, ಆ ಮುಖವನ್ನು ಅವರು ಇಲ್ಲಿ ಚಿತ್ರಿಸಿದ್ದಾರೆ. ವಿಚಾರ ಸಾಹಿತ್ಯಕ್ಕೆ ಅಂಟಿಕೊಂಡ ವ್ಯಕ್ತಿ ಯಾವರೂ ಧಾರ್ಮಿಕ ವಿಚಾರಗಳಲ್ಲಿಯೂ ತಮ್ಮದೇ ಆದ ದೃಷ್ಟಿಯನ್ನು ಬೆಳೆಸಿಕೊಂಡು, ತಾಳಿದ ನಿಲುವನ್ನು ಮೂರ್ತಿರಾಯರು ಸೋದಾಹರಣವಾಗಿ ನಿರೂಪಿಸಿದ್ದಾರೆ. ಮೂರ್ತಿರಾಯರು ವ್ಯಕ್ತಿಗಳನ್ನು ಚಿತ್ರಿಸಿಕೊಳ್ಳುವುದು, ಚಿತ್ರಿಸುವುದು ಅವರಲ್ಲಿರುವ ಉನ್ನತ ಗುಣಗಳ ಹಿನ್ನೆಲೆಯಲ್ಲಿ. ಅವರಿಗೆ ಸಹಜವಾದ ಹಾಸ್ಯ ಶೈಲಿಯನ್ನು ಉಪಯೋಗಿಸಿಕೊಂಡೂ, ವ್ಯಕ್ತಿಗೌರವವನ್ನು ಉಳಿಸಿಕೊಂಡಿದ್ದಾರೆ. ಯಾರನ್ನೇ ಆಗಲಿ ಲಘುವಾಗಿ ಕಂಡವರಲ್ಲ. ವ್ಯಕ್ತಿಗಳ ಮೇಲಿನ ಅಭಿಮಾನ ಗೌರವಗಳಿಂದಾಗಿ, ಅವರ ಪರಿಮಿತಿಗಳನ್ನು ಅಲಕ್ಷಿಸಿದವರಲ್ಲ. ಜನ ಸಾಮಾನ್ಯರಿಗಾಗಲಿ, ವಿದ್ವಾಂಸರಿಗಾಗಲಿ, ವಿಮರ್ಶಕರಿಗಾಗಲೀ ಮೂರ್ತಿರಾಯರ ವ್ಯಕ್ತಿ ಚಿತ್ರಗಳು ಒಂದು ಮಾದರಿ, ಆದರ್ಶ, ಮೇಲ್ಪಂಕ್ತಿಯಾಗಿವೆ.

ನರಸಿಂಹಯ್ಯನವರಲ್ಲಿ ಅಂತರ್ಗತವಾದ ಗುಣಗಳನ್ನು ಅವರು ನಿರಾಲಂಕಾರಿಕವಾಗಿ ಬರೆದಿದ್ದಾರೆ. ಅವರು ನರಸಿಂಹಯ್ಯನವರನ್ನು ಮೆಚ್ಚಿಕೊಂಡಿದ್ದು, ಒಬ್ಬ ಮನುಷ್ಯ ತಾನು ಸಾಧಿಸಿದ ಉದಾತ್ತ ಗುಣಗಳಿಂದಾಗಿ. ಮೂರ್ತಿರಾಯರು ವ್ಯಕ್ತಿಯನ್ನು ಮರೆತು ವ್ಯಕ್ತಿ ಸಾಧಿಸಿದ ಸಾಧನೆಗಳನ್ನೇ ವೈಭವೀಕರಿಸಿದವರಲ್ಲ. ಅವರಿಗೆ ವ್ಯಕ್ತಿ ಮೊದಲು, ಸಾಧಕ ಅನಂತರದವನು. ವ್ಯಕ್ತಿಯ ಸಾಧನೆ ಸಿದ್ಧಿಗಳನ್ನು ವ್ಯಕ್ತಿತ್ವದ ಮೂಲಕ ಕಾಣುತ್ತಾರೆಯೇ ಹೊರತು, ಸಾಧನೆ – ಸುದ್ದಿಗಳ ಹಿನ್ನೆಲೆಯಲ್ಲಿ ವ್ಯಕ್ತಿಯನ್ನು ಗುರುತಿಸಿದವರಲ್ಲ. ಹೀಗೆ ವ್ಯಕ್ತಿ ಪ್ರಧಾನವಾದ ವ್ಯಕ್ತಿಕೇಂದ್ರಿತ ಚಿತ್ರಣಗಳಲ್ಲಿ ಅವರು ವ್ಯಕ್ತಿಯ ಗುಣಗಳಿಗೆ ನೀಡಿದ ಸ್ಥಾನ ಮೊದಲನೆಯದು.

ಅವರ ಸೌಜನ್ಯ ಸರಳತೆಗಳನ್ನು ಕಂಡು ನನಗೆ ಬಹಳ ಮೆಚ್ಚಿಕೆಯಾಯಿತು.

(ಪುಟ 332)

ಹೀಗೆ ವ್ಯಾಸಂಗ ಮಾಡಿದ್ದರೂ ಅವರು ನನಗೆ ಆ ಗ್ರಂಥದ ಪರಿಚಯ ಸಾಲದು ಎಂದುಕೊಂಡು ವಾಲ್ಮೀಕಿಯ ವಿಷಯ ಮಾತಾಡಲು ಹಿಂಜರಿಯುತ್ತಿದ್ದರು.

(ಪುಟ 333)

ಪಾರಾಯಣ ಮಾಡಿ ಪಟ್ಟಾಭಿಷೇಕವನ್ನು ನಡೆಸಿದರೆ ಸಂಬಳ ಹೆಚ್ಚುವುದೆಂದಾಗಲಿ ಲಾಟರಿಯಲ್ಲಿ ಹಣ ಬರುವುದೆಂದಾಗಲಿ ಅವರು ನಂಬಿದವರಲ್ಲ.

(ಪುಟ 333)

ನರಸಿಂಹಯ್ಯನವರಿಗೆ ನಿಜವಾಗಿಯೂ ಸತ್ಯವೇ ಬೇಕಾಗಿತ್ತು.

(ಪುಟ 335)

ಅವರ ಸಾತ್ವಿಕತೆ, ಸ್ನೇಹಪರತೆ, ಔದಾರ್ಯ ಅವರ ಪರಿಚಯವುಳ್ಳವರೆಲ್ಲ ಇವನ್ನು ಹೊಗಳಿದ್ದಾರೆ. ಬುದ್ಧಿ ಜೀವನಕ್ಕೆ ಸಂಬಂಧಪಟ್ಟಂತೆ, ಪೂರ್ವಗ್ರಹರಹಿತವಾದ ಆಲೋಚನೆ, ಸಂಪ್ರದಾಯ ಸ್ವತಂತ್ರ ದೃಷ್ಟಿಗಳ ಸಮನ್ವಯ ತಮ್ಮ ಕೆಲಸದಲ್ಲಿ ಕರ್ಮದಲ್ಲಿ ಉತ್ಸಾಹ, ಅದರ ಫಲದ ವಿಷಯದಲ್ಲಿ ವಿರಕ್ತಿ ಇವು ಅವರಲ್ಲಿ ನನಗೆ ಕಂಡ ಉದಾತ್ತ ಗುಣಗಳು.

(ಪುಟ 336)

ವ್ಯಕ್ತಿಯಲ್ಲಿ ಹುದುಗಿರುವ ಅಂತಃಸ್ಸತ್ವ ಹಾಗೂ ಪ್ರತಿಭೆಗಳನ್ನು ಮೂರ್ತಿರಾಯರು ಹೇಗೆ ಗುರುತಿಸಿದ್ದಾರೆ ಎಂಬುವುದಕ್ಕೆ ಈ ಕೆಳಗಿನ ತೌಲನಿಕ ದರ್ಶನವನ್ನು ನೀಡಬಹುದು.

ಅವರು (ಎಂ.ಆರ್.ಶ್ರೀ) ಆಲೋಚನಾಪರರಲ್ಲದಿದ್ದರೆ "ನಾಗರಿಕ" ವನ್ನು ಬರೆಯುತ್ತಿರಲಿಲ್ಲ, ಆಲೋಚನಾಪರತೆಯ ಜೊತೆಗೆ ವಿದ್ವತ್ತೂ ಅಧ್ಯಯನವೂ ಇಲ್ಲದಿದ್ದರೆ "ಭಕ್ತಿ ಭಂಡಾರಿ" ಯನ್ನು ಬರೆಯಲಾಗುತ್ತಿರಲಿಲ್ಲ. ಇವೆಲ್ಲದರ ಜೊತೆಗೆ ಮೃದುಹಾಸ್ಯ ಅನುಕಂಪಗಳು ಮೇಳೈಸಿ ತುಂಬದಿದ್ದರೆ "ರಂಗಣ್ಣನ ಕನಸಿನ ದಿನಗಳ"ನ್ನು ಬರೆಯಲಾಗುತ್ತಿರಲಿಲ್ಲ.

(ಪುಟ 327)

ಅವರ ಬರವಣಿಗೆಯಲ್ಲಿ ವಿಜ್ಞಾನಕ್ಕೆ ಸಂಬಂಧಪಟ್ಟದ್ದು ಅದು ವಿಚಾರ ಸಾಹಿತ್ಯ. ಅಂಥ ಸಾಹಿತ್ಯದಲ್ಲಿ ಮಾತಿನ ಸೌಂದರ್ಯವೂ ವಾತಾವರಣ ದೃಷ್ಟಿಯೂ ಮುಖ್ಯವಲ್ಲ; ಅವುಗಳಿಗೆ ಹೆಚ್ಚು ಗಮನ ಕೊಟ್ಟರೆ ಅವು ನಿಷ್ಕೃಷ್ಟತೆಯನ್ನು ಹಿಂದೂಡಬಹುದು, ಈ ಬಗೆಯ ಲೋಪ ಅವರ ಬರವಣಿಗೆಯಲ್ಲಿ ಎಲ್ಲೂ ಕಾಣುವುದಿಲ್ಲ. ನಿಷ್ಕೃಷ್ಟತೆ ತಮ್ಮ ವಸ್ತುವಿಗೆ ಸಂಬಂಧಪಟ್ಟಂತೆ ನಡೆದಿರುವ ಸಂಶೋಧನೆಯೆಲ್ಲದರ ಉಪಯೋಗ ವಿಜ್ಞಾನಿಗಳಿಗೆ ಮಾತ್ರವಲ್ಲದೆ ಲೌಕಿಕರಿಗೂ (to laymen) ಸ್ಪಷ್ಟವಾಗುವಂತಹ ವಿಷಯ ನಿರೂಪಣೆ ಇದನ್ನು ಸಾಧಿಸುವುದಕ್ಕೆ ಅವರು ಎಷ್ಟು ಶ್ರಮವನ್ನಾದರೂ ಸಹಿಸಲು ಸಿದ್ಧರಾಗಿದ್ದರು. (ಪುಟ 335)

ಇಂತಹ ಘನ ವಿದ್ವಾಂಸರು, ಎತ್ತರದ ವ್ಯಕ್ತಿಗಳು ತಮ್ಮ ವೈಯಕ್ತಿಕ ಜೀವನದಲ್ಲಿ ಎಂತಹ ಸರಸ ಸರಳತೆ ಹಾಸ್ಯ ಪ್ರಜ್ಞೆಗಳನ್ನು ಕಾದುಕೊಂಡಿದ್ದರೆಂದು ದಾಖಲಿಸುತ್ತಾರೆ.

"....... ನರಸಿಂಹಯ್ಯನವರು ಸ್ನಾನಮಾಡಿ ಮಡಿಪಂಚೆಯನ್ನುಟ್ಟು ವೈದಿಕರಂತೆ ಹೆಗಲ ಮೇಲೊಂದು ಉತ್ತರೀಯವನ್ನು ಹಾಕಿಕೊಂಡು ಪುರೋಹಿತರಿಗೆ ಬದಲಾಗಿ ತಾವೇ ಪೂಜೆ ಮಾಡಿಸಲು ಸನ್ನದ್ಧರಾಗಿದ್ದರು. ಅವರು ಧರಿಸಿದ್ದ ಬಟ್ಟೆಗಳನ್ನು ನೋಡಿ ನಾನು "why the war paint ?" ಎಂದುದಕ್ಕೆ ಉತ್ತರವಾಗಿ ಅವರು "ಪೌರೋಹಿತ್ಯ ಅಭ್ಯಾಸ ಮಾಡಿಕೊಳ್ಳುತ್ತಾ ಇದೀನಿ. ನಿಮ್ಮ ಮನೆಯಲ್ಲಿ ವ್ರತಗಿತ ಮಾಡಿಸಬೇಕಾದರೆ ನನಗೆ ಹೇಳಿಕಳಿಸಿ." ಎಂದರು.

(ಪುಟ 334)

ಇಂತಹ ಧಾರ್ಮಿಕ ಶ್ರದ್ಧೆಯುಳ್ಳ ವ್ಯಕ್ತಿ ತಳೆದ ಮತ್ತೊಂದು ವಿಭಿನ್ನ ನಿಲುವನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಇಂತಹ ವಿರೋಧಾಭಾಸ ಇರುವುದು ನಿಜವೇ ಎನ್ನುವಂತಹ ಬೆರಗು ನಮಗಾಗುತ್ತದೆ.

ಮದುವೆ ಮುಂಜಿಗಳ ವಿಷಯದಲ್ಲಿ ನಮ್ಮಲ್ಲಿ ಉಳಿದು ಬಂದಿರುವ ಸಂಪ್ರದಾಯದಿಂದಾಗಿ, ಆ ಸಂದರ್ಭಗಳಲ್ಲಿ ನಾವು ಮಾಡುವ ವಿರ್ಚಿನಿಂದಾಗಿ, ಸಮಾಜ ಹಾಳಾಗುತ್ತಿದೆ ಎಂದು ಅವರು ಬಲ್ಲರು- ಅದೇನೂ ಹೆಚ್ಚಿನ ಹೊಗಳಿಕೆಯ ಮಾತಲ್ಲ; ಬಹುಶಃ ನಮ್ಮಲ್ಲಿ ನೂರಕ್ಕೆ ತೊಂಬತ್ತು ಜನ ಅದನ್ನು ಬಲ್ಲರು. ಆದರೆ ವಾಸ್ತವವಾಗಿ ಆಡಂಬರವನ್ನು ಬಿಟ್ಟು, ಸರಳತೆಯನ್ನು ಆಚರಣೆಗೆ ತಂದಿರುವವರು ಬಹಳ ಜನವಿಲ್ಲ. ನರಸಿಂಹಯ್ಯನವರು ಅದನ್ನು ಸಾಧಿಸಿದರು.

(ಪುಟ 334)

ಈ ವ್ಯಕ್ತಿ ಚಿತ್ರಣದಲ್ಲಿಯೂ ಅವರು ವ್ಯಕ್ತಿಯ ಪರಿಮಿತಿಗಳನ್ನು ಗಮನಿಸಿದ್ದಾರೆ. ವ್ಯಕ್ತಿಚಿತ್ರಣ ಏಕಮುಖ ಪ್ರಶಂಸೆ ಮಾತ್ರವಾಗಿರದೆ, ವಸ್ತುನಿಷ್ಠವಾದುದೂ ಆಗಿದೆ. ತಮ್ಮ ಮಿತಿಗಳನ್ನು ವ್ಯಕ್ತಪಡಿಸುವಂತೆ, ವ್ಯಕ್ತಿಗಳ ಮಿತಿಗಳನ್ನೂ ಅವರು ವ್ಯಕ್ತಪಡಿಸುತ್ತಾರೆ.

........ ನನ್ನ ಅಭಿಪ್ರಾಯವನ್ನು ಸ್ವಲ್ಪ ಮೊನೆಯುಳ್ಳ ಹಾಸ್ಯದಿಂದ ವ್ಯಕ್ತಪಡಿಸಿದೆನಾದರೂ ಅವರು ಕೋಪಗೊಳ್ಳಲಿಲ್ಲ ..... ನಾನು ಅವರ ವಾದಕ್ಕೆ ಒಪ್ಪಿಗೆ ಕೊಟ್ಟೆನಾದರೂ ಅವರ ತೀರ್ಮಾನವನ್ನು ವಿರೋಧಿಸಿದೆ.

(ಪುಟ 335)

**ಬಿ.ಎಂ. ಶ್ರೀಕಂಠಯ್ಯ**

"ಬಿ.ಎಂ. ಶ್ರೀ" ಎಂಬ ವ್ಯಕ್ತಿ ಚಿತ್ರಣ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಮಾಡಿದ ಭಾಷಣ. ಬಿ. ಎಂ. ಶ್ರೀ ಯವರ ಪ್ರಭಾವ ಹಾಗೂ ಸಾಹಿತ್ಯವನ್ನು ಕುರಿತ ಪರಿಚಯಾತ್ಮಕ ಲೇಖನ. ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾಡಿದ ಭಾಷಣದ ಕಾರಣವಾಗಿ ಇರಬೇಕು. ಶ್ರೀಯವರ ಭಾಷಣ, ಮಹಾರಾಜರನ್ನು ಕುರಿತು ಇನ್ನಿತರ ಕಡೆ ಬರೆದಂತೆ ಹೇಳಿರಲಿಲ್ಲ. ಅದಕ್ಕೆ ಬದಲಾಗಿ ಆ ಬಗ್ಗೆ ಹೀಗೆ ಹೇಳಿದ್ದಾರೆ.

ಶ್ರೀಕಂಠಯ್ಯನವರ ಸೇವೆ ಬಹುಮುಖವಾದದ್ದು. ಅವರು ಕನ್ನಡಕ್ಕಾಗಿ ನಿಂತು ಪ್ರಚಾರ ಮಾಡಿದರು... ನಮ್ಮ ಮೈಸೂರು ಮಹಾರಾಜರ ಛತ್ರಛಾಯೆಯ ಆಶ್ರಯದಲ್ಲಿ ಕನ್ನಡನಾಡು ಒಂದಾಗಬೇಕು ಅನ್ನುವುದು ಅವರ ಹಿರಿಯಾಸೆ.

ಈ ವ್ಯಕ್ತಿ ಚಿತ್ರಣದ ವೈಶಿಷ್ಟ್ಯವೆಂದರೆ, ಮೂರ್ತಿರಾಯರು ಮಾಡಿದ ಭಾಷಣ ಆಡು ಮಾತಿನಲ್ಲಿಯೇ ಇದೆ. ಅಂತಹ ಕೆಲವು ಶಬ್ದಗಳು -

ಅಂತೆಂದುಕೊಂಡು (337), ಯಾತಕ್ಕೆ (338) ಬರೋದಕ್ಕಾಗಲಿಲ್ಲ, ಬರೆಯೋಕೆ, ತಗೊಂಡೆ, ತಗೊಳ್ಳಬೇಕಾಗಿತ್ತು (339) ಅಂತಂದ್ಕೊಂಡನೇ (341)

ಮೊದಲ ಲೇಖನ ಆರಂಭವಾಗುವುದು, ಈ ಲೇಖನ ಮುಗಿಯುವುದು ಉಪನಿಷತ್ತುಗಳ ಉಲ್ಲೇಖದಿಂದ. ಮೂರ್ತಿರಾಯರ ಜೀವನದ ಮೇಲೆ ಗಾಢವಾಗಿ ಪ್ರಭಾವ ಬೀರಿದ ಉಪನಿಷತ್ತುಗಳ ಉಲ್ಲೇಖ ಹೀಗಿದೆ:

ಹಿಂದಿನ ಕಾಲದಲ್ಲಿ ವಿದ್ಯಾರ್ಥಿಗಳು ಗುರುಗಳನ್ನು ಹುಡುಕಿಕೊಂಡು ಹೋಗುತ್ತಿದ್ದರಂತೆ. ಉಪನಿಷತ್ತುಗಳಲ್ಲಿ ಬರುವ ಕೆಲವು ಮಾತುಗಳನ್ನು ಗಮನಿಸಿದರೆ, ಗುರುಗಳೂ ಶಿಷ್ಯರನ್ನು ಹುಡುಕುತ್ತಿದ್ದಿರಬೇಕು.

(ಪುಟ 320)

ಹಿರಣ್ಮಯೇನ ಪಾತ್ರೇಣ ಸತ್ಯಾಸ್ಯಾಪಿಹಿತಂ ಮುಖಂ ।
ತತ್ ತ್ವಂ ಪೂಷನ್ ಅಪಾವೃಣು ಸತ್ಯಧರ್ಮಾಯ ದೃಷ್ಟಯೇ ॥

ಆ ಬೃಹತ್ಸತ್ಯದ ಹತ್ತಿರಕ್ಕೆ ಹೋದರೆ ಅಲ್ಲಿಂದ ಮುಂದೆ ಇನ್ನೂ ಬೃಹತ್ತಾದ ಸತ್ಯ ಕಾಣುತ್ತದೆ !

(ಪುಟ 347)

**ಚಿದಂಬರಂ**

(ವಜ್ರಪಥ ಕರ್ನಾಟಕ ಸಂಘ, ಶಿವಮೊಗ್ಗ 1993 ಪುಟ 33-38)

ಮೂರ್ತಿರಾಯರ ಮಿತ್ರವಲಯದಲ್ಲಿ ಒಬ್ಬರಾದ, ಕರ್ನಾಟಕದ ಪ್ರಸಿದ್ಧ

ಪ್ರಕಾಶಕರಲ್ಲಿ ಒಬ್ಬರಾದ ಕೂಡಲಿ ಚಿದಂಬರಂ ಬಗ್ಗೆ ಬರೆದ ಒಂದು ಲೇಖನ ಇದು. ಇದೊಂದು ಶ್ರದ್ಧಾಂಜಲಿಯೂ ಹೌದು. ಈ ವ್ಯಕ್ತಿ ಚಿತ್ರಣದಲ್ಲಿ ಮೂರ್ತಿರಾಯರು ಚಿದಂಬರಂ ಅವರ ವೃತ್ತಿ ಜೀವನದ ಒಂದು ಮುಖವನ್ನು ನಮಗೆ ಪರಿಚಯ ಮಾಡಿಕೊಟ್ಟಿದ್ದಾರೆ.

ಚಿದಂಬರಂ ಅವರನ್ನು ತಾವು ಮೊದಲು ಕಂಡ ದಿನಗಳಿಂದ ಅವರ ಮರಣದ ದಿನಗಳವರೆಗೆ ಮೂರ್ತಿರಾಯರು ತಮ್ಮ ಅನುಭವಗಳನ್ನು ದಾಖಲಿಸುತ್ತಾ ಹೋಗಿದ್ದಾರೆ. ಮೂರ್ತಿರಾಯರ ಹಾಗೂ ಚಿದಂಬರಂರವರ ಸಂಬಂಧ ಹಲವು ತೆರನಾದದ್ದು. ಗುರು, ಶಿಷ್ಯ, ಲೇಖಕ, ಪ್ರಕಾಶಕ, ಆತ್ಮೀಯ ವಿಶ್ವಾಸಿ-ಹೀಗೆ. ಸಾಮಾನ್ಯವಾಗಿ ಒಬ್ಬ ಲೇಖಕ ತನ್ನ ಪುಸ್ತಕಗಳನ್ನು ಪ್ರಕಟಿಸಿದ ಪ್ರಕಾಶಕನನ್ನು ವ್ಯಾವಹಾರಿಕ ದೃಷ್ಟಿಯಿಂದ ಮಾತ್ರವೇ ನೋಡುತ್ತಾನೆ. ಆದರೆ ಮೂರ್ತಿರಾಯರು ಚಿದಂಬರಂ ಅವರನ್ನು ಪ್ರಕಾಶಕರನ್ನಾಗಿ ಕಂಡರೂ, ಪ್ರಕಾಶನ ವೃತ್ತಿಯಲ್ಲಿ ಅವರಿಗಿದ್ದ ಗೌರವ ಶ್ರದ್ಧೆ ಆಸಕ್ತಿ ಇವುಗಳ ಸಾಕಾರ ಮೂರ್ತಿಯನ್ನಾಗಿ ಕಾಣುತ್ತಾರೆ. ಇದರೊಂದಿಗೆ ಚಿದಂಬರಂ ಅವರ ವೃತ್ತಿಜೀವನದ ಏಳುಬೀಳುಗಳು, ಸ್ವಭಾವ, ದೇಹಾರೋಗ್ಯ ಹಾಗೂ ಪ್ರಕಾಶನದಲ್ಲಿ ಅವರಿಗಾದ ತೃಪ್ತಿ. ನಷ್ಟಗಳನ್ನು ಇಲ್ಲಿ ಉಲ್ಲೇಖಿಸಿದ್ದಾರೆ.

ಚಿದಂಬರಂ ಶಿವಮೊಗ್ಗ ಕರ್ನಾಟಕ ಸಂಘದ ಕಾರ್ಯದರ್ಶಿಯಾಗಿದ್ದ ಕಾಲದಲ್ಲಿ ಮೂರ್ತಿರಾಯರ "ಹಗಲುಗನಸುಗಳು" ಪ್ರಕಟವಾಯಿತು (ಮೂರ್ತಿರಾಯರ "ಗಂಡುಗೊಡಲಿ" ಎಂಬ ವಿಮರ್ಶಾತ್ಮಕ ಕಿರುಪುಸ್ತಿಕೆಯನ್ನೂ ಅವರೇ ಪ್ರಕಟಿಸಿದ್ದಿರಬಹುದು) ಅನಂತರ ಅವರು ತಮ್ಮ ಪ್ರಕಾಶನಾಲಯವನ್ನು ಮೈಸೂರಿಗೆ ವರ್ಗಾಯಿಸಿದ ಸಂದರ್ಭದಲ್ಲಿ ಅವರ ಸ್ನೇಹಿತರು ಅವರಿಗೆ ನೀಡಿದ ಸಲಹೆಗಳಿಗೆ ಅವರ ಪ್ರತಿಕ್ರಿಯೆ ಹಾಗೂ ಅದರ ಹಿಂದಿನ ಸ್ವಭಾವವನ್ನು ಕುರಿತು ಮೂರ್ತಿರಾಯರು ಹೀಗೆ ಬರೆದಿದ್ದಾರೆ.

"ಸಾಧಕ ಬಾಧಕಗಳನ್ನು ಯೋಚಿಸಿಯೇ ಈ ದಾರಿ ಹಿಡಿದಿದ್ದೇನೆ" ಎಂದು ಕಿರುನಗೆ ನಗುತ್ತ ಒಂದೇ ಮಾತಿನಲ್ಲಿ ಉತ್ತರ ಕೊಟ್ಟರು. ತಮ್ಮ ನಿರ್ಧಾರದಂತೆ ನಡೆದುಕೊಂಡರು. ಅವರೊಡನೆ ಯಾವ ಚರ್ಚೆ ನಡೆದರೂ ಹೀಗೆಯೇ - "ಇವರು ನಮ್ಮ ಮಾತನ್ನು ಕಿವಿಗೆ ಹಾಕಿಕೊಳ್ಳಲೇ ಇಲ್ಲ" ಎಂಬ ಭಾವನೆಗೆ ಅವಕಾಶವಿರುತ್ತಿರಲಿಲ್ಲ. ಅವರು ತಮ್ಮ ನಿಲುವನ್ನು ಪಟ್ಟುಹಿಡಿದು ವೀರಾಭಿಮಾನದಿಂದ ಸಮರ್ಥಿಸುವ ಗೋಜಿಗೂ ಹೋಗುತ್ತಿರಲಿಲ್ಲ. ಒಂದೆರಡು ಮಾತಿನಲ್ಲಿ ತಮ್ಮ ಅಭಿಪ್ರಾಯವನ್ನು ಸೂಚಿಸುವುದು, ಅನಂತರ "ಹಾಗೇ ನಿಶ್ಚಯ ಮಾಡಿಬಿಟ್ಟೆ" ಎನ್ನುವುದು."

(ಪುಟ 34)

ಮೂರ್ತಿರಾಯರು ವ್ಯಕ್ತಿಚಿತ್ರಣವನ್ನು ಮಾಡುವಾಗ ವ್ಯಕ್ತಿಯ ಸ್ವಭಾವದತ್ತ ಗಮನ ಹರಿಸುವುದು ಅವರ ರೂಢಿ. ವಿಶೇಷವಾಗಿ, ಸ್ವತಃ ಹಾಸ್ಯಪ್ರಿಯರಾದ ಮೂರ್ತಿರಾಯರ ಗಮನ ವ್ಯಕ್ತಿಗಳಲ್ಲಿ ಇರಬಹುದಾದ ಹಾಸ್ಯಪ್ರಜ್ಞೆಯ ಕಡೆಗೆ ಹರಿಯುತ್ತದೆ. ಇಲ್ಲಿಯೂ ಚಿದಂಬರಂ ಅವರ ಸ್ವಭಾವ ಹಾಗೂ ಹಾಸ್ಯ ಪ್ರಜ್ಞೆಗಳನ್ನು ಮೇಳವಿಸಿ ಹೀಗೆ ಬರೆದಿದ್ದಾರೆ.

ವಾಚಾಳಿಯಲ್ಲದಿದ್ದರೂ ಸಂಘ ಜೀವಿ......ಚಿದಂಬರಂರವರನ್ನು ಕಂಡವರಿಗೆ ಅವರು ಸಂಘ ಜೀವಿ, ಹಾಸ್ಯ ಪ್ರಿಯರು ಎಂದರೆ ಆಶ್ಚರ್ಯವಾಗಬಹುದೇನೋ. ಅದು

ಅದು ನಿಜ. ನಮ್ಮ ಕಾಮನ್‌ರೂಮ್ ಗುಂಪಿನ ಹುಚ್ಚು ಹಾಸ್ಯದಲ್ಲೆಲ್ಲಾ ಅವರೂ ಅನೇಕ ವೇಳೆ ಭಾಗಿಗಳು . ಅನಿರೀಕ್ಷಿತವಾಗಿ ಆಗಾಗ ಮೆಲ್ಲಗೆ ಅವರ ಚಟಾಕಿಯೂ ಕೇಳಿಬರುತ್ತಿತ್ತು. ಆದರೆ ಬಹುಮಟ್ಟಿಗೆ ಅವರ ಪಾತ್ರ ಹಾಸ್ಯಕ್ಕೆ ಪುಟ ಕೊಡುವುದು ಮತ್ತು ರಸಿಕ ಸಹಜವಾದ ಆಸ್ವಾದನೆ. (ಪುಟ 35)

ಚಿದಂಬರಂ ಅವರು ತೀರ್ಥಹಳ್ಳಿಯ ಬ್ಯಾಂಕೊಂದರಲ್ಲಿ ಉದ್ಯೋಗಿಗಳಾಗಿದ್ದರು. ಅನಂತರ ಅವರು ಮೈಸೂರಿಗೆ ಹೋದ ಬಳಿಕ ಚಾಮರಾಜಪುರಂ ಸಹಕಾರ ಸಂಘದ ಮ್ಯಾನೇಜರ್ ಆದರು. ಅಲ್ಲಿ ಅವರು ರಾಜಿನಾಮೆ ಸಲ್ಲಿಸಿ ಪೂರ್ಣ ಸಮಯದ ಪ್ರಕಾಶಕರಾದರು. ಪತ್ರಿಕಾ ಸಂಪಾದಕರೂ ಆದರು. ಅವರ ಪ್ರಕಾಶನ ವೃತ್ತಿಯನ್ನು ಕುರಿತು ಮೂರ್ತಿರಾಯರು ತಮ್ಮ ಸ್ವಾನುಭಾವ ಆಧಾರಿತವಾದ ಒಂದು ಆದರ್ಶವನ್ನು ಇಲ್ಲಿ ವಿವರಿಸುತ್ತಾರೆ. ಪುಸ್ತಕಗಳ ಪ್ರಕಾಶನದಲ್ಲಿ ಅವರಿಗಿದ್ದ ನಿಲುವು ಸಿದ್ಧಾಂತಗಳ ಬಗ್ಗೆ ಹೀಗೆ ಬರೆದಿದ್ದಾರೆ.

ಪುಸ್ತಕ ಮುದ್ರಣದ ಕೆಲಸ ಹೇಗೋ ನಡೆದರಾಯಿತು ಎನ್ನುವವರಲ್ಲ, ಚಿದಂಬರಂ. ನಡೆದರೆ ಅದು ತೃಪ್ತಿಕರವಾಗಿಯೇ ನಡೆಯಬೇಕು. (ಪುಟ 36)

ಅವರು ಪ್ರಕಾಶನ ವೃತ್ತಿಗೆ ಬಂದದ್ದು ಹಣಕ್ಕಾಗಿಯಲ್ಲ. ಜೀವನ ನಡೆಸಲು ಅವಶ್ಯಕವಾದಷ್ಟನ್ನು ಬಯಸಿದರು. ಅದಷ್ಟನ್ನು ಪ್ರಕಾಶನ ವೃತ್ತಿಯಿಂದ ಗಳಿಸುವುದು ಸುಲಭವಲ್ಲವೆಂಬುದನ್ನು ತಿಳಿದೂ ತಿಳಿದೂ ಅವರು ಆ ವೃತ್ತಿಯನ್ನು ಕೈಗೊಂಡರು. ಹಾಗೆ ಮಾಡಿದ್ದಕ್ಕೆ ಕಾರಣ ಕನ್ನಡಿಗರಿಗೆ ಒಳ್ಳೆಯ ಪುಸ್ತಕಗಳನ್ನು ಒದಗಿಸಬೇಕು ಮತ್ತು ಲೇಖಕರಿಗೆ ಅನ್ಯಾಯವಾಗದಂತೆ ನೋಡಿಕೊಳ್ಳಬೇಕು, ಎಂಬ ಆಸೆ. ಅವರು ಪ್ರಕಾಶನ ವೃತ್ತಿಗೆ ಬಂದದ್ದಕ್ಕೆ ಇದೇ ಮುಖ್ಯ ಪ್ರೇರಣೆ ಎಂದು ನಿಸ್ಸಂದೇಹವಾಗಿ ಹೇಳಬಹುದು. (ಪುಟ 36-37)

ಪುಸ್ತಕಗಳ ಮಾರಾಟಕ್ಕೆ ಅನುಚಿತವಾದ, ನೀತಿಯುತವಲ್ಲದ ಮಾರ್ಗವನ್ನು ಅವರು ಎಂದೂ ತುಳಿದವರಲ್ಲ. (ಪುಟ 37)

ಪ್ರೊ. ಎಂ. ಹಿರಿಯಣ್ಣನವರ ಇಂಗ್ಲೀಷ್ ಪುಸ್ತಕಗಳ ಪ್ರಕಟನೆಯಿಂದ ಅವರಿಗಾದ ನಷ್ಟದ ಬಗ್ಗೆ ಚಿದಂಬರಂ ಅವರ ಪ್ರತಿಕ್ರಿಯೆ ಹೀಗೆ :

ಅವರು ನಕ್ಕು, "ಪ್ರಯೋಜನವಿಲ್ಲ ಮೂರ್ತಿರಾವ್, ಆದರೂ ಅವನ್ನು ಹೊರ ತಂದದ್ದು ನನಗೆ ತೃಪ್ತಿಕೊಟ್ಟಿದೆ" ಎಂದರು. ನಿಜವಾಗಿಯೂ ಅವರು ತೃಪ್ತರಾಗಿದ್ದರು.

(ಪುಟ 37)

ಇನ್ನು, ಚಿದಂಬರಂ ಅವರು ಪ್ರಕಾಶಕರಾಗಿ ಲೇಖಕರನ್ನು ಹೇಗೆ ನಡೆಸಿಕೊಳ್ಳು ತ್ತಿದ್ದರೆಂದು ಮೂರ್ತಿರಾಯರು ಒಂದು ಘಟನೆಯನ್ನು ಸ್ಮರಿಸಿಕೊಳ್ಳುತ್ತಾರೆ. ಅವರ 'ಹವಳದ ದ್ವೀಪ' ಪತ್ಯ ಪುಸ್ತಕವಾದಾಗ ಚಿದಂಬರಂ ಅವರು ಅವರಿಗೆ 9500 ರೂಪಾಯಿಗೆ ಚೆಕ್ ನೀಡಿದರು. ತಮ್ಮ ಅವರ ಸಂಬಂಧದ ಬಗ್ಗೆ ಮೂರ್ತಿರಾಯರು ಹೀಗೆ ಸ್ಮರಿಸಿಕೊಂಡಿದ್ದಾರೆ.

ಈ ಸಂದರ್ಭದಲ್ಲಾಗಲಿ ಮತ್ತಾವ ಸಂದರ್ಭದಲ್ಲಾಗಲಿ ನನ್ನ ಅವರ ನಡುವೆ ಕರಾರು ಪತ್ರಗಳೇನೂ ಆಗಿರಲಿಲ್ಲ...... ಕಾಗದ ಪತ್ರಗಳೇನೂ ಇಲ್ಲದೆ ಹೀಗೆ ವ್ಯವಹರಿಸ

ಬೇಕಾದರೆ ಚಿದಂಬರಂರಂತಹವರೊಡನೆ ಮಾತ್ರ ಸಾಧ್ಯ. ಅಂಥವರು ಪ್ರಪಂಚದಲ್ಲಿ ವಿರಳ. (ಪುಟ 37)

ಮೂರ್ತಿರಾಯರು ಹಾಗೂ ಚಿದಂಬರಂ ಅವರ ನಡುವಣ ವೈಯಕ್ತಿಕ ಸಂಬಂಧವೂ ಅಷ್ಟೇ ಆತ್ಮೀಯವಾಗಿತ್ತು. ನಿಲ್ಲುವುದಕ್ಕೂ ಆಗದಷ್ಟು ನಿಶ್ಶಕ್ತರಾಗಿದ್ದಾಗ ಅವರೊಮ್ಮೆ ಮೂರ್ತಿರಾಯರ ಮನೆಗೆ ಬಂದರು. ಮೂರ್ತಿರಾಯರು ಆಗ ಮನೆಯಲ್ಲಿ ಇರಲಿಲ್ಲ. ವಿಷಯ ತಿಳಿದ ಮೂರ್ತಿರಾಯರೇ ಅವರ ಮನೆಗೆ ಹೋದಾಗ ಅವರ ಪ್ರತಿಕ್ರಿಯೆ ಹೀಗೆ –

“ನಿಮ್ಮನ್ನು ಊಟಕ್ಕೆ ಕರೆಯಬೇಕು ಅಂತ ಬಂದೆ. ನಿಮ್ಮನ್ನು ಕರೆಸಿಕೊಂಡು ಆಹ್ವಾನ ಹೇಳುವುದು ಯಾವ ನ್ಯಾಯ !” (ಪುಟ 38)

ಮೂರ್ತಿರಾಯರು ನೈರೋಬಿಯದಲ್ಲಿದ್ದಾಗ, ಚಿದಂಬರಂರವರ ಮರಣದ ವಿಚಾರ ಅವರ ಮಗನಿಂದಲೇ ತಿಳಿಯಿತು. ಚಿದಂಬರಂ ಬಗ್ಗೆ ಮೂರ್ತಿರಾಯರ ಈ ಲೇಖನ ನಿರ್ಲಿಪ್ತವಾಗಿ ಹೀಗೆ ಕೊನೆಗೊಳ್ಳುತ್ತದೆ.

ನನ್ನ “ಅಲೆಯುವ ಮನ” ಪಠ್ಯಪುಸ್ತಕವಾಯಿತೆಂದು ನೈರೋಬಿಯಕ್ಕೆ ಚಿದಂಬರಂರವರು ಕಾಗದ ಬರೆದಿದ್ದರು. ಅದಾದ ಕೆಲವೇ ದಿನಗಳಲ್ಲಿ ಅವರ ಮಗನಿಂದ ಕಾಗದ ಬಂತು ನಮ್ಮ ತಂದೆ ತೀರಿಕೊಂಡರು ಎಂದು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅವರಿಗೊಂದು ಸ್ಥಾನವಿದ್ದೇ ಇರುತ್ತದೆ.

(ಪುಟ 38)

# ಅಧ್ಯಾಯ -6

## ಸಂಜೆಗಣ್ಣಿನ ಹಿನ್ನೋಟ

ಆತ್ಮ ಚರಿತ್ರೆ ಬರೆಯುವ ಸಾಮರ್ಥ್ಯ-ವಿಚಾರ ಎಲ್ಲರಿಗೂ ಇರುತ್ತದೆ. ಪ್ರತಿಯೊಬ್ಬ ವ್ಯಕ್ತಿಯ ಜೀವನವೂ ಒಂದು ಪುಸ್ತಕ, ಬರಹಕ್ಕೆ ಆಧಾರ ಬದುಕು. ಆರಂಭವಾಗುವುದು ಖಾಲಿ ಪುಸ್ತಕ ಕೊಂಡಂತೆ. ಖಾಲಿ ಪುಸ್ತಕದ ಪುಟಗಳಲ್ಲಿ ನಾವು ಏನನ್ನು ಬೇಕಾದರೂ ಬರೆಯಬಹುದು. ತನ್ನ ಜೀವನದ ಇತಿ-ಮಿತಿ, ಆಗು-ಹೋಗು, ಬದುಕಿನ ಬವಣೆಗೆ ಸ್ಪಂದಿಸಿದ ರೀತಿ ಇವು ತನಗೆ ತಿಳಿದಿರುವಂತೆ ಇತರರಿಗೆ ತಿಳಿದಿರುವುದಿಲ್ಲ. ಆದ್ದರಿಂದ ಡಾ. ಶಿವರಾಮ ಕಾರಂತರು ತಮ್ಮ ಜೀವನ ಚರಿತ್ರೆಯನ್ನು ಬರೆಯಲು ಅವಕಾಶ ನೀಡದೆ ಆತ್ಮ ಚರಿತ್ರೆಯನ್ನೇ ಬರೆದರು. ಆತ್ಮಚರಿತ್ರೆ ಬರೆಯುವವನಲ್ಲಿ ಒಂದು ಕಟ್ಟೆಚ್ಚರದ ಸಂಯಮ ಅತ್ಯಂತ ಅತ್ಯಗತ್ಯ. ತನ್ನನ್ನು ತಾನು ಮಿತಿಮೀರಿ ಮೌಲ್ಯಮಾಪನ ಮಾಡುವುದು, ತನಗೆ ಆಗದವರನ್ನು ಕಡಿಮೆ ಮಾಡುವುದು ಮಾನವನ ಸಹಜ ಸ್ವಭಾವ. ಈ ಸ್ವಭಾವ ಸಂಸ್ಕರಣಕ್ಕೊಳಪಟ್ಟು ಬರವಣಿಗೆಯ ಮೇಲೆ ಹತೋಟಿ ಇರಿಸಿಕೊಳ್ಳುವುದು ತುಂಬಾ ಅಗತ್ಯವಾದುದು. ಬಿಚ್ಚು ಮನಸ್ಸಿನ, ಮುಚ್ಚುಮರೆಯಿಲ್ಲದ ನೇರ ಮನಸ್ಸಿನ ಮಾತಿನ ಪ್ರಕಟಿತ ರೂಪವೇ ಆತ್ಮಚರಿತ್ರೆ.

ಆತ್ಮಚರಿತ್ರೆ ಕೇವಲ ಒಬ್ಬ ವ್ಯಕ್ತಿಯ ಸ್ವಾನುಭವ ಕಥನ ಪ್ರವಾಹ ಮಾತ್ರವಲ್ಲ. ವ್ಯಕ್ತಿ ಹಾದು ಬಂದ ಕಾಲಘಟ್ಟದ ವೈಪರೀತ್ಯ, ವ್ಯಕ್ತಿ ಕಂಡ ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಆರ್ಥಿಕ ಬದಲಾವಣೆಗಳು, ವ್ಯಕ್ತಿಯ ಕಾಲದ ಸಾಮಾಜಿಕ ಚಿತ್ರಣ-ಇತ್ಯಾದಿಗಳ ದಾಖಿಲೆಯೂ ಹೌದು. ಆದ್ದರಿಂದ ಆತ್ಮಚರಿತ್ರಕಾರ ಒಬ್ಬ ಸಮರ್ಥ ಸಮಕಾಲೀನ ಇತಿಹಾಸಕಾರನೂ ಹೌದು. ಹೊರಗಿನ ಅಂಶಗಳು ತನ್ನ ಜೀವನ ಕುಟುಂಬಗಳ ಮೇಲೆ ಬೀರಿದ ಪ್ರಭಾವಗಳಿಂದಾಗಿ ಉಂಟಾದ ಏರುಪೇರುಗಳನ್ನೂ ದಾಖಲಿಸುವಾಗ ಆತ್ಮ ಚರಿತ್ರಕಾರ ವಸ್ತುನಿಷ್ಠವಾಗಿ ಇರಬೇಕೆ ಹೊರತು ವ್ಯಕ್ತಿ ಅಥವಾ ಆತ್ಮನಿಷ್ಠನಾಗಿರಬಾರದು. ಆತ್ಮಚರಿತ್ರಕಾರ ತನ್ನ ಜೀವನ ವೃತ್ತಾಂತವನ್ನು ಬರೆಯುವಾಗ ತಾನು ಸಂಪರ್ಕ ಹೊಂದಿದ ಇತರ ವ್ಯಕ್ತಿಗಳನ್ನೂ ಕುರಿತು ಬರೆಯುತ್ತಿರುತ್ತಾನೆ. ಏಕೆಂದರೆ ಸಾಮಾಜಿಕ ಪ್ರವಾಹದಲ್ಲಿ ಭಾಗವಹಿಸುವವನು ಆತ್ಮಚರಿತ್ರಾಕಾರ ಒಬ್ಬನೇ ಅಲ್ಲ. ತನ್ನನ್ನು ಹಿರಿದುಗೊಳಿಸಲು ಇತರರನ್ನು ಕಿರಿದುಗೊಳಿಸಬಾರದು. ಹೀಗೆ ಆತ್ಮಚರಿತ್ರಕಾರ ತನ್ನ ಆತ್ಮಚರಿತ್ರೆಯನ್ನು ಬರೆಯುತ್ತಿರುವಾಗ ತನ್ನ ಸಹವಾಸಿಗಳ ಜೀವನ ಚರಿತ್ರೆಯನ್ನೂ ಬರೆಯುತ್ತಿರುತ್ತಾನೆ. ಆದ್ದರಿಂದಲೇ ಆತ್ಮಚರಿತ್ರೆ-ಜೀವನ ಚರಿತ್ರೆಗಳು ಪರಸ್ಪರ ಮೇಳವಿಸಿಕೊಂಡಿರುತ್ತವೆ.

ಮೂಲತಃ ಪ್ರಬಂಧಕಾರರೆಂದು ಹೆಸರಾದ ಮೂರ್ತಿರಾಯರು ವಿಮರ್ಶಕರೂ ಹೌದು. ವಿಮರ್ಶೆಯನ್ನು ಪ್ರಬಂಧದೊಂದಿಗೆ ಸಮೀಕರಿಸಿ ವಿಮರ್ಶಾತ್ಮಕ ಪ್ರಬಂಧಗಳನ್ನು ಬರೆದರು. (ಆದ್ದರಿಂದಲೇ ಇವರ ಪ್ರಬಂಧಗಳು ವಿಮರ್ಶೆಯ ಸೊಗಸು-ಸೊಬಗುಗಳನ್ನು ಹೊಂದಿರುತ್ತವೆ)

ಅನುವಾದ, ರೂಪಾಂತರ, ಜೀವನ ಚರಿತ್ರೆಗಳನ್ನು ಬರೆದ ಶ್ರೀಯುತರು "ಸಂಜೆಗಣ್ಣಿನ ಹಿನ್ನೋಟ" (ಪುಸ್ತಕ ಪ್ರಪಂಚದಲ್ಲಿ ಇದು ಧಾರಾವಾಹಿಯಾಗಿ ಪ್ರಕಟವಾಗುವಾಗ ಈ ಶೀರ್ಷಿಕೆಯೊಂದಿಗೆ 'ಶ್ರೀಸಾಮಾನ್ಯ ಉವಾಚ'-ಎಂಬ ಸಹಶೀರ್ಷಿಕೆಯೊಂದಿತ್ತು). ಎಂಬ ತಮ್ಮ ಆತ್ಮ ಚರಿತ್ರೆಯನ್ನು ಬರೆದ ಆತ್ಮ ಚರಿತ್ರಕಾರರೂ ಆದರು.

ಈ ಆತ್ಮ ಚರಿತ್ರೆಯನ್ನು ಅಧ್ಯಯನ ಮಾಡಿದಂತೆಲ್ಲಾ ನಮ್ಮ ಮುಂದೆ ಒಂದು ಬಹುವರ್ಣರಂಜಿತ ಪ್ರಪಂಚ ಬಿಚ್ಚಿಕೊಳ್ಳುತ್ತದೆ. ಹಳ್ಳಿಯಿಂದ ದಿಲ್ಲಿಯ ತನಕ ಭಾರತದಿಂದ ಅಮೇರಿಕಾದ ತನಕ (ಇದರ ಮುಕ್ತಾಯ ಅಮೇರಿಕಾದಲ್ಲಿಯೇ). ಪ್ರಾಥಮಿಕ ಶಾಲೆಯಿಂದ ವಿಶ್ವವಿದ್ಯಾನಿಲಯದವರೆಗೆ, ಅಕ್ಕಿ ಹೆಬ್ಬಾಳಿನಿಂದ ಅರಮನೆಯವರೆಗೆ, ಕುಟುಂಬದಿಂದ ಪ್ರಪಂಚನವರೆಗೆ, ಸಮಾಜದಿಂದ ರಾಜಕಾರಣದವರೆಗೆ, ವ್ಯಕ್ತಿಗಳಿಂದ ಸಂಸ್ಥೆಯವರೆಗೆ ಹೀಗೆ ಹಲವು ಆಗು-ಹೋಗುಗಳು, ಭೂತ ವರ್ತಮಾನ ಭವಿಷ್ಯತ್‌ಗಳು ವಿಮರ್ಶಾತ್ಮಕವಾಗಿ ಬಂದಿದೆ. ಇದರೊಂದಿಗೆ ಶ್ರೀಯುತರು ಕುಟುಂಬದ ಯಜಮಾನನಾಗಿ, ವೃತ್ತಿಯಲ್ಲಿ ಅಧ್ಯಾಪಕ-ಆಡಳಿತಗಾರರಾಗಿ, ಕನ್ನಡ ಸಂಸ್ಕೃತಿ ಇಲಾಖೆ, ಕೇಂದ್ರ ಸಾಹಿತ್ಯ ಅಕಾಡೆಮಿಯ ಕನ್ನಡ ಸಲಹಾ ಸಮಿತಿ, ಆಕಾಶವಾಣಿ-ಮುಂತಾದ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿದ ಅವಧಿಯ ಅನುಭವಗಳು ಈ ಆತ್ಮ ಚರಿತ್ರೆಯಲ್ಲಿ ಬಂದಿವೆ.

ಮೂರ್ತಿರಾಯರ ಆತ್ಮಚರಿತ್ರೆ-ಅವರ ಇತರ ಕೃತಿಗಳಂತೆಯೇ ಬಹಳ ಸಂಯಮದಿಂದ ಬರೆಯಲ್ಪಟ್ಟಿದೆ. ಆತ್ಮಚರಿತ್ರಕಾರನಿಗೆ ಇರಬೇಕಾದ ನಿರ್ಲಿಪ್ತತೆ-ಸ್ಥಿತಪ್ರಜ್ಞತೆ ಇಲ್ಲಿ ಚೆನ್ನಾಗಿ ವ್ಯಕ್ತವಾಗಿದೆ. ವರದಿಗಾರ ಹೇಗೆ ವಾಸ್ತವಾಂಶಗಳ ವರದಿ ಸಲ್ಲಿಸಿ ತಾನು ಹಿನ್ನೆಲೆಯಲ್ಲಿ ವೀಕ್ಷಕನಾಗಿರುತ್ತಾನೋ ಹಾಗೆ ಇಲ್ಲಿ ಶ್ರೀಯುತರು ಒಮ್ಮೊಮ್ಮೆ ವರದಿಗಾರರಾಗುತ್ತಾರೆ. ಸಾಮಾಜಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ, ರಾಷ್ಟ್ರೀಯ, ಯಾಂತ್ರಿಕ ವಿಧಿ-ವಿಧಾನಗಳ ಆಳಕ್ಕಿಳಿದು ಅವುಗಳ ಗುಣದೋಷಗಳನ್ನು ವ್ಯಾಖ್ಯಾನಿಸಿ ಅವುಗಳ ಗುಣಾಂಶಗಳನ್ನು ಪ್ರಶಂಸಿಸಿ ದೋಷಗಳನ್ನು ಕಟುವಾಗಿಯೇ ಖಂಡಿಸಿ ಅವುಗಳಿಗೆ ಪರಿಹಾರವನ್ನೂ ಸೂಚಿಸಿದ್ದಾರೆ. ರಾಜಕೀಯವಾಗಿ ದೇಶದ ಉನ್ನತಿ ಮುನ್ನಡೆ ಹೇಗೆ ಸಾಧ್ಯ ಎಂದು ಕೂಲಂಕಷವಾಗಿ ಸುದೀರ್ಘವಾಗಿ ಚರ್ಚಿಸಿ ಅದಕ್ಕಾಗಿ ಜಾಗೃತಿ ಸಂಘ ಲಕ್ಷಣಗಳನ್ನೆಲ್ಲಾ ಸೂಚಿಸಿದ ಬಗೆ, ಅವರಿಗೆ ದೇಶದ ಬಗ್ಗೆ ಇರುವ ಕಳಕಳಿಯ ದ್ಯೋತಕ, ರಾಜಕಾರಣಿಗಳು ಇಂಥದ್ದನ್ನು ಓದಿ ಅದರಿಂದ ಪ್ರಭಾವಿತರಾಗಿ ಅವರ ಮನಃಪರಿವರ್ತನೆಯಾಗಬಾರದೇ ಎಂದು ಪರಿತಪಿಸುವಂತೆ ಆಗುತ್ತದೆ.

ಸಮಾಜದಲ್ಲಿ ಬಾಲ್ಯವಿವಾಹ, ವಿಧವಾ ಸಮಸ್ಯೆ, ವಿಧವಾ ವಿವಾಹ, ಅಂತರ್ಜಾತೀಯ ವಿವಾಹ, ಜಾತಿ ಸಮಸ್ಯೆ, ಮುಂತಾದವುಗಳು, ಸಮಾಜಶಾಸ್ತ್ರಜ್ಞನ ದೃಷ್ಟಿಯಿಂದ ಚರ್ಚಿಸಿದ್ದಾರೆ. ಇಲ್ಲೆಲ್ಲಾ ನಾವು ಮೂರ್ತಿರಾಯರಲ್ಲಿ ಒಬ್ಬ ಸಮಾಜ ಶಾಸ್ತ್ರಜ್ಞನನ್ನು ಗುರುತಿಸಬಹುದಾಗಿದೆ. ವಸ್ತುನಿಷ್ಠವಾಗಿ ಈ ವ್ಯಾಖ್ಯಾನ ಬಂದಿದೆಯೇ

ಹೊರತು ಯಾವುದೇ ಪೂರ್ವಗ್ರಹ ಪೀಡಿತವಾಗಿ ಅಲ್ಲವೆಂಬುದನ್ನು ನಾವು ಗಮನಿಸ ಬೇಕು. ಬೆಂಗಳೂರಿನ ನಿಮ್ಹಾನ್ಸ್ ಸಂಸ್ಥೆಯ ಮುಖ್ಯಸ್ಥರಾಗಿ ಅದರ ಸರ್ವತೋಮುಖ ಶ್ರೇಯಸ್ಸಿಗೆ ಶ್ರಮಿಸಿದ ಶ್ರೀ ಗೋಪಿಂದಸ್ವಾಮಿಯವರ ಮೊದಲ ದೃಷ್ಟಿಕೋನಕ್ಕೂ ಅನಂತರ ಅವರಲ್ಲಾದ ಹೃದಯ ಪರಿವರ್ತನೆ-ಪರಿಪಕ್ವತೆಗೂ ಇರುವ ಅಂತರವನ್ನು ಅಷ್ಟು ಮುಕ್ತವಾಗಿ ಹೇಳಿದ್ದರೂ ಅದರಲ್ಲಿ ಯಾವುದೇ ರೀತಿಯ ಕಹಿಯಾಗಲೀ, ಛಿದ್ರಾನ್ವೇಷಕ ಪ್ರವೃತ್ತಿಯಾಗಲೀ ಇಲ್ಲ.

ಮೂರ್ತಿರಾಯರು ಕೌಟುಂಬಿಕವಾಗಿ ಸುಖವಾಗಿದ್ದರೂ ದುಃಖವಿರಲಿಲ್ಲ ವೆನ್ನುವಂತಿಲ್ಲ. ರೋಗಪೀಡಿತರಾದ ತಂದೆ, ಮಕ್ಕಳ ಅಂತರ್ಜಾತೀಯ-ಅಂತರ್ದೇಶೀಯ ವಿವಾಹ, ತಮ್ಮಂದಿರ, ತಾಯಿಯ, ತಮ್ಮ ಜೀವನದ ಗುರುವೆನಿಸಿದ್ದ ಅಜ್ಜಿಯ, ಮನೆ ದೇವರಂತಿದ್ದ ಪತ್ನಿಯ ಹಾಗೂ ಇತರ ಹಲವು ಹತ್ತಿರದ ಬಂಧುಗಳ ಸಾವು ಅವರ ಮನಸ್ಸನ್ನು ಕೊಂಚ-ಎಲ್ಲೊ ಕೊಂಚ ಜರ್ಝರಿತನನ್ನಾಗಿ ಮಾಡಿದವು. ಮನುಷ್ಯ ಎಷ್ಟೇ ವಿದ್ಯಾವಂತನಿರಲಿ, ಪಾಂಡಿತ್ಯ ಸಂಪಾದನೆ ಮಾಡಿರಲಿ, ಅವನ ಹೃದಯ ವಿಶಿಷ್ಟ ಸಂದರ್ಭಗಳಲ್ಲಿ ದ್ರವಿಸುವಂತಹ ಭಾವನಾ ಪರವಶತೆಗೆ ಪಕ್ಕಾಗುತ್ತದೆ ಎಂಬ ಅಂಶ ಅವರ ಆತ್ಮಚರಿತ್ರೆಯಿಂದ ವ್ಯಕ್ತವಾಗುತ್ತದೆ.

ಇಲ್ಲಿಯ ಬರಹ ಅನುಭವದ ಹಿನ್ನೆಲೆಯನ್ನೂ ಸಾರುತ್ತಿದೆ. 'ಸುಖ, ಸುಖ ಸಾಮಗ್ರಿ' ಎಂಬ ಕಿರುಪ್ರಬಂಧ ಇವರ 'ದಿವಾನ್‌ಖಾನೆಯ ಅಂದಚಂದ' ಎಂಬ ಪ್ರಬಂಧವನ್ನು ನೆನಪಿಸುತ್ತದೆ. ಸುಖವೆಂಬ ಅನುಭೂತಿಯನ್ನು ವಿವರಿಸುತ್ತಾ ಸುಖಕ್ಕೂ ಸುಖ ಸಾಮಗ್ರಿಗೂ ಇರುವ ಅಜಗಜಾಂತರವನ್ನು ಬಹು ಸೂಕ್ಷ್ಮವಾಗಿ ಹೇಳಿದ್ದಾರೆ. ದುಃಖದಲ್ಲಿಯೂ ಸುಖದ ರೇಖೆಯನ್ನು ಗಮನಿಸಿದ್ದಾರೆ. ಮೂರ್ತಿರಾಯರು ಡಾ. ಡಿ.ವಿ.ಜಿ. ಯವರಂತೆ ಸರಳ ಜೀವನವನ್ನು ನಡೆಸಿದವರು, ವಿಸ್ತಾರವಾಗಿ ಅಧ್ಯಯನ ನಡೆಸಿದವರು. ಮನುಷ್ಯ ಜೀವನದ ಹಲವು ಮುಖಗಳನ್ನು ಕಂಡವರು. ಮಠಾಧಿ ಪತಿಗಳಾಗಲಿ, ರಾಜಕಾರಣಿಗಳಾಗಲೀ, ವಾಡಿಯಾರಂತಹ ತಮ್ಮ ಗುರುಗಳೇ ಆಗಿರಲಿ-(ತಾತ್ವಿಕವಾಗಿ) ವಿರೋಧಿಸುವ ಅನಿವಾರ್ಯತೆ ಒದಗಿದಾಗ ವಿರೋಧಿಸಿದವರು. ಇತರರಲ್ಲಿ ಕಂಡ ಒಳ್ಳೆಯ ಗುಣಗಳನ್ನು ಗ್ರಹಿಸುವವರೂ ಹೌದು. ಹೀಗೆ ಗುಣವಂತರೂ ಗುಣಗ್ರಾಹಿಗಳೂ ಆಗಿದ್ದಾರೆ ಮೂರ್ತಿರಾಯರು.

ಆತ್ಮಚರಿತ್ರೆ ಕೇವಲ ವೈಯಕ್ತಿಕ ಜೀವನದ ಘಟನೆಗಳಿಗಷ್ಟೇ ಸೀಮಿತಗೊಳಿಸದೆ ಅದನ್ನು ರಾಷ್ಟ್ರೀಯತೆಯ ರಂಗಭೂಮಿಯನ್ನಾಗಿಯೂ ಪರಿವರ್ತಿಸಿರುವುದು ಇಲ್ಲಿಯ ವೈಶಿಷ್ಟ್ಯ. ಲೇಖಕರು, ಹಲವಾರು ದೇಶಗಳಲ್ಲಿ ಪ್ರವಾಸ ಮಾಡಿದರು. ಮಕ್ಕಳು, ಬಂಧುಗಳು, ಸ್ನೇಹಿತರು, ಇರುವ ಅಮೇರಿಕಾ ದೇಶವನ್ನು 2-3 ಸಲ ಪ್ರತ್ಯಕ್ಷ ನೋಡಿದರು. ಆದ್ದರಿಂದ ತಮ್ಮ ಮಾತೃಭೂಮಿ ಸ್ವದೇಶೀಯವಾಗಿ ಅಥವಾ ವಿದೇಶೀಯ ವಾಗಿ ಹೇಗೆ ಕಾಣುತ್ತದೆ ಎಂದು ನೋಡಿದವರು. ಬಾಹ್ಯಾಕಾಶ ಯಾತ್ರಿಗಳು ರಾಕೆಟ್‌ನಲ್ಲಿ ಕುಳಿತು ಭೂಮಿಯನ್ನು ನೋಡುವಂತೆ ದೇಶದ ಹಿರಿಮೆಯನ್ನು ಮನಗಂಡು ಹಿಗ್ಗಿದರೂ ಆಗಬೇಕಾದ ಆದರೆ ಆಗಿಲ್ಲದ ಕೆಲಸಗಳಿಗಾಗಿ ಮರುಗಿದವರು. ಅದಕ್ಕಾಗಿ ಹಲವಾರು ರಚನಾತ್ಮಕ ಸಲಹೆಗಳನ್ನೂ ಮುಂದಿರಿಸಿದವರು. ಸ್ವಾತಂತ್ರ್ಯಪೂರ್ವ ಸ್ವಾತಂತ್ರ್ಯೋತ್ತರ ಭಾರತಗಳೆರಡನ್ನೂ ಕೊನೆಗೆ ಸ್ವಾತಂತ್ರ್ಯೋತ್ತರ ಭಾರತದ ಸಿದ್ಧಿ-ಶೂನ್ಯತೆಗಳೆರಡನ್ನೂ

ತ್ರಾಲಿಸಿಕವಾಗಿ ಗುರುತಿಸಿದವರು. ಚಿಂತನಶೀಲನೊಬ್ಬ ವ್ಯಷ್ಟಿ-ಸಮಷ್ಟಿಗಳೆರಡನ್ನೂ ಕುರಿತು ಹೇಗೆ ಚಿಂತನೆ ಮಾಡಬಲ್ಲನೆಂಬುದಕ್ಕೆ ಇಲ್ಲಿದೆ ಉತ್ತರ.

ಬಾಲ್ಯವೆಂದರೆ ತಾವು ಓಡಾಡಿದ ಜಾಗಗಳು, ಬೆರೆತ ಜನ, ಪಡೆದ ಪ್ರಭಾವ ಇತ್ಯಾದಿ ಹಲವು ಅಂಶಗಳ ನೆನಪು ಸಹಜ ಸ್ವಾಭಾವಿಕ. ಶ್ರೀಯುತರು ಅಕ್ಕಿ ಹೆಬ್ಬಾಳು, ಮೇಲುಕೋಟೆ (ಅದು ಅವರ ಜನ್ಮಸ್ಥಳ) ಮುಂತಾದ ಸ್ಥಳಗಳೂ ಕಾವೇರಿ, ಅಜ್ಜಿ, ಪುಟ್ಟು, ಸಾವಿತ್ರಿ, ರಂಗಯ್ಯ, ಅಯ್ಯ- ಮುಂತಾದವರ ವ್ಯಕ್ತಿ ಚಿತ್ರಣವೂ ಇಲ್ಲಿ ಬಂದಿದೆ. ಇವರ ವಿದ್ಯಾರ್ಥಿ ಜೀವನ ಬಹಳ ವಿಸ್ತಾರವಾದದ್ದು. ಪ್ರಾಥಮಿಕ ಶಾಲಾ ಗುರುಗಳಿಂದ ಆರಂಭವಾಗಿ ಬಿ.ಎಂ.ಶ್ರೀ, ಡಾ. ರಾಧಾಕೃಷ್ಣನ್, ಮೆಕಿಂಟಾಷ್, ವಾಡಿಯಾ, ರಾಲೋ ಮುಂತಾದ ಮಹಾಮಹೋಪಾಧ್ಯಾಯರಿಂದ ಅವರು ಶಿಕ್ಷಿತರಾದರು. ಅನಂತರದ ಘಟ್ಟದಲ್ಲಿ ಅವರ ವೃತ್ತಿ ಜೀವನ ನಡೆದು ಬಂದ ದಾರಿ, ತಿಂಗಳಿಗೆ ಒಂದು ನೂರು ರೂಪಾಯಿ ಸಂಬಳದಿಂದ ಆರಂಭವಾದ ಅವರ ವೃತ್ತಿ ಜೀವನದ ಅನುಭವಗಳು, ಉಪನ್ಯಾಸಕ, ಪ್ರಿನ್ಸಿಪಾಲ್, ಪ್ರೊಫೆಸರ್ ಹೀಗೆ ಹಲವು ಹುದ್ದೆಗಳನ್ನು ಅಲಂಕರಿಸಿ ಅವುಗಳಿಗೆ ಒಂದು ಶೋಭೆಯನ್ನಿತ್ತದ್ದು, ವೃತ್ತಿಯಿಂದ ನಿವೃತ್ತಿಯಾಗಿದ್ದರೂ ಪ್ರವೃತ್ತಿಯಿಂದ ನಿವೃತ್ತರಾಗದಿರುವುದು ಮುಂತಾದವುಗಳ ಭಾವ ಪ್ರಪಂಚ ಅಗಾಧವಾದುದು.

ಮೂರ್ತಿರಾಯರು ಜೀವನದಲ್ಲಿ ಒಂದು ಸುಸಂಸ್ಕೃತ ಅಭಿರುಚಿಯನ್ನು ಬೆಳೆಸಿಕೊಂಡವರು. ಸಾಹಿತ್ಯ ಅವರ ಉಸಿರು. ಸಂಗೀತ ಅವರ ಹೃದಯ. ಸ್ವಯಂ ಸಂಗೀತವನ್ನು ಕಲಿತು ಸ್ವತಃಸುಖಕ್ಕಾಗಿ ಸಂಗೀತವನ್ನು ಹಾಡಿಕೊಳ್ಳುವ ಅವರ ಸಂಗೀತಾಭಿರುಚಿ ಅಲ್ಲಲ್ಲಿ ನಿರೂಪಿತವಾಗಿದೆ. ತಮ್ಮ ಅಮೇರಿಕಾ ಪ್ರವಾಸವನ್ನು ಕುರಿತು ಪ್ರತ್ಯೇಕವಾಗಿ ಬರೆದಿದ್ದರೂ ಸಾಂದರ್ಭಿಕವಾಗಿ ಅದರ ಪ್ರಸ್ತಾಪ ಇಲ್ಲಿ ಉಲ್ಲೇಖಿಸಲ್ಪಟ್ಟಿದೆ. ಆತ್ಮಕಥೆಯನ್ನು ಕುರಿತು ಕನ್ನಡ ವಿಶ್ವಕೋಶದಲ್ಲಿ(ಸಂಪುಟ ಒಂದು- ಪುಟ 733) ಉಲ್ಲೇಖಿತವಾದ ಈ ಲಕ್ಷಣಗಳನ್ನು ಮೂರ್ತಿರಾಯರ "ಸಂಜೆಗಣ್ಣಿನ ಹಿನ್ನೋಟ"ಕ್ಕೆ ಅನ್ವಯಿಸಬಹುದು.

ಆತ್ಮಕಥೆ ಬರೆಯುವ ಉದ್ದೇಶ ತನ್ನ ತೃಪ್ತಿ ಮತ್ತು ಉಪಯೋಗಕ್ಕಾಗಿ. ತನ್ನ ಜೀವನವನ್ನು ಒಂದು ದೃಷ್ಟಿಯಿಂದ ನೋಡುವುದು ಮತ್ತು ಅದಕ್ಕೆ ಒಂದು ಕ್ರಮವನ್ನು ಕೊಡುವುದು.........

ಆತ್ಮಕಥೆಗಾರನ ಜೀವನ ಸ್ವಾರಸ್ಯವುಳ್ಳದ್ದಾಗಿರಬೇಕು. ಅದನ್ನು ಅಚ್ಚುಕಟ್ಟಾಗಿ ಚಿತ್ರಿಸುವ ಭಾಷಾಶೈಲಿಗಳನ್ನು ಅವನು ಹೊಂದಿರಬೇಕು. ಅವನಲ್ಲಿ ವಿಷಯಗಳನ್ನು ವಿಶ್ಲೇಷಿಸುವ ಸಂಯೋಜಿಸುವ, ಗ್ರಹಿಸುವ ಆತ್ಮಶೋಧನೆ ಮಾಡಿಕೊಳ್ಳುವ ಶಕ್ತಿ ಇರಬೇಕು. ಜೀವನದ ಸಾವಿರಾರು ವಿವರಗಳಲ್ಲಿ ಮುಖ್ಯವಾದವುಗಳನ್ನು ಆರಿಸಿಕೊಳ್ಳುವ, ಅವುಗಳಿಗೆ ಸೂಕ್ತ ಪ್ರಾಧಾನ್ಯವನ್ನು ಕೊಡುವ ಶಕ್ತಿಯುಳ್ಳವನೂ ಮತ್ತು ಇಡೀ ಜೀವನವನ್ನು ನೋಡಲು ಯೋಗ್ಯವಾದ ಅರ್ಥವತ್ತಾದ ಒಂದು ದೃಷ್ಟಿಕೋನವನ್ನು ಉಳ್ಳವನೂ ಆಗಿರಬೇಕು......ಆತ್ಮಕಥೆ ಓದುವುದರಿಂದ ಸ್ವಾರಸ್ಯವಾದ ಒಬ್ಬ ವ್ಯಕ್ತಿಯ ಸಂಗ ಸಿಕ್ಕಿದಂತಾಗುತ್ತದೆ....... ಅವನ ಮನೋವೃತ್ತಿ ಒಂದು ದೇಶದ ಮತ್ತು ಒಂದು ಕಾಲದ ಮನೋವೃತ್ತಿಯನ್ನು ಪ್ರತಿಬಿಂಬಿಸುತ್ತದೆ.

ಆತ್ಮಕಥೆಯಲ್ಲಿ ನಾವು ನಿರೀಕ್ಷಿಸುವುದು ವ್ಯಕ್ತಿಯ ಜೀವನದ ವಿವರಗಳನ್ನೇ ಅಲ್ಲದೆ, ಕಲಾತ್ಮಕವಾಗಿ ಮತ್ತು ನೈಜವಾಗಿ ರಚಿಸಿದ ಒಬ್ಬ ವ್ಯಕ್ತಿಯ ಜೀವನ ಚಿತ್ರವನ್ನು. ಆ ಕೃತಿಯನ್ನು ಓದುವಾಗ, ಆ ವ್ಯಕ್ತಿಯ ಸಂಗಡ ಇದ್ದೇವೆ, ಅವನೊಡನೆ ಸಂಭಾಷಣೆ ಮಾಡುತ್ತಿದ್ದೇವೆ, ಅವನು ನಮ್ಮನ್ನು ನಂಬಿ/ನಮ್ಮ ಮುಂದೆ ಅವನ ಕಷ್ಟಸುಖಗಳನ್ನು ಆಸೆ ಆಕಾಂಕ್ಷೆಗಳನ್ನು, ಸೋಲು ಗೆಲವುಗಳನ್ನು, ಮಾನಾಪಮಾನಗಳನ್ನು ತೋಡಿ ಕೊಳ್ಳುತ್ತಿದ್ದಾನೆ. ಎಂಬ ಭಾವನೆ ನಮಗೆ ಬಂದರೆ, ಅದು ಉತ್ತಮ ಆತ್ಮಕಥೆಯೆಂದು ಹೇಳಬಹುದು. ಪೂರ್ಣ ಪ್ರಾಮಾಣಿಕತೆ ಆತ್ಮಕಥೆಯ ಸತ್ವ ಸ್ವಾರಸ್ಯ.

ಶ್ರೀಯುತರ ಸ್ನೇಹವಲಯ ಬಹು ವಿಸ್ತಾರವೂ ಉನ್ನತ ಮಟ್ಟದ್ದೂ ಆಗಿದೆ. ಸರ್ವಶ್ರೀಗಳಾದ ಡಿವಿಜಿ, ಕುವೆಂಪು, ದೇಜಗೌ, ನಿಟ್ಟೂರು ಶ್ರೀನಿವಾಸರಾವ್, ಪ್ರಭುಶಂಕರ, ಹಾಮಾನಾ, ವಿ.ಸೀತಾರಾಮಯ್ಯ, ಎಂ.ಆರ್. ಶ್ರೀ, ಮಾಸ್ತಿ, ನರಸಿಂಹಯ್ಯ, ಜಿ.ಎಸ್ ಕೇಶವನ್, ಗೋವಿಂದಸ್ವಾಮಿ, ತಿ.ತಾ. ಶರ್ಮಾ, ಎಲ್. ಎಸ್. ಶೇಷಗಿರಿರಾವ್ ಹೀಗೆ ಹಲವು ಕ್ಷೇತ್ರಗಳಲ್ಲಿ ತಮ್ಮದೇ ಆದ ವೈಶಿಷ್ಟ್ಯ ಸಿದ್ಧಿ ಪ್ರಸಿದ್ಧಿಗಳನ್ನು ಪಡೆದು ಕೀರ್ತಿ ಸಂಪಾದಿಸಿದ ಮಹನೀಯರು. ಆದ್ದರಿಂದಲೇ ಅವರ ಆತ್ಮ ಚರಿತ್ರೆ ಹಲವು ಹಿರಿಯರ ಜೀವನ ಚರಿತ್ರೆಯೂ ಹೌದು.

ಈ ಆತ್ಮಚರಿತ್ರೆಯು ಆತ್ಮವಿಮರ್ಶೆಯೂ ಹೌದು. ಬಸವಣ್ಣನಂತಹ ಮಹಾ ಮಹಿಮರು ಸಾಧಿಸಿ ಬೋಧಿಸಿದ ಅಂತರಂಗ ವೀಕ್ಷಣೆಯನ್ನು ಇವರೂ ಸಾಧಿಸಿದ್ದಾರೆ. ತಮ್ಮ ಇತಿ ಮಿತಿಗಳನ್ನು ತಾವೇ ಅಲ್ಲಲ್ಲಿ ಸೂಚ್ಯವಾಗಿ ವಾಚ್ಯವಾಗಿ ಹೇಳಿದ್ದಾರೆ. ಕೃತಕತೆ, ಬೂಟಾಟಿಕೆ, ಆಡಂಬರಗಳಿಂದ ದೂರವಾದ ಸಹಜತೆ ಈ ಆತ್ಮಚರಿತ್ರೆಯ ವೈಶಿಷ್ಟ್ಯ. ತಮ್ಮ ಮಗ ಅಂತರ್ಜಾತೀಯ ವಿವಾಹವಾದಾಗ ಮಾಸ್ತಿಯವರೊಂದಿಗೆ ಮಾಡಿದ ಸಂಭಾಷಣೆ, ಅನಗತ್ಯ ವಿಧಿವಿಧಾನಗಳನ್ನು ಒಪ್ಪದ ಮನೋವೃತ್ತಿ ಅವರನ್ನು ಸಹಜ ಮಾನವನನ್ನಾಗಿ ಮಾಡಿದೆ. ಇವರ ಸೋದರ (ವಿಶ್ವೇಶ್ವರ)ನ ಸಾವು ಮಾಸ್ತಿಯವರ ಸೋದರ(ಚೆಲುವರಾಜು)ನ ಸಾವನ್ನು ಜ್ಞಾಪಿಸುತ್ತದೆ. ಇವರ ಶ್ರೀಮತಿಯ ಸಾವು ಶ್ರೀ ರಾಜರತ್ನಂರವರ ಪತ್ನಿಯ ಸಾವಿನ ಸಂದರ್ಭ ನೆನಪಿಗೆ ತರುತ್ತದೆ.

ಮೂರ್ತಿರಾಯರ ಜೀವನ ವೈವಿಧ್ಯಮಯವಾದುದು. ವ್ಯಕ್ತಿ, ಸಂಸ್ಥೆ, ದೇಶ, ವಿದೇಶ, ಮಠ-ಮಠಾಧಿಪತಿಗಳೊಂದಿಗಿನ ಸಂಬಂಧ ಇವರ ಆತ್ಮ ಚರಿತ್ರೆಗೆ ಒಂದು ವಿಶಿಷ್ಟ ಸ್ಥಾನವನ್ನು ನೀಡಿದೆ.

ಈ ಕೃತಿಯನ್ನು ಕುರಿತು ಡಾ. ಹಾ.ಮಾ.ನಾ. ಹೀಗೆನ್ನುತ್ತಾರೆ:

ಇಲ್ಲಿ ಬರುವ ನೆನಪುಗಳು, ಪ್ರಸಂಗಗಳು, ವ್ಯಕ್ತಿಗಳು, ಓದುಗರಿಗೆ ಆಶ್ಚರ್ಯ ವನ್ನುಂಟುಮಾಡುವಷ್ಟರ ಮಟ್ಟಿಗೆ ವೈವಿಧ್ಯಮಯವಾಗಿವೆ......ಲೇಖಕರು ತಮ್ಮ ಆತ್ಮಚರಿತ್ರೆಯಲ್ಲಿ ಎಲ್ಲಿಯೂ ತಮ್ಮನ್ನು ತೋರಿಸಿಕೊಳ್ಳುವ ಪ್ರಯತ್ನ ಮಾಡಿಲ್ಲ. ಆದರೆ ತಮ್ಮ ನಂಬುಗೆ ಮತ್ತು ಮನಸ್ಸುಗಳನ್ನು ಮುಚ್ಚಿಟ್ಟಿಲ್ಲ.

(ಸಂಕೇತ 01.04.1990 ಪುಟ 59)

**ಜಿ.ಎಸ್. ಶಿವರುದ್ರಪ್ಪ:**

ಒಂದು ಪರಿಣತ ಮನಸ್ಸು ಬದುಕನ್ನು ಎದುರಿಸುವ ಹಾಗೂ ಗ್ರಹಿಸುವ ಕ್ರಮವೂ ಒಳ್ಳೆಯ ಆತ್ಮಕಥನಕ್ಕೆ ವಸ್ತುವಾಗಬಲ್ಲುದು ಎನ್ನುವುದಕ್ಕೆ ಮೂರ್ತಿರಾಯರ

“ಸಂಜೆಗಣ್ಣಿನ ಹಿನ್ನೋಟ” ಎಂಬ ಈ ಕೃತಿಯೇ ಸಾಕ್ಷಿಯಾಗಿದೆ.

(ಸುಧಾ 21.10.1990 ಪುಟ 33)

**ಟಿ.ಪಿ. ಅಶೋಕ :**

ವಯಸ್ಸಿನ ಪಕ್ವತೆ, ಮಾಗಿದ, ಜೀವದ ತೃಪ್ತಿ ಎಲ್ಲವನ್ನೂ ಸಮುಚಿತ್ತದಿಂದ ಆದರೆ ಭಾವನೆಗಳನ್ನು ಕಳೆದುಕೊಳ್ಳದೆ-ನೋಡುವ ಸಮಾಧಾನ ಇವುಗಳ grace ಅನ್ನು ಕಾಣಬೇಕಾದರೆ ಈ ಆತ್ಮ ಚರಿತ್ರೆಯನ್ನು ಓದಬೇಕು. ಹಾಗೆ ನೋಡಿದರೆ ಮೂರ್ತಿರಾಯರ ಪ್ರಬಂಧಗಳನ್ನೂ ಪ್ರವಾಸ ಗ್ರಂಥಗಳನ್ನೂ ಈಗಾಗಲೇ ಚೆನ್ನಾಗಿ ಓದಿದವರಿಗೆ ಈ ಬರಹ ತೀರಾ ಬೇರೆ ಹೊಸದು ಅನ್ನಿಸದಿರಬಹುದು. ತಮ್ಮ ಇತರ ಬರವಣಿಗೆಗಳಲ್ಲಿ ತಮ್ಮ ವ್ಯಕ್ತಿತ್ವವನ್ನು ಬಚ್ಚಿಟ್ಟಿರುವುದಕ್ಕಿಂತ ಹೆಚ್ಚು ಬಿಚ್ಚಿಟ್ಟಿದ್ದಾರೆ ಎಂದೂ ಅನ್ನಿಸದಿರಬಹುದು. ಆದರೂ ಈ ಆತ್ಮಚರಿತ್ರೆಯನ್ನು ಓದುವುದು ಒಂದು ಸುಂದರವಾದ ಅನುಭವ.

(ಮಯೂರ ಜುಲೈ 1990 ಪುಟ 12)

**ಕೆ. ಸತ್ಯನಾರಾಯಣ :**

ತಾನೊಬ್ಬ ಶ್ರೀಸಾಮಾನ್ಯನೆಂದು ಕೀಳರಿಮೆ ಆತ್ಮಾನುಕಂಪವಿಲ್ಲದೆ ಒಪ್ಪಿಕೊಳ್ಳುತ್ತಲೇ -ನಾನು ಬದುಕಿನಿಂದ ಏನನ್ನು ಕಲಿತೆ? ನನ್ನ ಸುತ್ತಲ ಬದುಕಿಗೆ ಏನನ್ನು ಕೊಟ್ಟೆ? ಇನ್ನೇನು ಕೊಡಬಹುದಾಗಿತ್ತು? ನನ್ನ ಅನುಭವಗಳಿಗೆ ನಾನು ಭಾವಿಸಿದ ಅರ್ಥ ಸರಿಯಾದುದೆ? ಅದನ್ನು ಮತ್ತೆ ಪರಿಶೀಲಿಸಬೇಕೇ, ಬೇಡವೇ? ಮುಂದಿನ ಪೀಳಿಗೆಗಳ ಬದುಕು ಹಸನಾಗಬೇಕಾದರೆ ನಾನೇನು ಮಾಡಬೇಕು? ಮಾಡುತ್ತಿದ್ದೇನೆ. ಇಂತಹ ಅನೇಕ ಪ್ರಶ್ನೆಗಳ ಹಿನ್ನೆಲೆಯಲ್ಲಿ ತಾವು ಇದುವರೆಗೆ ಕಂಡ, ಉಂಡ ಮತ್ತು ಕೇಳಿದ ಬದುಕನ್ನು ಅವಲೋಕಿಸುತ್ತಾರೆ.

(ಕನ್ನಡಪ್ರಭ 10.1990)

ಈ ಮೇಲ್ಕಂಡ ವಿಮರ್ಶಕರ ಅಭಿಪ್ರಾಯಗಳು ಮೂರ್ತಿರಾಯರ ಆತ್ಮ ಚರಿತ್ರೆಯ ವೈಶಿಷ್ಟ್ಯಗಳನ್ನು ಎತ್ತಿಹಿಡಿಯುತ್ತವೆ. ಈ ಅಭಿಪ್ರಾಯಗಳನ್ನು ನಾವು ಒಪ್ಪಬಹುದಾಗಿದೆ.



# ಅಧ್ಯಾಯ –7

# ಭಾಷಾಂತರಗಳು

## 7.1 ಹಿನ್ನೆಲೆ

ಭಾಷಾಂತರಕಾರರು ಕೊಲೆಗಾರರು ಎಂಬ ಮಾತಿದೆ. ಏಕೆಂದರೆ, ಮೂಲ ಕೃತಿಯನ್ನು ಅನುವಾದ ಮಾಡುವಾಗ ಅಲ್ಲಿಯ ಸೊಗಸು, ಕವಿಯ ಆಶಯಗಳು ಮತ್ತೊಂದು ಭಾಷೆಗೆ ಸಮರ್ಥವಾಗಿ ತರಲಾಗುವುದಿಲ್ಲ. ಒಮ್ಮೊಮ್ಮೆ ಅನುವಾದಕ ಮೂಲದ ಭಾಗ, ಭಾವವನ್ನು ಬದಿಗಿರಿಸಿ ತನ್ನದೇ ಭಾವಕ್ಕೆ ಅಭಿವ್ಯಕ್ತಿ ನೀಡಬಹುದು. ಆದರೆ ವಾಚಕರಿಗೆ ಚಿರಪರಿಚಿತವಾದ ಕೃತಿಯೊಂದನ್ನು ತನ್ನ ಭಾಷೆಗೆ ತರುವಾಗ ಅನುವಾದಕ ಜಾಗೃತವಾಗಿಯೇ ಇರುತ್ತಾನೆ. ಭಾಷಾಂತರಗಳು ಅನಿವಾರ್ಯ ಅಗತ್ಯಗಳೂ ಹೌದು. ಏಕೆಂದರೆ ಮೂಲಗ್ರಂಥದ ಭಾಷೆ ತಿಳಿಯದ ಜನ ಅನುವಾದಗಳಿಂದಲಾದರೂ ಆ ಭಾಷಾ ಸಾಹಿತ್ಯ ಲೋಕವನ್ನು ಪ್ರವೇಶ ಮಾಡುವ ಅವಕಾಶವನ್ನು ಪಡೆಯುತ್ತಾರೆ.

ಪ್ರೊ. ಎ.ಎನ್. ಮೂರ್ತಿರಾಯರನ್ನು ಬರಹಗಾರರನ್ನಾಗಿಸಿದ ಕ್ಷೇತ್ರವೇ ಅನುವಾದ. 1943ರಲ್ಲಿ ಅವರು ಅನುವಾದಿಸಿದ ಸಾಕ್ರಟೀಸನ ಕೊನೆಯ ದಿನಗಳು ಅವರ ಮೊದಲ ಕೃತಿಯೂ ಹೌದು, ಸಾಕ್ರಟೀಸನನ್ನು ಕುರಿತ ಕನ್ನಡದಲ್ಲಿ ಲಭ್ಯವಿರುವ ಕೃತಿಗಳಲ್ಲಿ ಒಂದು ಪ್ರಮಾಣ ಗ್ರಂಥವೂ ಹೌದು. ಯಾವುದೇ ಮೂಲ ಪೀಠಿಕೆ, ಮುನ್ನುಡಿಯೂ ಇಲ್ಲದೆ 'ಅವತರಣಿಕೆ'ಯಿಂದಲೇ ಆರಂಭವಾಗುತ್ತದೆ ಈ ಕೃತಿ. ಮೂವತ್ತೇಳು ಪುಟಗಳ ಸುದೀರ್ಘ ಅವತರಣಿಕೆಯಿರುವ ಈ ಕೃತಿ 207ಪುಟಗಳಷ್ಟು ಬೆಳೆದಿದೆ. ಏಳು ಪುಟಗಳಷ್ಟು ಟಿಪ್ಪಣಿಗಳು ಕೃತಿಯಲ್ಲಿ ಬರುವ ಗ್ರೀಕ್ ಅಂಕಿತನಾಮ ಗಳನ್ನು ನಮಗೆ ಪರಿಚಯಿಸುತ್ತವೆ. ಮೂರ್ತಿರಾಯರು ಪ್ರಬುದ್ಧ-ಅಪ್ರಬುದ್ಧ ಓದುಗರನ್ನು ಕುರಿತು ವಹಿಸುವ ಕಾಳಜಿ ಇದರಿಂದ ವ್ಯಕ್ತವಾಗುತ್ತದೆ. ಓದುಗನು ತಾನು ಓದಿದ ತಮ್ಮ ಕೃತಿಯ ಬಗ್ಗೆ ಪರಿಪೂರ್ಣ ಜ್ಞಾನವನ್ನು ಪಡೆಯ ಬೇಕೆನ್ನುವುದು ಅವರ ಉದ್ದೇಶ.

ಸಾಕ್ರಟೀಸನ ಜೀವನಕ್ಕಿಂತಲೂ, ಆತನ ಕೊನೆಯ ದಿನಗಳ ಮೇಲೆಯೇ ಲೋಕದ ದೃಷ್ಟಿ ಹೆಚ್ಚು ಕೇಂದ್ರೀಕರಿಸಲ್ಪಟ್ಟಿದೆ. ಅವನ ವಿಚಾರಣಾ ಕಾಲವೆಂದರೆ ಸಾಕ್ರಟೀಸನ ಜೀವನದ ಸಿಂಹಾವಲೋಕನ. ಆತನ ಜೀವನದ ಭೂತಕಾಲದ ಚಿತ್ರಣ ನಮಗೆ ಸಿಗುವುದು ಅಲ್ಲಿಯೇ. ಆದ್ದರಿಂದ ಈ ಕೃತಿಯ ಶೀರ್ಷಿಕೆ ಅತ್ಯಂತ ಔಚಿತ್ಯಪೂರ್ಣ. ಸಾಕ್ರಟೀಸನ

ಜೀವನ, ವ್ಯಕ್ತಿತ್ವ, ಚರ್ಚಿಸುತ್ತಿದ್ದ ವಿಷಯ, ಆತನ ಸಮಕಾಲೀನರು, ಸಮಾಜದ ಮೇಲೆ ವಿಶೇಷತಃ ಸಂಕ್ರಮಣ ಕಾಲದಲ್ಲಿದ್ದ ಯುವಜನಾಂಗದ ಮೇಲೆ ಆತನ ಪ್ರಭಾವ, ಕೌಟುಂಬಿಕ ಹಿನ್ನೆಲೆ, ಸಚ್ಚಾರಿತ್ರ್ಯ, ಆತ್ಮ ಸಂಯಮ, ನಿರ್ಲಿಪ್ತತೆ, ಮೇಧಾವಿತನ, ವಿಚಾರಶಕ್ತಿ, ಚಿಂತನಶೀಲತೆಗಳು ಇಲ್ಲಿ ನಾಲ್ಕು ಶೀರ್ಷಿಕೆಯಡಿ ಅನುವಾದಿಸಿದ್ದಾರೆ. ನಾಟಕೀಯ ಶೈಲಿಯಲ್ಲಿರುವ ಈ ಕೃತಿ ನಮ್ಮ ಕಣ್ಣಮುಂದೆ ರಂಗಭೂಮಿಯೊಂದನ್ನು ತೆರೆಯುತ್ತದೆ. ಆರ್ಕಾನನ ಮಂದಿರದ ಕೈಸಾಲೆ, ನ್ಯಾಯಸ್ಥಾನ ಹಾಗೂ ಸೆರೆಮನೆಗಳ ದೃಶ್ಯಗಳು ನಮ್ಮ ಮುಂದೆ ಅಂದಿನ ಗ್ರೀಕ್ ಮಹಾಘಟನೆಯೊಂದನ್ನು ಎಳೆತಂದು ಕಣ್ಣ ಮುಂದೆ ನಿಲ್ಲಿಸುತ್ತವೆ.

1932ರಲ್ಲಿ ಪ್ರಕಟವಾದ ಶ್ರೀ ಎಸ್. ಜಿ. ಶಾಸ್ತ್ರಿಗಳು ತಮ್ಮ ಕೃತಿಗೆ "ಸಾಕ್ರಟೀಸನ ಮರಣ"ವೆಂಬ ಶೀರ್ಷಿಕೆ ನೀಡಿದ್ದರೆ, ಮೂರ್ತಿರಾಯರು ತಮ್ಮ ಕೃತಿಗೆ 'ಸಾಕ್ರಟೀಸನ ಕೊನೆಯ ದಿನಗಳು' ಎಂಬ ಶೀರ್ಷಿಕೆ ನೀಡಿದ್ದಾರೆ. ಶಾಸ್ತ್ರಿಗಳ ಕೃತಿಗೆ ಡಾ. ಡಿ.ವಿ.ಜಿ ಯವರು 32ಪುಟಗಳ ಅವತರಣಿಕೆ ಬರೆದಿದ್ದಾರೆ. ಮೂರ್ತಿರಾಯರು ತಮ್ಮ ಕೃತಿಗೆ ತಾವೇ ಸ್ವತಃ 37ಪುಟಗಳ ಅವತರಣಿಕೆ ಬರೆದಿದ್ದಾರೆ. ixನೇ ಪುಟದಲ್ಲಿ ನೀಡಿರುವ ಅಡಿಟಿಪ್ಪಣಿ ಒಂದು ತೌಲನಿಕ ಚಿತ್ರಣ ನೀಡುತ್ತದೆ. ಗ್ರೀಸ್ ದೇಶದ ಕಾರಿಬ್ಯಾಂಟಿಕ್ ವ್ರತವನ್ನು 'ಗೊಂದಲ'ಕ್ಕೆ ಹೋಲಿಸಿರುವುದು ನಮಗೆ ಆ ವಿದೇಶೀ ವ್ರತದ ಒಂದು ಸ್ಪಷ್ಟ ಕಲ್ಪನೆ ನೀಡುತ್ತವೆ. (ಈ 'ಗೊಂದಲ'ದ ಬಗ್ಗೆ ಅವರ ಆತ್ಮಚರಿತ್ರೆಯಲ್ಲಿಯೂ ಉಲ್ಲೇಖವಿದೆ). ಈ ಅವತರಣಿಕೆ ಮೂರ್ತಿರಾಯರು ಸಾಕ್ರಟೀಸನ ಜೀವನವನ್ನು ಕುರಿತು ಬರೆದ ಸ್ವತಂತ್ರ ವಿಮರ್ಶಾತ್ಮಕ ಲೇಖನ. ಸಾಕ್ರಟೀಸನು ಆ ಎತ್ತರವನ್ನು ಏರಿದ ಬಗೆಯನ್ನು ಅವರು ಹೀಗೆ ಬರೆಯುತ್ತಾರೆ.

"ಜ್ಞಾನಾರ್ಜನೆಗೆ ಹೊರಡಬೇಕಾದರೆ ನಾವು ಅಜ್ಞಾನಿಗಳೆಂದು ತಿಳಿದು, ಅಹಂಕಾರದಿಂದ ನಿವೃತ್ತರಾಗುವುದು ಮೊದಲನೆಯ ಕೆಲಸ..... ಅವನೂ ಇತರರಂತೆಯೇ ಯಾತ್ರಿಕ.....ಅವನಿಗೂ ಇತರರಿಗೂ ಇದ್ದ ವ್ಯತ್ಯಾಸವಿಷ್ಟೇ, ಯಾತ್ರೆಯ ಅವಶ್ಯಕತೆಯನ್ನು, ಯಾವ ಮಾರ್ಗದಲ್ಲಿ ಹೋದರೆ ಅದು ಸುರಕ್ಷಿತವಾಗಿ ಸಾಗಬಹುದೆಂಬುದನ್ನೂ ಅವನು ಇತರರಿಗಿಂತಲೂ ಚೆನ್ನಾಗಿ ಬಲ್ಲನು"(xiv–xv)

ಆದರೆ ಅವನ ಈ ಭಿನ್ನತೆಯನ್ನು ಅರಿಯುವ ಸಾಮಾಜಿಕ ವೇದಿಕೆ ಅಂದು ಇನ್ನೂ ನಿರ್ಮಾಣವಾಗಿರಲಿಲ್ಲ. ಅಂದಿನ ಸಾಮಾಜಿಕ, ರಾಜಕೀಯ ಹಿನ್ನೆಲೆಗಳನ್ನು ಮೂರ್ತಿರಾಯರು ಈ ಅವತರಣಿಕೆಯಲ್ಲಿ ವಿಶದೀಕರಿಸುತ್ತಾರೆ. ಅವನ ಮೇಲೆ ಅಸಮಾಧಾನ ಹುಟ್ಟಲು ಕಾರಣ, ತತ್ಪರಿಣಾಮವಾಗಿ ಅರಿಸ್ಟೋಫನೀಸನ 'ಮೇಘಗಳು' ನಾಟಕದಲ್ಲಿ ಹಾಸ್ಯಕ್ಕೀಡಾದ ಸಾಕ್ರಟೀಸನ ಪಾತ್ರ-ಇವುಗಳನ್ನು ವಿಮರ್ಶೆಯ ನೆಲೆಯಲ್ಲಿ ತೂಗಿ ನೋಡಿದ್ದಾರೆ. ಅವನ ಜೀವನದ ಮತ್ತು ದಿನಚರ್ಯೆಯ ಘನೋದ್ದೇಶವನ್ನು ಗ್ರಹಿಸುವ ಶಕ್ತಿ ಅವರಿಗಿರಲಿಲ್ಲ (xxii). ಸಾಕ್ರಟೀಸನ ಸತ್ಯಾನ್ವೇಷಣಾ ವಿಧಾನವನ್ನು 'ಬೇಟೆಗಾರನ ಆಸಕ್ತಿಗೂ' ಯುವಕನು ತನ್ನ ಪ್ರೇಯಸಿಗಾಗಿ ಪಡುವ ತವಕಕ್ಕೂ (xv) ಹೋಲಿಸಿರುವುದು ಸಂದರ್ಭದ ತೀವ್ರತೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ಸಾಕ್ರಟೀಸನು ಮರಣವನ್ನು ಸ್ವಾಗತಿಸಿದ ಕಾರಣವನ್ನು ಮೂರ್ತಿರಾಯರು ಒಪ್ಪುವುದಿಲ್ಲ. ಬದಲು ತಮ್ಮದೇ ಆದ ಸ್ವತಂತ್ರ ಸಿದ್ಧಾಂತವನ್ನು ಹೀಗೆ ಮಂಡಿಸುತ್ತಾರೆ.

“ಆದರೆ ಹೀಗೆ ಹೇಳಲು ಏನೂ ಆಧಾರವಿಲ್ಲ. ಸಾಯುವುದಕ್ಕೆ ಪ್ರತಿಯೊಬ್ಬ ಸಿದ್ಧನಾಗುತ್ತಿದ್ದ ಸಾಕ್ರಟೀಸನಿಗೆ ಮೃತ್ಯುವೆಂದರೆ ಯಾವ ಭಯವೂ ಇರಲಿಲ್ಲ. ಆದರಿಂದಲೇ ಅವನು ಅದನ್ನು ಸಂತೋಷದಿಂದ ಎದುರುಗೊಂಡನು. ಅವನು ಜೀವನಕ್ಕೆ ಹೆದರಿ ಮೃತ್ಯುವನ್ನು ಆಲಿಂಗಿಸಿಕೊಳ್ಳುವಂತಹ ಹೇಡಿಯಲ್ಲ.” (XXVI)

ಹೀಗೆ ಮೂರ್ತಿರಾಯರ ಅನುವಾದ ಕೇವಲ ಅನುವಾದಕ್ಕಾಗಿ ಅನುವಾದವಾಗಿರದೆ ಸ್ವತಂತ್ರ ಚಿಂತನೆ, ಆಳವಾದ ಅಧ್ಯಯನ, ಅರ್ಥವತ್ತಾದ ನಿರೂಪಣೆ, ವಿಮರ್ಶಾತ್ಮಕ ಪ್ರಜ್ಞೆಗಳಿಂದ ಕೂಡಿದ ಬರಹವಾಗಿದೆ.

“ತತ್ವಶಾಸ್ತ್ರ ನಗರದಲ್ಲಿ ಅವನದೇ ಒಂದು ಸೌಧವಿದೆಯೆಂದು ಹೇಳಲಾಗುವುದಿಲ್ಲ. ಆದರೆ ಅವನು ತೋರಿಸಿಕೊಟ್ಟ ಕ್ರಮದಿಂದ ತತ್ವಶಾಸ್ತ್ರ ಸಾಧ್ಯವಾಯಿತೆನ್ನಬಹುದು,...... ಆ ಪಾತ್ರವನ್ನು ಅವಲಂಬಿಸಿ ಪಾಶ್ಚಾತ್ಯ ತತ್ವಶಾಸ್ತ್ರದ ಮಹಾನದಿಯೊಂದು ಹರಿಯಿತು.” (XXVII)

ಮುಂತಾದ ಸ್ವತಂತ್ರ ರೂಪಕಗಳು ಮೂರ್ತಿರಾಯರ ಸಾಹಿತ್ಯಾತ್ಮಕ ಶೈಲಿಗೂ, ವಿಷಯದ ವಿಮರ್ಶಾತ್ಮಕ ವಿಶ್ಲೇಷಣಾ ಪ್ರತಿಭೆಗೂ ಸಾಕ್ಷಿ.

“ಧೈರ್ಯ, ನ್ಯಾಯ, ಧರ್ಮ, ರಾಷ್ಟ್ರ ಮೊದಲಾದ ಪದಗಳ ಅರ್ಥ ತಿಳಿಯದೆಯೇ ನಾವು ಪ್ರತಿದಿನವೂ ಅವುಗಳನ್ನು ಉಪಯೋಗಿಸುತ್ತಿರುತ್ತೇವೆ. ಆದರೆ ಜ್ಞಾನಾಭಿಲಾಷಿಗಳು ಅವುಗಳ ಅರ್ಥವನ್ನು ಪರೀಕ್ಷಿಸಿ ನೋಡಿಯೇ ತೀರಬೇಕು.” (XXVII)

ಮುಂತಾದ ಮುಕ್ತಕಗಳು ಕೇವಲ ಶಬ್ದಸಮೂಹವಾಗದೆ, ಅರ್ಥಭಾರ, ಚಿಂತನಾ ಪ್ರಚೋದನೆ ಹಾಗೂ ವಿಚಾರ ವೈಶಾಲ್ಯದಿಂದ ಕೂಡಿದೆ.

ನಮ್ಮ ಉಪನಿಷತ್ತು, ಗೀತೆಗಳು ಬೋಧಿಸುವ ಜೀವನದ ಪರಮಾರ್ಥದ ಸಮೀಪದಲ್ಲಿರುವ ಸಾಕ್ರಟೀಸನ ವಿಚಾರಧಾರೆ ಕನ್ನಡಿಗರಿಗೆ ಲಭ್ಯವಿರುವಂತೆ ಮೂರ್ತಿರಾಯರು ಮಾಡಿದ್ದಾರೆ. ಈ ಎರಡನ್ನೂ ತೌಲನಿಕವಾಗಿ ಅಧ್ಯಯನ ಮಾಡುವ ಪ್ರಯತ್ನ ಮಾಡಬಹುದಾಗಿದೆ. ಶ್ರೀ ಡಿವಿಜಿ ಯವರ ಅವತರಣಿಕೆ ಈ ಮಹತ್ಕಾರ್ಯವನ್ನು ಈಗಾಗಲೇ ಮಾಡಿ ಮುಗಿಸಿದ್ದರೂ ಮುಂದಿನ ವಿಸ್ತೃತ ಅಧ್ಯಯನಕ್ಕೆ ಇದೊಂದು ತೋರು ಬೆರಳಾದೀತು.

ಕನ್ನಡಿಗರಿಗೆ ಷೇಕ್ಸ್‌ಪಿಯರ್ ಅಪರಿಚಿತನೇನೂ ಅಲ್ಲ. ಆತನ ಹತ್ತು ಹಲವು ಕೃತಿಗಳು ವೈನೋದಿಕಗಳು, ದುರಂತ ನಾಟಕಗಳು-ಕನ್ನಡಿಗರಿಗೆ ಮೂಲರೂಪದಲ್ಲಿಯೂ, ಅನುವಾದ ರೂಪಾಂತರಗಳ ಮೂಲಕವೂ ಅತ್ಯಂತ ಚಿರಪರಿಚಿತ. ಬಹು ಹಿಂದೆಯೇ ಈ ಭಾಷಾಂತರ ರೂಪಾಂತರಗಳು ಕನ್ನಡದಲ್ಲಿ ಕಾಣಿಸಿಕೊಂಡು, ಷೇಕ್ಸ್‌ಪಿಯರ್‌ನನ್ನು ಹಾರ್ದಿಕವಾಗಿ ಬರಮಾಡಿಕೊಂಡವರು ಕನ್ನಡಿಗರು. ಅದರಲ್ಲಿಯೂ ಕನ್ನಡದ ಮೊದಲ ಉಪಲಬ್ಧ ನಾಟಕ 'ಮಿತ್ರವಿಂದಾ ಗೋವಿಂದ' ಸಂಸ್ಕೃತದ 'ರತ್ನಾವಳಿ' ನಾಟಕದ ಭಾಷಾಂತರ. ಕನ್ನಡದ ಮೊದಲ ನಾಟಕವೇ ಭಾಷಾಂತರ ಎಂಬುದು ಗಮನಾರ್ಹವಾದ ಅಂಶವಾಗಿದೆ. (ಎಂ.ಎಸ್. ಪುಟ್ಟಣ್ಣ - ಒಂದು ಅಧ್ಯಯನ, ಡಾ.ಹೆಚ್.ಎಸ್. ಸುಜಾತ, 1981 ಪುಟ 195) ಇಂಗ್ಲೆಂಡಿನಿಂದ ಬಂದ ಆಂಗ್ಲ ರಂಗಭೂಮಿ ನಟರು ಪ್ರದರ್ಶಿಸಿದ ಷೇಕ್ಸ್‌ಪಿಯರ್‌ನ ನಾಟಕಗಳನ್ನು ಮೂಲರೂಪದಲ್ಲಿಯೇ ಕಂಡ ಇಲ್ಲಿಯ ವಿದ್ಯಾವಂತರಿಗೆ ಅವುಗಳ ಭಾಷಾಂತರ-ರೂಪಾಂತರಗಳನ್ನು ಮಾಡಬೇಕೆಂಬ ಪ್ರಚೋದನೆ ದೊರೆಯಿತು.

ಬಹಳ ಮುಂಚೆಯೇ ಎಂ. ಎಸ್. ಪುಟ್ಟಣ್ಣ, ಬಸವಪ್ಪಶಾಸ್ತ್ರಿ–ಮುಂತಾದವರು ಷೇಕ್ಸ್‌ಪಿಯರ್‌ನ ಹಲವು ಕೃತಿಗಳನ್ನು ರೂಪಾಂತರಿಸಿದ್ದರು. ಮಹಾರಾಜರಿಂದ ಪ್ರೋತ್ಸಾಹ-ಪೋಷಣೆ ಪಡೆದ ನಾಟಕ ರಂಗಭೂಮಿ ಈ ದಿಸೆಯಲ್ಲಿ ಪ್ರತ್ಯೇಕವಾಗಿ ಬೆಂಬಲ ನೀಡಿತು. ಷೇಕ್ಸ್‌ಪಿಯರ್‌ನ ಹಲವು ಕೃತಿಗಳು ಕನ್ನಡಕ್ಕೆ ಭಾಷಾಂತರ-ರೂಪಾಂತರಗಳ ಮೂಲಕ ಪ್ರವೇಶ ಸ್ಥಾನ ಪಡೆಯಲು ಕಾರಣವಾಯಿತು. ಷೇಕ್ಸ್‌ಪಿಯರ್ ತನ್ನ ಕಾವ್ಯ-ನಾಟಕಗಳಲ್ಲಿ ಕಾವ್ಯ ಪ್ರೇಮಿಗಳಾದ ಪ್ರೇಕ್ಷಕರಿ(ಶ್ರೋತೃ-ವಾಚಕ)ಗಾಗಿ ಕಾವ್ಯವನ್ನೂ ತನ್ನ ನಾಟಕಗಳಲ್ಲಿ ತಂದಿದ್ದಾನೆ. ಇಂತಹ ಕಾವ್ಯ ಭಾಗಗಳನ್ನೂ ಗದ್ಯರೂಪದಲ್ಲಿ ಅನುವಾದ ಮಾಡಿದವರೂ ಇದ್ದಾರೆ. ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕಸಭಾ ನಾಟಕ ಮಂಡಲಿಗಾಗಿ ರೂಪಾಂತರಿಸಿದ ನಾಟಕಗಳಲ್ಲಿ ಗದ್ಯಭಾಗವೂ ಪದ್ಯ ರೂಪವನ್ನು ತಳೆದು ಸಂಗೀತ ಪ್ರಧಾನ ನಾಟಕಗಳ ಅಗತ್ಯವನ್ನು ಪೂರೈಸಿದವು.

ಇದುವರೆಗೆ ಸಂಸ್ಕೃತ ನಾಟಕಗಳನ್ನು ಕನ್ನಡಕ್ಕೆ ಅನುವಾದ ಮಾಡುತ್ತಿದ್ದ ಕರ್ನಾಟಕದ ವಿದ್ವಾಂಸಕರ ಗಮನ ಇಂಗ್ಲೀಷ್ ನಾಟಕದತ್ತ ಹೊರಳಿತು. ಇಂಗ್ಲೆಂಡಿನಿಂದ ಆಗಮಿಸಿದ ನಾಟಕ ತಂಡದವರು ಅಭಿನಯಿಸಿದ ನಾಟಕಗಳನ್ನು ನೋಡಿದ ನಮ್ಮ ಕನ್ನಡದ ವಿದ್ವಾಂಸರು ಅವುಗಳಿಂದ ಪ್ರಭಾವಿತರಾದರು. ಷೇಕ್ಸ್‌ಪಿಯರ್ ನಾಟಕಗಳು ಪ್ರತಿಪಾದಿಸುವ ಮಾನವನ ಮಾನಸಿಕ ವಿಕಾರಗಳಾದ ಕ್ರೋಧ, ಅಸೂಯೆ, ಅಸಹನೆ, ದ್ವೇಷ ಮುಂತಾದವು ರಾಮಾಯಣ, ಮಹಾಭಾರತಗಳಲ್ಲಿ ಪ್ರತಿಪಾದಿತವಾದ ಹಲವು ಅಂಶಗಳೊಡನೆ ಇರುವ ಸಾಮ್ಯವನ್ನು ಗುರುತಿಸಿದರು. ಅದೇ ಕಥಾವಸ್ತುವನ್ನು ಇಲ್ಲಿಯ ಪರಿಸರಕ್ಕೆ ಅಳವಡಿಸಿದರು. ಭಾಷೆ, ಪರಿಸರ, ತಂತ್ರ, ಸಂವಿಧಾನ ಶೈಲಿಗಳಲ್ಲಿ ಉಂಟಾದ ಮಾರ್ಪಾಟುಗಳು ಷೇಕ್ಸ್‌ಪಿಯರ್ ನಾಟಕಗಳಿಂದ ಎರವಲು ತಂದದ್ದೆಂದು ತಿಳಿಯುತ್ತಲೇ ಇರಲಿಲ್ಲ. ಇಂಗ್ಲೀಷ್ ಭಾಷೆ ಬಾರದ ಕನ್ನಡ ವಿದ್ವಾಂಸರೂ ಸಹಾ ಈ ಕಥಾವಸ್ತುವಿನಿಂದ ಎಷ್ಟರ ಮಟ್ಟಿಗೆ ಆಕರ್ಷಿತರಾದರೆಂದರೆ, ಇಂಗ್ಲೀಷ್ ಬಲ್ಲವರಿಂದ ಷೇಕ್ಸ್‌ಪಿಯರ್ ನಾಟಕಗಳನ್ನು ಓದಿಸಿ, ಅರ್ಥವನ್ನು ಗ್ರಹಿಸಿ ಅವುಗಳನ್ನು ರೂಪಾಂತರಿಸಿದರು. ಆದರೆ ಹೀಗೆ ಮೂಲದ ನೇರ ಪರಿಚಯವಿಲ್ಲದವರ ಭಾಷಾಂತರ-ರೂಪಾಂತರಗಳಲ್ಲಿ ಮೂಲದ ಭಾವ ಬರದಿರುವ ಸಾಧ್ಯತೆಯೂ ಇಲ್ಲದಿಲ್ಲ. ಷೇಕ್ಸ್‌ಪಿಯರ್‌ನನ್ನು ಕುರಿತ ಗ್ರಂಥದಲ್ಲಿ ಮೂರ್ತಿರಾಯರು ಇದನ್ನು ಗುರುತಿಸಿದ್ದಾರೆ.

ಸಂಸ್ಕೃತ, ಇಂಗ್ಲೀಷ್, ಫ್ರೆಂಚ್, ಹಾಗೂ ಕನ್ನಡ ಭಾಷೆಗಳ ಮೇಲೆ ಅಪಾರ ಪ್ರಭುತ್ವ ಪಡೆದಿರುವ ಮೂರ್ತಿರಾಯರು ಸಂಸ್ಕೃತ ನಾಟಕ ಕಾವ್ಯಗಳನ್ನು ವಿಮರ್ಶೆಗಷ್ಟೇ ಸೀಮಿತಗೊಳಿಸಿಕೊಂಡರು. ಇಂಗ್ಲೀಷ್ ಶಿಕ್ಷಣ ಭಾರತೀಯರ ಮೇಲೆ ಮಾಡಿದ ಮೋಡಿಯಿಂದಾಗಿ ಸಂಸ್ಕೃತ ಸಾಹಿತ್ಯಾನುವಾದದ ಸ್ಥಾನವನ್ನು ಇಂಗ್ಲೀಷ್ ಸಾಹಿತ್ಯಾನುವಾದ ಆಕ್ರಮಿಸಿತು. ಯುಗಧರ್ಮದ ಈ ವಿಶಿಷ್ಟ ಲಕ್ಷಣ ಮೂರ್ತಿರಾಯರ ಮನಸ್ಸಿನಲ್ಲಿಯೂ ಈ ಬಯಕೆಯನ್ನು ಹುಟ್ಟಿಸಿತು. ಹೀಗಾಗಿ ಷೇಕ್ಸ್‌ಪಿಯರ್‌ನ ಮೂಲ ಕೃತಿಯೊಂದರ ಸಮರ್ಥ ಅನುವಾದ ಕನ್ನಡಕ್ಕೆ ಬಂದಿತು. ಮೂರ್ತಿರಾಯರು ಇಂಗ್ಲೀಷ್ ಮೂಲವನ್ನು ಆಳವಾಗಿ ಅಧ್ಯಯನ ಮಾಡಿದವರಾದ್ದರಿಂದ ಮೂಲಕ್ಕೆ ಅತ್ಯಂತ ಹತ್ತಿರವೂ, ಮೂಲದ ಭಾವಗಳನ್ನು ಕನ್ನಡದಲ್ಲಿ ಯಾವುದೇ ಬದಲಾವಣೆಯೂ ಇಲ್ಲದೆ ತರಲು ಇದರಿಂದ ಸಾಧ್ಯವಾಯಿತು.

ಮೂಲ ಕೃತಿಗಳ ಅನುವಾದ ಮಾಡುವಾಗ ಮೂರ್ತಿರಾಯರು ಉಪಯೋಗಿಸಿದ ಶೈಲಿ ಸರಳ. ಯಾವುದೇ ಶಬ್ದಾಡಂಬರವೂ ಇಲ್ಲದೆ, ವಿದ್ವತ್ಪ್ರದರ್ಶನವೂ ಇಲ್ಲದೆ, ನಿರಾಯಾಸವಾಗಿ ಓದಿಸಿಕೊಂಡು ಹೋಗುವ ಶೈಲಿ. ಒಂದೇ ಒಂದು ನಿದರ್ಶನದಿಂದ ಇದನ್ನು ಸಮರ್ಥಿಸಬಹುದು.

"ಶರೀರ ಪೋಷಣೆ, ದ್ರವ್ಯಾರ್ಜನೆಗಳಿಗಿಂತ ಆತ್ಮ ಪರಿಪೂರ್ಣತೆಗೆ ಹೆಚ್ಚು ಗಮನ ಕೊಡಿರೆಂದು, ಪ್ರತಿಯೊಬ್ಬ ವ್ಯಕ್ತಿಗೂ ಪ್ರತಿಯೊಂದು ರಾಷ್ಟ್ರಕ್ಕೂ ಸದ್ಗುಣವು ಹೊನ್ನಿನಿಂದ ಬರುವುದಿಲ್ಲ. ಸದ್ಗುಣಗಳಿಂದ ಹೊನ್ನೂ ಇತರ ಉತ್ತಮ ಫಲಗಳೆಲ್ಲವೂ ಬರುತ್ತವೆ ಎಂದು"

(ಸಾ. ಕೊ.ದಿ. ಪುಟ 55)

'ನಾವು ಹೆಚ್ಚು ಬೆಲೆ ಕಟ್ಟುವುದು ಕೇವಲ ಜೀವನ ಮಾತ್ರಕ್ಕಲ್ಲ. ಉತ್ಕೃಷ್ಟವಾದ ಜೀವನಕ್ಕೆ'

(ಅದೇ ಪುಟ 55)

ಮೂರ್ತಿರಾಯರು ಅಲ್ಲಲ್ಲಿ ಸಂಸ್ಕೃತ ಶಬ್ದಗಳನ್ನು ಉಪಯೋಗಿಸುವುದೂ ಇದೆ. ಆದರೆ ಅವು ಕನ್ನಡ ಭಾಷೆಯಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡ, ಕನ್ನಡದ ಜಾಯಮಾನಕ್ಕೆ ಹೊಂದಿಕೊಂಡು ಬಳಕೆಯಲ್ಲಿ ಚಿರಪರಿಚಿತವಾಗಿರುವ ಮೂಲಾರ್ಥವನ್ನು ಸಮರ್ಥವಾಗಿ ಹಿಡಿದಿಡಲು ಶಕ್ತವಾದ ಅನಿವಾರ್ಯ ಶಬ್ದಗಳು. ಅಲ್ಲಲ್ಲಿ ಕನ್ನಡದ ರೂಢಿಯ ಶಬ್ದಗಳಿಗೆ ಆವರಣದಲ್ಲಿ ಇಂಗ್ಲೀಷ್ ಶಬ್ದಗಳನ್ನು ಕೊಟ್ಟಿದ್ದಾರೆ. ಲಕ್ಷಣ (Definition) XIV. ಸ್ತೋತ್ರಗೀತ (Dithyramb) 41. ರಾಜ್ಯಶಾಸ್ತ್ರಜ್ಞ (Politician). ದೈವಿಕ (Spiritual) 60. ಮೂವತ್ತು ಜನ ಘಾತುಕರ ಪ್ರಭುತ್ವ (The Oligarchy of the thirty) 58. ಒಪ್ಪ ಮುಂದು (Embalm) 139. ನಾಯಿ-ನಕ್ಷತ್ರ (The Dog-Star) 213. ಭಾವಗಳು (Ideas) 215. ಮೇಳ (Harmony) 217. ಒಳ್ಳಿನ ಭಾವ (The Idea of the Good)...... 'ಸತ್' ಎನ್ನುವುದಕ್ಕೆ ಕಾರಣವಾದದ್ದು ಈ ಭಾವವೇ (216). ಹನ್ನೊಂದು ಜನ ನ್ಯಾಯಾಧೀಶರು (The Eleven Judges) (ಸಾ.ಕೊ.ದಿ.) ಈ ಸಂವಾದಿ ಶಬ್ದಗಳು ಪ್ರಾದೇಶಿಕ ಕನ್ನಡದವರಿಗೆ ಪುಷ್ಟಿಯಾಗಿ, ಗ್ರೀಸ್ ದೇಶದ ಅಂದಿನ ಪರಿಭಾಷೆಯನ್ನು ಸಮಷ್ಟಿಯಾಗಿ ಅರ್ಥ ಮಾಡಿಕೊಳ್ಳಲು ತುಂಬಾ ಉಪಯುಕ್ತ.

ವಿಚಾರಣೆಯನ್ನು ಎದುರಿಸಲು ನ್ಯಾಯಾಧೀಶರ ಮುಂದೆ ನಿಂತ ಸಾಕ್ರಟೀಸನ ಮಾನವೀಯ ಘನತೆಯನ್ನು ಕುರಿತು ಮೂರ್ತಿರಾಯರ ಪ್ರಶಂಸೆ ಹೀಗಿದೆ. When Socrates stood facing his judges, it was he that was a king among men, not those who had the power to condemn him to death" (Human Dignity) ಮೂರ್ತಿರಾಯರು ಸಾಕ್ರಟೀಸನ ಕೊನೆಯ ದಿನಗಳಲ್ಲಿ ಅವನನ್ನು ಕಲ್ಪಿಸಿಕೊಂಡಿದ್ದು ಹೀಗೆ. ಮೂರ್ತಿರಾಯರ ಚಿಂತನಶೀಲ ಪ್ರಬಂಧದ ಮೇಲೆ ಸಾಕ್ರಟೀಸನ ಪ್ರಭಾವವನ್ನು ಇಲ್ಲಿ ಗುರುತಿಸಬಹುದು.

ನವೋದಯ ಕಾಲದಲ್ಲಿ ಸಾಕ್ರಟೀಸನ ವೈಚಾರಿಕ ಪ್ರೇಮ ಅಲ್ಲಲ್ಲಿ ಉಲ್ಲೇಖಿಸಲ್ಪಟ್ಟಿದೆಯಾದರೂ ಇಷ್ಟು ಸಂಶೋಧನಾತ್ಮಕ ಬರಹಕ್ಕೆ ಯಾರೂ ಕೈ ಹಾಕಿರಲಿಲ್ಲ. ಅದರಲ್ಲೂ 30ರ ದಶಕವೆಂದರೆ ಕನ್ನಡಿಗರಿಗೆ ಇಂಗ್ಲೀಷರ ನೇರ ಸಂಪರ್ಕವಿದ್ದ ಕಾಲ. ಜೊತೆಗೆ ಆ ಕಾಲದಲ್ಲಿ ವಿಶ್ವವಿದ್ಯಾನಿಲಯಗಳಲ್ಲಿ ಇಂಗ್ಲೀಷ್ ಸಾಹಿತ್ಯ ಬೋಧಕರು

ಬಂದರು. ಇಂಗ್ಲೆಂಡಿನಿಂದ ನೇರವಾಗಿ ಬಂದ ಇಂಗ್ಲಿಷ್ ಪ್ರಾಧ್ಯಾಪಕರು, ಇಲ್ಲವೆ ಇಂಗ್ಲೆಂಡಿಗೆ ಹೋಗಿ ಅಲ್ಲಿನ ವಿಶ್ವವಿದ್ಯಾನಿಲಯಗಳಲ್ಲಿ ಇಂಗ್ಲಿಷ್ ಸಾಹಿತ್ಯವನ್ನು ಅಧ್ಯಯನ ಮಾಡಿ ಬಂದ ದೇಶೀಯರು. ಈ ಎರಡೂ ಅಲ್ಲದವರು ಇಂಗ್ಲಿಷ್ ಸಾಹಿತ್ಯವನ್ನು ಬೋಧಿಸಲು ಅನರ್ಹರೆಂಬುವಷ್ಟರ ಮಟ್ಟಿಗೂ ಇಂಗ್ಲೆಂಡಿನ ಪ್ರಭಾವ ಆ ಕಾಲದ ವಿದ್ಯಾವಂತರ ಮೇಲೆ ಬೀರಿತ್ತು. (ಅದನ್ನು ಹುಸಿಗೊಳಿಸಿದವರೂ ಇದ್ದರು. ಆ ಕಾಲದ ಡಾ. ಎಸ್. ರಾಧಾಕೃಷ್ಣನ್, ಪ್ರೊ. ಬಿ.ಎಂ.ಶ್ರೀ, ಸ್ವತಃ ಮೂರ್ತಿರಾಯರು ಮೊದಲಾದವರು) ಹೀಗಾಗಿ ಭಾಷಾಂತರ-ರೂಪಾಂತರಗಳ ಮೂಲ ಹೆಚ್ಚಾಗಿ ಇಂಗ್ಲಿಷ್ ಸಾಹಿತ್ಯವೇ ಆಗಿತ್ತು. ರಾಷ್ಟ್ರಕವಿ ಕುವೆಂಪುರವರ ಆರಂಭಿಕ ಬರಹ ಇಂಗ್ಲಿಷ್ ಭಾಷೆಯಲ್ಲಿಯೇ ಅಭಿವ್ಯಕ್ತಗೊಂಡಿದ್ದನ್ನು ಮರೆಯುವಂತಿಲ್ಲ. ಮಾಸ್ತಿಯವರೂ, ಬಿಎಂಶ್ರೀಯವರೂ ಇಂಗ್ಲಿಷ್ ಸಾಹಿತ್ಯದಲ್ಲಿ ಅಪಾರ ಪ್ರಭುತ್ವವನ್ನು ಪಡೆದವರೇ ಆಗಿದ್ದರು. ಕನ್ನಡದ ಇನ್ನೊಬ್ಬ ಸುಪ್ರಸಿದ್ಧ ಲೇಖಕ ವಿ. ಸೀತಾರಾಮಯ್ಯನವರೂ ಜಾರ್ಜ್ ಬರ್ನಾರ್ಡ್ ಷಾನ ನಾಟಕಗಳನ್ನೇ ಭಾಷಾಂತರಿಸಿದ್ದರು. ಇಂತಹ ಹಿನ್ನೆಲೆಯಿದ್ದ ಯುಗಧರ್ಮದ ಲಕ್ಷಣಗಳ ಪ್ರಭಾವದಿಂದ ತಪ್ಪಿಸಿಕೊಂಡ ಮೂರ್ತಿರಾಯರು ಈ ಜಾಡನ್ನು ತುಳಿಯದೆ, ವಿಭಿನ್ನವಾದ ಮಾರ್ಗವೊಂದನ್ನು ತೆರೆದರು. ಅವರ ದೃಷ್ಟಿ ಗತಾನುಗತಿಕವಾದ ಇಂಗ್ಲಿಷ್ ಸಾಹಿತ್ಯದಿಂದ ಗ್ರೀಕ್ ಸಾಹಿತ್ಯದ ಕಡೆಗೆ ಹೊರಳಿತು. ಅದರಲ್ಲಿಯೂ ಗ್ರೀಕ್ ಸಾಹಿತ್ಯವೆಂದರೆ ನಮಗೆ ಅನೈಚ್ಛಿಕವಾಗಿ ನೆನಪಾಗುವುದು ಗ್ರೀಕ್ ದುರಂತ ನಾಟಕಗಳು (ಟ್ರ್ಯಾಜಿಡಿ) ಆದರೆ ಈ ದುರಂತ ನಾಟಕಗಳ ವಸ್ತು, ಬೆಳವಣಿಗೆ ಹಾಗೂ ಜಿಗುಪ್ಸೆಯನ್ನು ಹುಟ್ಟಿಸುವ ಭೀಭತ್ಸ ರಸ ಅವರ ಸುಕೋಮಲ ಭಾರತೀಯ ಮನೋಧರ್ಮಕ್ಕೆ ಒಗ್ಗಲಿಲ್ಲ. ಅವರ ಮನಸ್ಸನ್ನು ಸೆರೆ ಹಿಡಿದವನು ನಿರ್ಲಿಪ್ತ, ಸ್ಥಿತಪ್ರಜ್ಞ, ವೀತಸ್ಪೃಹಿ, ವಿಚಾರವಂತ ತತ್ತ್ವಶಾಸ್ತ್ರಜ್ಞನಾದ ಸಾಕ್ರಟೀಸ್. ಸಾಕ್ರಟೀಸನ ಧೀರ ಗಂಭೀರ ಪ್ರಶಾಂತ ವ್ಯಕ್ತಿತ್ವ ಮೂರ್ತಿರಾಯರನ್ನು ಆಕರ್ಷಿಸಿತು. ಅವರ ಮನೋಧರ್ಮಕ್ಕೆ ಸಾಕ್ರಟೀಸನ ಪರಿಪಕ್ವತೆ, ಪ್ರಬುದ್ಧತೆ, ನಿರ್ವಿಕಾರವಾದ ನಿಶ್ಚಲತೆ ಹೊಂದಾಣಿಕೆಯಾಗಿರಬೇಕು. ಆದುದರಿಂದಲೇ ಸಾಕ್ರಟೀಸನ ಕೊನೆಯ ದಿನಗಳ ಚಿತ್ರಣವನ್ನು ಕುರಿತು ವ್ಯಾಪಕವಾದ ಅಧ್ಯಯನ ನಡೆಸಲು ಹಾಗೂ ಕನ್ನಡಕ್ಕೆ ತರಲು ಅವರಿಗೆ ಪ್ರೇರಣೆ ನೀಡಿರಬೇಕು. ಈ ದಿಸೆಯಲ್ಲಿ ಅವರ ಕೊಡುಗೆ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯ ಕಾಲಘಟ್ಟದ ದೃಷ್ಟಿಯಿಂದ ಯೋಚಿಸಿದಾಗ ಅತ್ಯಂತ ಮಹತ್ತರವೆನಿಸುತ್ತದೆ.

## 7.2 ಸಾಕ್ರಟೀಸನ ಕೊನೆಯ ದಿನಗಳು

ಮೂರ್ತಿರಾಯರು ಸಮರ್ಥ ಭಾಷಾಂತರಕಾರರೆಂದು ಅನಾವರಣಗೊಳಿಸಿಕೊಂಡ ಈ ಕೃತಿ ಒಂದು ಮಹಾಪ್ರಬಂಧವಂತಿದೆ. ಕೇವಲ ಒಂದೇ ಒಂದು ಕೃತಿಯನ್ನು ಆಧರಿಸಿ, ಅಕ್ಷರಶಃ ಅನುವಾದ ಮಾಡಿದ್ದಲ್ಲ. ಆರು ಭಾಗಗಳಲ್ಲಿ ಹರಡಿಕೊಂಡ ಈ ಕೃತಿಯ ಪೀಠಿಕೆಯಂತೆ 37 ಪುಟದ ಅವತರಣಿಕೆ. 7 ಪುಟಗಳ ಟಿಪ್ಪಣಿಯಲ್ಲಿ ಈ ಕೃತಿಯಲ್ಲಿ ಬರುವ ಹಲವು ವ್ಯಕ್ತಿ, ದೇವತೆ, ಸ್ಥಳ ಇತ್ಯಾದಿ ಹೆಸರುಗಳನ್ನು ಕುರಿತು ಕಿರು ವಿವರಣೆಗಳಿವೆ. ಇವರು ಆಯ್ದು ಮಾಡಿಕೊಂಡು ಜೋಡಿಸಿಕೊಂಡ ವಸ್ತು ಒಂದು ನಿರ್ದಿಷ್ಟ ಗತಿಯಲ್ಲಿ ಹಂತ ಹಂತವಾಗಿ ಸಾಗುತ್ತದೆ. ಸಾಕ್ರಟೀಸನ ಹಿನ್ನೆಲೆ, ಅವನ ವ್ಯಕ್ತಿತ್ವ, ಅವನ ವಿಚಾರಣೆ

ಹಾಗೂ ಮರಣ-ಇವು ಕ್ರಮ ಕ್ರಮವಾಗಿ ವಿಕಾಸವಾಗುತ್ತವೆ. ಈ ವಿಚಾರವನ್ನು ಎ.ಎನ್. ಮೂರ್ತಿರಾಯರೇ "ಅವತರಣಿಕೆ"ಯಲ್ಲಿ ಹೀಗೆ ಹೇಳಿದ್ದಾರೆ.

"ಈ ಗ್ರಂಥವು ನಾಟಕವಲ್ಲದಿದ್ದರೂ ನಾಟಕದ ಕೆಲವು ಗುಣಗಳು ಇದರಲ್ಲಿ ಕಂಡುಬರುತ್ತವೆ. ಸಂಭಾಷಣೆ ಲಲಿತವಾಗಿಯೂ ಸ್ವಾಭಾವಿಕವಾಗಿಯೂ ಪಾತ್ರಕ್ಕನುಗುಣವಾಗಿಯೂ ಇದೆ. ನಾಟಕಕಾರನು ತನ್ನ ಪಾತ್ರಗಳ ಜೀವನದ ಸಂಗತಿಗಳನ್ನು ಕಾವ್ಯಕ್ಕೆ ಹೊಂದಿಸಿಕೊಳ್ಳುವಂತೆಯೇ ಇಲ್ಲಿಯೂ ಪ್ಲೇಟೋ ಸಾಕ್ರಟೀಸನ ಜೀವನವನ್ನು ತನ್ನ ಕಾವ್ಯಕ್ಕೆ ಹೊಂದಿಸಿಕೊಂಡಂತಿದೆ. 'ಯೂಥಿಫ್ರೊ' ಈ ನಾಟಕದ ಪ್ರಸ್ತಾವನೆ ಎನ್ನಬಹುದು. ಅದರಲ್ಲಿ ನಮಗೆ ಮುಖ್ಯ ಪಾತ್ರಗಳ ಪರಿಚಯವಾಗುವುದಲ್ಲದೆ ಸಾಕ್ರಟೀಸನು ನ್ಯಾಯಸ್ಥಾನಕ್ಕೆ ಅಪರಾಧಿಯೆನಿಸಿಕೊಂಡು ಬಂದಿರುವನೆಂದೂ ತಿಳಿಯುತ್ತದೆ. 'ಸಮರ್ಥನ ವಾದ'ದಲ್ಲಿ ಶತ್ರುಪಕ್ಷದವರ ಕಾರ್ಯಭಾಗವನ್ನೂ, ಎರಡು ಪಕ್ಷಗಳ ಹೋರಾಟವನ್ನೂ, ಅನಿಟಸ್ ಮೊದಲಾದವರು ಜಯವನ್ನು- ಅವನ್ನು ಜಯವೆನ್ನಬಹುದಾದರೆ ಪಡೆದದ್ದನ್ನೂ ಪ್ಲೇಟೊ ನಿರೂಪಿಸಿದ್ದಾನೆ. ನಾಟಕದ ಆರೋಹಣವೂ ಶಿಖರವೂ "ಮರಣವು ತಪ್ಪಿದರೂ ತಪ್ಪಬಹುದು" ಎಂಬ ಆಸೆಯನ್ನು ಹುಟ್ಟಿಸುವುದುಂಟು. ಪ್ಲೇಟೋ ಅದರಂತೆಯೇ ಸಾಕ್ರಟೀಸನು ಸೆರೆಯಿಂದ ತಪ್ಪಿಸಿಕೊಂಡು ಹೋಗುವುದು ಸಾಧ್ಯವೆಂದು 'ಕ್ರೈಟೋ'ವಿನಲ್ಲಿ ಸೂಚನೆ ಕೊಟ್ಟಿದ್ದಾನೆ. ಆದರೆ ಇದರಿಂದೇನಾದರೂ ಜನಗಳ ಮನಸ್ಸಿನಲ್ಲಿ ಆಸೆ ಮೂಡುವುದಾದರೆ, ಅದು ಮೂಡುವುದರೊಳಗೇ ಕೊನೆಗಾಣುತ್ತದೆ. 'ಫೀಡೋ'ವಿನಲ್ಲಿ ನಾಟಕದ ಉಪಸಂಹಾರವಾಗುತ್ತದೆ. ತತ್ತ್ವವಿಚಾರವೇ ಹೆಚ್ಚು ಭಾಗವನ್ನಾಕ್ರಮಿಸಿಕೊಂಡಿರುವ ಈ ಸಂವಾದದಲ್ಲಿ ನಾಟಕ ಸೌಂದರ್ಯವನ್ನು ಎಷ್ಟುಮಟ್ಟಿಗೆ ತುಂಬಬಹುದೋ ಅಷ್ಟು ಮಟ್ಟಿಗೂ ಪ್ಲೇಟೋ ತುಂಬಿದ್ದಾನೆ. ನಾಟಕದಲ್ಲಿ ಹೇಗೆ ಪಾತ್ರ ಚಿತ್ರವು ಒಂದು ಆಂತರಿಕ ನಿಯಮದಿಂದ ವಿಕಾಸ ಹೊಂದುವುದೋ ಹಾಗೆಯೇ ಸಾಕ್ರಟೀಸನ ಚಿತ್ರವು ಇಲ್ಲಿ ವಿಕಾಸ ಹೊಂದಿದೆ. 'ಸಮರ್ಥನ ವಾದ'ದಲ್ಲಿ ನಾವು ಕಾಣುವ ಸಾಕ್ರಟೀಸನಿಗೆ ಮರಣವು ಪ್ಲೇಟೋ ನಿರೂಪಿಸಿರುವಂತೆಯೇ ಆಗಬೇಕು. ಬೇರೆ ಮಾರ್ಗವಿಲ್ಲ. 'ಫೀಡೋ'ವಿನ ಕೊನೆಯಲ್ಲಿರುವವನು ಮೊದಲಿನ ಸಾಕ್ರಟೀಸನೇ. ಆದರೆ ಮರಣ ಸಮೀಪಿಸಿದ ಹಾಗೆಲ್ಲಾ ಅವನ ಗಾಂಭೀರ್ಯ, ಶಾಂತತೆ, ಹೃದಯದ ಮಾರ್ದವ - ಇವು ಹೆಚ್ಚಾಗಿ ಹೊರಹೊಮ್ಮುವಂತೆ"

ಇಂತಹ ವ್ಯವಸ್ಥೆಯಿಂದಾಗಿ ಸಹೃದಯರಿಗೆ ಒಂದು ಕ್ರಮಬದ್ಧವಾದ ಚಿತ್ರಣ ಲಭಿಸುತ್ತದೆ. ಸಾಕ್ರಟೀಸನು ತನ್ನ ಜೀವನದ ಕೊನೆಯ ದಿನಗಳಲ್ಲಿ ಕಳೆದ ದಿನಗಳು. ಅವನ ಶತ್ರು-ಮಿತ್ರವಲಯದ ಆರ್ಥಿಕ ಪರಿಸ್ಥಿತಿ, ಕೌಟುಂಬಿಕ ಸ್ಥಿತಿ-ಇವುಗಳನ್ನು ಇಲ್ಲಿ ಪ್ರಾಸಂಗಿಕವಾಗಿ ನಿರೂಪಿಸಿದ್ದಾರೆ. ಮುಖ್ಯವಾಗಿ ಅವನ ವಾಕ್ಪಟುತ್ವ, ತರ್ಕಪಟುತ್ವ, ಹಾಗೂ ಚಿಂತನಶೀಲತೆಗಳ ಮಾದರಿಗಳು ಇಲ್ಲಿವೆ. ಇದಕ್ಕೆ ಪೂರಕವಾಗಿ ಅವತರಣಿಕೆಯಲ್ಲಿ ಅಂದಿನ ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಯನ್ನು ವಿಶ್ಲೇಷಿಸಿದ್ದಾರೆ. ಈ ಅವತರಣಿಕೆಯನ್ನು ಬರೆಯಲು ಅವರು ಈ ಕೆಳಕಂಡ ಕೃತಿಗಳನ್ನು ಉಪಯೋಗಿಸಿದ್ದಾರೆ. ಆದರೆ ಆ ಕೃತಿಗಳ ಉದ್ಧೃತ ಭಾಗಗಳು ಪ್ರಾಸಂಗಿಕವಾಗಿ ಬಂದಿರುವುದು ಗಮನಾರ್ಹವಾದ ವಿಚಾರ.

1. TAYLOR : PLATO
2. JOWETT : Introductions to his translation of 'The Dialogues of Plato.'
3. CHURCH: Introduction to the Trial and Death of Socrates
4. W.T. STACE : A Critical History of Greek Philosophy
5. ROGERS : A History of Ethics.
6. GOMPERZ: Greek Thinkers.
7. FIELD : Plato and his contemporaries.

ಈ ಎಲ್ಲಾ ಆಕರ ಗ್ರಂಥಗಳನ್ನೂ ಅಧ್ಯಯನ ಮಾಡಿ ಅವುಗಳ ಸಾರವನ್ನು ಒಂದು ಕ್ರಮದಲ್ಲಿ ಜೋಡಿಸಿರುವುದು ಇಲ್ಲಿಯ ವೈಶಿಷ್ಟ್ಯ. ನಿಷ್ಪಕ್ಷತೆ, ನಿಖರತೆಗೆ ಒತ್ತು ಕೊಡುವ ಮೂರ್ತಿರಾಯರು ಸಾಕ್ರಟೀಸನ ವಿಚಾರಣೆ ಹಾಗೂ ಮರಣಗಳ ವಿಶಾಲವಾದ ಹಿನ್ನೆಲೆಯಲ್ಲಿ-ಕಾಲದ ಹಿನ್ನೆಲೆಯಲ್ಲಿ- ಚಿತ್ರಿಸಿದ್ದಾರೆ. ಮೂಲದ ಭಾಗಗಳನ್ನು ಉದ್ಧರಿಸುವಾಗ ತಮ್ಮ ಅಗತ್ಯಕ್ಕನುಗುಣವಾಗಿ ಅವುಗಳನ್ನು ಉಪಯೋಗಿಸಿಕೊಂಡಿದ್ದಾರೆ. ಇಲ್ಲಿ ಅವರ ಅಚ್ಚುಕಟ್ಟುತನ ಹಾಗೂ ನಿರ್ದುಷ್ಟತೆಗಳು ಗಮನಿಸ ಬೇಕಾದವು. ಈ ಕೆಳಕಂಡ ಕೆಲವು ವಾಕ್ಯಗಳನ್ನು ಮೂಲದೊಂದಿಗೆ ಹೋಲಿಸಿ ನೋಡಬಹುದು :

ಮೂಲವನ್ನು ವಿಸ್ತರಿಸಿ ಬರೆದ ಭಾಗಗಳು, ಮೂರ್ತಿರಾಯರಿಗೆ ಮೂಲದ ಯಥಾರ್ಥ ಅನುವಾದ ತೃಪ್ತಿ ನೀಡದ ಕಾರಣ ಈ ವಿಸ್ತಾರ ಅಗತ್ಯವೆನಿಸಿರಬೇಕು.

When he served with the army in the Peloponnesian war, he astonished his fellow soldiers by his bravery, and his cheerful endurance of every hardship. (A critical History of Greek Philosophy (page No. 131).

ಕ್ರಿ.ಪೂ 432 ರಿಂದ ಈಚೆಗೆ ಪೊಟಿಡಿಯ, ಡೀಲಿಯಂ, ಅಂಫಿಪೊಲಿಸ್ ಎಂಬ ಸ್ಥಳಗಳಲ್ಲಿ ನಡೆದ ಯುದ್ಧಗಳಲ್ಲಿ ಸಾಕ್ರಟೀಸನು ಸೈನಿಕನಾಗಿ ಕಾದಿದನು. ಆಗ ಅವನು ಅಸಾಧಾರಣವಾದ ಧೈರ್ಯ ಪರಾಕ್ರಮಗಳನ್ನೂ ಕಷ್ಟ ಸಹಿಷ್ಣುತೆಯನ್ನೂ ತೋರಿಸಿದ್ದಲ್ಲದೆ ಪೊಟಿಡಿಯ ಯುದ್ಧದಲ್ಲಿ ಗಾಯಗೊಂಡು ಶತ್ರುಗಳ ಕೈಯಿಂದ ಹತನಾಗುವುದರಲ್ಲಿದ್ದ ಅಲ್ಕಿಬಿಯೇಡಿಸನ ಪ್ರಾಣವನ್ನುಳಿಸಿದನು.

On two occasions only did he take an active part in politics, and on both occasions his conduct gave great offence.

(ಅದೇ ಪುಟ 133)

ಆತನು ಎರಡು ಬಾರಿ ರಾಜಕೀಯ ತೊಡಕುಗಳಲ್ಲಿ ಸಿಕ್ಕಿಹಾಕಿಕೊಳ್ಳಬೇಕಾಯಿತು.

(v)

ಕೆಲವು ಕಡೆ ಮೂರ್ತಿರಾಯರು ಈ ಕೃತಿಯಿಂದ ಆರಂಭವನ್ನು ಎತ್ತಿಕೊಂಡು, ತಮ್ಮದೇ ಆದ ವಿಮರ್ಶೆಯನ್ನು ಮುಂದಿಟ್ಟಿದ್ದಾರೆ. ಹೀಗೆ ಮಾಡಿದ್ದರಿಂದ ಇದು ಕೇವಲ ಮೂಲ ಕೃತಿಯ ಅನುವಾದ ಮಾತ್ರವಾಗಿರದೆ, ಕೃತಿಯ ಶೀರ್ಷಿಕೆಯ ಹಿನ್ನೆಲೆಯ ವಿಮರ್ಶಾತ್ಮಕ ಅಧ್ಯಯನವೂ ಆಗಿದೆ. ಜೊತೆಗೆ ಇದು ಏಕಮುಖ ಅಭಿಪ್ರಾಯ

ಮಾತ್ರವೇ ಆಗಿರದೆ ಅದರ ಕೂಲಂಕಷವಾದ ವಿಶ್ಲೇಷಣೆಯೂ ಆಗಿದೆ. ಈ ಕೆಳಗಿನ ತೌಲನಿಕ ಉಲ್ಲೇಖ ಇದನ್ನು ಸಮರ್ಥಿಸುತ್ತದೆ.

In his seventieth year he was tried on three charges :

(1) for denying the national gods. (2) for setting up new gods of his own. (3) for corrupting the youth. All these charges were entirely baseless. (ಅದೇ ಪುಟ 132)

ಸಾಕ್ರಟೀಸನು ತನ್ನ ಎಪ್ಪತ್ತನೆಯ ವಯಸ್ಸಿನಲ್ಲಿ ಅಪರಾಧಿಯಾಗಿ ನ್ಯಾಯಾಸ್ಥಾನಕ್ಕೆ ಹೋಗಬೇಕಾಯಿತು. ಅವನ ಮೇಲೆ ಬಂದ ಮೂರು ಫಿರ್ಯಾದು ಇದು : "ಸಾಕ್ರಟೀಸನು ಅಥೆನ್ಸ್ ನಗರದ ದೇವರುಗಳಲ್ಲಿ ನಂಬಿಕೆಯಿಟ್ಟಿಲ್ಲ; ಅವನದೇ ಬೇರೆ ದೇವರುಗಳನ್ನು ಕಲ್ಪಿಸಿದ್ದಾನೆ; ಇದಲ್ಲದೆ ಅವನು ಯುವಕರನ್ನು ದುರ್ಮಾರ್ಗಕ್ಕೆ ಎಳೆಯುತ್ತಾನೆ. ಆದ ಕಾರಣ ಅವನು ಅಪರಾಧಿ, ದಂಡನೆ : "ಮರಣ!" ಸ್ವಲ್ಪ ಯೋಚಿಸಿ ನೋಡಿದರೆ ಸಾಕ್ರಟೀಸನ ಮೇಲೆ ಹೀಗೆ ದೂರು ಹೊರಿಸಿದ್ದು ಆಶ್ಚರ್ಯಕರವಾಗಿ ಕಾಣುವುದಿಲ್ಲ...... ಸಾಕ್ರಟೀಸನ ಶತ್ರು ಪಕ್ಷದಲ್ಲಿ ಈ ರೀತಿ ಅವನಿಗೆ ವಿರೋಧಿಗಳಾದವರು ಕೆಲವರಿದ್ದಿರಬೇಕು. ಆದರೆ ಜನರಿಗೆ ಆತನಲ್ಲಿ ಶತ್ರುತ್ವ ಹುಟ್ಟುವುದಕ್ಕೆ ಇದಕ್ಕಿಂತ ಮುಖ್ಯವಾದ ಬೇರೆ ಕಾರಣಗಳೂ ಇದ್ದವು. ಅವುಗಳನ್ನು ತಿಳಿಯಬೇಕಾದರ ಆಗಿನ ಕಾಲದ ಗ್ರೀಸಿನ ರಾಜಕೀಯ ಸ್ಥಿತಿಯನ್ನು ನೆನಪಿನಲ್ಲಿಟ್ಟುಕೊಳ್ಳಬೇಕು.

(ಪುಟ xv–xvi)

Every city, almost every hamlet, was an independent state, governed only by its own laws (ಅದೇ ಪುಟ 107)

ಆ ಕಾಲದಲ್ಲಿ ಅಥೆನ್ಸ್, ಸ್ಪಾರ್ಟಾ ಮುಂತಾದ ಒಂದೊಂದು ನಗರವೂ ಒಂದೊಂದು ರಾಷ್ಟ್ರವಾಗಿತ್ತು. (ಪುಟ xvi)

Socrates believed that all these particular virtues flowed from the one source, knowledge. Therefore, knowledge itself, that is to say, wisdom, is the sole virtue, and this includes all the others. (149)

ಈ ಭಾಗವನ್ನು ಮೂರ್ತಿರಾಯರು ಅನುವಾದ ಮಾಡಿ ಅಷ್ಟಕ್ಕೆ ತೃಪ್ತರಾಗಲಿಲ್ಲ. ಅದನ್ನು ಕುರಿತು ಒಂದು ಕಿರು ವಿವರಣೆ ನೀಡಿದ್ದಾರೆ. ಈ ಭಾಗ ಕನ್ನಡ ಸಂಸ್ಕೃತ ಶಬ್ದಗಳ ಹಿತವಾದ ಸಂಯೋಜನೆಯಿಂದ ಮಾಡಿದ್ದು, ಆಕರ್ಷಕ ಶೈಲಿಯಿಂದ ಮನೋಹರವಾಗಿದೆ. ಭಾರತೀಯ–ಗ್ರೀಸ್ ತತ್ತ್ವಶಾಸ್ತ್ರದ ಬೆಳಕಿನಲ್ಲಿ 'ಜ್ಞಾನ' ಶಬ್ದದ ವಿಶ್ಲೇಷಣೆಯಿದೆ. ಆ ಭಾಗ ಹೀಗಿದೆ :

.......ಸಾಕ್ರಟೀಸನು "ಜ್ಞಾನವೆನ್ನುವುದು ಇದೆ, ಸದ್ಗುಣವೂ ಇದೆ, ಅವುಗಳನ್ನು ಪಡೆಯುವುದು ಸಾಧ್ಯ" ಎಂದು ಹೇಳಿದ್ದಲ್ಲದೆ "ಜ್ಞಾನವೂ ಸದ್ಗುಣವೂ ಒಂದೇ" ಎಂದು ಸಾರಿದನು. ಇದೇ ಅವನ ಮುಖ್ಯ ತತ್ತ್ವ. ಅವನ ದೃಷ್ಟಿಯಲ್ಲಿ ಜ್ಞಾನವು ಮಾನವ ವರ್ಗಕ್ಕೆ ಭೂಷಣ ಮಾತ್ರವಲ್ಲ, ಜ್ಞಾನವೊಂದಿಲ್ಲದಿದ್ದರೆ ಮತ್ತೆ ಯಾವ ಸದ್ಗುಣವಿದ್ದರೂ ವ್ಯರ್ಥವೆಂದು ಹೇಳಿದರೂ ಸಾಲದು. ಜ್ಞಾನವಿಲ್ಲದಿದ್ದರೆ ಸದ್ಗುಣ ಸಾಧ್ಯವೇ ಇಲ್ಲ, ಜ್ಞಾನವೇ ಸದ್ಗುಣ. ಮೊದಲ ಸಲ ಕೇಳಿದರೆ ಸ್ವಲ್ಪ ವಿಚಿತ್ರವಾಗಿ ತೋರುವ ಈ

ತತ್ವವು ಸರಿಯಾಗಬೇಕಾದರೆ, ನಾವು ಜ್ಞಾನವೆಂಬ ಶಬ್ದಕ್ಕೆ ಬರಿಯ ಬುದ್ಧಿವಂತಿಕೆಯೆಂದಾಗಲೀ, ಶಬ್ದಾರ್ಥದ ತಿಳುವಳಿಕೆಯೆಂದಾಗಲೀ ಅರ್ಥ ಮಾಡಬಾರದು. ಇದು ಒಳ್ಳೆಯದು, ಇದು ಕೆಟ್ಟದ್ದು ಎಂದು ವಾದದ ಮೂಲಕ ತಿಳಿಯುವುದು ಮಾತ್ರವೇ ಜ್ಞಾನವಲ್ಲ. ಒಳ್ಳೆಯದನ್ನು ಕಂಡರೆ ಪ್ರೇಮ, ಕೆಟ್ಟದ್ದನ್ನು ಕಂಡರೆ ದ್ವೇಷ-ಇವು ಅವ್ಯಕ್ತ ಪ್ರವೃತ್ತಿಯಲ್ಲಿ ಹೊರಸೂಸುತ್ತಿರಬೇಕು. ಜ್ಞಾನವು ಚರ್ಮಚಕ್ಷುಸ್ಸಿಗೆ ಅಗೋಚರವಾದ ಬೆಳಕು. ಒಂದು ವಿಧವಾದ ಸ್ವರ್ಗೀಯ ತೇಜಸ್ಸು. ಜ್ಞಾನಕ್ಕೆ ಈ ಅರ್ಥವನ್ನು ಕೊಟ್ಟರೆ ಸಾಕ್ರಟೀಸನ ತತ್ವವು ಅಷ್ಟು ವಿಚಿತ್ರವಾಗಿ ಕಾಣುವುದಿಲ್ಲ. ಸಾಕ್ರಟೀಸನಲ್ಲಿ ಈ ಬಗೆಯ ಜ್ಞಾನವಿತ್ತು. ಆತನ ಡೀಮನ್-ಅವನು ತಪ್ಪುದಾರಿಗೆ ಹೋಗುವ ಸಂಭವವಿದ್ದಾಗ ಅವನನ್ನು ತಡೆಯುತ್ತಿದ್ದ ಶಕ್ತಿ-ಇಂಥ ಜ್ಞಾನವೇ ಆಗಿರಬಹುದು. ಸತ್ಯ-ಅಸತ್ಯ, ಸದ್ಗುಣ-ದುರ್ಗುಣ, ಇವುಗಳ ಭೇದವನ್ನು ಯೋಚನೆಗೆ ಮುಂಚೆಯೇ ಅರಿಯುವಷ್ಟು ಆತನ ಆತ್ಮವು ಸಂಸ್ಕಾರ ಹೊಂದಿದ್ದಿರಬೇಕು. ಇಂಥ ಜ್ಞಾನವೂ ಸದ್ಗುಣವೂ ಒಂದೇ ಎಂದರೆ ಅದೇನೂ ಆಶ್ಚರ್ಯವಾಗಿ ತೋರುವುದಿಲ್ಲ. (xxviii)

Only one man among his disciples was able to grasp the whole of his teaching, and understand the whole of his personality, and that was Plato. (156)

ಪ್ಲೇಟೋ ಅದ್ಭುತ ಪ್ರತಿಭಾಶಾಲಿ, ತತ್ವವೇತ್ತ, ರಸಋಷಿ......... (ii)

ಈ ಅನುವಾದಿತ ವಾಕ್ಯದ ಮೂರೇ ಶಬ್ದಗಳಲ್ಲಿ ನಮಗೆ ಪ್ಲೇಟೋನ ಉನ್ನತ ವ್ಯಕ್ತಿತ್ವದ ಪರಿಚಯ ಮಾಡಿಸುತ್ತಾರೆ.

ಈ ಉದಾಹರಣೆಗಳಿಂದ ಮೂರ್ತಿರಾಯರು ಕೇವಲ ಅನುವಾದಕರಷ್ಟೇ ಆಗಿರದೆ, ಉತ್ತಮ ವಿಮರ್ಶಕರೂ ಆಗಿದ್ದಾರೆಂಬ ವಿಚಾರ ತಿಳಿದು ಬರುತ್ತದೆ. ಮಾತ್ರವಲ್ಲ, ಅವರು ಮಾಡಿಕೊಂಡಿರುವ ಮಾರ್ಪಾಟುಗಳೂ ಗಮನಾರ್ಹ. Independent ಎಂಬ ಶಬ್ದಕ್ಕೆ ಅವರು ಬಳಸಿದ 'ನಿರ್ಲಿಪ್ತ' ಎಂಬ ಶಬ್ದ ನಮ್ಮ ಗಮನ ಸೆಳೆಯುತ್ತದೆ. ತತ್ವವೇತ್ತ, ರಸಋಷಿ-ಎಂಬ ಎರಡನೇ ಎರಡು ಶಬ್ದಗಳಲ್ಲಿ ಅವರು ಒಂದು ವಾಕ್ಯದ ಅಖಂಡ ಅರ್ಥವನ್ನೇ ಸೆರೆ ಹಿಡಿದಿದ್ದಾರೆ. ಇದರಿಂದಾಗಿ 7 ಪುಸ್ತಕಗಳನ್ನು ಅಧ್ಯಯನ ಮಾಡಿ 37 ಪುಟಗಳಷ್ಟು ಅವತರಣಿಕೆಯನ್ನು ಬರೆಯಲು ಅವರಿಗೆ ಸಾಧ್ಯವಾಯಿತು. Unmanly (12) ಅಸಹ್ಯಕರ ಎಂಬ ಅನುವಾದಿತ ಶಬ್ದವೂ ಈ ಕೃತಿಯಲ್ಲಿ ಮೂಡಿದ ಸಾಕ್ರಟೀಸನ ವ್ಯಕ್ತಿತ್ವಕ್ಕೆ ಪೂರಕವಾಗಿದೆ.

ಮೂರ್ತಿರಾಯರು ಅನುವಾದ ಮಾಡುವಾಗ ಮೂಲದ ಕೆಲವು ದೀರ್ಘ ವಾಕ್ಯಗಳನ್ನು ಚಿಕ್ಕ ವಾಕ್ಯಗಳನ್ನಾಗಿ ಮಾಡಿದ್ದಾರೆ. ಅವರ ಈ ಸ್ವಾತಂತ್ರ್ಯ ವಾಚನದ ಸೌಕರ್ಯವನ್ನು ಹೆಚ್ಚಿಸಿದೆ. ಮೂಲದ ಭಾವಕ್ಕೂ ಕೊರತೆಯಾಗಿಲ್ಲ. ಈ ನಿದರ್ಶನ (ಉಲ್ಲೇಖ) ಗಮನಾರ್ಹ.

"Socrates, I shall not have to find that fault with you that I do with the others, that they are angry with me, and curse me, when by order of the Archone, I bid them drink the poison. But you, on all other occasions during the time you have been here, I have found to

be the most noble, meek and excellent man of all that ever came into this place, and therefore, I am now well convinced that you will not be angry with me. Now, then, for you know what I came to announce to you, farewell, and endeavour to bear what is inevitable as easily as possible" (The trial and Death of Socrates - page 138)

ಇದನ್ನು ಕೊಂಚ ಮಾರ್ಪಡಿಸಿ, ಆದರೆ ಸಮಗ್ರವಾಗಿ, ಹೀಗೆ ಅನುವಾದಿಸಿದ್ದಾರೆ:

"ಸಾಕ್ರಟೀಸ್, ಇದುವರೆಗೆ ಈ ಸ್ಥಳಕ್ಕೆ ಬಂದವರಲ್ಲಿ ನಿನ್ನಷ್ಟು ಮೃದು ಸ್ವಭಾವದವರೂ ಒಳ್ಳೆಯವರೂ ಘನತೆಯುಳ್ಳವರೂ ಮತ್ತೊಬ್ಬರಿಲ್ಲ. ಅಧಿಕಾರಿಗಳ ಅಪ್ಪಣೆಯ ಪ್ರಕಾರ ನಾನು ಅವರಿಗೆ ವಿಷ ಕುಡಿಯಬೇಕೆಂದು ಹೇಳಿದರೆ ಅವರು ನನ್ನ ಮೇಲೆ ರೇಗಿ ಬಿದ್ದು ಶಪಿಸುತ್ತಿದ್ದರು. ಆದರೆ ನೀನು ನನ್ನ ಮೇಲೆ ಕೋಪಿಸುವುದಿಲ್ಲವೆಂದು ನಾನು ಬಲ್ಲೆ. ಈ ವಿಷಯದಲ್ಲಿ ತಪ್ಪು ಇತರರದೇ ಹೊರತು ನನ್ನದಲ್ಲವೆಂದು ನಿನಗೆ ತಿಳಿದೇ ಇದೆ. ಅವಶ್ಯವಾದದ್ದನ್ನು ಆದಷ್ಟು ಶಾಂತಚಿತ್ತನಾಗಿ ಅನುಭವಿಸಲು ಯತ್ನಿಸು. ನಿನಗೆ ಒಳ್ಳೆಯದಾಗಲಿ, ನಾನು ಬಂದಿರುವ ಕೆಲಸವೇನೆಂದು ನಿನಗೆ ಗೊತ್ತೇ ಇದೆ"(204).

ಮೂಲದ 110 ಪದಗಳನ್ನು ಕೇವಲ 54 ಪದಗಳಲ್ಲಿ ಕನ್ನಡಕ್ಕೆ ತರಲಾಗಿದೆ. ಇದು ಒಂದು ರೀತಿಯ ಭಾವಾನುವಾದವಾದರೂ ಮೂಲದ ಆಶಯ ಇಲ್ಲಿ ಸಮಗ್ರವಾಗಿ ಮೂಡಿ ಬಂದಿದೆ. ಮೂಲದ ಮೊದಲ ವಾಕ್ಯ ಎರಡನೆಯ ವಾಕ್ಯವಾಗಿದೆ. ಮೂಲದಲ್ಲಿ ಮೂರೇ ವಾಕ್ಯಗಳಿವೆ. ಅನುವಾದದಲ್ಲಿ ಏಳು ವಾಕ್ಯಗಳಿವೆ. ಹೀಗೆ ಮೂಲದ ಸಂಯುಕ್ತ ವಾಕ್ಯ (ಸಂಕೀರ್ಣ ವಾಕ್ಯ)ಗಳು ಅನುವಾದದಲ್ಲಿ ಸರಳ ವಾಕ್ಯಗಳಾಗಿವೆ. ದೀರ್ಘ ವಾಕ್ಯಗಳು ಕಿರುವಾಕ್ಯಗಳಾಗಿ ಮಾರ್ಪಟ್ಟಿರುವುದರಿಂದ ಸಹೃದಯನಿಗೆ ವಾಚನ ಸೌಕರ್ಯ ಮೂಲಕ್ಕಿಂತ ವಿಶಾಲವಾಗಿದೆ. ಓದಿದ ಭಾಗವನ್ನು ಸ್ಮರಣೆಯಲ್ಲಿಟ್ಟುಕೊಳ್ಳಲು ಅನುಕೂಲವಾಗಿದೆ. ಇಂತಹ ಮತ್ತೊಂದು ಉದಾಹರಣೆ :

"ಹೀಗೆ ಹೇಳಿ ಆತನು ಎದ್ದು ಸ್ನಾನ ಮಾಡುವುದಕ್ಕೆ ಬೇರೆ ಕೊಠಡಿಗೆ ಹೋದನು; ನಮ್ಮನ್ನು ಅಲ್ಲಿಯೇ ಕಾದಿರಲು ಹೇಳಿ, ಕ್ರೈಟೋ ಆತನೊಡನೆಯೇ ಹೋದನು. ನಾವು ಆ ದಿನ ನಡೆದ ಚರ್ಚೆಯ ವಿಷಯ ಮಾತಾಡುತ್ತಾ, ನಮಗೆ ಎಂಥ ದೊಡ್ಡ ವಿಪತ್ತು ಸಂಭವಿಸಿತು ಎಂದು ಯೋಚಿಸುತ್ತಾ ತಬ್ಬಲಿಗಳಾಗಿರಬೇಕಾಯಿತೆಂದೇ ನಮ್ಮೆಲ್ಲರ ಭಾವನೆ."

ಮೂರ್ತಿರಾಯರು ಅನುವಾದದಲ್ಲಿ ಹಲಕೆಲವು ಮಾರ್ಪಾಟುಗಳನ್ನು ಮಾಡಿಕೊಂಡಿದ್ದರೂ ಮೂಲವನ್ನು ಯಥಾವತ್ತಾಗಿ ಅನುವಾದ ಮಾಡಿರುವುದೂ ಇದೆ. ಈ ಕೆಳಗಿನ ಮೂಲ ಹಾಗೂ ಅನುವಾದಗಳ ತೌಲನಿಕ ಅಧ್ಯಯನ ಇದನ್ನು ದೃಢಪಡಿಸುತ್ತದೆ. ಇಲ್ಲಿಯೂ ಒಂದು ಗಮನಾರ್ಹವಾದ ಅಂಶವಿದೆ. ಮೂಲದ ಸುದೀರ್ಘ (ಸಂಯುಕ್ತ) ವಾಕ್ಯಗಳನ್ನು ಅನುವಾದಿಸುವಾಗ ಚಿಕ್ಕ ಚಿಕ್ಕ ವಾಕ್ಯಗಳನ್ನಾಗಿ ಮಾಡಿದ್ದಾರೆ. ಈ ವಾಚನ ಸೌಲಭ್ಯ, ಗ್ರಹಣ ಸೌಕರ್ಯಗಳು ಮೂಲಕ್ಕಿಂತ ಅನುವಾದದಲ್ಲಿ ಸ್ಪಷ್ಟವಾಗಿವೆ. ಮೂರ್ತಿರಾಯರು ಕೇವಲ ಅನುವಾದಕರು ಮಾತ್ರವಲ್ಲ, ಒಬ್ಬ ಒಳ್ಳೆಯ ಓದುಗರೂ ಆಗಿದ್ದಾರೆ. ಏಕೆಂದರೆ ಓದುಗನ (ಸಹೃದಯನ) ಸ್ಥಾನದಲ್ಲಿ ನಿಂತು ಅವರ ಈ ಮಾರ್ಪಾಟನ್ನು ಅವರೇ ಒಪ್ಪಿಕೊಂಡಿದ್ದಾರೆ. ಮೂಲದ ಭಾಗವನ್ನು

ತಂದು ಇಲ್ಲಿ ಜೋಡಿಸುವುದು ಅವರ ಕಲ್ಪನೆ - ಹಾಗೂ ಸಾಹಿತ್ಯದ ಅಂಶಗಳ ಪರಿಣಾಮಕಾರೀ ಬಳಕೆಗೆ ಸಾಕ್ಷಿಯಾಗಿದೆ. ಇಲ್ಲಿ ಮೂಲವನ್ನೂ ಅನುವಾದವನ್ನೂ ಕೊಡಲಾಗಿದೆ.

He rose and went into a chamber to bathe. and Crito followed him. but he directed us to wait for him. We waited. therefore. conversing among ourselves about what had been said. and considering it agian. and sometimes speaking about our calamity. how severe it would be to us. sincerely thinking that. like those who are deprived of a father. we should pass the rest of our lives as orphans.

(ಅದೇ ಪುಟ 137)

ಯಾವುದೇ ಅನುವಾದ ಮೂಲದ ಯಾವತ್ತೂ ಭಾವಗಳನ್ನಾಗಲೀ, ಭಾಗಗಳನ್ನಾಗಲೀ ಶತಾಂಶ ಹಿಡಿದಿಡಲು ಸಮರ್ಥವಾಗಿರುವುದಿಲ್ಲವಾದರೂ ಇದಕ್ಕೆ ಅಪವಾದಗಳಿಲ್ಲದಿಲ್ಲ. ಮೂರ್ತಿರಾಯರ ಈ ಅನುವಾದಿತ ಕೃತಿ ಹೆಚ್ಚು ಋಣಿಯಾಗಿರುವ ಎಫ್.ಜೆ. ಚರ್ಚ್‌ನ "The Trial and Death of Socrates" ಕೃತಿಯ ಮೂಲಭಾಗಗಳನ್ನು ಆದಷ್ಟು ಮಟ್ಟಿಗೆ ಭಾಷಾಂತರಿಸುವಲ್ಲಿ ಅವರು ಸಫಲರಾಗಿದ್ದಾರೆ. ಮೂಲ ಕೃತಿಯ ಕೆಲವು ಭಾಗಗಳನ್ನು ಅನುವಾದದ ಪಕ್ಕದಲ್ಲಿಟ್ಟು ನೋಡಿದಾಗ ಈ ಅಂಶ ಸ್ಪಷ್ಟವಾಗುತ್ತದೆ. ಇಂಗ್ಲೀಷ್ ಉದ್ಧರಣ ಮೂಲ ಭಾಗಗಳನ್ನೂ, ಕನ್ನಡ ಉದ್ಧರಣಗಳು ಅನುವಾದಿತ ಭಾಗಗಳನ್ನೂ ಸೂಚಿಸುತ್ತವೆ.

Plato and Xenophan are almost the only turstworthy authorities about him who remain. and they describe him almost as an old man (ix) ಈ ಭಾಗವನ್ನು ಮೂರ್ತಿರಾಯರು ಕೊಂಚ ವಿಮರ್ಶಾತ್ಮಕವಾಗಿ ವಿಸ್ತರಿಸಿ ಹೀಗೆ ಬರೆದಿದ್ದಾರೆ:

"ಅವನ ವಿಷಯವನ್ನೇನಿದ್ದರೂ ಮುಖ್ಯವಾಗಿ ಪ್ಲೇಟೋ, ಕ್ಸೆನೊಫನ್ ಗ್ರಂಥಗಳಿಂದ ತಿಳಿದುಕೊಳ್ಳಬೇಕಾಗಿದೆ. ಆದರೆ ಪ್ಲೇಟೋ ಚರಿತ್ರಕಾರನಲ್ಲ. ತತ್ವಜ್ಞಾನಿ, ಅದಲ್ಲದೆ ಕವಿ. ಅವನು ಕೊಟ್ಟಿರುವ ಚಿತ್ರದಲ್ಲಿ ನಿಜವಾದದ್ದೆಷ್ಟು, ಕವಿಯ ನಿರ್ಮಾಣವೆಷ್ಟು ಎಂದು ನಿರ್ಧರಿಸುವುದು ಕಷ್ಟ. ಇತ್ತ ಕ್ಸೆನೊಫನ್ನನು ಸಾಕ್ರಟೀಸನ ಕಡೆಯ ವಕೀಲನಾಗಿ ನಿಂತಿದ್ದಾನೆ. ಅದಲ್ಲದೆ ಅವನಿಗೆ ಸಾಕ್ರಟೀಸನ ತತ್ವ ವಿಮರ್ಶೆಯನ್ನು ಗ್ರಹಿಸುವ ಶಕ್ತಿಯಿಲ್ಲ. (iii)

Socrates alone refused to give way (xxii)

ಈ ವಾಕ್ಯವನ್ನು ಮೂರ್ತಿರಾಯರು ಕೊಂಚ ವಿಸ್ತರಿಸಿ ಹೀಗೆ ಅನುವಾದಿಸಿದ್ದಾರೆ. ಆದರೆ ಸಾಕ್ರಟೀಸನು ಅದನ್ನು ತಡೆಯುವುದಕ್ಕೆ ತನಗೆ ಸಾಧ್ಯವಾದಷ್ಟು ಪ್ರಯತ್ನ ಮಾಡಿದನು. (v).

ಮೂರ್ತಿರಾಯರು ಮೂಲದ ಕೆಲವು ಭಾಗಗಳನ್ನು ಸ್ವಲ್ಪ ವಿಸ್ತೃತವಾಗಿ ಅನುವಾದ ಮಾಡಿರುವುದಿದೆ. ಇದು ಅನಿವಾರ್ಯ ಅಗತ್ಯ. ಏಕೆಂದರೆ ಇಂಗ್ಲೀಷ್‌ನ ಒಂದೆರಡು ಶಬ್ದಗಳು ವಿಸ್ತಾರವಾದ ಅರ್ಥ ಪ್ರಪಂಚವನ್ನು ಒಳಗೊಂಡಿರುತ್ತವೆ. ಅವುಗಳ ಆಶಯದ ಪೂರ್ಣ ಅಭಿವ್ಯಕ್ತಿಗೆ ಈ ಅರ್ಥ ವಿಸ್ತಾರ ಅಗತ್ಯ. ಅಂತಹ ಮತ್ತೊಂದು ಮಾದರಿ.

He is found guilty by 281 votes to 220. (68)

ಸಾಕ್ರಟೀಸ್ ತಪ್ಪಿತಸ್ಥನೆಂದು ತೀರ್ಮಾನವಾಗುವುದು. ಅವನಿಗೆ ವಿರೋಧವಾಗಿ 281ಜನರೂ, ಅವನ ಪರವಾಗಿ 220 ಜನರೂ ಮತಗಳನ್ನು ಕೊಡುವರು. (62)

ಅನುವಾದಗಳಲ್ಲಿ ಸಂಗ್ರಹಾನುವಾದವೂ ಒಂದು. ಅವಶ್ಯವಿರುವಲ್ಲೆಲ್ಲಾ ಮೂರ್ತಿರಾಯರು ಈ ಕ್ರಮವನ್ನೂ ಕೈಗೊಂಡಿರುವುದರ ಮಾದರಿಗಳು.

"I showed" he says, "not by mere words, but by my actions, that I did not care a straw for death, but that I did care very much indeed about doing wrong".

ಸಾಕ್ರಟೀಸನು "ಸಾವು ಬಂದರೆ ಬರಲಿ, ಅಧರ್ಮವನ್ನಾಚರಿಸುವುದಿಲ್ಲ" ಎಂದುಕೊಂಡು ಅವರ ಆಜ್ಞೆಯನ್ನುಲ್ಲಂಘಿಸಿ, ಮನೆಗೆ ಹೊರಟುಹೋದನು.

We drew a distinction between knowledge and wisdom. The former

"is earthly, of the mind,

But wisdom, heavenly, of the soul"

But Socrates drew no distinction between them. To him they were identical. (X/VIII)

"ಜ್ಞಾನವೂ ಸದ್ಗುಣವೂ ಒಂದೇ" ಎಂದು ಸಾರಿದನು (XXVIII)

Even though he share your health and sit at your table (7)

.....ನನ್ನ ಪಂಕ್ತಿಯಲ್ಲೇ ಊಟಮಾಡುವನಾದರೂ...... (7)

and so become a very great public benefactor (4)

.....ದೇಶಕ್ಕೆ ಅವನಿಂದ ಮಹೋಪಕಾರವಾಗುತ್ತದೆ.(5)

ಈ ಅನುವಾದವನ್ನು ಮತ್ತೊಂದು ಅನುವಾದದೊಂದಿಗೆ ಹೋಲಿಸಿ ನೋಡಬಹುದು. "ಚುರುಕುತನ ಕಳೆದುಕೊಂಡಿರೋ ಒಳ್ಳೇ ಕುದುರೆಯನ್ನು ತೊಣಚಿ ಕಚ್ಚಿ ಚುರುಕು ಮಾಡುವಂತೆ, ದೇವರು ಕಳಿಸಿರೋ ತೊಣಚಿ ನಾನು. ನಿಮ್ಮ ಬಂಧುವಿನಂತೆ, ಮಿತ್ರನಂತೆ, ಸ್ವಂತ ಫಲಾಪೇಕ್ಷೆಯಿಲ್ಲದೆ ನೀವು ಸದ್ಗುಣಿಗಳಾಗಬೇಕಂತ ನಾನು ಯಾಕೆ ಬೋಧಿಸ್ತಿದೀನಿ? ನಾನು ಯಾವ ಹಣದಾಸೆಗೂ ಹೋಗದೆ ನಿರ್ವಂಚನೆಯಿಂದ ನಿಮಗಾಗಿ ದುಡಿದು ತೀರಾ ಬಡವನಾಗಿರೋದು ಯಾಕೆ? ನನ್ನನ್ನ ಕೋಪದಿಂದ ನೀವು ಶಿಕ್ಷಿಸಿದರೆ ಭಗವಂತನ ಕರುಣೆಯನ್ನು ನೀವು ವಿರೋಧಿಸಿದಂತಾಗುತ್ತದೆ. ನನ್ನನ್ನ ಕೊಲ್ಲಿಸಿದರೆ ನನ್ನಂಥವನನ್ನ ಮತ್ತೆ ದೇವರು ಕಳಿಸೋವರೆಗೂ ನೀವು ಕಾಯಬೇಕು."

(ನಾನಲ್ಲದ ನಾನು : ಲೇ. ಭರತೇಶ (1981) ಪುಟ 71–72)

ಈ ಭಾಗವನ್ನು ಇನ್ನೂ ಹೆಚ್ಚು ಸಂಕ್ಷಿಪ್ತವಾಗಿ ಅನುವಾದಗೊಂಡ ಒಂದು ಭಾಗದೊಂದಿಗೆ ಹೋಲಿಸಿ ನೋಡಬಹುದು.

ಸಾಕ್ರಟೀಸ್: (ಕ್ಷೀಣಧ್ವನಿಯಲ್ಲಿ) ಏನೂ ಇಲ್ಲ. ಕ್ರೈಟೋ, ಯಾವಾಗಲೂ ಹೇಳಿದ್ದೆ. ನಿನ್ನನ್ನು ನೀನು ಚೆನ್ನಾಗಿ ನೋಡ್ಕೋ. ನಿನಗೂ ನನಗೂ ಇದೇ ನೀನು ಮಾಡೋ ಸೇವೆ... (ಮುಗಿಕೊಳ್ಳುತ್ತಾನೆ) (ಪುಟ 99) (ಮೇಲಿನದೇ)

ಈ ಎರಡು ಅನುವಾದಗಳನ್ನು ಪರಸ್ಪರ ಹೋಲಿಸಿದಾಗ ಎರಡೂ ಅನುವಾದಗಳಲ್ಲೂ ಮೂಲದ ಹಲವು ವಾಕ್ಯ ಭಾಗಗಳನ್ನು ಕೈಬಿಟ್ಟಿರುವುದನ್ನು ಕಾಣುತ್ತೇವೆ. ಆದರೆ, ಮೂರ್ತಿರಾಯರ ಅನುವಾದ ಮೂಲದ ಹತ್ತಿರವಿದೆ.

"ಈಗ ಅಥೆನ್ಸ್ ನಗರ ತನ್ನ ಶರೀರದ ಗಾತ್ರದ ನಿಮಿತ್ತದಿಂದಲೇ ನಡಿಗೆಯಲ್ಲಿ ಲವಲವಿಕೆಯಿಲ್ಲದಿರುವ ಒಂದು ಉತ್ತಮಾಶ್ವದಂತಿದೆ. ನಾನು-ಸ್ವಲ್ಪ ವಿಚಿತ್ರವಾದ ಒಂದು ರೂಪಕವನ್ನು ಉಪಯೋಗಿಸಬಹುದಾದರೆ-ಆ ಕುದುರೆಯನ್ನು ಕಚ್ಚಿ ಚುರುಕು ಮಾಡಲು ಪರಮಾತ್ಮನು ಕಳುಹಿಸಿಕೊಟ್ಟ ತೊಣಚಿ ನಾನು. ದಿನವೆಲ್ಲಾ ನಿಮ್ಮನ್ನು ಕಚ್ಚಿ ಎಚ್ಚರಿಸಿ ನಿಮ್ಮ ದೋಷಗಳನ್ನು ತೋರಿಸಲೆಂದೇ ನನ್ನನ್ನು ದೇವರು ಈ ಕೆಲಸಕ್ಕೆ ಪ್ರೇರೇಪಿಸಿರಬೇಕು. ಈಗ ನನ್ನನ್ನು ಕೊಂದರೆ ಪುನಃ ನನ್ನಂಥವನು ನಿಮಗೆ ಸಿಕ್ಕುವುದು ಕಷ್ಟ."

Simply by doing what I always tell you. Crito. Take care of your ownselves. and you will serve me and mine and yourselves in all that you do. even though you make no promises now.

"ಹೆಚ್ಚು ಹೇಳಬೇಕಾದದ್ದೇನೂ ಇಲ್ಲ. ಕ್ರೈಟೊ ನಿಮ್ಮ ವಿಷಯದಲ್ಲಿ ನೀವು ಜಾಗರೂಕರಾಗಿರಿ ಎಂದು ಅನೇಕ ವೇಳೆ ಹೇಳಿದ್ದೇನಲ್ಲವೇ? ಹಾಗೆ ಮಾಡುತ್ತೇವೆಂದು ನನಗೆ ಭಾಷೆಕೊಟ್ಟರೂ ಸರಿ, ಇಲ್ಲದಿದ್ದರೂ ಸರಿ, ಅಷ್ಟು ಮಾತ್ರ ನೀವು ಮಾಡಿದರೆ ನನಗೂ ನನ್ನವರಿಗೂ ನಿಮಗೂ ಎಲ್ಲರಿಗೂ ಸೇವೆ ಮಾಡಿದ ಹಾಗೆಯೇ."

ಕೆಲವು ಕಡೆ ಮೂಲ ಹಾಗೂ ಅಡಿಟಿಪ್ಪಣಿಗಳನ್ನೂ ಸೇರಿಸಿ ಅನುವಾದ ಮಾಡಿದ್ದಾರೆ. ಇದರಿಂದಾಗಿ ವಿಷಯ ಗ್ರಹಣ ಸಮಗ್ರವಾಗಿ ಆಗುವುದಲ್ಲದೆ ಅಡಿಟಿಪ್ಪಣಿಯನ್ನು ಸೇರಿಸಿಕೊಂಡು ಓದುವ ಗೋಜಿರುವುದಿಲ್ಲ. ಇಂತಹ ಒಂದು ಮಾದರಿ ಇಲ್ಲಿದೆ.

For the one[1] is of a sort to be loved because it is loved while the other[2] is loved because it is of a sort to be loved. (ಮೂಲ)

1. What is pleasing to the Gods.

2. What is holy (ಅಡಿ ಟಿಪ್ಪಣಿ) ಪುಟ 20–21.

"ಏಕೆಂದರೆ, ಅವುಗಳಲ್ಲಿ ಒಂದು (ದೇವತೆಗಳಿಗೆ ಪ್ರಿಯವಾದದ್ದು) ಪ್ರೀತಿಸಲ್ಪಡುತ್ತಿರುವುದರಿಂದ ಪ್ರೇಮಯೋಗ್ಯವಾದದ್ದು, ಇನ್ನೊಂದು (ಧರ್ಮ) ಪ್ರೇಮಯೋಗ್ಯವಾದ್ದರಿಂದ ಪ್ರೀತಿಸಲ್ಪಡತಕ್ಕದ್ದು (ಪುಟ 21). ಮೂಲದ ಅಡಿ ಟಿಪ್ಪಣಿಗಳನ್ನು ಅನುವಾದಿತ ವಾಕ್ಯಗಳೊಂದಿಗೆ ಸೇರಿಸಿ ಅನುವಾದಿಸಿರುವುದು ಓದುಗಾರಿಕೆಯ ದೃಷ್ಟಿಯಿಂದ ಅನುಕೂಲ.

ಭಾಷಾಂತರಿತ ಕೃತಿ (ಮೂಲಕೃತಿ)ಯ ಶೈಲಿ ಎಷ್ಟೇ ಸುಂದರವಾಗಿರಲಿ, ಭಾಷಾಂತರದ ಭಾಷೆ, ಶೈಲಿ, ಮೂಲದಂತೆಯೇ ಸ್ವಾದುವಾಗಿರಬೇಕು. "ಭಾಷಾಂತರವು, ಓದುಗರನ್ನು ಆಕರ್ಷಿಸಬೇಕಾದರೆ ಅದರಲ್ಲಿಯೂ ಶಬ್ದ ಜೋಡಣೆಯಲ್ಲಿ, ಗೇಯತೆಯಲ್ಲಿ, ಶೈಲಿಯಲ್ಲಿ ಸಮತೋಲನವಿರುವುದು ಅಗತ್ಯ........ (ಭಾಷಾಂತರ

ಪ್ರವೇಶಿಕೆ. ಶ್ರೀ ಮಹೇಶ್ವರಪ್ಪ ಪುಟ 28) ಎಂಬ ಮಾತಿನ (ಹೇಳಿಕೆಯ) ಜೊತೆನಲ್ಲಿ ಈ ಕೆಳಗಿನ ಅನುವಾದಿತ ಭಾಗಗಳನ್ನು ನಾವು ಗಮನಿಸಬಹುದು.

..... and say that Socrates is an abominable fellow, who corrupts young men. (46)

"ಈ ಸಾಕ್ರಟೀಸನ ಮನೆ ಹಾಳಾಗ, ಈ ಕೇಡಿಗ ಬಂದು ಊರಿನ ತರುಣರನ್ನೆಲ್ಲಾ ಬುದ್ಧಿಕೆಡಿಸಿದ" ಎಂದುಕೊಳ್ಳುವರು. (43)

ಈ ಅನುವಾದದಲ್ಲಿ ಆಡುಭಾಷೆಯ ಸಮರ್ಥ ಬಳಕೆಯಿದೆ. ಮೂಲದಷ್ಟೇ ಪದಗಳಲ್ಲಿ ಮೂಲ ಭಾವದ ಸಮಗ್ರತೆಯಿದೆ.

ಮೂಲದ ಭಾವವನ್ನು ಸರಿಯಾಗಿ ಗ್ರಹಿಸಿ, ವಿಸ್ತೃತವಾದರೂ ವಿವರವಾಗಿ ಅನುವಾದ ಮಾಡಿದ ಭಾಗವಿದು.

By here that is goodness! There is a great abundance of benefactors. And do the listners here improve them or not? (48)

"ಬಹಳ ಸಂತೋಷಕರವಾದ ವಿಷಯ ನಮ್ಮ ಭಾಗಕ್ಕೆ ದೇವರು ಒಳ್ಳೆಯವನು. ಇಲ್ಲಿಯ ಯುವಕರ ಏಳಿಗೆಗೆ ಸಹಾಯ ಮಾಡುವುದಕ್ಕೆ ಬಹಳ ಜನಗಳು ಸಿಕ್ಕಿದ ಹಾಗಾಯಿತು. ಈ ಸಭೆಯಲ್ಲಿ ನೆರೆದಿರುವ ಇತರರ ವಿಷಯದಲ್ಲಿ ಏನು ಹೇಳುವೆ? ಅವರೂ ಯುವಕರನ್ನು ಉತ್ತಮ ಸ್ಥಿತಿಗೆ ತರಬಲ್ಲರೋ? (45)

ಮೂಲದಲ್ಲಿ ಎರಡು ಮೂರು ಕಡೆ ಹರಿದು ಹಂಚಿಹೋಗಿರುವ ವಿಷಯ ಸಾಮಗ್ರಿಯನ್ನು ಅಗತ್ಯಕ್ಕೆ ಅನುಗುಣವಾಗಿ ಕ್ರೋಢೀಕರಿಸಿ ಬರೆದಿರುವುದನ್ನೂ ನಾವು ಈ ಕೃತಿಯಲ್ಲಿ ಕಾಣುತ್ತೇವೆ.

His father, Sophroniscus, was a sculptor, his mother Phaenarete a midwife.............The first of them is his marriage with Xanthippe By her he had three sons.........Her son Lamprocles found her bitter tongue and her violent temper intolerable, and his father told him that she meant all her harshness for his good, and read him a lecture on filial duty (XXIV, XXVIII, XXXV)

ಸಾಕ್ರಟೀಸನ ತಂದೆ ಒಬ್ಬ ಶಿಲ್ಪಿ, ಅವನ ಹೆಸರು ಸಾಫ್ರೊನಿಸ್ಕಸ್. ಅವನ ತಾಯಿ ಫೀನಾರಿಟೆ ಎಂದೊಬ್ಬ ಸೂಲಗಿತ್ತಿ. ಸಾಕ್ರಟೀಸನು ಸ್ವಲ್ಪ ದಿನ ಶಿಲ್ಪವೃತ್ತಿಯನ್ನು ಅಭ್ಯಾಸ ಮಾಡಿದ್ದನು. ಆತನ ಹೆಂಡತಿ ಸಾಂತಿಪಿ ಬಹಳ ಗಯ್ಯಾಳಿಯೆಂದು ಪ್ರಸಿದ್ಧಿ ಪಡೆದಿದ್ದಳೆ. ಸಾಕ್ರಟೀಸನ ಸಂಸಾರದ ವಿಷಯ ನಮಗೆ ಹೆಚ್ಚು ತಿಳಿದಿಲ್ಲ. ಅವನ ಮೂರು ಮಕ್ಕಳಲ್ಲಿ ಮೊದಲನೆಯವನಾದ ಲಾಂಪ್ರೊಕ್ಲೀಸನು ಒಂದು ಸಲ ತನ್ನ ತಾಯಿಗೆ ಅವಿಧೇಯನಾಗಿದ್ದನೆಂದು ತಿಳಿದು ತಾಯಿಯ ವಿಷಯದಲ್ಲಿ ಗೌರವದಿಂದ ನಡೆದುಕೊಳ್ಳಬೇಕೆಂದು ಸಾಕ್ರಟೀಸನು ಬುದ್ಧಿಹೇಳಿದನಂತೆ (iv)

ಅತ್ಯುತ್ತಮ ಅನುವಾದ ಮೂಲದ ಪ್ರತಿಯೊಂದು ಧ್ವನಿಯನ್ನೂ ಪರಿಣಾಮಕಾರಿಯಾಗಿ ಹಾಗೂ ಸಮರ್ಥವಾಗಿ ಹಿಡಿದಿಡುತ್ತದೆ. ಈ ಕೆಳಗಿನ ತುಲನಾತ್ಮಕ ವಿವರಣೆ ಇದನ್ನು ಸಮರ್ಥಿಸುತ್ತದೆ.

They assert that he did not kill the man at all, and they say that even if he had killed him over and over again, the man himself was a murderer, and that I ought not to concern myself about such a person, because it is unholy for a son to prosecute his father for murder. So little, Socrates, do they know the divine law of holiness and unholiness (7–8)

"ನಿನ್ನ ತಂದೆ ಆ ಆಳನ್ನು ಕೊಲ್ಲಲೇ ಇಲ್ಲ. ಅಥವಾ ಅವನನ್ನು ಹತ್ತು ಸಲ ಕೊಂದನೆಂದರೂ ಕೊಲೆಯಾದವನು ತಾನೇ ಕೊಲೆಪಾತಕ-ಅವನ ವಿಷಯಕ್ಕೆ ಇಷ್ಟೇನು ಗಲಭೆ? ಮಗನು ತಂದೆಯ ಮೇಲೆ ಕೊಲೆಯ ಅಪರಾಧವನ್ನು ಹೊರಿಸುವುದು ಅಧರ್ಮ" –ಇದೇ ಅವರ ತರ್ಕ ಧರ್ಮಾಧರ್ಮಗಳಿಗೆ ಸಂಬಂಧಪಟ್ಟ ದೈವಶಾಸನವನ್ನು ಇವರು ಎಷ್ಟು ಚೆನ್ನಾಗಿ ತಿಳಿದಿದ್ದಾರೆ, ನೋಡಿದೆಯಾ?" (ಪುಟ 7-8)

ಈ ಒಟ್ಟು ಅನುವಾದವೇ ಒಂದು ಸಂಗ್ರಹಾನುವಾದ. 213 ಪುಟಗಳ ಮೂಲಕೃತಿಯನ್ನು 208 ಪುಟಗಳಲ್ಲಿ ಕನ್ನಡಕ್ಕೆ ತಂದಿದ್ದಾರೆ ಮೂರ್ತಿರಾಯರು. ಜೊತೆಗೆ ಇಂಗ್ಲೀಷ್‌ನ ಕೆಲವು ಶಬ್ದಗಳಿಗೆ ಅವರು ಕೊಟ್ಟ ಸಂಸ್ಕೃತ - ಕನ್ನಡ ಅರ್ಥಗಳೂ ಗಮನಾರ್ಹವಾಗಿವೆ.

Action =ಮೊಕದ್ದಮೆ, A hook–nosed = ಗರುಡ ಮೂಗು, A scanty beard=ಕುರುಚಲು ಗಡ್ಡ, A good farmer = ಆರಂಭ ಮಾಡುವವನು, Novelty =ನವೀನ, Unreservedly=ಸಲಿಗೆಯಾಗಿ, Pollution =ಅಶೌಚ, Seer = ದಿವ್ಯದರ್ಶಿ, Prophet=ಭವಿಷ್ಯದರ್ಶಿ, Divine things = ದೈವಿಕ, Holiness = ಧರ್ಮ, Unholiness =ಅಧರ್ಮ, Anxious=ಔತ್ಸುಕ್ಯ, Wickedly =ದೌರಾತ್ಮ್ಯ, Robe =ದುಕೂಲ, Temperate =ಮಿತವ್ಯವಹಾರಿ.

ಮೂಲದ ಭಾವವನ್ನು ಚೆನ್ನಾಗಿ ಗ್ರಹಿಸಿ, ಕನ್ನಡದಲ್ಲಿ ಆಡುನುಡಿಗಳಲ್ಲಿ, ಕನ್ನಡಕ್ಕೆ ಹೊಂದುವಂತಹ ಶೈಲಿಯಲ್ಲಿ ಮಾಡಿರುವ ಅನುವಾದ :

Your father, my good sir ? (6)

"ಏನು, ನಿನ್ನ ತಂದೆಯೋ ? ಇದೇನಯ್ಯ, ನೀನಾಡುವ ಮಾತು" (6)

## 7.3 ಜೆರೂಸಲೆಮ್ ಯಾತ್ರೆ

ಮೂರ್ತಿರಾಯರು ಅನುವಾದಿಸಿರುವ ಕಥೆಗಳಲ್ಲಿ ಮಾದರಿಗಾಗಿ ಪ್ರಾತಿನಿಧಿಕವಾದ ಒಂದು ಕಥೆಯನ್ನು ಆರಿಸಿಕೊಂಡಿದೆ.

ಲಿಯೋ ಟಾಲ್‌ಸ್ಟಾಯ್ ಬರೆದ "TWO OLD MEN" ಎಂಬ ಕಥೆಯನ್ನು ಅವರು "ಜೆರೂಸಲೆಮ್ ಯಾತ್ರೆ" ಎಂಬ ಶೀರ್ಷಿಕೆಯಡಿ ಅನುವಾದಿಸಿದ್ದಾರೆ. ಪೀಠಿಕೆಯಲ್ಲಿ ಈ ಕಥೆಯ ಹಿನ್ನೆಲೆಯನ್ನು ಕುರಿತು ಹೀಗೆ ಬರೆಯುತ್ತಾರೆ :

"ಶ್ರೀ ಮಾಸ್ತಿ ವೆಂಕಟೇಶಯ್ಯಂಗಾರ್ಯರು ಟಾಲ್‌ಸ್ಟಾಯ್‌ನನ್ನು 'ಟಾಲ್‌ಸ್ಟಾಯ್ ಮಹರ್ಷಿ' ಎಂದು ಕರೆದಿದ್ದಾರೆ. ಆತ ಸಾಹಿತಿ ಮಾತ್ರವಲ್ಲ. ಮಾನವ ಜನ್ಮ ಸಾರ್ಥಕವಾಗಬೇಕಾದರೆ ನಾವು ಹೇಗೆ ಬದುಕಬೇಕು ಎಂಬ ಪ್ರಶ್ನೆಗೆ ಅವನು ಉತ್ತರ ಕಂಡು

ಹಿಡಿಯಲು ಹೊರಟ. ಮಾನವ ಪ್ರೇಮವೇ ದೈವಭಕ್ತಿಯ ತಿರುಳು ಎಂಬ ತತ್ತ್ವವನ್ನು ಈ ಕಥೆ ಬಹು ಸರಳವಾಗಿ ಪ್ರತಿಪಾದಿಸುತ್ತದೆ"......ಟಾಲ್‌ಸ್ಟಾಯ್‌ನ ಕಥೆಗಳನ್ನು ಓದುವವರಿಗೆ "ಇಲ್ಲಿರುವುದೆಲ್ಲ ಕಥೆಗಾರ ಸ್ವತಃ ಕಣ್ಣಿಂದ ಕಂಡದ್ದು, ಕಿವಿಯಿಂದ ಕೇಳಿದ್ದು"ಎಂಬ ಭಾವನೆ ಬರುತ್ತದೆ"

(ಪಾ.ಸ.ಕ. 1972 ಪುಟ 113)

ಮೂರ್ತಿರಾಯರು ಇದೇ ಕಥೆಯನ್ನೇ ಆಯ್ಕೆ ಮಾಡಿಕೊಳ್ಳಲು ಅವರ ಮನೋಧರ್ಮವೇ ಬಹು ಮಟ್ಟಿಗೆ ಕಾರಣ. ಅವರು ಆಗಾಗ ಉಲ್ಲೇಖಿಸುವ ಪದೇ ಪದೇ ಪ್ರತಿಪಾದಿಸುವ "ಮಾನವ ದಯಾಮೃತ"(The Milk of human kindness)ಈ ಕಥೆಯಲ್ಲಿ ಹುದುಗಿರುವುದೇ ಮುಖ್ಯ ಕಾರಣ. ಈ ಕಥೆಗೆ ಅವರು ನೀಡಿರುವ ಶೀರ್ಷಿಕೆ ಕೇವಲ ಮೂಲ ಶೀರ್ಷಿಕೆಯ ಅನುವಾದವಾಗಿರದೆ ಒಂದು ವಿಶಿಷ್ಟವಾದ ಹಾಗೂ ವಿಶಾಲಾರ್ಥವಿರುವ ಶೀರ್ಷಿಕೆ ಆಗಿರುತ್ತದೆ. ಮೂರ್ತಿರಾಯರ ಪರಧರ್ಮ ಸಹಿಷ್ಣುತೆಗೂ ಇದು ನಿದರ್ಶನ.

ಇದೊಂದು ನಿಕಟಾನುವಾದ. ಮೂಲದ ಹಲವು ಸಂದರ್ಭಗಳನ್ನು ಕನ್ನಡದ ಜಾಯಮಾನಕ್ಕೆ ಹೊಂದುವಂತೆ ಹೇಗೆ ಅನುವಾದಿಸಿದ್ದಾರೆಂಬುದಕ್ಕೆ ಕೆಲವು ಮಾದರಿಗಳನ್ನು ಗಮನಿಸಬಹುದು.

1. Efin was a staid man, serious and firm. He never drank nor smoked nor took snuff......(102)

ಎಫಿಮ್ ತನ್ನ ಬುದ್ಧಿಯನ್ನು ತನ್ನ ಕೈಯಲ್ಲೇ ಇಟ್ಟುಕೊಂಡಿದ್ದ ಮನುಷ್ಯ. ಆಲೋಚನಾಪರ, ದೃಢಮನಸ್ಕ. ಅವನು ಎಂದೂ ಕುಡಿತ, ಧೂಮಪಾನ ಮಾಡುವುದು, ನಶ್ಯ ಹಾಕುವುದು ಮುಂತಾದ ಚಟಗಳಿಗೆ ಬಲಿಬಿದ್ದವನಲ್ಲ. (114)

(ಮೂಲದ 16ಶಬ್ದಗಳಿಗೆ 20ಶಬ್ದಗಳು ಅನುವಾದದಲ್ಲಿದ್ದು ಇದೊಂದು ವಿಸ್ತಾರಾನುವಾದವಾಗಿದೆ).

2. He was hale, long–bearded, and erect and it was only when he was past sixty that a little grey began to show itself in his beard. (102)

ಒಳ್ಳೆ ಆರೋಗ್ಯವಂತ, ಜಿಸ್ಸು ಬಾಗದ ದೃಢವಾದ ನಿಲುವುಳ್ಳ ದೇಹ, ಉದ್ದವಾದ ಗಡ್ಡ, ಆ ಗಡ್ಡದಲ್ಲಿ ಅಲ್ಪಸ್ವಲ್ಪ ನರೆಗೂದಲು ಕಾಣಲಾರಂಭಿಸಿದ್ದು ಅವನಿಗೆ ಅರವತ್ತು ವರ್ಷವಾದ ಮೇಲೆಯೇ (114)

(ಮೂಲದಲ್ಲಿ 27ಶಬ್ದಗಳು, ಅನುವಾದದಲ್ಲಿ 19ಶಬ್ದಗಳು, Erect ಜಿಸ್ಸು ಬಾಗದ ದೃಢವಾದ ನಿಲುವುಳ್ಳ ದೇಹ, ಒಂದೇ ಶಬ್ದಕ್ಕೆ 5ಶಬ್ದಗಳು)

3. The two oldmen had taken a vow long since and had arranged to go on a pilgrimage to Jerusalem together (103)

ಜೆರೂಸಲೆಮ್‌ಗೆ ಇಬ್ಬರೂ ಒಟ್ಟಿಗೆ ಯಾತ್ರೆ ಹೋಗಬೇಕೆಂದು ಈ ಮುದುಕರು ಬಹಳ ಹಿಂದೆಯೇ ಹರಸಿಕೊಂಡಿದ್ದರು (115)

(ಸಂಗ್ರಹಾನುವಾದ.......had taken a vow = ಹರಸಿಕೊಂಡಿದ್ದರು.)

4 one holiday = ಅವತ್ತು ಯಾವುದೋ ಹಬ್ಬ. 103:115 (ಗಮನಾರ್ಹ ಅನುವಾದ. ಏಕೆಂದರೆ ರೈತರ ಬಿಡುವೆಂದರೆ ಹಬ್ಬದ ದಿನ)

5 Well= ಏನಪ್ಪ 103:115

6. "ಚೆನ್ನಾಯಿತು......" (116)– ಮೂಲದಲ್ಲಿಲ್ಲ

7. But how (103) ಅದು ಹೇಗಾದೀತಪ್ಪ

8. An. neighbour. (103) – ಈ ಉದ್ಗಾರ ಹಾಗೂ ಸಂಬೋಧನೆ ಹೀಗೆ ಅನುವಾದಗೊಂಡಿದೆ : "ನಾನು ಹೇಳುತ್ತೀನಿ ಕೇಳು." (116)

9. Washing and house–cleaning (104) =ಗುಡಿಸೋದು, ಸಾರಿಸೋದು, ತೊಳೆಯೋದು (116)

10. Have the strength (105) – ಗಟ್ಟಿಗಪತವಾಗಿರುಗ (117)

11. .. to say a Godlyword (106) = ದೇವರಿಗೆ ಪ್ರೀತಿಯಾಗುವಂತಹ ಏನಾದರೂ ಒಂದೆರಡು ಮಾತಾಡುವವನು (119)

12. Servant of God (110) = ತಾಯಿ (123)

13. Break the fast (113) = ಪಾರಣೆ ಮಾಡುತ್ತೇನೆ (127)

14. Expression of face = ಮುಖಚಹರೆ 124–140

15 Helpless (126) = ನೀನೇ ಎನ್ನುವವರು ಯಾರೂ ಇಲ್ಲ

16. People (130) = ಒಕ್ಕಲಿಗರು (148)

ಹೀಗೆ ಅನುವಾದದ ಎಲ್ಲಾ ಲಕ್ಷಣಗಳನ್ನು ಒಳಗೊಂಡ ಹಾಗೂ ಕನ್ನಡದ ಪರಿಸರಕ್ಕೆ ಉಚಿತವಾದ ಭಾಷೆಯಿಂದ ಅನುವಾದಿತ ಕಥೆ. ಅನುವಾದವೂ ಸೃಜನಶೀಲವೆಂಬ ಮಾತನ್ನು ಪ್ರತಿಪಾದಿಸುವ ಮಾದರಿ. "ನಾಡಿನ ಉತ್ತಮ ಪ್ರಬಂಧಕಾರ, ಚಿತ್ರಕಾರ, ಅನುವಾದಕಾರ ಹಾಗೂ ವಿಮರ್ಶಕರಾಗಿ ಕನ್ನಡದ ಗದ್ಯ ಸಾಹಿತ್ಯಕ್ಕೆ ಅತ್ಯಮೂಲ್ಯವಾದ ಕೊಡುಗೆ ನೀಡುತ್ತಾ ಉನ್ನತ ದರ್ಜೆಯ ಆಂಗ್ಲ ಪ್ರಾಧ್ಯಾಪಕರೆನಿಸಿಕೊಂಡವರು ಎ.ಎನ್. ಮೂರ್ತಿರಾಯರು" ಎಂದು ಶ್ರೀ ಕೃಷ್ಣಶೆಟ್ಟಿ ಯವರು ಗುರುತಿಸಿರುವುದು ಸಮರ್ಥನೀಯ. (ಸುಧಾ 09.10.1994 ಪುಟ 36)

## 7.4 ಮೋಲಿಯೇರನ ಎರಡು ನಾಟಕಗಳು

ಮೂರ್ತಿರಾಯರ ಕಾಲದ ಕನ್ನಡ ಲೇಖಕರು ಭಾರತದ ಸ್ವಾತಂತ್ರ್ಯ ಹೋರಾಟದಿಂದ ಪ್ರಭಾವಿತರಾಗಿದ್ದಾರೆ. ಇಲ್ಲವೇ ಭಾರತೀಯ ದರ್ಶನದಿಂದಲೋ, ದಾರ್ಶನಿಕರಿಂದಲೋ ಸ್ಫೂರ್ತರಾಗಿದ್ದಾರೆ. ಆದರೆ ಅದಕ್ಕೆ ಅಪವಾದವೆಂಬಂತೆ ಮೂರ್ತಿರಾಯರು ಇವುಗಳೊಂದಿಗೆ ಪಾಶ್ಚಾತ್ಯ ಸಾಹಿತ್ಯದಿಂದಲೂ ಪ್ರಭಾವಿತರಾಗಿದ್ದಾರೆ. ಅವರ ಗುರುಗಳಾದ ಬಿ.ಎಂ.ಶ್ರೀಯವರು ನಡೆದ ದಾರಿಯಲ್ಲಿ ನಡೆದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಹೊಸ ಆಯಾಮವನ್ನು ತೆರೆದರು. ಮೂರ್ತಿರಾಯರು ತಮ್ಮ ವಿದ್ಯಾರ್ಥಿ ಜೀವನದಲ್ಲಿ ಆಂಗ್ಲ ಸಾಹಿತ್ಯವನ್ನು ಅಧ್ಯಯನ ಮಾಡಿದಂತೆ ಫ್ರೆಂಚ್ ಸಾಹಿತ್ಯವನ್ನೂ ಅಧ್ಯಯನ ಮಾಡಿದ್ದಾರೆ. ಫ್ರೆಂಚ್ ಸಾಹಿತ್ಯದಲ್ಲಿಯೇ ವಿಶಿಷ್ಟನೆನಿಸಿದಂತಹ ಮೋಲಿಯೇರನ ಸಾಮಾಜಿಕ ಚಿಂತನೆಯಿಂದ ಸ್ಫೂರ್ತರಾದರು. ಹೀಗೆ ಮೂರ್ತಿರಾಯರ ಸಾಮಾಜಿಕ

ಚಿಂತನೆಯ ಒಂದು ಮುಖವನ್ನಿಲ್ಲಿ ಕಾಣುತ್ತೇವೆ. ಮೂರ್ತಿರಾಯರು ತಮ್ಮ ಸುತ್ತ ಮುತ್ತಲ ಸಮಾಜದ ವಿವಿಧ ಮುಖಗಳನ್ನು ಸೂಕ್ಷ್ಮವಾಗಿ ನೋಡಿದ್ದಾರೆ. ಹಾಗೆ ಕಂಡ ಸಮಾಜದ ವಿಶ್ಲೇಷಣೆ ಮಾಡಿದ್ದಾರೆ. ಆದರೆ ನೇರವಾಗಿ ಉಪದೇಶ ಮಾಡದೆ, ಧ್ವನ್ಯಾತ್ಮಕವಾಗಿ ಸಮಾಜದ ಪುರೋಭಿವೃದ್ಧಿಯನ್ನು ಸೂಚಿಸಿದ್ದಾರೆ. ಅದಕ್ಕಾಗಿ ಸಾಹಿತ್ಯ ಮಾಧ್ಯಮವನ್ನು ಒಂದು ಸಮರ್ಥ ಮಾಧ್ಯಮವನ್ನಾಗಿ ಬಳಸಿಕೊಂಡಿದ್ದಾರೆ. ಸಮಾಜದಲ್ಲಿ ನಡೆಯುವ ಶೋಷಣೆ, ವಂಚನೆ, ಕಪಟಗಳನ್ನು ಕಂಡು ಅದಕ್ಕೆ ತಮ್ಮ ಸಾತ್ವಿಕ ಕ್ರೋಧವನ್ನೂ ಪ್ರತಿಭಟನೆಯನ್ನೂ ವ್ಯಕ್ತಪಡಿಸಿದ್ದಾರೆ. ಫ್ರೆಂಚ್ ನಾಟಕ-ಸಾಹಿತ್ಯದಲ್ಲಿ ಮೋಲಿಯೇರನ ನಾಟಕಗಳನ್ನೇ ಆರಿಸಿಕೊಳ್ಳಲು ಅವರಲ್ಲಿ ಹುದುಗಿದ್ದ ಈ ಸೌಮ್ಯ ಬಂಡಾಯ ಪ್ರವೃತ್ತಿಯೇ ಕಾರಣ. ರೂಢ-ಮೂಲವಾದ ಪದ್ಧತಿಗಳನ್ನು ಅಂಧಾಭಿಮಾನದಿಂದ ಅವೈಚಾರಿಕವಾಗಿ ಒಪ್ಪಿಕೊಳ್ಳದೆ, ಪ್ರಶ್ನಕ ಮನೋವೃತ್ತಿಯಿಂದ ವಿಶ್ಲೇಷಣೆ ಮಾಡಿದ್ದಾರೆ. ಅಂತಹ ಒಂದು ಮಾದರಿ ಇಲ್ಲಿದೆ. ಸಮಾಜವನ್ನು ಕೇವಲ ವಿಡಂಬನೆಗೆ ಗುರಿ ಮಾಡಿದರೆ ಅದರಲ್ಲಿ ಹುದುಗಿದ ದೋಷವನ್ನೂ ಅದರ ನಿವಾರಣೋಪಾಯವನ್ನೂ ಧ್ವನ್ಯಾತ್ಮಕವಾಗಿ ಹೇಳುವ ಪಾತ್ರವುಳ್ಳ ನಾಟಕವನ್ನೇ ಅವರು ಆಯ್ದುಕೊಂಡಿದ್ದಾರೆ.

ಮೂರ್ತಿರಾಯರ ರೂಪಾಂತರ ಕೃತಿಯಾದ ಆಷಾಢಭೂತಿಗೆ ಸ್ಫೂರ್ತಿ ನೀಡಿದ ತಾರ್ತುಫ್ ನಾಟಕದ ವಸ್ತು ಸಾಮಾಜಿಕ ನೀತಿ, ಸಾಮಾಜಿಕ ಚಿಂತನೆ, ಪ್ರತಿಯೊಬ್ಬನ ಸಾಮಾಜಿಕ ಕರ್ತವ್ಯ. ಇಂತಹ ಸಾಮಾಜಿಕ ಚಿಂತನೆ ಮೂರ್ತಿರಾಯರ ಮಿತಿಯಲ್ಲಿ ನಾಟಕವೊಂದರ ಅನುವಾದದಲ್ಲಿ ಪರ್ಯವಸನವಾಗಿದೆ. ನಾಟಕವನ್ನು ಕನ್ನಡೀಕರಿಸುವಾಗ ಅದಕ್ಕೆ ಆಯ್ದ ಮುನ್ನುಡಿ ಮೂರ್ತಿರಾಯರ ಚಿಂತನೆಗೆ ಒಂದು ಅತ್ಯುತ್ತಮ ನಿದರ್ಶನ. ಮೋಲಿಯೇರ್, ರಾಸಿನ್ ಹಾಗೂ ಷೇಕ್ಸ್‌ಪಿಯರ್‌ರವರ ನಡುವಣ ಅಂತರವನ್ನು ಗುರುತಿಸಿ ಹೇಳುವಂತಹ ಮುನ್ನುಡಿಯನ್ನೇ ಆಯ್ಕೆ ಮಾಡಿದ್ದಾರೆ. ನಾಟಕದ ರಚನೆಯ ಹಿನ್ನೆಲೆ ಹಾಗೂ ನಾಟಕ ಕರ್ತೃವಿನ ಉದ್ದೇಶಗಳನ್ನು ಇಲ್ಲಿ ನೀಡಲಾಗಿದೆ. ಗೀತಾ ವಾಕ್ಯವೊಂದನ್ನು ಮೋಲಿಯೇರನ ಮನಸ್ಥಿತಿಯೊಂದಿಗೆ ಸಮೀಕರಿಸಿ ಹೀಗೆ ಬರೆಯುತ್ತಾರೆ.

"ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ" ಎಂಬ ಪ್ರಸಿದ್ಧವಾದ ಸಂಸ್ಕೃತ ವಾಕ್ಯವಿದೆಯಷ್ಟೆ. ಆಗಿನ ವರ್ಗ ಮರ್ಯಾದೆಯಲ್ಲಿದ್ದದ್ದೂ ಇದೇ ಭಾವನೆ. ಮೋಲಿಯೇರನ ಮನಸ್ಸಿನಲ್ಲಿದ್ದದ್ದೂ ಅದೇ." (xiv)

ಮೂರ್ತಿರಾಯರು ಯಾವುದೇ ಕೃತಿಯನ್ನು ಬರೆದರೂ ಓದುಗನಿಗೆ ಒಂದು ಒಳ್ಳೆಯ ಮಾರ್ಗದರ್ಶನ ನೀಡುವಂತಹ ಮುನ್ನುಡಿಯನ್ನು ಬರೆಯುತ್ತಾರೆ. ಕೃತಿಯ ಪರಿಪೂರ್ಣತೆ ಹಾಗೂ ನಿರ್ದುಷ್ಟತೆಗಳು ಅವರಿಗೆ ಅತ್ಯಂತ ಮುಖ್ಯ. ಓದುಗನಿಗೆ ಸಂಪೂರ್ಣ ಮಾಹಿತಿ ನೀಡಿ ಅವನನ್ನು ಕೃತಿವಾಚನಕ್ಕೆ ಸಿದ್ಧ ಮಾಡುವುದು ಅವರ ಪ್ರತ್ಯೇಕತೆ. ಕೃತಿ ರಚನೆಯ ಹಿನ್ನೆಲೆಯನ್ನು ಕುರಿತು ಮುನ್ನುಡಿ ಬರೆಯುವುದರ ಅವರ ಉದ್ದೇಶ ಓದುಗನಿಗೆ ಕೃತಿಯ ವಾಸ್ತವಿಕತೆಯ ಬಗ್ಗೆ ಅರಿವನ್ನುಂಟುಮಾಡುವುದೇ ಆಗಿದೆ. ಈ ನಾಟಕ ರಚನೆಯ ಹಿನ್ನೆಲೆಯನ್ನು ಅವರ ಮುನ್ನುಡಿಯ ಈ ಭಾಗ ಸ್ಪಷ್ಟಪಡಿಸುತ್ತದೆ.

"ಲೂಯಿ ಕಾನ್‌ಸ್ಟಾಂಟಿನೋಪಲಿನಲ್ಲಿ 'ಅಂಬಾಸಡರ್' ದರ್ಜೆಯ ರಾಯಭಾರಿಯನ್ನಿಟ್ಟಿದ್ದರೂ 'ಸಬ್ಲೈಮ್ ಪೋರ್ಟ್' ನವರು (The sublime porte - ತುರ್ಕಿಯ ರಾಜಸ್ಥಾನ) ವರ್ಸೇಯುವಲ್ಲಿ ಅಂಥ ರಾಯಭಾರಿಯನ್ನಿಡುವ ಗೌರವ ತೋರಿಸಲಿಲ್ಲ. ಇದಕ್ಕೆ ಕಾರಣ ಲೂಯಿ ಕೇವಲ ದೊರೆ, ಚಕ್ರವರ್ತಿಯಲ್ಲ ಎಂಬುದು. ಇದು ಲೂಯಿಯ ಮನಸ್ಸಿನಲ್ಲಿ ಕೊರೆಯುತ್ತಿದ್ದಂತೆ ತೋರುತ್ತದೆ. ಅದ್ದರಿಂದ ಅವನು ತನ್ನ ರಾಯಭಾರಿಯನ್ನು ಹಿಂದಕ್ಕೆ ಕರೆಸಿಕೊಂಡು ಅವನಿಗೆ ಬದಲಾಗಿ 'ಛಾರ್ಜ್ ಅಫೇರ್ಸ್' (charged affairs) ದರ್ಜೆಯ ಪ್ರತಿನಿಧಿಯನ್ನು ಕಳುಹಿಸಿದನು. ಹೀಗೆ ಮಾಡಿದ್ದೇಕೆ ಎಂದು ತಿಳಿದುಕೊಳ್ಳಲು ತುರ್ಕಿ ಸುಲ್ತಾನನು ಸುಲೇಮಾನ್ ಆಗಾ ಎಂಬ ಪ್ರತಿನಿಧಿಯೊಬ್ಬನನ್ನು ಫ್ರಾನ್ಸಿಗೆ ಕಳುಹಿಸಿದನು. ಸುಲೇಮಾನ್ ಬಂದಾಗ ಲೂಯಿಯು ತಾನು ಅಪೇಕ್ಷಿಸಿದ ಅಂಬಾಸಡರ್ ಬಂದನೆಂದು ಭಾವಿಸಿ ಭಾರೀ ಹಣವನ್ನು ವೆಚ್ಚ ಮಾಡಿ ಆತನಿಗೆ ಔತಣವನ್ನು ಮನರಂಜನೆಗಳನ್ನು ಏರ್ಪಡಿಸಿದನು. ಆ ಸಂಧರ್ಭದಲ್ಲಿ ತುರ್ಕಿ ರೀತಿಯ ವ್ಯವಸ್ಥೆಗೆ ತಕ್ಕ ವೇದಿಕೆಗಳು, ಪಾದಾಸನಗಳು, ದಿವಾನುಗಳು, ಕಾಫಿ ಪರಟತ್ತು ಮುಂತಾದುವೆಲ್ಲದರ ಏರ್ಪಾಡಾಗಿತ್ತು. ಆ ಪ್ರತಿನಿಧಿಯನ್ನು ಬರಮಾಡಿಕೊಳ್ಳುವಾಗ ಲೂಯಿ ಕೂಡ ಸುಲ್ತಾನರು ಹಾಕಿಕೊಳ್ಳುವಂತಹ ಚಿನ್ನದ ಕಿಂಕಾಪಿನ ನೀಳುಡುಪನ್ನು ಧರಿಸಿದ್ದನು. ಕೊನೆಗೆ ಗೊತ್ತಾಯಿತು. ಸುಲೇಮಾನ್ ಆಗಾ ಅಷ್ಟೇನೂ ಗಣ್ಯನಾದವನಲ್ಲ, ಸುಲ್ತಾನನಿಂದ ಕಾಗದ ತಂದವನು ಮಾತ್ರ ಎಂದು. ಇದು ತಿಳಿದಾಗ ಲೂಯಿಗೆ ಬಹಳ ಕೋಪ ಬಂತು. ಅಂದಿನಿಂದಾಚೆಗೆ ಸುಲೇಮಾನನನ್ನು ಕಣ್ಣೆತ್ತಿ ನೋಡಲಿಲ್ಲ. ಆದರೆ ಅಚಾತುರ್ಯವೇನೋ ನಡೆದು ಹೋಗಿತ್ತು. ಫ್ರೆಂಚ್ ಜನತೆ ನಕ್ಕು ಮುಗಿಸಿತ್ತು."

"ಈ ಘಟನೆಯಿಂದಾದ ಪರಿಣಾಮವನ್ನು ತೊಡೆದು ಹಾಕಿ ಅದನ್ನು ಗೀತದಲ್ಲಿ ಸೇರಿಸಿಬಿಡಲೆಂದು ಲೂಯಿ ಈ ಪ್ರಹಸನವನ್ನು ಬರೆಸಿದನು." (x–xi)

'ತಾರ್ತುಫ್' ನಾಟಕದ ಹಿನ್ನೆಲೆಯನ್ನು ಕುರಿತು ಅವರು ಪೀಠಿಕೆಯಲ್ಲಿ ಪ್ರಸ್ತಾಪಿಸಿದ್ದು ಮಾತ್ರವಲ್ಲ, ಈ ಕಥಾವಸ್ತು ದೇಶ ವಿದೇಶಗಳಲ್ಲಿಯೂ ಹೇಗೆ ಸಾಮಾನ್ಯವಾಗಿದೆ ಎಂದು ತೌಲನಿಕವಾಗಿ ಬರೆದಿದ್ದಾರೆ. ಇಲ್ಲಿ ಮೂರ್ತಿರಾಯರ ವಿಶಿಷ್ಟ ಗುಣವೆನಿಸಿದ ತೌಲನಿಕತೆಯನ್ನೂ ನಾವು ಗುರುತಿಸಬಹುದಾಗಿದೆ. ಅವರ psycho-logical trend ಒಂದು ಎತ್ತರಕ್ಕೆ ಏರಿ ಅಲ್ಲಿಂದ ಕೆಳಗೂ ಸುತ್ತಮುತ್ತಲೂ ನೋಡುವಂತಹದು. ಅವರ ಸಾಮಾಜಿಕ ಚಿಂತನೆ ಸಮಾಜದ ಅತ್ಯಂತ ಕೆಳಸ್ತರದಿಂದ ಮೊದಲುಗೊಂಡು ಅತ್ಯಂತ ಉನ್ನತಸ್ತರದವರೆಗೂ ಚಾಚಿರುವಂತಹದು. ಯಾವುದೇ ಒಂದು ವರ್ಗಕ್ಕೆ ಮೀಸಲಾಗಿರಿಸಿದ ವೀಕ್ಷಣೆ ಅವರದ್ದಲ್ಲ. ಅವರ ಬರಹ ಬದುಕಿನ ಹತ್ತು ಹಲವು ಕ್ಷೇತ್ರಗಳ ಪ್ರತ್ಯಕ್ಷ ದರ್ಶನದಿಂದ, ಅವರ ಆಳವಾದ ಅನುಭವದಿಂದ ಪ್ರೇರಿತವಾದುದು. ಈ ನಾಟಕದ್ವಯ ಅವರ ಸಾಮಾಜಿಕ ಅಧ್ಯಯನದ ಆಸಕ್ತಿಯ ಫಲ. ಒಂದು ಸಮಾಜ ಶಾಸ್ತ್ರೀಯ ಹಿನ್ನೆಲೆಯಲ್ಲಿ ಈ ನಾಟಕವನ್ನು ಅವರು ಆಯ್ಕೆ ಮಾಡಿಕೊಂಡಿದ್ದಾರೆ. ಇದಕ್ಕೆ ಪೂರಕವಾಗಿ ಅವರು ಬರೆದಿರುವ ಈ ಪೀಠಿಕೆಯ ಈ ಸಾಲುಗಳು ಗಮನಾರ್ಹ. "ಕಪಟಿಯೊಬ್ಬನು ಭಕ್ತನ, ಸಂತನ ಸೋಗು ಹಾಕಿ ಜನರನ್ನು ಮೋಸಗೊಳಿಸಿ ಅವರನ್ನು ತನ್ನ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುತ್ತಾನೆ. ಈ ಪ್ರಯತ್ನದಲ್ಲಿ

ಮೊದಮೊದಲು ಜಯಶಾಲಿಯಾದರೂ ಕೊನೆಗೆ ಅವನ ಕಪಟ ಬಯಲಾಗುತ್ತದೆ. ಈ ಕಪಟಿಯ ಸಾಹಸವೇ ನಾಟಕದ ಕಥಾವಸ್ತು. ಇಂದಿನ ಇಂಡಿಯಾದಲ್ಲಿ ಹೇಗೋ ಹಾಗೆಯೇ 12ನೆಯ ಶತಮಾನದ ಫ್ರಾನ್ಸಿನಲ್ಲೂ ಈ ಕಥಾವಸ್ತುವಿನಲ್ಲಿ ಜೀವಕಳೆಯಿತ್ತು" (xvi – xvii)

ಮೂರ್ತಿರಾಯರು ಸಾಹಿತ್ಯದ ಮೂಲಕ ಹೇಳಲು ಹೊರಟ ವಿಚಾರ ಬಹುಮಟ್ಟಿಗೆ ಸಾಮಾಜಿಕವಾದದ್ದು. ಸಮಾಜ ಕೇಂದ್ರಿತವಾದ ಅವರು ವ್ಯಕ್ತಿಗೂ ಹೆಚ್ಚು ಒತ್ತುಕೊಟ್ಟು ಬರೆದಿರುವುದನ್ನು ನಾವು ಕಾಣುತ್ತೇವೆ. ಆದ್ದರಿಂದಲೇ ಅವರ ಬರಹಗಳಲ್ಲಿ ವ್ಯಕ್ತಿ ಸಮಾಜವನ್ನು ಕುರಿತು ಪ್ರತ್ಯಕ್ಷವಾಗಿ ಅಥವಾ ಧ್ವನ್ಯಾತ್ಮಕವಾಗಿ ಅವರು ಪ್ರಸ್ತಾಪಿಸುತ್ತಾರೆ. ಹೀಗೆ ಒಂದೋ ಗುಪ್ತಗಾಮಿನಿಯಾಗಿ ಹರಿಯುವ ಇಲ್ಲವೇ ವ್ಯಕ್ತವಾಗಿ ಪ್ರಕಟವಾಗುವ ಅವರ ಸಾಮಾಜಿಕ ಚಿಂತನೆಯಲ್ಲಿ ಟೀಕೆ ಇಲ್ಲ, ವಾಸ್ತವ ಚಿತ್ರಣವಿದೆ. ಉಪದೇಶದ ಧ್ವನಿಯಿಲ್ಲ, ಉದಾತ್ತೀಕರಣದ ಸಂದೇಶವಿದೆ. ಕ್ರಾಂತಿಯ ಕೂಗು ಇಲ್ಲ, ಸುಧಾರಣಾ ದೃಷ್ಟಿ ಇದೆ. ಅಂತಹ ಒಂದು ಮಾದರಿ ಇದು.

"ನಮ್ಮ ಕಾಲದವರು ವ್ಯಕ್ತಿಯ ನಡತೆಗೆ ಸಂಬಂಧಪಟ್ಟ ಬೋಧನಪರತೆಯನ್ನು ತಿರಸ್ಕರಿಸುತ್ತಾರೆ. ಆದರೆ ಸಾಮಾಜಿಕವಾಗಿ ನಡತೆಯ ವಿಷಯದಲ್ಲಿ ಎಂಥ ಹಾಸ್ಯರಹಿತವಾದ ನೀರಸ ಬೋಧನಾಪರತೆಯನ್ನಾದರೂ ಸಹಿಸುತ್ತಾರೆ. ನಮ್ಮ ನೈತಿಕ ಉತ್ಸಾಹವೆಲ್ಲಾ ಸಾಮಾಜಿಕ ಅನ್ಯಾಯಗಳ ಮೇಲೆ ಕೇಂದ್ರೀಕೃತವಾಗಿದೆ. ವ್ಯಕ್ತಿಯ ನೀತಿ ಜೀವನದ ಸಮಸ್ಯೆಗಳು ಹಿಂದಿನಷ್ಟೇ ಮುಖ್ಯವಾಗಿಯೂ ಜೀವಂತವಾಗಿಯೂ ಇವೆಯಾದರೂ ಅದನ್ನು ಎದುರಿಸುವ ಮತ್ತು ಬಿಡಿಸುವ ಇಚ್ಛೆ ನಮ್ಮಲ್ಲಿ ಅಷ್ಟಾಗಿ ಕಾಣಿಸುವುದಿಲ್ಲ.

ನಮ್ಮ ಸಮಕಾಲೀನರು ಸಾಮಾಜಿಕ ನೀತಿಯ ವಿಷಯದಲ್ಲಿ ಮಗ್ನರಾಗಿರುವುದರಿಂದ ಬೇಕಾದಷ್ಟು ಅನ್ಯಾಯಗಳನ್ನು ನಿವಾರಿಸಿದ್ದಾಗಿದೆ. ಸಂಕಟವನ್ನು ಪರಿಹರಿಸಿದ್ದಾಗಿದೆ. ಇದು ಹೆಮ್ಮೆಯ ವಿಷಯವೇ ಹೌದು. ಆದರೆ ನಾವು ಇದನ್ನು ಬೆಲೆ ಕೊಡದೆ ಸಾಧಿಸಿಲ್ಲ, ಸಾಮಾಜಿಕ ಅನ್ಯಾಯದ ವಿಷಯವನ್ನೇ ಒತ್ತಿ ಹೇಳುವುದರಿಂದ ಒಂದು ದುಷ್ಪರಿಣಾಮವಾಗಿದೆ. ಆ ಅನ್ಯಾಯಕ್ಕೆ ಗುರಿಯಾದವರೂ ಅದನ್ನು ಖಂಡಿಸುವವರೂ ಅದರ ಜವಾಬ್ದಾರಿಯನ್ನು ಇತರ ವರ್ಗಗಳವರ ಮೇಲೆ ಹೊರಿಸುತ್ತಿದ್ದಾರೆ. "ಸಮಾಜದಲ್ಲಿ ಒಂದಕ್ಕೊಂದು ವಿರೋಧವಾದ ಎರಡು ವರ್ಗಗಳಿವೆ, ಅವೆರಡರಲ್ಲಿ ನ್ಯಾಯವೆಲ್ಲಾ ಒಂದು ಕಡೆಗೂ ಅನ್ಯಾಯವೆಲ್ಲಾ ಮತ್ತೊಂದು ಕಡೆಗೂ ಇವೆ. ಒಂದು ವರ್ಗದವರೆಲ್ಲಾ ಹುತಾತ್ಮರು, ಮತ್ತೊಂದು ವರ್ಗದವರೆಲ್ಲಾ ಕೇಡಿಗರು" – ನಮ್ಮ ವಿಚಾರ ಸರಣಿ ಈ ರೀತಿಯಾಗಿ ಹರಿದಿದೆ. ಇದರಿಂದ ವರ್ಗದ್ವೇಷಕ್ಕೂ ವರ್ಗಗಳ ಹೋರಾಟಕ್ಕೂ ಹಿಂದೆಂದೂ ಕಾಣದಷ್ಟು ಪುಷ್ಟಿ ದೊರೆತಿದೆ. ವೈಯಕ್ತಿಕ ನೀತಿಗೆ ಪ್ರಾಧಾನ್ಯ ಕೊಟ್ಟರೆ ಮಾನವ 'ಕೇಡಿಗತನ ನನ್ನ ಒಳಗೆ ಇದೆಯೇ!' ಎಂದು ನೋಡುವ ಆಂತರಿಕ ದೃಷ್ಟಿಯನ್ನೂ ದಯಾಪರತೆಯನ್ನೂ ಬೆಳೆಸಿಕೊಳ್ಳುತ್ತಾನೆ. ಈಗ ಸಾಮಾಜಿಕ ನೀತಿಯ ಕಡೆಗೆ ದೃಷ್ಟಿಯನ್ನು ಹರಿಸಿ, ಅದಕ್ಕೆ ಹಿಂದಿನ ಸಾಹಿತ್ಯದಲ್ಲಿ ಕೊಟ್ಟಿದ್ದ ಪ್ರಾಧಾನ್ಯವನ್ನು ಸ್ವಲ್ಪ ಮಟ್ಟಿಗಾದರೂ ಮತ್ತೆ ದೊರಕಿಸಿಕೊಡಬಹುದು.

ಮೂರ್ತಿರಾಯರು ಮಾನವ ಜೀವನದ ಅಶಾಶ್ವತತೆಯನ್ನು ಕುರಿತು ಚಿಂತನೆ ಮಾಡಿದವರಲ್ಲ. ಆದರೆ ಮಾನವ ಜೀವನದ ಮಹತ್ವವನ್ನು ಮನಗಂಡವರು. ಅವರಿಗೆ ಬದುಕು ಒಂದು ಕಲೆ, ಕರ್ತವ್ಯ, ಆನಂದ. ಅವರ ಬದುಕಿನ ಮೇಲೆ ಉಪನಿಷತ್ತಿನ ಪ್ರಭಾವ ಒಂದು ಕಡೆ (ಕುರ್ವನ್ನೇವೇಹ ಕರ್ಮಾಣಿ ಜಿಜಿವಿಶೇತ್‌ಶತಗ್ಂ ಸಮಾಃ ಅನಾಯಾಸೇನ ಮರಣಂ ವಿನಾದೈನ್ಯೇನ ಜೀವನಂ- 'ನನ್ನ ಜೀವನ ದೃಷ್ಟಿ' - ತರಂಗ 25 ನವೆಂಬರ್ 1984 ಪುಟ 26). ಫ್ರೆಂಚ್-ಪಾಶ್ಚಿಮಾತ್ಯ ಸಾಹಿತ್ಯ ಬೀರಿದ ಪ್ರಭಾವ ಮತ್ತೊಂದು ಕಡೆ. ಮನುಷ್ಯನ ಬದುಕು ಎಷ್ಟು ಉನ್ನತ, ಭವ್ಯ. ಇಂತಹ ಉದಾತ್ತವಾದ ಬದುಕನ್ನು ಹೇಗೆ ವ್ಯರ್ಥವಾಗಿ ಕಳೆಯುತ್ತಾರೆ, ಎಂಬುದನ್ನು ಅವರು ವ್ಯಂಗ್ಯವಾಗಿ ಹೇಳುವ ಈ ಸಾಲುಗಳಲ್ಲಿ ಮೂರ್ತಿರಾಯರ ಮಾನಸಿಕ ವ್ಯಥೆ ಅಡಗಿದೆ. ಅದ್ದರಿಂದಲೇ ಈ ನಾಟಕವನ್ನು ಆಯ್ದುಕೊಂಡಿರಬೇಕು. ಅವರ ಮನೋಧರ್ಮವನ್ನು ಪ್ರತಿಬಿಂಬಿಸುವ ಹಾಗೂ ಅದಕ್ಕೆ ಒಗ್ಗುವ ಈ ನಾಟಕದ ಕಥಾವಸ್ತು ಅವರಿಗೆ ಅತ್ಯಂತ ಪ್ರಿಯವಾಗುವುದಕ್ಕೆ ಕಾರಣ ಅವರು ಸಾಮಾಜಿಕವಾಗಿ ಮಾಡುವ ಚಿಂತನೆ.



ಡೋರಿನ- ತಾರ್ತುಫನೇ, ಮೈ ಕೈ ತುಂಬಿಕೊಂಡು ಲಕ್ಷಣವಾಗಿದಾನೆ, ಮುಖ ಮಿರುಗುಟ್ಟುತ್ತೆ, ತುಟಿ ಕೆಂಪಗಿದೆ, ಪೂರ್ಣಾರೋಗ್ಯ.

ಡೋರಿನ - ಅಮ್ಮಾವರ ಎದುರಿಗೇ ಊಟಕ್ಕೆ ಕೂತುಕೊಂಡು, ಸಂಕೋಚಪಟ್ಟು ಕೊಳ್ಳದೆ ಎರಡು ಪಾರ್ಟ್ರಿಜ್, ಬೇಯಿಸಿದ ಕುರಿಯ ಕಾಲಿನಲ್ಲಿ ಅರ್ಧ, ಅಷ್ಟನ್ನೂ ಮುಗಿಸಿದರು.

ಡೋರಿನ - ಊಟ ಮಾಡಿ ಮೇಜು ಬಿಟ್ಟು ಏಳುವಾಗಲೇ ನಿದ್ದೆ ತೂಗುತ್ತಾ ಇತ್ತು. ಸೀದಾ ರೂಮಿಗೆ ಹೋಗಿ ಬೆಡ್ಡಿಗೆ ಮಲಗಿಕೊಂಡು ಬೆಳಗಿನ ತನಕ ಯಾವ ತೊಂದರೆಯೂ ಇಲ್ಲದೆ ನಿದ್ದೆ ಹೊಡೆದರು.

ಡೋರಿನ - ಅವರು ಧೈರ್ಯಗೆಡಬಾರದಷ್ಟೆ. ತಮಗೇನೂ ರೋಗ ತಟ್ಟಿದ ಹಾಗೆ ಹುಷಾರಾಗಿ ನೋಡಿಕೊಳ್ಳಬೇಕಲ್ಲ. ರಕ್ತ ಕಳಕೊಂಡೋರು ಅಮ್ಮಾವರಾದರೂ, ಪಾಪ ಇವನಿಗೆ ನಿತ್ರಾಣವಾಗಿರಬೇಕು-ನಾಷ್ಟಾ ಮಾಡುವಾಗ ನಾಲ್ಕು ದೊಡ್ಡ ಗ್ಲಾಸು ತುಂಬ ವೈನ್ ಇಳಿಸಿದರು (ಪುಟ 12-13)

ಅಮೂಲ್ಯವಾದ ಮಾನವ ಶಕ್ತಿಯ ಅಪವ್ಯಯದ ಬಗ್ಗೆ ಮೂರ್ತಿರಾಯರ ಕಳಕಳಿ ಈ ಸಾಲುಗಳಲ್ಲಿ ವ್ಯಕ್ತವಾಗಿದೆ.

ಮೂರ್ತಿರಾಯರು ರೂಪಾಂತರ ಮಾಡಿದ "ಆಷಾಢಭೂತಿ" ನಾಟಕದ ಮೂಲ ದ್ರವ್ಯ ಈ ನಾಟಕದಲ್ಲಿದೆ. ತಾರ್ತುಫ್‌ನ ಕಪಟ ಬೂಟಾಟಿಕೆಗಳು "ಆಷಾಢಭೂತಿ" ನಾಟಕದ ಕಥಾವಸ್ತು. ಅವರು ಈ ನಾಟಕವನ್ನು ಕುರಿತು ಸ್ವಯಂ ಏನನ್ನೂ ಹೇಳಿಕೊಳ್ಳದಿದ್ದರೂ ಅವರ ಮನಸ್ಸೆಲ್ಲವೂ ಸಮಾಜದ ಬಗ್ಗೆಯೇ ಚಿಂತಿಸುತ್ತಲೇ ಇತ್ತು. ಸಮಾಜದಲ್ಲಿ ಕೆಲವರು ಈ ರೀತಿ ವಂಚನೆ ಮಾಡುವುದನ್ನು ಅವರು ಪ್ರತ್ಯಕ್ಷವಾಗಿ ಖಂಡಿಸಲಿಲ್ಲ. ನಿಜ, ಆದರೆ ಆ ಬಗ್ಗೆ ಅವರಿಗೆ ಸಹನೆ-ಸಮಾಧಾನವಿಲ್ಲ. ಪರೋಕ್ಷವಾಗಿ ಅವರು ಆ ಬಗ್ಗೆ ತಮ್ಮ ಸಾತ್ವಿಕ ಕ್ರೋಧವನ್ನು ಈ ಮೂಲಕ ವ್ಯಕ್ತಪಡಿಸಿದ್ದಾರೆ.

ಮೂರ್ತಿರಾಯರಿಗೆ ಆವೇಶದ ಭಕ್ತಿ, ಆಡಂಬರದ ಪೂಜೆ ಯಾವತ್ತೂ ಹಿಡಿಸದ ವಿಚಾರ. ತಮ್ಮ ಆತ್ಮ ಚರಿತ್ರೆಯಲ್ಲಿಯೂ ಅವರು ಇದೇ ಮನೋಭಾವವನ್ನು ವ್ಯಕ್ತ

ಪಡಿಸಿದ್ದಾರೆ. "ನನಗೆ ವೀರಾವೇಶ ಹಿಡಿಸದು" (ಪುಟ 22). ಇದೇ ವಿಚಾರ ತಾರ್ತೂಫ್ ನಾಟಕದಲ್ಲಿಯೂ ಬರುತ್ತದೆ. ಭಕ್ತಿ ಸಾಧನೆ, ಅಂತರಂಗದಲ್ಲಿದ್ದು ಗುಪ್ತವಾಗಿರಬೇಕೇ ಹೊರತು ಅದನ್ನು ಪ್ರಕಟವಾಗಿ ನಡೆಸುವುದನ್ನು ಅವರು ಎಂದೂ ವಿರೋಧಿಸಿದವರು. ಆ ಸಂದರ್ಭದ ಮಾತು ಹೀಗಿದೆ.

"ದೇವರ ಸಾಕ್ಷಿಯಾಗಿ ಹೇಳುತೀನಿ, ನೋಡು. ಹೊರಗೆ ವೇಷ ಹಾಕಿ ಆಟ ಕಟ್ಟುವ ಜನಕ್ಕೆ ನಾವು ಗುಲಾಮರಾಗಿರೋದಲ್ಲ. ಧೈರ್ಯ ನಟಿಸುವ ಜನ ಇಲ್ಲವೇ? ಹಾಗೇ ಭಕ್ತಿ ನಟಿಸುವ ಜನವೂ ಇದ್ದಾರೆ. ನಿಜವಾಗಿಯೂ ಧೈರ್ಯಸ್ಥರಾದೋರು ತಮ್ಮ ಗೌರವ ಉಳಿಸಿಕೊಳ್ಳುವ ಸಂದರ್ಭ ಬಂದಾಗ ತಮಟೆ ಹೊಡಕೊಂಡು ತಮ್ಮ ಧೈರ್ಯ ಕೊಚ್ಚಿಕೊಳ್ಳೋದಿಲ್ಲ. ನಿಜವಾಗಿ ಭಕ್ತಿ ಇರುವವರು ಕೂಡಾ ಹೀಗೆಲ್ಲಾ ಆಟಕಟ್ಟಿ ಕುಣಿಯೋದಿಲ್ಲ. ನಾವು ಅನುಸರಿಸಬೇಕಾದ್ದು ಅಂಥವರನ್ನು" (ತಾರ್ತೂಫ್ 15)

ಮೂರ್ತಿರಾಯರು "ಮಠಾಧಿಪತಿಗಳು ಹಾಗೂ ಸಮಾಜ" ಎಂಬ ಪ್ರಚಾರೋಪನ್ಯಾಸ ನೀಡಿದ್ದಾರೆ. ಹಾಗೆಯೇ ತಮ್ಮ ಆತ್ಮ ಚರಿತ್ರೆಯಲ್ಲಿಯೂ (46–48) ಮಠಾಧಿಪತಿಗಳ ಬಗ್ಗೆ ಉಲ್ಲೇಖಿಸಿದ್ದಾರೆ. ಮಠಾಧಿಪತಿಗಳ ಹಾಗೂ ಸಮಾಜದ ಪರಸ್ಪರ ಸಂಬಂಧವನ್ನೂ ಅವರು ಬಹು ಮಾರ್ಮಿಕವಾಗಿ ಚಿಂತನೆ ಮಾಡಿದ್ದಾರೆ. ಸಮಾಜದ ಪರವಾದ ಅವರ ಚಿಂತನೆಯ ಒಂದು ಮುಖ ಇಲ್ಲಿದೆ. ಅದರ ಬೀಜ ಈ ನಾಟಕದಲ್ಲಿದೆ.

"ಇನ್ನು ಈ ಸಾಧುಗಳೆಲ್ಲರನ್ನೂ ದೂರ ಇಡುತೀನಿ. ಇನ್ನು ಮೇಲೆ ಅವರನ್ನು ಕಂಡರೆ ದ್ವೇಷ ಕಾರಬೇಕು. ಅವರನ್ನು ಕಂಡರೆ ಸೈತಾನನಿಗಿಂತ ಕ್ರೂರವಾಗಿ ನಡಕೊಳ್ಳಬೇಕು." (ಪುಟ 73)

ಒಂದು ರೀತಿಯ ಸ್ಪಷ್ಟವಾದ ಬಂಡಾಯದ ಮನೋಧರ್ಮ ಮೂರ್ತಿರಾಯರದು. ಆದರೆ ಈ ದೃಷ್ಟಿಕೋನ ಏಕಮುಖವಾದದ್ದಲ್ಲ. ಅತ್ಯಂತ ಗಾಢವಾದ ಚಿಂತನೆ, ಸೂಕ್ಷ್ಮವೂ ವಿಶಾಲವೂ ಆದ ಅವಲೋಕನದಿಂದ ಮಠಾಧಿಪತಿಗಳು ಮಾಡಿರುವ ಸಮಾಜ ಸೇವೆಯನ್ನೂ ಅವರು ಕೊಂಡಾಡಿದ್ದಾರೆ. ಅಂಧಾಭಿಮಾನವಾಗಲಿ, ಪೂರ್ವಗ್ರಹವಾಗಲಿ ಇಲ್ಲದ ವಾಸ್ತವಿಕ ಸಂಶೋಧನೆ ಅಧ್ಯಯನ ಹಾಗೂ ಪ್ರಾಮಾಣಿಕ ಪ್ರತಿಕ್ರಿಯೆ ಅವರದು.

ಮೂರ್ತಿರಾಯರ ಚಿಂತನೆ ಏಕಪ್ರಕಾರವಾಗಿ ಪ್ರವಹಿಸುತ್ತಲೇ ಇರುವಂತಹುದು. ಒಂದು ಕೃತಿಯಲ್ಲಿ ಪ್ರತಿಬಿಂಬಿತವಾದ ಅವರ ಚಿಂತನೆ ಅವರ ಹಿಂದೂ - ಮುಂದಿನ ಕೃತಿಗಳಲ್ಲಿಯೂ ತಳಕು ಹಾಕಿಕೊಂಡಿರುವುದನ್ನು ನಾವು ಕಾಣುತ್ತೇವೆ. ಇದು ಅವರ ಒಂದು ಖಚಿತವಾದ ದೃಷ್ಟಿಕೋನವನ್ನು ಸೂಚಿಸುತ್ತದೆ. ಅವರ ಇತ್ತೀಚಿನ "ದೇವರು" ಕೃತಿಯಲ್ಲಿ ಅವರು ಹೀಗೆ ಉಲ್ಲೇಖಿಸಿದ್ದಾರೆ.

"ಬುದ್ಧನ ಕಾಲದ 'ಅಜಿತಕೇಶ ಕಂಬಳಿನ್' ಎಂಬುವನು ಮಾನವಕೇಶದಿಂದ ತಯಾರಿಸಿದ ಬಟ್ಟೆಗಳನ್ನು ಹಾಕಿಕೊಳ್ಳುತ್ತಿದ್ದನಂತೆ. ಅಂಥ ಬಟ್ಟೆ ಚಳಿಗಾಲದ ಚಳಿಯನ್ನು ಹೆಚ್ಚಿಸುತ್ತದೆ. ಬೇಸಗೆಯ ಸೆಕೆಯನ್ನೂ ಹೆಚ್ಚಿಸುತ್ತದೆ. ಚರ್ಮಕ್ಕೆ ಸತತವಾಗಿ ಅಸುಖವನ್ನು ಕೊಡುತ್ತಿರುತ್ತದೆ. ಚಾವಟಿಯಿಂದ ಹೊಡೆದುಕೊಂಡರೆ ದೇವರು ಪ್ರೀತನಾಗುತ್ತಾನೆಂದು ನಂಬಿದ ಜನ ಯೂರೋಪಿನಲ್ಲೂ ಇದ್ದರು. ಅವರಿಗೆ ಫ್ಲಾಜಿಲೆಂಟ್ಸ್ (Flagiellants) ಎಂದು ಹೆಸರು. "ಮಾನವ ಹುಟ್ಟಿನಿಂದಲೇ ಪಾಪಿ,

ಪಾಪದ ಕೆಲಸವನ್ನು ಮಾಡಿಯೂ ಮಾಡುತ್ತಾರೆ. ಪಶ್ಚಾತ್ತಾಪಪರನಾಗಿ ದೇಹವನ್ನು ದಂಡಿಸಬೇಕು"-ಇದು ಇಂಥ ಸೇವೆಗೆ ಪ್ರೇರಕವಾದ ಸಂಚಿಕೆ" (ಪುಟ 71)

ಈ ವಿಸ್ತಾರವಾದ ವಿವರಣೆಯ ಆರಂಭ ಬಿಂದು ಈ ನಾಟಕದಲ್ಲಿದೆ "........ ಆ ಕೂದಲಿನ ಷರಟನ್ನೂ, ಚಾವಟಿಯನ್ನೂ ಬೀಗ ಹಾಕಿಡಪ್ಪ" (ಪುಟ 41) ಎಂಬ ವಾಕ್ಯಕ್ಕೆ ಹೀಗೆ ಅಡಿ ಟಿಪ್ಪಣಿ ನೀಡಿದ್ದಾರೆ.

1. ಕೂದಲಿನ ಷರಟು, ಚಾವಟಿ-ದೇಹದಂಡನೆಗಾಗಿ ವಿರಕ್ತರು ಕೂದಲಿನಲ್ಲಿ ಮಾಡಿದ ಷರಟನ್ನು ಧರಿಸುತ್ತಿದ್ದರು. ಚಾವಟಿಯೂ ದೇಹದಂಡನೆಗಾಗಿಯೇ.

(ಪುಟ 41)

ಮೂರ್ತಿರಾಯರ ಮನಸ್ಸಿನಲ್ಲಿ ತಾರ್ತೂಫ್ ನಾಟಕ ಬಹಳ ಕಾಲದಿಂದಲೂ ನೆಲೆಸಿದ್ದಿರಬೇಕು. ಅದರ ವಸ್ತುವನ್ನೇ ಉಪಯೋಗಿಸಿಕೊಂಡು ಅವರು ಆಷಾಢಭೂತಿ ಎಂಬ ರೂಪಾಂತರವನ್ನು ಬರೆದರು. "ತಾರ್ತೂಫ್" ಪಾತ್ರವೇ ಸುಬ್ಬಾಶಾಸ್ತ್ರಿಯಾಗಿ ಪರಿವರ್ತನೆಯಾಯಿತು. (ಇದನ್ನು ಕುರಿತು ಪ್ರತ್ಯೇಕವಾಗಿ ವಿವೇಚಿಸಲಾಗಿದೆ)

ಮೂಲದ ವಾಕ್ಯಗಳನ್ನು ಕನ್ನಡಕ್ಕೆ ತರುವಾಗ ಮೂರ್ತಿರಾಯರು ಭಾಷಾ ಸೌಂದರ್ಯವನ್ನು ಮರೆಯಲಿಲ್ಲ. ಅವರ ಭಾಷೆ ನಿರಾಡಂಬರ, ಸರಳ, ಸಂಸ್ಕೃತ ಭಾಷಾಪ್ರಭುವಾಗಿಯೂ ಎಲ್ಲಿಯೂ ಭಾಷೆಯನ್ನು ಸಂಸ್ಕೃತಮಯವನ್ನಾಗಿ ಮಾಡದೇ, ಆಡು ಭಾಷೆಯ, ಬಳಿಕ ಮಾತಿನ ಶೈಲಿಯನ್ನು ಉಪಯೋಗಿಸಿದ್ದಾರೆ. ಆದ್ದರಿಂದಲೇ ಅವರ ಭಾಷೆ ವಾಗಾಡಂಬರದ ಭಾರದಿಂದ ಬಳಲುವುದಿಲ್ಲ. ಸರಳತೆಯ ಮೆರಗಿನಿಂದ ಶೋಭಿಸುತ್ತವೆ. ಸಂಸ್ಕೃತ ಶಬ್ದಗಳನ್ನು ಪ್ರಯೋಗ ಮಾಡಬೇಕಾದ ಅನಿವಾರ್ಯತೆ ತಲೆದೋರಿದಾಗ ಅಲ್ಲಿಯೂ ಸರಳತೆಯ ಮಾರ್ಗವನ್ನೇ ಅವಲಂಬಿಸಿದ್ದಾರೆ. ಅಥವಾ ಭಾಷಾ ಸಂಕ್ಷಿಪ್ತತೆಗೆ ಅಲ್ಲಲ್ಲಿ ಸರಳ ಸಂಸ್ಕೃತ ಶಬ್ದಗಳನ್ನು ತಂದಿದ್ದರೂ ಅವು ವಾಚಕರಿಗೆ ಚಿರಪರಿಚಿತವಾಗಿಯೇ ಇರುವಂತಹವು. ಕಾವ್ಯ ಮೀಮಾಂಸೆಯ ಪಾರಿಭಾಷಿಕ ಶಬ್ದಗಳನ್ನು ಸ್ವಾಭಾವಿಕವಾಗಿಯೇ ಬಳಸಿದ್ದಾರೆ.

ಮಾದರಿಗಾಗಿ ಈ ವಾಕ್ಯಗಳನ್ನು ಗಮನಿಸಬಹುದು:

ಎಲ್ಲರೂ ಅವರವರಿಗೆ ತೋರಿದ ಹಾಗೆ ತಲಾತಟ್ಟಿ ಮಾತಾಡುತ್ತಾರೆ (3)

ತನ್ನ ಗಂಡ ತನ್ನ ಮೆಚ್ಚಿದರೆ ಸಾಕು ಅನ್ನೊ ಗರತಿಗೆ ಅಲಂಕಾರದ ಅಡಾವುಡಿ ಯಾಕೋ ಕಾಣೆ (14)

ನೀವು ಈ ಮನೇಲಿ ವಿಪರೀತ ಸದರ ವಹಿಸಿಕೊಳ್ಳುತಾ ಇದೀಯೇ (23)

ಎಂಥ ದಿವಿನಾದ ಉಪಾಯ (29)

ಅಲ್ಲಿ ಅವನ ದೊಡ್ಡಪ್ಪ ಚಿಕ್ಕಪ್ಪಂದಿರು ಜ್ಞಾತಿಗಳು, ಬೇಕಾದಷ್ಟು ಜನ ಇರುತ್ತಾರೆ. (31)

ನಿಮ್ಮಿಬ್ಬರಿಗೂ ವಸೋ ಷೈತ್ಯ ಹಿಡಿದಿದೆ (36)

ಈ ಮತಿಗೆಲ್ಲಾ ಬೇರೆ ಲಗ್ನ ಇಡೋಣ, ಬೇಕಾದರೆ (38)

ಈ ದಾನಪತ್ರ, ನ್ಯಾಸದ ವಿಷಯದಲ್ಲಿ ಅವನನ್ನು ನೆಚ್ಚಿದ್ದು, ಎರಡೂ ಶುದ್ಧ ಅವಿವೇಕದ ಕೆಲಸ (73)

ಎಲ್ಲ ಜನರೂ ಯಾವುದನ್ನು ಪವಿತ್ರ ಅಂತ ತಿಳಿದಿದಾರೋ, ಅದನ್ನೇ ಇವನು ತನ್ನ ವರಸು ಬಟ್ಟೆ ಮಾಡಿಕೊಳ್ಳುತ್ತಾನೆ (85)

ಇದನ್ನೇ ಮೊನ್ನೆ ನಿದರ್ಶಕ ವಿವೇಚನ (Demonstrative reason –)ದಿಂದ ಸ್ಪಷ್ಟ ಮಾಡಿಕೊಟ್ಟೆನಲ್ಲ. (105) (ಜನಾಂತಿಕ) 132

## 7.5 ತಾರ್ತುಫ್ ಹಾಗೂ ಆಷಾಢಭೂತಿ ಒಂದು ತೌಲನಿಕ ಸಮೀಕ್ಷೆ

ಮೂರ್ತಿರಾಯರ ಸಾಹಿತ್ಯ ರಚನಗೆ ನಾಂದಿ ಹಾಡಿದ ಕೃತಿ "ಆಷಾಢಭೂತಿ" 1931ರಲ್ಲಿ ರೂಪಾಂತರ ಹೊಂದಿದ ಈ ಕೃತಿ ಮೂಲವನ್ನು ಬಹುಮಟ್ಟಿಗೆ ಅನುಸರಿಸಿವೆ ಯಾದರೂ ಮೂಲಕ್ಕಿಂತ ಭಿನ್ನವಾಗಿ ಸ್ವತಂತ್ರವಾಗಿ ನಿಲ್ಲಬಲ್ಲ ಎಲ್ಲಾ ಲಕ್ಷಣಗಳನ್ನೂ ಪಡೆದಿದೆ. 88 ಪುಟಗಳ ಮೂಲಕೃತಿ 63ಪುಟಗಳಲ್ಲಿ ಅಡಕವಾಗಿದೆ. ಮೂಲದ 643ಮಾತುಗಳನ್ನು 552ಮಾತುಗಳಿಗೆ ಇಳಿಸಿದೆ. ಮೂಲದ ಹದಿಮೂರು ಪಾತ್ರಗಳನ್ನು ಹದಿನಾರು ಪಾತ್ರಗಳಿಗೆ ಹೆಚ್ಚಿಸಿದೆ. ಮೂಲ ಹಾಗೂ ರೂಪಾಂತರಗಳ ಪಾತ್ರ ಸಮನ್ವಯ ಹೀಗಿದೆ :

| *ತಾರ್ತುಫ್* | *ಆಷಾಢಭೂತಿ* |
|---|---|
| ಮದಾಮ್ ಪರ್ನೆಲ್ | ಪಾರ್ವತಮ್ಮ |
| ಆರ್ಗಾನ್ | ಶಂಕರಪ್ಪ |
| ಎಲ್ಮೀರಾ | ಶಾರದೆ |
| ದಾಮಿ | ರಾಮು |
| ವಲೇರ್ | ಅನಂತ |
| ಕ್ಲೆಯಾಂತ್ | ಕೃಷ್ಣಮೂರ್ತಿ |
| ತಾರ್ತುಫ್ | ಸುಬ್ಬಾಶಾಸ್ತ್ರಿ |
| ದೊರೀನ | ಸರಸ್ವತಿ |
| ಲಾಯಲ್ | ಅಮೀನ ಗೋವಿಂದಯ್ಯ |
| ಒಬ್ಬ ಪೊಲೀಸ್ ಅಧಿಕಾರಿ | ಶ್ರೀನಿವಾಸರಾಯ |
| ಫ್ಲಿಪೋತ್ | ಮಾದ |
| ಮರಿಯಾನ | ಲಲಿತ |
| ಲಾರೆಂಟ್ | ಶಿವ |
| — | ಜಟಕಾದವನು |
| — | ಇಬ್ಬರು ಕಾನ್ಸ್‌ಟೇಬಲ್‌ಗಳು |



ಮೂಲ ಕೃತಿಗೆ ನಾಟಕದ ಕೇಂದ್ರ ಪಾತ್ರವಾದ ತಾರ್ತುಫನ ಹೆಸರನ್ನೇ ಇಡಲಾಗಿದೆ. ಮೂರ್ತಿರಾಯರು ತಮ್ಮ ರೂಪಾಂತರಿತ ಕೃತಿಗೆ ಸುಬ್ಬಾಶಾಸ್ತ್ರಿಯ ಹೆಸರನ್ನು ಇಡದೆ "ಆಷಾಢಭೂತಿ" ಎಂಬ ಸಾಂಕೇತಿಕವಾದ ಹೆಸರನ್ನು ಇಟ್ಟಿದ್ದಾರೆ. ಪಾತ್ರಗಳಲ್ಲಿ ಒಂದು ಮಹತ್ವದ ಬದಲಾವಣೆಯೆಂದರೆ, ಮೂಲದಲ್ಲಿ ದೊರೀನ ಮರಿಯಾನಳ ಸೇವಕಿ. ಆದರೆ "ಆಷಾಢಭೂತಿ"ಯಲ್ಲಿ ಸರಸ್ವತಿ ಲಲಿತಳ ಸೋದರಿಯಾಗಿದ್ದಾಳೆ. ಅರ್ಥಾತ್

ಶಂಕರಪ್ಪನ ಮೊದಲ ಹೆಂಡತಿಯ ಮಗಳು. ಮೂಲ ಪಾತ್ರ ತನ್ನ ಸ್ಥಾನವನ್ನು ಮೀರಿ ಮಾತನಾಡುತ್ತದೆ. ಒಂದು ಗಡುಸಾದ, ಒರಟು, ಹದ್ದು ಮೀರಿ ಮಾತನಾಡುವ ಪಾತ್ರ ನಮ್ಮ ಕಣ್ಣು ಮುಂದೆ ಬರುತ್ತದೆ. ಆದರೆ ಸರಸ್ವತಿಯ ಪಾತ್ರ ಮೂಲಕ್ಕಿಂತ ಸಂಪೂರ್ಣ ಭಿನ್ನವಾಗಿ ಕಂಗೊಳಿಸುತ್ತದೆ. ಔಚಿತ್ಯ ಮೀರಿ ವರ್ತಿಸದೆ, ಸಹನೆ ಸೌಮ್ಯತೆಗಳಿಂದ ಕೂಡಿ ಒಂದು ಮಿತಿಯಲ್ಲಿ ಮಾತನಾಡುವ ಒಬ್ಬ ಮಾದರಿ ಭಾರತೀಯ ಮಹಿಳೆ. ತನಗೆ ಅಪಾರವಾದ ಸ್ವಾತಂತ್ರ್ಯವಿದ್ದರೂ ಅದನ್ನು ಮಿತಿಯಲ್ಲಿ ಬಳಸುವ ಸಂಯಮಿ ಹುಡುಗಿ ಸರಸ್ವತಿ. ಮೂರ್ತಿರಾಯರು ಭಾರತೀಯ ಸ್ತ್ರೀಯರನ್ನು ನೋಡುವ ಉನ್ನತ ದೃಷ್ಟಿಕೋನ ಇಲ್ಲಿ ಅತ್ಯಂತ ವಿಶಿಷ್ಟವಾಗಿಯೂ ಸ್ಪಷ್ಟವಾಗಿಯೂ ಅಭಿವ್ಯಕ್ತಿ ಪಡೆದಿದೆ. ಮೂಲವನ್ನು ಯಾಂತ್ರಿಕವಾಗಿ ಅನುಕರಿಸದೆ ಒಂದು ಉದಾತ್ತವಾದ ಚೌಕಟ್ಟನ್ನು ತೊಡಿಸಿದ ಈ ಪಾತ್ರ ನಮ್ಮ ಗೌರವವನ್ನು ಪಡೆಯುವಲ್ಲಿ ಯಶಸ್ವಿಯಾಗುವಂತೆ ಮಾಡಿದ್ದಾರೆ ಮೂರ್ತಿರಾಯರು.

ಮೂರ್ತಿರಾಯರು ಮಾಡಿಕೊಂಡಿರುವ ಮಹತ್ವದ ಮಾರ್ಪಾಟುಗಳು ಗಣನೀಯವಾಗಿವೆ. ಇಲ್ಲಿ ರೂಪಾಂತರ ಯಥಾವತ್ ನಕಲಾಗಿರದೆ ಹೊಸತನದ ಸ್ವಾತಂತ್ರ್ಯವನ್ನು ಪಡೆದಿದೆ. ಆದರೂ ಒಂದು ಮಿತಿಯಲ್ಲಿ ಈ ಮಾರ್ಪಾಟು ನಡೆದಿದೆ. ನಮಗೆ ಎದ್ದು ಕಾಣುವ ಅಂಶವೆಂದರೆ ನಾಟಕ ಕ್ರಿಯೆಗೆ ಅಗತ್ಯವಾದ ಸೂಚನೆ ಹಾಗೂ ಮಾಹಿತಿಗಳು. ನಾಟಕದ ಆರಂಭದಲ್ಲಿ ನಾಟಕ ನಡೆಯುವ ಪರಿಸರ ನಿರ್ಮಿತಿಗೆ ಬೇಕಾಗುವ ಮಾರ್ಗದರ್ಶನವಿದೆ. ಶಂಕರಪ್ಪನ ಮನೆಯ ವಿವರ( ದಿವಾನಖಾನೆ)ನಾಟಕದ ಆವರಣ, ಪಾತ್ರಗಳ ವಯಸ್ಸು, ವೇಷಭೂಷಣ ಪ್ರವೇಶ-ಇತ್ಯಾದಿಗಳ ಚಿತ್ರವತ್ತಾದ ವಿವರಣೆಯಿದೆ. ನಾಟಕ ಪ್ರದರ್ಶನದ ಪರಿಣಾಮಕಾರಿ ನಿರ್ವಹಣೆಗೆ ಇದು ಅತ್ಯಂತ ಉಪಯುಕ್ತ. ರಂಗಸಜ್ಜಿಕೆ, ಪಾತ್ರ ಪರಿಚಯ ಪಾತ್ರಗಳ ಪರಸ್ಪರ ಸಂಬಂಧ-ಇತ್ಯಾದಿ ವಿವರಗಳು ಮೂರ್ತಿರಾಯರ ಸ್ವತಂತ್ರ ಕಲ್ಪನೆಯ ಪ್ರತೀಕಗಳು. ಈ ವಿವರ ಹೀಗಿದೆ:

**ಆಷಾಢಭೂತಿ :**

## ದೃಶ್ಯ 1

ಶಂಕರಪ್ಪನವರ ಮನೆ ನೋಡಿದರೆ ಮನೆಯವರು ಸ್ವಲ್ಪ ಅನುಕೂಲಸ್ಥರೆಂದು ಹೇಳುವಂತಿದೆ.  ಮನೆಯ ಹಜಾರದಲ್ಲಿ ಗೋಡೆಯ ಹತ್ತಿರ ಒಂದು ಮೇಜು. ಅದರ ಬಳಿಯಲ್ಲಿ ಒಂದು ಕುರ್ಚಿಯ ಮೇಲೆ ಕೃಷ್ಣಮೂರ್ತಿ.  ಅವನಿಗೆ ಸುಮಾರು ಇಪ್ಪತ್ತೆರಡು ವರ್ಷ. ಅವನ ಪಕ್ಕದಲ್ಲಿ ಮೇಜಿನ ಮೇಲೆ ರಾಮು ಕಾಲು ಆಡಿಸುತ್ತಾ ಕುಳಿತಿದ್ದಾನೆ. ಅವನು ಕೃಷ್ಣಮೂರ್ತಿಗಿಂತ ಐದಾರು ವರ್ಷ  ಚಿಕ್ಕವನು. ಇಬ್ಬರೂ ಕ್ರಾಪು ಜೈತಲೆ ತೆಗೆದುಕೊಂಡಿದ್ದಾರೆ. ಕೃಷ್ಣಮೂರ್ತಿ ಷರಟನ್ನೂ, ರಾಮುವು ಅರ್ಧ ತೋಳಿನ ಟೆನಿಸ್ ಷರಟನ್ನೂ ಹಾಕಿಕೊಂಡಿದ್ದಾರೆ. ಇಬ್ಬರಿಗೂ ಸ್ವಲ್ಪ ದೂರದಲ್ಲಿ ಇನ್ನೊಂದು ಕುರ್ಚಿಯ ಬೆನ್ನನ್ನು ಹಿಡಿದುಕೊಂಡು ಸರಸ್ವತಿಯೂ ಅವಳ ಹತ್ತಿರದಲ್ಲಿಯೇ ಲಲಿತೆಯೂ ನಿಂತಿದ್ದಾರೆ. ಸರಸ್ವತಿ ಹದಿನೆಂಟು ಹತ್ತೊಂಬತ್ತು ವರ್ಷದ ಯುವತಿ. ಧರ್ಮಾವರದ ಸೀರೆಯನ್ನು ಉಟ್ಟಿದ್ದಾಳೆ. ಲಲಿತ ಅಂದವಾಗಿರುವ ಕೃತಕ ರೇಷ್ಮೆಯ ಸೀರೆಯನ್ನುಟ್ಟಿದ್ದಾಳೆ. ಅವಳಿಗೆ ಹದಿಮೂರು ವರ್ಷ. ಅಕ್ಕತಂಗಿಯರಿಬ್ಬರೂ ಚೆಲುವೆಯರು.

ಪಾರ್ವತಮ್ಮ-ಅರವತ್ತು ವರ್ಷದ ಮುದುಕಿ-ಒಂದು ಮಡಿಪೆಟ್ಟಿಗೆಯನ್ನು ಕಂಕುಳಲ್ಲಿ ಇರಿಸಿಕೊಂಡು ಹೊರಡಲನುವಾಗಿದ್ದಾಳೆ. ಶಾರದೆ ಆಕೆಯನ್ನು ತಡೆಯುತ್ತಿದ್ದಾಳೆ. ಶಾರದೆಗೆ ಸುಮಾರು ಇಪ್ಪತ್ತೈದು ವರ್ಷ; ರೂಪವತಿ. ಮೂರು ಬೆರಳಂಚಿರುವ ನಾಜೂಕಾದ ರೇಷ್ಮೆಯ ಸೀರೆಯನ್ನುಟ್ಟಿದ್ದಾಳೆ.

ಬಾಗಿಲಿನ ಬಳಿ ನೆಲದ ಮೇಲೆ ಒಂದು ಗಂಟನ್ನು ಇಟ್ಟುಕೊಂಡು ಮಾದ ನಿಂತಿದ್ದಾನೆ. (ಪುಟ 7)

ಮೂಲದಲ್ಲಿ ಈ ನಿಖರವಾದ ಮಾಹಿತಿಯಿಲ್ಲ. ಇಲ್ಲಿ ಪಾತ್ರಧಾರಿಗಳಿಗೆ ಸೂಕ್ತಮಾರ್ಗ ದರ್ಶನವಿದೆ. ಪಾತ್ರಗಳ ವಯಸ್ಸು ಇಲ್ಲಿ ಉಲ್ಲೇಖಿಸಿರುವುದು ಅತ್ಯಂತ ಗಮನಾರ್ಹ. ಅದರಲ್ಲಿಯೂ ಶಾರದೆಯ ವಯಸ್ಸಿನ ಖಚಿತವಾದ ಉಲ್ಲೇಖ ನಾಟಕದ ಕೇಂದ್ರ ವಸ್ತುವಿಗೆ ಅತ್ಯಂತ ಪೋಷಕ, ಪೂರಕ. ಮೂಲದಲ್ಲಿ ನಾಟಕ ನೇರವಾಗಿ ಆರಂಭವಾಗುತ್ತದೆ. ಈ ಮಾರ್ಪಾಟಿನೊಂದಿಗೆ ಸರಸ್ವತಿಯ ಪಾತ್ರವನ್ನು ಪರಿವರ್ತಿಸುವಲ್ಲಿ ಅವರು ಕೊಡುವ ವಿವರ (ಕಾರಣ) ಅತ್ಯಂತ ಸಮಂಜಸವಾದುದು.

"ಇಲ್ಲಿ ಸರಸ್ವತಿಯಾಗಿರುವವಳು ಫ್ರೆಂಚ್ ನಾಟಕದಲ್ಲಿ ಮನೆಯ ಕೆಲಸಕ್ಕಿರುವ ಹೆಂಗಸು. ಊಳಿಗಕ್ಕಿರುವವಳು ಮನೆಯವರ ಗುಟ್ಟು ವಿಷಯಗಳನ್ನೆಲ್ಲಾ ಸ್ವಾತಂತ್ರ್ಯ ವಹಿಸಿ ಮಾತನಾಡುವುದು ನಮ್ಮ ಸಮಾಜದಲ್ಲಿ ಅಸಂಭವವಾದ್ದರಿಂದ ಇಲ್ಲಿ ಆಕೆ ಶಂಕರಪ್ಪನ ಮಗಳಾಗಿರುವಳು. ಈ ಬದಲಾವಣೆಗೆ ತಕ್ಕಂತೆ ಪಾತ್ರಗಳ ಸ್ವಭಾವದಲ್ಲಿಯೂ ಸ್ವಲ್ಪ ವ್ಯತ್ಯಾಸ ಕಂಡುಬರಬಹುದು" (ಪ್ರಸ್ತಾವನೆ ಪುಟ 4)

ಇದೇ ರೀತಿಯಲ್ಲಿ ಶಂಕರಪ್ಪನವರ ಪ್ರಥಮ ಪ್ರವೇಶವೂ ಅತ್ಯಂತ ನಾಟಕೀಯವೂ, ಸ್ವಾಭಾವಿಕವಾಗಿಯೂ(ಸಹಜವಾಗಿಯೂ)ಚಿತ್ರಿತವಾಗಿದೆ. ಶಂಕರಪ್ಪನವರ ಪಾತ್ರ ದೃಶ್ಯ ಮಾಧ್ಯಮದಲ್ಲಿ ಹೇಗೋ ಹಾಗೆಯೇ ವಾಚಕರಿಗೂ ಒಂದು ಸ್ಪಷ್ಟ ಶಬ್ದ ಚಿತ್ರಣವಿದೆ.

## ದೃಶ್ಯ 2

(ಕೈಯಲ್ಲಿ ವೃತ್ತ ಪತ್ರಿಕೆಯೊಂದನ್ನು ಹಿಡಿದುಕೊಂಡು ಶಂಕರಪ್ಪ ಪ್ರವೇಶಿಸುತ್ತಾನೆ. ಅವನಿಗೆ ನಲವತ್ತೈದು - ನಲವತ್ತಾರು ವರ್ಷ. ಸ್ವಲ್ಪ ಗಾತ್ರವಾದ ಆಳು, ಶ್ಯಾಮಲ ವರ್ಣ, ಮೀಸೆ ಬಿಟ್ಟಿದ್ದಾನೆ, ಟ್ವೀಡ್ ಬಟ್ಟೆಯ ಅಂಗಿ ಹಾಕಿಕೊಂಡು ಮೇಲುಕೋಟೆಯ ಪಂಚೆಯನ್ನುಟ್ಟಿದ್ದಾನೆ. ತಲೆಗೆ ಸರಿಗೆಯ ರುಮಾಲು.

ಅವನ ಹಿಂದೆಯೇ ಹಾಡಿಯ ಆಳು ಒಂದು ಟ್ರಂಕು, ಹಾಸಿಗೆ, ಬುಟ್ಟಿ ಇವುಗಳನ್ನು ತಂದಿರಿಸಿ ತನ್ನ ಬಾಡಿಗೆ ತೆಗೆದುಕೊಂಡು ಹೊರಟು ಹೋಗುತ್ತಾನೆ. (ಪುಟ 13)

ಇಲ್ಲಿಯೂ ಈ ಹಿಂದಿನಂತೆ ಮೂಲದಲ್ಲಿ ಇಂತಹ ವಿವರಣೆಯಿಲ್ಲ. ಆರ್ಗಾನ್ ಶಂಕರಪ್ಪನ ಮೂಲ ಪಾತ್ರ. ನೇರವಾಗಿ ಪ್ರವೇಶಿಸುತ್ತಾನೆ. ಈ ಸಂದರ್ಭದಲ್ಲಿ ಮೂರ್ತಿರಾಯರು ಚಿತ್ರಿಸಿರುವ ನಾಟಕೀಯ ಸನ್ನಿವೇಶ ಮೂಲಕ್ಕಿಂತ ಭಿನ್ನವೂ ಸ್ವತಂತ್ರವೂ ಆಗಿದೆ.

ಮೂಲದ ವಲೀರ್ ಇಲ್ಲಿ ಅನಂತನಾಗುತ್ತಾನೆ. ಇತರ ಪಾತ್ರಗಳ ಪ್ರವೇಶ ದಂತೆಯೇ ಇಲ್ಲಿಯೂ ಸಹ ಒಂದು ಪೀಠಿಕೆಯನ್ನು ಬರೆದಿದ್ದಾರೆ. ಇದೂ ಸಹ

ಮೂಲದಲ್ಲಿ ಕಂಡು ಬರುವುದಿಲ್ಲ. ಮೂರ್ತಿರಾಯರ ಸ್ವಂತ ಕಲ್ಪನೆ. ಸ್ವತಂತ್ರ ಸೃಷ್ಟಿ. ಆ ಸನ್ನಿವೇಶ ಹೀಗಿದೆ :

## ದೃಶ್ಯ 3

(ಅನಂತ ಪ್ರವೇಶಿಸುತ್ತಾನೆ. ಅವನಿಗೆ ಸುಮಾರು ಇಪ್ಪತ್ತು ವರ್ಷ. ಟೆನಿಸ್ ಷರಟನ್ನೂ ತೆರೆದ ಕಾಲರಿನ ಅಂಗಿಯನ್ನೂ ಹಾಕಿಕೊಂಡಿದ್ದಾನೆ. ತಲೆಗೆ ಟೋಪಿಯಿಲ್ಲ, ಅಂದವಾಗಿ ಕ್ರಾಪು ಬಾಚಿಕೊಂಡಿದ್ದಾನೆ......ಪುಟ 29).

ಮೂಲದಲ್ಲಿ ತಾರ್ತುಫನ ರಂಗಪ್ರವೇಶ ಯಾವುದೇ ಹಿನ್ನೆಲೆಯೂ ಇಲ್ಲದೇ ನಡೆಯುತ್ತದೆ. ಆದರೆ "ಆಷಾಢಭೂತಿ" ಯಲ್ಲಿ ತಾರ್ತುಫನ ರೂಪಾಂತರ ಪಾತ್ರ ಸುಬ್ಬಾಶಾಸ್ತ್ರಿಯ ಅನಾವರಣ ಸಾಕಷ್ಟು ಹಿನ್ನೆಲೆ-ಪರಿಚಯದೊಂದಿಗೆ ಆಗುತ್ತದೆ. ಮೂಲದಲ್ಲಿ ತಾರ್ತುಫನ ಸಂಪೂರ್ಣ ಪರಿಚಯವಾಗುವುದು ನಾಟಕಾಂತ್ಯದಲ್ಲಿ. ಅದಕ್ಕೆ ಪೂರಕವಾಗಿ ಯಾವುದೇ ಪೋಷಕದ್ರವ್ಯವೂ ಸಿಗುವುದಿಲ್ಲ. ಸುಬ್ಬಾಶಾಸ್ತ್ರಿಯ ಬಾಹ್ಯ ಲಾಂಛನಗಳ ಒಂದು ಹಿತವೂ ಮಿತವೂ ಆದ ಪ್ರಮಾಣದ ವಿವರಣೆಯಿದೆ. ಇದರಿಂದಾಗಿ ಸುಬ್ಬಾಶಾಸ್ತ್ರಿಯ ಪಾತ್ರ ನಮ್ಮ ಮನಸ್ಸಿನ ಮೇಲೆ ಸ್ಫುಟವಾಗಿ ಮೂಡುತ್ತದೆ. ಆದರೆ ತಾರ್ತುಫನ ಪಾತ್ರದ ಯಾವುದೇ ರೂಪರೇಷೆಯೂ ನಮಗೆ ಸಿಗುವುದಿಲ್ಲ. ಇದಕ್ಕೆ ಕಾರಣವೂ ಇದೆ. ಮೂರ್ತಿರಾಯರು ಸುಬ್ಬಾಶಾಸ್ತ್ರಿಯ ಪಾತ್ರವನ್ನು ಭಾರತೀಯ ಪರಂಪರಾಗತ ಮಾದರಿಯಲ್ಲಿ ಚಿತ್ರಿಸಿದ್ದಾರೆ. ಬಹುಶಃ ಫ್ರೆಂಚ್ ಶೈಲಿಯಲ್ಲಿ ಧಾರ್ಮಿಕ ಪ್ರವೃತ್ತಿಯನ್ನು ಪ್ರತಿಬಿಂಬಿಸುವ ಯಾವುದೇ ಬಾಹ್ಯ ಲಕ್ಷಣವೂ ಇಲ್ಲವೋ ಏನೋ! ಮೂರ್ತಿರಾಯರು ಸುಬ್ಬಾಶಾಸ್ತ್ರಿಯ ಪ್ರವೇಶದೊಂದಿಗೆ ನೀಡುವ ಒಂದು ಶಬ್ದಚಿತ್ರಣ ಅತ್ಯಂತ ಚಿತ್ರವತ್ತಾಗಿದೆ :

## ದೃಶ್ಯ 4

(......ಸುಬ್ಬಾಶಾಸ್ತ್ರಿ ಪ್ರವೇಶಿಸುತ್ತಾನೆ. ಅವನಿಗೆ ಸುಮಾರು ನಲವತ್ತು ವರ್ಷ. ಸ್ವಲ್ಪ ಶ್ಯಾಮಲವರ್ಣದವನಾದರೂ ನೋಡುವುದಕ್ಕೆ ಲಕ್ಷಣವಾಗಿಯೇ ಇದ್ದಾನೆ. ವೈದಿಕರಂತೆ ಶುಭ್ರವಾದ ಮೇಲುಕೋಟೆ ಪಂಚೆಯನ್ನುಟ್ಟು, ಶಾಲು ಹೊದ್ದಿದ್ದಾನೆ. ಕಿವಿಯಲ್ಲಿ ಹತ್ತ ಕಡಕು. ಕತ್ತಿನಲ್ಲಿ ಚಿನ್ನದ ತಂತಿಯಿಂದ ಬಿಗಿದು ಮಧ್ಯದ ಮಣಿಗೆ ಚಿನ್ನದ ಕಟ್ಟು ಹಾಕಿರುವ ರುದ್ರಾಕ್ಷಿ ಸರ. ಹಣೆಗೆ ಮೂರೆಳೆ ವಿಭೂತಿ, ಹುಬ್ಬುಗಳ ನಡುವೆ ಕುಂಕುಮ) (ಪುಟ 37)

ರೂಪಾಂತರದ ಒಂದು ಮಹತ್ವದ ಬದಲಾವಣೆ ಎಂದರೆ, ಮೂಲದ ಸಣ್ಣ ಸಣ್ಣ ದೃಶ್ಯಗಳನ್ನು ಒಟ್ಟುಗೂಡಿಸಿ ಒಂದು ದೃಶ್ಯವನ್ನಾಗಿ ಮಾಡಿರುವುದು. ಮೂಲದಲ್ಲಿ ಐದು ಅಂಕಗಳೂ, 31ದೃಶ್ಯಗಳೂ ಇವೆ. ರೂಪಾಂತರದಲ್ಲಿ ಯಾವುದೇ ಅಂಕವೂ ಇಲ್ಲದೆ ಕೇವಲ ಐದು ದೃಶ್ಯಗಳು ಮಾತ್ರವೇ ಇವೆ. ಮೂಲದಲ್ಲಿ ನಾಲ್ಕನೆಯ ಅಂಕದಲ್ಲಿ ಎಂಟು ದೃಶ್ಯಗಳಿವೆ. ಈ ಕ್ರೋಢೀಕರಣದಿಂದಾಗಿ ನಾಟಕದ ಓಟ ಒಂದು ನಿರಂತರತೆಗೆ ಒಳಗಾಗಿದೆ. ಕೇವಲ ನಾಲ್ಕು ಮಾತಿಗೂ ಒಂದು ದೃಶ್ಯವಿದೆ ಮೂಲದಲ್ಲಿ. ಒಟ್ಟು ಹನ್ನೆರಡು ಮಾತುಗಳು. (ಅಂಕ 1- ದೃಶ್ಯ 3 ಪುಟ 11)

ಮೂರ್ತಿರಾಯರ ರಂಗಪ್ರಜ್ಞೆ ಇಲ್ಲಿ ಗಮನಾರ್ಹ. ಅಭಿನಯಕ್ಕಾಗಲೀ, ಓದಿ ನೆನಪಿನಲ್ಲಿಟ್ಟುಕೊಳ್ಳುವುದಕ್ಕಾಗಲಿ ರೂಪಾಂತರದಲ್ಲಿ ಒಂದು ವಿಶಿಷ್ಟವಾದ ಬದಲಾವಣೆಯಿದೆ. ಮೂಲದ ಪುಟಗಟ್ಟಲೆ ಉದ್ದವಿರುವ ಸಂವಾದವನ್ನು ಒಂದೆರಡು ವಾಕ್ಯಗಳಲ್ಲಿ ಹಿಡಿದಿಡಲಾಗಿದೆ. ಇದರಿಂದಾಗಿ ಮೂಲದ ಅರ್ಥ, ಭಾವ ಕುಂದಿಲ್ಲ. ಈ ಸಂಕ್ಷೇಪೀಕರಣ ಒಂದು ಅನಿವಾರ್ಯ ಅಗತ್ಯವೆನಿಸುತ್ತದೆ. ನಿದರ್ಶನಾರ್ಥವಾಗಿ ಮೂಲದ ನಾಲ್ಕು ಮತ್ತು ಐದನೆಯ ದೃಶ್ಯಗಳನ್ನು ರೂಪಾಂತರದೊಂದಿಗೆ ಹೋಲಿಸಬಹುದು.

## ದೃಶ್ಯ ೫

**(ದಾಮಿ, ಎಲ್ಮೀರ, ತಾರ್ತುಫ್)**

ದಾಮಿ : (ತಾನು ಅವಿತುಕೊಂಡಿದ್ದ ಸಣ್ಣ ಕೋಣೆಯಿಂದ ಹೊರಬಂದು) ಇಲ್ಲ ಚಿಕ್ಕಮ್ಮ, ಇದು ಎಲ್ಲಾರಿಗೂ ತಿಳಿಯಲೇ ಬೇಕು. ನಾನು ಇಲ್ಲಿ ಒಳಗಿದ್ದು ನಡೆದದ್ದೆಲ್ಲಾ ಕೇಳಿದೆ. ನಿನಗೆ ಅನ್ಯಾಯ ಮಾಡುತಾ ಇರೋ ಈ ದ್ರೋಹಿಯ ಹೆಮ್ಮೆ ಇಳಿಸಿ ಬಯಲಿಗೆಳೆಯಲಿ ಅಂತ ನಾನು ಇಲ್ಲಿಗೆ ಬರೋ ಹಾಗೆ ದೇವರೇ ಕೃಪೆಯಿಟ್ಟು ಪ್ರೇರೇಪಿಸಿದ್ದಾನೆ. ಇವನ ಬೂಟಾಟಿಕೆಗೂ ಠೇಂಕಾರಕ್ಕೂ ತಕ್ಕ ಪ್ರತೀಕಾರ ಮಾಡೋದಕ್ಕೆ ದೇವರೇ ದಾರಿ ತೋರಿಸಿದ್ದಾನೆ. ಪ್ರೇಮದ ಮಾತಾಡುತಾನಲ್ಲ ಈ ಮನೆಹಾಳ ! ಇವನ ನಿಜ ಸ್ವಭಾವ ಎಂಥಾದ್ದು ಅಂತ ಅಣ್ಣನಿಗೆ ಸ್ಪಷ್ಟವಾಗಿ ತೋರಿಸಿ ಅವರ ಕಣ್ಣು ತೆರೆಯಿಸಬಹುದು.

ಎಲ್ಮೀರ : ಹಾಗಲ್ಲ, ದಾಮಿ. ಮುಂದೆ ಸಭ್ಯನಾಗಿರುತೀನಿ ಅಂತ ಅವನು ಭಾಷೆ ಕೊಟ್ಟು, ಕ್ಷಮೆಗೆ ಯೋಗ್ಯನಾಗುವ ಹಾಗಿರೋದಾದರೆ ಸಾಕು. ಕ್ಷಮಿಸುತೀನಿ ಅಂತ ನಾನು ಆಗಲೇ ಹೇಳಿದ್ದಾಗಿದೆ. ಮಾತು ಕೊಟ್ಟಿದ್ದೀನಿ. ಹೆಂಗಸರು ಇಂಥ ಹುಚ್ಚುತನ ನೋಡಿ ನಗಬೇಕು, ಅಷ್ಟೆ. ಗಂಡಂದಿರಿಗೆ ಹೇಳಿ ಗೊಂದಲ ಎಬ್ಬಿಸಬಾರದು.

ದಾಮಿ : ನೀನು ಹೀಗೆ ನಡಕೊಳ್ಳೋದಕ್ಕೆ ಕಾರಣವಿದೆ. ಈಗ ಇವನ್ನ ಉಳಿಸೋಕೆ ಹೋದರೆ ಅದು ಲೇವಡಿಗಿಟ್ಟುಕೊಳ್ಳುತ್ತೆ. ಇವನು ಧರ್ಮಾಂಧ ! ಇವನ ಹೆಮ್ಮೆ ಠೇಂಕಾರ ನೋಡಿ ಸಹಜವಾಗಿ ನನಗೆ ಎಷ್ಟೋ ಸಲ ರೇಗಿದೆ. ಇವನು ಕೋಟೆ ಅನ್ನಿಸಿಕೊಳ್ಳೋನ ಹಾಗೆ ಅಧಿಕಾರ ಚಲಾಯಿಸುತಾನೆ ನನ್ನ ಮೇಲೆ. ಇವನಿಂದ ನಮ್ಮ ಮನೇಲಿ ಆಗಿರೋ ಕ್ಲೋಟಲೆ ಅಷ್ಟಿಷ್ಟಲ್ಲ. ನಮ್ಮಣ್ಣನ ಮೇಲೆ ಈ ಕೇಡಿಗ ಇಷ್ಟು ದಿನ ಅಧಿಪತ್ಯ ನಡೆಸಿದ್ದೇ ಸಾಕು. ನನ್ನ ಪ್ರೇಮಕ್ಕೂ, ವಲೇರನ ಪ್ರೇಮಕ್ಕೂ ಅಡ್ಡಿ ಹಾಕಿರೋನೂ ಇವನೇ.

ಇವನು ಎಂಥ ದ್ರೋಹಿ ಅನ್ನೋದನ್ನ ಅಣ್ಣ ಕಣ್ಣುಬಿಟ್ಟು ನೋಡಲಿ, ಅವಶ್ಯವಾಗಿ ನೋಡಲೆಬೇಕು. ಅದಕ್ಕೆ ದೇವರು ಇಂಥ ಒಳ್ಳೆಯ ಸಮಯ ಒದಗಿಸಿಕೊಟ್ಟಿದ್ದಕ್ಕೆ ನಾನು ಕೃತಜ್ಞನಾಗಿದೀನಿ. ಇಂಥ ಅನುಕೂಲ ಸಿಕ್ಕಿರುವಾಗ ಅದನ್ನು ಬಿಟ್ಟುಕೊಡಬಾರದು. ನನ್ನ ಕೈಲಿರುವ ಅವಕಾಶವನ್ನು ಉಪಯೋಗಿಸದಿದ್ದರೆ ದೇವರು ಅದನ್ನು ಕಿತ್ತು ಕೊಳ್ಳೋದೇ ನ್ಯಾಯವಾಗುತ್ತೆ.

ಎಲ್ಮೀರ : ದಾಮಿ......ಇಲ್ಲ, ನನ್ನ ಪಾಡಿಗೆ ನನ್ನಬಿಡು, ನನ್ನ ಬುದ್ಧಿಗೆ ತೋರಿದ ಹಾಗೆ ನಾನು ನಡೆಯಬೇಕು. ನನ್ನ ಹೃದಯದಲ್ಲಿ ಈಗ ಆನಂದ ತುಂಬಿದೆ. ನೀಡು ತೀರಿಸಿಕೊಳ್ಳುವ ಸಂತೋಷ ಬೇಡವೆ ನನಗೆ? ಅದನ್ನು ಬಿಟ್ಟುಕೊಡು ಅಂತ ನೀನು

ಏನೇ ಹೇಳಿದರೂ ಅದು ಫಲಿಸೋದಿಲ್ಲ. ಈ ವಿಷಯ ನಾನು ಹೊರ ಹಾಕಿಯೇ ಹಾಕುತೀನಿ, ಇಂಥ ಸಮಯವೇ ನನಗೆ ಬೇಕಾಗಿದ್ದದ್ದು. (ಪುಟ 48 - 49)

ಮೂಲದ ಈ ದೃಶ್ಯವನ್ನು ಮೂರ್ತಿರಾಯರು ಸ್ವತಂತ್ರ ದೃಶ್ಯವನ್ನಾಗಿ ಮಾಡಿಲ್ಲ. ಈ climax ದೃಶ್ಯವನ್ನು ಚಿಕ್ಕ ಚಿಕ್ಕ ಮಾತುಗಳಲ್ಲಿ ಪರಿಣಾಮಕಾರಿಯನ್ನಾಗಿಸಿ ಹೀಗೆ ಸಂಕ್ಷೇಪಿಸಿದ್ದಾರೆ. (ಕೋಪದಿಂದ ಹಲ್ಲು ಕಡಿಯುತ್ತಾ ರಾಮು ಪ್ರವೇಶಿಸುತ್ತಾನೆ.)

ರಾಮು : (ಶಾಸ್ತ್ರಿಯನ್ನು ಹಿಡಿದೆಳೆದು) ನಾನೂ ಇಲ್ಲೇ ಇದ್ದೆ ಚಿಕ್ಕಮ್ಮ. ಇವನ ಮಾತೆಲ್ಲಾ ಕೇಳಿದೆ (ಶಾಸ್ತ್ರಿಯನ್ನು ಬಲವಾಗಿ ತಳ್ಳಿ, ಮತ್ತೆ ರಟ್ಟೆಯನ್ನು ಹಿಡಿದೆಳೆದು ಕೊಂಡು) ಹೊರಡು ಸೂಳೇಮಗನೆ! ಅಣ್ಣ ಬರುತ್ತಲೇ ಹೇಳಬೇಕು, ಎಂಥ ವಿಷ ಸರ್ಪವನ್ನು ಸಾಕುತ್ತಾ ಇದ್ದ ಅಂತ! ಅಬ್ಬ ಎಷ್ಟು ಧೈರ್ಯವೋ ನಿನಗೆ.

ಶಾರದೆ : ರಾಮು, ಇನ್ನು ಇದನ್ನು ಗದ್ದಲ ಹತ್ತಿಸಬೇಡ. ಊರಿಗೆಲ್ಲ ಹರಡೀತು. ಇವನ್ನ ಹೊರಡಿಸಿದರೆ ಸಾಕು. ಹೆಚ್ಚು ಗಲಾಟೆಯಾದರೆ ಊರಿನವರೆಲ್ಲರ ಬಾಯಲ್ಲೂ ನಮ್ಮ ಮಾತೇ ಆಗುತ್ತೆ.

ರಾಮು: ಈ ಗುಟ್ಟೆಲ್ಲಾ ನನಗೆ ಸರಿಬೀಳೋದಿಲ್ಲ ಚಿಕ್ಕಮ್ಮ. ಇವನು ದೊಡ್ಡ ಯೋಗಿ! ಋಷಿ! ತನಗೊಬ್ಬನಿಗೇ ಸ್ವರ್ಗ ಅಂತ ಕೊಚ್ಚಿಕೊಳ್ಳುತ್ತಾ ಇದ್ದವನು! ಈ ಶನಿ ಕಾಲಿಟ್ಟ ಘಳಿಗೆಯಿಂದ ನಮ್ಮ ಮನೆಯಲ್ಲಿ ಒಂದೂ ನೆಟ್ಟಗಿಲ್ಲ. ಇವನ ಬಣ್ಣ ಈಗ ಹೊರಕ್ಕೆ ಹಾಕದೆ ಇದ್ದರೆ ಇನ್ನು ಇಂಥ ಸಮಯ ಸಿಕ್ಕುತ್ತೆಯಾ?

ಶಾರದೆ : ಹಾಗಲ್ಲಪ್ಪ ರಾಮು....

ರಾಮು : ಇಲ್ಲ ಚಿಕ್ಕಮ್ಮ , ನನ್ನ ತಡೆಯುವುದಕ್ಕೆ ಬರಬೇಡ, ಕೈಗೆ ಸಿಕ್ಕಿದಾನೆ. ಈಗ ಹಾಕಿ ಅರೆಯದೆ ಇದ್ದರೆ ತಿರುಗಿ ಸಿಕ್ಕುತಾನೆಯೇ ಇವನು?

ಈ ಮೇಲಿನ ತೌಲನಿಕತೆ ಮೂಲ ಹಾಗೂ ಮೂರ್ತಿರಾಯರು ಮಾಡಿಕೊಂಡ ವ್ಯತ್ಯಾಸಗಳನ್ನು ಸ್ಪಷ್ಟೀಕರಿಸುತ್ತದೆ. ಹಾಗೆಂದು ಈ ಸಿದ್ಧಾಂತದ ಬೆಳಕಿನಲ್ಲಿ ಇಡೀ ರೂಪಾಂತರವನ್ನು ನೋಡಲಾಗುವುದಿಲ್ಲ. ಒಂದೇ ಒಂದು ವಾಕ್ಯವನ್ನು ಕೊಂಚ ವಿಸ್ತರಿಸಿರುವುದೂ ಇದೆ. ಭಾವ ತೀವ್ರತೆಗೆ ವಾಕ್ಯ ವಿಸ್ತಾರ ಅಗತ್ಯವೆಂದು ಅವರಿಗೆ ಮನದಟ್ಟಾದಾಗ ವಾಕ್ಯ ವಿಸ್ತಾರ ಮಾಡಿರುವುದೂ ಇದೆ. ಈ ಕೆಳಗಿನ ತೌಲನಿಕತೆಯನ್ನು ಗಮನಿಸಬಹುದು.

ಎಲ್ಮೀರ : ನಿನಗೆ ಇಹಲೋಕದ ವಿಷಯಗಳಲ್ಲಿ ಪ್ರೀತಿಯಿಲ್ಲ. ಅದೇ ಕಾರಣ.

ತಾರ್ತೂಫ್ : ನನ್ನ ಎದೆಯಲ್ಲಿರೋದೇನೂ ಬೆಣಚುಗಲ್ಲಿನ ಹೃದಯವಲ್ಲ.

ಎಲ್ಮೀರ : ನಿಮ್ಮ ಹಂಬಲಿಕೆ ಏನಿದ್ದರೂ ಸ್ವರ್ಗಕ್ಕೆ ಅಗಲಿ. ಮರ್ತ್ಯಲೋಕದಲ್ಲಿ ಯಾವುದೂ ನಿಮಗೆ ತೃಪ್ತಿಕೊಡಲಾರದು ಅಂತ ನನ್ನ ನಂಬಿಕೆ.

(ಪುಟ 45)

**ಆಷಾಢಭೂತಿ :**

ಶಾರದೆ : ನೀವು ಅದಕ್ಕೆ ಒಪ್ಪಲಾರಿರಿ ಅಂತಲೇ ಅಂದುಕೊಂಡೆ. ಪ್ರಪಂಚದ ಹಂಬಲವನ್ನೇ ಬಿಟ್ಟಿರೋರಿಗೆ ಸಂಸಾರದಲ್ಲಿ ಸಿಕ್ಕಿ ತೊಳಲುವುದಕ್ಕೆ ಮನಸ್ಸು ಬರುತ್ತೆಯೇ?

ಸುಬ್ಬಾಶಾಸ್ತ್ರಿ : ಎಷ್ಟಾದರೂ ನಾನೂ ಮನಷ್ಯನೇ ಅಲ್ಲವೆ ? ನಾನು ಪ್ರಪಂಚವನ್ನು ಬಿಡುತ್ತೇನೆ ಅಂದರೂ ಪ್ರಪಂಚ ನನ್ನ ಬಿಡಬೇಕಲ್ಲ. ನಾವು ಎಷ್ಟು ಬೇಡ ಅಂದರೂ ಐಹಿಕ ಸುಖ ನಮ್ಮನ್ನು ಸೆಳೆಯುತ್ತೆ. ಆ ಬಂಧನ ಬಿಡಿಸಿಕೊಳ್ಳುವುದು ಎಲ್ಲರಿಗೂ ಸಾಧ್ಯವಲ್ಲ.

ಶಾರದೆ : ಆದರೆ ನೀವು ಎಲ್ಲರ ಹಾಗಲ್ಲ. ಈ ಪ್ರಪಂಚದ ಸುಖವೆಲ್ಲಾ ಮಾಯೆ ಅಂತ ತಿಳಿದು ಸದಾ ದೇವರ ಧ್ಯಾನದಲ್ಲೇ ಕಾಲಕ್ಷೇಪ ಮಾಡುತೀರಿ. (ಪುಟ 38)

ರೂಪಾಂತರದ ಮತ್ತೊಂದು ಪ್ರಮುಖ ಲಕ್ಷಣವೆಂದರೆ ಪ್ರಾದೇಶಿಕತೆಯ ಸೊಗಡು. ಈ ರೂಪಾಂತರದ ಮೂಲವನ್ನು ಮರೆತು, ಕೇವಲ ರೂಪಾಂತರವನ್ನು ಮಾತ್ರವೇ ಓದಿದಾಗ ಅದು ನಮಗೆ ಒಂದು ಹೊಸ ಕೃತಿಯನ್ನು ಓದಿದ ಅನುಭವವನ್ನೇ ಕೊಡಬೇಕು. ಈ ನಾಟಕ ರೂಪಾಂತರಕ್ಕೆ ಒಂದು ಹಿನ್ನೆಲೆಯಿದೆ ಎಂಬ ಅಂಶ ನಮಗೆ ಮೂಡದಂತೆ ರೂಪಾಂತರ ಓದಿಸಿಕೊಂಡು ಹೋಗಬೇಕು. ಮೂಲವನ್ನು ಮನಸ್ಸಿನಿಂದ ಅಳಿಸಿ ಹಾಕುವಷ್ಟರ ಮಟ್ಟಿಗೂ ಒಂದು ರೂಪಾಂತರ ಸ್ವತಂತ್ರ ಕೃತಿಯಾಗಿರಬೇಕು. ಈ ಎಲ್ಲಾ ಲಕ್ಷಣಗಳೂ ಪ್ರಾದೇಶಿಕತೆಯಲ್ಲಿ ಅಡಕವಾಗಿರುತ್ತವೆ. ಒಂದು ಪರಂಪರೆ, ಒಂದು ಸಂಪ್ರದಾಯ, ಭಾಷೆಯಲ್ಲಿ ಪ್ರಚಲಿತವಾಗಿರುವ ನುಡಿಗಟ್ಟುಗಳು, ನಾಟಕದ ಆವರಣಕ್ಕೆ ಬೇಕಾಗಿರುವ ಪರಿಭಾಷೆ ಈ ಮುಂತಾದ ಅಂಶ ಪರಿಕರಗಳು ಒಂದು ಪ್ರಾದೇಶಿಕತೆಯನ್ನು ಪ್ರತಿಬಿಂಬಿಸುತ್ತವೆ. ಮೂರ್ತಿರಾಯರು ಈ ರೂಪಾಂತರದಲ್ಲಿ ಈ ಎಲ್ಲಾ ಪೂರಕ ಸಾಮಗ್ರಿಗಳನ್ನೂ ಬಳಸಿಕೊಂಡಿದ್ದಾರೆ. ಆದ್ದರಿಂದಲೇ "ಆಷಾಢಭೂತಿ" ಒಂದು ರೂಪಾಂತರವೆನಿಸದೆ ಸ್ವತಂತ್ರ ಕೃತಿಯೆಂದೇ ನಮಗೆ ಭಾಸವಾಗುತ್ತದೆ. ಮೂರ್ತಿರಾಯರು ವೃತ್ತಿಯಿಂದ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದರೂ ಕನ್ನಡ ಭಾಷೆಯ ಮೇಲೆ ಅವರಿಗಿದ್ದ ಪ್ರಭುತ್ವವನ್ನು ಇಲ್ಲಿ ಕಾಣಬಹುದಾಗಿದೆ. ಈ ಕೆಲವು ಉದಾಹರಣೆಗಳನ್ನು ಗಮನಿಸಬಹುದು. ಆಡು ಭಾಷೆ ಹಾಗೂ ಸಂಪ್ರದಾಯದ ಪರಿಭಾಷೆಗಳ ಹದವಾದ ಪ್ರಯೋಗ ಇಲ್ಲಿದೆ :

ರಾಮುವೂ ಬೇಡ, ಗೀಮುವೂ ಬೇಡ, (7). ನಾನು ಯಾವ ಊರ ಹಾಳೆ ! (8). ಎಲ್ಲಾತಕ್ಕೂ ಬಾ ನನ್ನ ಹಲ್ಲು ಮುತ್ತೈದೆ ಅಂತ (8). ಕೆಟ್ಟು ಬೂದಿಹೊಯ್ಕೊಂಡು ಹಾಳಾಗಿ ಹೋಗ್ತಾನೆ ಅಂತ (8). ಮಾಯಾಂಗನೆ (8). ಮುದಿಗೂಬೆ (8). ಇಹಕ್ಕೆ ಸುಖ, ಪರಕ್ಕೆ ಗತಿ (9). ಮುಖದ ನೀರಿಳಿ (10). ಅಚೆ ಮನೆ ನಂಜಮ್ಮ (11). ಆರುಂಧತಿ .... (11). ಒಂದು ಪುರಾಣವಿಲ್ಲ, ಒಂದು ಪುಣ್ಯಕಥೆಯಿಲ್ಲ ..... (11). ಒಂದು ಪಂಚಪಾತ್ರೆ ಗಂಗಾಮೃತ (11). ಮಂಗನ ಹಾಗೆ ಅಣಕಿಸಿ ಹಲ್ಲು ಕಿರಿದರೆ (12). ಉರಿಯುವ ಬೆಂಕಿಗೆ ತುಪ್ಪ ಸುರಿದ ಹಾಗಾಯಿತು. (12). ವೇದವಾಕ್ಯ (12). ಪಾರುಪತ್ಯ (12). ಗೂಳಿಯ ಹಾಗೆ (13). ರಸಕವಳ ಮೂರು ಮನೆಗೆ ಕೇಳುವ ಹಾಗೆ (14). ಭೂಮಿಗೆ ಇಳಿದು ಹೋಗಿದಾನೆ (15). ವೇದಾಂತ (15). ವೈರಾಗ್ಯ, ಅಜ್ಞಾನಾಂಧಕಾರ, ಯಮಧರ್ಮ (15). ಹೊಟ್ಟೆಗೆ ಹಾಲು ಹುಯ್ಕೊಳ್ಳಲಿ (16), ಶಂಕರಾಚಾರ್ಯ (17). ಬೃಹಸ್ಪತಿ (17). ಪರಲೋಕಕ್ಕೆ ನಿಧಿ ಕಟ್ಟಿಟ್ಟುಕೊಂಡಿದಾನೆ ಅವನು (22). ಒಂದು ಸಂಧ್ಯಾವಂದನೆಯಿಲ್ಲ. ಒಂದು ಮಧ್ಯಾಹ್ನಿಕವಿಲ್ಲ, ದೇವರಿಲ್ಲ,

ಒಳಪಡಿಸಿದ್ದಾರೆ. ಇದರಿಂದ ನಮಗೆ ಮೂಲದ 'ದೊರೀನ' ದೂರವಾಗಿಯೇ ಉಳಿಯುತ್ತಾಳೆ. ಸರಸ್ವತಿ ಸಮಯೋಚಿತ ಪ್ರಜ್ಞೆ, ಹಾಗೂ ಔಚಿತ್ಯ ಪ್ರಜ್ಞೆಗಳೆರಡನ್ನೂ ಹೊಂದಿ ನಮಗೆ ಅತಿ ಹತ್ತಿರದವಳೂ ಆತ್ಮೀಯಳೂ ಆಗುತ್ತಾಳೆ. ಈ ಸಂದರ್ಭದ ಸಂವಾದ ಹೀಗಿದೆ.

ಮೂಲ : ದೊರೀನ – ನಿಮ್ಮಿಬ್ಬರಿಗೂ ಏನೋ ಭ್ರಮೆ ಹಿಡಿದಿದೆ. ಇದೇನು ಅವಿವೇಕದ ಮಾತು? ಎಲ್ಲಿಯವರೆಗೆ ನಡೆಯುತ್ತೆ ಈ ಜಗಳ, ನೋಡೋಣ ಅಂತ ನಾನೂ ಸುಮ್ಮನೆ ಬಿಟ್ಟೆ, ವಾಸ್ಯರ್ ವಲೀರ್ ನಿಲ್ಲಿ ಅಲ್ಲೇ (ಅವನನ್ನು ತೋಳು ಹಿಡಿದು ನಿಲ್ಲಿಸುತ್ತಾಳೆ..) (ಪುಟ 36) ಸರಿ, ಈ ಪ್ರೇಮಿಗಳಿಗೆ ಎಷ್ಟು ಹರಟಿದರೂ ಬೇಸರವಿಲ್ಲ. ನಡೀರಿ, ನನ್ನ ಮಾತು ಕೇಳಿ. (ಪುಟ 39)

ಆಷಾಢಭೂತಿ : ಸರಸ್ವತಿ- (ಲಲಿತ ಕುಳಿತಿದ್ದ ಕುರ್ಚಿಯ ಬಳಿಗೆ ಬಂದು) ನಿಮ್ಮಿಬ್ಬರಿಗೂ ಎಲ್ಲೋ ಬುದ್ಧಿ ಸರಿಯಾಗಿಲ್ಲ. ಏನೇ ಲಲಿತ, ಅಣ್ಣನೆದುರಿಗೆ ಕಲ್ಲು ಬೊಂಬೆಯ ಹಾಗೆ ಕೂತಿದ್ದವಳು ಅನಂತ ಬಂದ ಮೇಲೆ ಅರಳು ಹುರಿದ ಹಾಗೆ ಮಾತಿಗೆ ಷುರು ಮಾಡಿಬಿಟ್ಟೆ! ಲೋ ಅನಂತ ! ....... (ಪುಟ 32)

(ನಗುತ್ತಾ ಹಿಂತಿರುಗಿ ಬಂದು)

ಸರಿ, ಇಷ್ಟು ಹೊತ್ತೂ ಜಗಳವಾಯಿತು. ಇನ್ನು ಮಾತಿಗೆ ಷುರು. ನಡಿಯೇ ನೀನು!

(ಲಲಿತೆಯನ್ನು ಎಳೆದುಕೊಂಡು ಹೋಗುತ್ತಾಳೆ) (ಪುಟ 33)

ಈ ಎರಡೂ ನಾಟಕಗಳನ್ನು ಕುರಿತು ಡಾ. ಪ್ರಧಾನ್ ಗುರುದತ್ತರ ತುಲನಾತ್ಮಕ ಅಭಿಪ್ರಾಯ ಹೀಗಿದೆ :

"ದೇಶ ಕಾಲಾಬಾಧಿತವಾದ ಸತ್ಯವೊಂದನ್ನು ಕೃತಿ ತನ್ನಲ್ಲಿ ಆತ್ಮೀಕರಿಸಿ ಕೊಂಡಿದ್ದಲ್ಲಿ, ಅದರ ಅಂತಃಸ್ಸತ್ವ ಇಂಥ ಸತ್ಯದಿಂದ ಪ್ರತಿಸ್ಪಂದಿಸುತ್ತಿದ್ದಲ್ಲಿ, ಅಳವಡಿಕೆಗೆ, ರೂಪಾಂತರಕ್ಕೆ ಅದು ಎಡೆಮಾಡಿಕೊಡುತ್ತದೆ. ಇಲ್ಲವಾದಲ್ಲಿ, ರೂಪಾಂತರಿಸುವುದು ಸಾಧ್ಯವಾಗುವುದಿಲ್ಲ. ಫ್ರೆಂಚ್ ನಾಟಕಕರ್ತ ಮೋಲಿಯೇರನ 'ತಾರ್ತುಫ್' (Tartuffe) ಕೃತಿಯನ್ನು ಎ. ಎನ್. ಮೂರ್ತಿರಾಯರು, 'ಆಷಾಢಭೂತಿ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ರೂಪಾಂತರಿಸಿಕೊಟ್ಟಿದ್ದಾರೆ. ಸಭ್ಯ ವೇಷ ಧರಿಸಿದ್ದ ದುರುಳನೊಬ್ಬ ಅಮಾಯಕ ವ್ಯಕ್ತಿಯೊಬ್ಬನನ್ನು ತನ್ನ ಬಲೆಗೆ ಹಾಕಿಕೊಂಡು ಉಳಿದಂತೆ ಶಾಂತಿ ಸಮಾಧಾನಗಳಿಂದ ತುಂಬಿದ್ದ ಸಭ್ಯ ಪರಿವಾರವೊಂದರಲ್ಲಿ ಅಶಾಂತಿಪರ್ವವನ್ನು ಆರಂಭಿಸಿ, ಕುಟುಂಬದ ಉಳಿದ ಸದಸ್ಯರ ದ್ವೇಷಾಸೂಯೆಗಳಿಗೆ ಕಾರಣನಾಗುತ್ತಾನೆ. ದುರಂತ ಸಂಭವಿಸುವ ಮೊದಲೇ ಪ್ರಸಂಗವಶಾತ್ ಅವನ ಕಪಟ ಬಯಲಾಗಿ, ಕುಟುಂಬ ಮುನ್ನಿನಂತೆ ಶಾಂತಿಯ ತವರಾಗಿ ಪರಿಣಮಿಸುತ್ತದೆ. ಇಂಥದೊಂದು ಘಟನೆ ಯಾವುದೇ ಸಮಾಜದಲ್ಲಿ ನಡೆಯಬಹುದಾಗಿರುವಂಥದು. ಏಕೆಂದರೆ ಆಸ್ತಿಕತೆ, ಶ್ರದ್ಧೆ, ನಿಷ್ಠೆ, ಕಪಟ, ವಂಚನೆಗಳು ಯಾವುದೇ ಒಂದು ಸಮಾಜಕ್ಕೆ ಅಥವಾ ದೇಶಕ್ಕೆ ಅಥವಾ ಕಾಲಕ್ಕೆ ಸೀಮಿತವಾಗಿರುವಂಥ ಗುಣಗಳಲ್ಲ. ಹೀಗಾಗಿ ಇಂಥ ಕೃತಿಯ ಅಂತಃಸ್ಸತ್ತ್ವ ದೇಶ, ಕಾಲ, ಭಾಷಾತೀತವಾಗಿರುವಂಥದು. ಇಂಥ ಕೃತಿಯನ್ನು ಯಥಾವತ್ತಾಗಿ ಭಾಷಾಂತರಿಸಿಕೊಳ್ಳಲೂ ಸಾಧ್ಯವಾಗಬಹುದು.

ಆದರೆ, ಕಥಾನಕ ಪಾತ್ರಚಿತ್ರಣ ಮೊದಲಾದುವೆಲ್ಲ ಮನಸ್ಸಿಗೆ ಒಪ್ಪಿಗೆಯಾದರೂ ಪಾತ್ರಗಳ, ಸ್ಥಳಗಳ ಹೆಸರು ಮುಂತಾದ ಸಂಗತಿಗಳು ಅಪರಿಚಿತ ಆವರಣವೊಂದನ್ನು ಸೃಷ್ಟಿಸುತ್ತವೆ. ಹೀಗಾಗಿ, ಪರಿಣಾಮದ ದೃಷ್ಟಿಯಿಂದ ಅತ್ಯಂತ ಯಶಸ್ವಿಯಾದ ಯಥಾರ್ಥ ಭಾಷಾಂತರವೂ ಒಂದು ಹೆಜ್ಜೆ ಹಿಂದೆಯೇ ನಿಂತು ಬಿಡುತ್ತದೆ. ಈ ಕಾರಣದಿಂದಾಗಿಯೇ, ಪರಿಚಿತ ಆವರಣವನ್ನು ಕಲ್ಪಿಸಿ, ರೂಪಾಂತರದ ಮೂಲದ ಆಶಯವನ್ನು ಬಿಂಬಿಸಿದರೆ, ಅಂಥ ರೂಪಾಂತರ ಓದುಗರ ಮನಸ್ಸನ್ನು ಸೆರೆಹಿಡಿಯುತ್ತದೆ. `ತಾರ್ತೂಫ್' ನ ಯಶಸ್ವೀ ಭಾಷಾಂತರ ಆಗಬಹುದಾಗಿದ್ದುದಕ್ಕಿಂತ `ಆಷಾಢಭೂತಿ' ಅತ್ಯಂತ ಪರಿಣಾಮಕಾರಿಯೂ, ಯಶಸ್ವಿಯೂ ಆಗಿರುವುದಕ್ಕೆ ಇದೇ ಕಾರಣ. ಇದಕ್ಕೆ ಮತ್ತೊಂದು ಮೂರ್ತ ಉದಾಹರಣೆಯಾಗಿರುವಂಥ ಒಂದು ಪ್ರಸಂಗವನ್ನು ಮೂರ್ತಿರಾಯರು ಉಲ್ಲೇಖಿಸಿದ್ದಾರೆ. ಇದು ಅವರ ವೈಯಕ್ತಿಕ ಅನುಭವ. ಸಾಹಿತ್ಯ ಅಕಾಡೆಮಿಗಾಗಿ ಅವರು Le Bourgeois Gentilhomme ಕೃತಿಯ ಯಥಾವತ್ತಾದ ಭಾಷಾಂತರವನ್ನು ಸಿದ್ಧಪಡಿಸಿ ಕೊಟ್ಟಿದ್ದರು. ಅದು ಪ್ರಕಟವಾದ ತರುಣದಲ್ಲಿಯೇ `ತಾರ್ತೂಫ್'ನ ಮಾದರಿಯಲ್ಲಿ, ಈ ಕೃತಿಯ ರೂಪಾಂತರವೊಂದನ್ನು ಸಿದ್ಧಪಡಿಸಿಕೊಡುವ ವಿಚಾರವನ್ನು ಪರಿಶೀಲಿಸಬೇಕೆಂದು ಅವರ ಪ್ರಕಾಶಕ ಮಿತ್ರರೊಬ್ಬರು ಸೂಚನೆ ಕೊಟ್ಟರಂತೆ. ಈ ಸೂಚನೆಯ ಬಗ್ಗೆ ಮೂರ್ತಿರಾಯರು ಹೀಗೆ ಹೇಳಿದ್ದಾರೆ. "......ವಿಶುದ್ಧ ಸಾಹಿತ್ಯ ಪ್ರೇಮಿ ಬಯಸುವಂಥ ಯಾವುದೋ ಅಂಶ ನನ್ನ ವಿಧೇಯ ಭಾಷಾಂತರದಲ್ಲಿ ಇಲ್ಲವಾಗಿತ್ತು ಎಂಬುದನ್ನು ಅವರ ಸೂಚನೆ ನನಗೆ ಮನದಟ್ಟು ಮಾಡಿಕೊಟ್ಟಿತು. (".........but his suggestion brought home to me something which the pure lover of literature wanted") ಸಹಜ ಆವರಣದಲ್ಲಿನ ಸಹಜ ಪರಿಣಾಮವೇ ವಿಶುದ್ಧ ಸಾಹಿತ್ಯ ಪ್ರೇಮಿ ಬಯಸುವಂಥ ಅಂಶವೆಂಬುದನ್ನು ಮೇಲೆ ಕಾಣಿಸಿದ ಪ್ರಸಂಗ ಸ್ಪಷ್ಟಪಡಿಸುತ್ತದೆ. (ಭಾಷಾಂತರ ಕಲೆ - ಪುಟ 109 - 111)

### 7.6 ಇಂಡಿಯ – ಇಂದು ಮತ್ತು ನಾಳೆ

ಕೃತಿ : ಜವಾಹರಲಾಲ ನೆಹರು
(ಆಜಾದ್ ಸ್ಮಾರಕ ಭಾಷಣಗಳು -22.02.1949)
ಪುಟ 46 + VIII Jan. 1960
ಮೂಲ : INDIA - TODAY AND TOMORROW
ಪ್ರಕಟಣೆ : National Book Trust of India

1. ಆಜಾದ್ ಸ್ಮಾರಕ ಉಪನ್ಯಾಸ ನೀಡಿದ ಅಂದಿನ ಪ್ರಧಾನಿ ಜವಾಹರಲಾಲ್ ನೆಹರೂರವರ ಭಾಷಣಗಳ ಸಂಕಲನವೇ ಈ ಕೃತಿ. ಪ್ರೊ. ಹುಮಾಯೂನ್ ಕಬೀರ್‌ರವರ ಪ್ರಾಸ್ತಾವಿಕ ಭಾಷಣದಿಂದ ಕೂಡಿದ ಈ ಕೃತಿಯ ಅನುವಾದ ಮೂರ್ತಿರಾಯರ ಇನ್ನಿತರ ಅನುವಾದಗಳ ಸಾಲಿನಲ್ಲಿ ನಿಲ್ಲದೆ, ಕೊಂಚ ಭಿನ್ನತೆಯಿಂದ ಕೂಡಿರುವಂತಹುದು.

2 ಈ ಅನುವಾದದಲ್ಲಿ ಅವರು ಉಪಯೋಗಿಸಿದ ಸಂಸ್ಕೃತ ಶಬ್ದಗಳು ನಮ್ಮ ಗಮನ ಸೆಳೆಯುತ್ತವೆ.

ಅವರ ವಿಚಾರ ಲಹರಿಯ ಸ್ವಚ್ಛತೆ, ಅವರ ನಿರ್ಣಯಗಳಲ್ಲಿ ಕಾಣುತ್ತಿದ್ದ ಸಮತೂಕ ಮತ್ತು ಅಪ್ರಮತ್ತತೆ (3-4), ವಿವಿಕ್ತ (4), ಹಿತೋತ್ಸಾಹಿ (4), ಶೀಘ್ರ

ಪ್ರತಿಸ್ಪಂದನ (5), ಚಿಚ್ಛಕ್ತಿ (5), ಅಪ್ರಮತ್ತತೆ (6), ಔನತ್ಯ ಗಾಂಭೀರ್ಯ (6), ಉದ್ರೇಕರಹಿತ (9), ಕರಾವಲಂಬನ (10), ದೀಪಾಗಾರ (10), ಸಚ್ಛಕ್ತಿ (10), ಅಪರಿಣಿತ (11), ಜೀವೋತ್ತೇಜಕ (11), ಮೂಲೋತ್ಪಾಟನೆ (12), ಚೈತನ್ಯೋತ್ಸಾಹ (12), ಜೀವರಸ (15) ಅನ್ಯಾದೃಶ (15), ಸಂವೃತ ವ್ಯವಸ್ಥೆ (17), ಅಪುಷ್ಟ (20), ಅಧಿವ್ಯಾಧಿ (20), ಪ್ರಬಲತಮ (21), ಅಪಗಾಮಿ (22), ಉದ್ದಿಷ್ಟ (24), ಮೋಹಕಶಕ್ತಿ (25), ದೂರಾಕಾಶಯಾನದ ಯುಗ (26), ಅವಿಚ್ಛಿನ್ನತೆ (27), ಅಶುಭಪ್ರತೀಕ್ಷೆಯ ದೃಷ್ಟಿ (27-28), ಅತ್ಯಸಹ್ಯ (30), ಮನಃಕ್ಲೇಶ (30), ಅವಿವೇಚನೆ (36), ಸಮತೂಕ (36), ವಿಷಮತೂಕ (36), ವಿಚಾರಕ್ಷಮ (37), ಬಾಹುಳ್ಯ (39), ಯುಗಾಂತರ (42), ಜೀವರಹಿತ ಹಸ್ತಕ್ಷೇಪ (43), ಅಪಸೇವೆ (45), ಲೋಲಾಪ್ತಿ (45), ವೃತ್ತಮಾನ (46), ಸ್ವತಂತ್ರೋದ್ಯಮ (40).

3. ಈ ಪಟ್ಟಿಯಲ್ಲಿ ಕೆಲವು ಶಬ್ದಗಳು ಅನಿವಾರ್ಯ. ಏಕೆಂದರೆ ಅವು ಸಂಸ್ಕೃತ ಭಾಷಾಜ್ಞಾನವಿಲ್ಲದವರಿಗೂ ಚಿರಪರಿಚಿತ. ಆದರೆ ಕೆಲವು ಶಬ್ದಗಳು ಸುಲಭವಾಗಿ ಅರ್ಥವಾಗುವುದಿಲ್ಲ. ಇನ್ನು ಕೆಲವು ಶಬ್ದಗಳ ಪ್ರಯೋಗ ವ್ಯಾಕರಣ ದೃಷ್ಟಿಯಿಂದ ಸಾಧುವಾದ ಪ್ರಯೋಗಗಳಲ್ಲ. ಮನಃಕ್ಲೇಶ, ಅವಿವೇಚನೆ , ವಿಚಾರಕ್ಷಮ , ಅಪಸೇವೆ, ಲೋಲಾಪ್ತಿ- ಇತ್ಯಾದಿ. ಕೆಲವು ಶಬ್ದಗಳ ಬಳಕೆ ಸುಲಭಗ್ರಾಹ್ಯತ್ವಕ್ಕೆ ಬಲು ದೊಡ್ಡ ಅಡಚಣೆಯನ್ನುಂಟುಮಾಡುತ್ತವೆ. ಅತ್ಯಸಹ್ಯ, ಅಪುಷ್ಟ ಮುಂತಾದ ಶ್ರುತಿಕಟುವಾದ ಶಬ್ದಗಳು ಸಮಂಜಸ ಪ್ರಯೋಗಗಳಾಗಿಲ್ಲ.

4. ಅನುವಾದ ಮಾಡುವಾಗ ಮೂರ್ತಿರಾಯರು ಸಂಪೂರ್ಣ ಕನ್ನಡ ಶಬ್ದಗಳನ್ನೇ ತರಬೇಕೆಂಬ ವೀರಾಭಿಮಾನವನ್ನೇನೂ ಇರಿಸಿಕೊಂಡಿಲ್ಲ. ಪಾರಿಭಾಷಿಕ ಶಬ್ದಗಳಿಗೆ ಸಂವಾದಿಯಾದ ಕನ್ನಡ ಶಬ್ದಗಳು ಸಿಗದೆ ಇದ್ದಾಗ ಮೂಲ ಶಬ್ದಗಳನ್ನೇ ಉಳಿಸಿಕೊಂಡಿದ್ದಾರೆ ಹೊರತು ಅವುಗಳನ್ನು ಕಷ್ಟಪಟ್ಟು ಕನ್ನಡೀಕರಿಸುವ ಗೋಜಿಗೆ ಅವರು ಹೋಗಿಲ್ಲ. ಸೋವಿಯಟ್ ಯೂನಿಯನ್ (19), ಫಾಸಿಸ್ಟ್, ನಾಜಿಸ್ಟ್ (21), ಕಮ್ಯೂನಿಸ್ಟ್ (22), ಪಾರ್ಲಿಮೆಂಟ್ (24), ಸ್ಕೂಲು ಕಾಲೇಜು (32), ಯೂನಿಟ್ (42), ಫ್ಯೂಡಲ್ (41), ಆದರೆ "ಮಾರ್ಕೆಟ್" (21) ಶಬ್ದವನ್ನು "ಮಾರುಕಟ್ಟೆ" ಎಂದೂ "ಥಿಯರಿ" (25), ಶಬ್ದವನ್ನು "ಸಿದ್ಧಾಂತ"ವೆಂದೂ, "ಮಿಲಿಟರಿ" (31-36) ಶಬ್ದಕ್ಕೆ "ಸೈನ್ಯ"ವೆಂದೂ "ವೋಟು" (38) ಶಬ್ದಕ್ಕೆ"ಮತ"ವೆಂದೂ ಅನುವಾದ ಮಾಡಬಹುದಿತ್ತು.

5. ಅನ್ಯದೇಶ್ಯ ಶಬ್ದಗಳನ್ನೂ ಮೂರ್ತಿರಾಯರು ಅಲ್ಲಲ್ಲಿ ಉಪಯೋಗಿಸಿದ್ದಾರೆ. ಇದು ಶೈಲಿಯ ಸೌಂದರ್ಯವನ್ನು ಹೆಚ್ಚಿಸಿದೆ. ಜೊತೆಗೆ ಓದುಗರಿಗೆ ಚಿರಪರಿಚಿತವಾದ ಶಬ್ದಗಳಾದುದರಿಂದ ಸುಲಭಗ್ರಾಹ್ಯವಾಗಿವೆ.

ಖಾಯಂ (26), ಜರೂರು (33), ಜಹಗೀರುದಾರ (39), ಜಾಲತಿ (41), ಆದರೆ "ತ್ರರಬಿಯತ್ತು" (26) ಶಬ್ದ ಅಷ್ಟು ಸಮಂಜಸವೆನಿಸುವುದಿಲ್ಲ. ಅದಕ್ಕೆ "ತರಬೇತಿ" ಎಂದು ಅನುವಾದ ಮಾಡಬಹುದಿತ್ತು.

6. ಮೂರ್ತಿರಾಯರು ದೇಶ್ಯ ಶಬ್ದಗಳನ್ನೂ ಅಲ್ಲಲ್ಲಿ ಉಪಯೋಗಿಸಿರುವುದರಿಂದ ಅನುವಾದ ದೇಶೀಯ ಸೊಗಡನ್ನು ಪಡೆದಿದೆ. ಅಲ್ಲಲ್ಲಿ ಅನುವಾದವೆಂದೆನಿಸದೆ ಸ್ವತಂತ್ರ ಕೃತಿ ಎನಿಸುವಷ್ಟು ಪರಿಣಾಮಕಾರಿಯಾಗಿದೆ.

ಮನಸ್ಸನ್ನು ಇರಿಯುವಂಥ (9). ಹುಟ್ಟುತನ (9). ಇಮ್ಮಡಿ (13). ಬೆಳವಣಿಗೆ (19). ಆಗುಹೋಗು (32). ಹಳ್ಳಿಗಾಡು (33). ಹೆಚ್ಚುಕಡಿಮೆ (36). ಮಹಾಪುರುಷರು (37). ಹೊಸಲಿಮೇಲೆ (39). ಮೂರನೆಯ ಯೋಜನೆ ಮುಂದೆ ಬರುತ್ತಿದೆ (41).

7. ಶಬ್ದ ಪ್ರಯೋಗ ಬಳಕೆಗಳಲ್ಲಿ ಅವರು ನಿಷ್ಕೃಷ್ಟವೂ ನಿಖರವೂ ಆದ ಜ್ಞಾನವನ್ನು ಉಳ್ಳವರು. ಶಬ್ದಗಳ ನಿಖರ ರೂಪಕ್ಕಿಂತ ರೂಢಿಯ ಪ್ರಯೋಗಗಳೇ ಹೆಚ್ಚು ಚಾಲ್ತಿಯಲ್ಲಿವೆ. ಅಂತಹ ರೂಢ ಶಬ್ದಗಳನ್ನು ಉಪಯೋಗಿಸದೆ ನಿಖರ ರೂಪಗಳನ್ನೇ ಬಳಸಿರುವುದು ಇಲ್ಲಿಯ ವೈಶಿಷ್ಟ್ಯ. ಐಕ್ಯ (12). ಕೋಟ್ಯಂತರ (32-43). ಸಾಮಾನ್ಯವಾಗಿ ಈ ಶಬ್ದ "ಕೋಟ್ಯಾಂತರ"ವೆಂಬ ತಪ್ಪುರೂಪವೇ ಹೆಚ್ಚಾಗಿ ಬಳಕೆಯಲ್ಲಿದೆ. ಆದರೆ "ಐಕ್ಯತೆ" (43) ಎಂಬ ರೂಪ ಹೇಗೋ ನುಸುಳಿಕೊಂಡು ಬಿಟ್ಟಿದೆ.

8. ಮೂರ್ತಿರಾಯರಿಗೆ ಅನುವಾದಕನ ಮಿತಿಗಳ ಪರಿಚಯ ಪ್ರಜ್ಞೆ ಚೆನ್ನಾಗಿದೆ. ಆದ್ದರಿಂದ ತಾವು ಬರೆದ ಶಬ್ದಗಳೇ ಅಂತಿಮವೆಂದು ಅವರು ತಿಳಿದಿಲ್ಲ. ಅದಕ್ಕಾಗಿಯೇ ಅವರು ಕೆಲವು ಶಬ್ದಗಳಿಗೆ ಮೂಲದ ಇಂಗ್ಲೀಷ್ ಶಬ್ದಗಳನ್ನೂ ಆವರಣದಲ್ಲಿ ನೀಡಿದ್ದಾರೆ.

ಕುಲಾನುಸಾರಿ (Racial)(29). ಅಣುವಿಜ್ಞಾನ (Nuclear Science) (13). ಮತಧರ್ಮ(Religion) (14). ಸಮಾಜಸಾಮ್ಯ ವಾದ (Socialism) (14). ಸಮತಾ ವಾದ (Communism) (14). ಸಾಧನ (means) (16). ಲಕ್ಷ್ಯ(end) (16). ಬಂಡವಾಳಶಾಹಿ (capitalism ) (21). ಏಕಸ್ವಾಮ್ಯ(monopoly) (19). ರಾಷ್ಟ್ರೀಯತೆ (Nationalism) (21). ಕುಲಕ್ಕೆ ಸಂಬಂಧಪಟ್ಟ ತತ್ವ (racialism) (30). ಸಮಾಜ ವಾದದ ಗುಣಗಳುಳ್ಳ ಸಮಾಜ ವ್ಯವಸ್ಥೆ (a socialist pattern of society) (37). ಪ್ರೇರಕಗಳು (incentives ) (39). ಜೆಟ್ (Jet) (40). ಸ್ವತಂತ್ರೋದ್ಯಮ (free enterprise) (40). ಸಾಮೂಹಿಕ ವಿಕಾಸ ಯೋಜನೆ(community Development Movement ) (42). ಸಾಮೂಹಿಕ ಬೇಸಾಯ (Collective farming ) (42).

9. ಇಲ್ಲಿ 'ಮತ, ಧರ್ಮ'ವೆಂಬ ಎರಡು ವಿಭಿನ್ನ ಅಂಶಗಳನ್ನು 'Religion' ಎಂಬ ಶಬ್ದವೊಂದಕ್ಕೇ ಪರ್ಯಾಯವಾಗಿ ಉಪಯೋಗಿಸಿರುವುದು ಸಮಂಜಸವೆನಿಸುವುದಿಲ್ಲ.

'ಸಾಮೂಹಿಕ' ಶಬ್ದವನ್ನು ಒಮ್ಮೆ collective ಎಂಬುದಕ್ಕೂ ಮತ್ತೊಮ್ಮೆ community (community ನಾಮಪದ, ಸಾಮೂಹಿಕ ಗುಣವಾಚಕ)ಎಂಬುದಕ್ಕೂ ಉಪಯೋಗಿಸಿರುವುದು, ಯಾವುದು ಸೂಕ್ತವೆಂಬ ದ್ವಂದ್ವ ಉಂಟಾಗುತ್ತದೆ.

Movement ಶಬ್ದಕ್ಕೆ 'ಯೋಜನೆ' ಎಂಬುದಕ್ಕಿಂತಲೂ 'ಚಳುವಳಿ' ಹೆಚ್ಚು ಸೂಕ್ತವೆನಿಸುತ್ತಿತ್ತು.

10. ಮೂರ್ತಿರಾಯರ ಜೀವನದ ಮೇಲೆ ಪ್ರಭಾವ ಬೀರಿದ ಕೆಲವು ಭಾಗಗಳನ್ನು ನಾವು ಹೀಗೆ ಗುರುತಿಸಬಹುದಾಗಿದೆ:

ಪ್ರಾಚೀನ ಕಾಲದಲ್ಲಿ ಜೀವನ ಸರಳವಾಗಿತ್ತು, ಪ್ರಕೃತಿಯೊಡನೆ ಹೆಚ್ಚು ಸಂಪರ್ಕ ಹೊಂದಿತ್ತು, ಆಲೋಚನೆಗೂ ಚಿಂತನೆಗೂ ವಿರಾಮವಿತ್ತು. ಈಗ ದಿನ ಕಳೆದಂತೆಲ್ಲ ಜೀವನದ ಜಟಿಲತೆ ಹೆಚ್ಚುತ್ತಿದೆ, ವಿರಾಮವಿದ್ದಾಗಲೂ ಅದನ್ನು ಹೇಗೆ ಉಪಯೋಗಿಸಬೇಕೆಂದು ನಮಗೇ ತಿಳಿಯದು. (ಪುಟ 24)

ನಮ್ಮ ನಾಗರೀಕತೆ ಹೇಗೋ ಕೆಟ್ಟಿದೆಯೆಂಬ ಭಾವನೆ ಮನಸ್ಸಿನಲ್ಲಿ ನಿಂತು ಜೀವನದ ಮೋಹಕ ಶಕ್ತಿ ನಾಶವಾಗುತ್ತದೆ. ಕೆಲವರೇನೋ, "ಮತ್ತೆ ಪ್ರಕೃತಿಯ ಮಡಿಲನ್ನೇ ಸೇರೋಣ, ಸರಳ ಜೀವನವನ್ನು ನಡೆಸೋಣ", ಎನ್ನುತ್ತಾರೆ. ಆದರೆ ಆ ಜೀವನದಲ್ಲಿ ಎಂಥ ಗುಣವೇ ಇದ್ದಿರಲಿ, ಅದಕ್ಕೆ ಹಿಂದಿರುಗುವುದು ಸಾಧ್ಯವಿಲ್ಲ. ಪ್ರಪಂಚ ಬದಲಾಯಿಸಿದೆ. ಒಬ್ಬರಿಬ್ಬರು ಜೀವನವನ್ನು ತೊರೆದು ಸನ್ಯಾಸಿಗಳಾಗಬಹುದು. ಇಡೀ ಸಮಾಜ ಹಾಗೆ ಮಾಡಲಾರದು. ಸಮಸ್ಯೆಗಳೂ ಕಷ್ಟ-ನಿಷ್ಠುರಗಳೂ ಎಷ್ಟೇ ಬರಲಿ, ಜೀವನವನ್ನೂ ಒಪ್ಪಿಕೊಂಡು, ಅದನ್ನು ಚೆನ್ನಾಗಿ ನಡೆಸುವ ಮನೋವೃತ್ತಿಯೇ ಸಮಾಜದ ತಳಹದಿಯಾಗಬೇಕು. ಆಗದಿದ್ದರೆ ಅದು ನಾಶವಾಗುತ್ತದೆ. (25)

ನಾವು ಪ್ರೀತಿಯನ್ನು ಕೊಟ್ಟರೆ, ಅದು ಹತ್ತರಷ್ಟಾಗಿ ನಮಗೆ ವಾಪಸು ಬರುತ್ತದೆ. ದ್ವೇಷವನ್ನು ಕೊಟ್ಟರೆ ಅದೇ ಹಿಂದಿರುಗಿ ಬರುತ್ತದೆ. (28)

ನಾವು ಪರಸ್ಪರ ಸಹನೆಯನ್ನು ಬೆಳೆಸಿಕೊಳ್ಳಬೇಕು. ಪ್ರಪಂಚ ಹೇಗಿದೆಯೋ ಹಾಗೇ ಅದನ್ನು ಒಪ್ಪಿಕೊಳ್ಳಬೇಕು. (30)

ಐಶ್ವರ್ಯದಾಹ, ಕೂಡಿಡಬೇಕೆಂಬ ಆಸೆ, ಐಶ್ವರ್ಯ ಹೆಚ್ಚಿದಷ್ಟೂ ಮತ್ತಷ್ಟು ಬೇಕೆಂಬ ಆಸೆ- ಇವು ನಮ್ಮನ್ನು ಕೆಡಿಸಿ, ಮಾತ್ಸರ್ಯವನ್ನು ಕೆರಳಿಸಿ, ಘರ್ಷಣೆಗೆ ಕಾರಣವಾಗುತ್ತವೆ. (36)

"ಸಹನೆ, ಮರುಕ, ಜ್ಞಾನ ಇವುಗಳೊಂದೂ ಇಲ್ಲದ ಭೌತಿಕ ಸಂಪತ್ತು ಬರಿಯ ಬೂದಿ, ವ್ಯರ್ಥಪ್ರಮಾಣ" ಎಂಬುದನ್ನೂ ಮರೆಯದಿರೋಣ, "ಶಾಂತಿಯನ್ನು ನೆಲೆಗೊಳಿಸುವವರೇ ಧನ್ಯರು" ಎಂಬುದನ್ನು ಸರ್ವದಾ ನೆನೆಯೋಣ. (36)

## 7.7 ಅಮೇರಿಕ ಸಂಯುಕ್ತ ಸಂಸ್ಥಾನಗಳ ಸಾಹಿತ್ಯ

ಮೂರ್ತಿರಾಯರು 1964ರಲ್ಲಿ ಕನ್ನಡಕ್ಕೆ ಅನುವಾದಿಸಿದ ಅಮೇರಿಕ ಸಂಯುಕ್ತ ಸಂಸ್ಥಾನಗಳ ಸಾಹಿತ್ಯ ಚರಿತ್ರೆ ಇದು. 1954ರಲ್ಲಿ Marcus Cunliffe ಎಂಬುವವರು ಬರೆದ The Literature of the United States ಎಂಬ ಮೂಲಕೃತಿಯ ನಿಕಟಾನುವಾದವಿದು. ಹದಿನೈದು ಅಧ್ಯಾಯಗಳನ್ನುಳ್ಳ ಈ ಕೃತಿ 504ಪುಟಗಳ ವ್ಯಾಪ್ತಿಯನ್ನು ಹೊಂದಿದೆ. ಇದರಲ್ಲಿ Notes on further Reading (ಮುಂದಿನ ಓದಿಗೆ ಟಿಪ್ಪಣಿ) ಎಂಬ ಹತ್ತು ಪುಟಗಳ ಟಿಪ್ಪಣಿ ಇದೆ. ಇದು ಈ ಕೃತಿಯ ಹದಿನೈದು ಅಧ್ಯಾಯಗಳಿಗೆ ಪೂರಕವಾಗಿ ಹದಿನೈದು ವಿಭಾಗಗಳನ್ನೊಳಗೊಂಡಿದೆ. ಕೊನೆಯಲ್ಲಿ 'ಅಮೇರಿಕನ್ ಇತಿಹಾಸದಲ್ಲಿ ಮುಖ್ಯವಾದ ತಾರೀಖುಗಳು' ಎಂಬ ಶೀರ್ಷಿಕೆಯಡಿ ನಾಲ್ಕು ಪುಟಗಳಲ್ಲಿ ನೀಡಲಾಗಿರುವ ಘಟನೆಗಳ ಅನುಕ್ರಮಣಿಕೆ. ಈ ಅಧ್ಯಾಯ ಕನ್ನಡದಲ್ಲಿಯೂ ಇದರ ಹಿಂದಿನ ಅಧ್ಯಾಯ ಇಂಗ್ಲೀಷ್‌ನಲ್ಲಿಯೂ ಇದೆ.

ತೀರಾ ಇತ್ತೀಚಿನವರೆಗೂ ವಿದ್ವಾಂಸರ ಗಮನ ಸೆಳೆಯದ ಅಮೇರಿಕ ಸಂಯುಕ್ತ ಸಂಸ್ಥಾನಗಳ ಸಾಹಿತ್ಯ ಚರಿತ್ರೆಯನ್ನು ಕನ್ನಡಕ್ಕೆ ಅನುವಾದಿಸಿರುವುದು ಮೂರ್ತಿರಾಯರ ವಿಭಿನ್ನ ಮನೋಧರ್ಮದ ಪ್ರತೀಕವಾಗಿದೆ. ಕೆಲವು ಸಾಹಿತ್ಯ ಕೃತಿಗಳು ("ಹುಲ್ಲಿನ ದಳಗಳು". Leaves of grass –ವಾಲ್ಟ್ ವಿಟ್‌ಮನ್: ಅನುವಾದ ಎಂ. ಗೋಪಾಲ ಕೃಷ್ಣ ಅಡಿಗ, "ಟಾಂ ಚಿಕ್ಕಪ್ಪನ ಮನೆ". Uncle Tom's cabin) ಕನ್ನಡಕ್ಕೆ ಬಂದಿವೆ.

ಭಾಗಶಃ ಒಂದೆರಡು ಕವಿತೆಗಳು (ಜೆ. ಜಿ. ವಿಟ್ಟಿಯರ್‌ನ "My soul and I" ಎಂಬ ಕವಿತೆಯನ್ನು 'ಜೀವಗೀತೆ' ಎಂದೂ ವಾಲ್ಟ್ ವಿಟ್‌ಮನ್‌ನ "Song of Myself" ಎಂಬ ಗೀತೆಯನ್ನು 'ಆತ್ಮ ಗೀತೆ' ಎಂದೂ ವಿ. ಪಿ. ಜಿ. ರವರು ಅನುವಾದಿಸಿದ್ದಾರೆ. (ವಸಂತ ಕುಸುಮಾಂಜಲಿ 1922-1951: ಪುಟ ೧೯ - 20). ಅಥವಾ ಓ. ಹೆನ್ರಿ, ಮಾರ್ಕ್‌ಟ್ವೈನ್ ಮುಂತಾದವರ ಸಣ್ಣಕಥೆಗಳೂ, ಕಥಾ ಸಂಕಲನಗಳೂ (ಅಮೇರಿಕದ ಆರು ಕತೆಗಳು, ಅನುವಾದಕರು : ಕು. ಶಿ. ಹರಿದಾಸಭಟ್ಟ 1959) ಕನ್ನಡಕ್ಕೆ ಬಂದಿವೆಯೇ ಹೊರತು ಸಾಹಿತ್ಯ ಚರಿತ್ರೆಯೊಂದನ್ನು ಕನ್ನಡಕ್ಕೆ ಸಮಗ್ರವಾಗಿ ತಂದವರಲ್ಲಿ ಮೂರ್ತಿರಾಯರೇ ಮೊದಲಿಗರು.

ಈ ಅನುವಾದದ ಅಧ್ಯಯನವನ್ನು ಈ ಕೆಳಗಿನ ಶೀರ್ಷಿಕೆಯಡಿ ಅಧ್ಯಯನ ಮಾಡಲಾಗಿದೆ :

ಅನುವಾದಗಳು : ಇದು ಒಂದು ಅನುವಾದ ಕೃತಿಯೇ ಆಗಿರುವುದರಿಂದ, ಇಲ್ಲಿ ಮಾಡಲಾಗಿರುವ ಅನುವಾದಗಳು ಮೂಲಕ್ಕೆ ಹೇಗೆ ನಿಷ್ಠವಾಗಿವೆ ಎಂಬುದನ್ನು ಗಮನಿಸಲಾಗಿದೆ. ಜೊತೆಗೆ ಮೂರ್ತಿರಾಯರು ಒಬ್ಬ ಸಮರ್ಥ ಅನುವಾದಕರೂ ಹೌದು ಎಂಬ ಅಂಶವನ್ನು ಸಾಧಾರವಾಗಿ ಶ್ರುತಪಡಿಸಲಾಗಿದೆ. ಈ ಅನುವಾದಗಳನ್ನು "ಭಾಷಾಂತರಕಾರನು ತಾನು ಆಯ್ಕೆಮಾಡಿಕೊಂಡ ಲೇಖಕನ ಅರ್ಥ ಮತ್ತು ಭಾವಗಳನ್ನು ಸ್ಪಷ್ಟವಾಗಿ ಖಚಿತವಾಗಿ ತಿಳಿದುಕೊಂಡಿರಬೇಕು. ತನ್ನ ಭಾಷೆ ಮತ್ತು ಆಕರ ಭಾಷೆಗಳೆರಡನ್ನೂ ಆಳವಾಗಿ ತಿಳಿದಿರಬೇಕು. ಭಾಷಾಂತರಕಾರನು ವಾಕ್ಯದ ಅರ್ಥಕ್ಕೆ ನಿಷ್ಠನಾಗಿರಬೇಕೇ ಹೊರತು ಪದಗಳ ಜೋಡಣೆಯ ಕ್ರಮಕ್ಕೆ ಅಲ್ಲ. ಸರಳವಾದ ಭಾಷೆಯನ್ನು ಸಾಧಿಸುವುದು ಅವನ ಗುರಿಯಾಗಿರಬೇಕು. ಓದುಗನ ಕಿವಿಗೂ ಹೃದಯಕ್ಕೂ ಹಿತವಾಗುವಂಥ ಲಯವನ್ನು ಭಾಷೆಯಲ್ಲಿ ಸೃಷ್ಟಿಸಬೇಕು. ಇದು ಡೋಲೆಯ ನಿಯಮಗಳ ಸಾರಾಂಶ". (ಓ.ಎಲ್. ನಾಗಭೂಷಣ ಸ್ವಾಮಿ. ಭಾಷಾಂತರ 1993 ಪುಟ16) ಎಂಬ ಸೈದ್ಧಾಂತಿಕ ನಿಲುವಿನ ಬೆಳಕಿನಲ್ಲಿ ಪರಿಶೀಲಿಸಲಾಗಿದೆ.

(1) Gems and jewels let them heap-
Wax sumptuous as the Sophi ;
For me, to grapple from Art's deep
One dripping trophy!

(ಚಿನ್ನ ರನ್ನಗಳನ್ನು ರಾಶಿಗೂಡಿಸಲವರು,
ಸೋಫಿಯಂದದಿ ಭಾಗ್ಯಪಡೆಯಲವರು,
ಅವರಿಗದು ಬೇಕು;
ಕಲೆಯ ವಾರಿಧಿಯಲ್ಲಿ ಮುಳುಗಿ ನಾ ಮೇಲ್ತಂದ
ರಸವನೊಸರುವ ಪಾರಿತೋಷಕವು ಎನಗಿರಲಿ,
ಅದೆ ನನಗೆ ಸಾಕು) (18-19)

ಇದೊಂದು ಗಮನಾರ್ಹ ಅನುವಾದ. Gems and Jewels ಎಂಬ ಶಬ್ದಗಳನ್ನು "ಚಿನ್ನ ರನ್ನಗಳನ್ನು" ಎಂದೂ deep ಶಬ್ದವನ್ನು 'ವಾರಿಧಿ' ಎಂದೂ ಅನುವಾದಿಸಿದ್ದಾರೆ.

ಆದರೆ ಅನುವಾದದಲ್ಲಿರುವ 'ಅವರಿಗದು ಬೇಕು' ಎಂಬ ಭಾಗ ಮೂಲದಲ್ಲಿಲ್ಲ. For me ಎನ್ನುವುದನ್ನು 'ಅದೆ ನನಗೆ ಸಾಕು' ಎಂಬುದಾಗಿ ಅನುವಾದಿಸಿದ್ದಾರೆ.

(2) By nature trees do not when they are grown.
And plums and apples thoroughly ripe do fall,
And corn and grass are in their season mown,
And time brings down what is both strong and tall
But plants new set to be eradicate,
And buds new blown, to have so short a date,
Is by his hand alone that guides nature and fate.

(ವಯಸ್ಸಾದ ಮೇಲೆ ಮರಗಳು ಒಣಗಿ ಕೊಳೆಯುತ್ತವೆ;
ಪ್ಲಮ್ ಹಣ್ಣು, ಸೇಬು, ಮಾಗಿದರೆ ಮರದಿಂದ ಬೀಳುತ್ತವೆ;
ಕಾಲಬಂದಾಗ ಬೆಳೆಯನ್ನು, ಹುಲ್ಲನ್ನು ಕೊಯ್ಯುವುದು;
ಔನತ್ಯ, ದಾರ್ಢ್ಯ ಎಲ್ಲವನ್ನೂ ಕಾಲ ಉರುಳಿಸುತ್ತದೆ;
ಆದರೆ, ಈಗ ತಾನೆ ಹುಟ್ಟಿದ ಗಿಡವನ್ನು ಕೀಳುವುದೇ ?
ಈಗ ತಾನೆ ಅರಳಿದ ಹೂವಿಗೆ ಇಷ್ಟು ಅಲ್ಪಾಯುಸ್ಸೆ ?
ಇದು ಅವನ ಕೈವಾಡ- ಪ್ರಕೃತಿ ನಿಯತಿಗಳೆರಡನ್ನೂ
ನಡೆಸುವವನ ಕೈವಾಡ) (ಪುಟ 31)

ಎರಡೂ ಭಾಗಗಳು ಪದ್ಯಾತ್ಮಕವಾಗಿಲ್ಲ, ಗದ್ಯಾತ್ಮಕವಾಗಿದೆ. ಅನುವಾದ ಗದ್ಯಾತ್ಮಕವಾಗಿದೆ. ಕಾರಣ ಮೂಲವೂ ಗದ್ಯಾತ್ಮಕವೇ. ಇಲ್ಲಿ ಕೆಳಗೆ ಗೆರೆ ಎಳೆದಿರುವ ಇಂಗ್ಲೀಷ್ ಮತ್ತು ಕನ್ನಡ ಶಬ್ದಗಳನ್ನು ಇಂಗ್ಲೀಷ್ ಪದಪುಂಜಗಳಿಗೆ ಕನ್ನಡದ ಅರ್ಥಗಳನ್ನು ಹೋಲಿಸಿ ನೋಡಬಹುದು. By nature ಎಂಬ ಪದಪುಂಜ 'ವಯಸ್ಸಾದ ಮೇಲೆ' thoroughly ripe ಎಂಬ ಎರಡು ಶಬ್ದಗಳು 'ಕಾಲ ಬಂದಾಗ ' ಎಂದಾಗಿವೆ. ಇಲ್ಲಿ ಭಾಷೆಗಿಂತ ಭಾವ ಮುಖ್ಯವಾದ್ದರಿಂದ ಇಂತಹ ಅನುವಾದ ಇಲ್ಲಿ ಅನಿವಾರ್ಯವೆನಿಸಿದೆ. ಹಾಗೆಯೇ ಇನ್ನೊಂದು ಅಂಶವೂ ಇಲ್ಲಿ ಗಮನಾರ್ಹ. ಮೂಲದ 5ಮತ್ತು 6ನೇ ವಾಕ್ಯಗಳು ಮೂಲದಲ್ಲಿ ಸಾಮಾನ್ಯ ವಾಕ್ಯಗಳು. ಆದರೆ ಅನುವಾದದಲ್ಲಿ ಆ ಎರಡು ವಾಕ್ಯಗಳೂ ಪ್ರಶ್ನಾರ್ಥಕ ವಾಕ್ಯಗಳಾಗಿವೆ. ಏಕೆಂದರೆ ಕನ್ನಡದ ಜಾಯಮಾನಕ್ಕೆ ಆ ವಾಕ್ಯಗಳು ಪ್ರಶ್ನಾರ್ಥಕ ರೂಪದಲ್ಲಿಯೇ ಹೆಚ್ಚು ಔಚಿತ್ಯಪೂರ್ಣವೆಂದು ಮೂರ್ತಿ ರಾಯರು ಮನಗಂಡಿದ್ದಾರೆ. ಇಂತಹ ವಾಕ್ಯಸ್ವರೂಪಗಳು ಬದಲಾವಣೆ ಹೊಂದುವುದು ಅನಿವಾರ್ಯವೆಂಬ ಅಂಶವನ್ನು ಶ್ರೀ ಎಸ್. ಆರ್. ಭಟ್ ಹೀಗೆ ಹೇಳುತ್ತಾರೆ.

........ಇಂಗ್ಲೀಷ್‌ನಲ್ಲಿ ಇತ್ಯಾತ್ಮಕವಾಗಿರುವ ವಾಕ್ಯಗಳನ್ನು ಕನ್ನಡಕ್ಕೆ ಭಾಷಾಂತರಿಸುವಾಗ ಕೆಲವೊಮ್ಮೆ ಅವುಗಳನ್ನು ನೇತ್ಯಾತ್ಮಕವಾಗಿ ಪರಿವರ್ತಿಸುವುದೇ ಲೇಸು. ಇಲ್ಲವಾದರೆ ಅವುಗಳ ಭಾವ ಸಂಪೂರ್ಣವಾಗಿ ಅಭಿವ್ಯಕ್ತವಾಗುವುದಿಲ್ಲ".

(ಭಾಷಾಂತರ ಒಂದು ಕಲಾತ್ಮಕ ಅಭಿವ್ಯಕ್ತಿ : 1989 ಪುಟ 21)

(3) ಮೂರ್ತಿರಾಯರು ಭಾಷಾಂತರದ ವಿವಿಧ ಕ್ರಮಗಳನ್ನು ಅನುಸರಿಸಿದವರು. ಅವರ ಸಂಗ್ರಹಾನುವಾದಕ್ಕೆ ಒಂದು ನಿದರ್ಶನ.

A crime it is, therefore in bliss
    you may not hope to dispell;
But unto you I have allow
    the easiest noon in Hell.
The glorious king thus answering,
    they cease, and plead no longer;
Their consciences must needs confess
    his Reasons are the stronger.
("ಅಹುದು, ಅದು ಪಾಪ, ಬಿಡು ಸ್ವರ್ಗದಾಸೆಯನು:
ನರಕದಲಿ ನಿನಗೀವೆ ಅಲ್ಪಘೋರದ ತಾಣ
ಇಂತೆಂದ, ದಿವಿಯರಸ; ಮೌನರಾದರು ಅವರು.
ನುಡಿದಿತವರಾತ್ಮ ಸಾಕ್ಷಿ; ನಮ್ಮ ತರ್ಕಕ್ಕಿಂತ ದೈವ ತರ್ಕವೆ ಹಿರಿದು")

(ಪುಟ 32–33)

ಮೂಲದ 45ಶಬ್ದಗಳು ಅನುವಾದದಲ್ಲಿ ಕೇವಲ 20ಪದಗಳಾಗಿವೆ. ಈ ಅನುವಾದವನ್ನು ಸಾರಾನುವಾದವೆಂದೂ ಕರೆಯುತ್ತಾರೆ. ಈ ಅನುವಾದ ಪ್ರಕಾರದ ಲಕ್ಷಣಗಳು ಹೀಗಿವೆ:

"ಮೂಲ ಕೃತಿಯಲ್ಲಿನ ಅತಿ ಮುಖ್ಯವಾದ ಸಾರವತ್ತಾದ ಭಾಗವನ್ನೆಲ್ಲಾ ಅದೆಷ್ಟು ಅಡಕವಾಗಿ ಸರಳವೂ ನೇರವೂ ಆದ ಮಾತಿನಲ್ಲಿ ಪ್ರತಿಪಾದಿಸುವುದು ಸಂಗ್ರಹಾನುವಾದವೆನ್ನಿಸುವುದು. ಅಂದರೆ ಮೂಲದಲ್ಲಿನ ಯಾವ ಮುಖ್ಯ ವಿಷಯವನ್ನೂ ಕಡೆಗಣಿಸದೆ ಮೂಲದಲ್ಲಿಲ್ಲದ ತನ್ನದನ್ನು ಸೇರಿಸದೆ ತಿರುಳನ್ನು ಮಾತ್ರ ಹಿಡಿದಿಡುವ ಕಾರ್ಯವಷ್ಟೆ"

(ಮಹೇಶ್ವರಪ್ಪ. ಭಾಷಾಂತರ ಪ್ರವೇಶಿಕೆ: 1973 – ಪುಟ 48)

"ಸಂಗ್ರಾಹಾನುವಾದದಲ್ಲಿ ಔಚಿತ್ಯವನ್ನರಿತು ಸಂಗ್ರಹಣದ ಪ್ರಮಾಣವನ್ನು ನಿರ್ಧರಿಸಬೇಕು. ಅತಿಯಾಗಿ ಸಂಗ್ರಹಿಸಲು ಯತ್ನಿಸಿ ಮೂಲದ ಸೌಂದರ್ಯಕ್ಕೆ ಎರವಾಗಬಾರದು. ಗಾತ್ರದಲ್ಲಿ ಕಿರಿದಾದರೂ, ಗುಣದಲ್ಲಿ ಹಿರಿದಾಗಿಯೇ ಉಳಿದು ಕೊಂಡಿರುವಂತೆ ಸಂಗ್ರಹಣ ಕಾರ್ಯವನ್ನು ಎಸಗಬೇಕು.

(ಪ್ರಧಾನ ಗುರುದತ್ತ, ಭಾಷಾಂತರ ಕಲೆ 1989 ಪುಟ102) (ಮೂಲ ಅಚ್ಚಾಗಿಲ್ಲ)

(4) (ವ್ಯಾಕುಲಪೂರ್ಣವಾದ ಸಾಗರದ ನೀರು ಸಮಾಧಾನ ತಂದುಕೊಂಡು
    ಮಲಗಿದೆ, ಅಂತರಿಕ್ಷದ ಕೆಳಗೆ;
ಅಲ್ಲಿ ಗೋಪುರಗಳೂ ನೆರಳುಗಳೂ ಬೆರೆತು ತೂಗುಬಿದ್ದಂತಿವೆ,
    ಅಂತರಿಕ್ಷದಿಂದ;
ಹೆಮ್ಮೆಯಿಂದ ಏರಿರುವ ಗೋಪುರದ ತುದಿಯಿಂದ ಬಗ್ಗಿ ನೋಡುತ್ತಿದೆ
    ಮರಣ, ರಾಕ್ಷಸನ ಹಾಗೆ)

(ಪುಟ 88)

ಇಲ್ಲಿ 'ಸಾಗರದ' 'ಮಲಗಿದೆ' 'ತೂಗುಬಿದ್ದಂತಿವೆ' 'ಏರಿರುವ', ಮುಂತಾದ ಪದಗಳು ಅಗತ್ಯವೆನಿಸಿ, ಅನಿವಾರ್ಯವಾಗಿ ಬಂದಿವೆ. ಆದರೆ ಮೂಲದ 'in the town' ಅನುವಾದದಲ್ಲಿ ಮರೆಯಾಗಿದೆ.

(5) Hast thou not torn the Naiad from her flood.
The Elphin from the green grass. and from me
The summer dream beneath the tamarind tree?

(ಸಾಗರದಿಂದ ನೀನು ನಾಯಡ್‌ಳನ್ನು ಎಳೆದೆಸೆದೆಯಲ್ಲವೇ?
ಹಸುರು ಹುಲ್ಲಿನ ಹಾಸಿನಿಂದ ಎಲ್ಫಿನ್ ಅನ್ನು ಎಳೆದೆಸೆದೆಯಲ್ಲವೇ?
ನಾನು ಹುಣಸೆಮರದಡಿಯಲ್ಲಿ ಗ್ರೀಷ್ಮದ ಕನಸು ಕಾಣುತ್ತಿದ್ದೆ.
ಆ ಕನಸನ್ನೂ ನೀನು ಅಪಹರಿಸಿದೆಯಲ್ಲವೇ?) (ಪುಟ 89)

ಇಲ್ಲಿ flood ಎಂಬ ಶಬ್ದ 'ಸಾಗರ' ಎಂಬ ಮೂರ್ತರೂಪ ತಾಳಿದೆ. ಮೂಲದಲ್ಲಿ ಬಂದ 'Hast thou not torn' ಎಂಬ ಒಂದೇ ಪದಬಂಧ (ಪ್ರಶ್ನಾರ್ಥಕ ವಾಕ್ಯ) 'ಎಳೆದೆಸೆದೆಯಲ್ಲವೇ?' ಎಂದು ಎರಡು ಸಲವೂ, ಅನಂತರ 'ಅಪಹರಿಸಿದೆಯಲ್ಲವೇ?' ಎಂದೂ ಆಗಿದೆ. Dream ಎಂಬ ಶಬ್ದ 'ಕನಸು ಕಾಣುತ್ತಿದ್ದೆ' 'ಆ ಕನಸನ್ನೂ', ಎಂದು ಅನುವಾದವಾಗಿದೆ.

(6) The Founder's dream shall flee.
Age after age shall be
As age after age has been

ಸ್ಥಾಪಕರ ಕನಸುಗಳು ಒಡೆದು ಹಾರುವುವು.
ಯುಗವಾದ ಮೇಲೆ ಯುಗ ಅದರ ಪರಿ ಇದ್ದಂತೆ, ಹಿಂದೆ.
ಯುಗವಾದ ಮೇಲೆ ಯುಗ-ಅಂತೆಯೇ ಇರುವುದದು ಮುಂದೆ
ಪುಟ (158)

ಇಲ್ಲಿ flee ಎಂಬ ಶಬ್ದ 'ಒಡೆದು ಹಾರುವುವು' ಎಂದಾಗಿದೆ. shall be ಎಂಬುದು 'ಅದರ ಪರಿ ಇದ್ದಂತೆ, ಹಿಂದೆ.' ಎಂದಾದರೆ As ... has been ಎಂಬ ಮಾತು 'ಅಂತೆಯೆ ಇರುವುದದು ಮುಂದೆ' ಎಂದಾಗಿದೆ.

(7) Once we had marvelled country-wise.
My friend, you know that light was brief.
Mile after mile the cities-wise
Where brisk Adonis tied the sheaf.

(ನೇಹಿಗ; ಒಂದಾನೊಂದು ಕಾಲದಲ್ಲಿ ನಾವು ಹಳ್ಳಿಗರಾಗಿ
ಎಲ್ಲವನ್ನೂ ನೋಡಿ ಆಶ್ಚರ್ಯಪಟ್ಟಿದ್ದೆವು.
ಆ ಬೆಳಕು ಬಹು ಬೇಗ ನಷ್ಟವಾಯಿತು. ಅದನ್ನು ನೀನು ಬಲ್ಲೆ.
ಹಿಂದೆ ಅಡೋನಿಸ್ ಚಟ್ಚರದಿಂ ತೆನೆಗಳನ್ನು ಕಟ್ಟುತ್ತಿದ್ದ ಕಡೆ
ಈಗ ಮೈಲಿಗಟ್ಟಲೆ ನಗರಗಳು ಏಳುತ್ತಿವೆ.) (ಪುಟ 465)

ಇಲ್ಲಿ marvelled ಶಬ್ದವನ್ನು 'ಎಲ್ಲವನ್ನೂ ನೋಡಿ ಆಶ್ಚರ್ಯಪಟ್ಟೆವು' ಎಂದೂ brief ಶಬ್ದವನ್ನು 'ಬಹುಬೇಗ ನಷ್ಟವಾಯಿತು' ಎಂದೂ ಅನುವಾದ ಮಾಡಿದ್ದಾರೆ. ಅನುವಾದದಲ್ಲಿರುವ 'ಈಗ' ಒಂದು ಶಬ್ದ ಅನಿವಾರ್ಯವಾಗಿ ತರಬೇಕಾಯಿತು. once ಶಬ್ದ 'ಒಂದಾನೊಂದು ಕಾಲದಲ್ಲಿ' ಎಂದಾಗಿದೆ. ಈ ಭಾವಾನುವಾದವೆಂದರೇನು ಎಂಬುದನ್ನು ಸೈದ್ಧಾಂತಿಕವಾಗಿ ಹೀಗೆ ನಿರೂಪಿಸಬಹುದು.

> "ಮೂಲವನ್ನು ಒಂದು ಸಮಗ್ರ ಘಟಕವನ್ನಾಗಿ ಪರಿಗಣಿಸಬೇಕು, ಅಖಂಡವಾಗಿ ಗ್ರಹಿಸಬೇಕು, ಅಖಂಡವಾಗಿ ನಿರೂಪಿಸಬೇಕು. ಭಾವ ಸ್ಪಷ್ಟೀಕರಣದ ದೃಷ್ಟಿಯಿಂದ ಅಗತ್ಯವಾದಲ್ಲಿ ಕ್ರಮವ್ಯತ್ಯಯ ಮಾಡಬಹುದು. ಆದರೆ ಆಲೋಚನಾ ಸರಣಿಗೆ, ವಿಧಾನಕ್ಕೆ ಭಂಗ ಉಂಟಾಗದಂತೆ ನೋಡಿಕೊಳ್ಳಬೇಕು. ಅಗತ್ಯವಾದಲ್ಲಿ ದೀರ್ಘ ವಾಕ್ಯಗಳನ್ನು ತುಂಡರಿಸಬಹುದು, ಸುಲಭವಾಗಿ ಅರ್ಥವಾಗಬಹುದಾದರೆ ಸಣ್ಣ ಸಣ್ಣ ವಾಕ್ಯಗಳನ್ನು ದೊಡ್ಡ ವಾಕ್ಯಗಳಾಗಿ ಬೆಸೆಯಬಹುದು".
>
> (ಭಾಷಾಂತರ ಕಲೆ-ಪುಟ 91)
>
> "ಮೂಲವನ್ನು ಸರಳವೂ, ವಿರಳವೂ, ಮಾಡುವುದರ ಜೊತೆಗೆ ಮೂಲದಲ್ಲಿ ಯಾವುದನ್ನೂ ಬಿಡದೆ ಎಲ್ಲ ವಿವರಗಳನ್ನೂ, ಸಾಮಾನ್ಯ ಅರ್ಥವನ್ನೂ, ಸಮಸ್ತ ಭಾವವನ್ನೂ ಆದ್ಯಂತವಾಗಿ ಪ್ರತಿಬಿಂಬಿಸಬೇಕು. ಇದರಲ್ಲಿ ಸಮಗ್ರತೆಗೆ ಅವಕಾಶವಿದೆ. ಮೂಲದ ಹೃದಯವನ್ನು ಹಿಡಿಯುವ ಕಾರ್ಯವಾಗಿದೆ.
>
> ......................................
>
> ಭಾವಾನುವಾದದಲ್ಲಿ ಅಗತ್ಯ ಬಿದ್ದರೆ ಮೂಲದ ಭಾವನೆಯನ್ನು ವಿಸ್ತರಿಸಲು ಅವಕಾಶವಿದೆ. ಎಲ್ಲ ವಿವರಗಳನ್ನೂ ಚಾಚೂ ತಪ್ಪದೆ ಹೇಳಬೇಕಾಗುತ್ತದೆ."
>
> (ಭಾಷಾಂತರ ಪ್ರವೇಶಿಕೆ-ಪುಟ 44 ಮತ್ತು 50)

ಮೂರ್ತಿರಾಯರು ಅನುವಾದದ ಮಿತಿಗಳನ್ನು ಔಚಿತ್ಯ, ಅನಿವಾರ್ಯತೆಗಳನ್ನೂ ಸೂಕ್ಷ್ಮವಾಗಿ ಗಮನಿಸಿದ್ದಾರೆ. ಬಹಳ ಮುಖ್ಯವಾಗಿ ಮೂಲದ ಉದ್ಧೃತ ಭಾಗ ಏತಕ್ಕಾಗಿ ಎಂಬುವುದೂ ಅವರಿಗೆ ಚೆನ್ನಾಗಿ ಗೊತ್ತು. ಹೀಗಾಗಿ ಎಲ್ಲೆಲ್ಲಿ ಅನುವಾದ ಮಾಡಬೇಕು, ಎಲ್ಲೆಲ್ಲಿ ಅನುವಾದದ ಅಗತ್ಯವೇ ಇಲ್ಲ ಎಂಬ ಅಂಶವನ್ನು ಚೆನ್ನಾಗಿ ಮನಗಂಡವರು. ಇಲ್ಲಿ ಶಬ್ದ ಅಥವಾ ಉದ್ಧೃತ ಭಾಗಗಳು ಯಾವ ಹಿನ್ನೆಲೆಯಿಂದ ದಾಖಲಿಸಲಾಗಿದೆ ಎಂಬುದನ್ನು ತಿಳಿದುಕೊಂಡವರು. ಹೀಗಾಗಿ ಅನುವಾದವನ್ನೇ ಮಾಡದೆ, ಮೂಲವನ್ನೇ ಉಳಿಸಿಕೊಂಡಿರುವುದೂ ಇದೆ. ಕೆಲವನ್ನು ಹೀಗೆ ನಮೂದಿಸಬಹುದು.

(ಅ) ಕೃತಿಗಳ ಶೀರ್ಷಿಕೆಗಳನ್ನು ಮೂಲದಲ್ಲಿಯೇ ನೀಡಿದ್ದಾರೆ. ಸಾಮಾನ್ಯವಾಗಿ ಅನುವಾದಿಸಲು ಸಾಧ್ಯವಿರುವ ಕಡೆಯೂ ಅನುವಾದ ಮಾಡದೆ ಮೂಲ ಶೀರ್ಷಿಕೆಗಳನ್ನೇ ನೀಡಿದ್ದಾರೆ (ವಾಲ್ಟ್ ವಿಟ್‌ಮನ್‌ನ Leaves of Grass ಎಂಬ ಕೃತಿಯನ್ನು ಡಾ. ಎಂ. ಗೋಪಾಲಕೃಷ್ಣ ಅಡಿಗರು 'ಹುಲ್ಲಿನ ದಳಗಳು' ಎಂದು ಅನುವಾದಿಸಿದ್ದಾರೆ. ಡಿ. ವಿ.ಜಿ. ಯವರು ವಿಟ್ಟಿಯರ್ ಕವಿಯ My soul and I ಎಂಬ ಕವಿತೆಯನ್ನು 'ಜೀವಗೀತೆ' ಎಂದೂ, ವಾಲ್ಟ್ ವಿಟ್‌ಮನ್‌ನ The song of Myself ಎಂಬ ಕವಿತೆಯನ್ನು 'ಆತ್ಮಗೀತೆ' ಎಂದೂ ಭಾಗಶಃ ಅನುವಾದಿಸಿದ್ದಾರೆ. (ವಸಂತಕುಸುಮಾಂಜಲಿ

ಪುಟ 9–20) Leaves of Grass, The song of Myself ಎಂಬ ಶೀರ್ಷಿಕೆಗಳನ್ನು (166, 167, 168, 171) ಹಾಗೆಯೇ ಉಲ್ಲೇಖಿಸಿದ್ದಾರೆ. Moby Dick ಮಾರ್ಕ್‌ಟ್ವೈಯ್ನ್‌ನ ಕೃತಿಗಳ ಹೆಸರುಗಳು (200) ಇವೆಲ್ಲದರಲ್ಲೂ ಮೂಲವನ್ನೇ ಉಳಿಸಿ ಕೊಂಡಿದ್ದಾರೆ.

(ಆ) Emblem, symbol, moral, analogy, type, image –ಇವು ಹಾಥಾರ್ನ್‌ಗೆ ಬಹು ಪ್ರಿಯವಾದ ಪದಗಳು (130)

ವಿಟ್‌ಮನ್ copious, orbic ಮುಂತಾದ ಕೆಲವು ಪದಗಳನ್ನು ಮಿತಿಮೀರಿ ಉಪಯೋಗಿಸುತ್ತಾನೆ. (seminal ಎಂಬ ಪದವನ್ನು ಉಪಯೋಗಿಸಬೇಕಾದ ಕಡೆ, semetic ಎಂಬ ಪದವನ್ನು ಉಪಯೋಗಿಸಿದ್ದಾನೆ. )

(ಇ) ಮೂಲ ಇಂಗ್ಲೀಷ್ ಶಬ್ದಗಳನ್ನು ಅರ್ಥದ ದೃಷ್ಟಿಯಿಂದ ಅನುವಾದ ಮಾಡಬಾರದೆಂದಾದಲ್ಲಿ, ಮೂಲ ಇಂಗ್ಲೀಷ್ ಶಬ್ದಗಳೇ ಸಂದರ್ಭದ ದೃಷ್ಟಿಯಿಂದ ಅನಿವಾರ್ಯ ಅಗತ್ಯವೆನಿಸಿದಲ್ಲಿ ಅನುವಾದ ಮಾಡದೆ ಮೂಲ ಶಬ್ದಗಳನ್ನೇ ಉಳಿಸಿಕೊಂಡಿದ್ದಾರೆ.

(1) ಇಲ್ಲಿರುವ 'ಮ್ಯಾಲ್‌ಪ್ರಾಪಿಸ್ಮ್'ಅನ್ನು ಅನುವಾದ ಮಾಡಲಾಗುವುದಿಲ್ಲ. ಈ ವಾಕ್ಯಗಳ ಒಟ್ಟು ಅರ್ಥ :"ಹಿಂದಿನ ಕಾಲದ ಹುಡುಗಿಯರು ಗಣಿತ, ಹೊಳೆಗಳು, ಅಳಿವೆಗಳು ಇತ್ಯಾದಿಗಳನ್ನು ತಿಳಿದಿದ್ದರೆ ಸಾಕಾಗಿತ್ತು. ಈಗ ಬಾಟನಿ, ಆಲ್ಜಿಬ್ರ, ಇತ್ಯಾದಿಗಳನ್ನೂ ತಿಳಿದುಕೊಳ್ಳಬೇಕು.. ಮಿಸೆಸ್ ಪಾರ್ಟಿಂಗ್‌ಟನ್‌ಳು Subtractionಗೆ ಬದಲಾಗಿ distraction; division ಗೆ ಬದಲಾಗಿ Provision; denominatorಗೆ ಬದಲಾಗಿ denunciator; esturies ಗೆ ಬದಲಾಗಿ obituaries; empires ಗೆ ಬದಲಾಗಿ umpires; botony ಗೆ ಬದಲಾಗಿ bottomy; algebra ಗೆ ಬದಲಾಗಿ algebery; obtuse ಗೆ ಬದಲಾಗಿ abstruce ಹೀಗೆ ತಪ್ಪು ತಪ್ಪಾಗಿ ಪದಗಳನ್ನು ಉಪಯೋಗಿಸುತ್ತಾರೆ.

(ಅಡಿ ಟಿಪ್ಪಣಿ ಪುಟ 214 )

(2) The wings of the Dove ಎಂಬ ಕೃತಿಯಿಂದ ತೆಗೆದ ಈ ವಾಕ್ಯವನ್ನು ನೋಡಿ. ಇಲ್ಲಿ ವಾಕ್ಯದ ಬಂಧ ಮಾತ್ರ ನಮಗೆ ಪ್ರಕೃತವಾದದ್ದು. ಆದ್ದರಿಂದ ಇದನ್ನು ಭಾಷಾಂತರಿಸಿಲ್ಲ- ಅನು

(ಅಡಿ ಟಿಪ್ಪಣಿ ಪುಟ 309)

It was wonderful for Milly how just to put
it so made all its pieces fall at present
quite properly into places.

(3) So, then I said I would begin again. I would not know
what I knew about everything what I knew about anything.
ಈ ವಾಕ್ಯದ ಬಂಧ ಮಾತ್ರ ಗಮನಿಸಬೇಕಾದದ್ದು. ಆದ್ದರಿಂದ ಅದನ್ನು ಭಾಷಾಂತರಿಸಿಲ್ಲ- ಅನು

(ಪುಟ 325)

(4) ಅದು ಹುಟ್ಟಿದ್ದು "Wine, women and song" ನಿಂದ ಅಲ್ಲ, booze, brothel and blues ನಿಂದ.

(ಪುಟ 339)

(5) ಕನ್ನಡ ಹಾಗೂ ಸಂಸ್ಕೃತ ನುಡಿಗಟ್ಟುಗಳ ಬಳಕೆ ಈ ಅನುವಾದದಲ್ಲಿ ಅಲ್ಲಲ್ಲಿ ಉಪಯೋಗಿಸಲಾಗಿದೆ.

ನೀನೇ ಎನ್ನುವವರಿಲ್ಲದ (21). ಕಿಷ್ಕಿಂಧೆಯಲ್ಲಿ (34). ಚಕ್ರಧೀಮನ ಕೋಟೆ (35). ಸೆರಗು ಕಟ್ಟಿಕೊಂಡು (75). ಚಕ್ರನೇಮಿಕ್ರಮ (116). ಧೂಪಹಾಕಿ (217).

(6) ಮೂರ್ತಿರಾಯರು ಅಲ್ಲಲ್ಲಿ ಉಪಯೋಗಿಸಿದ ಸಂಸ್ಕೃತ ಶಬ್ದಗಳು ಅರ್ಥ ಮಾಡಿಕೊಳ್ಳಲು ಕ್ಲಿಷ್ಟವೆನಿಸಿವೆ. ಇವುಗಳಿಗೆ ಬದಲು ಸರಳ ಶಬ್ದಗಳನ್ನು ಉಪಯೋಗಿಸ ಬಹುದಿತ್ತು.

ಅದ್ವಿತೀಯತೆ (2). ಶ್ರೀಮದ್ಗಾಂಭೀರ್ಯ (15). ಅಮಿಶ್ರಿತ (17). ನಾದ ಗಾಂಭೀರ್ಯ (28). ನಾದವೈಭವಯುಕ್ತ (49). ಧಾತ್ರೀಯು(100). ನಾರಕೀಯದ್ವೈತ್ಯ (103). ಮಾನವ ಪ್ರೇಮೋತ್ಕರ್ಷ, ಪಾನದಮನ, ಪೂರ್ಣೋನ್ನತಿ (108). ಸ್ಪರ್ಶಮಣಿ (128) ಪದ್ಮರಾಗ ದೃಷ್ಟ (152). ಅನವಧ್ಯ(192). ಘಟನಾಪೂರ್ಣ (239). ಅಕೃತಕ (239). ಸದ್ಗುಣಪಟು (290), ಸ್ವೀಯತ (323) ಅಸ್ವಾತ್ಮಕ (442).

(7) ಹಾಗೆಂದು ಮೂರ್ತಿರಾಯರು ದೇಶ್ಯ ಶಬ್ದಗಳನ್ನು ಉಪಯೋಗಿಸಿಲ್ಲ ವೆಂದಲ್ಲ. ಅವರು ಸಮಯೋಚಿತವಾಗಿ ಉಪಯೋಗಿಸಿರುವ ದೇಶ್ಯ ಶಬ್ದಗಳು ಅವರ ಭಾಷಾ ಪ್ರಭುತ್ವಕ್ಕೆ ನಿದರ್ಶನವೆನಿಸಿದೆ.

ಬರಬರಕಲಾಗಿತ್ತು (21). ಮಾಕರಿಸು (72). ಹೊರವಾಗಿ (113). ಹಕ್ಕಿಗುಂಡು (115). ಹೋಳಿಯೂಟ(128). ಗದ್ದಕಟ್ಟು (129). ಹುಚ್ಚುಬೆಪ್ಪಗಳ (147). ನಡೆಮುಡಿ (162). ಅರೆಬೇಗಲು (201).ಹಸಲಿ (249). ಎಗ್ಗಪೆಗ್ಗಾದ (326). ನಾಲ್ಕಾಲೋಟ (327). ಎಗ್ಗುಸಿಗ್ಗಾದ (371). ನಾಲ್ಕ್ಮಟ (395). ರಂಕರಾಟಣೆ.

(8) ಅನಿವಾರ್ಯವೆನಿಸಿದ ಸಂದರ್ಭಗಳಲ್ಲಿ ಇಂಗ್ಲೀಷ್ ಶಬ್ದಗಳನ್ನೇ ಕನ್ನಡದಲ್ಲಿ ಬರೆದಿದ್ದಾರೆ. ಅವುಗಳಿಗೆ ಪರ್ಯಾಯವಾಗಿ ಕನ್ನಡ ಶಬ್ದಗಳನ್ನು ತರುವ ಕೃತಕ ಪ್ರಯತ್ನವನ್ನು ಅವರು ಮಾಡಲಿಲ್ಲ. ಇದು ಆ ವಾಕ್ಯದ ಭಾವವನ್ನು ಪೂರ್ಣವಾಗಿ ಪ್ರತಿಬಿಂಬಿಸುವಲ್ಲಿ ಅತ್ಯಂತ ಸಹಕಾರಿಯಾಗಿದೆ.

ಫ್ಯಾಷನ್ (1). ಕಾಲ್ವಿನಿಸ್ಟ್ (calvinisim) (8). ವೈಟ್‌ಜಾಕೆಟ್ (White jacket) (11). in (inn) (21). ಡೆಮಾಕ್ರಸಿ (160). ಕ್ವೇಕರ್ ಮನೋವೃತ್ತಿ (165). ನೇಟೀವ್ (182). (ಮೆಯ್ನ್) (186). ಎಂಟ್ರೋಫಿ (entrophy) (319), ಆರ್ಕಿಟೈಪ್ (archetype) (448).

(9) ಮೂರ್ತಿರಾಯರು ಅನಿವಾರ್ಯವೆನಿಸಿದಲ್ಲಿ ಅಡಿ ಟಿಪ್ಪಣಿಯನ್ನು ನೀಡಿ ಕಿರು ವಿವರಣೆ ನೀಡಿದ್ದಾರೆ.

1. ಆರ್ಟೆಮಸ್‌ವಾರ್ಡ್ ಬೇಕು ಬೇಕಾಗಿ ಉಪಯೋಗಿಸುವ ತಪ್ಪು ಕಾಗುಣಿತವನ್ನು ಗಮನಿಸಿ. (ಅನುವಾದಕ 207)

2 ಇಲ್ಲಿ ವಾಕ್ಯದ ಬಂಧ ಮಾತ್ರ ಪ್ರಕೃತವಾದದ್ದು. ಅದ್ದರಿಂದ ಅದನ್ನು ಭಾಷಾಂತರಿಸಿಲ್ಲ. (ಅನುವಾದಕ 309)

(10) ವೀರಾಭಿಮಾನ (3), ಅಮಿಶ್ರಿತ (17), ಪ್ರತಿಷ್ಠಾಪೂಜಕ (71), ಪಂಡು (81), ತನನನಪದ (doggerel) (86), ಕಂಪಿತಸರ (94), ಸಂದರ್ಭಸಾಕ್ಷ್ಯ (circumstantial evidence) (126), ವಿಶ್ವಾತೀತವಾದಿ (Transcendentalist) (130), suggestiveness (ವ್ಯಂಗ್ಯತೆ )(167), ತಾರಾಮೌನ (167); ಅನುರೂಪತೆ (symmetry) (171), ಕವಿರುಕಡ್ಡಿ (181), ವಿಶ್ವನಾಗರಿಕ (cosmopolitan) (189), ಹಿಡಿತ (economy) (324), ಹರದ (324) ಹೊಳಿಮಿಂಚು (334), ಅಪಮೇಳ (416)

ಮುಂತಾದ ಶಬ್ದಗಳು ಹಾಗೂ ಅನುವಾದ ಕ್ರಮ ಮೂರ್ತಿರಾಯರನ್ನು ಒಬ್ಬ ಸಮರ್ಥ ಅನುವಾದಕರ ಸಾಲಿಗೆ ಸೇರಿಸುತ್ತದೆ. "ಇಂಗ್ಲೀಷ್ ಕನ್ನಡಗಳಲ್ಲಿ ಪ್ರಕಾಂಡ ಪಾಂಡಿತ್ಯ" ಎಂಬ ಪ್ರಭುಶಂಕರ್ ಅವರ ಮಾತು "ಸೊಗಸಾಗಿ ಓದಿಸಿಕೊಂಡು ಮನದಲ್ಲುಳಿಯುವ ಅವರ ಇಂಗ್ಲೀಷ್ ಅನುವಾದಗಳು" ಎಂಬ ಚಿರಂಜೀವಿ ಅವರ ಮಾತು ಸಮರ್ಥನೀಯ. ಅದರೆ ಕಾವ್ಯ ಭಾಗಗಳ ಅನುವಾದಗಳಲ್ಲಿ ಕಾವ್ಯಾತ್ಮಕವಾದ ಗೇಯತೆಯಿಲ್ಲ. ಇದಕ್ಕೆ ಮುಖ್ಯಕಾರಣ ಮೂರ್ತಿರಾಯರು ಗದ್ಯ ಲೇಖಕರೇ ಹೊರತು ಪದ್ಯ ಲೇಖಕರಲ್ಲ.

## 7.8 ಒಡತಿಗೆ ಒಕ್ಕಲಗಿತ್ತಿಯ ವೇಷ

1. ಮೂರ್ತಿರಾಯರ ಕೃತಿಗಳಲ್ಲಿ ಎಲ್ಲಿಯೂ ಉಲ್ಲೇಖಿಸದ ಕೃತಿ ಇದು. ಬೆಂಗಳೂರಿನ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದವರು ಪ್ರಕಟಿಸಿದ ಮೂರ್ತಿರಾಯರ ಸಮಗ್ರ ಪ್ರಬಂಧಗಳು ಸಂಪುಟದಲ್ಲಿ ನೀಡಲಾಗಿರುವ ಕೃತಿಗಳ ಪಟ್ಟಿಯಲ್ಲಿಯೂ ಇದರ ಉಲ್ಲೇಖವಿಲ್ಲ. ಮಳಲಿ ವಸಂತಕುಮಾರ್‌ರವರು ಮೂರ್ತಿರಾಯರನ್ನು ಕುರಿತು ಬರೆದಿರುವ ಕಿರುಪುಸ್ತಿಕೆಯಲ್ಲಿಯೂ ಇದನ್ನು ಉಲ್ಲೇಖಿಸಿರುವುದಿಲ್ಲ. 'ಗ್ರಂಥಲೋಕ' (01.03.1984) ಇದನ್ನು ಕುರಿತು ಉಲ್ಲೇಖಿಸಿರುವುದಿಲ್ಲ. ಮೂರ್ತಿರಾಯರನ್ನು ಕುರಿತು ಲೇಖನಗಳನ್ನು ಬರೆದ ಪ್ರಭುಶಂಕರ (ಪ್ರಜಾವಾಣಿ – ಸಾಪ್ತಾಹಿಕ ಪುರವಣಿ 18.3.1984) ಎಸ್. ದಿವಾಕರ (ಸುಧಾ – 26.02.1984 ಪುಟ12–13) ಮುಂತಾದವರೂ ಇದನ್ನು ಗುರುತಿಸಿರುವುದಿಲ್ಲ.

2. ಇದೊಂದು ರಷ್ಯನ್ ಕಥೆಯ ಅನುವಾದ. ಕಥಾ ಸಾರಾಂಶ ಹೀಗಿದೆ:

ಪ್ರಿಲ್ಯುಕಿನೋ ಎಂಬ ಹಳ್ಳಿಯಲ್ಲಿ ಇವಾನ್ ಪೆಟ್ರೊವಿಚ್ ಬೆರೆಸ್ಟೊ, ಎಂಬ ಶ್ರೀಮಂತ ನಿರುತ್ತಾನೆ. ಅವನಿಗೊಬ್ಬನೇ ಒಬ್ಬ ಮಗ ಅಲೆಕ್ಸಿ. ಇವನು ತರುಣ,

ಅವಿವಾಹಿತ, ವಿದ್ಯಾವಂತ. ಅದೇ ಹಳ್ಳಿಯಲ್ಲಿ ಗ್ರಿಗೋರಿ ಇವಾನೋವಿಚ್ ಮುರೋಮ್ಸ್ಕಿ ಬೆರೆಸ್ಟೋವನ ಪ್ರತಿಸ್ಪರ್ಧಿ. ಇಬ್ಬರಿಗೂ ಪರಸ್ಪರ ದ್ವೇಷ. ಗ್ರಿಗೋರಿಯ ಒಬ್ಬಳೇ ಮಗಳು ಲೀಸಾ. ಅವಳಿಗೆ ಮತ್ತೊಂದು ಹೆಸರು ಬೆಟ್ಸಿ. ಬೆಟ್ಸಿಯ ಸೇವಕಿ ನಾಸ್ತ್ಯ, ಉಪಾಧ್ಯಾಯಿನಿ ಮಿಸ್ ಜಾಕ್ಸನ್.

ಒಂದು ದಿನ ನಾಸ್ತ್ಯ ಅಲೆಕ್ಸಿಯ ಮನೆಗೆ ಹೋಗಿ ಬಂದವಳು ಅವನ ರೂಪ ಗುಣಗಳನ್ನು ವರ್ಣಿಸುತ್ತಾಳೆ. ಅದನ್ನು ಕೇಳಿದ ಲೀಸಾಳಿಗೆ ಅವನನ್ನು ನೋಡುವ ಕುತೂಹಲವುಂಟಾಗುತ್ತದೆ. ಆದರೆ ಮನೆತನದ ದ್ವೇಷ ಅಡ್ಡಬರುತ್ತದೆ. ಆಗ ಲೀಸಾ ಒಕ್ಕಲಗಿತ್ತಿಯ ವೇಷ ಧರಿಸಿ ಅಲೆಕ್ಸಿಯನ್ನು ಭೇಟಿಯಾಗುತ್ತಾಳೆ. ಇಬ್ಬರ ನಡುವೆ ಪ್ರೇಮಾಂಕುರವಾಗಿ, ಒಂದು ಮರದ ಪೊಟರೆ ಪ್ರೇಮ ಪತ್ರಗಳ ವಿನಿಮಯದ ಸ್ಥಾನವಾಗುತ್ತದೆ. ಲೀಸಾ ತನ್ನ ನಿಜವಾದ ಪರಿಚಯ ಹೇಳುವುದಿಲ್ಲ. ಒಂದು ದಿನ ಗ್ರಿಗೋರಿ ಕುದುರೆಯ ಮೇಲೆ ಹೋಗುತ್ತಿದ್ದಾಗ ಕೆಳಗೆ ಬೀಳುತ್ತಾನೆ. ಅದೇ ಹೊತ್ತಿಗೆ ಅಲ್ಲಿಗೆ ಬಂದ ಬೆರೆಸ್ಟೊ ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಉಪಚರಿಸಿ ಬೀಳ್ಕೊಡುತ್ತಾನೆ. ಗ್ರಿಗೊರಿ ಕೃತಜ್ಞತೆಯಿಂದ ಬೆರೆಸ್ಟೊ ಮತ್ತು ಅಲೆಕ್ಸಿಯನ್ನು ತನ್ನ ಮನೆಗೆ ಕರೆಯುತ್ತಾನೆ. ಇಬ್ಬರೂ ಒಪ್ಪಿಕೊಳ್ಳುತ್ತಾರೆ.

ವಿಚಾರ ತಿಳಿದ ಲೀಸಾ ಗುಟ್ಟು ಬಯಲಾದೀತೆಂದು ಹೆದರಿ ಅತ್ಯಂತ ವಿಕಾರ ರೂಪದಿಂದ ಕಾಣಿಸಿಕೊಳ್ಳುತ್ತಾಳೆ. ಅಲೆಕ್ಸಿಗೆ ಅವಳ ಗುರುತು ಹತ್ತುವುದಿಲ್ಲ. ಬೆರೆಸ್ಟೋ ಅವಳನ್ನೇ ತನ್ನ ಮಗನಿಗೆ ತಂದುಕೊಳ್ಳುವುದಾಗಿ ಮಾತುಕೊಡುತ್ತಾನೆ.

ಅಲೆಕ್ಸಿಗೆ ತುಂಬಾ ಬೇಸರವಾಗಿ ಪತ್ರವೊಂದನ್ನು ಬರೆದು ಮರದ ಪೊಟರೆಯಲ್ಲಿಡುತ್ತಾನೆ. ಒಂದು ದಿನ ಲೀಸಾಳನ್ನೇ ಕಂಡು ತನ್ನ ಪ್ರೇಮಪ್ರಕರಣವನ್ನು ತಿಳಿಸಿ, ತನ್ನನ್ನು ನಿರಾಕರಿಸುವಂತೆ ಹೇಳಲು ಅವಳ ಮನೆಗೆ ಬರುತ್ತಾನೆ. ಮನೆಯಲ್ಲಿ ಲೀಸಾಳ ಹೊರತು ಬೇರಾರೂ ಇರುವುದಿಲ್ಲ. ಲೀಸಾಳನ್ನು ಕಂಡೊಡನೆ ಅಲೆಕ್ಸಿಗೆ ಆಶ್ಚರ್ಯವಾಗುತ್ತದೆ. ಅವಳ ಕೈಯ್ಯಲ್ಲಿದ್ದ ತನ್ನ ಪತ್ರ ಕಂಡ ತಕ್ಷಣ ಅವನ ಸಂಶಯವೂ ದೂರವಾಗುತ್ತದೆ.

3. ಈ ಪುಸ್ತಕ ಯಾವ ವರ್ಷದಲ್ಲಿ ಅವರು ಅನುವಾದಿಸಿದರೆಂದು ತಿಳಿಯುವುದಿಲ್ಲ. ಏಕೆಂದರೆ ಪುಸ್ತಕದಲ್ಲಿ ಎಲ್ಲಿಯೂ ಪುಸ್ತಕ ಪ್ರಕಟವಾದ ಇಸವಿಯಿಲ್ಲ. ಮೂರ್ತಿರಾಯರ ಕಾಲಕ್ಕೆ ರಷಿಯನ್ ಸಾಹಿತ್ಯದ ಕನ್ನಡಾನುವಾದ ರೂಢಿಯಲ್ಲಿರಲಿಲ್ಲ. ನವೋದಯ ಕಾಲದ ಲೇಖಕರಲ್ಲಿ ಇಂಗ್ಲೆಂಡಿನ ಸಾಹಿತ್ಯ ಕೃತಿಗಳನ್ನು ಬಿಟ್ಟು ಅಮೇರಿಕಾ, ರಷ್ಯಾ, ಫ್ರೆಂಚ್ ದೇಶ ಭಾಷಾಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದವರಲ್ಲಿ ಮೊದಲಿಗರೆಂದರೆ ಮೂರ್ತಿರಾಯರು. ರಷಿಯಾದ ಸಾಹಿತ್ಯ ಕೃತಿಗಳು, ಲೆನಿನ್ ಮುಂತಾದವರ ಕೃತಿಗಳು ಕನ್ನಡದಲ್ಲಿ ಬರಲಾರಂಭಿಸಿದ್ದು ತೀರಾ ಇತ್ತೀಚೆಗಷ್ಟೆ. ಮೂರ್ತಿರಾಯರ ವ್ಯಾಪಕ ದೃಷ್ಟಿ, ಹಾಗೂ ವಿಭಿನ್ನ ಆಲೋಚನಾ ವಿಧಾನಕ್ಕೆ ಈ ಕೃತಿ ಒಂದು ಸುಂದರ ಸಾಕ್ಷಿ. ಆ ಕಾಲಕ್ಕಾಗಲೇ ಮೂರ್ತಿರಾಯರು ರಷಿಯನ್ ಸಾಹಿತ್ಯ ಕೃತಿಗಳನ್ನು ಓದಿ ಕನ್ನಡಕ್ಕೆ ಅನುವಾದಿಸಿದರೆಂಬುದು ಅವರ ಪ್ರಗತಿಪರ ನಿಲುವಿಗೆ ನಿದರ್ಶನ.

4. ಮೂರ್ತಿರಾಯರು ಇಂಗ್ಲೀಷ್ ಅನುವಾದವನ್ನು ಓದಿ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಆದ್ದರಿಂದ ಕೆಲವು ಇಂಗ್ಲೀಷ್ ಶಬ್ದಗಳನ್ನು ಹಾಗೆಯೇ

ಉಳಿಸಿಕೊಂಡಿದ್ದಾರೆ: ಸೆನೆಟ್, ಬುಲೆಟಿನ್ (2), ಟ್ಯುಟೋರಿಯಲ್ ಕೌನ್ಸಿಲ್ (2), ಟೋಫನ್ (30)

5. ಮೂರ್ತಿರಾಯರ ಅನುವಾದದಲ್ಲಿ ಸಂಸ್ಕೃತ ಶಬ್ದಗಳೂ ಸಹ ಬಂದಿವೆ. ಅಕುಲೀನ (4), ಚೂರ್ಣ (6), ಶ್ಯಾಮಸುಂದರಿ (20), ಅಕ್ಷರದ ಆಕೃತಿಯಂತೆ (30), ಅಕುಟಿಲ ಸ್ನೇಹ (35).

6. ಕೆಲವು ಮೂಲ ಶಬ್ದಗಳನ್ನು ಹಾಗೆಯೇ ಉಳಿಸಿಕೊಂಡಿದ್ದಾರೆ: ಟ್ಯಾಗ್ ಆಡೋಣ (9), ಸರಫಾನ್(11).

7. ದೇಶ್ಯ– ಅನ್ಯದೇಶ್ಯ ಶಬ್ದಗಳನ್ನೂ ಮೂರ್ತಿರಾಯರು ಸಾಕಷ್ಟು ಉಪಯೋಗಿಸಿಕೊಂಡಿದ್ದಾರೆ : ಹಳ್ಳಿಗಮಾರ್ (3), ಅಟಗುಳಿ(9), ಕರಿಯ ಕಣ್ಣಿನ ಹಕ್ಕಿ (27), ಹುಚ್ಚು ಯಂತೆ ಹರಿದರೂ (38)

8. ಚೂರ್ಣ– Powder (6), ಇಲ್ಲಿಯೂ ಪರ್ಯಾಯವಾದ ಒಂದು ಇಂಗ್ಲೀಷ್ ಶಬ್ದವಿದೆ.

9. ಆದರೆ 'ಅಕುಲೀನ', 'ಅಕುಟಿಲ ಸ್ನೇಹ', 'ಸರಫಾನ್', ' ಗಮಾರ್' ಮುಂತಾದ ಸಂಸ್ಕೃತ ಅನ್ಯದೇಶ್ಯ ಶಬ್ದಗಳು ಸುಲಭಗ್ರಾಹ್ಯವಾಗುವುದಿಲ್ಲ.

10. ನಾಳ ಹಚ್ಚಿ (36) ಎಂಬ ಶಬ್ದದ ಅರ್ಥ ಏನೆಂದು ತಕ್ಷಣವೇ ಸ್ಫುರಿಸುವುದಿಲ್ಲ.

11. ಶಾಲಾ ಶಿಕ್ಷಣವನ್ನು ಕ್ರಮಬದ್ಧವಾಗಿ ಪಡೆಯದ ವಯಸ್ಕರಿಗಾಗಿ ಬರೆದ ಈ ಪುಸ್ತಕ ಶಿಶು ಸಾಹಿತ್ಯವೂ ಹೌದು , ನವಸಾಕ್ಷರರಿಗಾಗಿ ಬರೆದ ಕೃತಿಯೂ ಹೌದು. ಈ ಕೃತಿಯಲ್ಲಿ ಬರುವ ಸುದೀರ್ಘ ಮಕ್ಕಳ ಹಾಗೂ ವಯಸ್ಕರ ಮನಸ್ಸನ್ನು ತಿದ್ದುಪಡಿಸ ಬೇಕೆಂಬುದು ಅವರ ಆಶಯ. ಜೊತೆಗೆ ಮೂರ್ತಿರಾಯರಿಗೆ ಅತ್ಯಂತ ಆಪ್ತವಾದ ಗ್ರಾಮೀಣ ಪರಿಸರದ ಒಂದು ವಿವರಣಾತ್ಮಕ ಚಿತ್ರಣವನ್ನು ಅವರು ಸಂಪೂರ್ಣವಾಗಿ ಕನ್ನಡಿಸಿದ್ದಾರೆ.

"ಓದುಗರಾದ ನಿಮ್ಮಲ್ಲಿ ಹಳ್ಳಿಯ ವಾಸದ ಪರಿಚಯವಿಲ್ಲದವರು ಕೆಲವರಿರ ಬಹುದು. ಅಂಥವರಿಗೆ ಹಳ್ಳಿಗಾಡಿನ ಚೆಲುವೆಯರು ಎಂಥ ಮೋಹಿನಿಯರೆಂಬುದು ಅರ್ಥವಾಗುವುದಿಲ್ಲ. ಅವರು ತಮ್ಮ ಸೇಬಿನ ಮರಗಳ ನೆರಳಿನಲ್ಲಿ ಪರಿಶುದ್ಧವಾದ ಗಾಳಿಯನ್ನು ಸೇವಿಸಿ ಬೆಳೆದವರು. ಅವರಿಗೆ ಪ್ರಪಂಚದ ಮತ್ತು ಜೀವನದ ತಿಳುವಳಿಕೆ ಯೇನಿದ್ದರೂ ಪುಸ್ತಕಗಳಿಂದಲೇ ದೊರಕಬೇಕು. ಜನಸಂಪರ್ಕವಿಲ್ಲದ ಅವರಣ, ಸ್ವಾತಂತ್ರ್ಯ, ಓದು – ಇವುಗಳಿಂದ ಅವರ ಮನಸ್ಸಿನಲ್ಲಿ ಪಟ್ಟಣದ ಚೆಲುವೆಯರು ಕಂಡರಿಯದ ಭಾವನೆಗಳು ಇನ್ನೂ ಚಿಕ್ಕವಯಸ್ಸಿನಲ್ಲೇ ಬೆಳೆಯುತ್ತವೆ. ಈ ಹಳ್ಳಿಗಾಡಿನ ಯುವತಿಯರಿಗೆ ಕುದುರೆಯ ಗಂಟೆಯ ಶಬ್ದ ಕೇಳಿದರೆ ಅದೇ ಹೆಚ್ಚುಗಾರಿಕೆಯ ವಿಷಯ. ಹತ್ತಿರದ ಪಟ್ಟಣವೊಂದಕ್ಕೆ ಹೋದರೆ ಅದು ಅವರ ಜೀವನದಲ್ಲಿ ಹೊಸಯುಗ ಪ್ರಾರಂಭವಾದಂತೆ. ಯಾರಾದರೂ ಅತಿಥಿಗಳು ಬಂದು ಹೋದರೆ ಅದರ ನೆನಪು ಬಹುಕಾಲ, ಕೆಲವು ವೇಳೆ ಅವರ ಜೀವಮಾನವೆಲ್ಲ ಅಳಿಯದೆ ನಿಲ್ಲುತ್ತದೆ. ಅವರಲ್ಲಿ ಕಾಣುವ ಕೆಲವು ವಿಚಿತ್ರ ವ್ಯಾಪಾರಗಳನ್ನು ನೋಡಿ ಕೆಲವರು ನಗಬಹುದು. ಆದರೆ ಇಂಥ ಅವಿಚಾರಿಗಳ ಹಾಸ್ಯದಿಂದ ಅವರ ಸದ್ಗುಣಗಳಿಗೇನೂ ಕುಂದು ಬರುವುದಿಲ್ಲ.

ಈ ಗುಣಗಳಲ್ಲಿ ಮುಖ್ಯವಾದವೆಂದರೆ ಅವರಲ್ಲಿರುವ ವ್ಯಕ್ತಿತ್ವ. ವ್ಯಕ್ತಿತ್ವವಿಲ್ಲದ ಮನುಷ್ಯನಲ್ಲಿ ದೊಡ್ಡ ನಗರಗಳಲ್ಲಿ ಹೆಂಗಸರಿಗೆ ಒಳ್ಳೆಯ ವಿದ್ಯಾಭ್ಯಾಸ ದೊರೆಯು ಬಹುದೇನೋ. ಆದರೆ ಅವರು ಪ್ರಪಂಚದೊಡನೆ ಬೆರೆತ ಹಾಗೆಲ್ಲಾ ಅವರ ಸ್ವಭಾವವು ನಯವಾಗುತ್ತ ಬಂದು, ಕೊನೆಗೆ ಅವರ ತಲೆಯ ಟೋಪಿಗಳು ಹೇಗೋ ಹಾಗೆಯೇ ಅವರೆಲ್ಲರ ಆತ್ಮಗಳೂ ಒಂದೇ ಅಚ್ಚಿನಲ್ಲಿ ಮಾಡಿದಂತೆ ತೋರುತ್ತವೆ".

(ಪುಟ 4-5)

ಹೀಗೆ ತುಂಡುಬಾಲದ ಕುದುರೆಯ ನೆಗೆದಾಟದ ಪರಿಣಾಮವಾಗಿ ಬಹಳ ಕಾಲದಿಂದ ಬೇರೂರಿ ಬೆಳೆದಿದ್ದ ದ್ವೇಷವು ಕೊನೆಗೊಂಡ ಹಾಗಾಯಿತು. (ಪುಟ 25)

ಕಥೆಯ ಸಮಾಪ್ತಿಯನ್ನು ವರ್ಣಿಸುವುದು ಅನಾವಶ್ಯಕವಷ್ಟೆ" (ಪುಟ 40)

## 7.9 ಅಣ್ಣ ತಂಗಿಯರ ರೋಮಾಂಚಕಾರಿ ಸಾಹಸಗಳು

**ಸುಧೀರ ಮತ್ತು ಶೈಲಳ ಸಾಹಸ**

1. ಮೂರ್ತಿರಾಯರು ಶಿಶು ಸಾಹಿತ್ಯಕ್ಕೆ ನೀಡಿದ ಕೊಡುಗೆ ಗಮನಾರ್ಹ. ಮೂರ್ತಿರಾಯರನ್ನು ಶಿಶು ಸಾಹಿತ್ಯದ ಲೇಖಕರೆಂದು ಗುರುತಿಸದಿರುವುದು ಆಶ್ಚರ್ಯ ಕರವಾದ ವಿಷಯ. ಪ್ರಸ್ತುತ ಕೃತಿ ಮೂರ್ತಿರಾಯರು ಕನ್ನಡ ಶಿಶುಸಾಹಿತ್ಯ ಕ್ಷೇತ್ರಕ್ಕೆ ನೀಡಿದ ವಿಶಿಷ್ಟ ಕೊಡುಗೆ.

2. ಈ ಕೃತಿ ಹಲವು ದೃಷ್ಟಿಗಳಿಂದ ಗಮನಾರ್ಹವೆನಿಸಿದೆ. ಇದೊಂದು ರೂಪಾಂತರ ಕೃತಿ. ಶಿಶು ಸಾಹಿತ್ಯದ ಪ್ರಕಾರಗಳಲ್ಲಿ ಒಂದು ಉತ್ತಮ ಗದ್ಯ ಬರವಣಿಗೆ ಇದು. ಮೂರ್ತಿರಾಯರ ಅಭಿವ್ಯಕ್ತಿಯಲ್ಲಿಯೂ ಒಂದು ವೈಶಿಷ್ಟ್ಯವಿದೆ. ಒಂದು ಗಂಭೀರವಾದ ಕಥಾನಕ ಇದು. ಮಕ್ಕಳಲ್ಲಿ ಕುತೂಹಲವನ್ನು ಕೆರಳಿಸುವ ರೋಚಕವಾದ ಕಥೆ ಇದು. ಒಂದು ರೀತಿಯಲ್ಲಿ ಇದೊಂದು ಪತ್ತೇದಾರಿ ಕೃತಿ. ಕೃತಿಯ ಉದ್ದಕ್ಕೂ ಬರುವ ಘಟನೆಗಳು ಸಭ್ಯತೆ ಹಾಗೂ ಎಲ್ಲೆ ಮೀರದ ಮಿತಿಯಲ್ಲಿಯೇ ಸಾಗಿ ಮುಕ್ತಾಯ ವಾಗುತ್ತವೆ.

ಮೀರಾಪುರದ ಗೋವಿಂದದಾಸನೆಂಬ ಶ್ರೀಮಂತ ಕೇಡಿಗನ ದುರಾಸೆ ಹಾಗೂ ಕಪಟ ಗಳಿಗೆ ಬಲಿಯಾದ ಸುಧೀರ ಹಾಗೂ ಶೈಲ ಎಂಬ ಅಣ್ಣ ತಂಗಿ ಅವನ ಕಪಿಮುಷ್ಟಿಗೆ ಸಿಕ್ಕಿ,ದೇಶಾಂತರಕ್ಕೆ ಹೋಗಿ, ಪುನಃ ಸ್ವಗ್ರಾಮಕ್ಕೆ ಮರಳಿ,ತಂದೆಯೊಂದಿಗೆ ಸೇರುವ ಕಥೆ.

3. ಕಥಾ ಸಾರಾಂಶ : ಮೀರಾಪುರದಲ್ಲಿ ಸರೂಪನೆಂಬುವವನಿದ್ದನು. ಅವನು ಕಾರ್ಯಾಂತರದಿಂದ (ಆಫ್ರಿಕ) ದೂರದೇಶಕ್ಕೆ ಹೋಗಿರುತ್ತಾನೆ. ಅವನ ಇಬ್ಬರು ಮಕ್ಕಳು ಸುಧೀರ ಮತ್ತು ಶೈಲ. ಸುಧೀರ ಒಂದು ಚಿಕ್ಕ ಅಂಗಡಿಯನ್ನು ನಡೆಸುತ್ತಿರುತ್ತಾನೆ. ಶೈಲ ಅವನಿಗೆ ಸಹಾಯ ಮಾಡುತ್ತಿರುತ್ತಾಳೆ.

ಅದೇ ಊರಿನಲ್ಲಿ ಗೋವಿಂದದಾಸನೆಂಬ ಶ್ರೀಮಂತ ಇರುತ್ತಾನೆ. ಅವನಿಗೆ ಸುಧೀರನ ಅಂಗಡಿ ಇರುವ ಜಾಗದ ಮೇಲೆ ಕಣ್ಣು ಬೀಳುತ್ತದೆ. ಆದರೆ ಸುಧೀರ ಒಪ್ಪುವುದಿಲ್ಲ. ಆಗ ಅಲ್ಲಿಯ ಆರೋಗ್ಯ ವಿಚಾರಕ ಸುಧೀರ ಮಾರುವ ಮಿಠಾಯಿಯಿಂದಾಗಿ ರೋಗ ಹರಡುವುದಾಗಿ ಹೇಳಿ ಅಂಗಡಿಯನ್ನು ಮುಚ್ಚುವಂತೆ ಮಾಡುವುದರಲ್ಲಿ ಯಶಸ್ವಿಯಾಗುತ್ತಾನೆ, ಗೋವಿಂದದಾಸ.

ಅಷ್ಟರಲ್ಲಿ ಸುಧೀರನಿಗೊಂದು ಪತ್ರ ಬರುತ್ತದೆ. ಅದು ದೂರದೇಶದಲ್ಲಿರುವ ಅವನ ತಂದೆ ತಾನು ಸದ್ಯ ಬರುವುದಾಗಿ ಬರೆದ ಪತ್ರ. ಓದಲು ಬಾರದ ಸುಧೀರ ಅದನ್ನು ಆ ಊರಿನ ರೈತ ನಾತುವಿನ ಕೈಗೆ ಕೊಟ್ಟು, ಓದಿ ಹೇಳುವಂತೆ ಕೇಳುತ್ತಾನೆ. ನಾತುವೂ ಅನಕ್ಷರಸ್ಥ. ಆದರೆ ತನಗೂ ಓದಲು ಬರುವುದಿಲ್ಲ ಎಂದು ಹೇಳಲು ಅವನಿಗೆ ಸಂಕೋಚವಾಗಿ ಅದು ಪೊಲೀಸರು ಸುಧೀರ ಅಂಗಡಿ ತೆರೆಯಬಾರದೆಂದು ಬರೆದ ಪತ್ರವೆಂದು ಸುಳ್ಳು ಹೇಳುತ್ತಾನೆ. ಹೆದರಿದ ಸುಧೀರ ಶೈಲ ಊರಿನಿಂದ ಓಡಿಹೋಗುತ್ತಾರೆ. ಅವರು ಅಲ್ಲಿಂದ ಅತಾರು ಎಂಬ ಕೆಲಸಗಾರನ ನೆರವಿನಿಂದ ಕರ್ಪೂರ ಎಂಬ ಊರಿಗೆ ಹೋಗಿ ಕೆಲಸ ಮಾಡಿ ಸ್ವಲ್ಪ ಹಣ ಸಂಪಾದಿಸುತ್ತಾರೆ. ಅಲ್ಲಿಂದ ಅವರು ಮದರಾಸಿಗೆ ಬರುತ್ತಾರೆ. ಅಲ್ಲಿ ಬಸ್ ಕಂಡಕ್ಟರ್ ಗಮನಿಸತೊಡಗುತ್ತಾನೆ. ಅಲ್ಲಿ ಪುನಃ ಸುಧೀರ ಗೋವಿಂದದಾಸನ ಕೈಗೆ ಸಿಕ್ಕಿ ಹಾಕಿಕೊಳ್ಳುತ್ತಾನೆ. ಗೋವಿಂದದಾಸನ ಹಲವು ಅಕ್ರಮಗಳು ಸುಧೀರನ ಗಮನಕ್ಕೆ ಬರುತ್ತವೆ. ಆಗ ಸುಧೀರ ಈ ವಿಚಾರವನ್ನು ಪೊಲೀಸರಿಗೆ ಮುಟ್ಟಿಸುತ್ತಾನೆ. ಗೋವಿಂದದಾಸನ ಬಂಧನವಾಗಿ ಸುಧೀರ ಶೈಲರು ಮತ್ತೆ ಊರಿಗೆ ಮರಳಿ ಅಂಗಡಿಯನ್ನು ತೆರೆಯುತ್ತಾರೆ. ಒಂದು ದಿನ ಸರೂಪ ಊರಿಗೆ ಬರುತ್ತಾನೆ. ನಾತು ತನ್ನ ಅಜ್ಞಾನವನ್ನು ಒಪ್ಪಿಕೊಳ್ಳುತ್ತಾನೆ.

4. ಮೂರ್ತಿರಾಯರ ಈ ಆಯ್ಕೆ ಮೆಚ್ಚುವಂತಹುದು. ಏಕೆಂದರೆ ಮಕ್ಕಳ ಮನಸ್ಸನ್ನು ಸೆರೆ ಹಿಡಿಯುವಂತಹ ಘಟನೆಗಳು, ನಾಟಕೀಯ ಸನ್ನಿವೇಶಗಳು, ಇವುಗಳಿಂದ ಕೃತಿ ಆಕರ್ಷಕವಾಗಿದೆ. ಮೂರ್ತಿರಾಯರಿಗೆ ಕೇವಲ ಕತೆ ಹೇಳುವುದಷ್ಟೇ ನಿಮಿತ್ತ ಉದ್ದೇಶವಾಗಿರಲಾರದು. ಇದರ ಮೂಲಕ ಮಕ್ಕಳ ಮನಸ್ಸಿಗೆ ಒಂದು ಸಂಸ್ಕಾರ ನೀಡುವ ಬೋಧಪ್ರದ ಉದ್ದೇಶವೂ ಇದೆ. ಮಕ್ಕಳ ಮನಸ್ಸಿನಲ್ಲಿ ಒಂದು ಸಾಹಸ ಪ್ರವೃತ್ತಿ ಮೊಳೆಯುವಂತೆ ಮಾಡುವುದೂ ಅವರ ಉದ್ದೇಶವಿರುವಂತೆ ತೋರುತ್ತದೆ. ಜೊತೆಗೆ ಮಕ್ಕಳೊಂದಿಗೆ ವ್ಯವಹರಿಸುವಾಗ ಎಂತಹ ಎಚ್ಚರ ಅಗತ್ಯ ಎಂಬುದನ್ನೂ ಅವರು ಬಲ್ಲರು. ಮಕ್ಕಳ ಮುಗ್ಧ ಮನೋಪ್ರಪಂಚದಲ್ಲಿ ಹಿರಿಯರ ಪಾತ್ರ ಎಷ್ಟು ಮಹತ್ವದ್ದು, ಮಕ್ಕಳ ಮನಸ್ಸು ಅದೆಷ್ಟು ಸೂಕ್ಷ್ಮವಾದುದು, ಇಂತಹ ಸುಕೋಮಲ ಮನಸ್ಸಿನ ಮಕ್ಕಳೊಂದಿಗೆ ಹೇಗೆ ವ್ಯವಹರಿಸಬೇಕು - ಎಂಬ ಅಂಶದ ಮೇಲೂ ಅವರು ಬೆಳಕು ಚೆಲ್ಲುತ್ತಾರೆ. ಮೂರ್ತಿರಾಯರ ಮನೋಧರ್ಮದ ಪ್ರತೀಕವೆಂಬಂತೆ, ಇಲ್ಲಿಯೂ ಒಂದು ಪ್ರಸನ್ನಕರವಾದ, ಸಂತೋಷಮಯವಾದ ಗ್ರಾಮೀಣ ಪರಿಸರದ ಹಿನ್ನೆಲೆಯ ಕುಟುಂಬದ ಚಿತ್ರಣವಿದೆ. ಮಕ್ಕಳು ಹಾಗೂ ಕುಟುಂಬ ಮೂರ್ತಿರಾಯರ ಅತ್ಯಂತ ಪ್ರಿಯವಾದ ಕಲ್ಪನೆಗಳು. ಇಲ್ಲಿಯೂ ಅಂತಹ ಕೆಲವು ಚಿತ್ರಣಗಳಿವೆ. ಕೆಲವು ಮಾದರಿಗಳು:

5. ಗೋವಿಂದದಾಸನು ಕೇಡಿಗನೆಂಬುದು ಈಗ ನಿಸ್ಸಂದೇಹವಾಯಿತು. (17)

ಇಷ್ಟು ಹಣಗಾರನೂ, ದುಷ್ಟನೂ, ಶಕ್ತನೂ ಆದ ಶತ್ರುವನ್ನು ಎದುರಿಸಿ ಹೋರಾಡುವುದು ಹೇಗೆ? (17)

ಅವನೇನೂ ನಿರ್ದಯ ಮನುಷ್ಯನಲ್ಲ. ಆದರೆ ಕಾಗದ ಓದಿದ ಹಾಗೆ ನಟಿಸಿ ಸುಳ್ಳು ಹೇಳುವುದರಿಂದ ಆ ಹುಡುಗರ ಮೇಲೆ ಎಂಥ ಪರಿಣಾಮವಾಗುತ್ತದೆ ಎಂಬುದು ಅವನಿಗೆ ತಿಳಿಯದು. (19)

ಅಲ್ಲಿ ಯಾವಾಗಲೂ ಅದೆಷ್ಟು ಜನ ಸ್ನೇಹಿತರಿದ್ದರು. ಎಷ್ಟು ಜನ ದಯಾಳು ಗಿರಾಕಿಗಳು! ಕೆಲವರು ಒಂದೊಂದು ವೇಳೆ ಕೊಂಡ ಸಾಮಾನಿಗೆ ಒಂದು ಪೈಸೆ ಹೆಚ್ಚಾಗಿಯೇ ಕೊಡುತ್ತಿದ್ದರು, ಅಷ್ಟು ಮೃದು ಹೃದಯ ಅವರದ್ದು. ಹಳ್ಳಿಯ ಹೆಂಗಸರು ಮಿಠಾಯಿಯನ್ನು "ಎಷ್ಟು ಚೆನ್ನಾಗಿದೆ!" ಎಂದು ಹೊಗಳುತ್ತಿದ್ದರು. ತಾಯಿ ಕಾಯಿಲೆಯಲ್ಲಿದ್ದಾಗ ಅವಳಿಗೆ ಆರೈಕೆ ಮಾಡಿದರು. ಸಾಮಾನು ಕೊಳ್ಳಲು ಬಂದ ಮಕ್ಕಳು ಅಲ್ಲಿಯೇ ನಿಂತು ಆಟವಾಡುತ್ತಿದ್ದರು, ಇಲ್ಲವೇ ನನ್ನ ಕೆಲಸದಲ್ಲಿ ನೆರವಾಗುತ್ತಿದ್ದರು. ಆ ಕಿಷು ಕೂಡ. ಆ ವೃದ್ಧ ಪೋಲೀಸಿನವನು, ಶಾಂತಿ ಪಾಲಕ, ನ್ಯಾಯವನ್ನು ರಕ್ಷಿಸುವವನು – ಅವನೂ ಸ್ನೇಹಿತನಾಗಿಯೇ ಇದ್ದ. (24)

ನೀನು ನಿನ್ನ ತಂದೆ ತಾಯಿಗಳ ಮನಸ್ಸನ್ನು ನೋಯಿಸಬಾರದು. (35)

ಆ ಗುಡಿಸಲಿನಲ್ಲಿ ಮತ್ತೆ ಎಲ್ಲರೂ ಸುಖವಾಗಿ ಬಾಳಿದರು. ಕಳೆದು ಹೋದ ದುಃಖದ ಕಾಲವನ್ನು ನೆನಪಿಗೆ ತಂದುಕೊಳ್ಳುವುದು ಯಾರಿಗೂ ಬೇಕಿರಲಿಲ್ಲ. ಭವಿಷ್ಯ ಹಿತವಾಗಿ ಕಾಣಿಸುತ್ತಿತ್ತು. ವೀರಾಪುರಕ್ಕೆ ಬಂದ ಸಂತೋಷ, ಸಾಗುವಳಿ ಮಾಡುವುದಕ್ಕೆ ಹೊಸಭೂಮಿ, ಮತ್ತೆ ಭೇಟಿಯಾಗಲು ಹಳೆಯ ಸ್ನೇಹಿತರು, ಎಲ್ಲಕ್ಕಿಂತಲೂ ಹೆಚ್ಚಾಗಿ ಸುಧೀರ, ಶೈಲ ಮತ್ತು ಅವರ ತಂದೆ ಎಲ್ಲರೂ ಆ ಪುಟ್ಟ ಗುಡಿಸಲಿನಲ್ಲಿ ಸೇರಿದ್ದು! ಅವರಿಗಂತೂ, "ಪ್ರಪಂಚದಲ್ಲಿ ಇದರಷ್ಟು ಸುಂದರವಾದ ನೆಮ್ಮದಿಯಾದ ಮನೆ ಇನ್ನೆಲ್ಲಿಯೂ ಇಲ್ಲ" ಎನ್ನಿಸಿತು. (98)

6. ಇನ್ನೊಂದು ರೀತಿಯಲ್ಲಿಯೂ ಈ ರೂಪಾಂತರ ಕೃತಿ ಗಮನಾರ್ಹ. ಇಲ್ಲಿ ಬರುವ ಅಂಕಿತನಾಮಗಳು ಗೋವಿಂದದಾಸ, ಕಿಷು, ಅತ್ತಾರು, ನಾತು, ಮಂಡು, ಸರೂಪ್ ನಮಗೆ ಮರಾಠೀ ಬಂಗಾಳಿ ಕೃತಿಗಳನ್ನು ನೆನಪಿಸುತ್ತವೆ. ರಜಾರಜಿ (71), ಇಸಮು (81), ಗಡಂಗು (88) ಮುಂತಾದ ಶಬ್ದಗಳೂ ಸಹ ಮೂರ್ತಿರಾಯರು ಓದಿರಬಹುದಾದ ಮರಾಠೀ ಕೃತಿಗಳ ಪ್ರಭಾವವನ್ನು ಸೂಚಿಸುತ್ತವೆ.

7. ಕೆಲವು ಶಬ್ದಗಳು ಗಮನಾರ್ಹ–ಆಡುನುಡಿಗಳು:

ಕೃತ್ರಿಮವನ್ನು ಸೂಚಿಸು (4), ಗೆರೆ ಕೊಯ್ದು ಹಾಗೆ (6), ತಯಾರು ಮಾಡುವೆಯಂತೆ (10) ಕಸ, ಹರದ (11), ದಿಗ್ಭ್ರಾಂತಳಾಗಿ (13), ಹುಬ್ಬುಗಂಟಿಕ್ಕಿ (13), ಆರೋಗ್ಯ ವಿಚಾರಕ (13-15), ಮೇಲೋಗರ (26), ದೆಯ್ಯದ ಮಕ್ಕಳೆ ! (32) (ಪುಟ 77)

8. ಕೆಲವು ಕಡೆ ಸಂಸ್ಕೃತ ಶಬ್ದಗಳು ಅನಿವಾರ್ಯವಾಗಿಯೋ ಎಂಬಂತಿವೆ. ದಿಗ್ಭ್ರಾಂತ (13), ಮಂತ್ರಮುಗ್ಧ (58), ಉತ್ಕಟ, ಉನ್ಮತ್ತ (60), ಮತ್ಸ್ಯಾಲಯ (63), ದಯಾದಾಕ್ಷಿಣ್ಯ (89)

9. ಇಂಗ್ಲೀಷ್ ಶಬ್ದಗಳನ್ನು ಮೂಲರೂಪದಲ್ಲೇ ಉಳಿಸಿದ ಕಾರಣ, ಸಂದರ್ಭದ ಸ್ವಾರಸ್ಯ ಕೆಟ್ಟಿಲ್ಲ. ಮ್ಯಾನೇಜರ್ (37), ಬಸ್ಸು, ಹಾರ್ನ್ (50)

10. ಆದರೆ "ಹ್ಯಾಬಿಸ್ಕಸ್" (59) ಎಂಬ ಶಬ್ದವನ್ನು "ದಾಸವಾಳ" ಎಂದು ಅನುವಾದ ಮಾಡಬಹುದಾಗಿತ್ತು.

11. ಮೂರ್ತಿರಾಯರ ಶಿಶುಸಾಹಿತ್ಯದ ಒಂದು ಸಾಮಾನ್ಯ ಲಕ್ಷಣ – ಭಾಷಾಂತರವಾಗಲಿ, ರೂಪಾಂತರವಾಗಲಿ, ಸ್ವತಂತ್ರ ಕೃತಿಯಾಗಲಿ, ಶಿಶು ಸಾಹಿತ್ಯದ

ಲೇಖಕನಿಗೆ ಇರಬೇಕಾದ ಹೊಣೆಗಾರಿಕೆಯಿಂದ ಮೂರ್ತಿರಾಯರು ಈ ಕೃತಿಗಳನ್ನು ರಚಿಸಿದ್ದಾರೆ. ಅವರು ಮಕ್ಕಳ ಮನಶ್ಶಾಸ್ತ್ರೀಯ (child psychology) ಓನ್ನೆಲೆಯನ್ನು ಬಲ್ಲರು. ಆದ್ದರಿಂದಲೇ ಅವರ ಮೂರು ಕೃತಿಗಳೂ ಸುಖಾಂತವಾದವುಗಳು. ಮಕ್ಕಳು ಸಾಹಸಪ್ರವೃತ್ತಿಯನ್ನು ಬಯಸುವುದು ಸಹಜ, ಸಾಮಾನ್ಯ. ಜೊತೆಗೆ ಮಕ್ಕಳು ಸಾಹಸ ಪ್ರಜ್ಞೆಯನ್ನು ಬೆಳೆಸಿಕೊಳ್ಳುವಂತೆ ಮಾಡುವುದೂ ಸಾಹಿತ್ಯದ ಹಾಗೂ ಪೋಷಕರ ಲಕ್ಷ್ಯ. ಮೂರ್ತಿರಾಯರು ಇದನ್ನು ಮರೆತಿಲ್ಲ. ಅವರ ಎರಡು ಕೃತಿಗಳು ಈ ಮಾತಿಗೆ ಸಾಕ್ಷಿ. ಮಕ್ಕಳು ಮೆಚ್ಚಿಕೊಳ್ಳುವ ಮತ್ತೊಂದು ರಸವೆಂದರೆ ಹಾಸ್ಯ. "ಒಡತಿಗೆ ಒಕ್ಕಲಗಿತ್ತಿಯ ವೇಷ"ದಲ್ಲಿ ಅಲ್ಲಲ್ಲಿ ಬರುವ ಹಾಸ್ಯ ಈ ಅಂಶಕ್ಕೂ ಮೂರ್ತಿರಾಯರ ಹಾಸ್ಯ ಪ್ರಜ್ಞೆಯ ಮನೋಧರ್ಮಕ್ಕೂ ನಿದರ್ಶನವಾಗಿದೆ. ಮಕ್ಕಳ ಮನಸ್ಸಿನ ಮೇಲೆ ಕತೆ ಬೀರುವ ಪ್ರಭಾವವನ್ನು ಗುರುತಿಸಿದ ಮೂರ್ತಿರಾಯರು ಅಲ್ಲಲ್ಲಿ ಬೋಧನಾತ್ಮಕ ವಾಕ್ಯಗಳನ್ನು ಸೇರಿಸಿದ್ದಾರೆ. "ಹವಳದ ದ್ವೀಪ"ದಲ್ಲಿ ಬರುವ ಭೀಭತ್ಸ ದೃಶ್ಯಗಳನ್ನು ಕೈ ಬಿಟ್ಟಿರುವುದು ಮೂರ್ತಿರಾಯರು ಮಕ್ಕಳ ಮನಸ್ಸನ್ನು ಎಷ್ಟು ಸೂಕ್ಷ್ಮವಾಗಿ ಅರಿತಿದ್ದಾರೆ ಎನ್ನುವುದಕ್ಕೆ ಸಾಕ್ಷಿ. ಈ ಮೂರೂ ಕೃತಿಗಳು ಒಂದು ಸುಖಕರವಾದ ಘಟ್ಟದಲ್ಲಿ ಮುಕ್ತಾಯ ಗೊಳ್ಳುತ್ತವೆ. 'ಹವಳದ ದ್ವೀಪ' ಮತ್ತು 'ಸುಧೀರ ಮತ್ತು ಶೈಲಳ ಸಾಹಸ'ಗಳಲ್ಲಿ ಮಕ್ಕಳು, ಸಾಹಸ ಕೃತ್ಯ , ಹಲವು ಕಷ್ಟಗಳನ್ನು ಎದುರಿಸಿದ ಬಳಿಕ ತಮ್ಮ ಊರಿಗೆ ಹಿಂದಿರುಗುತ್ತಾರೆ. 'ಒಡತಿಗೆ ಒಕ್ಕಲಗಿತ್ತಿಯ ವೇಷ' ಮುಕ್ತಾಯ ಸೂಚ್ಯವಾಗಿದ್ದರೂ ಮಂಗಳಾಂತವಾಗುತ್ತದೆ.

## 7.10 ಚಂಡಮಾರುತ

ಚಂಡಮಾರುತ ಮೂರ್ತಿರಾಯರ ಅನುವಾದಿತ ಕೃತಿಗಳಲ್ಲಿ ಹಳೆಯದು. ಮಳಲಿ ವಸಂತಕುಮಾರರ ಪ್ರೇರಣೆಯ ಮೇರೆಗೆ ಇದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಸಲಹೆ ಬಾರದೆ ಇರುತ್ತಿದ್ದ ಪಕ್ಷದಲ್ಲಿ 'ಮ್ಯಾಕ್‌ಬೆತ್' ನಾಟಕ ಕನ್ನಡಕ್ಕೆ ಬಂದು ಡಾ. ಡಿ. ವಿ. ಜಿ. ಯವರ ಅನುವಾದದೊಂದಿಗೆ ಬಂದು ನಿಲ್ಲುತ್ತಿತ್ತು. ಆದರೆ ಮಳಲಿ ಯವರ ಸೂಚನೆ ಮಾಸ್ತಿಯವರ ಅನುವಾದದೊಂದಿಗೆ ಬಂದು ನಿಲ್ಲುವಂತಾಯಿತು.

ಮೂರ್ತಿರಾಯರು ಷೇಕ್ಸ್‌ಪಿಯರ್ ಕವಿ ಹಾಗೂ ಅವನ ಕೃತಿಗಳನ್ನು ಕುರಿತ ವಿಮರ್ಶಾಗ್ರಂಥವನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಅಪೇಕ್ಷೆಯಂತೆ ಬರೆದಿದ್ದಾರೆ. ಪ್ರಸಾರಾಂಗ ವಿಧಿಸಿದ ಪುಟ ಸಂಖ್ಯೆಯ ಮಿತಿಯನ್ನು ಮೀರಿ ತಮ್ಮ ಕಲ್ಪನೆಯನ್ನು ಮೊಟಕುಗೊಳಿಸದೆ ಬರೆದ ಕಾರಣ ಪೂರ್ವಾರ್ಧವೇ ಈ ವ್ಯಾಪ್ತಿಯನ್ನು ಮೀರಿ ಬೆಳೆಯಿತು. (ಉತ್ತರಾರ್ಧವಿನ್ನೂ ಬರೆಯಬೇಕಾಗಿದೆ) ಷೇಕ್ಸ್‌ಪಿಯರ್‌ನ ನಾಟಕ ಕೃತಿಗಳ ಕನ್ನಡ ಅನುವಾದ, ರೂಪಾಂತರಗಳೆರಡನ್ನೂ ಮೂಲದೊಂದಿಗೆ ಬಹು ನಿಖರವಾಗಿ ಹೋಲಿಸಿ ನೋಡಿದ್ದರು. ಭಾಷಾಂತರಗಳು ಶುದ್ಧ ಭಾಷಾಂತರವಾಗಿವೆಯೇ, ಇಲ್ಲವೇ, ಭಾಷಾಂತರಗಳು ಎಲ್ಲೆಲ್ಲಿ ರೂಪಾಂತರ ತಾಳಿವೆ ಎಂಬುದನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದ್ದಾರೆ. ಭಾಷಾಂತರವು ರೂಪಾಂತರವನ್ನೂ ಒಳಗೊಂಡ ಸಂದರ್ಭಗಳನ್ನು ಗಮನಿಸಿ ಪರಸ್ಪರ ವಿರೋಧವಾದ ಈ ಅಂಶಗಳನ್ನು ಗುರುತಿಸಿ, ಈ ಅಸಮಂಜಸತೆಗಳನ್ನು ಎತ್ತಿ ತೋರಿಸಿದ್ದಾರೆ. ಷೇಕ್ಸ್‌ಪಿಯರನ ಬಗ್ಗೆ, 'ಷೇಕ್ಸ್‌ಪಿಯರ್', 'ಷೇಕ್ಸ್‌ಪಿಯರ್ ಮತ್ತು

ರಂಗಭೂಮಿ', 'ಕನ್ನಡದಲ್ಲಿ ಷೇಕ್ಸ್‌ಪಿಯರ್'. ಮುಂತಾದ ವಿಮರ್ಶಾತ್ಮಕ ಕೃತಿಗಳನ್ನು ಹಾಗೂ ವಿಮರ್ಶಾತ್ಮಕ ಪ್ರಬಂಧಗಳನ್ನು ಬರೆದಿದ್ದಾರೆ. ಆದ್ದರಿಂದ ಅವರಿಗೆ Tempest ನಾಟಕವನ್ನು ಕನ್ನಡಿಸುವುದು ಕಷ್ಟವೇನೂ ಆಗಲಿಲ್ಲ. ಜೊತೆಗೆ ಒಂದು ಸಮರ್ಪಕ ಅನುವಾದ ಹೇಗಿರಬೇಕು ಎಂಬುದನ್ನು ಚೆನ್ನಾಗಿ ಮನಗಂಡು ಅದರಂತೆ ಅನುವಾದಿಸಿದ್ದಾರೆ.

ಶ್ರೀಯವರಿಗೆ ಷೇಕ್ಸ್‌ಪಿಯರ್ ಎಷ್ಟು ಮೆಚ್ಚಿನ ಕವಿಯಾಗಿದ್ದನೆಂದು ಮೂರ್ತಿರಾಯರು ಬಿ. ಎಂ. ಶ್ರೀಕಂಠಯ್ಯ ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. (ಪುಟ 10, 30, 58) ಶ್ರೀಯವರ ಇತರ ಭಾಷಾಂತರ ರೂಪಾಂತರಗಳನ್ನು ವಿಮರ್ಶಿಸುವಾಗ ಅವರ ಮೆಚ್ಚಿನ ಕವಿಯ ಕೃತಿಯೊಂದನ್ನು ಕನ್ನಡಕ್ಕೆ ಅನುವಾದಿಸದಿರುವುದರ ಕುರಿತು ಕುತೂಹಲವನ್ನು ವ್ಯಕ್ತಪಡಿಸಿದ್ದಾರೆ. ಶ್ರೀಯವರಿಗೆ ಷೇಕ್ಸ್‌ಪಿಯರ್ ಕೃತಿಗಳ ಮೇಲೆ ಇದ್ದ ಅಪಾರ ಪ್ರಭುತ್ವವನ್ನೂ ಸಹಾ ಮೂರ್ತಿರಾಯರು ಅವರ ಶಿಷ್ಯರಾಗಿ ಪ್ರತ್ಯಕ್ಷ ಕಂಡವರು. (ಅ.ಪು. 32–33) ಶ್ರೀಯವರು ಷೇಕ್ಸ್‌ಪಿಯರ್ ಕೃತಿಯನ್ನು ಕನ್ನಡಕ್ಕೆ ಅನುವಾದಿಸಲಿಲ್ಲ. ಶ್ರೀಯವರು ಕಂಡ ಮೂರ್ತಿರಾಯರು, ಶಿಷ್ಯರು ನನಸಾಗಿಸಿದರು. ಶ್ರೀಯವರು ಮಾಡದೆ ಬಿಟ್ಟ ಷೇಕ್ಸ್‌ಪಿಯರ್ ಕೃತಿಯೊಂದನ್ನು ಮೂರ್ತಿರಾಯರು ಅನುವಾದಿಸಿರುವುದು ಬಹು ಅರ್ಥಪೂರ್ಣವಾದುದು.

ಈ ಅನುವಾದ ಒಂದು ವಿದ್ವದ್ಗೋಷ್ಠಿಯಲ್ಲಿ ಮೊದಲು ವಿಮರ್ಶೆಗೆ ಬಂದಿತು. ಅನುವಾದ ಕೈಬರಹದ ರೂಪದಲ್ಲಿರುವೇ ಮೂರ್ತಿರಾಯರ ವಾಚನ, ಕರ್ನಾಟಕ ಹಿರಿಯ ವಿದ್ವಾಂಸರ ವಿಮರ್ಶೆ, ಸಲಹೆಗಳು ಜೊತೆ ಜೊತೆಯಾಗಿ ನಡೆದು ಹಲವು ಮಾರ್ಪಾಟುಗಳ ಬಳಿಕ ಪ್ರಕಟಿಸಲ್ಪಟ್ಟಿತು. ಗದ್ಯರೂಪದಿಂದ-ಪದ್ಯರೂಪಕ್ಕೆ ಸರಳ ರಗಳೆಗೆ-ಶೈಲಿ ಬದಲಾವಣೆ ಹೊಂದಿತು. ಇದು ನಾಟಕದ ಕಾವ್ಯ ಭಾಗಗಳಿಗೆ ಒಂದು ಸೊಬಗನ್ನೂ ಮಾಧುರ್ಯವನ್ನೂ ತಂದಿತು. ಈ ಅನುವಾದದ ಯಶಸ್ಸನ್ನು ತಮ್ಮ ವಿದ್ವಾಂಸ ಮಿತ್ರರೊಂದಿಗೆ ಹಂಚಿಕೊಂಡಿರುವುದು ಮೂರ್ತಿರಾಯರ ಹೃದಯ ವೈಶಾಲ್ಯವನ್ನೂ ಪ್ರತಿಬಿಂಬಿಸುತ್ತದೆ.

ಈ ಕೃತಿಯ ಮುಖ್ಯ ವೈಶಿಷ್ಟ್ಯವೆಂದರೆ ಅದರ ವಿಸ್ತೃತವೂ ಆಳವೂ ಹಾಗೂ ವಿದ್ವತ್ಪೂರ್ಣವೂ ಆಗಿರುವ 'ಅವತರಣಿಕೆ'. ಇಂಗ್ಲೀಷ್ ಬಾರದ ಕನ್ನಡಿಗರು ಕೇವಲ ಒಂದು ಕೃತಿಯನ್ನು ಕನ್ನಡದಲ್ಲಿ ಓದಿದರೆ ಸಾಲದು, ಅದರ ಹಿನ್ನೆಲೆ, ಸಾಂಕೇತಿಕತೆ, ರಚನೆಯ ಕಾಲ, ಪ್ರೇರಣೆ, ಕವಿಯ ಮನೋಧರ್ಮ ಇತ್ಯಾದಿಗಳನ್ನು ವಾಚಕರು ಅರಿತು ಈ ಹಿನ್ನೆಲೆಯಲ್ಲಿ ಕೃತಿಯನ್ನು ಓದಬೇಕು ಎಂದು ಮೂರ್ತಿರಾಯರಿಗೆ ಅನ್ನಿಸಿರಬೇಕು. ಐದು ಪ್ರಮುಖ ಶೀರ್ಷಿಕೆಗಳಡಿ 72 ಪುಟಗಳ ಸುದೀರ್ಘವಾದ ಈ ಅವತರಣಿಕೆ ಇಂಗ್ಲೀಷ್ ನಾಟಕಗಳನ್ನು ಇಂಗ್ಲೀಷ್ ವಿಮರ್ಶಕರು ಗುರುತಿಸಿದ ರೀತಿಯನ್ನು ವಿವರಿಸುತ್ತದೆ. ಇಲ್ಲಿಯೂ ಸಹಾ ಮೂರ್ತಿರಾಯರ ವಿಶಿಷ್ಟ ಕ್ರಮವಾದ ತೌಲನಿಕ ಅಧ್ಯಯನ ಕ್ರಮದಿಂದ ಸಾಧಿಸಿದ ಆಳವನ್ನು ಗುರುತಿಸಬಹುದು. ದುರಂತ ನಾಟಕವೆಂಬ ಕಲ್ಪನೆ ಇಂಗ್ಲೆಂಡಿಗೆ ಬಂದಿರುವುದು ಗ್ರೀಕ್ ರುದ್ರ ನಾಟಕಗಳ ಮೂಲಕ. ಆದ್ದರಿಂದ ಗ್ರೀಕ್ ರುದ್ರ ನಾಟಕಗಳು ಪ್ರತಿಪಾದಿಸುವ ಮೌಲ್ಯಗಳ ಬೆಳಕಿನಲ್ಲಿ ಷೇಕ್ಸ್‌ಪಿಯರ್ ನಾಟಕಗಳ ವಿಮರ್ಶೆ ಮಾಡಿದ್ದಾರೆ. ಆದ್ದರಿಂದ ಷೇಕ್ಸ್‌ಪಿಯರ್ ನಾಟಕಗಳಲ್ಲಿಯೂ

ಮಾನವ ಜೀವನದ ಪಾರಮಾರ್ಥಿಕ ಹಿನ್ನೆಲೆಯನ್ನು ಗುರುತಿಸಿದ್ದಾರೆ. ಇಲ್ಲಿ ಮೂರ್ತಿರಾಯರು ತಾವು ಅಧ್ಯಯನ ಮಾಡಿದ ಷೇಕ್ಸ್‌ಪಿಯರ್ ಹಾಗೂ ಗ್ರೀಕ್ ರುದ್ರ ನಾಟಕಗಳನ್ನು ಕುರಿತು ಆಳವಾದ ವಿಮರ್ಶೆಯ ಹಿನ್ನೆಲೆಯಲ್ಲಿ ಈ ಅವತರಣಿಕೆಯನ್ನು ಬರೆದಿದ್ದಾರೆ.

ಮೂರ್ತಿರಾಯರ ಸಾಹಿತ್ಯಾಧ್ಯಯನದ ಕ್ರಮ ಅತ್ಯಂತ ಶಿಸ್ತು ಹಾಗೂ ಕ್ರಮಬದ್ಧವಾದುದು. ಅನುವಾದ ಕೃತಿಯೇ ಆದರೂ ಕೃತಿಯ ಸಂಪೂರ್ಣ ಪರಿಚಯವನ್ನು ಅವರು ಓದುಗರಿಗೆ ಮಾಡಿಕೊಡುತ್ತಾರೆ. 'ಚಂಡಮಾರುತ'ದ ಅವತರಣಿಕೆಯನ್ನು ಆಧರಿಸಿ ಅವರ ಸಾಹಿತ್ಯ ಅಧ್ಯಯನದಲ್ಲಿ ಹಾಗೂ ವಿಮರ್ಶೆಯಲ್ಲಿ ನಾವು ಈ ಕೆಳಕಂಡ ಅಂಶಗಳನ್ನು ಗುರುತಿಸಬಹುದು.

1. ಕೃತಿಗೆ ಪ್ರೇರಣೆ, ಪ್ರಚೋದನೆ ನೀಡಿರಬಹುದಾದ, ಕೃತಿಕಾರನ ಮೇಲೆ ಪ್ರಭಾವ ಬೀರಿರಬಹುದಾದ ಮೂಲ ಕೃತಿ, ಸಾಮಗ್ರಿ ಇತ್ಯಾದಿ.
2. ಕೃತಿ ರಚನೆಯ ಕಾಲ, ಅಂದಿನ ಸಾಮಾಜಿಕ, ರಾಜಕೀಯ ದೃಷ್ಟಿಕೋನ.
3. ತೌಲನಿಕ ವಿಮರ್ಶೆ, ಅಧ್ಯಯನ
4. ಚಂಡಮಾರುತ ನಾಟಕದ ವಿಮರ್ಶೆಯ ವಿಮರ್ಶೆ
5. ಸಾಹಿತ್ಯ ಜೀವನಗಳ ಪರಸ್ಪರ ಸಾಂಗತ್ಯ ಸಾಹಚರ್ಯ

ಮೂರ್ತಿರಾಯರು ಷೇಕ್ಸ್‌ಪಿಯರ್ ಕವಿಯ ನಾಟಕ, ಕಾವ್ಯಗಳನ್ನು ಮತ್ತು ಈ ಸಾಹಿತ್ಯ ಪ್ರಕಾರ ಹಾಗೂ ಕೃತಿಕಾರನನ್ನು ಕುರಿತು ಬಂದ ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ವಿಮರ್ಶಕರ ಸಮಗ್ರ ವಿಮರ್ಶೆಯನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದವರು. ಅವರ ವಿಶಿಷ್ಟ, ಕ್ರಮವೆನಿಸಿದ, ಸಮಗ್ರ ಕೃತಿಗಳ ಹಿನ್ನೆಲೆಯಲ್ಲಿ ಒಂದು ಕೃತಿಯನ್ನು ವಿಮರ್ಶಿಸುವ ಕ್ರಮ ಇಲ್ಲಿಯೂ ಕಂಡುಬರುತ್ತದೆ. ಷೇಕ್ಸ್‌ಪಿಯರ್‌ನ ನಾಟಕ ಚಕ್ರದಲ್ಲಿ ಟೆಂಪೆಸ್ಟ್‌ನ ಸ್ಥಾನವನ್ನು ಅವರು ನಿರ್ಣಯಿಸುತ್ತಾರೆ. ಈ ನಾಟಕವನ್ನು ಬರೆದ ಕಾಲ, ಷೇಕ್ಸ್‌ಪಿಯರ್‌ನ ಪ್ರಬುದ್ಧತೆ, ಪ್ರೌಢಿಮೆಗಳನ್ನು ವಿವೇಚಿಸುತ್ತಾರೆ. ಟೆಂಪೆಸ್ಟ್ ನಾಟಕ ಬರೆದ ಷೇಕ್ಸ್‌ಪಿಯರ್‌ನಿಗೂ ಇತರ ನಾಟಕಗಳನ್ನು ಬರೆದ ಷೇಕ್ಸ್‌ಪಿಯರ್‌ನಿಗೂ ಇರುವ ಅಂತರವನ್ನು ಗುರುತಿಸಿದ್ದಾರೆ.

ಷೇಕ್ಸ್‌ಪಿಯರ್ ಯಾವುದೇ ಕೃತಿಯನ್ನು ರಚಿಸುವಾಗ ಕಥಾ ಸಾಮಗ್ರಿಯನ್ನು ಬೇರೆ ಮೂಲದಿಂದ ಪಡೆದುಕೊಂಡು, ತನ್ನದಾದ ಶೈಲಿ, ಪಾತ್ರ, ಆಭರಣಗಳಿಂದ ಅದನ್ನು ಮಾರ್ಪಡಿಸಿಕೊಳ್ಳುತ್ತಾನೆ. ಹೀಗೆ ಅವನು ಪಡೆದ ದ್ರವ್ಯ ಮತ್ತು ಮಾಡಿಕೊಂಡ ಮಾರ್ಪಾಟುಗಳನ್ನು ಸೋದಾಹರಣವಾಗಿ, ಮೂರ್ತಿರಾಯರು ವಿವರಿಸಿದ್ದಾರೆ. ಆರಂಭದಲ್ಲಿಯೇ ಈ ನಾಟಕದ ಮೇಲೆ ಪ್ರಭಾವ ಬೀರಿದ ಬರ್ಮುಡಾಸ್ ಲೇಖನಗಳನ್ನು ಉಲ್ಲೇಖಿಸಿ ಅವುಗಳಲ್ಲಿ ಈ ನಾಟಕಕ್ಕೆ ಸಂಬಂಧಿಸಿದ ಮುಖ್ಯವಾದ ಮೂರನ್ನು ಹೆಸರಿಸಿದ್ದಾರೆ. ಹಾಗೆಯೇ ಮಾಂಟೇನನ ನರಭಕ್ಷಕರನ್ನು ಕುರಿತು ಪ್ರಬಂಧದ ಪರಿಚಯ ಷೇಕ್ಸ್‌ಪಿಯರ್‌ನಿಗೆ ಇತ್ತು ಎಂಬ ಅಂಶವನ್ನು ಅವರು ಬೆಳಕಿಗೆ ತರುತ್ತಾರೆ. (ಪುಟ 47). ಮಾಸ್ತಿಯವರ ಕಥೆ ಕಾದಂಬರಿಗಳನ್ನು ವಿಮರ್ಶಿಸುವಾಗಲೂ ಮೂರ್ತಿರಾಯರು ಇದೇ ಸೂತ್ರವನ್ನು ಅನುಸರಿಸಿರುವುದು ಕಂಡುಬರುತ್ತದೆ.

ಒಂದೆರಡು ಹೇಳಿದಂತೆ ಮೂರ್ತಿರಾಯರ ವಿಮರ್ಶೆ ಅಧ್ಯಯನ ವಿಕ್ಷಣೆಗಳು ತುಲನಾತ್ಮಕವಾದವುಗಳು. ಇಲ್ಲಿಯೂ ಸಹಾ ಅವರು ಇದೇ ಕ್ರಮವನ್ನು ಅನುಸರಿಸಿರುವುದನ್ನು ನಾವು ಕಾಣಬಹುದು. ಷೇಕ್ಸ್‌ಪಿಯರ್ ಈ ನಾಟಕದಲ್ಲಿ ಚಿತ್ರಿಸಿದ ಪಾತ್ರಗಳು, ಘಟನೆಗಳು, ಉಪಯೋಗಿಸಿದ ಶೈಲಿ , ಸಂವಾದ, ಉಪಮೆ, ರೂಪಕಗಳು ಇತರ ಯಾವ ನಾಟಕಗಳಲ್ಲಿ ತಾದಾತ್ಮ್ಯ ಪಡೆದಿವೆ, ಎಂಬುದನ್ನೂ ಅವರು ಗುರುತಿಸಿದ್ದಾರೆ. ಷೇಕ್ಸ್‌ಪಿಯರ್‌ನವೇ ಆಗಿರುವ ಪೆರಿಕ್ಲಿಸ್, ಸಿಂಬಲೀನ್, ವಿಂಟರ್ಸ್ ಟೇಲ್, ಹೆನ್ರಿ ವಿ. ಕಿಂಗ್ ರಿಚರ್ಡ್ II ಮುಂತಾದ ನಾಟಕಗಳ ಸಂವಿಧಾನದ ಬೆಳಕಿನಲ್ಲಿ ಈ ನಾಟಕವನ್ನು ವಿಮರ್ಶಿಸುತ್ತಾರೆ. ಪಕ್, ಅಲಾನ್ಸೋ,ಕ್ಯಾಲಿಬನ್, ಪ್ರಾಸ್ಪರೊ, ಪೋಲೋನಿಯಸ್-ಆಲಿವರ್, ಫರ್ಡಿನ್ಯಾಂಡ್- ಕ್ಯಾಲಿಬನ್,ಕ್ಯಾಲಿಬನ್-ಮಿರಾಂಡ, ಪ್ರಾಸ್ಪರೊನ Loves labour lostನ ಯುವಕರು, ಬ್ರೂಟಸ್, As you like it ನ ಡ್ಯೂಕ್, ಆಂಟೋನಿಯೋ ಸೆಬಾಸ್ಟಿಯನ್ (ಷೇಕ್ಸ್‌ಪಿಯರ್ ತನ್ನ ನಾಟಕಗಳಲ್ಲಿ ಆಗಾಗ ಇಂಥ ಜೋಡಿ ಪಾತ್ರಗಳನ್ನು ತರುವುದುಂಟು. ಉದಾ : ಕಿಂಗ್ ಲಿಯರ್‌ನ ಗಾನರಿಲ್ ರೀಗನ್) ಹಾಗೆ ತಂದಾಗ ಅವರಿಬ್ಬರ ನಡುವೆ ಸಾದೃಶ್ಯದ ಜೊತೆಗೆ ಅಂತರ ಇರುವಂತೆ ಒಬ್ಬೊಬ್ಬರಿಗೂ ಅವರಿಗೇ ವಿಶಿಷ್ಟವಾದ ಗುಣಗಳನ್ನು ಕೊಡುತ್ತಾನೆ. (ಪುಟ 41) ಆಂಟೋನಿಯೋ-ಟ್ಯಾಗೋ, ಫ್ರೆಡ್ರಿಕ್-ಆಲಿವರ್, ಆಂಟೋನಿಯೋ-ಸೆಬಾಸ್ಟಿಯನ್, ರಾಸ್‌ಲಿಂಡ್-ಕ್ಯಾಲಿಬನ್ ಪ್ರಾಸ್ಪರೋಗೆ ಮಾಡುವ ಸೇವೆ ಮತ್ತು ಮಿರಾಂಡ ಫರ್ಡಿನ್ಯಾಂಡ್‌ಗೆ ಮಾಡುವ ಸೇವೆ ಮುಂತಾಗಿ ನಾಟಕ, ನಾಟಕೀಯ ಸನ್ನಿವೇಶಗಳು ತೌಲನಿಕವಾಗಿ ವಿಮರ್ಶೆಗೆ ಒಳಗಾಗಿದೆ.

ಮೂರ್ತಿರಾಯರ ವಿಮರ್ಶೆ ನಾಟಕದ ಶೀರ್ಷಿಕೆಯಿಂದಲೇ ತೊಡಗುತ್ತದೆ. ಶೀರ್ಷಿಕೆಯ ಲಕ್ಷ್ಯಾರ್ಥ, ಧ್ವನ್ಯಾರ್ಥಗಳನ್ನು ವಿಶ್ಲೇಷಣೆ ಮಾಡಿದ ಮೂರ್ತಿರಾಯರು ನಾಟಕಗಳ ನಿಯಮಗಳು- ಐಕ್ಯತ್ರಯಗಳು -ಎಷ್ಟರ ಮಟ್ಟಿಗೆ ಇಲ್ಲಿ ಅನ್ವಯಿಸಲ್ಪಟ್ಟಿವೆ ಎಂದೂ ವಿವೇಚಿಸಿದ್ದಾರೆ. ಹಾಗೆಯೇ ಚಂಡಮಾರುತ ನಾಟಕವು ಒಂದು ಅಲಲಿಟರಿಯೇ ಎಂಬ ಸಂದೇಹವನ್ನೆತ್ತುತ್ತಾರೆ. ಇಲ್ಲಿ ಬರುವ ಕೇಡಿನ ಸಮಸ್ಯೆ (The problem of evil )ಯನ್ನೂ ಚರ್ಚಿಸಿದ್ದಾರೆ. ನಾಟಕದಲ್ಲಿ ಬರುವ ರೋಮನ್ಸ್, ದುರಂತ ರೇಖೆ ಇತ್ಯಾದಿ ಪಾಶ್ಚಿಮಾತ್ಯ ಪಾರಿಭಾಷಿಕ ಭಾಷೆಯಿಂದಾಗಿ ವಿಮರ್ಶೆ ಕಳೆಕಟ್ಟಿದೆ. ಅಲ್ಲದೇ ಆ ವಿಮರ್ಶೆ ಹೀಗೆ ಕಾವ್ಯಮೀಮಾಂಸೆಯೂ ಆಗಿ ಪಾಶ್ಚಿಮಾತ್ಯ ಕಾವ್ಯಮೀಮಾಂಸೆಯ ಒಂದು ಭಾಗವೆನಿಸಿದೆ.

ಒಂದು ಕೃತಿಯನ್ನು ಕುರಿತ ಹಲವಾರು ವಿಮರ್ಶೆಗಳನ್ನು ಓದಿದಾಗ ಆ ವಿಮರ್ಶೆಯ ಗೋಂಡಾರಣ್ಯದಲ್ಲಿ ನಮ್ಮಲ್ಲಿರುವ ವಿಮರ್ಶಕ ದಿಕ್ಕು ತಪ್ಪುವ ಸಾಧ್ಯತೆ ಇದೆ. ಆದರೆ ಮೂರ್ತಿರಾಯರು ತಮ್ಮಲ್ಲಿರುವ ವಿಮರ್ಶಕನನ್ನು ಇತರ ವಿಮರ್ಶಕರೊಂದಿಗೆ ಮುಖಾಮುಖಿಯಾಗುವಂತೆ ಮಾಡುತ್ತಾರೆ. ಅಂತಿಮವಾಗಿ ವಿಮರ್ಶಕ ಮೂರ್ತಿರಾಯರೇ ತಮ್ಮ ಸ್ವತಂತ್ರ ಸದೃಢವಾದ ಹಾಗೂ ಸ್ವಂತ ನಿಲುವನ್ನು ಸ್ಥಾಪಿಸಿ ಸಮರ್ಥಿಸಿಕೊಳ್ಳುತ್ತಾರೆ. ಪ್ರಾಸ್ಪರೋನನ್ನು ದೈವತ್ವದ ಪಟ್ಟಕ್ಕೇರಿಸಿದ ವಿಮರ್ಶಕರ ವಿಮರ್ಶೆಗಳನ್ನು ಕ್ರೋಢೀಕರಿಸಿ ಪ್ರಾಸ್ಪರನ ಪಾತ್ರ ಚಿತ್ರಣ, ಮಿತಿ ಹಾಗೂ ಸ್ಥಾನಗಳನ್ನು ನಿರ್ಭೀತಿಯಿಂದ ನಿರೂಪಿಸಿದ್ದಾರೆ. `ವಾಸ್ತವವಾಗಿ ಪ್ರಾಸ್ಪರೋ ಆ ಮಟ್ಟಕ್ಕೆ ಏರಿಲ್ಲ'

(ಪುಟ 22) ಎಂದು ಆರಂಭವಾಗುವ ಘಟಕ ಪ್ರಾಸ್ಪರೋನನ್ನು ದೈವವನ್ನಾಗಿ ಅಥವಾ ಅತಿಮಾನವನನ್ನಾಗಿ ನೋಡದೆ ಮರ್ತ್ಯದ ನೆಲೆಯಲ್ಲಿಯೇ ವಿಮರ್ಶಿಸಲಾಗಿದೆ. ಪ್ರಾಸ್ಪರೋನನ್ನು "ಈ ನಾಟಕದ ದೈವ" The providence of the play ಎಂದು ಕರೆದ ವಿಮರ್ಶಕರ ಮಿತಿ, ನೆಲೆಗಳನ್ನು ಗುರುತಿಸಿದ್ದಾರೆ.

ಆದ್ದರಿಂದ ಅವರು ಎಲ್ಲಾ ವಿಮರ್ಶೆಗಳನ್ನೂ ಅವರ ನೆಲೆಯಲ್ಲಿ ಒಪ್ಪುತ್ತಾರೆ. ರೋಷದಿಂದ ಅಥವಾ ಆವೇಶದಿಂದ ಅವುಗಳನ್ನು ಒಮ್ಮೆಲೆ ನಿರಾಕರಿಸುವುದಿಲ್ಲ. ಅವರು ಈ ವಿಮರ್ಶೆಗಳ ಮೌಲ್ಯಮಾಪನ ಮಾಡುವುದೂ ಸಮಾಧಾನದಿಂದಲೇ.

ಈ ರೋಷದ ಔಚಿತ್ಯವನ್ನು ಸಮರ್ಥಿಸಲು ಹೇಳಬಹುದಾದ್ದನ್ನೆಲ್ಲ ನೆನಪಿಗೆ ತಂದುಕೊಂಡ ಮೇಲೂ ನನಗೆ ಸ್ವಲ್ಪ ಅಸಹಜತೆ ಕಾಣುತ್ತದೆ. (ಪುಟ 26) ಎಂಬ ಅವರ ಸ್ವಾಭಿಪ್ರಾಯ ಮೂರ್ತಿರಾಯರು ಸಮರ್ಥ ವಿಮರ್ಶಕರೆಂದು ಸಾಬೀತು ಪಡಿಸುತ್ತದೆ. ಡೋವರ್ ವಿಲ್ಸನ್ ಹೇಳುವ terrible oldman ಎಂಬ ಮಾತನ್ನು ಅವರು ಸಂಪೂರ್ಣ ಒಪ್ಪುವುದೂ ಇಲ್ಲ, ಸಂಪೂರ್ಣ ನಿರಾಕರಿಸುವುದೂ ಇಲ್ಲ. 'ಪ್ರಾಸ್ಪರೋ ಸುಲಭ ಕೋಪಿ, ಭಯಂಕರ ಮುದುಕ ಎನ್ನುವುದು ನಿಜ'(ಪುಟ 31) ಎಂದು ಅದರ ಸಮರ್ಥನೆ ಮಾಡಿ ಡೋವರ್ ವಿಲ್ಸನ್‌ನನ್ನು ಬೆಂಬಲಿಸಿದರೂ 'ಪ್ರಾಸ್ಪರೋ ಪರಿಣತ ಮನಸ್ಸಿನ ಪ್ರಸನ್ನ ಮಾನವ' (ಪುಟ 34) ಎಂದು ಅವನ ಮತ್ತೊಂದು ಮುಖವನ್ನೂ ನಮಗೆ ಪರಿಚಯಿಸುತ್ತಾರೆ. ಮೂರ್ತಿರಾಯರು ಹೀಗೆ ಮಾಸ್ತಿಯವರ ಷೇಕ್ಸ್‌ಪಿಯರ್ ಅಥವಾ ಅವನ ವಿಮರ್ಶಕರು ಬಿಟ್ಟ ಭಾವಗಳನ್ನು ಗುರುತಿಸುತ್ತಾರೆ. ಆ ಕಾರಣ ಅವರ ವಿಮರ್ಶೆ ಪರಿಪೂರ್ಣತೆಯನ್ನು ಪಡೆದಿರುತ್ತದೆ.

ಇದಕ್ಕೆ ಕಾರಣವನ್ನು ನಾವು ಹೀಗೆ ಗುರುತಿಸಬಹುದು. ಡೋವರ್‌ವಿಲ್ಸನ್ ಪ್ರಾಸ್ಪರೋನನ್ನು ಒಂದು ಕೋನದಿಂದ, ಒಂದು ಹಂತದಲ್ಲಿ ಮಾತ್ರ ವಿಶ್ಲೇಷಣೆ ಮಾಡಿದ. ಆದ್ದರಿಂದಲೇ ಆ ಹಂತದ ಅವನ ವಿಮರ್ಶೆಯನ್ನು ಮೂರ್ತಿರಾಯರು ಮೆಚ್ಚಿರುವುದು. ಆದರೆ ಪಾತ್ರದ ಅಂತಃಸ್ಸತ್ವದ ಬೆಳವಣಿಗೆ; ಪರಿವರ್ತನೆ, ಪಾತ್ರದ ಸಮಷ್ಟಿ, ವ್ಯಕ್ತಿತ್ವದ ಮೇಲೆ ಕಾಲದ ಪ್ರಭಾವ-ಇವುಗಳನ್ನು ಡೋವರ್‌ವಿಲ್ಸನ್ ಗಣನೆಗೆ ತೆಗೆದುಕೊಳ್ಳಲಿಲ್ಲ. ಆದರೆ ಮೂರ್ತಿರಾಯರು ಒಂದು ಪಾತ್ರವನ್ನು ಎಲ್ಲಾ ದಿಕ್ಕಿನಿಂದಲೂ ಅಳೆದು ತೂಗಿ ನೋಡಿದಾಗ ಅವರ ವಿಮರ್ಶನ ದೃಷ್ಟಿಗೆ ಆ ಪಾತ್ರದ ಎಲ್ಲಾ ಮುಖಗಳ ದರ್ಶನ ವಾಗುತ್ತದೆ. ಪ್ರಾಸ್ಪರೋನ ರೋಷ - ಪ್ರಸನ್ನತೆಗಳ ದ್ವಂದ್ವ ಅವನ ಬೆಳವಣಿಗೆಯ ವಿವಿಧ ಮಜಲುಗಳು. ಅದನ್ನು ಈ ಸ್ಥಿತ್ಯಂತರವನ್ನು-ಅವನ ಮಾತಿನಿಂದಲೇ ಸಮರ್ಥಿಸುತ್ತಾರೆ.

ಹಿಂದೆ ಮಿಲಾನ್‌ನಲ್ಲಿದ್ದ ಪ್ರಾಸ್ಪರನಿಗೂ ಈ ನಾಟಕದ ಮೊದಲನೆಯ ಅಂಕದಲ್ಲಿ ತನ್ನ ಕಥೆಯನ್ನು ಹೇಳುವ ಪ್ರಾಸ್ಪರಿಗೂ ವ್ಯತ್ಯಾಸವಿದೆ. ಹಿಂದಿನ ಪ್ರಾಸ್ಪರೋ ಪ್ರಪಂಚಕ್ಕೆ ಬೆನ್ನು ತಿರುಗಿಸಿ ಅಧ್ಯಯನದಲ್ಲಿ ಮುಳುಗಿದ್ದನು. ಕಥೆ ಹೇಳುತ್ತಿರುವ ಪ್ರಾಸ್ಪರೋ ತಾನು ಹಿಂದೆ ಮಾಡಿದ್ದು ಸರಿಯಲ್ಲ ಎಂದು ತಿಳಿದವನು. ತಾನು ಆ್ಯಂಟೋನಿಯೋವಿನ ದ್ರೋಹಕ್ಕೆ ಅವಕಾಶ ಕಲ್ಪಿಸಿಕೊಟ್ಟೆ, ಅದು ತಪ್ಪು ಎಂಬ ಭಾವನೆ ಅವನು ಕಥೆ ಹೇಳುವ ರೀತಿಯಲ್ಲಿ ಇಣುಕಿ ನೋಡುತ್ತಿರುವಂತಿದೆ.

ಲೌಕಿಕಾರ್ಥಂಗಳಿಗೆ ನಾ ವಿಮುಖನಾದೆನ್

ನನ್ನ ಔದಾಸೀನ್ಯಮುತ್ಕರಿಸಿತವನಲ್ಲಿ ಹೊಲ್ಲತನಮಂ, (ಪುಟ 32)

ಅವನ ಅಧ್ಯಯನವೂ, ಅದರಿಂದ ಪಡೆದ ಮನಶಕ್ತಿ. ಮಂತ್ರ ಶಕ್ತಿಗಳು ಪ್ರಯೋಜನಕ್ಕೆ ಬಂದದ್ದು ತಪ್ಪಿನ ಅರಿವಾದ ಮೇಲೆ. ಆಗ ಕ್ಷಮೆಯ ಮನೋವೃತ್ತಿ ಬೆಳೆಯಿತು. (ಪುಟ 33)

ಪಾತ್ರಗಳ ಇಂತಹ ಮಾನಸಿಕ ಅವಸ್ಥಾಂತರಗಳ ಸೂಕ್ಷ್ಮ ಪರಿಚಯ ಅವರಿಗಿದೆ. 'ಚಿಕವೀರ ರಾಜೇಂದ್ರ'ದಲ್ಲಿಯೂ ಚಿಕವೀರನ ಕ್ರೌರ್ಯವನ್ನು ಅವರು ಗುರುತಿಸಿದಂತೆ, ಒಬ್ಬ ತಂದೆಯ ನೆಲೆಯಲ್ಲಿ ಮಗಳ ಬಗ್ಗೆ ಅವನಿಗಿರುವ ವಾತ್ಸಲ್ಯವನ್ನೂ ಅವರು ಅರಿಯಬಲ್ಲರು. ಅದನ್ನು ಗೌರವಿಸಬಲ್ಲರು (ಮಾಸ್ತಿಯವರ ಕತೆಗಳು ಪುಟ 135-136) ಪ್ರಾಸ್ಪರೋನಲ್ಲಿ ಈ ಬದಲಾವಣೆ-ಪರಿವರ್ತನೆ-ಅವರು ಗುರುತಿಸಿದ್ದಾರೆ. ಅದರ ಹಿನ್ನೆಲೆ ಹೀಗಿದೆ.

ಪಾತ್ರ ಚಿತ್ರಣ ಎರಡು ದಾರಿಯಲ್ಲಿ ನಡೆಯಬಹುದು. ಮಾನವನೊಬ್ಬನು ಮಾಡುವ ಕ್ರಿಯೆ ಅವನ ಸ್ವಭಾವದ ಫಲ ಎಂದು ತೋರಿಸುವುದು ಮಾತ್ರವಲ್ಲದೆ, ಆ ಕ್ರಿಯೆಯ ಫಲವಾಗಿ ಅವನ ಸ್ವಭಾವ ಹೇಗೆ ಮಾರ್ಪಡುತ್ತದೆ ಎಂಬುದನ್ನು ಚಿತ್ರಿಸಬಹುದು. ಈ ಮಾರ್ಗವನ್ನು ಅನುಸರಿಸಿದರೆ ಪಾತ್ರದ ಒಂದು ಸ್ವಭಾವ ಹೋಗಿ ಮತ್ತೊಂದು ಬರುತ್ತದೆ ಎಂದಲ್ಲ. ಆ ಸ್ವಭಾವ ನಮ್ಮ ಕಣ್ಣ ಮುಂದೆ ಬೆಳೆದಂತೆ ಅನುಭವವಾಗುತ್ತದೆ. ಸ್ವಭಾವ ಒಟ್ಟಿನಲ್ಲಿ ಒಂದೇ. ಆದರೆ ಅದರಲ್ಲಿ ಮೊದಲು ಕಾಣದಿದ್ದ ಕೆಲವು ಅಂಶಗಳು ಕಾಲಗತಿಯಿಂದಾಗಿ, ಪರಿಸ್ಥಿತಿಯಿಂದಾಗಿ, ಕ್ರಮೇಣ ಬೆಳಕಿಗೆ ಬರುತ್ತವೆ; ಸುಪ್ತವಾಗಿದ್ದ ಶಕ್ತಿಗಳು ಚೈತನ್ಯ ಪಡೆಯುತ್ತವೆ. ಈ ಮಾರ್ಗವನ್ನು ಅನುಸರಿಸುವ ಕಾದಂಬರಿಗಳಲ್ಲಿ, ಪಾತ್ರದ ಸ್ವಭಾವಕ್ಕೂ ಪರಿಸ್ಥಿತಿಗೂ ಕ್ರಿಯೆ ಪ್ರತಿಕ್ರಿಯೆಯ ಸಂಬಂಧವಿರುವುದು ಸ್ಪಷ್ಟವಾಗಿ ಕಾಣುತ್ತದೆ. ಮಾಸ್ತಿಯವರ 'ಸುಬ್ಬಣ್ಣ'ದಲ್ಲಿ ಈ ಬಗೆಯ ಚಿತ್ರಣವನ್ನು ಕಾಣಬಹುದು. ಒಂದು ದೃಷ್ಟಿಯಿಂದ ಕಥೆಯ ಆದಿಭಾಗದಲ್ಲಿ ಕಾಣಬರುವ ಸುಬ್ಬಣ್ಣ ಬೇರೆ, ಕೊನೆಯಲ್ಲಿ ಕಾಣಬರುವವನು ಬೇರೆ ಎಂದು ತೋರಬಹುದಾದರೂ ನಿಜವಾಗಿ ಕೊನೆಯ ಭಾಗದ ಸುಬ್ಬಣ್ಣ ಮೊದಲ ಭಾಗದ ಸುಬ್ಬಣ್ಣನಿಂದ ಬೆಳೆದವನೇ. (ಮಾಸ್ತಿಯವರ ಕಥೆಗಳು ಪುಟ 132)

ಪ್ರಾಸ್ಪರೊ ಎಲ್ಲಾ ಇತರ ಪಾತ್ರಗಳ ಮೇಲೂ ನಿಯಂತ್ರಣ ಹೊಂದಿದವನು. ಕ್ಯಾಲಿಬನ್ ಅಂತಹವರಲ್ಲಿ ಒಬ್ಬ. ನಾವು ಮೇಲಿಂದ ಮೇಲೆ ಕಾಣಬಹುದಾದ ಇವರಿಬ್ಬರ ಸಂಬಂಧ ಸಾಧುವೆನಿಸುತ್ತದೆ. ಪ್ರಾಸ್ಪರೋ ಕ್ಯಾಲಿಬನ್‌ನನ್ನು ಕಾಣುವ ದೃಷ್ಟಿಯೊಂದಿಗೆ, ಮಿರಾಂಡಳ ಸ್ಥಾನದಲ್ಲಿ ನಾವು ನಿಂತು ಅವನ ಬಗ್ಗೆ ಆಲೋಚಿಸಿದರೆ, ನಾವೂ ನಮ್ಮ ದೃಷ್ಟಿ ಆಲೋಚನೆಗಳನ್ನು ಸಮನ್ವಯಗೊಳಿಸಿಕೊಂಡರೆ ನಾವೂ ಅದೇ ನೆಲೆಯಲ್ಲಿ ನಿಲ್ಲುತ್ತೇವೆ. ಹೀಗೆ ಈ ಮುಂಬರಿವನ್ನು ನಾವು ಸಾಧಿಸದೆ ಇದ್ದಾಗ ನಮ್ಮ ಅಭಿಪ್ರಾಯವೂ ಅವರ ಅಭಿಪ್ರಾಯವೇ ಆಗಿ ಮಾರ್ಪಾಡಾಗುತ್ತದೆ. ಮೂರ್ತಿರಾಯರ ಮುನ್ನಡೆ ಎತ್ತರ ಹಾಗೂ ಆಳಗಳು ಕ್ಯಾಲಿಬನ್‌ನನ್ನು ಕುರಿತ ವಿಮರ್ಶೆಯಲ್ಲಿ ವ್ಯಕ್ತವಾಗುತ್ತವೆ. ಇದಕ್ಕೆ ಇತರ ಎಲ್ಲಾ ಪಾತ್ರಗಳಿಗಿಂತಲೂ ಹೆಚ್ಚಿನ ಪುಟಗಳನ್ನು ಮೀಸಲಾಗಿರಿಸಿದ್ದಾರೆ.-ಅಂತೆಯೇ ನಮ್ಮ ಮನಸ್ಸನ್ನೂ ಆಕ್ರಮಿಸಿರುವವನು ಕ್ಯಾಲಿಬನ್. ವಿಸ್ಮಯದ ಮಾತೆಂದರೆ

ಕ್ಯಾಲಿಬನ್‌ನನ್ನು ಕುರಿತು ವಿಮರ್ಶೆ ಓದುತ್ತಾ ಮುಂದೆ ಹೋದಂತೆಲ್ಲಾ ಅವನ ಬಗ್ಗೆ ಮೊದಲು ಇದ್ದ ಜಿಗುಪ್ಸೆ, ತಾತ್ಸಾರ, ರೋಷಗಳು ಮಾಯವಾಗಿ ಒಂದು ವಿಧವಾದ ಕ್ಷಮೆ, ಸಹನೆ, ಸಹಾನುಭೂತಿ, ಸಹಜತೆಗಳು ಮೂಡುತ್ತವೆ. ಇದು ಮೂರ್ತಿರಾಯರ ವಿಮರ್ಶೆಯ ಮಾಂತ್ರಿಕ ಸ್ಪರ್ಶದ ಪ್ರಭಾವ. ನಾವು ಪ್ರಾಸ್ಪರೋ ಅಥವಾ ಮಿರಾಂಡರೇ ಆಗಿ ಕ್ಯಾಲಿಬನ್‌ನನ್ನು ನೋಡಿದರೆ ನಾವು ಅವನಿಗೆ ಅನಿಷ್ಟ ಸಂಕೇತದ ಸ್ಥಾನ ನೀಡುತ್ತೇವೆ. ಅದೃಷ್ಟವಶಾತ್ ನಾವು ಮೂರ್ತಿರಾಯರ ವಿಮರ್ಶೆಯನ್ನು ಮುಂದೆ ಮುಂದೆ ಓದುತ್ತಾ ಹೋದಂತೆಲ್ಲಾ ಆ ಮೊದಲ ಆಕ್ರೋಶ ಮಾಯವಾಗಿ, ಒಂದು ಸದ್ಭಾವನೆ ಉದಿಸುತ್ತದೆ. "ವಿಮರ್ಶಕರು ಬಹುಮಟ್ಟಿಗೆ ಅವನ (ಪ್ರಾಸ್ಪರೋ) ಅಭಿಪ್ರಾಯದಿಂದ ಪ್ರಭಾವಿತರಾಗಿದ್ದಾರೆಂದರೆ ಆಶ್ಚರ್ಯವಲ್ಲ"-(43) ಎಂಬ ಮಾತಿನಿಂದ ಮೂರ್ತಿರಾಯರು ತಮಗಿಂತ ಹಿಂದಿನ ವಿಮರ್ಶೆಗಳನ್ನು ಒಪ್ಪುವವರಲ್ಲ ಎಂಬುದು ನಿರ್ವಿವಾದ. ಕ್ಯಾಲಿಬನ್ ಮಿರಾಂಡಳ ಮೇಲೆ ಹಲ್ಲೆ ನಡೆಸಲು ಯತ್ನಿಸಿದ ಸಂದರ್ಭವನ್ನು ಮೂರ್ತಿರಾಯರು ಪರಿಸರದ ದೃಷ್ಟಿಯಿಂದ ಪರಿಶೀಲಿಸುತ್ತಾರೆ. ಇವರಿಬ್ಬರೊಡನೆ ಹೋಲಿಸಿ ನೋಡಿದರೆ ನಾಗರೀಕತೆಯ ಸ್ಪರ್ಶವೇ ಇಲ್ಲದ ಕ್ಯಾಲಿಬನ್ ಇವರಿಗಿಂತ ವಾಸಿ ಎನ್ನಿಸುತ್ತದೆ. (43).

ಕ್ಯಾಲಿಬನ್‌ನ ನಡತೆ ನಿರೀಕ್ಷಿಸಬೇಕಾದ ಅಪರಾಧ- (ಪುಟ 45) ಎಂಬ ಮಾತು ಅವರ ಈ ಪಾತ್ರವನ್ನು ಕುರಿತು ನಡೆಸಿದ ಸಂಶೋಧನಾತ್ಮಕ ಅಧ್ಯಯನಕ್ಕೆ ನಿದರ್ಶನ. ಪ್ರಾಸ್ಪರೊ ಕ್ಯಾಲಿಬನ್‌ನನ್ನು ಕುರಿತು ಆಡುವ ಭರ್ತ್ಸನೆ, ನಿಂದೆ ಸಹಜ. ಆದರೂ ಪ್ರಾಸ್ಪರೊ ಕ್ಯಾಲಿಬನ್‌ನನ್ನು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ ಎನ್ನುವುದಕ್ಕೆ ನಾಟಕದಲ್ಲಿ ಆಧಾರವಿದೆ. (ಪುಟ 51) ಎಂಬಲ್ಲಿ ಮೂರ್ತಿರಾಯರು ಪ್ರಾಸ್ಪರೋನ ಅಭಿಪ್ರಾಯದಿಂದ ಪ್ರಭಾವಿತರಾಗಿಲ್ಲವೆಂಬುವುದು ನಿರ್ವಿವಾದ. ಯಾವುದೇ ಪೂರ್ವಗ್ರಹವಿಲ್ಲದೆ, ಒಂದು ಪಾತ್ರವನ್ನು ನಿಚ್ಚಳ ದೃಷ್ಟಿಯಿಂದ ನೋಡಬಲ್ಲೆವಾದರೆ ಆಗಷ್ಟೇ ನೈಜ ವಿಮರ್ಶೆ ಸಾಧ್ಯ. ಕ್ಯಾಲಿಬನ್ ನಮ್ಮ ಆಗ್ರಹಕ್ಕೆ ತುತ್ತಾಗದೆ, ಮರುಕಕ್ಕೆ ಪಾತ್ರನಾಗಬೇಕಾದವನು. ಇದಕ್ಕೆ ಕಾರಣ ಅವನ ನೈತಿಕ ಪ್ರಜ್ಞೆಯ ಅಭಾವ. ಫರ್ಡಿನೆಂಡ್-ಕ್ಯಾಲಿಬನ್‌ರವರನ್ನು ಪರಸ್ಪರ ಹೋಲಿಸಿದಾಗ ಇದು ವ್ಯಕ್ತವಾಗುತ್ತದೆ. ಕ್ಯಾಲಿಬನ್‌ನನ್ನು ಕುರಿತ ಮಾನವ ದಯಾಮೃತ ಅವರ ಕಾಳಜಿಗೆ ಸಾಕ್ಷಿ. ಅಂತಹ ನೀಚ ಪಾತ್ರದಲ್ಲಿಯೂ ಅವರು ತೋರಿದ ಸಹಾನುಭೂತಿ ಮೂರ್ತಿರಾಯರ ಹೃದಯ ವೈಶಾಲ್ಯತೆ ಹಾಗೂ ಮಾನವ ಜನಾಂಗದ ಮೇಲೆ ಇರುವ ಅನುಕಂಪಕ್ಕೆ ಸಾಕ್ಷಿ. ಅಂಥ ಗೋವಿಂದ ಪೈಗಳು ಹೊಲೆಯನನ್ನು ನಮ್ಮಲ್ಲಿಯೂ ಗುರುತಿಸಿದಂತೆ, ಮೂರ್ತಿರಾಯರು ಆ ಕ್ಯಾಲಿಬನ್ ತತ್ವವನ್ನು ಹೊರಗೆ ಪಾತ್ರದ ಮೂರ್ತ ಸ್ವರೂಪದಲ್ಲಷ್ಟೇ ಅಲ್ಲ, ನಮ್ಮಲ್ಲಿಯೂ ಒಳಗಣ ಗುಣಸ್ವಭಾವ ಸಂಸ್ಕಾರಗಳಲ್ಲಿ ಅಮೂರ್ತರೂಪದಲ್ಲಿಯೂ ಗುರುತಿಸಿದ್ದಾರೆ.

ಆದರೆ ನಾವು-ನಾಟಕವನ್ನು ನೋಡುತ್ತಿರುವವರು-ಪ್ರಾಸ್ಪರನ ದೃಷ್ಟಿಯನ್ನೇ ಇಟ್ಟುಕೊಳ್ಳಬೇಕಾದ್ದಿಲ್ಲ. ಕ್ಯಾಲಿಬನ್ ಮಾಡಿದ್ದು ನಮ್ಮೆಲ್ಲರಲ್ಲೂ ಇರುವ ಮಣ್ಣಿನ ಅಂಶದ ಪರಿಣಾಮ, ಎದುರಿಸಬೇಕಾದದ್ದು ಎಂದುಕೊಳ್ಳೋಣ. (ಪುಟ 46) ಕ್ಯಾಲಿಬನ್ ಮತ್ತೇನೇ ಆಗಿರಲಿ, ಸಿನಿಕನಲ್ಲ, (ಪುಟ 66 ಅಡಿ ಟಿಪ್ಪಣಿ) ಇವರಿಬ್ಬರೊಡನೆ ಹೋಲಿಸಿ ನೋಡಿದರೆ ನಾಗರೀಕತೆಯ ಸ್ಪರ್ಶವೇ ಇಲ್ಲದ ಕ್ಯಾಲಿಬನ್ ಇವರಿಗಿಂತ ವಾಸಿ ಎನ್ನಿಸುತ್ತದೆ (43).

ನಾಟಕ ಶ್ರವ್ಯವೂ ಹೌದು, ದೃಶ್ಯವೂ ಹೌದು. ಶ್ರವ್ಯ ಮಾನಸಿಕವಾಗಿ ದೃಶ್ಯರೂಪ ತಳೆದಾಗ ಪ್ರತಿಯೊಂದರ ಪಾತ್ರವೂ ಮಾನಸಿಕ ರಂಗದಲ್ಲಿ ತನ್ನ ಸತ್ವ ಸತ್ವಗಳನ್ನು ತೆರೆದುಕೊಳ್ಳುತ್ತದೆ. ಈ ಮರುಸೃಷ್ಟಿ ಅಥವಾ ಪರಿವರ್ತನೆಗೆ ತಲಸ್ಪರ್ಶಿಯಾದ ಅಧ್ಯಯನ ಅಗತ್ಯ. ಜೊತೆಗೆ ವಾಚಕನೆ ಪಾತ್ರವಾಗಿ ಅಲ್ಲಿಯ ದೃಶ್ಯ ಪರಿಣಾಮವನ್ನು ಸ್ವತಃ ಅನುಭವಿಸಬೇಕಾಗುತ್ತದೆ. ಇದೊಂದು ಬಗೆಯ ಮಾನಸಿಕ ಪಾತ್ರ ಕಲ್ಪನೆ. ಅಂತಹ ಒಂದು ನಿದರ್ಶನ ಇಲ್ಲಿದೆ.

ರಂಗಸ್ಥಳದಲ್ಲಿ ಪ್ರಾಸ್ಪರನ ಪಾತ್ರ ವಹಿಸುವ ನಟ ಪ್ರತಿಭಾಶಾಲಿಯಾದರೆ, ಆಗ ಅವನ ಮುಖದ ಮೇಲೆ ಹೆಂಗರುಳಿನ ವಾತ್ಸಲ್ಯದ ಮುಗುಳುನಗೆ ಮೂಡಬೇಕು.

(ಪುಟ –31)

ಮೂರ್ತಿರಾಯರು ಈ ಭಾಗವನ್ನು ಕೇವಲ ಓದಿದ್ದು ಮಾತ್ರವಲ್ಲ, ಮಾನಸಿಕವಾಗಿ ಪ್ರಾಸ್ಪರೋನೇ ಆಗಿದ್ದರು ಕೂಡಾ.

ಯಾವ ಕವಿಯ ಯಾವ ಕೃತಿಯೇ ಆಗಿರಲಿ, ಅದನ್ನು ಓದಿ ಅರ್ಥಮಾಡಿ ಕೊಳ್ಳುವಲ್ಲಿ ಎರಡು ಕ್ರಮ. ಕವಿ ಹೃದಯವನ್ನು ಅರ್ಥ ಮಾಡಿಕೊಳ್ಳಲು ನಾವೂ ಅದೇ ಸ್ತರದಲ್ಲಿರಬೇಕು. ಭಾರತೀಯ ಕಾವ್ಯ ಮೀಮಾಂಸಕರ ದೃಷ್ಟಿಯಲ್ಲಿ ಇಂತಹ ವಾಚಕನನ್ನು 'ಸ(ಮಾನ) ಹೃದಯ'ನೆಂದು ಗುರುತಿಸಿದರು. ಅಂತಹ ಸಹೃದಯದ ಕೃತಿಯನ್ನು ಓದಿ ಅಂತರಾರ್ಥವನ್ನು ಗ್ರಹಿಸಿ ಗುರುತಿಸಿ ಬರೆದ ವ್ಯಾಖ್ಯಾನಗಳ ಅಧ್ಯಯನ ಮತ್ತೊಂದು ಕ್ರಮ. ಮೂರ್ತಿರಾಯರ ಸಹೃದಯತೆಗೆ ಒಂದೆರಡು ನಿದರ್ಶನಗಳನ್ನು ನೀಡಬಹುದು.

ಮಾಸ್ತಿಯವರ ಕಥೆಗಳಲ್ಲಿ ಅಲ್ಲಲ್ಲಿ ಬರುವ ಸಾಹಿತ್ಯಿಕ ಸನ್ನಿವೇಶ ಅಥವಾ ಪಾತ್ರಗಳಿಗೆ ಒಂದು ಕಿರು ವಿವರಣೆ ನೀಡಿದಂತೆ ಇಲ್ಲಿಯೂ ಅಂತಹ ವಿವರಣೆಯಿದೆ. ಈ ವಿವರಣೆಯನ್ನು ಓದಿದ ಅನಂತರ ನಮಗೆ ನಾಟಕವನ್ನು ಓದುವುದು ಅಥವಾ ನೋಡಿ ಅರ್ಥ ಮಾಡಿಕೊಳ್ಳುವುದು ಸುಲಭವಾಗುತ್ತದೆ. ಇದು ಒಂದು ರೀತಿಯ ಮಾರ್ಗದರ್ಶಿ ಇದ್ದಂತೆ. ಪ್ರಾಸ್ಪರೋ ಹೇಳುವ "ನನ್ನ ಯೋಜನೆ". ಎಂಬ ಮಾತಿನ ಅವರ 'ಯೋಜನೆ' ಏನೆಂದರೆ ನೀಡಿದ ಸುದೀರ್ಘ ವಿವರಣೆ ಈ ಪ್ರಾಸ್ಪರೋನ ಪರಿವರ್ತನೆ, ನಾಟಕದ ಮುನ್ನಡೆಯನ್ನು ಸೂಚಿಸುತ್ತದೆ (ಪುಟ 28). ಬಿರುಗಾಳಿಯನ್ನು ಕಂಡು ಕಳವಳಗೊಂಡ ಮಿರಾಂಡಳಿಗೆ ಪ್ರಾಸ್ಪರೋ ಹೇಳುವ "ನಿನ್ನ ಹಿತಕ್ಕಾಗಿ" ಎಂಬ "ಮಾತಿನ ಉದ್ದೇಶ"......ಅವಳು ಫರ್ಡಿನೆಂಡ್‌ನನ್ನು ಮದುವೆಯಾಗುವುದು" (ಪುಟ 29) ಎಂಬ ಅರ್ಥ ವಿಸ್ತಾರ ಸ್ಪಷ್ಟತೆಯನ್ನು ನೀಡುತ್ತದೆ. ಹಾಗೆಯೇ ಏರಿಯಲ್ ಹೇಳುವ "ಮೂವರಿಹರಿಲ್ಲಿ ಪಾಪಾತ್ಮರ್" ಎಂಬಲ್ಲಿ ಆ ಮೂವರು ಪಾಪಾತ್ಮರು ಯಾರು ಎಂಬುದನ್ನೂ ಅವರು ಬೆರಳಿಟ್ಟು ತೋರಿಸಿದ್ದಾರೆ.

ಈ ಅವತರಣಿಕೆ ಇಷ್ಟೊಂದು ರಮ್ಯವಾಗುವುದಕ್ಕೆ ಮೂರ್ತಿರಾಯರ ವಿಶಿಷ್ಟ ಶೈಲಿ, ವಿನೋದ, ಮುಕ್ತಕ, ನೀತಿಬೋಧೆ, ಇತ್ಯಾದಿಗಳು ಪ್ರಾಸಂಗಿಕವಾಗಿ ಕಾಣಸಿಗುತ್ತದೆ. ಆಕರ್ಷಕವಾದ ಉಪಮೆಗಳನ್ನು ಮೂರ್ತಿರಾಯರು ಅಲ್ಲಲ್ಲಿ ಉಪಯೋಗಿಸಿದ್ದಾರೆ. 'ಏರಿಯಲ್‌ನನ್ನು ಹೇಗೆ ಬಣ್ಣಿಸೋಣ? ಅವನು ಮಾನವನಲ್ಲ' (ಪುಟ 40) ಎಂಬ ಆರಂಭದ ಮಾತೇ ನಮ್ಮ ಕುತೂಹಲವನ್ನು ಹಿಡಿದಿಡುತ್ತದೆ. "ಸೆಬಾಸ್ಟಿಯನ್‌ಗಾಗಿ

ನಾವು ಕಾಲವನ್ನು ವೆಚ್ಚ ಮಾಡಬೇಕಾಗಿಲ್ಲ, ಆ್ಯಂಟೋನಿಯೋನಿನ ಧೈರ್ಯ ಮುಂದೊಡಗುಗಳನ್ನು ಕಳೆದರೆ ಉಳಿದದ್ದು ಸೆಬಾಸ್ಟಿಯನ್" (ಪುಟ 42) ಮುಂತಾದ ಮಿತವಾದ ಮಾತುಗಳಲ್ಲಿ ವಿಸ್ತಾರ ವ್ಯಾಖ್ಯಾನವನ್ನು ತುಂಬಿಸಿದ್ದಾರೆ. ಪಂಪನು ಹೇಳುವ 'ಕಿರಿದರೊಳ್ ಪಿರಿದರ್ಥಂ' ಎಂಬ ಸೌರೋಕ್ತಿ ಇಲ್ಲಿ ಅನ್ವಯವಾಗುತ್ತದೆ.

ಮೂರ್ತಿರಾಯರು ಈ ನಾಟಕದ ವಿಮರ್ಶೆ ಒಂದು ರಸವತ್ಕೃತಿಯನ್ನಾಗಿ ಮಾಡಿರುವುದಕ್ಕೆ ಅವರ ಆಕರ್ಷಕವೂ, ರಮ್ಯವೂ ಆಗಿರುವ ಶೈಲಿಯೇ ಕಾರಣ. ಅವರು ಉಪಯೋಗಿಸಿರುವ ಉಪಮೆ, ದೃಷ್ಟಾಂತಗಳು, ತಾತ್ವಿಕತೆ ನಮ್ಮಿಂದ, ನಮ್ಮ ಸಾಮಾಜಿಕ, ಆಂತರಿಕ ಜೀವನದಿಂದ ದೂರವಲ್ಲ. ನಾವು ಅವುಗಳನ್ನು ನಮ್ಮದೇ ದೈನಂದಿನ ಜೀವನದಲ್ಲಿ ಕಾಣುತ್ತೇವೆ ಅಥವಾ ಅನುಭವಿಸುತ್ತೇವೆ. ಪಾಶ್ಚಾತ್ಯ ಕಾವ್ಯ ಮೀಮಾಂಸೆಯ ಪಾರಿಭಾಷಿಕ ಶಬ್ದಗಳಾದ ರುದ್ರನಾಟಕ, ಪ್ಯಾಸ್ಟೋರಲ್, ಆ್ಯಲಿಗರಿ, ಕೇಡಿನ ಸಮಸ್ಯೆ, ದುರಂತ ನಾಯಕ, ರೋಮ್ಯಾನ್ಸ್-ಮುಂತಾದವುಗಳನ್ನು ಅನ್ವಯಿಸಿದಂತೆ, 'ಕೃತಿ', 'ಸಂಸ್ಕಾರ', 'ದಿವ್ಯ ಸಂಗೀತ'-ಮುಂತಾದವುಗಳನ್ನು ಕುರಿತು- 'ಚಂಡಮಾರುತ'ವನ್ನು ಗಮನದಲ್ಲಿರಿಸಿಕೊಂಡು ವಿಶ್ಲೇಷಣೆ ಮಾಡಿದ್ದಾರೆ. ಕೆಲವು ಪಾತ್ರಗಳ ಅಂಕಿತನಾಮಗಳು ಹೇಗೆ ಅನ್ವರ್ಥವೂ ಆಗಿದೆ ಎಂಬುದನ್ನೂ ವಿವರಿಸಿದ್ದಾರೆ. (ಪುಟ 15) ಭಾರತೀಯ ಸಾಹಿತ್ಯದಲ್ಲಿ, ವಿಶೇಷತಃ ರಾಮಾಯಣ ಮಹಾಭಾರತಗಳಲ್ಲಿ- ಇಂತಹ ಸಾಂಕೇತಿಕಾರ್ಥಗಳಿವೆ. ಅಲ್ಲಲ್ಲಿ ಅವರ ಹಾಸ್ಯ ಪ್ರಜ್ಞೆ ಮಿಂಚಿದೆ.

ಅವನ ಸ್ವಭಾವ ಪರಿವರ್ತನೆಗಾಗಿಯೇ ಆ ಸಿಂಹ ಅಲ್ಲಿಗೆ ಬಂದು ಪ್ರಾಣ ತೆತ್ತಿತು; ಫ್ರೆಡ್ರಿಕ್ ಒಳ್ಳೆಯವನಾಗುವುದಕ್ಕೆ ಇಷ್ಟು ಪ್ರಯತ್ನವೂ ಬೇಕಾಗಿರಲಿಲ್ಲ. ಅಣ್ಣನನ್ನು ಕೊಲ್ಲ ಹೊರಟಿದ್ದ ಅವನಿಗೆ ದಾರಿಯಲ್ಲಿ ಯಾವನೋ ಸಂತನೊಬ್ಬ ಉಪದೇಶ ಮಾಡಿದ. ಅವನಲ್ಲಿ ವೈರಾಗ್ಯ ಉದಿಸಿತು. ಷೇಕ್ಸ್‌ಪಿಯರ್ ಇವರಿಬ್ಬರನ್ನೂ ಕ್ಷಮಿಸಿದ್ದು ಮಾತ್ರವಲ್ಲ, ಆಲಿವರ್‌ಗೆ ಸದ್ಗುಣಿಯಾದ ರಾಜಪುತ್ರಿಯನ್ನು ಕೊಟ್ಟು ಮದುವೆಯನ್ನೂ ಮಾಡಿಸಿಬಿಟ್ಟ; (ಪುಟ 62) ಎಳೆಯ ಮಕ್ಕಳಿಗೆ ಪೆಟ್ಟಾದಾಗ ನಾವು ಗಾಯದ ಮೇಲೆ ಉಫ್ ಎಂದು ಊದಿ "ಹೊರಟೇ ಹೋಯಿತು" ಎಂದು ಸಮಾಧಾನ ಪಡಿಸುವಂತೆ. (ಪುಟ 62)

ಮೂರ್ತಿರಾಯರ ಹಾಸ್ಯ ಪ್ರಜ್ಞೆಗೆ (ವಿನೋದಶೀಲತೆಗೂ) ಇಲ್ಲಿ ಎಡೆಯಿದೆ.

ಕೆಲವು ಮುಕ್ತಕಗಳು :

.......ಮರಗಳನ್ನು ನೋಡುವ ಹವ್ಯಾಸದಲ್ಲಿ ಕಾಡನ್ನೇ ಮರೆತಂತಾಗುವುದು (ಪುಟ 16) (ಗಿಡವನ್ನು ನೋಡುವ ಉತ್ಸಾಹದಲ್ಲಿ ಒಟ್ಟು ಕಾಡಿನ ಚೆಲುವನ್ನು ಮರೆತಂತಾಗುತ್ತದೆ, ಎಂಬ ಎಸ್. ಪ್ರಹ್ಲಾದರಾವ್‌ರವರ ವಾಕ್ಯ-ಗ್ರಂಥಲೋಕ: ಪುಟ 10, ಜನವರಿ 01,1987-ಇದೇ ವಾಕ್ಯದಿಂದ ಪ್ರೇರಿತ). ಈ ಘರ್ಷಣೆ ಬಾಹ್ಯವಾಗಬಹುದು ಅಥವಾ ಮಾನಸಿಕವಾಗಬಹುದು-ಅಂದರೆ ಒಬ್ಬನೇ ವ್ಯಕ್ತಿಯ ಸ್ವಭಾವದಲ್ಲಿರುವ ಎರಡು ಅಂಶಗಳ ಹೋರಾಟವಾಗಬಹುದು. (ಪುಟ 20) ಇದು ನಮಗೆ ಕುರುಕ್ಷೇತ್ರದ ಅರ್ಜುನನ ಮಾನಸಿಕ ಘರ್ಷಣೆಯನ್ನು ನೆನಪಿಸುತ್ತದೆ. ಪ್ರಾಸ್ಪರನ ಮಂತ್ರಶಕ್ತಿಯ ಧವಳ ಶಕ್ತಿ (White Magic)........(23).

ಪ್ರಶಾಂತತೆ ಬರಬೇಕಾದರೆ ಮನಸ್ಸನ್ನು ಹದದಲ್ಲಿಟ್ಟುಕೊಂಡಿರಬೇಕು. (24)

ಪ್ರಕೃತಿ ವಿರುದ್ಧವಾದ ಗುಣಗಳು ನಮ್ಮಲ್ಲಿ ಮನೆ ಮಾಡಿಕೊಂಡಿರುವುದುಂಟು. ಅವು ಕೀಳು ಗುಣಗಳಾದರೆ ಅವನ್ನು ಹೊರಹಾಕಬೇಕು. ಹಾಕುವುದು ಸಾಧ್ಯ. (56)

ನಮ್ಮ ಬದುಕು ಸಹನೆ, ದಯೆ, ದಾಕ್ಷಿಣ್ಯ, ಕರುಣೆ, ಸ್ನೇಹ, ಪ್ರೇಮ ಮುಂತಾದ ಸ್ವರಗಳ ಮೇಳವಾಗಬೇಕು. (57)

ಭಾಷಾಂತರದ ಶೈಲಿಗೆ ಒಂದು ನಿದರ್ಶನ :

'ಕೇಡು ಉಳಿದೇ ಉಳಿಯಿತು. ಆದರೆ ಅದರಿಂದ ನಿರಾಶರಾಗಬೇಕಾಗಿಲ್ಲ. ಅದರ ದವಡೆಯಿಂದ ಕೆಲವರಷ್ಟಾದರೂ ಹೊರಗೆಳೆದು ರಕ್ಷಿಸಬಹುದು-ನಾವು ಅನುಕಂಪದ, ಕ್ಷಮೆಯ ಮನೋಧರ್ಮವನ್ನು ಬೆಳೆಸಿಕೊಂಡರೆ, ಆ ವಿಷಸರ್ಪದ ಹಲ್ಲು ಕಿತ್ತು ಅದನ್ನು ಒತ್ತಟ್ಟಿಗೆ ಬಿಟ್ಟು, ಬದುಕು ಮುಂದುವರಿಸಬಹುದು. (66) ಆನಂದವನ್ನು ಅನುಭವಿಸದಿದ್ದವರು ಆ್ಯಂಟೋಣಿಯೋ..... ಸಂಪದ್ಯುಕ್ತ ಸುಗ್ಗಿ, ಇಲ್ಲಿಯ ತೃಪ್ತಿ ನಾಸ್ತಿಕವಾಚಕವಾದದ್ದಲ್ಲಿ, 'ಬರಗಾಲದಲ್ಲಿ, ಬರುವ ಅಲ್ಪ ತೃಪ್ತಿಯೂ ಅಲ್ಲ.

ಇಲ್ಲಿಯ ರೂಪಕ ಯಮಕಾಲಂಕಾರಗಳು (Alliteration) ಮೂರ್ತಿರಾಯರ ಆಕರ್ಷಕ ಶೈಲಿಗೆ ಒಂದು ಬೆಡಗನ್ನು ನೀಡಿದೆ.

ಷೇಕ್ಸ್‌ಪಿಯರ್‌ನ ಕೃತಿ ಶ್ರೇಣಿಯಲ್ಲಿ ತಮಗೆ ಆತ್ಮೀಯವೆನಿಸಿದ ಕೃತಿಯೊಂದನ್ನು ಆರಿಸಿಕೊಂಡು ಅನುವಾದ ಮಾಡಿದವರು ಹಲವರು. ಡಾ. ಡಿ.ವಿ.ಜಿ ಯವರನ್ನು ಉಳಿದು ಯಾರೂ ಇಷ್ಟು ವಿಸ್ತೃತವೂ ವಿಮರ್ಶಾತ್ಮಕವೂ ಆದ ವಿಮರ್ಶೆಯನ್ನು ಬರೆದವರಿಲ್ಲ. ಕೆಲವರು ತಮ್ಮ ಇತರ ಕೃತಿಗಳ ಬಗ್ಗೆ ಮಾಡಿದ ಯಾವುದೋ, ಆಕ್ಷೇಪಣೆಗೆ ಉತ್ತರ ರೂಪವಾಗಿ ಈ ಅನುವಾದದ ಮುನ್ನುಡಿಯನ್ನು ಉಪಯೋಗಿಸಿದವರಿದ್ದಾರೆ. ಷೇಕ್ಸ್‌ಪಿಯರ್‌ನ ವ್ಯೆಯಕ್ತಿಕ, ಸಾಹಿತ್ಯಕ ಜೀವನಕ್ಕೆ ಸಂಬಂಧಿಸಿದ ಅಂಶಗಳು ಎಲ್ಲೆಲ್ಲಿ ಧ್ವನಿತವಾಗಿವೆ ಎಂಬ ಅಂಶವನ್ನೂ ಅವರು ಗುರುತಿಸಿರುವುದು ಅನನ್ಯ.

ಗದ್ಯಾನುವಾದವಾಗಬೇಕೆಂಬ ಅವರ ಮೊದಲಿನ ನಿಶ್ಚಯವನ್ನು ಅವರು ಬದಲಾಯಿಸಿ ಸರಳ ರಗಳೆಯಲ್ಲಿ ಅನುವಾದಿಸಿದ ಅನಂತರ ಇದನ್ನು ಅವರ ವಿದ್ವದಭಿಮಾನಿಗಳ, ವಿದ್ವನ್ಮಿತ್ರರೊಂದಿಗೆ ವಸ್ತುನಿಷ್ಠವಾಗಿ ವಿಮರ್ಶೆಗೆ ಒಳಪಡಿಸಿ ಅನಂತರ ಅದನ್ನು ಪ್ರಕಟಿಸಿದ್ದಾರೆ. ಆದ್ದರಿಂದ ಇದು ಪ್ರಕಟಪೂರ್ವ ವಿಮರ್ಶೆಗೆ ಒಳಪಟ್ಟ ಕೃತಿ. ಇಂಗ್ಲೀಷ್-ಕನ್ನಡ ಭಾಷೆ ಸಾಹಿತ್ಯಗಳೆರಡರಲ್ಲಿಯೂ ಪ್ರಭುತ್ವ ಪಡೆದ ವಿದ್ವಾಂಸರು, ಅನುವಾದಕರ ಸಮಾನಸ್ಥಾಯಿಯಲ್ಲಿರುವ ಪಂಡಿತರು ಈ ಕೃತಿಯನ್ನು ಪರಿಶೀಲಿಸಿದ್ದಾರೆ.

ಮೂರ್ತಿರಾಯರ ಅನುವಾದ ಸರಳ. ಅವರದು ವಿಶಿಷ್ಟ ಭಾಷೆ. ನಿಘಂಟುವಿನ ಸಹಾಯವಿಲ್ಲದೆ ಓದಿ ನೇರವಾಗಿ ಅರ್ಥ ಮಾಡಿಕೊಳ್ಳಬಹುದಾದ ಶೈಲಿ. ದೇಸೀ ಶೈಲಿಯ ಅನುವಾದ, ಕನ್ನಡ ಹಾಗೂ ಸಂಸ್ಕೃತ ಶಬ್ದಗಳ ವೈಚಿತ್ರ್ಯಪೂರ್ಣ ಸಂಯೋಜನೆ ಓದಲು, ಓದಿ ಆನಂದಿಸಲು ಅನುಕೂಲವಾಗಿದೆ. ಕಣ್ಣೀರು ಅವರಿಗೆ 'ಲವಣಾಶ್ರು' (ಪುಟ 9), ಸಮುದ್ರ 'ಲವಣಾಬ್ಧಿ' (11). ಸಮುದ್ರದ ನೀರು 'ಲವಣಾಂಬು' (21). ಭುವಿ, ನಿರಯ, ಐಸಿರಿ, ಅಚ್ಚರಿ, ಸಂತಸ, ಕುವರ, ರಕ್ಕಸ, ಸಿರಿ, ಸಗ್ಗ, ಸಿರಿವಂತೆ, ಅಗಸ, ಕುವರಿ-ಮುಂತಾದ ತದ್ಭವಗಳ ಉಪಯೋಗ ಮೂರ್ತಿರಾಯರು ಮೂಲವನ್ನು ಬಹು ಎಚ್ಚರಿಕೆಯಿಂದ ಅನುಸರಿಸಿರುವುದರ ನಿದರ್ಶನ.

ಅನುವಾದ ಮಾಡುವಾಗ ಅನುವಾದಕರ ಮಾತೃಭಾಷೆಯ ಮೇಲೂ ಹಿಡಿತವಿರುವುದು ಅತ್ಯಗತ್ಯ. ದೇಶ್ಯ ಶಬ್ದಗಳ ಪರಿಚಯ ತುಂಬಾ ಅವಶ್ಯಕ. ಮೂರ್ತಿರಾಯರು ಉಪಯೋಗಿಸಿದ ದೇಶ್ಯ ಶಬ್ದಗಳು: ಸುಳಿಗುರುಳು, ತಂಪು, ಮಣ್ಮುದ್ದೆ, ಹುಣ್ಣು, ತುರಿಚಂಗಿ, ಚುಟುರು ಚುಟುರು (ಅನುಕರಣಾವ್ಯಯ) ಜೀವಕ್ಕಿ, ಮಾಕಂಪ, ಕಡಲು, ಅಣುಗಿ, ಬಡಾಹುಂಜ, ಭೋಟಾ ಹುಂಜ, ಚಕ್ರಭೀಮನ ಕೋಟೆ-ಮುಂತಾದ ಅನ್ಯದೇಶ್ಯ ನುಡಿಗಟ್ಟುಗಳು ಮೂಲದ ಪರಿಣಾಮವನ್ನು ಅನುವಾದದಲ್ಲಿಯೂ ಹಿಡಿದಿಡಲು ಸಮರ್ಥವಾಗಿವೆ.

ಮೊರೆಯಿಡಲಿ ಮೊರೆವ ವಾರಿಧಿಗೆಂದು, ನಿಶಿಯೊಳಗೇ ನೀನಿದ್ದೊಡೆನ್ನ ಬಳಿ, ನಿಶಿಯೆ ಹೊಸ ಹೊಂಬೆಳಗು (42) ಸಕಲ ಗುಣಪರಿಪೂರ್ಣೆ, ನಿನಗೆ ಸರಿಸಮರಿಲ್ಲ, ಜೀವಕೋಟಿಯಲಿತುವ ಸದ್ಗುಣಗಳೆಲ್ಲದರ ಸಾರವನೆ ಶೇಖರಿಸಿ ಸೃಜಿಸಿಹರ್ ನಿನ್ನ (43) – ಮುಂತಾದ ಕನ್ನಡ ಸಂಸ್ಕೃತ ಪದಸಂಯೋಜನೆಗಳು ಹಿತಮಿತವಾಗಿ ಬಂದಿರುವುದು ಓದಿ ಅರ್ಥ ಮಾಡಿಕೊಳ್ಳಲು ಸುಲಭವಾಗಿವೆ.

ಕೆಲವು ಕಡೆ ಸಂಸ್ಕೃತ ಪದಗಳದೇ ಮೇಲುಗೈಯಾಗಿದೆ. ಇವುಗಳನ್ನು ಸರಳಗೊಳಿಸಬಹುದಾಗಿತ್ತು. ಗೂಢವಿದ್ಯಾಧ್ಯಯನದೊಳ್ (6). ಕಾರ್ಯದವಶೇಷ; ನರಕಭಾಜನೆ,....... ಪತಿತೆ, ಅಭಿಚಾರಿ, ಪೀತದಾರು, ವೃಕ್ಷಗ್ರಂಥಿ, ಪ್ರಥಮ ದರ್ಶನದ ಕ್ಷಣ ದೃಷ್ಟಿವಿನಿಮಯಮಾಯ್ತು (20). ದೇಶೋವಿಶಾಲ (22). ಜಲವೀಥಿ, ಮಧುಬಿಂದು ವೃಷ್ಟಿ, ಸರ್ವಾಂಗ ಪರಿಪೂರ್ಣ......ಸ್ವರ್ಣಯುಗ......(28). ಪುರಾತನ ಪ್ರಾಣ ಪಂಡಿತ ಮನ್ಯನಿಗೆ, (33). ಪೇರಾನಂದ, ಪ್ರಿಯಗುಪರ. ಅಜ್ಞಾನಕಾವಳ, ಸಂಜೆ ಘಂಟೆ, ಘನಗುಣಗಳ್ಳೆಸಿರಿ-ಮುಂತಾದ ಕೆಲವು ಅರಿಸಮಾಸಗಳನ್ನು ನಿವಾರಿಸಬಹುದಿತ್ತು. 'ಪೇರಾನಂದ' ಶ್ರೀ ಯವರ 'ಅಶ್ವತ್ಥಾಮನ್'ನಿಂದ ಎತ್ತಿಕೊಂಡಂತಿದೆ.

ಅನುವಾದ ಅನುವಾದವೆನ್ನಿಸದೆ ಸ್ವತಂತ್ರ ರಚನೆಗಳಂತೆ ಇರುವ ಮಾದರಿಗಳು ಸನ್ನಿವೇಶದ ಸಾಂದ್ರತೆಯನ್ನು ವಿಶದೀಕರಿಸುತ್ತವೆ.

ಹಾರಲೀಂ? ಈಜಲೀಂ? ಒಳಪೊಗಲಿ ಬೆಂಕಿಯನ್?
ಸುಳಿಗುರುಳ ಮೇಘಮಾಲೆಯನೇರಿ ನಡೆಸಲೀಂ? (10)

'ನರಕ ಬರಿದಾಯ್ತು, ನಿರಯ ದೆವ್ವಗಳೆಲ್ಲ ಇಲ್ಲಿ ಬಂದಿಹವು' (11). (ನೀರದೆವ್ವಗಳು.. 'ಶ್ರೀ' ಪ್ರಯೋಗ).

ದೇವನಾಲಿಯದೊಳಗೆ ಹೊಲ್ಲತೆಯು ನೆಲಸೀತೆ,
ದುಷ್ಟಸತ್ವಗಳಿಂದ ಸೊಗದ ಮಂದಿರಗೊಳಿರೆ
ಒಳಿತು ಹೋರಾಗುವುದು, ತಾನಲ್ಲಿ ನೆಲಸಲ್ (21)
ಹೊದರುಳ್ಳ ಹರವು ನೆಲ, ಹೊದೆಗಳಿಲ್ಲದ ಜೋರೆ-
ಸಣ್ಣ ಗರಿಕೆಯು ಹಸುರ ಹಾಸಿರುವ ತಾಣಕ್ಕೆ
ನನ್ನ ಕರೆಸಿದಳೇಕೆ, ನಿಮ್ಮರಸಿ? (58)
ಬಾ ಹೋಗು ಎನುವ ಮುನ್ನ,
ಉಸಿರ ಬಿಟ್ಟು, ಎರಡು ಪಟ್ಟು,
ಅಂತೆ ಅಂತೆ ಎನುವ ಮುನ್ನ,

ಹಗುರದಿ ಕಾಲ್ಬೆಟ್ಟನಿಟ್ಟು......(56)
ಇನ್ಮೇಲೆ ಸಮ್ದ್ರಕ್ಕೆ ನಾ ಹೋಗಾಕಿಲ್ಲ,
ನಾ ಹೋಗಾಕಿಲ್ಲ
ದಡದ್ಮೇಲೆ ಸಾಯ್ತೀನಿ, ಸಮ್ದ್ರದಲಿಲ್ಲ
ನಾ ಹೋಗಾಕಿಲ್ಲ. (36)
ಸಮಾಧಾನ ಹೇಳಿದರೆ ತಂಗಳ ಗಂಜಿ ಕುಡಿದ ಹಾಗಾಡ್ತಾನೆ. (23)

ಹೀಗೆ ಆಡುಭಾಷೆಯ (ಬೇಂದ್ರೆ) ಶೈಲಿ, ಕುಡಿದವರಾಡುವ ತೊದಲು ಮಾತಿನ (ರಾಜರತ್ನಂ-ಕೈಲಾಸಂ) ಶೈಲಿ, ದೇಶ್ಯ ಶಬ್ದಗಳನ್ನೇ ಕೋದು ಬರೆದ ಪದ್ಯ ಶೈಲಿ, ವಿಭಕ್ತಿ ಪ್ರತ್ಯಯಗಳನ್ನಷ್ಟೇ ಕನ್ನಡಕ್ಕೆ ಸೀಮಿತಗೊಳಿಸಿ, ಮಿಕ್ಕ ನಾಮಪದಗಳನ್ನೆಲ್ಲಾ ಸಂಸ್ಕೃತಮಯವನ್ನಾಗಿಸಿದ ಶೈಲಿ - ಹೀಗೆ ವಿಭಿನ್ನ ರೀತಿಯ ಶೈಲಿಗಳನ್ನು ಅಳವಡಿಸಿ ಕೊಂಡು ಮಾಡಿದ ಈ ಅನುವಾದ ಕನ್ನಡದ ಉತ್ಕೃಷ್ಟ ಅನುವಾದಗಳಲ್ಲಿ ಒಂದಾಗಿದೆ.

ಅನುವಾದದ ನಡುವೆ ಉಪಯೋಗಿಸಿದ ಅವರದೇ ಆದ ಶಬ್ದ ಸಂಯೋಜನೆಗಳನ್ನು ಕುರಿತು ಹದಿನೆಂಟು ಪುಟಗಳ ಟಿಪ್ಪಣಿ ಈ ಅನುವಾದದ ಇನ್ನೊಂದು ವೈಶಿಷ್ಟ್ಯ. ಪುಟ ಹಾಗೂ ಸಾಲುಸಂಖ್ಯೆಗಳನ್ನು ಉಲ್ಲೇಖಿಸಿ ಕೊಟ್ಟ, ವಿವರಣೆ ಕಿರಿದಾದರೂ ಅರ್ಥ ವತ್ತಾಗಿದೆ. ಅಂಕಿತನಾಮಗಳ ಮೂಲ, ವಿಶ್ಲೇಷಣೆ, ಹಿನ್ನೆಲೆಯನ್ನು ಕೊಟ್ಟಿರುವುದು ಮೂಲವನ್ನು ಓದಲು ಪ್ರೇರಣಾತ್ಮಕವಾಗಿದೆ. ಮೊದಲ ಪುಟದಲ್ಲಿ ಬರುವ ಮೊದಲ ಮಾತಿನಂತೆ ಕೊನೆಯ ಪುಟದ ನಾಟಕದ 'ಕೊನೆಯ ಮಾತು'ವಿನ ಬಗ್ಗೆ ಒಂದು ಕಿರುಟಿಪ್ಪಣಿಯೇ ಒಂದು ವಿಮರ್ಶೆ. ಆ ಕೊನೆಯ ಮಾತು ಷೇಕ್ಸ್‌ಪಿಯರ್‌ನ ವೈಯಕ್ತಿಕ ಜೀವನವನ್ನು ಎಷ್ಟರಮಟ್ಟಿಗೆ ಸಾಂಕೇತಿಕವಾಗಿ ನಿರ್ದೇಶಿಸುತ್ತದೆ ಎಂಬುದೂ ಇಲ್ಲಿ ವಿಮರ್ಶೆಗೆ ಒಳಗಾದ ಒಂದು ಅಂಶ.

ಈ ನಾಟಕವನ್ನು ಭಾಷಾಂತರಿಸುವಾಗ ಮೂರ್ತಿರಾಯರು ಸಾಧ್ಯವಿರುವ ಮಟ್ಟಿಗೂ "ನಿಕಟಾನುವಾದ" ಕ್ರಮವನ್ನೇ ಅನುಸರಿಸಿದ್ದಾರೆ("ಅಂದರೆ ಭಾಷಾಂತರ ವೊಂದು ನಿಕಟಾನುವಾದ ಎನ್ನಿಸಿಕೊಳ್ಳಬೇಕಾದರೆ ಅದು ಎಲ್ಲ ದೃಷ್ಟಿಗಳಿಂದಲೂ ಮೂಲದ ಪೂರ್ಣ ಪ್ರತಿಬಿಂಬವಾಗಿರಬೇಕೇ ಹೊರತು ಆಂಶಿಕ ಬಿಂಬವಾಗಿರ ಕೂಡದು......ಅಂದರೆ, ಬಹುಮಟ್ಟಿಗೆ ಮೂಲಕ್ಕೆ ಏನನ್ನೂ ಸೇರಿಸದೇ, ಯಾವ ಅಂಶವನ್ನೂ ಕೈಬಿಡದೆ ಎಲ್ಲ ದೃಷ್ಟಿಗಳಿಂದಲೂ ಮೂಲದ ಹಾದಿಯಲ್ಲೇ ನಡೆಯುವ ಭಾಷಾಂತರವನ್ನು ನಿಕಟಾನುವಾದವೆಂದು ಕರೆಯಬಹುದು.".

-ಡಾ. ಪ್ರಧಾನ್ ಗುರುದತ್ "ಭಾಷಾಂತರಕಲೆ" (1989) (ಪುಟ 86)

ಮೂರ್ತಿರಾಯರ ಅನುವಾದದೊಂದಿಗೆ ಪ್ರಾತಿನಿಧಿಕವಾಗಿ ಮಾಸ್ತಿಯವರ ಅನುವಾದವನ್ನೂ ಹೋಲಿಸಿನೋಡಬಹುದು. ಇಲ್ಲಿ ಮಾಸ್ತಿಯವರ ಅನುವಾದಕ್ಕಿಂತಲೂ ಮೂರ್ತಿರಾಯರ ಅನುವಾದವೇ ಹೆಚ್ಚು ಸಮರ್ಪಕವಾಗಿದೆ.

ಮೂಲ :-

Come unto these yellow sands,
And then take hands;
Curtised when you have and kiss'd.

The wild waves whist,
Foot it featly here and there,
And sweet sprites, the burden bear
Hark, Hark ! –
Burden dispersedly, Bow–Wow,
The watch dogs bark
Burden dispersedly, Bow–Wod
Hark, hark ! I hear
The strain of strutting chanticleer
Cry, cock–a–diddle–dow.

ಮೂರ್ತಿರಾಯರ ಅನುವಾದ:–

ಬನ್ನಿರಿಲ್ಲಿಗೆ, ಬನ್ನಿ ಬನ್ನಿರಿ
ಹಳದಿ ಮರಳಿನ ತೀರಕೆ
ಕೈಯ್ಯ ನೀಡಿರಿ, ಕೈಯ ತನ್ನಿರಿ,
ಆಯ್ತು ಕೈಗಳ ಸೇರಿಕೆ.
ಮೊದಲು ವಂದನ, ಬಳಿಕ ಚುಂಬನ,
ಮೊರೆವ ತೆರೆಗಳ ಸಾಂತ್ವನ
ಮೆರೆಯಲಿಲ್ಲೆಡೆ ನೃತ್ಯದೋರಣ
ಚತುರ ಚರಣದ ಚಾರಣ.
ಮಧುರ ಸತ್ವಗಳೆಲ್ಲ ಬನ್ನಿರಿ
ಬಂದು ಪಲ್ಲವಿ ಹಾಡಿರಿ
ಕೇಳದೋ ಕೇಳಿಲ್ಲಿ

(ಬೇರೆ ಬೇರೆ ಕಡೆಗಳಿಂದ ಪಲ್ಲವಿ ಕೇಳಿ ಬರುತ್ತದೆ) ಬೌ,ಬೌ, ಕಾವಲಿನ ನಾಯಿಗಳು ಬೊಗಳುತಿವೆ ಅಲ್ಲಿ (ಬೇರೆ ಬೇರೆ ಕಡೆಗಳಿಂದ ಪಲ್ಲವಿ ಕೇಳಿಬರುತ್ತವೆ) ಬೌ, ವೌ,

ಕೇಳದೋ ಕೇಳಲ್ಲಿ
ಕೇಳುತಿದೆ ನನಗಲ್ಲಿ
ಬೀಗು ನಡೆ ನಡೆಯುತಿಹ ಕುಕ್ಕುಟಾರ್ಯನ ಕೂಗು
ಕೋಕೋ ಕೋ ಎನ್ನುತಿಹ ಕೂಗು,

ಮಾಸ್ತಿಯವರ ಅನುವಾದ:–

ಹೊಂಬಣ್ಣದೀ ಮರಳ ಮೇಗಡೆಗೆ ಬನ್ನಿರಿ,
ಹಿಡಿಯಿರಿ, ಕೈ ತನ್ನಿರಿ,
ವಿನಯದಲಿ ತಲೆಬಾಗಿ ಮುದ್ದಿಸಿದ ಮೇಲೆ,
ಮೌನ, ರುದ್ರ ತರಂಗಮಾಲೇ

ಅಲ್ಲಲ್ಲಿ ಹಗುರಾದ ಹೆಜ್ಜೆಯಲಿ ಕುಣಿಯಿರಿ
ಇನಿ ಬೂತುಗಳೆ ನೀವು ಪಲ್ಲವಿಯ ನುಡಿಯಿರಿ
ಅಕೋ ಅಕೋ ಕೇಳು
(ವೌ ವೌ ಎಂದು ಪಲ್ಲವಿ, ಚೆದರಿ ಕೇಳುತ್ತದೆ)
ಕಾವಲಿನ ಸೊಣಗ ನಾನ ಊಳು
(ವೌ ವೌ ಎಂದು ಪಲ್ಲವಿ ಚೆದರಿ ಕೇಳುತ್ತದೆ)
ಅಕೋ ಅಕೋ ಕೇಳಿತು, ನನಗೆ ಇದಕೋ
ಬೆಡಗಿ ನಡೆ ಹುಂಜನದು   ಕೊಕ್ಕೋ ಕೋಕೋ
(ಕೂಗು:ಕೊಕ್ಕೋ ಕೊಕೋ)

ಮೂಲ:-

Full fathom five thy father lies;
Of his bones are coral made,
Those are pearls that were his eyes;
Nothing of him that doth fade
But doth suffer a sea–change
Into something rich and strange.
Sea – nymphs hourly ring his knell;
Burden, Ding–dong.
Hark! now I hear them – Ding– dong bell

Tempest ನಾಟಕದ ಈ ಸುಪ್ರಸಿದ್ಧ ಕಾವ್ಯಭಾಗದ ಮೂರ್ತಿರಾಯರ ಅನುವಾದ ಹೀಗಿದೆ.

ನಿನ್ನಯ್ಯ ಮಲಗಿಹನಲ್ಲಿ –ಅಗೊ ಅಲ್ಲಿ
ಐದಾಳು ನೀರ ತಳದಲ್ಲಿ (ಪಲ್ಲವಿ)
ಮೊದಲವನ ಕಣ್ಣಾವುದಿತ್ತು–ಅದುವೆ
ನೋಡು ಈಗಾಗಿದೆ ಮುತ್ತು
ಅವನೆಲುಬುಗಳಿಂದೆ
ಹವಳ ರಚಿಸಿದರಿಂದೆ
ಬದಲು ಆಗುವುದುಂಟು, ಮತ್ತು
ಅವನೊಳಗಳಿವುದೇ ಇಹುದು–ಅದಕೆ
ಮುನ್ನೀರ ಬದಲಿಕೆಯಹುದು
ಐಸಿರಿಯ ಬದಲಿಕೆ
ಏನೊಂದೋ ಬದಲಿಕೆಯಹುದು
ಕಡಲಕನ್ನೆಯರಲ್ಲಿ ಇಹರು–ಅವರು
ಘಂಟೆಯ ಬಾರಿಸುತಿಹರು:
ತಾಸು ತಾಸಿಗು ಘಂಟೆ

ಸಾವ ಸೂಚಿಪ ಘಂಟೆ
(ಪಲ್ಲವಿ : ಡಿಂಗ್ ಡಾಂಗ್)
ಕೇಳುತಿಹದದೊ ಘಂಟೆ : ಡಿಂಗ್ ಡಾಂಗ್ ಡಿಂಗ್.

ಮಾಸ್ತಿಯವರ ಅನುವಾದ:

ಬೊಪ್ಪ ನಿನ್ನವನಿಹನು ಐದಾಳಡಿ ಮುಳುಗಿ
ಹವಳವಾಗಲು ಬಂದಿಹವು ಅವನ ಎಲುಬು
ಅವನ ಕಣ್ಣುಗಳೀಗ ಮುತ್ತಾಗಿತೊಳಗಿ
ಕೆಡಲಿಲ್ಲ ಅವನದಾವುದರದೂ ಚೆಲವು,
ಮುನ್ನೀರ ಮಾರ್ಪಾಡು ತಾಗಿ,
ಎಲ್ಲ ಸುಂದರ ವಿಲಕ್ಷಣ ವಸ್ತು ಆಗಿ
ಜಲಕನ್ಯೆಯರು ಅವರ ಸಾವಗಂಟೆಯ ಸದಾ
(ಪಲ್ಲವಿ: ಡಿಂಗ್ ಡಾಂಗ್)

ಮೂಲ:

Fer: Admir'd Miranda !
Indeed the top of admiration; worth
What's dearest to the world !

ಮೂರ್ತಿರಾಯರ ಅನುವಾದ:

ಮಿರಾಂಡ, ಅಚ್ಚರಿಯ ಕೆರಳಿಸುವೆ, ಮಿರಾಂಡ:
ನಿಜಕು ನೀನಚ್ಚರಿಯ ತುಟ್ಟತುದಿ
ಪೃಥಿವಿಯೊಳಗತ್ಯಂತ ಪ್ರಿಯಮೆನಿಪುದಾವುದೋ
ಅದಕು ಸರಿದೊಗುವವಳ್,

ಮಾಸ್ತಿಯವರ ಅನುವಾದ :

ಮಿರುಮಿರುಗುವ ಮಿರಾಂಡಾ
ದಿವವೆ, ಮಿರುಗುವ ವಸ್ತುಗಳ ಶಿಖರ: ಜಗಕೆ ಬಹು
ಬಹು ಇಷ್ಟವಾದುದರ ಸಮನೆ;

(ಮಿರಾಂಡ = ಅಚ್ಚರಿಯನ್ನು ಕೆರಳಿಸುವವಳು) ಮೂರ್ತಿರಾವ್ (ಪುಟ 15)
(ಮಿರಾಂಡ ಎಂದರೆ ಮೆಚ್ಚತಕ್ಕಹೆಣ್ಣು ಎಂದು ಅರ್ಥ) ಮಾಸ್ತಿ (ಪುಟ 120)

ಮೂರ್ತಿರಾಯರಿಗೆ ತಮ್ಮ ಅನುವಾದ ಸಂಪೂರ್ಣ ಸಮರ್ಪಕವೆಂಬ ಸಮಾಧಾನ ಸಿಕ್ಕಿಲ್ಲ. ಅವರು ತಮ್ಮ ಅನುವಾದದ ಮಿತಿಯನ್ನು ಬಲ್ಲರು. ಒಂದು ಭಾಷೆಯ ಶಬ್ದಕ್ಕೆ ಸಂವಾದಿಯಾದ ಶಬ್ದ ಇನ್ನೊಂದು ಭಾಷೆಯಲ್ಲಿ ವಿರಳ. ಮೂಲದ ಅರ್ಥ ವ್ಯಾಪ್ತಿಯನ್ನೇ ಸಂಪೂರ್ಣವಾಗಿ ಪ್ರತಿನಿಧಿಸುವ ಶಬ್ದ ಮತ್ತೊಂದು ಭಾಷೆಯಲ್ಲಿ ದುರ್ಲಭ. ಮೂರ್ತಿರಾಯರೇ ತಮ್ಮ ಅನುವಾದ ಅಲ್ಲಲ್ಲಿ ಸೋತಿರುವುದನ್ನು ಗುರುತಿಸಿದ್ದಾರೆ.

'Monster' ಅನ್ನು 'ಭೂತ' ಎಂದು ಅನುವಾದಿಸಿರುವುದು ಸಮರ್ಪಕವಲ್ಲ. ಬೇರೆ ಪದ ಹೊಳೆಯಲಿಲ್ಲ. (ಪುಟ 89)

"ಒಟ್ಟಿನಲ್ಲಿ ನಿಕಟಾನುವಾದಕ್ಕೂ ಕೆಲವೊಂದು ಮಿತಿಗಳುಂಟು. ಎಷ್ಟೇ ನಿಕಟವಾಗಿ ಮೂಲವನ್ನು ಅನುಸರಿಸಿದರೂ ಮೀರಿ ನಿಲ್ಲುವ ಭಾವವನ್ನು ಸೆರೆಹಿಡಿಯಲು ಸಮರ್ಥ ಪರಿಣಾಮಕಾರಿ ಆವರಣವನ್ನು ಸೃಷ್ಟಿಸಲು ಭಾಷಾಂತರಕಾರನ ಸೃಜನಾತ್ಮಕವಾದ ಪ್ರತಿಭೆ ಕಾರ್ಯೋನ್ಮುಖವಾಗಬೇಕಾಗುತ್ತದೆ. ಇದು ಈ ಹಂತದಲ್ಲಿ ಸೃಜನಾತ್ಮಕ ಅನುವಾದದ ವಲಯವನ್ನು ಪ್ರವೇಶಿಸುತ್ತದೆ. ಒಟ್ಟಿನಲ್ಲಿ ನಿಕಟಾನುವಾದವೂ ಒಂದು ವಿಶಿಷ್ಟ ಹಂತದವರೆಗೆ ಮಾತ್ರ ನಮ್ಮನ್ನು ಕೊಂಡೊಯ್ಯುತ್ತದೆ ಎಂದಂತೆ ಆಯಿತು. ಇಷ್ಟಾಗಿಯೂ ಭಾಷಾಂತರದಲ್ಲಿ ಈ ಹಂತವನ್ನು ತಲುಪುವುದೂ ಒಂದು ಗಮನಾರ್ಹ ಸಾಧನೆ ಎಂಬುದನ್ನು ಮರೆಯುವಂತಿಲ್ಲ" ಎಂಬ ಡಾ. ಪ್ರಧಾನ್ ಗುರುದತ್ತರ ಅಭಿಪ್ರಾಯದ ಬೆಳಕಿನಲ್ಲಿ (ಅ.ಪ್ರ. 87–88) ಮೂರ್ತಿರಾಯರ ಅನುವಾದ-ಉತ್ಕೃಷ್ಟ ಮಟ್ಟದ್ದು, ಮಿತಿ – ಕ್ಷಮಾರ್ಹವಾದುದು.

ಈ ಅನುವಾದವನ್ನು ಕುರಿತು ಡಾ. ಜಿ.ಎಸ್. ಶಿವರುದ್ರಪ್ಪನವರ ಅಭಿಪ್ರಾಯ ಹೀಗಿದೆ:

ಷೇಕ್ಸ್‌ಪಿಯರ್‌ನ 'Tempest' ಅನ್ನು 'ಚಂಡಮಾರುತ' ಎಂದು ಅವರು ಮಾಡಿರುವ ಅನುವಾದ ಕನ್ನಡದಲ್ಲಿ ಅನನ್ಯವಾದದ್ದು ಎಂದು ತಿಳಿದುಕೊಂಡಿದ್ದೇನೆ. ಯಾರೂ ಕೂಡಾ ಇಷ್ಟು ಸೊಗಸಾಗಿ ಈ ರೀತಿ ಅನುವಾದ ಮಾಡಿಲ್ಲ. ಅಷ್ಟು ಸೊಗಸಾಗಿ ಷೇಕ್ಸ್‌ಪಿಯರ್‌ನನ್ನು ಕನ್ನಡಕ್ಕೆ ತಂದಿದ್ದಾರೆ. ಅದರ ಮುನ್ನುಡಿಯಂತೂ ಸೊಗಸಾದ ಶ್ರೇಷ್ಠ ವಿಮರ್ಶೆಗೆ ಒಂದು ಮಾದರಿಯಾಗಿದೆ (ಪುಟ 2)

(ಕುವೆಂಪು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗ-ಕನ್ನಡ ಭಾರತಿ ವ್ಯವಸ್ಥೆ ಮಾಡಿದ್ದ ಮೂರ್ತಿರಾಯರ ಕೃತಿಗಳನ್ನು ಕುರಿತ ವಿಚಾರ ಸಂಕಿರಣವನ್ನು ಉದ್ಘಾಟನೆ ಮಾಡಿದ ಸಂದರ್ಭ. ಉದ್ಘಾಟನಾ ಭಾಷಣ ಅಪ್ರಕಟಿತ.)

## 7.11 ಮೂರ್ತಿರಾಯರ ಅನುವಾದ – ಚಂಡಮಾರುತ ಹಾಗೂ ಕುವೆಂಪುರವರ ರೂಪಾಂತರ – ಬಿರುಗಾಳಿ : ಒಂದು ತೌಲನಿಕ ಅಧ್ಯಯನ

ಷೇಕ್ಸ್‌ಪಿಯರ್ ಮಹಾಕವಿಯ The Tempest ನಾಟಕವನ್ನು ಮೂರ್ತಿರಾಯರು "ಚಂಡಮಾರುತ" ವೆಂಬ ಹೆಸರಿನಿಂದ ಭಾಷಾಂತರ ಮಾಡಿದ್ದಾರೆ. ಕುವೆಂಪುರವರು ಅದೇ ನಾಟಕವನ್ನು "ಬಿರುಗಾಳಿ" ಎಂಬ ಹೆಸರಿನಿಂದ ರೂಪಾಂತರ ಮಾಡಿದ್ದಾರೆ. ಒಂದು ಭಾಷಾಂತರ ಮತ್ತೊಂದು ರೂಪಾಂತರವಾದರೂ ಹಲವು ದೃಷ್ಟಿಯಿಂದ ಈ ಎರಡು ಕೃತಿಗಳ ತೌಲನಿಕ ಅಧ್ಯಯನ ಯೋಗ್ಯವೆನಿಸುತ್ತದೆ. ಭಾಷಾಂತರ ಹೇಗೂ ಸರಿಯೆ. ರೂಪಾಂತರವೂ ಒಂದು ದೃಷ್ಟಿಯಿಂದ ಭಾಷಾಂತರವೇ. ಭಾಷಾಂತರಕಾರನಿಗೆ ಮೂಲಕೃತಿಯ ಚೌಕಟ್ಟು ಒಂದು ಮಿತಿಯ ನಿರ್ಬಂಧವನ್ನು ವಿಧಿಸುತ್ತದೆ. ಆದರೆ ರೂಪಾಂತರಕಾರನಿಗೆ ಕೊಂಚ ಸ್ವಾತಂತ್ರ್ಯ ಹೆಚ್ಚಾಗಿದ್ದರೂ ವಸ್ತು ಮೂಲವನ್ನೇ ಅನಿವಾರ್ಯವಾಗಿ ಅನುಸರಿಸಬೇಕಾಗುತ್ತದೆ. ಈ ಇಬ್ಬರು ಸಮಕಾಲೀನರು ಹಲವು ಸಾಮ್ಯಗಳನ್ನುಳ್ಳವರು. ಇಬ್ಬರೂ ಪ್ರಾಧ್ಯಾಪಕರು. ಇಂಗ್ಲೀಷ್ ಸಾಹಿತ್ಯದಿಂದ ಸ್ಫೂರ್ತಿ ಪ್ರಭಾವ ಪಡೆದವರು. ಮೂರ್ತಿರಾಯರ ಷೇಕ್ಸ್‌ಪಿಯರ್ ವಿಮರ್ಶಾ ಗ್ರಂಥಕ್ಕೆ ಕುವೆಂಪುರವರು ಮುನ್ನುಡಿ ಬರೆದಿದ್ದಾರೆ.

ಮೂಲದ ಸುಮಾರು ಎರಡೂವರೆ ಸಾವಿರ ಪಂಕ್ತಿಗಳು ಭಾಷಾಂತರದಲ್ಲಿ ಹೇಗೂ ಅಷ್ಟೇ ಬರಲೇಬೇಕಲ್ಲ. ರೂಪಾಂತರದಲ್ಲಿ ಮೂಲಕ್ಕಿಂತ ಕೆಲವು ಪಂಕ್ತಿಗಳು ಹೆಚ್ಚಾಗಿಯೇ ಬಂದಿವೆ. ಮೂರ್ತಿರಾಯರೇ ಸ್ವತಃ ತಮ್ಮ ಭಾಷಾಂತರಕ್ಕೆ 67ಪುಟಗಳಷ್ಟು ಸುದೀರ್ಘವಾದ ವಿದ್ವತ್ಪೂರ್ಣವಾದ ಅವತರಣಿಕೆಯನ್ನು ಬರೆದಿದ್ದಾರೆ. ಈ ಅವತರಣಿಕೆಯಲ್ಲಿ ಅವರು ಷೇಕ್ಸ್‌ಪಿಯರ್‌ನ ಇತರ ನಾಟಕಗಳನ್ನು ವಿಮರ್ಶಿಸಿದ್ದಾರೆ. ಪ್ರಾಸಂಗಿಕವಾಗಿ ನಾಟಕ ಭಾಗ-ಪಾತ್ರ-ಸನ್ನಿವೇಶ-ಸಂದರ್ಭಗಳನ್ನೂ ಉಲ್ಲೇಖಿಸಿದ್ದಾರೆ. ಜೊತೆಗೆ ಕೊನೆಯಲ್ಲಿ 18 ಪುಟಗಳಷ್ಟು ಟಿಪ್ಪಣಿಯನ್ನು ಒದಗಿಸಿದ್ದಾರೆ. ಕುವೆಂಪುರವರು ಕೊನೆಯಲ್ಲಿ ನಾಲ್ಕು ಪುಟಗಳಷ್ಟು ಟಿಪ್ಪಣಿ ಬರೆದಿದ್ದಾರೆ. ಇದಾಗಿ 50ವರ್ಷಗಳ ಬಳಿಕ-1981ರಲ್ಲಿ-ಮೂರ್ತಿರಾಯರು ಈ ನಾಟಕವನ್ನು ಭಾಷಾಂತರಿಸಿದ್ದಾರೆ. ಕುವೆಂಪುರವರ ರೂಪಾಂತರಕ್ಕೆ ಶ್ರೀ ಟಿ.ಎಸ್. ವೆಂಕಣ್ಣಯ್ಯನವರು ಮೂರೂವರೆ ಪುಟಗಳ ಮುನ್ನುಡಿ ಬರೆದಿದ್ದಾರೆ. ಎರಡೂವರೆ ಪುಟಗಳ ಕಥಾ ಸಾರಾಂಶವನ್ನು ಕೊಡಲಾಗಿದೆ. ಕುವೆಂಪುರವರು ಸಹಜವಾಗಿ ಮಲೆನಾಡಿನ ಪರಿಸರಕ್ಕೆ ತಕ್ಕಂತೆ ಈ ರೂಪಾಂತರವನ್ನು ಅಳವಡಿಸಿದ್ದಾರೆ. ಈ ಎರಡು ನಾಟಕಗಳ ಪಾತ್ರಗಳ ಸಮನ್ವಯ ಹೀಗಿದೆ.

| **The Tempest – ಚಂಡಮಾರುತ** | ಬಿರುಗಾಳಿ |
|---|---|
| Prospero .......................... | ಭೈರವ |
| Alonso.............................. | ರಣನಾಯಕ |
| Sebastian.......................... | ರಂಗನಾಯಕ |
| Antonio............................ | ರುದ್ರನಾಯಕ |
| Ferdinand.......................... | ಶಿವನಾಯಕ |
| Ganzalo............................ | ಜಯದೇವ |
| Adrian | |
| Fransisco | |
| Caliban............................ | ಶನಿಯ |
| Trinculo........................... | ತ್ರಿಶಂಕು |
| Stephano.......................... | ಭೀಮಣ |
| Master of a Ship | |
| Boatswain | |
| Mariners | |
| Miranda........................... | ಗೌರಾಂಬೆ |
| Ariel................................ | ಕಿನ್ನರ |
| Iris, Ceres, Juno, Nymphs } ............................ | ಬನದೇವಿ, ಜಲದೇವಿ |
| Reapers | |

Other Spirits attending on
Prospero
Naples............................ . ನಗರ
Milan.............................. ಕೆಳದಿ
Sycomax.......................... ಶ್ರೀ
Argier............................... ಮಲಯಾಳ
Claribel........................... ಸಿಂಗಣ್ಣ ನಾಯಕ

ಮೂರ್ತಿರಾಯರದು ಭಾಷಾಂತರವಾದ್ದರಿಂದ ಅಕ್ಷರಶಃ ಅನುವಾದ ಅನಿವಾರ್ಯ ಅಗತ್ಯ. ಅವರಲ್ಲಿಯೂ ಮೂರ್ತಿರಾಯರದು ಸಮಗ್ರಾನುವಾದ. ಕುವೆಂಪುರವರದ್ದಾದರೋ ರೂಪಾಂತರ. ಆದ್ದರಿಂದ ಇಲ್ಲಿ ಕುವೆಂಪುರವರಿಗೆ ಸಹಜವಾಗಿ ಮೂರ್ತಿರಾಯರಿಗಿಂತ ಹೆಚ್ಚಿನ ಸ್ವಾತಂತ್ರ್ಯವಿದೆ. ಬೇಕಾದ ಭಾಗವನ್ನು ಹಿಗ್ಗಿಸುವ, ಕುಗ್ಗಿಸುವ ಅಥವಾ ಕೈಬಿಡುವ ಸ್ವಾತಂತ್ರ್ಯ ರೂಪಾಂತರಕಾರನಿಗಿದೆ. ಹೀಗಾಗಿ ಬಿರುಗಾಳಿಯಲ್ಲಿ ಮೂಲಕ್ಕಿಂತ ಸಂಕ್ಷಿಪ್ತಭಾಗಗಳಿವೆ, ವಿಸ್ತೃತ ಭಾಗಗಳಿವೆ, ಭಾವಾನುವಾದವಿದೆ, ಸಂಗ್ರಹಾನುವಾದವಿದೆ, ಛಾಯಾನುವಾದವಿದೆ, ಮೂಲದ ತದ್ವತ್ ಅನುವಾದವೂ ಇದೆ. ಭಾಷೆ ಕೊಂಚ ಬೇರೆಯಾದರೂ ಭಾವವೊಂದೇ ಎಂದೆನಿಸುವ ಮೂಲವನ್ನು ಅಕ್ಷರಶಃ ಅನುಸರಿಸಿದ ರೂಪಾಂತರದ ಈ ಭಾಗಗಳ ನಿಕಟ ಸಾಮ್ಯ ಗಮನಾರ್ಹ.

ಪ್ರಾಸ್ಪರೊ : ಸಮಯವೊದಗಿಹುದೀಗ
ಕಿವಿದೆರೆದು ಕೇಳೆಂದು ಬೆಸಸುತಿದೆ, ಈ ನಿಮಿಷ
ಅಂತೆಸಗು, ಗಮನವಿಡು
ಈ ಕುಟೀರಕೆ ನಾವು ಬಂದ ಮುನ್ನಿನ ನೆನಪು ನಿನಗಿಹುದೆ ?
ಇರಲಾರದೆನಿಸುತಿದೆ ವರ್ಷ ಮೂರೂ ಇಲ್ಲ, ನಿನಗಾಗ.
ಮಿರಾಂಡ : ನೆನಪಿಹುದು, ಅಪ್ಪಾಜಿ
ಪ್ರಾಸ್ಪರೊ : ಏತರದು ಆ ನೆನಪು? ಬೇರೊಂದು ಮನೆಯದೆ? ಜನರದೆ ?
ಸ್ಮೃತಿಯಲುಳಿದಿಹ ಚಿತ್ರವೇನಿರಲಿ, ಅದ ತಿಳಿಸು.
ಮಿರಾಂಡ : ಬಹಳ ದೂರದ ನೆನಪು. ಕನಸಿನಂತಹ ಚಿತ್ರ ನೆನಪಿನೊಪ್ಪಿಗೆ ಪಡೆದು
ಖಚಿತವೆನಿಸುವುದಲ್ಲ. ಇರ್ದರಲ್ಲವೆ ಹಿಂದೆ ನಾಲ್ಕೈದು ಹೆಂಗಳೆಯರ್
ಚಿಕ್ಕಂದಿನಲಿ ನನ್ನ ಸಾಕಿ ಸಲಹಿದವರ್?
..............

..............
ಮಿರಾಂಡ : ನೀವಲ್ಲವೇನ್ ನನ್ನ ಪಿತ?
ಪ್ರಾಸ್ಪರೊ : ನೀನೆನ್ನ ಮಗಳೆಂದು ಹೇಳಿದಳು, ನಿನ್ನಮ್ಮ ಪರಮ ಪತಿವ್ರತೆ. ಅವಳು
ಅಹುದು. ನಿನ್ನ ಪಿತ ಹಿಂದೊಮ್ಮೆ ಮಿಲನಿನೊಡೆಯ,
ಅವನ ನಂತರ ನೀನೆ ರಾಜ್ಯಕಧಿಕಾರಿ,
ಅರಗುವರಿ ನೀನ್, ಅವಕಿಂತ ಕೀಳಲ್ಲ ಪದವಿಯೊಳ್
(ಚಂಡಮಾರುತ 1:2, 45–73)

ಈ ಭಾಗವನ್ನು 'ಬಿರುಗಾಳಿ'ಯಲ್ಲಿ ಕುವೆಂಪುರವರು ಹೀಗೆ ಅನುವಾದ ಮಾಡಿದ್ದಾರೆ. ಇಲ್ಲಿ ಮೂಲಭಾಗವನ್ನು ಇಬ್ಬರೂ ಹೇಗೆ ಅನುವಾದಿಸಿದ್ದಾರೆ, ರೂಪಾಂತರ ದಲ್ಲಿಯೂ ಮೂಲವನ್ನು ಹೇಗೆ ಅನುಸರಿಸಿದ್ದಾರೆಂಬುದನ್ನು ತೌಲನಿಕವಾಗಿ ಗಮನಿಸ ಬಹುದು.

ಭೈರವ : ಕತೆಯ ಹೇಳುವ ಕಾಲವೀಗಳ್ಕೆತಂದಿಹುದು
ಕಾಲವೇ ನಿನ್ನ ಕಿವಿಗಳ ತೆರೆಯುತಿಹುದು
ಕೇಳು, ಕಿವಿಗೊಟ್ಟು ಕೇಳು. ಈ ಗುಹೆಗೆ ನಾವು
ಬರುವ ಮುನ್ನಿನ ಕಾಲದಾ ನೆನಪಿದೆಯೇ ನಿನಗೆ?
ನಿನಗೆ ನೆನಪಿರಲಾರದು : ನೀನಾಗ ಪುಟ್ಟವಳು,
ಮೂರೆ ವರ್ಷದ ಪುಟಾಣಿ !

ಗೌರಾಂಬೆ : ನೆನಪಿದೆ, ಅಪ್ಪಯ್ಯ, ನೆನಪಿದೆ !

ಭೈರವ : ಎಲ್ಲಿಂದ ? ಯಾರಿಂದ ? ಏಕೆ ? ಹೇಳು !
ನಿನಗೆ ನೆನಪನು ತರುವ ಚಿತ್ರಮೇನಾದೊಡಂ
ಮನದಿ ಮೂಡಿದರದನು ಹೇಳು. (ಗೌರಾಂಬೆ ಚಿಂತಿಸುತ್ತಾಳೆ)

ಗೌರಾಂಬೆ : ದೂರದಲಿ,..........................
ನೆನಪಿನ ದಿಗಂತದಲಿ ಮಸುಕಾದ ಕನಸಿನೊಲು
ಮಬ್ಬಾಗಿ ಮಿಣುಕುತಿಹುದಾ ಚಿತ್ರ! ಐದಾರು
ಹೆಣ್ಣುಗಳು ಸಲಹಲಿರುತಿರ್ದರಲ್ಲವೆ ನನ್ನ?
.......................
.......................

ಗೌರಾಂಬೆ : (ಕಣ್ಣರಳಿಸಿ ಕೌತುಕದಿಂದ)
ನೀನೆನ್ನ ತಂದೆಯಲ್ಲವೆ, ಜೀಯ?

ಭೈರವ : ಇಂತೇಕೆ ಪ್ರಶ್ನಿಸುವೆ? ನಿನ್ನಮ್ಮ ಹದಿಬದೆ !
ನೀನೆನ್ನ ಮಗಳೆಂದು ಹೇಳಿದವಳವಳೆಯೇ,
ನಿನ್ನ ತಂದೆಯೆ ಕೆಳದಿಯೊಡೆಯನಾಗಿದ್ದ,
ನೀನರಸು ಕುವರಿಯಾಗಿದ್ದೆ

(ದೃಶ್ಯ 2 ಪುಟ 17–18)

ಕುವೆಂಪುರವರು ತಮ್ಮ ರೂಪಾಂತರದಲ್ಲಿ ಕೆಲವು ಮೂಲದ ಭಾವವನ್ನು ಕೊಂಚ ವಿಸ್ತರಿಸಿರುವುದನ್ನು ಕಾಣಬಹುದು:

**ಚಂಡಮಾರುತ** – ಏರಿಯಲ್ : ಮಧ್ಯಾಹ್ನ ಕಳೆದಿಹುದು (1:2–12–299)

**ಬಿರುಗಾಳಿ** – ಕಿನ್ನರ : ನಡುವಗಲ್ ದಾಂಟಿಹುದು (ಮೇಲೆ ನೋಡಿ)
ಬೆಂಗದಿರನಾಗಲೆಯೇ ಪಡುವಲೆಡೆಗೊಯ್ಯುತಿಪ
ನಿಳಿವ ಪೋಂದೇರಂ (2-25)

**ಚಂಡಮಾರುತ** – ಪ್ರಾಸ್ಪರೊ : ಚಿತ್ರತರ ಹಿಂಸೆಯಿಂ ಬಿಡಿಸಿದೆನ್ ನಿನ್ನ
ಮರೆತೆಯೇನ್ (1:2-12-315)

ಬಿರುಗಾಳಿ - ಭೈರವ ಮರೆತೆಯೇಂ' ಇನಿತರೊಳ್ ಮರೆತೆಯೇಂ'
ಎಂತಪ್ಪ ನರಕಮಂ ನರಕಯಾತನೆಯುಮಂದೆ ನಿನ್ನ
ನಾನುದ್ಧರಿಸಿ ಪೊರೆದಿರ್ಪೆನೆಂಬುದನ್ (2-26)

ಚಂಡಮಾರುತ - ಸೆಬಾಸ್ಟಿಯನ್ : ಮುಗಿಸಿಯಾನೆ, ಮಹರಾಯ ನಾಲಗೆ ಸುಮ್ಮನಿರ
ಬೇಕಲ್ಲ ! (2:1-23-36)

ಬಿರುಗಾಳಿ - ರಂಗನಾಯಕ : ಬಣಗು ವೇದಾಂತವನು ನೀನೆಲ್ಲಿ ಕಲಿತೆಯೋ!
ಸರ್ವದಾ ನಿನ್ನ ಬಣಗುಪದೇಶವನು ಕೇಳಿ ಕೇಳಿ
ಕಿವಿಗಳು ಜಡ್ಡುಗಟ್ಟಿಹವು. ತಲೆ ಚಿಟ್ಟು
ಹಿಡಿದುಹೋಗಿಹುದು. (3-38)

ಚಂಡಮಾರುತ - ಏರಿಯಲ್ : ಆರನೆಯ ತಾಸು ಪ್ರಘುಃಘಂಟೆ ಮುಗಿವುದರೊಳಗೆ
ಕಾರ್ಯಮಂ ಮುಗಿವುದೆಂದಲ್ತೆ, ಧಣಿ
ಪೇಳಿದುದು. (5:1-65-67)

ಬಿರುಗಾಳಿ - ಕಿನ್ನರ : ನೇಸರಾಗಳೆ ತನ ಹೊಂದೇರನಸ್ತಗಿರಿ ಮಸ್ತಕ
ದೊಳಿಳಿಸುತಿರ್ಪನ್, ಜೀಯ. ತಾವರೆ ತನ್ನ
ಪೂವೆಲೆವನೆಯ ಬಾಗಿಲನ್ ಮುಚ್ಚುತಿದೆ.
ದುಮ್ಮನದಿ ಕತ್ತಲೆಯ ಮೊತ್ತಗಳ ಕರಿನೆಗಳ್
ಮೂಡುದೆಸೆಯಿಂ ಮೆಲ್ಲಮೆಲ್ಲನೆ ತಿರೆಗಿಳಿದು
ಹಬ್ಬುತಿದೆ. ಇನಿತರೊಳ್ ನಮ್ಮ ಕಜ್ಜಂ ಕೊನೆಯ
ಕಾಣವೇಳ್ಕುಂ ಎಂದು ಪೊಳ್ತಡೆಯೊಳಾಡಿರ್ಪೆ
(9-84)

ಭಾಷಾಂತರ-ರೂಪಾಂತರಗಳೆರಡರಲ್ಲಿಯೂ ಬಿಡಿ ಮುಕ್ತಗಳನ್ನು ಹೇಗೆ ಬಳಸಿದ್ದಾರೆಂದು ನೋಡೋಣ.

ಚಂಡಮಾರುತ : ನಿರ್ದುಷ್ಟಗರ್ಭದಲ್ಲುದಿಸಿಹರ್ ದುಷ್ಟರ್ (1:2-8-154)

ಬಿರುಗಾಳಿ : ಗೋವುಗಳ ಬಸಿರಿನಲಿ ಕುನ್ನಿಗಳು ಬಂದಪವು,
ಸಿಂಹಗಳ ಗಬ್ಬದಲಿ ಹುಲುನರಿಗಳುದಿಸಿಹವು, (2-21)

ಚಂಡಮಾರುತ : ದೇವಾಲಯದೊಳಗೆ ಹೊಲ್ಲತೆಯು ನೆಲಸೀತೆ !
ದುಷ್ಟಸತ್ವಗಳಿಂಥ ಸೊಗದ ಮಂದಿರದೊಳಿರೆ
ಒಳಿತು ಹೋರಾಡುವುದು ತಾನಲ್ಲಿ ನೆಲಸಲ್ (1:2-21-592-4)

ಬಿರುಗಾಳಿ : ಪವಿತ್ರ ಮಂದಿರದಿ ಪಾಪಗಳ್ ಜೀವಿಸವು
ಪಾಪಗಳ್ಗೀ ತೆರದ ಗುಡಿಯಿರ್ಪುದಾದೊಡಂ
ಪುಣ್ಯ ತಾನಲ್ಲಿ ನೆಲೆಗೊಳ್ಳಲೆಳಸುವುದು (2-35)

ಚಂಡಮಾರುತ : ನೋವ ತರುವಾಟಗಳು ಕೆಲವಿಹವು, ಆದೊಡಂ
ಆ ನೋವ ಮರಸುವುದು, ಆಟದಾನಂದ
ಕೀಳೆನಿಪ ಕಾರ್ಯಗಳ ಗಂಭೀರ ಭಾವದಲಿ

ಮಾಡಿ ಮುಗಿಸುವುದುಂಟು, ಅಥವಾತರ ವಿಷಯಗಳ್
ಘನಗಮ್ಯಗಳ ಕಡೆಗೆ ನಮ್ಮ ನೊಯ್ಯುವುದುಂಟು
(3:1–41–1–5)

ಬಿರುಗಾಳಿ : ಸೊಗದಕಜ್ಜಗಳೊಳವು ಕೆಲವು, ಸೊಗಮಿಲ್ಲದಿಹ
ಕಜ್ಜಂಗಳುಂ ಕೆಲವಿಹವು: ಕೆಲವು ಕಾರ್ಯಗಳಲ್ಲಿ
ಕಾರ್ಯಭಾರವ ನಮಗೆ ಸಂತಸವ ನೀಡುವುದು
ಕೆಲವರೊಳು ಕಾರ್ಯಂ ಬಹುಭಾರಮಾದಪುದು !
ಎದೆಯ ಬಡತನ ಸೂಚಿಸುವ ಸಿರಿಗೆಯ್ಮೆಗಳು
ಕೆಲವಿಹವು ಕೆಲವು ಬಡಗೆಯ್ಮೆಗಳೂ ಬಗೆಯ
ಸಿರಿತನದ ಚಿಹ್ನೆಗಳೆ ! (5–53)

ಈ ನಾಟಕದ ಚರಮ ಸಂದೇಶವನ್ನು ಇಬ್ಬರೂ ಎರಡು ಶೈಲಿಗಳಲ್ಲಿ ಕನ್ನಡೀಕರಿಸಿದ್ದಾರೆ.

ಚಂಡಮಾರುತ : ಕ್ಷಮೆಯಿಂದ ದಯೆಯಿಂದ ವರ್ತಿಪುದೆ ಘನತರಂ
ಸೇಡಿನಿಂದಲ್ತು............(5:1–66–39–40)

ಬಿರುಗಾಳಿ : ಮುಯ್ಗೆ ಮುಯ್ಯಂ ತೀರ್ಚಿಕೊಳ್ಳುವದು ಜನಮಲ್ತು !
ದಂಡನೆ ದೊಡ್ಡವರ ಕಾರ್ಯಮಾಗದು. ಕ್ಷಮೆಯೇ
ಪುಣ್ಯಾತ್ಮರಿಗೆ ಪಿರಿಯ ಪೊಂದೊಡಿಗೆ (9–85)

ಕುವೆಂಪುರವರ ರೂಪಾಂತರಿತ ಕೃತಿಯನ್ನು ಕುರಿತು ಮುನ್ನುಡಿ ಬರೆಯುತ್ತಾ ಶ್ರೀ ಟಿ. ಎಸ್. ವೆಂಕಣ್ಣಯ್ಯನವರು ಹೀಗೆ ಬರೆಯುತ್ತಾರೆ.

ಒಂದು ಭಾಷೆಯಲ್ಲಿರುವ ನಾಟಕವನ್ನು ಇನ್ನೊಂದು ಭಾಷೆಗೆ ತರುವವರು ಮೂಲದಲ್ಲಿ ಇದ್ದದ್ದನ್ನು ಇದ್ದಂತೆ ಶಬ್ದಶಃ ಭಾಷಾಂತರ ಮಾಡಬಹುದು, ಅಥವಾ ಮೂಲದಲ್ಲಿರುವುದನ್ನು ಹೆಚ್ಚು ಬದಲಾಯಿಸದೆ ಅದು ತಾವು ಬರೆಯುವ ಭಾಷೆಯ ನ್ನಾಡುವ ಜನರ ನಡೆನುಡಿಗೆ ಹೊಂದುವಂತೆ ಅವಶ್ಯವಾದಷ್ಟು ವ್ಯತ್ಯಾಸವನ್ನು ಮಾತ್ರ ಮಾಡಿಕೊಂಡು ಸ್ವಲ್ಪ ಹೆಚ್ಚು ಕಡಿಮೆ ಮೂಲ ನಾಟಕದ ಭಾವವೆಲ್ಲವೂ ಬರುವಂತೆ ಅನುವಾದಿಸಬಹುದು. ಪುಟ್ಟಪ್ಪನವರು ಈ ಎರಡು ವಿಧಾನಗಳನ್ನು ಅನುಸರಿಸಿಲ್ಲ. ಅವರು ಮೂಲ ಗ್ರಂಥವನ್ನು ಓದಿ, ಅದನ್ನು ಓದಿದ್ದರಿಂದ ತಮ್ಮ ಮನಸ್ಸಿನಲ್ಲಿ ಉಂಟಾದ ಮುಖ್ಯವಾದ ಚಿತ್ರಣಗಳನ್ನೂ ಭಾವಗಳನ್ನೂ ಆಧಾರವಾಗಿಟ್ಟುಕೊಂಡು ಒಂದು ಹೊಸ ನಾಟಕವನ್ನು ನಿರ್ಮಿಸಿರುತ್ತಾರೆ. ಇದನ್ನು ಮೂಲನಾಟಕದ ಭಾಷಾಂತರ ಅಥವಾ ಅನುವಾದ ಎಂದು ಹೇಳಲಾಗದು. ಆ ನಾಟಕವನ್ನು ಈ ನಾಟಕ ರಚನೆಗೆ ಪ್ರೇರಕವೆಂದು ಹೇಳಬಹುದು. ಅದರಲ್ಲಿರುವ ಅನೇಕ ಭಾವಗಳು ರೂಪಾಂತರವನ್ನು ಹೊಂದಿ ಇದರಲ್ಲಿ ಸೇರಿರುವುದು ಸ್ವಾಭಾವಿಕ. (ಪುಟ 5)

ಮೂರ್ತಿರಾಯರ ಅನುವಾದದ ಬಗ್ಗೆ ಶ್ರೀ ಎಂ. ರಾಮಚಂದ್ರ ಹೀಗೆ ಬರೆಯುತ್ತಾರೆ:

ಷೇಕ್ಸ್‌ಪಿಯರ್ ಮಹಾಕವಿ ಕೊನೆಕೊನೆಗೆ ಬರೆದ ಎನ್ನಲಾಗುವ ಅವನ ಕಾಮಿಡಿಗಳಲ್ಲಿ ಶಿಖರಸ್ಥಾನದಲ್ಲಿ ಮೆರೆಯುತ್ತಿರುವ 'ಟೆಂಪೆಸ್ಟ್' ನಾಟಕವನ್ನು 'ಚಂಡ ಮಾರುತ' ವೆಂದು ಅನುವಾದಿಸಿದ್ದಾರೆ. ಕನ್ನಡದ ಇತರ ಕೆಲವು ಲೇಖಕರೂ ಅದೇ

ನಾಟಕವನ್ನು ರೂಪಾಂತರ ಭಾಷಾಂತರ ಮಾಡಿದ್ದರೂ ಮೂರ್ತಿರಾಯರ ಶೈಲಿಯೊಗ ಅವರದೇ ಆದ ಸೊಗಸಿದೆ.

(ಉದಯವಾಣಿ ತಾ. 17-06-1993 ಪುಟ 1 ಕಾಲಂ 2)

## 7.12 ಹವಳದ ದ್ವೀಪ



ಮೂರ್ತಿರಾಯರ ಭಾಷಾಂತರಗಳಲ್ಲಿ 'ಹವಳದ ದ್ವೀಪ'ವನ್ನು ಹೆಸರಿಸಬೇಕು. ತಮ್ಮ ವಿದ್ಯಾರ್ಥಿ ಜೀವನದಲ್ಲಿ ಮೂರ್ತಿರಾಯರು ಕೊಂಡು ಓದಿದ ಪುಸ್ತಕಗಳಲ್ಲಿ ಅವರಿಗೆ ಪ್ರಿಯವಾದ ಪುಸ್ತಕವೊಂದನ್ನು ಕನ್ನಡಕ್ಕೆ ಭಾಷಾಂತರ ಮಾಡಿದ್ದಾರೆ. Robert Michael Ballantyne (1825-1894) ಎಂಬ ಇಂಗ್ಲಿಷ್ ಲೇಖಕ (ಜನನ-ಎಡಿನ್‌ಬರ್ಗ್) ಮಕ್ಕಳಿಗಾಗಿ ಸಾಹಸ ಕಾರ್ಯಗಳ ಪುಸ್ತಕ ಮಾಲೆಯೊಂದನ್ನು ಬರೆದ. ಅವನ ಕೃತಿಗಳಲ್ಲಿ ಒಂದಾದ The Coral Island (1857) ಎಂಬ ಕೃತಿಯನ್ನು ಮೂರ್ತಿರಾಯರು ಕನ್ನಡಕ್ಕೆ ತಂದರು.

ಒಂದು ನೂರು ಪುಟಗಳ ಪರಿಮಿತಿ (ವ್ಯಾಪ್ತಿ) ಯಲ್ಲಿ ಮೂಲಕೃತಿಯನ್ನು ಸೀಮಿತಗೊಳಿಸಿದ ಮೂರ್ತಿರಾಯರ ಈ ಅನುವಾದ ಒಂದು ಸಂಗ್ರಹಾನುವಾದ ಅಥವಾ ಸಾರಾನುವಾದ. ಈ ಪ್ರಕಾರದಲ್ಲಿಯೂ ಪುನಃ ಹಲವು ಉಪವಿಭಾಗಗಳಿವೆ. ಅವುಗಳಲ್ಲಿ ಈ ಭಾಷಾಂತರವನ್ನು ಇಂಗ್ಲೀಷ್‌ನ 'Abridgement' ಎನ್ನಬಹುದು. ಈ ಅನುವಾದದ ಲಕ್ಷಣಗಳು ಹೀಗಿವೆ:

ಯಾವುವು ಪ್ರಕರಣದ ಅನಿವಾರ್ಯ ಅಂಶಗಳು, ಯಾವ ಅಂಶಗಳು ಅಮುಖ್ಯವೂ, ಅನಗತ್ಯವೂ, ನಿವಾರ್ಯವೂ ಆಗಿದ್ದು, ಅವುಗಳನ್ನು ಕೈಬಿಡುವುದರಿಂದ ಮೂಲಕ್ಕೆ ಯಾವುದೇ ವಿಧವಾದ ವಿಶೇಷ ನಷ್ಟವೂ ಉಂಟಾಗಲಾರದು ಎಂಬುದನ್ನು ಕಂಡುಕೊಳ್ಳುವ ಶಕ್ತಿ-ಅಂದರೆ ರಸಚೋದಿತವಾದ ಔಚಿತ್ಯ ಪ್ರಜ್ಞೆ-ಸಂಗ್ರಹಾನುವಾದಕನಿಗೆ ಅಗತ್ಯ. ಈ ಆಯ್ಕೆ ಅಷ್ಟೇನೂ ಸುಲಭವಲ್ಲ. ಅಧ್ಯಯನ, ಅಭ್ಯಾಸ, ಸಹೃದಯತೆಗಳಿಂದ ಮಾತ್ರ ಇದು ಅಗತ್ಯ ಅಂಶ, ಇದು ಆನುಷಂಗಿಕ ಎಂದು ಹೇಳಲು ಸಾಧ್ಯವಾದೀತು. ಪ್ರಕರಣದ ವಸ್ತು ಅಥವಾ ಮುಖ್ಯ ಆಶಯವೇ ಈ ದಿಕ್ಕಿನಲ್ಲಿ ನಮಗೆ ದಾರಿದೀಪವಾಗಬೇಕು.

(ಪ್ರಧಾನ್ ಗುರುದತ್, ಭಾಷಾಂತರ ಕಲಿ, 1989 ಪುಟ 98)

ಇಲ್ಲಿ ಉಲ್ಲೇಖಿತವಾದ ಮುಖ್ಯ ವಸ್ತು ಅಥವಾ ಆಶಯ ಸಂಗ್ರಹಾನುವಾದಕರಿಗೆ ಅತ್ಯಂತ ಸ್ಪಷ್ಟವಾಗಿದೆ. ಈ ಸಂಗ್ರಹಾನುವಾದದ ಹಿನ್ನೆಲೆ, ಇದೇ ಕೃತಿಯ ಆಯ್ಕೆಯ ಉದ್ದೇಶ ಇತ್ಯಾದಿಗಳನ್ನು ಮೂರ್ತಿರಾಯರು ಹೀಗೆ ಹೇಳುತ್ತಾರೆ:

ಕನ್ನಡದಲ್ಲಿ ಬಾಲಕರ ಮನಸ್ಸನ್ನು ಸೆಳೆಯುವಂಥ ಪ್ರವಾಸದ ಮತ್ತು ಸಾಹಸ ಕೃತ್ಯಗಳ ಕಥೆ ಪುಸ್ತಕಗಳು ಬಹಳ ವಿರಳ. ಈ ಕೊರತೆಯನ್ನು ಸ್ವಲ್ಪ ಮಟ್ಟಿಗಾದರೂ ನಿವಾರಣೆ ಮಾಡುವುದೇ ಈ ಪ್ರಯತ್ನದ ಉದ್ದೇಶ. ಇಂಗ್ಲೀಷ್ ಸಾಹಿತ್ಯದಲ್ಲಿ ಇಂಥ ಕಾವ್ಯಗಳು ಹೇರಳವಾಗಿವೆ. ಅವುಗಳಲ್ಲಿ ಒಂದನ್ನು ಮಾದರಿಗಾಗಿ ಇಲ್ಲಿ ಕನ್ನಡಿಸಿದ್ದೇನೆ..... The Coral Island ಎಂಬ ಕಾದಂಬರಿ ನಾನು ಹುಡುಗನಾಗಿದ್ದಾಗ ಓದಿ ಮೆಚ್ಚಿದ್ದು....... ಮೂಲದ ಕೊನೆಯ ಭಾಗದಲ್ಲಿದ್ದ ಮತಪ್ರಚಾರದ ಛಾಯೆಯನ್ನು ಇಲ್ಲಿ ತೆಗೆದುಹಾಕಿ, ಪುಸ್ತಕವು ಸಂಪೂರ್ಣವಾಗಿ ಸಾಹಸ ಕೃತ್ಯಗಳ ಮತ್ತು ವಿಚಿತ್ರಾನುಭವಗಳ ಕಥೆಯಾಗುವಂತೆ ಮಾಡಿದೆ (ಅರಿಕೆ ಪುಟ 3)

ಶಿಶು ಸಾಹಿತ್ಯದ ಪ್ರಮುಖ ಲಕ್ಷಣಗಳನ್ನು ಮೂರ್ತಿರಾಯರು ಗಮನದಲ್ಲಿರಿಸಿ ಕೊಂಡು ಕೆಲವು ಭಾಗಗಳನ್ನು ಕೈ ಬಿಟ್ಟಿದ್ದಾರೆ. ಇದರೊಂದಿಗೆ ಈ ಪುಸ್ತಕದಲ್ಲಿ ಅವರೇ ಹೇಳಿದಂತೆ-ಮತೀಯ ಘರ್ಷಣೆಗಳು ಬರುವಂತಹ ಭಾಗಗಳನ್ನು ಅವರು ಬಿಟ್ಟಿದ್ದಾರೆ. ಅಲ್ಲಿ Christian ಮತ್ತು Heathen ಎಂಬ ಎರಡು ಗುಂಪುಗಳು. ಈ Heathen ವರ್ಗಕ್ಕೆ ಸೇರಿದ ಆವತಿ(Avatea) ಎಂಬ ಹುಡುಗಿ Christian ವರ್ಗದ ಒಬ್ಬನನ್ನು ಪ್ರೇಮಿಸಿ ಅವನನ್ನು ವಿವಾಹವಾಗಿ ತಾನೂ ಆ Christian ವರ್ಗಕ್ಕೆ ಸೇರಬೇಕೆಂದುಕೊಂಡಿರುತ್ತಾಳೆ. ಕೊನೆಯಲ್ಲಿ ಈ ಕಥೆಯ ಮೂವರು ಬಾಲಕರು ಆ ದ್ವೀಪದಲ್ಲಿ ಒಂದು ಚರ್ಚ್ ಕಟ್ಟುತ್ತಾರೆ. ಇವೆಲ್ಲ ಮತೀಯವಾದ ವಿಚಾರಗಳನ್ನು ಮೂರ್ತಿರಾಯರು ಮಕ್ಕಳ ದೃಷ್ಟಿ ಯಿಂದ ನೋಡಿ ಅವುಗಳನ್ನು ಕೈ ಬಿಟ್ಟಿದ್ದಾರೆ. ಜೊತೆಗೆ ಅಲ್ಲಿರುವ Missionary ಮತೀಯವಾಗಿ ಸೀಮಿತಾರ್ಥದ ಶಬ್ದಕ್ಕೆ ಮೂರ್ತಿರಾಯರು ಸಂವಾದಿಯಾಗಿ "ಉಪಾಧ್ಯಾಯ" ಎಂಬ ಸಾರ್ವಜನಿಕವಾದ ವಿಶಾಲಾರ್ಥದ ಮತಾತೀತ ಶಬ್ದವನ್ನು ಉಪಯೋಗಿಸಿದ್ದಾರೆ.

ಮೂಲದಲ್ಲಿ ಕತ್ತರಿಸಲ್ಪಟ್ಟ ಮರದ ಕಾಂಡದ ಮೇಲೆ ಕೆತ್ತಲಾಗಿರುವ ಜೆ.ಎಸ್. ಎಂಬ ಅಕ್ಷರಗಳ ಆಧಾರದಿಂದ ಹುಡುಗರ ಅಭಿಪ್ರಾಯ, ಬೆಟ್ಟದಿಂದ ಕಲ್ಲು ಉರುಳುವ ಸನ್ನಿವೇಶ, ಶಿಥಿಲಾವಸ್ಥೆಯಲ್ಲಿರುವ ಸೇತುವೆ, ಗುಡಿಸಲು, ಗುಡಿಸಲಿನಲ್ಲಿರುವ ಅಸ್ಥಿ ಪಂಜರ, ಬೆಕ್ಕಿನ ಪ್ರಕರಣ-ಇತ್ಯಾದಿ ಸನ್ನಿವೇಶಗಳನ್ನು ಮಕ್ಕಳ ಮಾನಸಿಕ ಸೂಕ್ಷ್ಮತೆ ಹಾಗೂ ಸುಕೋಮಲತೆಗಳನ್ನು ಮನಶ್ಶಾಸ್ತ್ರೀಯ ದೃಷ್ಟಿಯಿಂದ ಕೈ ಬಿಟ್ಟಿದ್ದಾರೆ.

ಬಹಳ ಮುಖ್ಯವಾಗಿ ಆ ದ್ವೀಪವಾಸಿಗಳು ಮೃತ ಶರೀರಗಳನ್ನು ಮೆರವಣಿಗೆಯಲ್ಲಿ ತೆಗೆದುಕೊಂಡು ಹೋಗಿ ಅವುಗಳನ್ನು ಅವರ ದೇವರಿಗೆ ಅರ್ಪಿಸಿ ತಿನ್ನುವ ಭೀಭತ್ಸ ದೃಶ್ಯವನ್ನು ಮೂರ್ತಿರಾಯರು ತೆಗೆದು ಹಾಕಿದ್ದಾರೆ. ಎಳೆಯ ಮನಸ್ಸುಗಳ ಮೇಲೆ ಈ ಭಯಾನಕ ದೃಶ್ಯಗಳ ವರ್ಣನೆ ಮಾಡಬಹುದಾದ ದುಷ್ಪರಿಣಾಮಗಳನ್ನು ಅವರು ಚೆನ್ನಾಗಿ ಬಲ್ಲರು.

ಟರಾರೋನನ್ನು ನೋಡಲು ಹೊರಟ ಮಿಷನರಿ ತಾನು ಅವರ Heathen (ಗ್ರಾಮ) ದೇವತೆಗಳನ್ನು ನೋಡಲು ಬರುವುದಿಲ್ಲವೆಂದು ಹೊರಟುಹೋಗುವ ಸಂದರ್ಭವನ್ನು ಅವರು ತೆಗೆದುಕೊಂಡಿಲ್ಲ. ಯಾರಿಗೇ ಆಗಲಿ, ಯಾವುದೇ ಸಂದರ್ಭದಲ್ಲಿಯೂ ಮನಸ್ಸಿಗೆ ಬೇಸರವನ್ನುಂಟುಮಾಡದ ಮೂರ್ತಿರಾಯರ ಮನೋಧರ್ಮ ಇಲ್ಲಿ ಸುಸ್ಪಷ್ಟ.

ಮೂಲದಲ್ಲಿ ಈ ಹುಡುಗರಿಗೆ ಹಂದಿ ಬೇಯಿಸಿಕೊಡುವ ಸನ್ನಿವೇಶವಿದೆ. ಈ ಸಂದರ್ಭವನ್ನು ಅವರು "ಅವರ ಜೊತೆಯಲ್ಲಿ ಒಂದು ಮನೆಗೆ ಹೋಗಿ ಅಲ್ಲಿ ತಿಂಡಿತೀರ್ಥ ತೆಗೆದುಕೊಂಡದ್ದಾಯಿತು" (ಪುಟ 93)ಎಂಬ ದೇಸೀ ಶೈಲಿಯಲ್ಲಿ ಮುಗಿಸಿದ್ದಾರೆ.

ಇಷ್ಟೆಲ್ಲಾ ಭಾಗಗಳನ್ನು ಕೈಬಿಟ್ಟರೂ ಮೂಲದ ಪ್ರಧಾನ ಭಾಗವಾದ ಸಾಹಸ ಭಾಗಗಳಿಗೆ ಕೊರತೆ ಏನೂ ಆಗಿಲ್ಲ. ಮೂರ್ತಿರಾಯರು ಅಲ್ಲಲ್ಲಿ ದೇಶ್ಯ ಶಬ್ದ-ನುಡಿಗಟ್ಟುಗಳನ್ನು ಸೇರಿಸಿದ್ದಾರೆ.

ಕಪಿಚೇಷ್ಟೆ, (5), ಅದರಿಂದೇನು ಕಿರೀಟ ಬಂದ ಹಾಗಾಯಿತು? (What's the use of that?) (13), ಅರಸಿನ ಅಂಕೆಯಿಲ್ಲ, ದೈವದ ಕಾಟವಿಲ್ಲ (12), ಉತ್ತು,

ನಾಟಿ ಹಾಕಿ, ಕಳೆಕಿತ್ತು, ಕೊಯ್ಲು ಮಾಡಿ, ತಿಂದು ತೇಗಿ...... (12) ನಾನು ಸರ್ವಜ್ಞನಲ್ಲ (16). ಸಮಾರಾಧನೆ ಅಡಿಗೆ, ಪರ್ಣಶಾಲೆ(19), ಪೆದ್ದುಭಟ್ಟ(21). ಅಯ್ಯೋ ಪಾಪಿ (31). ಅರೆಬೇಗಲಾಗಿ (Slightly) (32). ಕಿರಾತ (53). ಗರುಡನ ಮೂಗಿನಂತೆ (55), ಬೆಚ್ಚಿಬಿದ್ದು (My heart jumped into my throat) (70)

ಮಕ್ಕಳ ಸಾಹಿತ್ಯಕ್ಕೆ ರೂಪಾಂತರಿತ ಕೃತಿಗಳನ್ನು ಅಥವಾ ಕವಿತೆಗಳನ್ನು ನೀಡುತ್ತಿದ್ದ ಕಾಲದಲ್ಲಿ ಭಾಷಾಂತರ ಕೃತಿಯನ್ನು-ಅದರಲ್ಲಿಯೂ ಸಾಹಸ ಮನೋಭಾವವನ್ನು ಪ್ರಚೋದಿಸುವ ಕೃತಿಯನ್ನು-ನೀಡಿರುವುದು-ಗಮನಾರ್ಹ.



# ಅಧ್ಯಾಯ – 8

# ಬಿಡಿ ಬರಹಗಳು

## 8.1 ಮೂರ್ತಿರಾಯರ ಬಿಡಿ ಬರಹಗಳು

ಮೂರ್ತಿರಾಯರ ಸಂಕೀರ್ಣ ಲೇಖನಗಳಲ್ಲಿ ವ್ಯಕ್ತಿ ಚಿತ್ರಣ, ಉದ್ಘಾಟನಾ ಅಧ್ಯಕ್ಷ ಭಾಷಣ, ಚಿಂತನಶೀಲ ಬರಹ, ನೆನಪುಗಳು, ಸಂಗೀತ-ಸಾಹಿತ್ಯಗಳನ್ನು ಕುರಿತು ವಿಮರ್ಶೆ, ವಿನೋದ ಪ್ರಬಂಧ ಮುಂತಾದ ಪ್ರಕಾರಗಳಿವೆ. ಇವು ಅವರ ಅಭಿರುಚಿ, ದೃಷ್ಟಿಕೋನ, ಅನುಭವ, ವೈಚಾರಿಕ ಸಾಮರ್ಥ್ಯ –ಇತ್ಯಾದಿಗಳನ್ನು ಪ್ರತಿಬಿಂಬಿಸುತ್ತವೆ. ಈ ವಿಷಯ ವೈವಿಧ್ಯವನ್ನು ಗಮನಿಸಿದಾಗ ಮೂರ್ತಿರಾಯರ ಬಹುಮುಖ ಚಿಂತನೆಯ ಪರಿಚಯ ವಾಗುತ್ತದೆ. ಅವರ ನಿಲುವು ಒಬ್ಬ ದಾರ್ಶನಿಕನದ್ದಾಗಿರುವಂತೆಯೇ ಒಬ್ಬ ಸಮಾಜ ಶಾಸ್ತ್ರಜ್ಞನದ್ದೂ ಆಗಿದೆ. ಧರ್ಮ-ಸಮಾಜಗಳನ್ನು ಕುರಿತು ಅವರ ವಿಚಿಕಿತ್ಸಕ ದೃಷ್ಟಿ ಒಬ್ಬ ಸುಧಾರಕನದ್ದಾಗಿದೆ. ಕೇವಲ ಟೀಕೆ ಭರ್ತ್ಸನೆ ಆಕ್ರೋಶಗಳನ್ನು ನಾವಿಲ್ಲಿ ಕಾಣುವುದಿಲ್ಲ. ಒಬ್ಬ ಉದಾರವಾದಿಯ ವಿಶಾಲವಾದ ಹಾಗೂ ಸಹನಾಶೀಲವಾದ ಮಾರ್ಗ ಇಲ್ಲಿದೆ. ಒಂದು ವಿಧಾನ ಅಥವಾ ವ್ಯವಸ್ಥೆಯನ್ನು ಕೇವಲ ಅಂಧಾಭಿಮಾನದಿಂದ ಒಪ್ಪಿಕೊಳ್ಳದೆ, ಅದರ ಧನಾತ್ಮಕ ಹಾಗೂ ಋಣಾತ್ಮಕವಾದ ಅಂಶಗಳನ್ನು ತೂಗಿನೋಡಿ, ಅದಕ್ಕೊಂದು ಸೃಜನಾತ್ಮಕ ಪ್ರತಿಕ್ರಿಯೆಯ shock treatment ಕೊಡುತ್ತಾರೆ ಅವರು. ವ್ಯವಸ್ಥೆ ಎಂತೋ ಅಂತೆಯೇ ವ್ಯಕ್ತಿಗಳ ಬಗ್ಗೆ ಬರೆಯುವಾಗಲೂ ಅದೇ ರೀತಿಯ ಪ್ರವೃತ್ತಿಯನ್ನು ನಾವು ಕಾಣುತ್ತೇವೆ. ಇದು ಯಾವುದೇ ಪೂರ್ವಾಗ್ರಹವೂ ಇಲ್ಲದೆ ಬರೆಯುವ ಸಾಮರ್ಥ್ಯ ಇದ್ದವರಲ್ಲಿ ಮಾತ್ರವೇ ಕಾಣಲು ಸಾಧ್ಯವಾಗಬಹುದಾದ ಗುಣ.

ಮೂರ್ತಿರಾಯರು ವ್ಯಕ್ತಿ ಚಿತ್ರಣಗಳನ್ನು ಕುರಿತು ಬರೆದಿರುವ ಲೇಖನಗಳು ಮೂರು. ಅದರಲ್ಲಿ ಡಿ. ವಿ. ಜಿ. ಯವರನ್ನು ಕುರಿತು ಬರೆದಿರುವ ಲೇಖನಗಳು ಎರಡು. ಈ ಎರಡು ಲೇಖನಗಳನ್ನು ಬರೆಯುವುದಕ್ಕೆ ಮೂರ್ತಿರಾಯರ ಹಾಗೂ ಡಿವಿಜಿಯವರ ನಡುವಣ ಸಂಬಂಧ ಒಂದು ಮುಖ್ಯ ಆಧಾರ. ಡಿವಿಜಿಯವರು ಅವರ ಸಮಕಾಲೀನರ, ಹಿರಿಯರ ಹಾಗೂ ಕಿರಿಯರ ಕಣ್ಣಿನಲ್ಲಿ ಹೇಗೆ ಕಾಣುತ್ತಾರೆ ಎಂಬುದು ಮತ್ತೊಂದು ಆಧಾರ. ಮೂರ್ತಿರಾಯರು ಸಾಂದರ್ಭಿಕವಾಗಿ ಅವರೊಂದಿಗೆ ನಡೆಸಿದ ಚರ್ಚೆ ಸಂವಾದಗಳೂ ಮಗದೊಂದು ಪ್ರಮಾಣ. ಡಿವಿಜಿಯವರ ದೃಷ್ಟಿಧೋರಣೆಗಳು ಅವರ ಕೃತಿಗಳಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದೂ ಇಲ್ಲಿ ಉಲ್ಲೇಖವಾಗಿದೆ. ಡಿವಿಜಿಯವರ

ಬದುಕು ಬರಹಗಳು ಹೇಗೆ ಪರಸ್ಪರ ಪೂರಕ, ಹೇಗೆ ಏಕವಾಗಿವೆ, ಸಮನ್ವಯಗೊಂಡಿವೆ ಎಂಬುದನ್ನು ನಾವಿಲ್ಲಿ ಕಾಣುತ್ತೇವೆ.

ಡಿ. ವಿ. ಜಿ. ಯವರನ್ನು ಕುರಿತ ಲೇಖನಗಳಲ್ಲಿ ಒಂದು ಡಿ. ವಿ. ಜಿ. ಪಾಂಡಿತ್ಯ ವೈಚಾರಿಕತೆ, ಮತ್ತು ವ್ಯಕ್ತಿತ್ವ, ಈ ತಲೆಬರಹದಲ್ಲಿ ಬರುವ ಶಬ್ದಗಳಿಗೆ ಕೊಟ್ಟ ಉದಾಹರಣೆಯೋ ವ್ಯಾಖ್ಯಾನವೋ ವಿವರಣೆಯೋ ಆಗಿರದೆ ಒಂದು ವಿಮರ್ಶೆಯೇ ಆಗಿದೆ. ಅವರದು ಕೇವಲ ಶುಷ್ಕ ಪಾಂಡಿತ್ಯವಲ್ಲ. ವೈಚಾರಿಕತೆಯನ್ನೂ ಗಳಿಸಿಕೊಂಡ ಡಿವಿಜಿಯವರು ಸಾಮಾನ್ಯ ಜನರಿಂದ ದೂರ ಸರಿಯಲಿಲ್ಲ. ತಮ್ಮ ಸುತ್ತ ಮುತ್ತಲೂ ಯಾವುದೇ ರೀತಿಯ ವಂದಿ ಮಾಗಧರ ಪ್ರಶಸ್ತಿಗಳ ಕೋಟೆ ಕಟ್ಟಿಕೊಳ್ಳಲಿಲ್ಲ. ಡಿವಿಜಿಯವರು ಇಂಗ್ಲೀಷ್ ಸಾಹಿತ್ಯದಲ್ಲಿಯೂ ಪ್ರವೇಶ ಪಡೆದಿದ್ದರು. ಡಿವಿಜಿಯವರಿಗೆ ಮತಧರ್ಮ ದೇವರು ರಾಮಾಯಣಾದಿ ಕಾವ್ಯಗಳು ಅಧ್ಯಯನದ ವಸ್ತುವಾಗಿ, ಜ್ಞಾನ ಸಾಮಗ್ರಿಗಳಾಗಿ ಬದುಕನ್ನು ಸುಸಂಸ್ಕೃತಗೊಳಿಸಲು ಪೂರಕವಾಗಿದ್ದುದೇ ಹೊರತು ಅಂಧಾಭಿಮಾನವನ್ನು ಬೆಳೆಸುವ ಪರಿಕರಗಳಾಗಿರಲಿಲ್ಲ. ಇಂತಹ ಉನ್ನತ ಗುಣಗಳಿಂದ ಶೋಭಾಯಮಾನವಾದ ಡಿವಿಜಿಯವರ ವ್ಯಕ್ತಿತ್ವ ವಿಶೇಷಕ್ಕೆ ಮೂರ್ತಿರಾಯರು ಹಲವು ಮೂಲಗಳಿಂದ ನಿದರ್ಶನಗಳನ್ನು ನೀಡುತ್ತಾರೆ. ಅವರ ಶಿಕ್ಷಣ ಮತ್ತು ವೃತ್ತಿಗೂ, ಇತರ ಅವರ ಹಲವು ಸಮಕಾಲೀನರ ಶಿಕ್ಷಣ ಮತ್ತು ವೃತ್ತಿಗೂ ಇರುವ ಅಂತರವನ್ನು ಮೂರ್ತಿರಾಯರು ಗುರುತಿಸುತ್ತಾರೆ. ಈ ಹಿನ್ನೆಲೆಯಲ್ಲಿ ಅವರ ಪಾಂಡಿತ್ಯ ಗಮನಾರ್ಹವಾದುದು. ಇದನ್ನು ಕುರಿತ ಮೂರ್ತಿರಾಯರ ಬರಹ ಹೀಗಿದೆ:

"ಅವರ ಪಾಂಡಿತ್ಯ ನೆರವಿಲ್ಲದ ಸ್ವಪ್ರಯತ್ನದಿಂದ ಸಂಪಾದಿಸಿದ್ದು. ಆದರಿಂದಾಗಿ ಮೇಲೆ ಹೇಳಿದ ವಾತಾವರಣ (ಬುದ್ಧಿಜೀವಿಗಳ ಸಹವಾಸ ವಾತಾವರಣ) ತಾನಾಗಿ ಅವರನ್ನು ಹುಡುಕಿಕೊಂಡು ಬರುವಂತಾಯಿತು" (ಪುಟ 1)

ಅವರ ಸಂಸ್ಕೃತ -ಇಂಗ್ಲೀಷ್ ಸಾಹಿತ್ಯದ ಮೇಲಿನ ಅದ್ಭುತ ಪ್ರಭುತ್ವವನ್ನು ಸೋದಾಹರಣವಾಗಿ ಮೂರ್ತಿರಾಯರು ವಿವರಿಸುತ್ತಾರೆ. ರಾಮಾಯಣದಿಂದ, ವೇದೋಪನಿಷತ್ತುಗಳಿಂದ ಅವರು ಉದ್ಧೃತ ಭಾಗಗಳನ್ನು ಉಲ್ಲೇಖಿಸಿದಂತೆ, ಸ್ವಿನ್ ಬರ್ಗ್, ಗಿಬನ್, ಮಿಲ್, ಟಿ. ಹೆಚ್ ಗ್ರೀನ್, ಹಾಬ್ಸ್ ಲಾಕ್, ರೂಸೋ ಇವರ ಕೃತಿಗಳಿಂದಲೂ ಉಲ್ಲೇಖಿಸುತ್ತಿದ್ದರು. ಕಾರಣ "ಇವರೆಲ್ಲರ ವಾದವೂ ಅವರಿಗೆ ಪರಿಚಯವಾಗಿತ್ತು" (ಪುಟ 3)

ಡಿ. ವಿ. ಜಿ. ಯವರು ಮಿರ್ಜಾ ಇಸ್ಮಾಯಿಲ್, ಸರ್ ಎಂ. ವಿಶ್ವೇಶ್ವರಯ್ಯ, ನಿಟ್ಟೂರು ಶ್ರೀನಿವಾಸರಾಯರು ಮುಂತಾದ ಮಹಾಮೇಧಾವಿಗಳೊಂದಿಗೆ ಸ್ನೇಹವನ್ನು ಇರಿಸಿಕೊಂಡ ಹಾಗೆಯೇ ದಾರಿಯಲ್ಲಿ ಭೇಟಿಯಾದ ಜಂಗಮಯ್ಯನೊಡನೆಯೂ ಸಲಿಗೆಯಿಂದ ವರ್ತಿಸಬಲ್ಲರು. ಇಂತಹ ಒಂದು ಸಂದರ್ಭದಲ್ಲಿ ಅವರು ರಚಿಸಿ ವ್ಯಾಖ್ಯಾನಿಸಿದ ಅಶೋಕವಿತೆ ವೈಚಾರಿಕತೆಯ (ಚಿಂತನ ಶೀಲತೆಯ) ಸ್ಪರ್ಶವನ್ನು ಪಡೆದ ಪಾಂಡಿತ್ಯಕ್ಕೆ ಸಾಕ್ಷಿ. ಅದನ್ನು ಕುರಿತ ಮೂರ್ತಿರಾಯರ ಪ್ರತಿಕ್ರಿಯೆ ಹೀಗಿದೆ.

"ಈ ನಾಟಕ ಆಡಿದಾಗ ಅವರಿಗೆ ಸುಮಾರು 72 ವರ್ಷ. ಆ ವಯಸ್ಸಿನ ಸ್ಥೂಲದೇಹದ ವೃದ್ಧರು ಶಿವಶರಣನ ಪಾತ್ರ ವಹಿಸಿ, ತತ್ವವನ್ನು ಕಟ್ಟಿ, ಖುಷಿಯಿಂದ ತಾಳಕುಟ್ಟಿಕೊಂಡು ಹಾಡಬೇಕಾದರೆ ಅವರಲ್ಲಿ ಎಷ್ಟು ಹುಮ್ಮಸ್ಸು ಇದ್ದಿರಬೇಕು.

ಯೌವನದಲ್ಲಿ ಇಂಥ ಆಟಗಳನ್ನು ಅನೇಕರು ಆಡುತ್ತಾರೆ. ಆದರೆ 70 ದಾಟಿದ ಮೇಲೆ ರೈಟ್ ಆನರಬಲ್ ಶ್ರೀನಿವಾಸ ಶಾಸ್ತ್ರಿಗಳ ಆಪ್ತಮಿತ್ರರು, ಸರ್ ಎಂ. ವಿಶ್ವೇಶರಯ್ಯನವರ ಆಪ್ತ ಕಾರ್ಯದರ್ಶಿ, ಸರ್ ಮಿರ್ಜಾರವರ ಮಿತ್ರರು ಇದೇ ಶಿವಶರಣ ಪಾತ್ರಧಾರಿ ಗುಂಡಪ್ಪನವರೇ ? ಹೌದು, ಇವರೇ." (ಪುಟ 10)

ಈ ಬರಹದಲ್ಲಿ ಬರುವ ಶೌಲಸಿಕತೆ, ಪ್ರಶ್ನೋತ್ತರ ಶೈಲಿ ಹಾಗೂ ಡಿವಿಜಿ ಯವರಲ್ಲಿ ಅಂತರ್ಗತವಾಗಿದ್ದ ಒಂದು ಅನುಕರಣೀಯ ಗುಣದ ಧ್ವನ್ಯಾತ್ಮಕತೆ ಇಲ್ಲಿ ಗಮನಾರ್ಹ ವೈಶಿಷ್ಟ್ಯ.

ಸಹಜ ಹಾಸ್ಯ ಪ್ರವೃತ್ತಿಯ ಮೂರ್ತಿರಾಯರು ಡಿವಿಜಿಯವರಲ್ಲಿದ್ದ ಹಾಸ್ಯ ಪ್ರವೃತ್ತಿಯನ್ನು ಗುರುತಿಸುತ್ತಾರೆ. ಡಿವಿಜಿಯವರದು ಗಂಭೀರ ಬರವಣಿಗೆಯ ನಡುವೆಯೂ ಮೋಡಗಳ ನಡುವಣ ಮಿಂಚಿನಂತೆ ಅಲ್ಲಲ್ಲಿ ಹಾಸ್ಯ ಮಿಂಚುತ್ತದೆ. ಅಂತಹ ಒಂದೆರಡು ಪ್ರಸಂಗಗಳನ್ನು ಮೂರ್ತಿರಾಯರು ಉಲ್ಲೇಖಿಸುತ್ತಾರೆ. ಡಿವಿಜಿ ಯವರು ತಮ್ಮ ಸಮಯಸ್ಫೂರ್ತಿಯಿಂದ ಆಶುಕವಿತೆಯನ್ನು (ಕಂದ ಪದ್ಯ) ಬರೆದು ಬಿ. ಎಂ. ಶ್ರೀ ಯವರಿಗೆ ಕಳುಹಿಸಿದರಂತೆ.

"ಗಂಭೀರದ ಗೌರಮ್ಮ, ಬಿ. ಎಂ. ಶ್ರೀ. ಯವರಿಗೇ ನಗುವನ್ನು ತಡೆಯಲಾಗ ಲಿಲ್ಲವಂತೆ. "ಪದ್ಯದೊಂದಿಗೆ " "ತೋಡಿರಾಗದಲ್ಲಿ ಹಾಡತಕ್ಕದ್ದು" ಎಂಬ ಸೂಚನೆ ಬೇರೆ. ಆ ಕಂದ ಪದ್ಯ ಹೀಗಿದೆ. ಗೋಳಂ ಪೊಯ್ಕೊಳ್ಳುವನೀ, ಎಳೆಯ ಮಗನೇತಕಿಂತು ಸುಜನರನಕಟಾ, ಕೋಳಿಯ ಕೂಗೇಂ ಗ್ರಂಥಂ, ಬೋಳಿಯ ತಲೆಯೊಂದು ರಾತ್ರಿಯೊಳೆ ತುರುಬಹುದೇಂ" ಇದಕ್ಕೆ ಮೂರ್ತಿರಾಯರ ಪ್ರತಿಕ್ರಿಯೆ ಹೀಗೆ "(ಪದ್ಯದ 4ನೆಯ ಪಂಕ್ತಿಯ ಮೊದಲ ಪದವನ್ನು ಡಿ. ವಿ. ಜಿ. ಬಳಸಿದರಲ್ಲ ಎಂದು ನನಗೆ ವ್ಯಥೆ")

ಮತ್ತೊಮ್ಮೆ "ಕೂತುಕೊಳ್ಳುವ ದೇಹಭಾಗದಲ್ಲಿ ಹುಣ್ಣು ಎದ್ದಿತ್ತು" ಎಂಬ ಕಾರಣದಿಂದ ಸಮಾರಂಭ ಒಂದಕ್ಕೆ ಹೋಗಲಾಗಿರಲಿಲ್ಲ. ಸಂದೇಶವೊಂದನ್ನು ಕಳಿಸುವಂತೆ ಶ್ರೀ ವಿ. ಸೀ. ಯವರು ಅವರನ್ನು ಒತ್ತಾಯಿಸಿದಾಗ ಅವರ ಪ್ರತಿಕ್ರಿಯೆಯನ್ನು ಮೂರ್ತಿರಾಯರ ಮಾತುಗಳಲ್ಲೇ ಕೇಳಬೇಕು.

"ವಿ. ಸೀ. ಬಲವಂತ ಮಾಡಿದಾಗ ಗುಂಡಪ್ಪನವರಲ್ಲಿದ್ದ ಕೋಪ ಎಚ್ಚರಗೊಂಡಿತು. "ಸಂದೇಶ ಬೇಕಂತೋ? ನಾನು ಕಳಿಸುವ ಸಂದೇಶಾನ ಸಭೇಲಿ ಓದುತಾರಂತೋ? ಬರಕೊಳ್ಳಿ" ಅವರು ಕೊಟ್ಟ ಸಂದೇಶ ಛಂದೋಬದ್ಧವಾದ್ದು ನನಗೆ ನೆನಪಿರುವುದು ಇಷ್ಟೆ."ಗುಂಡಪ್ಪನಾದೋಡೇಂ ....ಡೆಯದು ನೋಯದೆ ಈ ಕಥೆಯನ್ನು ನನಗೆ ಹೇಳಿದವರು ಸ್ವಯಂ ವಿ. ಸೀತಾರಾಮಯ್ಯನವರೇ " (ಪುಟ 11)

ಮೂರ್ತಿರಾಯರು ಡಿ. ವಿ. ಜಿ ಯವರ ಬಗ್ಗೆ ಅಸೀಮವಾದ ಗೌರವಾದರಗಳನ್ನು ತಳೆದಿದ್ದಾರಾದರೂ ಅದು ಅಭಿಮಾನದ ಪರಾಕಾಷ್ಠೆಯಿಂದ ಮುಚ್ಚಿ ಹೋಗಿರಲಿಲ್ಲ. ಡಿ. ವಿ. ಜಿ. ಯವರ ಹಲವು ಅಭಿಪ್ರಾಯಗಳನ್ನು ಮೂರ್ತಿರಾಯರು ಒಪ್ಪುವುದಿಲ್ಲ. ಕೆಲವು ಸನ್ನಿವೇಶಗಳನ್ನು ವ್ಯಾಖ್ಯಾನ ವಿವರಣೆ ಅಭಿಪ್ರಾಯಗಳನ್ನು ಮೂರ್ತಿರಾಯರು ವಿಮರ್ಶಾತ್ಮಕವಾಗಿ ವಿಶ್ಲೇಷಣೆಗೆ ಒಳಪಡಿಸುತ್ತಾರೆ. ಡಿ. ವಿ. ಜಿ. ಯವರ "ದೇವರು" ಎಂಬ ಕಿರು ಪ್ರಬಂಧವನ್ನು ಹಲವು ಘಟಕಗಳನ್ನಾಗಿ ಮಾಡಿಕೊಂಡು ಒಬ್ಬ ವಾಸ್ತವವಾದಿ ಓದುಗನಿಗೆ ತಲೆದೋರಬಹುದಾದ ಸಂದೇಹಗಳನ್ನು ಎತ್ತುತ್ತಾರೆ. ಮೂರ್ತಿರಾಯರು

ಹೀಗೆ ವ್ಯಕ್ತಿ ಗೌರವ ಸಾಹಿತ್ಯಾಧ್ಯಯನ ಎರಡನ್ನೂ ಪರಸ್ಪರ ಮೇಳವಿಸದೆ ಎರಡನ್ನೂ ದೃಷ್ಟಿಯನ್ನಾಗಿಯೇ ನೋಡುತ್ತಾರೆ. ವ್ಯಕ್ತಿಯನ್ನು ನೋಡುವುದು ಅವರ ಪ್ರತಿಭೆ, ಚಿಂತನ, ವಿದ್ವತ್ತು, ಮಾನವೀಯ ಗುಣಗಳಿಂದಾಗಿ. ಅವರ ಸಾಹಿತ್ಯವನ್ನು ಓದುವುದು ಒಬ್ಬ ಓದುಗನಾಗಿ, ಅದರಲ್ಲಿಯೂ ಒಬ್ಬ ವಿಮರ್ಶಾತ್ಮಕ ಚಿಂತನಶೀಲ ಸಹೃದಯನಾಗಿ. ಈ ಎರಡು ದೃಷ್ಟಿಕೋನಗಳೂ ಹೀಗಿವೆ.

"....ಮೇಲಿನ ಮಾತೆಲ್ಲ ಗುಂಡಪ್ಪನವರ ಅವಹೇಳನ ಎಂದು ಭಾವಿಸಲಾಗದು. ಅವರ ಸಮರ್ಥನೆಗಳಲ್ಲಿ ಅವರು ಸಂಪ್ರದಾಯದ ಪುನರಾವರ್ತನೆ ಮಾಡುತ್ತಿದ್ದಾರೆಯೇ ಹೊರತು ವಿಚಾರ ಶಕ್ತಿಯನ್ನು ಬಳಸುತ್ತಿಲ್ಲ ಎಂದು ತೋರಿಸುವುದಷ್ಟೇ ನನ್ನ ಉದ್ದೇಶ" (ಪುಟ 10)

"ಪ್ರಾಮಾಣಿಕ ವಿಮರ್ಶೆ ಕಾವ್ಯವನ್ನು ಕುರಿತು ಇರಬೇಕೇ ಹೊರತು ಕವಿಯನ್ನು ಕುರಿತು ಅಲ್ಲ" ಎಂಬ ಟಿ. ಎಸ್. ಇಲಿಯೆಟ್‌ನ ವ್ಯಕ್ತಿ ನಿರಪೇಕ್ಷ. ಕಾವ್ಯ ವಸ್ತು ನಿಷ್ಠ ಸಿದ್ಧಾಂತದ ಒರೆಗಲ್ಲಿನ ಮೇಲೆ ಈ ವಿಚಾರವನ್ನು ನಾವು ಸಮರ್ಥಿಸಬಹುದು.

ಈ ಉಲ್ಲೇಖ ಡಿವಿಜಿಯವರ ಬರಹವನ್ನು ಕುರಿತಾದ ಆಳವಾದ ಅಧ್ಯಯನ, ಚಿಂತನ ಹಾಗೂ ಯಾವುದೇ ಪೂರ್ವಗ್ರಹಪೀಡಿತವಲ್ಲದ ವಸ್ತುನಿಷ್ಠ ವಿಮರ್ಶೆಯಾದರೆ, ಡಿವಿಜಿಯವರ ವ್ಯಕ್ತಿ ಚಿತ್ರಣದ ಹಾಗೂ ಬದುಕು ಬರಹಗಳ ಪ್ರಭಾವವನ್ನು ದಿಗ್ದರ್ಶಿಸುವ ಈ ಅಭಿಪ್ರಾಯ ಉಲ್ಲೇಖನೀಯ.

"ಅವರಿಗಿಂತ ಶ್ರೇಷ್ಠವಾದ ಬರಹಗಾರರಿದ್ದಾರೆ. ರಾಷ್ಟ್ರಕವಿ ಇದ್ದಾರೆ, ಪಂಡಿತರಿದ್ದಾರೆ. ಆದರೆ ಅಂಥ ಬಹುಮುಖ ಪ್ರತಿಭೆ, ಅಷ್ಟೊಂದು ಕ್ಷೇತ್ರಗಳಲ್ಲಿ ಉನ್ನತ ಮಟ್ಟದ ಸಾಧನೆ, ಅಷ್ಟೊಂದು ಮಾನವಾನುಭವ, ಜೀವನೋತ್ಸಾಹ, ಸ್ವಾರ್ಥದ ಕಳಂಕವಿಲ್ಲದ ಸೇವೆ ಇವೆಲ್ಲ ಒಟ್ಟಿಗೆ ಒಬ್ಬ ವ್ಯಕ್ತಿಯಲ್ಲಿರುವುದು ಅಪರೂಪ. ಹತ್ತಿರ ಹತ್ತಿರ 9 ದಶಕದ ನನ್ನ ಬದುಕಿನಲ್ಲಿ, ನನಗೆ ಪರಿಚಯದ ಮಿತಿಯಲ್ಲಿ, ಇಂಥ ಮತ್ತೊಬ್ಬರನ್ನು ಕಾಣೆ (ಪುಟ 12 ಉಪಪ್ಯಾರಾ, ಅಡ್ಡಪ್ಯಾರಾ)

ನಂಬದಿರು ಈ ದೇಹ ನಿತ್ಯವಲ್ಲ, ಹೇಸಿಗೆ ಸಂಸಾರ, ಹಿಗ್ಗುವೆ ಯಾಕೊ ಈ ದೇಹಕ್ಕೆ, ಮನುಜ ಶರೀರವದೇನುಸುಖ ಸಂಸಾರಸಾಗರ ವಿಶಾಲ ಕರಾಲ ಕಾಲಚಕ್ರ "ಸಂಸಾರ ಭೀಕರ ಕರೀಂದ್ರ" ಇತ್ಯಾದಿ ಮಾತುಗಳನ್ನಾಡುವ ಜೀವಶತ್ರುಗಳ ಬೇಗೆಯಲ್ಲಿ ಬಳಲಿದವರಿಗೆ ಮೇಲಿನ ಮಾತುಗಳು ಪರಿಮಳಯುಕ್ತ ತಂಗಾಳಿ. (ಪುಟ 16)

ಡಿವಿಜಿಯವರನ್ನು ಕುರಿತ ಮತ್ತೊಂದು ಲೇಖನ "ಡಿ. ವಿ. ಜಿ. ಕೆಲವು ನೆನಪುಗಳು" ಡಾ. ಕೆ. ಶಿವರಾಮ ಕಾರಂತರ ಮನೆಯಲ್ಲಿ ಡಿವಿಜಿಯವರೊಂದಿಗೆ ಕಳೆದ ಕ್ಷಣಗಳೊಂದಿಗೆ ಮೂರ್ತಿರಾಯರು ಈ ಲೇಖನವನ್ನು ಆರಂಭಿಸುತ್ತಾರೆ. ಇದೊಂದು ವ್ಯಕ್ತಿನಿಷ್ಠ ಲೇಖನ. ಮೂರ್ತಿರಾಯರು ಹಾಗೂ ಡಿವಿಜಿಯವರ ನಡುವೆ ನಡೆದ ಸಂವಾದ ಅತ್ಯಂತ ರಸಪೂರ್ಣ, ಹಾಸ್ಯಮಯ ಹಾಗೂ ಓದಿದಾಗ ಒಂದು ವಿಧವಾದ ಹಿತವಾದ ಸಂತೋಷವಾಗುತ್ತದೆ. ಅವರ ಸಂವಾದ ವ್ಯಕ್ತಿನಿಷ್ಠವಾದುದು. ಆದರೆ ಮೂರ್ತಿರಾಯರು ಅವರ ಸಂವಾದಕ್ಕೆ ವಸ್ತುವಾದ ಮಹನೀಯರನ್ನು ಹೆಸರಿಸುವುದಿಲ್ಲ.

"ಹತ್ತು ನಿಮಿಷದಲ್ಲಿ ಒಂದೆರಡು ಖ್ಯಾತಿ ಶಿಖರಗಳು ಉರುಳಿದವು –ಅದಕ್ಕಾಗಿ ಯಾರೂ ಮರುಗಿದಂತೆ ಕಾಣೆ" (ಪುಟ 1)

ಡಿವಿಜಿಯವರು ಕೇಳಿದ ಒಂದು ವ್ಯಕ್ತಿ ಕೇಂದ್ರಿತ ಪ್ರಶ್ನೆಗೆ ಮೂರ್ತಿರಾಯರು ಡಿವಿಜಿಯವರು ನಿರೀಕ್ಷೆ ಮಾಡಿದ ಉತ್ತರ ನೀಡಿದರು. ಆದರೆ ಅದನ್ನು ಅವರು ಈ ಲೇಖನದಲ್ಲಿ ಉಲ್ಲೇಖಿಸಿಲ್ಲ. ಇದು ಅವರಲ್ಲಿದ್ದ ಹಿರಿಯ ಗುಣ. ಅನಿವಾರ್ಯವಾಗಿ ವ್ಯಕ್ತಿಯೊಬ್ಬರನ್ನು ಕುರಿತು ಏನಾದರೂ ಬರೆಯಬೇಕೆನಿಸಿದಾಗ, ಅದು ಸ್ವಲ್ಪ ಕಹಿ ವಿಚಾರವಾಗಿದ್ದಲ್ಲಿ ಅವರ ನಿಜನಾಮ ಮರೆಸಿ ಬರೆಯುವುದು ಅವರ ಸ್ವಭಾವ 'ಕಶ್ಚಿತ್ತರು' 'ಚಿಕ್ಕಣ್ಣ' 'ಕಖಸ' 'ಚಿಕ್ಕಪ್ಪ' ಈ ರೀತಿಯಾದ ಸಾಂಕೇತಿಕ ನಾಮವನ್ನವರು ಬಳಸುವುದುಂಟು. ಮೂರ್ತಿರಾಯರು ಇಂತಹ ಹಲವು ನೆನಪುಗಳನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಅತ್ಯಂತ ಪ್ರೌಢಶೈಲಿಯಲ್ಲಿ ಗಂಭೀರವಾದ ವಿಷಯಗಳನ್ನು ಬರೆದ ಡಿವಿಜಿಯವರ ಮತ್ತೊಂದು ಮುಖವನ್ನು ಮೂರ್ತಿರಾಯರು ತಮ್ಮ ಸ್ವಾನುಭವದಿಂದ ಇಲ್ಲಿ ಬರೆಯುತ್ತಾರೆ. ಡಿವಿಜಿಯವರು ತಮ್ಮ ಸಮಕಾಲೀನರ ಹಾಗೂ ತಾವು ಮೆಚ್ಚಿಕೊಂಡ ವ್ಯಕ್ತಿಗಳ ಬಗ್ಗೆ ಬರೆದರು. ಆದರೆ ತಮ್ಮ ಬಗ್ಗೆ ಪ್ರಾಸಂಗಿಕವಾಗಿ ಬಿಟ್ಟರೆ ಪ್ರತ್ಯೇಕವಾಗಿ ಏನನ್ನೂ ಬರೆಯಲಿಲ್ಲ. ಆದ್ದರಿಂದ ಅವರ ಬಗ್ಗೆ ಪೂರ್ಣವಾಗಿ ಅರಿಯುವುದು ನಮ್ಮಿಂದ ಸಾಧ್ಯವಾಗಲಿಲ್ಲ. ಆದರೆ ಮೂರ್ತಿರಾಯರು ತಮ್ಮ ನೆನಪಿನಾಳದಲ್ಲಿ ಹುದುಗಿದ ಇಂತಹ ನೆನಪುಗಳನ್ನು ಬರಹದ ರೂಪಕ್ಕೆ ಇಳಿಸುವುದರ ಮೂಲಕ ಡಿವಿಜಿಯವರ ಇತರ ಮುಖಗಳ ಬಗ್ಗೆಯೂ ನಮಗೆ ಪರಿಚಯವಾಗುತ್ತದೆ. ಇಂತಹ ಹಲವು ಮುಖಗಳಲ್ಲಿ ಡಿವಿಜಿಯವರ ಸ್ಮರಣಶಕ್ತಿ, ಹಾಸ್ಯಪ್ರವೃತ್ತಿ, ಚರ್ಚೆ. ಸುಚೇಷ್ಟೆ, ಗುಣ ಗ್ರಾಹಿತ್ವ, ಪ್ರಾಮಾಣಿಕತೆ ಮುಂತಾದವು ಮುಖ್ಯವಾದವು. ಡಿವಿಜಿಯವರನ್ನು ಬಹಳ ಹತ್ತಿರದಿಂದಲೂ ಬಹಳ ಕಾಲದಿಂದಲೂ ಬಲ್ಲ ಮೂರ್ತಿರಾಯರು ಅವರ ಬಗ್ಗೆ ಬರೆಯುತ್ತಾರೆ.

"ಅವರಲ್ಲಿ ನಾನು ಕಂಡ ಎಲ್ಲ ಗುಣಗಳಿಗಿಂತ ದೊಡ್ಡ ಗುಣ ವಿಶ್ವಾಸ. ವಿಶ್ವಾಸವನ್ನು ಕೊಟ್ಟು ಮತ್ತು ಸ್ವೀಕರಿಸಿ ಆನಂದ ಪಡುವ ಶಕ್ತಿ. ಅದು ಮೇಲು ನೋಟಕ್ಕೆ ತೋರುವಷ್ಟು ಸಾಮಾನ್ಯವಾದ ಗುಣವಲ್ಲ. ಹೃದಯ ಸಂಪತ್ತುಳ್ಳವರಿಗೆ ಮಾತ್ರ ಲಭಿಸುವ ಗುಣ". (ಪುಟ 3)

ಮೂರ್ತಿರಾಯರು ಈ ಲೇಖನದಲ್ಲಿ ಡಿವಿಜಿಯವರ ಗುಣಗೌರವ ಗುಣ ಗ್ರಾಹಿತ್ವದ ಘಟನೆಗಳನ್ನು ನೆನಪಿಸಿಕೊಳ್ಳುತ್ತಾರೆ. 'ಗೋಖಲೆ ಸಾರ್ವಜನಿಕ ಸಂಸ್ಥೆ' ಯಲ್ಲಿ ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳು ಮಾಡಿದ ರಾಮಾಯಣ ವಾಚನದ ಸೊಗಸನ್ನು ಡಿವಿಜಿಯವರು ಮೂರ್ತಿರಾಯರೊಂದಿಗೆ ಹಂಚಿಕೊಂಡ ರಸಾನಂದದ ಕ್ಷಣವನ್ನೂ, ಕೋಡುಬಳೆ ಹೇಗಿರಬೇಕು ಎಂಬುದರ ಬಗ್ಗೆ ಡಿವಿಜಿಯವರು ಮಾಡಿದ ವಿಶ್ಲೇಷಣೆಯನ್ನೂ ಮೂರ್ತಿರಾಯರು ಸ್ವಾನುಭವ ಪ್ರೇರಿತವಾಗಿ ಬರೆದಿದ್ದಾರೆ. ಇಂತಹ ಗುಣಗಳ ಸಮನ್ವಯವನ್ನು ಕುರಿತು ಮೂರ್ತಿರಾಯರು ಗಮನಿಸಿದ ಡಿವಿಜಿಯವರ ಗುಣ ಹೀಗೆ:

"ಗುಂಡಪ್ಪನವರಿಗೆ ಎಲ್ಲಾ just so ಎನ್ನುವಷ್ಟು ಅಚ್ಚುಕಟ್ಟಾಗಿರಬೇಕು. ಬ್ರೌನಿಂಗ್ ವಿಷಯದಲ್ಲಿ ಎಷ್ಟು ಉತ್ಸಾಹವೋ ಕೋಡುಬಳೆಯ ವಿಷಯದಲ್ಲೂ ಅಷ್ಟೇ ಉತ್ಸಾಹ. ಕಾವ್ಯದಲ್ಲಿ ಅನುಚಿತವಾದ ಪದ ಬಂದರೆ ಹೇಗೆ ಅಸಮಾಧಾನವೋ ಕೋಡುಬಳೆಯ ರುಚಿಯು ಅಸಮರ್ಪಕವಾದರೆ ಹಾಗೆಯೇ ಅಸಮಾಧಾನ. ಇದು ಬದುಕಿನ ವಿಷಯದಲ್ಲಿ ತುಂಬು ಉತ್ಸಾಹವುಳ್ಳವರ ಲಕ್ಷಣ" – (ಪುಟ 5)

ಮೂರ್ತಿರಾಯರು ಡಿವಿಜಿಯವರ ಪಾಂಡಿತ್ಯವನ್ನು ಗೌರವಿಸಿದವರು. ಹಾಗೆಯೇ ಡಿವಿಜಿಯವರು ಕಾವ್ಯ ವ್ಯಾಸಂಗದಲ್ಲಿ ಬೆಳೆಸಿಕೊಂಡ ಭಾವತನ್ಮಯತೆ ಸಹೃದಯತೆಯನ್ನು ಕಂಡವರು. ಮತ್ತೊಬ್ಬರಲ್ಲಿರುವ ಒಳ್ಳೆಯ ಗುಣಗಳನ್ನು ಡಿವಿಜಿಯವರು ಗೌರವಿಸಿದವರು. ಅಂತಹ ನಿದರ್ಶನಗಳನ್ನೂ ಮೂರ್ತಿರಾಯರು ಉದಾಹರಿಸುತ್ತಾರೆ. ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳ ರಾಮಾಯಣ ಗಾನವನ್ನು ಕೇಳಿದ ಡಿವಿಜಿಯವರು ತಮ್ಮ ಅದಮ್ಯ ಆನಂದವನ್ನು ಅಭಿವ್ಯಕ್ತಿ ಪಡಿಸಲು ವ್ಯಕ್ತಪಡಿಸಿದ ಆತುರ ಕಾತುರ ಹಾಗೂ ಆ ಸಂದರ್ಭದ ವಾಲ್ಮೀಕಿ ಮಹರ್ಷಿಗಳ ಪ್ರತಿಭೆಯನ್ನು ವಿಶ್ಲೇಷಣೆ ಮಾಡಿದ ಸಂದರ್ಭವನ್ನು ನಮ್ಮ ಕಣ್ಣಮುಂದೆ ಮೂರ್ತಿರಾಯರು ಚಿತ್ರವತ್ತಾಗಿ ಬಿಡಿಸುತ್ತಾರೆ. ಗುಂಡಪ್ಪನವರ ಸಹೃದಯತೆ, ಕಾವ್ಯತನ್ಮಯತೆ ಹಾಗೂ ವಿಮರ್ಶನ ಶಕ್ತಿಗಳು ಮೂರ್ತಿರಾಯರ ಅನುಭವ. ಈ ಲೇಖನ ಮೂರ್ತಿರಾಯರ - ಡಿವಿಜಿಯವರ ನಿಕಟ ಸಂಪರ್ಕದ ಫಲ. ಇಂತಹ ನಿಕಟ ಸಂಪರ್ಕದ ಪರಿಣಾಮವಾಗಿ ನಮಗೆ ಡಿವಿಜಿಯವರ ಕಾಣದ ಮುಖದ ಪರಿಚಯವೂ ಆಗುತ್ತದೆ.

ಮೂರ್ತಿರಾಯರು ತಾವು ನಂಬಿದ್ದನ್ನು ದೃಢವಾಗಿ ಕಂಠೋಕ್ತವಾಗಿ ಹೇಳಬಲ್ಲರು. ಬೇರೆಯವರ ಅಭಿಪ್ರಾಯಗಳನ್ನು ಒಪ್ಪದಿದ್ದರೂ ಖಂಡಿಸುವವರಲ್ಲ. ಅವರವರ ನಂಬಿಕೆ ಅವರವರಿಗೆ. ನಿದರ್ಶನಕ್ಕೆ ಪೂರ್ವಜನ್ಮ, ಪುನರ್ಜನ್ಮ, ಆತ್ಮ ಮುಂತಾದ ಅಮೂರ್ತವಾದ ವಿಚಾರಗಳಲ್ಲಿ ಮೂರ್ತಿರಾಯರಿಗೆ ಆಸಕ್ತಿಯಿಲ್ಲ. ಹಾಗೆಂದು ಇತರರ ನಂಬಿಕೆಗಳನ್ನು ಅವರು ಪ್ರಶ್ನಿಸುವವರೂ ಅಲ್ಲ. ತಮ್ಮ ಅಭಿಮಾನಕ್ಕೆ ಪ್ರೀತ್ಯಾದರ ಗೌರವಕ್ಕೆ ಪಾತ್ರರಾದವರ ನಂಬಿಕೆಗಳನ್ನು ಅವರನ್ನು ಮೆಚ್ಚಿಸಲು ಸ್ವೀಕರಿಸುವವರೂ ಅಲ್ಲ. ಈ ಲೇಖನದ ಭರತವಾಕ್ಯದಿಂದ ಈ ಮಾತನ್ನು ದೃಢಪಡಿಸಬಹುದು.

"ಅವರಿಗೆ 'ಆತ್ಮ'ದ ಅಸ್ತಿತ್ವದಲ್ಲಿ ದೃಢವಾದ ನಂಬಿಕೆಯಿತ್ತು. ನನಗೆ ಆ ನಂಬಿಕೆಯಿಲ್ಲ. ಆದರೂ ನನ್ನ ನಮನಕ್ಕೆ ಉತ್ತರವಾಗಿ ಅವರ ಆತ್ಮ 'ಶಂ' ಹೇಳುತ್ತಿದೆ ಎಂಬ ಭ್ರಮೆಗೆ ಒಳಗಾಗುವುದು ನನಗೆ ಹಿತ." (ಪುಟ 6)

## 8.2 ತಿ. ನಂ. ಶ್ರೀ (ಅಭಿನಂದನಾ ಭಾಷಣ)

ಮೂರ್ತಿರಾಯರು ಬರೆದ ಮತ್ತೊಂದು ವ್ಯಕ್ತಿ ಚಿತ್ರಣ ತೀ. ನಂ. ಶ್ರೀ. ಯವರನ್ನು ಕುರಿತಾದದ್ದು. ಶ್ರೀ ತೀ. ನಂ. ಶ್ರೀಯವರ ಆಚಾರ್ಯಕೃತಿ ಎನಿಸಿದ "ಭಾರತೀಯ ಕಾವ್ಯ ಮೀಮಾಂಸೆ"ಗೆ 1990ರ ಪ್ರತಿಷ್ಠಿತ 'ಪಂಪ ಪ್ರಶಸ್ತಿ' ಬಂದಾಗ ಅವರು ಮಾಡಿದ ಅಭಿನಂದನಾ ಭಾಷಣ ವೈಶಿಷ್ಟ್ಯಪೂರ್ಣವಾದುದು. ಅಭಿನಂದನೆ, ಚರಮಾಂಜಲಿ, ಕೃತಿ ವಿಮರ್ಶೆ, ವೈಯಕ್ತಿಕವಾದ ಪರಿಚಯಾತ್ಮಕ ಅಂಶಗಳು ಇತ್ಯಾದಿಗಳ ಒಂದು ಹಿತವಾದ ಸಂಯೋಜನೆ ಈ ಅಭಿನಂದನಾ ಭಾಷಣದಲ್ಲಿದೆ. ಲೇಖನದ ಆರು ಪುಟಗಳಲ್ಲಿಯೂ ಮಾರ್ಜಿನ್‌ನಲ್ಲಿ ಸಣ್ಣ ಸಣ್ಣ ಟಿಪ್ಪಣಿ ರೂಪದ ವಾಕ್ಯಗಳನ್ನು ಬರೆದು ಅವುಗಳನ್ನೇ ವಿಸ್ತರಿಸಿ ಬರೆದು ಸಿದ್ಧಪಡಿಸಿದ ಲೇಖನ ಇದು. ಆದ್ದರಿಂದ ಮೂರ್ತಿರಾಯರು ಈ ಸಭೆಯಲ್ಲಿ off hand (Ex-tempore) ಭಾಷಣ ಮಾಡಲಿಲ್ಲ. ಪೂರ್ವಯೋಜನೆ, ಯೋಚನೆ, ನಿಷ್ಕೃಷ್ಟತೆ, ನಿಖರತೆ, ವಿಷಯದ ಮೇಲಿನ ಕೇಂದ್ರೀಕರಣ, ವ್ಯವಸ್ಥಿತವಾದ ಕ್ರಮಾನುಗತವಾದ ಹಂತಗಳು ಇತ್ಯಾದಿ ಅಂಶಗಳ ಹಿನ್ನೆಲೆಯಲ್ಲಿ ಈ ಲೇಖನವನ್ನು

ಅವರು ಬರೆದಿದ್ದಾರೆ. ಈ ಅಭಿನಂದನಾ ಭಾಷಣಕ್ಕೆ ಮೂರ್ತಿರಾಯರನ್ನು ಆಯ್ಕೆ ಮಾಡಿರುವುದೂ ಅತ್ಯಂತ ಸೂಕ್ತವೇ ಆಗಿದೆ. ಏಕೆಂದರೆ ತೀ. ನಂ. ಶ್ರೀ ಯವರೂ ಹಾಗೂ ಮೂರ್ತಿರಾಯರೂ ಬಹಳ ವರ್ಷಗಳಿಂದ ಸ್ನೇಹಿತರು. 'ಚಿತ್ರಗಳು - ಪತ್ರಗಳು' ಕೃತಿಯಲ್ಲಿ ಇವರಿಬ್ಬರ ಪರಸ್ಪರ ಸಂಬಂಧ, ಸ್ನೇಹ, ಸಲಿಗೆ, ನಿಕಟ ಸಂಪರ್ಕಗಳನ್ನು ಅವರು ವರ್ಣಿಸಿದ್ದಾರೆ. ಮೂರ್ತಿರಾಯರು ತೀ.ನಂ.ಶ್ರೀಯವರಿಗೆ ಬರೆದ ಪತ್ರಗಳಲ್ಲಿಯೂ ಈ ವಿಚಾರ ಸ್ಪಷ್ಟವಾಗಿದೆ.

ಈ ಮೊದಲೇ ಹೇಳಿದಂತೆ ಈ ಲೇಖನ ಕೇವಲ ಅಭಿನಂದನೆಗೆ ಮಾತ್ರವೇ ಸೀಮಿತವಾದದ್ದಲ್ಲ. ನೆನಪುಗಳು, ಕೃತಿ, ಕೃತಿಕಾರರ ಸಂಬಂಧ, ತೌಲನಿಕ ವಿಮರ್ಶೆ, ವಿಮರ್ಶೆ ಮೀಮಾಂಸೆಗಳ ವ್ಯತ್ಯಾಸ, ಇವುಗಳನ್ನು ಕುರಿತು ಪಾಶ್ಚಾತ್ಯ ವಿದ್ವಾಂಸರ ಹಾಗೂ ಗ್ರೀಕರ ದೃಷ್ಟಿ, ತೀ. ನಂ. ಶ್ರೀಯವರು 'ಭಾರತೀಯ ಕಾವ್ಯ ಮೀಮಾಂಸೆ'ಯನ್ನು ಬರೆದ ಹಿನ್ನೆಲೆ ಇತ್ಯಾದಿಗಳ ಉಲ್ಲೇಖ ಇದೆ. ತೀ. ನಂ. ಶ್ರೀ ಹಾಗೂ ಮಾಸ್ತಿಯವರ ನಡುವಣ ಸಾಮ್ಯವನ್ನು ಅವರು ಗುರುತಿಸುತ್ತಾರೆ.

ತಿ. ನಂ. ಶ್ರೀಯವರು ಕಾವ್ಯ ಮೀಮಾಂಸೆಯನ್ನು ಬರೆದ ಹಿನ್ನೆಲೆಯನ್ನು ಅದಕ್ಕೆ ಅಪವಾದದಂತಿದ್ದ ಮಾಸ್ತಿಯವರನ್ನು ಕುರಿತು ಮೂರ್ತಿರಾಯರ ಅಭಿಪ್ರಾಯ ಹೀಗಿದೆ.

"ಅವರು (ತೀ. ನಂ. ಶ್ರೀ.) ಸಿವಿಲ್ ಸರ್ವಿಸ್‌ನಲ್ಲಿದ್ದಿದ್ದರೆ, 'ಭಾರತೀಯ ಕಾವ್ಯ ಮೀಮಾಂಸೆ'ಯನ್ನು ಬರೆಯುತ್ತಿರಲಿಲ್ಲ, ಎಂದು ಪ್ರಮಾಣ ಮಾಡಿ ಹೇಳಲಾಗುವುದಿಲ್ಲ. ಮಾಸ್ತಿಯವರು ಸಿವಿಲ್‌ಸರ್ವಿಸ್‌ನಲ್ಲಿದ್ದೇ ಆ ಬಗೆಯ ಕೆಲಸ ಮಾಡಲಿಲ್ಲವೆ? ಶ್ರೀಕಂಠಯ್ಯ ಇತರ ಬಗೆಯ ಪುಸ್ತಕಗಳನ್ನು ಬರೆಯುತ್ತಿದ್ದರೋ ಏನೋ "ಭಾರತೀಯ ಕಾವ್ಯ ಮೀಮಾಂಸೆ'ಯನ್ನು ಬಹುಶಃ ಬರೆಯುತ್ತಿರಲಿಲ್ಲ. ಅದಕ್ಕೆ ಬೇಕಾದ ಅಧ್ಯಯನ, ಚಿಂತನ, ಕಾವ್ಯಾನುಭವ ಅಲ್ಲಿ ಅಸಾಧ್ಯವಲ್ಲದಿದ್ದರೂ ಕಷ್ಟ ಸಾಧ್ಯವಾಗುತ್ತಿತ್ತು." (ಪುಟ 2)

ಮೂರ್ತಿರಾಯರು ಈ ಅಭಿನಂದನಾ ಭಾಷಣವನ್ನೂ ಒಂದು ವಿಮರ್ಶಾತ್ಮಕ ಉಪನ್ಯಾಸವನ್ನಾಗಿ ಪರಿವರ್ತಿಸಿಕೊಂಡಿರುವುದು ಅವರ ವಿಮರ್ಶನ ಶಕ್ತಿಗೆ ಸಾಕ್ಷಿ. ಈ ವಿಮರ್ಶೆಯನ್ನು ಕೇಳಿದವರು ಅಥವಾ ಓದಿದವರು ಒಮ್ಮೆಯಾದರೂ ತೀ.ನಂ.ಶ್ರೀಯವರ ಈ ಆಚಾರ್ಯ ಕೃತಿಯನ್ನು ಓದದೇ ಇರಲಾರರು. ಮೂರ್ತಿರಾಯರು ಇಲ್ಲಿಯೂ ಸಹ ತಮ್ಮ ಎಂದಿನ ತೌಲನಿಕ ದೃಷ್ಟಿಕೋನವನ್ನು ಬೀರಿದ್ದಾರೆ. ಪಾಶ್ಚಾತ್ಯರ ಆಗರಲ್ಲಿಯೂ ಗ್ರೀಕರ ಕಾವ್ಯ ಮೀಮಾಂಸೆಯ ದೃಷ್ಟಿ ಹೀಗಿದೆ ಎಂಬುದನ್ನೂ ಇಲ್ಲಿ ಪ್ರಾಸಂಗಿಕವಾಗಿ ಪ್ರಸ್ತಾಪಿಸುತ್ತಾರೆ. ಇದು ಮೂರ್ತಿರಾಯರ ವ್ಯಾಪಕ ಅಧ್ಯಯನದ ಸಂಕೇತ. ಈ ಹೇಳಿಕೆಯನ್ನು ಮೂರ್ತಿರಾಯರ ಈ ಮಾತಿನಿಂದ ಸಮರ್ಥಿಸಬಹುದಾಗಿದೆ.

"ಸ್ಥೂಲವಾಗಿ ಹೇಳಬಹುದಾದರೆ ವಿಮರ್ಶಾ ತತ್ತ್ವಗಳನ್ನು ಕಾವ್ಯಕ್ಕೆ ಅನ್ವಯಿಸುವ ಬದಲು ಸಾಹಿತ್ಯದ ಆಧಾರದ ಮೇಲೆ ತತ್ತ್ವಗಳನ್ನು ರೂಪಿಸುವ ಕೆಲಸ ಪಾಶ್ಚಾತ್ಯರಲ್ಲಿ ಹೆಚ್ಚು ಸಮರ್ಪಕವಾಗಿ ನಡೆಯಿತು. ತತ್ತ್ವಗಳ ತರ್ಕಬದ್ಧತೆ, ಸಾಹಿತ್ಯದ ಹಿಂದಿರುವ ಮನೋವೃತ್ತಿಯ ವಿಶ್ಲೇಷಣೆ, ಪ್ರೇರಣೆ, ಸಾಹಿತಿಗೂ ಓದುಗನಿಗೂ ಇರುವ ಸಂಬಂಧ ಒಟ್ಟಿನಲ್ಲಿ ಕಾವ್ಯ ಮೀಮಾಂಸೆ The philosophy of literature ನಮ್ಮಲ್ಲಿ ಅಲ್ಲಿಗಿಂತ

ಒಂದು ರೀತಿಯಲ್ಲಿ ಚೆನ್ನಾಗಿ ನಡೆಯಿತು. ಸಾಹಿತ್ಯ ವಿಮರ್ಶೆ ಅವರಲ್ಲಿ ಚೆನ್ನಾಗಿ ಬೆಳೆಯಿತು.” (ಪುಟ 4)

ಚಿಂತನ ಶೀಲತೆ ಮೂರ್ತಿರಾಯರ ಇನ್ನೊಂದು ವ್ಯಾಪಕ ಗುಣ. ಸಾಹಿತ್ಯದ ಮೂಲ ತತ್ತ್ವಗಳ ಪರಿಭಾಷೆಯ ಅರ್ಥವ್ಯಾಪ್ತಿಯ ಬಗ್ಗೆ ಅವರ ಚಿಂತನೆ ಅವಿರತವಾಗಿ ನಡೆಯುತ್ತದೆ. ಅವರಲ್ಲಿ ಸಂದರ್ಭವಶಾತ್ ಅದರ ಅಭಿವ್ಯಕ್ತಿಯನ್ನು ನಾವು ನೋಡುತ್ತೇವೆ. ಅಂತಹ ನಿರಂತರ ಪ್ರಖರ ಚಿಂತನೆಯ ಹೊಳಹು ಅಲ್ಲಲ್ಲಿ ಇಲ್ಲಿಯೂ ಮಿಂಚಿದೆ.

“ನನಗೆ ಅನೇಕ ವೇಳೆ ಅನ್ನಿಸಿದೆ, ಕಾವ್ಯ ಮೀಮಾಂಸೆ ಕಾವ್ಯ ವಿಮರ್ಶೆ ಇವೆರಡೂ ಒಂದೇ ಅರ್ಥ ಕೊಡುವ ಪದಗಳಲ್ಲ. ಎರಡಕ್ಕೂ ವ್ಯತ್ಯಾಸವಿದೆ. ಇವೆರಡರಲ್ಲಿ ಯಾವುದೊಂದು ಇಲ್ಲದಿದ್ದರೂ ಇನ್ನೊಂದು ಅಸಮರ್ಪಕವಾಗುತ್ತದೆ. ಆದರೆ ಕಾವ್ಯ ಮೀಮಾಂಸೆಯಲ್ಲಿ ತತ್ತ್ವಕ್ಕೆ ಪ್ರಾಧಾನ್ಯ. ಕಾವ್ಯ ವಿಮರ್ಶೆಯಲ್ಲಿ ನಿರ್ದಿಷ್ಟ ಕೃತಿಯೊಂದಕ್ಕೆ ಪ್ರಾಧಾನ್ಯ.” (ಪುಟ 2)

ಮೂರ್ತಿರಾಯರು ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದ ಕಾಲದಲ್ಲಿ ಇಂಗ್ಲೀಷ್ ವಿಮರ್ಶೆಯ ತತ್ತ್ವಗಳನ್ನು ಬೋಧಿಸಲು, ‘ಬೇಥಾಮಾಗಿ’ ತರಗತಿಗೆ ಹೋಗದೆ ಸಾಕಷ್ಟು ಪೂರ್ವಸಿದ್ಧತೆ ಮಾಡಿಕೊಳ್ಳುತ್ತಿದ್ದರು. ಇದಕ್ಕಾಗಿ ಅವರು ವಿವಿಧ ಭಾಷೆಗಳ ಸಾಹಿತ್ಯ ವಿಮರ್ಶೆಗಳನ್ನು ಅಧ್ಯಯನ ಮಾಡಿದರು. ಆ ಅಧ್ಯಯನದ ಫಲ ಇಲ್ಲಿ ಎದ್ದು ಕಾಣುತ್ತದೆ.

ಯಾವುದೇ ಒಂದು ಕೃತಿಯ ಅಧ್ಯಯನವನ್ನು ಕೈಗೊಳ್ಳುವಾಗ ಮುಖ್ಯವಾಗಿ ಎರಡು ವಿಚಾರಗಳು ನಮ್ಮ ಗಮನ ಸೆಳೆಯುತ್ತದೆ. ಮೊದಲನೆಯದು ಕೃತಿಕಾರ, ಎರಡನೆಯದು ಯುಗಧರ್ಮ. ಸಾಹಿತ್ಯವಾಹಿನಿಯ ಗತಿಶೀಲತೆ ಆಯಾ ಕಾಲದ ಲಕ್ಷಣಗಳನ್ನು ತನ್ನಲ್ಲಿ ಮೈಗೂಡಿಸಿಕೊಂಡಿರುತ್ತದೆ. ಹೀಗೆ ಅಂತರ್ಗತವಾದ ಯುಗಲಕ್ಷಣಗಳಿಗೆ ಹಲವರು ಕಾರಣರಾಗಿರುತ್ತಾರೆ. ಇಲ್ಲಿ ಮೂರ್ತಿರಾಯರು ಕೃತಿ, ಕೃತಿಕಾರರ ಲಕ್ಷ್ಯ ಸಮನ್ವಯಗೊಳಿಸಿದ್ದು ಹೀಗೆ.

“ಒಂದು ದೃಷ್ಟಿಯಿಂದ ಕೃತಿಕಾರ ಅವನ ಕೃತಿಗಳಿಗಿಂತ ಮುಖ್ಯ. ಏಕೆಂದರೆ ಕೃತಿ ಅವನ ವ್ಯಕ್ತಿತ್ವದ ಒಂದೆರಡು ಮುಖಗಳನ್ನು ಮಾತ್ರ ಪ್ರತಿಬಿಂಬಿಸುತ್ತದೆ. ಕೃತಿಯಲ್ಲಿರುವುದಕ್ಕಿಂತ ಹೆಚ್ಚು ಸರಕು ವ್ಯಕ್ತಿಯಲ್ಲಿರುತ್ತದೆ. ಮತ್ತೊಂದು ದೃಷ್ಟಿಯಿಂದ ನೋಡಿದರೆ ಕೃತಿಕಾರನಿಗಿಂತ ಕೃತಿಯೇ ಮುಖ್ಯ. ಒಂದಲ್ಲ ಒಂದು ದಿನ ಕೃತಿಕಾರ ವಿಸ್ಮೃತಿ ಪ್ರಪಂಚಕ್ಕೆ ಹೊರಟುಹೋಗುತ್ತಾನೆ. ಉಳಿಯುವುದು ಅವನ ಕೃತಿ (ಪುಟ 1) ಕೃತಿಕಾರ ಬದುಕಿಲ್ಲ. ಕೃತಿ ಬದುಕಿದೆ.

(ಪುಟ 6)

ಅವರು (ತೀ. ನಂ. ಶ್ರೀ ) ತ್ರಿವೇಣೀ ಸಂಗಮದಲ್ಲಿ ಸ್ನಾನಮಾಡಿ ಪುನೀತರಾದರು. ಒಂದು ಕಡೆ ಪ್ಲೇಟೋ ಅರಿಸ್ಟಾಟಲ್ ಪರ್ವತ ಶಿಖರಗಳಿಂದ ಇಳಿದು ಬಂದ ಸಾಹಿತ್ಯ ಸಮಾಲೋಚನೆಯ ನದಿ, ಮತ್ತೊಂದು ಕಡೆ ಅಭಿನವಗುಪ್ತ ಮೊದಲಾದ ಮೀಮಾಂಸಕರ ಆಲೋಚನಾ ಪ್ರವಾಹ, ಮೂರನೆಯ ಕಡೆ ನಮ್ಮ ಮತ್ತು ಪಾಶ್ಚಾತ್ಯರ ಸಾಹಿತ್ಯವಾಹಿನಿ. ಇವೆಲ್ಲದರ ಸಂಗಮದಲ್ಲಿ ಮಿಂದು ಪುಣ್ಯ ಕಟ್ಟಿಕೊಂಡರು. ಆ ಪುಣ್ಯವನ್ನು ತಮ್ಮ

ಪುಸ್ತಕದ ಮೂಲಕ ನಮಗೆಲ್ಲ ಧಾರೆ ಎರೆದುಕೊಟ್ಟರು. ಆ ಪುಸ್ತಕವೇ "ಭಾರತೀಯ ಕಾವ್ಯ ಮೀಮಾಂಸೆ" (ಪುಟ 5–6)

ಮೂರ್ತಿರಾಯರು ಉಲ್ಲೇಖಿಸಿದ ಒಂದು ಘಟನೆ ನಮ್ಮಲ್ಲಿ ಚಿಂತನೆಗೆ ಚಾಲನೆ ನೀಡುವಂತಹದು. ಒಮ್ಮೆ ಅವರು, ತೀ.ನಂ.ಶ್ರೀ ಹಾಗೂ ಬಿ.ಎಂ.ಶ್ರೀ. ಮೂವರೂ ಮಾತನಾಡುತ್ತಿದ್ದ ಸಂದರ್ಭದಲ್ಲಿ ತೀ. ನಂ. ಶ್ರೀಯವರ ಒಂದು ಪ್ರಶ್ನೆ ನಮ್ಮನ್ನು ಅವಾಕ್ಕಾಗಿ ಮಾಡುತ್ತದೆ.

"ನಮ್ಮ ಮೀಮಾಂಸಕರು ರಾಮಾಯಣ, ಮಹಾಭಾರತ, ಕಾಳಿದಾಸನ ಕೃತಿಗಳು -ಇಂತಹ ಘನ ಸಾಹಿತ್ಯದಿಂದ ಶ್ಲೋಕಗಳನ್ನು ಅಷ್ಟಾಗಿ ಉದಾಹರಿಸುವುದಿಲ್ಲ. ಇದನ್ನು ಗಮನಿಸಿದ್ದೀರಾ ?"

(ಪುಟ 3)

ಇದಕ್ಕಿಂತಲೂ ಹೆಚ್ಚಿನದು ಮೂರ್ತಿರಾಯರ ಮುಂದಿನ ಮಾತು. "ನಾನು ಗಮನಿಸಿದ್ದೆ. ಅದನ್ನು ರಾಮಚಂದ್ರ ಶಾಸ್ತ್ರಿಗಳೊಡನೆ ಚರ್ಚೆಮಾಡಿಯೂ ಇದ್ದೆ."

(ಪುಟ 3)

ಮೂರ್ತಿರಾಯರು ಕೃತಿಗಳನ್ನು ಎಷ್ಟು ಆಳವಾಗಿ ಅಧ್ಯಯನ ಮಾಡಬಲ್ಲರೆಂಬುದಕ್ಕೆ ಇದೊಂದೇ ನಿದರ್ಶನ ಸಾಕು. ಕೃತಿಯನ್ನು ಓದಿಗಾಗಿ ಓದದೆ, ಅದರ ಘನ ತತ್ವಗಳನ್ನು ಅರಿಯಲು ಅವರು ಮಾಡಿರುವ ಅಧ್ಯಯನ ಚಿಂತನೆಗಳು ಈ ಮಾತಿನಿಂದ ವ್ಯಕ್ತವಾಗುತ್ತವೆ. ಒಬ್ಬ ಇಂಗ್ಲೀಷ್ ಪ್ರಾಧ್ಯಾಪಕ ಸಂಸ್ಕೃತ ಸಾಹಿತ್ಯವನ್ನು ಎಷ್ಟು ಆಳವಾಗಿ ಅಧ್ಯಯನ ಮಾಡಿದ್ದಾರೆ ಎಂಬುದಕ್ಕೆ ಇದೊಂದು ನಿದರ್ಶನ.

## 8.3 ಗಾಂಧೀಜಿ

ಇದೊಂದು ನೆನಪಿನ ಲೇಖನ. (ಇದೊಂದು ನೆನಪು). ಈ ಲೇಖನವೊಂದು ಸಂಕೀರ್ಣ ಪ್ರಕಾರಕ್ಕೆ ಸೇರಿರುವಂತಹುದು. (ಇದೊಂದು ಸಂಕೀರ್ಣ ಲೇಖನ) ವಿಮರ್ಶೆ, ಆತ್ಮ ವಿಮರ್ಶೆ, ಸಂದರ್ಭ, ಚಿಂತನೆ ಇವು ಇಲ್ಲಿ ಕಂಡು ಬರುವ ಪ್ರಮುಖ ಅಂಶಗಳು. ಯಾವುದೇ ಪೂರ್ವ ಪೀಠಿಕೆಯೂ ಇಲ್ಲದೇ ನೇರವಾಗಿ ವಿಷಯ ಪ್ರವೇಶ ಮಾಡುತ್ತಾರೆ ಮೂರ್ತಿರಾಯರು. ಅವರ ಶಿಷ್ಯನೊಬ್ಬ ಅವರಿಗೆ ಕೆಲಸಕ್ಕೆ ರಾಜೀನಾಮೆ ಕೊಟ್ಟು ಅವರೊಡನೆ ಚಳುವಳಿಗೆ ಇಳಿಯುವಂತೆ ಸೂಚಿಸಿದಾಗ ಅವರು ಆ ಮಾತನ್ನು ಬಹು Sportive ಆಗಿ ತೆಗೆದುಕೊಂಡು ಒಂದು ವಸ್ತುನಿಷ್ಠ ಆತ್ಮ ವಿಮರ್ಶೆ ಮಾಡಿಕೊಳ್ಳುತ್ತಾರೆ. ಗಾಂಧೀಜಿಯವರು ಇತರರ ದೃಷ್ಟಿಯಲ್ಲಿ ಕಾಣುವಂತೆ ತಮ್ಮ ಕಣ್ಣಿನಲ್ಲಿಯೂ ಹೇಗೆ ಕಾಣಿಸುತ್ತಾರೆ ಎಂಬುದನ್ನು ದಾಖಲಿಸುತ್ತಾರೆ. ಬಿ. ಎಂ. ಶ್ರೀ. ಗಾಂಧೀಜಿಯವರನ್ನು colossal humbag ಎಂದು ಕರೆದಾಗ "(ಅವರು ನನ್ನ ಗುರುಗಳಾದರೂ) ನನ್ನ ಮನಸ್ಸು ಅವರನ್ನು ಖಂಡಿಸಿತು" (ಪುಟ 2) ಎಂದು ಬರೆದಿದ್ದಾರೆ. ಮದರಾಸಿನಲ್ಲಿ ನಡೆದ ಮಂಜೇರಿ ಅಯ್ಯರನ ಘಟನೆಯನ್ನು ಗಾಂಧೀಜಿಯವರ ದೃಷ್ಟಿಯಲ್ಲಿಯೇ ವಿಮರ್ಶಿಸುತ್ತಾರೆ. ಹೀಗೆ ಗಾಂಧೀಜಿಯವರ ಅಹಿಂಸಾತತ್ವವನ್ನು ಅವರು ಅರ್ಥ ಮಾಡಿಕೊಳ್ಳುತ್ತಾರೆ. ಗಾಂಧೀಜಿಯವರನ್ನು ಒಂದು ಕೇಂದ್ರವನ್ನಾಗಿರಿಸಿಕೊಂಡು ಅವರ ಸುತ್ತಲೂ ಈ ಲೇಖನ ಪ್ರಸರಿಸಿಕೊಳ್ಳುತ್ತದೆ.

ಜನರ ಮೇಲೆ, ಕೆಲವರಲ್ಲಿ ಜೀವಮಾನಕಾಲ, ಕೆಲವರಲ್ಲಿ ಅಲ್ಪ ಕಾಲ ಉಳಿಯುವ ಪರಿಣಾಮವನ್ನು ಉಂಟು ಮಾಡಿಯೇ ಮಾಡುತ್ತದೆ." (ಪುಟ 10)

ಗಾಂಧೀಜಿ ಚಕ್ರವರ್ತಿಗಿಂತ, ನ್ಯಾಯಾಧೀಶನಿಗಿಂತ ಎತ್ತರದ ವ್ಯಕ್ತಿ. ಗಾಂಧೀಜಿಯವರ ಅವಿರತ ಪ್ರಯತ್ನವನ್ನು ಸಮಾಜ ಹೀಗೆ ಸ್ವೀಕರಿಸಿತು. ಅದರಿಂದ ಗಾಂಧೀಜಿಯವರಿಗೆ ಲಭಿಸಿದ ಪ್ರತಿಫಲವನ್ನು ಯೇಸುಕ್ರಿಸ್ತ, ಸಾಕ್ರಟೀಸ್, ಜೋನ್ ಆಫ್ ಆರ್ಕ್ ಮುಂತಾದ ವ್ಯಕ್ತಿಗಳೊಂದಿಗೆ ಸಮನ್ವಯಗೊಳಿಸಿ, ತೌಲನಿಕವಾಗಿ ವಿವೇಚನೆ ಮಾಡುತ್ತಾರೆ. ಗಾಂಧೀವಾದ ವಿಫಲವಾಗಲು ಸಮಾಜದಲ್ಲಿರುವ ದೋಷವೇನು ಎಂಬುದನ್ನು ಅವರು ಸಾಮಾಜಿಕವಾಗಿಯೂ ಚಿಂತನೆ ನಡೆಸುತ್ತಾರೆ. ಗಾಂಧೀಜಿಯವರ ಮನಸ್ಥಿತಿಯನ್ನು ಏಸುಕ್ರಿಸ್ತನ ನಿರಾಶೆಯ ಧ್ವನಿ, ಕೃಷ್ಣನ 'ಸಂಭವಾಮಿ ಯುಗೇ ಯುಗೇ' ಎಂಬ ಮಾತಿನೊಂದಿಗೆ ಸಮೀಕರಿಸುತ್ತಾರೆ.

ಗಾಂಧೀಜಿಯವರ ದೃಷ್ಟಿಕೋನ ಹಾಗೂ ಅಭಿಪ್ರಾಯಗಳ ಮಿತಿಗಳನ್ನೂ, ಗಾಂಧೀಜಿಯವರ ಟ್ರಸ್ಟೀ ವಾದ, ಸುಭಾಷ್‌ಚಂದ್ರ ಭೋಸರ ಬಗ್ಗೆ ಅವರಿಗಿದ್ದ ಅಭಿಪ್ರಾಯ, ದಾಂಪತ್ಯ ಜೀವನದಲ್ಲಿ ಅವರ ನಿಲುವು, ಗಾಂಧೀಜಿಯವರ ಸತ್ಯಾಗ್ರಹದಿಂದಲೇ ಭಾರತಕ್ಕೆ ಸ್ವಾತಂತ್ರ್ಯ ಬಂದಿತು ಎಂಬ ಅವರ ಅಭಿಮಾನ ಅನುಯಾಯಿಗಳ ಭಾವುಕತೆಯ ಮಾತನ್ನೂ ಅವರು ಒಪ್ಪಿದವರಲ್ಲ. ಇಷ್ಟೆಲ್ಲಾ ಅವರ ಬಗ್ಗೆ ತಮ್ಮ ವಿರೋಧವನ್ನು ವ್ಯಕ್ತಪಡಿಸಿಯೂ ಮೂರ್ತಿರಾಯರು ಅವರ ಬಗ್ಗೆ ಭಕ್ತಿಯನ್ನು ಉಳಿಸಿಕೊಂಡಿದ್ದಾರೆ. "ಏನ್ನಾಗಲಿ ಗಾಂಧಿ ಮನುಷ್ಯರೇ ಹೌದು". (ಪುಟ 6) ಎಂದು ಮನುಷ್ಯತ್ವದ ನೆಲೆಯಲ್ಲಿರುವ ಮಿತಿಗಳನ್ನು ಗುರುತಿಸುತ್ತಾರೆ. ಗಾಂಧೀವಾದದ ಬಗ್ಗೆಯೂ ಅವರ ವೀಕ್ಷಣೆಯನ್ನು ಹೀಗೆ ಬರೆದಿದ್ದಾರೆ.

"ಗಾಂಧೀಜಿ ಒಪ್ಪಿದ ಮೌಲ್ಯಗಳೂ, ಅವರೊಡನೆ ನಾವೂ ಒಪ್ಪಿದ ಮೌಲ್ಯಗಳೂ, ಈಗ ಪ್ರಪಂಚದಲ್ಲಿ ಧ್ವಜ ಹಾರಿಸುತ್ತವೆಯೇ ?"

(ಪುಟ 6)

ಎಂಬ ಪ್ರಶ್ನೆ ಅವರಲ್ಲಿದೆ. ಇದು ಮೂರ್ತಿರಾಯರ ಪ್ರವಾಸ, ಅಧ್ಯಯನ, ಪ್ರಾಪಂಚಿಕ ಜ್ಞಾನ, ಪ್ರಪಂಚದ ಪರಿಸ್ಥಿತಿಗಳ ಬಗ್ಗೆ ಅವರಿಗಿದ್ದ ಪ್ರಜ್ಞೆಗಳ ಪ್ರತೀಕ.

ಗಾಂಧೀ ವಾದವನ್ನೂ, ಗಾಂಧೀಜಿಯವರ ಸಮಗ್ರ ಜೀವನವನ್ನೂ, ಮಾನವ ಜೀವನದ ಮಿತಿಯಲ್ಲಿ ಅವರ ಧೋರಣೆಗಳನ್ನೂ ಅಭಿಪ್ರಾಯಗಳನ್ನೂ ಅವುಗಳ ಸಾಧ್ಯತೆಗಳನ್ನೂ ವಿಶ್ಲೇಷಿಸುತ್ತಾರೆ. ಮೂರ್ತಿರಾಯರಿಗೆ ಯಾವ ಅಂಧಾಭಿಮಾನವೂ ಪೂರ್ವಗ್ರಹವೂ ಇಲ್ಲದಿರುವುದು ಇಲ್ಲಿ ಸ್ಪಷ್ಟವಾಗುತ್ತದೆ. ಹೀಗೆಯೇ ಸತ್ಯಾಗ್ರಹ ಇಂದಿನ ದಿನಗಳಲ್ಲಿ ಎಷ್ಟು ಸಮಂಜಸವಾದುದು ಎಂಬುದನ್ನು ವಿಮರ್ಶಿಸಿದ್ದಾರೆ.

ಗಾಂಧೀಜಿಯ 'ಟ್ರಸ್ಟೀ' ವಾದವನ್ನು ಎತ್ತಿ ಹಿಡಿಯಲಾಗುವುದಿಲ್ಲ. (ಪುಟ 6)

ಗಾಂಧೀಜಿಯವರೊಬ್ಬರಿಂದ, ಅವರ ಸತ್ಯಾಗ್ರಹ ಅಸ್ತ್ರವೊಂದರಿಂದ, ಸ್ವರಾಜ್ಯ ಬಂತು ಎಂದೂ ನಾನು ನಂಬಿದವನಲ್ಲ. (ಪುಟ 6)

ದಾಂಪತ್ಯ ಜೀವನದ ವಿಷಯದಲ್ಲೂ ಅವರ ನಿಲುವನ್ನು ನಾನು ಒಪ್ಪಿದವನಲ್ಲ. (ಪುಟ 6)

ಇಷ್ಟಾದರೂ ಮೂರ್ತಿರಾಯರಿಗೆ ಗಾಂಧೀಜಿಯವರ ವ್ಯಕ್ತಿತ್ವದ ಶ್ರೇಷ್ಠತೆಯ ಬಗ್ಗೆ ಅಪಾರ ಗೌರವವಿದೆ. ಅವರ ಉನ್ನತ ವ್ಯಕ್ತಿತ್ವದ ಬಗ್ಗೆ ಮೂರ್ತಿರಾಯರು ಗೌರವ ಪೂರ್ವಕವಾಗಿ ಹೀಗೆ ಬರೆದಿದ್ದಾರೆ.

ಗಾಂಧೀಜಿ ದಶಕಗಳ ಕಾಲ ಕಠಿಣ ಪರಿಸ್ಥಿತಿಯನ್ನು ಎದುರಿಸಿದ್ದು, ತಮ್ಮ ಆದರ್ಶವನ್ನು ಬಿಟ್ಟುಕೊಡದೆ ಅವಮಾನವನ್ನೂ ದೈಹಿಕಸಂಕಟವನ್ನೂ ಸಹಿಸಿದ್ದು, ಬ್ರಹ್ಮಚರ್ಯ ಸಾಧನೆಯಲ್ಲಿ ಒಮ್ಮೊಮ್ಮೆ ಸೋತದ್ದನ್ನು, ಸಾರ್ವಜನಿಕ ಜೀವನದಲ್ಲಿ ಹಿಮಾಲಯದ ಬ್ಲಂಡರ್ ಮಾಡಿದ್ದನ್ನೂ ಹಿಂಜರಿಯದೆ ಪ್ರಾಮಾಣಿಕವಾಗಿ ಒಪ್ಪಿದ್ದು, on my bended knees I ask you ಎಂದು ವೈಸ್‌ರಾಯ್‌ಗೆ ಪತ್ರ ಬರೆದದ್ದು (ಮೊಣಕಾಲೂರಲು ಸಿದ್ಧನಾಗಿದ್ದ ಗಾಂಧಿಯ ಎದುರಿಗೆ ಚಕ್ರವರ್ತಿಯ ಪ್ರತಿನಿಧಿ ಕುಬ್ಜನಾಗಿ ಕಂಡ) ಕೋರ್ಟ್‌ನಲ್ಲಿ I am guilty as charged ಎಂದು ತಪ್ಪೊಪ್ಪಿಕೊಂಡು ದಂಡನೆಯನ್ನು ಬೇಡಿದ್ದು (ದಂಡನೆಯನ್ನು ವಿಧಿಸಿದ ನ್ಯಾಯಾಧೀಶ ತಾನೇ ಅಪರಾಧಿ ಎಂದುಕೊಳ್ಳುವಂತಾಯಿತೇನೋ.)”

(ಪುಟ 10)

ಮೂರ್ತಿರಾಯರ ಹಾಗೆ ಇರುವಂತಹ ಅವರಷ್ಟು ಮುಕ್ತ ಮನಸ್ಸಿನವರನ್ನು ಕಾಣುವುದು ದುರ್ಲಭ. ಏಕೆಂದರೆ ಅವರು ತಮ್ಮನ್ನು ತಾವೇ ಕಠೋರವಲ್ಲದಿದ್ದರೂ ನಿಷ್ಪಾಕ್ಷಿಕವಾದ, ವ್ಯಕ್ತಿನಿಷ್ಠವಾದ ವಾಸ್ತವಿಕವಾದ ವಿಮರ್ಶೆಗೆ ಒಡ್ಡಿಕೊಂಡಿದ್ದಾರೆ. ಈ ಆತ್ಮ (ಸ್ವಯಂ) ವಿಮರ್ಶೆ ಅವರ ಹಿರಿಯ ಗುಣ. ಅಂತಹ ಅಂತರಂಗ ವೀಕ್ಷಣೆ, ಬದುಕಿನ ಒಳನೋಟ, ತಮ್ಮ ಅಂತರಂಗದ ಕಡೆಗೆ ತೀವ್ರ ವಿಮರ್ಶೆ ಇವು ಇಲ್ಲಿ ವ್ಯಕ್ತವಾಗಿದೆ. ಒಬ್ಬ ವಾಸ್ತವವಾದಿ (Realist ) ಯಾಗಿ ತಮ್ಮ ಮಿತಿಯನ್ನು ಬಲ್ಲ ಅವರ ಸ್ವಯಂ ವಿಮರ್ಶೆಯ ಕೆಲವು ಮಾದರಿಗಳು ಇವು.

1. (1) ನಾನು ಹೇಡಿ. ಮಾನಸಿಕ ಸಂಕಟವನ್ನು ತಡೆಯಬಲ್ಲೆ. ಆದರೆ ಲಾಠಿ ಏಟಿನಿಂದಾಗುವ ದೈಹಿಕ ನೋವನ್ನು ತಡೆಯಲಾರೆ. ಅದನ್ನು ಊಹಿಸಿಕೊಂಡರೂ ಮೈನಡುಗುತ್ತದೆ.

(2) ನಾನು ಕಾಲೇಜಿನ ಕೆಲಸವನ್ನು ಬಿಟ್ಟರೆ, ಬಿಟ್ಟ ದಿನದಿಂದ ನನ್ನ ಹೆಂಡತಿ ಮಕ್ಕಳಿಗೆ ಉಪವಾಸ. ಸಂಬಳವಿಲ್ಲದೆ ಒಂದು ವಾರ ಬದುಕುವಷ್ಟು ಆರ್ಥಿಕ ತ್ರಾಣ ನನಗಿಲ್ಲ.

2. ನನ್ನಂಥವನಿಗೆ ಗಾಂಧೀಜಿಯ ವಿಷಯ ಮಾತಾಡಲು ಅಧಿಕಾರವುಂಟೆ? ಇದು ಕೇಳಬಹುದಾದ ಪ್ರಶ್ನೆ (ಪುಟ 1)

3. ಇದೇ ನನ್ನಂಥ ಅಲ್ಪಾತ್ಮರಿಗೂ ಗಾಂಧೀಜಿಯಂಥ ಮಹಾತ್ಮರಿಗೂ ಇರುವ ವ್ಯತ್ಯಾಸ. ಅವರು ತತ್ವದ ಮೇಲ್ಮಟ್ಟದಲ್ಲೇ ನಿಲ್ಲಬಲ್ಲರು. ನಾನು ಬುದ್ಧಿಯ ಮೂಲಕ ತತ್ವವನ್ನು ತಿಳಿದರೂ ಅಲ್ಲಿಂದ ಮತ್ತೆ ಜಾರುತ್ತೇನೆ. (ಪುಟ 4–5)

ಗಾಂಧೀಜಿಯವರ ಹೆಸರನ್ನು ದುರುಪಯೋಗಪಡಿಸಿಕೊಂಡ ಇಂದಿನ ರಾಜಕಾರಣಿಗಳ ಕಡೆಗೂ ಅವರ ದೃಷ್ಟಿ ಹರಿದಿದೆ. ಮೂರ್ತಿರಾಯರು ಸಾಹಿತ್ಯದ ದಂತಗೋಪುರದಲ್ಲಿ ವಾಸಿಸುವವರಲ್ಲ. ತಮ್ಮ ಸುತ್ತ ಮುತ್ತಲ ಸಮಾಜ, ರಾಜಕಾರಣ, ಪ್ರಪಂಚಗಳನ್ನು ತೆರೆದ ಕಣ್ಣಿನಿಂದ ನೋಡುವಂತಹವರು. ಅವರು ಒಬ್ಬ ಸಮಾಜ

ಶಾಸ್ತ್ರಜ್ಞನ ಮನೋಭಾವವಿರುವವರು. ರಾಜಕಾರಣದ ಸ್ಥಾನವನ್ನು ಅರಿತವರು. ಗಾಂಧೀಜಿಯವರ ಟ್ರಸ್ಟೀ ವಾದ, ಸತ್ಯಾಗ್ರಹಗಳನ್ನು ವಿಮರ್ಶೆ ಮಾಡಿದಂತೆ, ಗಾಂಧೀಜಿಯವರನ್ನು ಕೊಂದವನು ಮುಸ್ಲಿಮನಾಗಿದ್ದರೆ ಅದರ ಪರಿಣಾಮವೇನಾಗಬಹುದಿತ್ತು, ಎಂಬುದನ್ನು ಅವರು ಅಂದಿನ ಪರಿಸ್ಥಿತಿಯ ದೃಷ್ಟಿಯಿಂದ ವಿವೇಚಿಸಿ. ಗಾಂಧೀಜಿಯಿಂದ ಕಾಲು ಶತಮಾನಕ್ಕಿಂತ ಹೆಚ್ಚಾಗಿ ಸತ್ಯಾಗ್ರಹದ, ಅಹಿಂಸೆಯ, ಉಪದೇಶ ಪಡೆದ ಜನರೇ ಪ್ರತೀಕಾರದ ಮಟ್ಟಕ್ಕೆ ಜಾರಿಬಿದ್ದು ರಕ್ತದ ಕೋಡಿ ಹರಿಸುತ್ತಿದ್ದರು. (ಪುಟ 7)

ಎಂದು ಒಂದೇ ವಾಕ್ಯದಲ್ಲಿ ಹೇಳಿ ಮುಗಿಸುತ್ತಾರೆ.

ಗಾಂಧಿಯ "ಭಕ್ತ"ರಾಗಿದ್ದ ಜನ ಈ ನಲವತ್ತು ವರ್ಷಗಳಲ್ಲಿ ದೇಶವನ್ನು ನೀತಿಯ ದೃಷ್ಟಿಯಿಂದ ಯಾವ ಮಟ್ಟಕ್ಕೆ ಇಳಿಸಿದ್ದಾರೆಂಬುದನ್ನು ನಾವೆಲ್ಲ ಬಲ್ಲೆವು. (ಪುಟ 9)

ಈ ವಾಕ್ಯ ಮೂರ್ತಿರಾಯರು ದೇಶದ ಪ್ರಸ್ತುತ ಪರಿಸ್ಥಿತಿಯನ್ನು ಆಳವಾಗಿ ಅಧ್ಯಯನ ಮಾಡಿದವರೆಂಬುದನ್ನು ಸೂಚಿಸುತ್ತದೆ.

ಪರಿಸ್ಥಿತಿ, ಅಭಿಮಾನಗಳ ಸ್ಥಿತ್ಯಂತರವನ್ನೂ ಗಮನಿಸಿದ್ದಾರೆ ಮೂರ್ತಿರಾಯರು. ಒಂದು ಪ್ಯಾರಾದಲ್ಲಿ ಬಾಹ್ಯ ಸ್ಥಿತ್ಯಂತರ, ಆಂತರಿಕ ಸ್ಥಿತ್ಯಂತರಗಳೆರಡನ್ನೂ ವಿಮರ್ಶೆಯ ಒರೆಗಲ್ಲಿಗೆ ತೀಡುತ್ತಾರೆ. ಇತರ ವ್ಯಕ್ತಿಗಳನ್ನು ಅವರ ಮನೋಭಾವದಲ್ಲಾದ ಬದಲಾವಣೆಗಳನ್ನೂ ಗಮನಿಸುವಂತೆ ತಮ್ಮ ಮಾನಸಿಕ ಏಳು ಬೀಳುಗಳನ್ನೂ ಅವರು ಗಮನಿಸಿ ಮುಕ್ತವಾಗಿ ಅವರು ಹೀಗೆನ್ನುತ್ತಾರೆ. ಇಲ್ಲಿ ಇತರರನ್ನು ಟೀಕೆಗೆ ಒಳಪಡಿಸಿದಂತೆ, ತಮ್ಮನ್ನೂ ಅದೇ ಟೀಕೆಗೆ ಒಳಪಡಿಸಿಕೊಂಡಿದ್ದಾರೆ.

"ಮೇಲೆ ಶಿವಮೊಗ್ಗದ ವಿದ್ಯಾರ್ಥಿಗಳ ಶಿಸ್ತು ಸಂಯಮಗಳನ್ನು ಹೊಗಳಿದೆನಲ್ಲ, ಅದೇ ಹುಡುಗರಲ್ಲಿ ಕೆಲವರು ಆ ವರ್ಷದ ಕೊನೆಯಲ್ಲಿ ಗಾಂಧೀ ಚಿತ್ರದ ಅನಾವರಣದ ನೆವ ಮಾಡಿಕೊಂಡು ಹಣ ಶೇಖರಿಸಿದರು. ಆ ಹಣದಲ್ಲಿ ಅರ್ಧ ಭಾಗವನ್ನು ತಮ್ಮ ಜೇಬಿಗೆ ಇಳಿಯಬಿಟ್ಟರು. ಅವರಲ್ಲಿ ಒಂದೆ ಶಿಸ್ತು ಸಂಯಮಗಳು ಇದ್ದದ್ದು ಸುಳ್ಳಲ್ಲ. ಅವರು ಆ ಮಟ್ಟದಲ್ಲಿ ನಿಲ್ಲಲಾರದೆ ಲೋಭಕ್ಕೆ ಜಾರಿದ್ದರು. ನಾನು ಮಂಜೇರಿ ಅಯ್ಯರನ ನಡತೆಯನ್ನು ಮಾನಸಿಕವಾಗಿ ಅಭಿನಂದಿಸಿದಾಗಲೂ ಇಂಗ್ಲೀಷರು ಇದಿ ಅಮೀನನ ಪಲ್ಲಕ್ಕಿ ಹೊತ್ತದ್ದನ್ನು ನೋಡಿ ಅಭಿನಂದಿಸಿದಾಗಲೂ ಅಹಿಂಸೆಯ ಮಟ್ಟದಿಂದ ಪ್ರತೀಕಾರದ ಮಟ್ಟಕ್ಕೆ ಜಾರಿದೆ." (ಪುಟ 5)

ಮೂರ್ತಿರಾಯರ ಬರಹಗಳಲ್ಲಿ ಅಲ್ಲಲ್ಲಿ ಮಿಂಚುವ ಮುಕ್ತಕಗಳೂ ಅಧ್ಯಯನಾರ್ಹ. ವಾಚಕರು ತಮ್ಮ ಜೀವನದಲ್ಲಿ ಅವಶ್ಯವಾಗಿ ಅನುಸರಿಸಬೇಕಾದ, ಅಳವಡಿಸಿಕೊಳ್ಳಬೇಕಾದ ಸಿದ್ಧಾಂತ ರೂಪದ ವಾಕ್ಯಗಳೂ ಅಲ್ಲಲ್ಲಿ ಕಂಡುಬರುತ್ತದೆ. ಘಟನೆಯೊಂದನ್ನು ನಿರೂಪಿಸಿ ಅದರ ಸಿದ್ಧಾಂತವನ್ನು ಉಲ್ಲೇಖಿಸಿ, ನಾವು ಕಲಿಯಬೇಕಾದುದೇನು ಎಂದು ಅದರ ಸಾರವತ್ತಾದ ಭಾಗವನ್ನು ಒಂದೆರಡು ವಾಕ್ಯಗಳಲ್ಲಿ ಹಿಡಿದಿಡುತ್ತಾರೆ. ಅಂತಹ ಒಂದೆರಡು ಮಾದರಿಗಳನ್ನು ನಾವು ಗಮನಿಸಬಹುದು.

1. ಅನ್ಯಾಯವನ್ನು ಸಕಾರಾತ್ಮಕವಾಗಿ, ಕ್ರಿಯಾತ್ಮಕವಾಗಿ ಪ್ರತಿಭಟಿಸಬೇಕು. ಆದರೆ ಪ್ರತಿಭಟನೆಯಲ್ಲಿ ಹಿಂಸೆ ಇರಬಾರದು. (ಪುಟ 4)

2. ಮತ್ತೊಬ್ಬರ ಅವನತಿಯನ್ನು ನೋಡಿ ಸಂತೋಷಪಡಬಾರದು. ಅವರು ಕೆಟ್ಟವರಾದರೂ ಸರಿಯೆ. (ಪುಟ 4)

3. ಸಂಯಮ-ನಿವೃತ್ತಿಯಲ್ಲಿ-ಇದ್ದರೆ ಆ ಬದುಕು ಮಾನವನ ಆಧ್ಯಾತ್ಮಿಕ ಉದ್ಧಾರಕ್ಕೂ ಸಹಾಯಕವಾಗಬಹುದು. (ಪುಟ 6)

4. ನಮ್ಮೆಲ್ಲರಲ್ಲೂ ಬಹುಶಃ ಕುಬ್ಜ ಗಾಂಧಿಯೊಬ್ಬನಿದ್ದಾನೆ. ಅವನನ್ನು ಪೋಷಿಸಿ ಎತ್ತರವಾಗಿ ಬೆಳೆಯುವಂತೆ ಮಾಡುವುದು ಸಾಧ್ಯ. ಅದು ನಮ್ಮ ಕರ್ತವ್ಯವೂ ಹೌದು. (ಪುಟ 12)

ತೌಲನಿಕ ಅಧ್ಯಯನ - ವಿಮರ್ಶೆ - ಸಮೀಕ್ಷೆ ಮೂರ್ತಿರಾಯರ ಸಾಹಿತ್ಯದ ಮತ್ತೊಂದು ಪ್ರಮುಖ ಅಂಶ. ಹಾಗೆಯೇ ಅನ್ವಯಿಕ (applied) ಕ್ರಮವೂ ಸಹ. ಒಂದು ಸಿದ್ಧಾಂತದ ಬೆಳಕಿನಲ್ಲಿ ಮತ್ತೊಂದು ಘಟನೆಯನ್ನು ವಿಶ್ಲೇಷಣೆ ಮಾಡುವುದು ಅವರ ಕ್ರಮ. ಈ ಲೇಖನದಲ್ಲಿ ಕೂಡಾ ಇದನ್ನು ನಾವು ಗಮನಿಸುತ್ತೇವೆ. ಬೈಬಲ್, ಗೀತೆಗಳಿಂದ ವಾಕ್ಯಗಳನ್ನು ಉದಾಹರಿಸಿ ಗಾಂಧೀಜಿಯವರಂತೆ ಕ್ರಿಸ್ತ- ಕೃಷ್ಣರೂ ಮಾನವ ಜನಾಂಗದ ಒಳಿತಿಗಾಗಿ ಮಾಡಿದ ಪ್ರಯತ್ನವನ್ನು ಉಲ್ಲೇಖಿಸುತ್ತಾರೆ. ಸಾಕ್ರಟೀಸ್, ಜೋನ್ ಆಫ್ ಆರ್ಕ್, ಕ್ರಿಸ್ತರಿಗಾದಂತೆ ಗಾಂಧೀಜಿಯವರಿಗೆ ಆದ ದುರಂತವನ್ನು ಹೋಲಿಸುತ್ತಾರೆ. ಕ್ರಿಸ್ತ, ಕೃಷ್ಣರ ಮಾತುಗಳ ಹಿಂದಿನ ವಿಷಾದ, ನಿರಾಶೆಯನ್ನು ಗುರುತಿಸುತ್ತಾರೆ. ಬುದ್ಧ, ಯೇಸು, ಗಾಂಧಿ - ಇವರೆಲ್ಲರ ಮಹತ್ಪ್ರಯತ್ನವೂ ಹೇಗೆ ವಿಫಲವಾಯಿತು ಎಂಬುದನ್ನು ಅವರ

"ನಮ್ಮಲ್ಲಿರುವ ಕಪಿಯ ರಕ್ತವನ್ನೂ, ಹುಲಿಯ ರಕ್ತವನ್ನೂ ಯಾವ ಮಹಾತ್ಮನೂ ಮಾನವ ರಕ್ತವಾಗಿ ಮಾರ್ಪಡಿಸಲಾರ ಎಂದು ನಿರಾಶೆ ಪಡುವಂತಾಗುತ್ತದೆ. ನಿರಾಶೆ ಕೂಡದು." (ಪುಟ 7)

ಎಂಬ ಮಾತಿನಿಂದ – ಬಹುಶಃ ಬಹು ಸಂಕಟದಿಂದಲೇ ವ್ಯಕ್ತಪಡಿಸುತ್ತಾರೆ.

(ನನ್ನ ಈ ಸಹೋದರರಲ್ಲಿ ತೀರ ನಿಕೃಷ್ಟನಾದವನಿಗೆ ಸೇವೆ ಮಾಡಿರಲಿಲ್ಲ. ಅದು ನನಗೆ ಮಾಡಿದ ಸೇವೆ) ಇದು ಯೇಸುಕ್ರಿಸ್ತನ ಮಾತು. ಗಾಂಧಿ ಅದನ್ನು ಆಚರಣೆಗೆ ತರುವಂತೆ ಜನರನ್ನು ಪ್ರೇರೇಪಿಸಿದರು. (ಪುಟ 8–9)

## 8.4 ಆಕಾಶವಾಣಿಗೂ ದೂರದರ್ಶನ (ಟೀವಿ) ಕ್ಕೂ ಸ್ವಯಂ ಆಡಳಿತ

ಇದು (1992) ಸ್ವಯಂ ಆಡಳಿತ ಕಾಲ. ಕೆಲವು ಸಂಸ್ಥೆಗಳು ಸ್ವಯಂ ಆಡಳಿತವನ್ನು (Autonomy) ಹೊಂದಿರಬೇಕೆಂಬ ಅಭಿಪ್ರಾಯವಿದೆ. ಮತ್ತೆ ಕೆಲವರು ಸ್ವಯಂ ಆಡಳಿತ ಕೂಡದೆಂದು ಸರ್ಕಾರದ ಅಂಕೆಯಲ್ಲಿಯೇ ಇರಬೇಕೆಂಬ ವಾದವೂ ಇದೆ. ಈ ಎರಡೂ ಅತಿಗಳು. ಮೂರ್ತಿರಾಯರು ಈ ಎರಡೂ ಅತಿಗಳನ್ನು ಬಯಸದ ಗುಂಪಿನವರು. ಅವರದು ಚಿಂತನಶೀಲ ಪ್ರವೃತ್ತಿಯಾದ್ದರಿಂದ ಈ ಎರಡೂ ದಡಗಳನ್ನು ವಿಮರ್ಶಿಸಿ-ಕೂಲಂಕಷವಾಗಿ-ಸ್ವಯಂ ಆಡಳಿತ ಹಾಗೂ ಸರ್ಕಾರದ ನಿಯಂತ್ರಣ-ಅವುಗಳ ಸಾಧಕ ಬಾಧಕಗಳನ್ನು ಬಹು ಸೊಗಸಾಗಿ ವಿಮರ್ಶಿಸುತ್ತಾರೆ. ಇಲ್ಲಿ ಮೂರ್ತಿರಾಯರ ಸ್ವತಂತ್ರ ಚಿಂತನೆ ಎಷ್ಟರಮಟ್ಟಿಗೆ ಹರಡಿದೆ ಎಂದರೆ ಆಕಾಶವಾಣಿ ಮತ್ತು ದೂರದರ್ಶನಗಳ ಜನ ಜೀವನದಿಂದ ಅಂತರ್‌ರಾಷ್ಟ್ರೀಯ ಮಟ್ಟದವರೆಗೂ ವಹಿಸುವ ಪಾತ್ರವನ್ನು ಅವರು ಬಹು ಪರಿಣಾಮಕಾರಿಯಾಗಿ ನಮ್ಮ ಮುಂದಿಡುತ್ತಾರೆ. ಇದರೊಂದಿಗೆ ಎಲ್ಲೆಲ್ಲಿ ಸ್ವಯಮಾಧಿಕಾರದ ತೀವ್ರ ಅಗತ್ಯವಿದೆ, ಎಲ್ಲೆಲ್ಲಿ ಸರ್ಕಾರದ ನಿಯಂತ್ರಣವಿರಬೇಕು ಎಂಬುದನ್ನು ಅವರು ನಿದರ್ಶನಪೂರ್ವಕವಾಗಿ ರುಜುವಾತು ಪಡಿಸುತ್ತಾರೆ. ಇದರೊಂದಿಗೆ

ಒಂದು ಎಚ್ಚರಿಕೆಯ ಗಂಟೆಯನ್ನೂ ಅವರು ಮೊಳಗಿಸುತ್ತಾರೆ. ಏನೆಂದರೆ ಸ್ವಯಂ ಆಡಳಿತವೂ ಸರ್ಕಾರದ ನಿಯಂತ್ರಣವೂ ದುರುಪಯೋಗವಾಗುವ ಸಾಧ್ಯತೆಯನ್ನು ಕುರಿತು ಅವರು ಎಚ್ಚರಿಸುತ್ತಾರೆ.

ಈ ವಿಚಾರವನ್ನು ಕುರಿತು ಚಿಂತನೆ ಮಾಡಲು ಅವರು ಬರೆದಿರುವ ಒಂದು ಪೀಠಿಕೆ ಅತ್ಯಂತ ಬೋಧನಾತ್ಮಕವಾದುದು.

“ಒಳ್ಳೆಯ ಆಡಳಿತ ಸ್ವಯಂ ಆಡಳಿತಕ್ಕೆ ಬದಲಾಗದು”.

ಎಂದು ಆರಂಭವಾಗುವ ಈ ಲೇಖನ ಸ್ವಯಮಾಡಳಿತದ ಸಾಧ್ಯತೆ-ಮಿತಿ-ದುರುಪಯೋಗಗಳನ್ನು ಚಿತ್ರಿಸುತ್ತದೆ.

ಪ್ರಜಾರಾಜ್ಯವಾದ ಮೇಲೆ ದೇಶದ ಎಲ್ಲ ಸಂಸ್ಥೆಗಳಿಗೂ ಸ್ವಾತಂತ್ರ್ಯ ಇದ್ದೇ ಇದೆ. (ಪುಟ 1)

ಎಂದು ಸರ್ಕಾರ ಕೊಡಬಹುದಾದ ಉತ್ತರದಿಂದ ಅವರು ತೃಪ್ತರಾಗುವುದಿಲ್ಲ.

ಆದರೆ ಸ್ವಲ್ಪವಾದರೂ ಯೋಚಿಸಿದವರಿಗೆ ಈ ತೀರ್ಮಾನದಲ್ಲಿ ಏನೂ ಹುರುಳಿಲ್ಲ ಎಂಬುದು ಸ್ಪಷ್ಟವಾಗುತ್ತದೆ. (ಪುಟ 1–2)

ಎಂದು ಅವರು ಮುಂದೆ ಸಾಗುತ್ತಾರೆ. ಆಕಾಶವಾಣಿ ಮತ್ತು ಟೀವಿ ಯ ಅಧಿಕಾರಗಳು ಸರ್ಕಾರದ ಕೈಗೊಂಬೆಗಳಾಗುವ ಸಾಧ್ಯತೆಯನ್ನು ಅವರು ಎತ್ತಿ ತೋರಿಸುತ್ತಾರೆ. ಈ ಅಧಿಕಾರಗಳೇ ಹಲವು ವೇಳೆ ನಿಷ್ಠವಾಗಿ ವ್ಯವಹರಿಸದೆಯೂ ಇರಬಹುದು.

ಅವರು (ಅಧಿಕಾರಿಗಳು) ಸರ್ಕಾರದ ಮೆಚ್ಚಿಗೆಗಳಿಸುವ ರೀತಿಯಲ್ಲಿ ನಡೆದುಕೊಳ್ಳುವುದು ಸ್ವಾಭಾವಿಕ. (ಪುಟ 2) ಎಂಬ ಮಾತು ಸ್ವಯಂ ಆಡಳಿತವೂ ಇಲ್ಲದೆ ಸರ್ಕಾರದ ಪ್ರವೇಶವೂ ಇಲ್ಲದೆಯೂ ಹೇಗೆ ಸಂಸ್ಥೆಯನ್ನು ಕೆಡಿಸುತ್ತದೆ ಎಂದು ಅವರು ಸೂಚಿಸುತ್ತಾರೆ. ಆದ್ದರಿಂದ ಆಕಾಶವಾಣಿ-ದೂರದರ್ಶನಗಳಿಗೆ ಸ್ವಯಂ ಆಡಳಿತದ ಅಗತ್ಯವನ್ನು ಅವರು ಪ್ರತಿಪಾದಿಸುತ್ತಾರೆ.

ವಿಷಯದ ಪರ - ವಿರೋಧಗಳೆರಡನ್ನೂ - ಎರಡೂ ಮುಖಗಳನ್ನೂ - ಪರಿಶೀಲಿಸುವುದು ಮೂರ್ತಿರಾಯರ ಬರವಣಿಗೆಗಳ ಲಕ್ಷಣ. ಅಂತಹ ಒಂದು ಲಕ್ಷಣ ಇಲ್ಲಿದೆ. ಸ್ವಯಂ ಆಡಳಿತವನ್ನು ಕೊಡದೆ ಸರ್ಕಾರದ ಹಿಡಿತವಿದ್ದರೆ ಆಗುವ ಅನಾಹುತಗಳನ್ನು ಕುರಿತು ಅವರ ದೃಷ್ಟಿ ಹೀಗಿದೆ:

“ಅಧಿಕಾರಮತ್ತರಾದ ಮಂತ್ರಿಗಳ ದುಷ್ಟದೃಷ್ಟಿ ಅವುಗಳ ಮೇಲೆ ಬೀಳುತ್ತದೆ.... ಇಡೀ ಸುದ್ದಿ ಸಂಗ್ರಹ ವ್ಯವಸ್ಥೆಯನ್ನೇ ವಶಪಡಿಸಿಕೊಂಡು ತೊಗಲು ಬೊಂಬೆಯನ್ನು ಕುಣಿಸಿದಂತೆ ಅದನ್ನು ಕುಣಿಸುವುದು, ಇದೆಲ್ಲ ಅನೇಕ ದೇಶಗಳಲ್ಲಿ ನಡೆದಿದೆ. ಮುಂದೂ ನಡೆಯಬಹುದು” ಎಷ್ಟೋ ವೇಳೆ ಮಾನ್ಯ ಮಂತ್ರಿಗಳು ಮಾನ್ಯರಲ್ಲ.

(ಪುಟ 3)

ಮಂತ್ರಿ ಇರುವ ಪಕ್ಷದ ಬಗ್ಗೆಯೂ ಅವರ ಗಮನ ಹರಿದಿದೆ. ಮಂತ್ರಿ ಪಕ್ಷದ ಕೈಗೊಂಬೆಯಾಗುವುದರ ಸಾಧ್ಯತೆಯನ್ನೂ ಕುರಿತು ಅವರ ಚಿಂತನ ಗಮನಾರ್ಹ. ಅವರು ಉಪಯೋಗಿಸಿದ ಶಬ್ದ Pressure groups– ಒತ್ತು ಗುಂಪುಗಳು - ಈ Context ನಲ್ಲಿ ಅತ್ಯಂತ ಪ್ರಭಾವಶಾಲಿ, ಪರಿಣಾಮಕಾರಿ.

ವಾಸ್ತವವಾಗಿ ನೋಡಿದರೆ ಪ್ರಜಾರಾಜ್ಯದಲ್ಲಿ ಪ್ರಜೆಗಳ ಸ್ವಾತಂತ್ರ್ಯ ಉಳಿಯಬೇಕಾದರೆ ಪ್ರಸಾರ ಸಂಸ್ಥೆಗಳಿಗೆ ಸ್ವಾತಂತ್ರ್ಯವಿರಬೇಕು. (ಪುಟ 1)

ಎಂಬ ಸಿದ್ಧಾಂತವನ್ನು ಆಧರಿಸಿ ಅವರು ಸ್ವಾಧಿಕಾರವನ್ನು ಬೆಂಬಲಿಸುತ್ತಾರೆ. ಆದರೆ ಈ ಸ್ವಾತಂತ್ರ್ಯದ ಮಿತಿಯನ್ನು ಅವರು ಗುರುತಿಸಿದ್ದಾರೆ. ಈ ಸಂಸ್ಥೆಗಳು ನಡೆಯಲು ಬೇಕಾದ ಹಣಕಾಸಿನ ವ್ಯವಸ್ಥೆಯನ್ನು ಅವರು ಕಡೆಗಣಿಸಿದವರಲ್ಲ. ಈ ಧನಸಹಾಯದ ಮೂಲಗಳೂ ಈ ಸಂಸ್ಥೆಗಳನ್ನು ಹೇಗೆ ಪರೋಕ್ಷವಾಗಿ ಆಳುತ್ತವೆ ಎಂಬುದನ್ನೂ ಅವರು ವಿವೇಚಿಸುತ್ತಾರೆ. ಈ ಸಂಸ್ಥೆಗಳು ನಡೆಯಲು ಅಗತ್ಯವಾದ ಸರ್ಕಾರದ ಧನಸಹಾಯವೇ ಹೇಗೆ ಅವುಗಳ ನಿಷ್ಪಕ್ಷಪಾತ ಕಾರ್ಯ ನಿರ್ವಹಣೆಗೆ ಕಂಟಕವಾಗುತ್ತದೆ ಎಂಬುದನ್ನು ಅವರು ಹೀಗೆ ವಿವೇಚಿಸಿದ್ದಾರೆ.

"ಅವು ಯಶಸ್ವಿಯಾಗಿ ನಡೆಯಲೇಬೇಕಾದರೆ ಅವಕ್ಕೆ ಸರ್ಕಾರದ ಆರ್ಥಿಕ ನೆರವು ಅವಶ್ಯಕ ಎಂದು ಕೇಳಿದ್ದೇನೆ. ಇದು ನಿಜವಾದರೆ ಸರ್ಕಾರ ಆ ಮಾಧ್ಯಮಗಳ ಮೇಲೆ ಸ್ವಲ್ಪ ಮಟ್ಟಿಗಾದರೂ ಪ್ರಭಾವ ಬೀರಿಯೇ ಬೀರುತ್ತದೆ. ಆ ಸಂಸ್ಥೆಗಳು ಸರ್ಕಾರದ ವಿಷಯದಲ್ಲಿ ಅನುನಯದಿಂದ ವರ್ತಿಸುತ್ತವೆ. ಸರ್ಕಾರ ಷರತ್ತುಗಳಿಲ್ಲದೆ ಹಣಕೊಟ್ಟು ಗಾಂಭೀರ್ಯದಿಂದಲೂ ಔದಾರ್ಯದಿಂದಲೂ ವರ್ತಿಸಿದರೆ ಸ್ವಾತಂತ್ರ್ಯಕ್ಕೆ ಧಕ್ಕೆ ಬರದಿರಬಹುದು. (ಪುಟ 5)

ಹಾಗಾದರೆ ಇದರ ಪರ್ಯಾಯ ವ್ಯವಸ್ಥೆ ಏನು ಎಂಬುದನ್ನು ಅವರು ಯೋಚಿಸಿದ್ದಾರೆ. ಈ ಮಾಧ್ಯಮಗಳಿಗೆ ಜಾಹಿರಾತಿನಿಂದ ಅಪಾರ ಹಣ ಬಂದೀತು, ಬರುತ್ತದೆ. ಆದರೆ ಮೂರ್ತಿರಾಯರ ಸೂಕ್ಷ್ಮಾವಲೋಕನ ಹೀಗೆ :

ಸರ್ಕಾರದ ಕೈಗೊಂಬೆಯಾಗುವ ಬದಲು ಕೋಟೀಶ್ವರರ ಕೈಗೊಂಬೆಯಾದರೆ ಬಂದ ಕಿರೀಟವೇನು ? (ಪುಟ 6)

ವಿಷಯದ ಯಾವ ಮಗ್ಗುಲನ್ನೂ ಬಿಡದೆ ಪರಿಶೀಲಿಸುವುದು ಅವರ ಗುಣ, ಸ್ವಭಾವ. ಸೂಕ್ಷ್ಮ ಚಿಂತನೆಯ ಹಲವು ಮುಖಗಳ ದರ್ಶನ ಇಲ್ಲಿ ಸಿಗುತ್ತದೆ. ಮೂರ್ತಿರಾಯರು ಇಂದಿಗೂ ಪ್ರಸ್ತುತರಾಗುವುದು ಪ್ರಸ್ತುತ ಕಾಲ ಸಮಸ್ಯೆಗಳ ಬಗ್ಗೆ ಮಾಡುವ ಆಳವಾದ ಚಿಂತನೆಯಾಗಿದೆ.

ಈ ಮಾಧ್ಯಮದ ಸ್ಥಾನ, ಪಾವಿತ್ರ್ಯ ಹಾಗೂ ಮಹತ್ತ್ವವನ್ನು ಕುರಿತು ಅವರು ಬಹಳ ಮೇಲ್ಮಟ್ಟದಲ್ಲೇ ಆಲೋಚಿಸುತ್ತಾರೆ. ಅವರು ಸ್ವತಃ ಆಕಾಶವಾಣಿಯ ಸಹ ನಿರ್ದೇಶಕರಾಗಿದ್ದ ಮೂರ್ತಿರಾಯರು ಹತ್ತು ಹಲವು ಜನೋಪಯೋಗಿ ಕಾರ್ಯಕ್ರಮಗಳನ್ನು ಆಯೋಜಿಸಿ ಜನರಿಂದ ಪ್ರಶಂಸೆ ಪಡೆದವರು. ಆದ್ದರಿಂದ ಜನಮನವನ್ನು ತಿದ್ದುವಲ್ಲಿ, ಮಾರ್ಗದರ್ಶನ ನೀಡುವಲ್ಲಿ, ಜನತೆಯ ದೈನಂದಿನ ಜೀವನದಲ್ಲಿ ರೇಡಿಯೋ ವಹಿಸುವ ಪಾತ್ರವನ್ನು ಸ್ವತಃ ಅನುಭವದಿಂದ ತಿಳಿದವರು. ಆದ್ದರಿಂದ ಅವರು ಇದರ ಮಹತ್ವವನ್ನು ಕುರಿತು ಬಹಳ ಎತ್ತರದಲ್ಲಿ ಆಲೋಚಿಸುತ್ತಾರೆ.

"ವಾಣಿಜ್ಯ ಸಂಸ್ಥೆಗಳ ಹೊಗಳುಭಟ್ಟನಾಗುವ ಪಾಡು ಪ್ರಸಾರ ಮಾಧ್ಯಮಗಳಿಗೆ ಬರದಿರಲಿ. ಎಂದೇ ನನ್ನ ಹಾರೈಕೆ. ಯಾವುದೋ ವ್ಯಾನಿಷಿಂಗ್ ಕ್ರೀಮ್‌ನ, ಯಾವುದೋ ಸಿಗರೇಟಿನ ಮಹಿಮೆಯನ್ನು ಸಾಮಗಾನಕ್ಕೆ ಹೋಲಿಸುವ ಸ್ಥಿತಿ ಬರದಿರಲಿ. ನ್ಯಾಯವಾಗಿ

"ಅದನ್ನು ಉಪಯೋಗಿಸಬೇಡಿ" ಎಂದು ಪ್ರಚಾರ ಮಾಡಬೇಕಾದ ಸಂಸ್ಥೆಗಳು - ಆಕಾಶವಾಣಿ ಮತ್ತು ಟೀವಿ."

(ಪುಟ 6)

ಹಾಗೆಂದು ಕೊಂಚ ಮಟ್ಟಿನ ಸರ್ಕಾರದ ಹಿಡಿತವನ್ನೂ ಅವರು ಪ್ರತಿಪಾದಿಸಿದ್ದಾರೆ. ಕೆಲವು ಸಂದರ್ಭಗಳಲ್ಲಿ ಅವರು ಸರ್ಕಾರದ ಕೊಂಚ ಮಟ್ಟಿನ ಹಿಡಿತವನ್ನೂ ಅವರು ಬೆಂಬಲಿಸಿದ್ದಾರೆ. ಮೂರ್ತಿರಾಯರ ಸಮತೋಲನ ದೃಷ್ಟಿ ಇಲ್ಲಿ ಸಂಪೂರ್ಣವಾಗಿ ಪರಿಚಯವಾಗಿದೆ.

ಇಡೀ ರಾಷ್ಟ್ರದ ಯೋಗಕ್ಷೇಮದ ದೃಷ್ಟಿಯಿಂದ ಕೇಂದ್ರಸರ್ಕಾರ ದೇಶದ ಎಲ್ಲ ಯೂನಿಟ್ಟುಗಳ ಮೇಲೂ ಸ್ವಲ್ಪಮಟ್ಟಿಗಾದರೂ ಹತೋಟಿ ಇಟ್ಟುಕೊಳ್ಳಲೇಬೇಕಾಗುತ್ತದೆ. ಕೆಲವು ವೇಳೆ-ಉದಾಹರಣೆಗೆ, ಯುದ್ಧ ಕಾಲದಲ್ಲಿ-ಆ ಹತೋಟಿಯನ್ನು ಹೆಚ್ಚಿಸಿಕೊಳ್ಳುವುದೂ ಅನಿವಾರ್ಯವಾಗುತ್ತದೆ. ಟೀವಿ-ಆಕಾಶವಾಣಿಗಳು ಮನರಂಜನೆಯ ಮಾಧ್ಯಮ ಮಾತ್ರವಲ್ಲ, ಶಿಕ್ಷಣ ಮಾಧ್ಯಮ ಮಾತ್ರವಲ್ಲ, ಪ್ರಚಾರ ಮಾಧ್ಯಮವೂ ಹೌದು. ಆಕಾಶವಾಣಿಯನ್ನು ಹೊರದೇಶದವರು ಕೇಳದಂತೆ ತಡೆಹಾಕಲಾಗುವುದಿಲ್ಲ. ಯುದ್ಧಕಾಲದಲ್ಲಿ ಪರದೇಶದವರಿಗೆ-ಮುಖ್ಯವಾಗಿ ಶತ್ರುಗಳಿಗೆ-ತಿಳಿಯಬಾರದ ವಿಷಯಗಳನ್ನು ಪ್ರಸಾರ ಮಾಡದಂತೆ ನಿರ್ಬಂಧ ಹಾಕಲೇ ಬೇಕಾಗುತ್ತದೆ. ಕೆಲವು ವೇಳೆ ನಮ್ಮ ಪರವಾಗಿ ಪ್ರಪಂಚದ ಸದಭಿಪ್ರಾಯವನ್ನು ರೂಪಿಸುವುದಕ್ಕಾಗಿ ಇತರ ದೇಶದವರು ಕೇಳಲೆಂದೇ ವಿಶೇಷ ಪ್ರಸಾರ ಮಾಡಬೇಕಾಗುತ್ತದೆ. ಇಂಥ ಸಂದರ್ಭಗಳಲ್ಲಿ ಆಕಾಶವಾಣಿಯ ಮತ್ತು ಟೀವಿಯ ಪ್ರಸಾರ ನೀತಿ ಕೇಂದ್ರ ಸರ್ಕಾರದ ಆದೇಶಕ್ಕೆ ಒಳಪಡಲೇಬೇಕಾಗುತ್ತದೆ.

(ಪುಟ 5)

ಮೂರ್ತಿರಾಯರ ತುಲನಾತ್ಮಕ ಅಧ್ಯಯನವನ್ನು ಇಲ್ಲಿಯೂ ಕಾಣುತ್ತೇವೆ.

ಅಮೇರಿಕ ಸಂಯುಕ್ತ ಸಂಸ್ಥಾನಗಳಲ್ಲಿ ರೇಡಿಯೋ ಮತ್ತು ಟೆಲಿವಿಷನ್ ಸಂಸ್ಥೆಗಳು ಆರ್ಥಿಕ ದೃಷ್ಟಿಯಿಂದ ಸ್ವಾವಲಂಬಿಗಳಾಗಿವೆ. ಈ ಮಾಧ್ಯಮಗಳ ಮೂಲಕ ಜಾಹಿರಾತು ಪ್ರಸಾರ ಮಾಡಲು ಅಲ್ಲಿಯ ದೈತ್ಯ ಪ್ರಮಾಣದ ಕೈಗಾರಿಕಾ ಮತ್ತು ವಾಣಿಜ್ಯ ಸಂಸ್ಥೆಗಳು ಘಂಟೆಯೊಂದಕ್ಕೆ ಮಿಲಿಯನ್ ಡಾಲರ್‌ಗಳನ್ನು ಕೊಡುವುದುಂಟಂತೆ. ಈ ಮಾತಿಗೆ ಪೂರಕವಾಗಿ ಒಂದೆರಡು ನಿದರ್ಶನಗಳನ್ನು ನೀಡುತ್ತಾರೆ. ಅನಂತರ ಅವರು ಭಾರತದ ಈ ಮಾಧ್ಯಮಗಳ ಕಡೆಗೆ ದೃಷ್ಟಿ ಹಾಯಿಸುತ್ತಾರೆ. ನಾವೂ ಅಮೇರಿಕದ ಮೇಲ್ಪಂಕ್ತಿಯನ್ನು ಅನುಸರಿಸಿ ಹಣ ಗಳಿಸಲು ಹೊರಡೋಣವೇ? ಹೊರಟರೆ ರೇಡಿಯೋ ಟೀವಿಗಳಿಗೆ ನಿಜವಾದ ಸ್ವಾತಂತ್ರ್ಯ ದೊರೆತೀತೆ?

(ಪುಟ 5)

ಇದರ ಮುಂದಿನ ಚಿಂತನೆ ಚಿಂತನಾರ್ಹ

ಈ ಲೇಖನವು ಪ್ರಜೆಗಳಿಂದ ಪ್ರಧಾನಿಯವರೆಗೂ ಅಧ್ಯಯನ ಮಾಡುವಂತಹುದು. ಈ ಲೇಖನದ ಅಂತ್ಯಭಾಗದ ಮುಂದೆ ಯಾವುದೇ ವಿಮರ್ಶೆಯೂ ಬೇಡ.

ಸ್ವಾತಂತ್ರ್ಯ ಬೇಕು, ಅದಕ್ಕಿಂತ ನೂರು ಪಾಲು ಹೆಚ್ಚಾಗಿ ಜವಾಬ್ದಾರಿಯ ಅರಿವು ಬೇಕು.

(ಪುಟ 6)

## 8.5 ಕರ್ನಾಟಕ ಲೇಖಕಿಯರ ಸಂಘ

### ನಾಟಕ ರಚನಾ ಶಿಬಿರದ ಉದ್ಘಾಟನೆ

ತಾರೀಖು 26.1.1990 ರಂದು ಕರ್ನಾಟಕ ಲೇಖಕಿಯರ ಸಂಘ ಏರ್ಪಡಿಸಿದ ನಾಟಕ ರಚನಾ ಶಿಬಿರದ ಉದ್ಘಾಟನಾ ಭಾಷಣ ಒಂದು ಸಂಕೀರ್ಣ ಬರಹ. ಏಳು ಪುಟಗಳಷ್ಟು ವ್ಯಾಪ್ತಿಯಲ್ಲಿ ಹರಿದಿರುವ ಈ ಉದ್ಘಾಟನಾ ಭಾಷಣದಲ್ಲಿ ನಾವು ಹಲವಾರು ಲಕ್ಷಣಗಳನ್ನು ಗುರುತಿಸಬಹುದು. ಇಲ್ಲಿ ಮೂರ್ತಿರಾಯರು ನಾಟಕ ಸಾಹಿತ್ಯದ ಇತಿಹಾಸವನ್ನೇ ಕೆಲವೇ ಮಾತುಗಳಲ್ಲಿ ಹೇಳುತ್ತಾರೆ. ಇಲ್ಲಿ ಯಾವುದೇ ದ್ವಂದ್ವಕ್ಕೆ, ಅಲೋಚನೆಗೆ ಅವಕಾಶವೇ ದೊರೆಯದಂತೆ ನಾಟಕದ ಎರಡೂ ರೂಪಗಳಾದ ಶ್ರವ್ಯ ಹಾಗೂ ದೃಶ್ಯಗಳನ್ನು ಕುರಿತು ಹೇಳುತ್ತಾರೆ. ಇಲ್ಲಿ ಯಾವ ವಿಭಾಗವನ್ನೂ ಅವರು ಕಡೆಗಣಿಸಿಲ್ಲ. ಶಿಬಿರದ ವ್ಯವಸ್ಥೆ ಮಾಡಿದ ಲೇಖಕಿಯರನ್ನು ಸಹ ಒಂದು ಕಾವ್ಯಾತ್ಮಕ ಹೋಲಿಕೆಯಿಂದ ಪ್ರಶಂಸೆ ಮಾಡುತ್ತಾರೆ. ಅಲ್ಲಿಂದ ಆರಂಭವಾದ ಅವರ ವಿಮರ್ಶಾತ್ಮಕ ವ್ಯಾಖ್ಯಾನ ಪ್ರಾಚೀನ ನಾಟಕಗಳಿಂದ ಅರ್ವಾಚೀನ ನಾಟಕಗಳವರೆಗೂ ವಿಮರ್ಶಾತ್ಮಕವಾಗಿ ಸಾಗುತ್ತದೆ. ಇಲ್ಲಿ ತೌಲನಿಕತೆ ಇದೆ, ವಿಮರ್ಶೆ ಇದೆ, ಅನುಭವವಿದೆ, ಅಧ್ಯಯನವಿದೆ, ಚಿಂತನೆ ಇದೆ, ಕನ್ನಡ ಸಾಹಿತ್ಯ ಚರಿತ್ರೆಯ ಆರಂಭಿಕ ಹಂತದ ಒಂದು ಮಿಂಚುನೋಟ ಇಲ್ಲಿದೆ. ಸ್ತ್ರೀಯರ ಹಾಗೂ ಪುರುಷರ ಶಕ್ತಿಗಳನ್ನು ಅರ್ಜುನನ ಸವ್ಯಸಾಚಿತ್ವಕ್ಕೆ ಹೋಲಿಸಿ ತಮ್ಮ ಉದ್ಘಾಟನಾ ಭಾಷಣ (ಲೇಖನ)ವನ್ನು ಆರಂಭಿಸಿದ ಮೂರ್ತಿರಾಯರು ವಿವಿಧ ಕ್ಷೇತ್ರಗಳಲ್ಲಿ ಆದ ಸ್ತ್ರೀಯರ ಪ್ರಗತಿಯನ್ನು ಪ್ರಶಂಸೆ ಮಾಡುವ ನಿರ್ಮತ್ಸರ ಗುಣಸ್ವಭಾವ ಅವರದು. ಇಂಗ್ಲೆಂಡಿನ ಎಲಿಜಬೆತ್ ಕಾಲವನ್ನು 'ನಾಟಕಯುಗ' ವೆಂದು ಕರೆದಂತೆ ನಮ್ಮ ಕರ್ನಾಟಕದಲ್ಲಿ ಅಂತಹ ಯುಗಪ್ರವರ್ತನೆ ಇಲ್ಲವೆಂದು ಅವರು ಹೇಳುವಲ್ಲಿ ನಾಟಕ ಸಾಹಿತ್ಯದಲ್ಲಿ ನಾವೆಷ್ಟು ಮಂದಗಾಮಿಗಳೆಂಬುದನ್ನು ಅವರು ಸೂಚಿಸುತ್ತಾರೆ. ಆದರೂ ಕೆಲವು ಪ್ರಮುಖ ನಾಟಕ ಕರ್ತೃಗಳ ಹೆಸರುಗಳನ್ನು ಉಲ್ಲೇಖಿಸಿ ಅವರು ಕೊಂಚ ನಿಶ್ಚಿಂತೆಯನ್ನು ವ್ಯಕ್ತಪಡಿಸುತ್ತಾರೆ. ಆದರೆ ತಮ್ಮ ಆತ್ಮ ವಿಮರ್ಶೆಯನ್ನು ಇಲ್ಲಿಯೂ ಮಾಡಿಕೊಳ್ಳುತ್ತಾರೆ.

"ನನ್ನ ಓದು ಬಹಳ ಹಿಂದೆ ಬಿದ್ದಿದೆ" (ಪುಟ 1)

ಇಲ್ಲಿಯೂ ಮೂರ್ತಿರಾಯರ ತೌಲನಿಕ ವಿಮರ್ಶೆ ಇದೆ. ಕನ್ನಡದಲ್ಲಿಯೇ ನಾಟಕ ಸಾಹಿತ್ಯ ಹಾಗೂ ಇತರ ಸಾಹಿತ್ಯ ಪ್ರಕಾರಗಳನ್ನು ಪರಸ್ಪರ ಹೋಲಿಸುತ್ತಾರೆ. ಸ್ವತಃ ಇಂಗ್ಲೀಷ್ ಪ್ರಾಧ್ಯಾಪಕರಾದ ಮೂರ್ತಿರಾಯರು ಅಲ್ಲಿಯ ಹಾಗೂ ಇಲ್ಲಿಯ ನಾಟಕ ಪ್ರಕಾರವನ್ನು ಕುರಿತು ಈ ವ್ಯತ್ಯಾಸವನ್ನು ಗಮನಿಸುತ್ತಾರೆ. ಈ ಎರಡೂ ಅಂತರಗಳನ್ನು ಎರಡು ವಾಕ್ಯಗಳಲ್ಲಿ ಹೀಗೆ ಬರೆಯುತ್ತಾರೆ. "ಇಂಗ್ಲೆಂಡಿನ ಎಲಿಜಬೆತ್ ನಾಟಕದ ಯುಗ ಎಂದು ಕರೆಯುತ್ತಾರಲ್ಲ, ಆ ಅರ್ಥದಲ್ಲಿ ನಮ್ಮ ನವೋದಯ ಕಾಲದಿಂದ ಹಿಡಿದು ಇದುವರೆಗಿನ 5–6 ದಶಕಗಳಲ್ಲಿ ಯಾವುದೊಂದೂ ನಾಟಕದ ಯುಗ ಎನ್ನಿಸಿಕೊಳ್ಳಲಿಲ್ಲ. ನಾಟಕದ ಬೆಳೆ ಸಣ್ಣಕಥೆ, ಕಾದಂಬರಿಗಳಷ್ಟು ಹುಲುಸಾಗಿ ಬೆಳೆಯಲಿಲ್ಲ ಎಂಬ ಮಾತನ್ನು ನಾನು ಕೇಳಿದ್ದೇನೆ." (ಪುಟ 1)

ಮೂರ್ತಿರಾಯರು ಯಾವ ವಿಷಯವನ್ನೇ ಆಗಲಿ, ಒಂದರ ಪಕ್ಕದಲ್ಲಿ ಮತ್ತೊಂದನ್ನು ಇರಿಸಿ, ಪರಸ್ಪರ ಹೋಲಿಸಿ ನೋಡುತ್ತಾರೆ. (Juxtaposition)

ಅಮೇರಿಕಾದಲ್ಲಿ ಅವರು ಕಂಡ ಲಿಯರ್ ಮತ್ತು My Fair Lady ನಾಟಕಗಳನ್ನು ಪ್ರಾಸಂಗಿಕವಾಗಿ ಉಲ್ಲೇಖಿಸಿ The play is the thing (2) ಎಂದುಕೊಂಡರಂತೆ. ನಮ್ಮ ಕರ್ನಾಟಕದ ನಾಟಕಗಳ ಶೈಲಿಯ ಕೃತಕತೆಯನ್ನು ಸ್ಮರಿಸಿಕೊಳ್ಳುತ್ತಾರೆ. "ಕಾವ್ಯೇಷು ನಾಟಕಂ ರಮ್ಯಂ" ಎಂಬ ಸುಪ್ರಸಿದ್ಧ ಭಾರತೀಯ ಹೇಳಿಕೆಯನ್ನು ವಿಸ್ತರಿಸುತ್ತಾರೆ. ಅರಿಸ್ಟಾಟಲ್ ಹಾಗೂ ಭರತರನ್ನು ಹೀಗೆಯೇ ಅಕ್ಕಪಕ್ಕದಲ್ಲಿರಿಸಿ ತೂಗಿ ನೋಡುತ್ತಾರೆ. ಈ ಮೀಮಾಂಸಕರ ಸೂತ್ರಗಳನ್ನು ಕುರಿತು ಅವರೇನನ್ನೂ ವಿಸ್ತರಿಸುವುದಿಲ್ಲ. ವಿಮರ್ಶಿಸುವುದಿಲ್ಲ. ಆದರೆ ಮೀಮಾಂಸೆ ಹಾಗೂ ವಿಮರ್ಶೆಗಳನ್ನು ಕುರಿತು ಅವುಗಳ ಅಂತರವನ್ನು ಒಂದೆರಡು ವಾಕ್ಯಗಳಲ್ಲಿ ಹೇಳುತ್ತಾರೆ.

"ಮೀಮಾಂಸಕರು ತಮ್ಮ ನಿಯಮಗಳನ್ನು ತಯಾರು ಮಾಡುವುದು ಕೃತಿಗಳ ಆಧಾರದ ಮೇಲೆ. ಕೃತಿಗೇ ಪ್ರಥಮ ಸ್ಥಾನ. ವಿಮರ್ಶೆಯಲ್ಲೂ ಇದು ಗಮನದಲ್ಲಿಡಬೇಕಾದ ವಿಷಯ. ಮೀಮಾಂಸೆ ಬೇರೆ, ಕಾವ್ಯ ವಿಮರ್ಶೆ ಬೇರೆ. ವಿಮರ್ಶಕನಿಗೆ ಕಣ್ಣೆದುರಿಗಿರುವ ಕೃತಿ ಮುಖ್ಯ." (ಪುಟ 3)

ಇದೇ ರೀತಿಯಲ್ಲಿ ಪಾಶ್ಚಿಮಾತ್ಯ ಮೀಮಾಂಸಕರು ಪ್ರತಿಪಾದಿಸಿದ ಐಕ್ಯತೆಗಳನ್ನು ಕುರಿತು ಅವರು ಪ್ರಸ್ತಾಪಿಸಿ ಒಂದು ತೌಲನಿಕ ಚಿತ್ರಣವನ್ನು ನೀಡುತ್ತಾರೆ. ಷೇಕ್ಸ್‌ಪಿಯರ್, ಬರ್ನಾರ್ಡ್ ಷಾ, ಕಾಳಿದಾಸ -ಈ ಮೂವರು ನಾಟಕಕಾರರ ಕೃತಿಗಳನ್ನು ಸೋದಾಹರಣವಾಗಿ ಉಲ್ಲೇಖಿಸುತ್ತಾರೆ. ಬರ್ನಾರ್ಡ್ ಷಾನ Back to Methusula ನಾಟಕದ ಕೊನೆಯ ದೃಶ್ಯದ ಕ್ರಿಯೆಯ ವ್ಯಾಪ್ತಿಯನ್ನು As far as thought can reach ಎಂದು ಒಂದೇ ಅತ್ಯಂತ ಚಿಕ್ಕ ವಾಕ್ಯದಲ್ಲಿ ಅದರ ಅನಂತತೆಯನ್ನೂ ಅಸೀಮತೆಯನ್ನೂ ಹಿಡಿದಿಡುತ್ತಾರೆ. ಷೇಕ್ಸ್‌ಪಿಯರ್ ಹಾಗೂ ಕಾಳಿದಾಸರ ನಡುವಣ ಸ್ಥಳೈಕ್ಯದ ತೌಲನಿಕ ಸಾದೃಶ್ಯವನ್ನು ಹೀಗೆ ಸಾಹಿತ್ಯಾತ್ಮಕವಾಗಿ ವಿವರಿಸುತ್ತಾರೆ.

"ಷೇಕ್ಸ್‌ಪಿಯರ್ ನಮ್ಮನ್ನು ವೆನಿಸ್‌ನಿಂದ ಬೆಲ್‌ಮಾಂಟಿಗೂ, ಸಿಸಿಲಿಯಿಂದ ಬೋಹೀಮಿಯಕ್ಕೂ ಎಳೆದುಕೊಂಡು ಹೋಗುತ್ತಾನೆ. ಕಾಳಿದಾಸನೊಡನೆ ಹೊರಟರೆ ನಾವು ಕಣ್ವರ ಆಶ್ರಮದಿಂದ ರಾಜಧಾನಿಗೆ, ಅಲ್ಲಿಂದ ಹೇಮಕೂಟಕ್ಕೆ ಪ್ರಯಾಣ ಮಾಡಲು ಸಿದ್ಧರಾಗಿರಬೇಕು." (ಪುಟ 4)

ತೌಲನಿಕತೆಯಿದ್ದಂತೆಯೇ ವ್ಯತ್ಯಾಸವನ್ನು ಎತ್ತಿ ಹಿಡಿಯುವುದರಲ್ಲಿ ಮೂರ್ತಿರಾಯರು ವಿಮರ್ಶಾತ್ಮಕ ದೃಷ್ಟಿಕೋನ ಹೊಂದಿದವರು. ನಾಟಕಕಾರ-ಮೀಮಾಂಸಕ-ಈ ಇಬ್ಬರ ನಡುವಣ ವಿರೋಧಾಭಾಸಗಳಿಂದ (Contradiction) ಎರಡೂ ಕಡೆಯ (ಪೂರ್ವ - ಪಶ್ಚಿಮ) ನಾಟಕಗಳನ್ನು ವಿಮರ್ಶಿಸುತ್ತಾರೆ. ಇಲ್ಲಿ ಮೂರ್ತಿರಾಯರ ಚಿಂತನೆ ಕೆಲಸ ಮಾಡಿದೆ. ತೌಲನಿಕತೆ ವಿಮರ್ಶಾತ್ಮಕವಾಗಿ ಬಂದಿದೆ.

"ನಾವು ಮೀಮಾಂಸಕರ ಮಾತು ಕೇಳಬೇಕೇ, ಷೇಕ್ಸ್‌ಪಿಯರ್- ಕಾಳಿದಾಸರಿಂದ ಕಲಿಯಬೇಕೆ? ನಾಟಕಕಾರರಿಂದ ಕಲಿಯಬೇಕು ಸಂದೇಹವಿಲ್ಲ. ಅವರ ನಾಟಕಗಳ ಆಧಾರದ ಮೇಲೆ ಮೀಮಾಂಸಕರು ತಮ್ಮ ನಿಯಮಗಳನ್ನು ತಿದ್ದಿಕೊಳ್ಳುತ್ತಾರೆ. ರಚನಾ ಕೌಶಲ್ಯವನ್ನು ಬೆಳೆಸುವವರು ನಾಟಕಕಾರರೇ ಹೊರತು ಮೀಮಾಂಸಕರಲ್ಲ. ಈ ಮಾತು ನಮ್ಮ ಮೀಮಾಂಸಕರ ವಿಷಯದಲ್ಲೂ ಸಲ್ಲುತ್ತದೆ. ಅವರು ಮಾಡಿಕೊಳ್ಳುವ ಕ್ಯಾಟಗರಿಗಳೊಳಕ್ಕೆ ನಾಟಕದ ಅಂಶಗಳನ್ನು ತುರುಕುವುದು ಕಷ್ಟದ ಕೆಲಸ. 'ಹ್ಯಾಮ್ಲೆಟ್' ನಾಟಕದ

ನಾಯಕನನ್ನು ಬಹಳ ಕೃತಿಗಳಿಗೆ [illegible]' [illegible]. [illegible]' [illegible] ಕಲ್ಪನೆಗೆ ಒಗ್ಗದ ನಾಟಕಗಳವೆ. (ಪುಟ 4)

ಭಾರತೀಯ ದೃಷ್ಟಿಕೋನ, ನಾಟ್ಯಶಾಸ್ತ್ರ ಮತ್ತು ಕಾವ್ಯ ಮೀಮಾಂಸೆಯ ದೃಷ್ಟಿಯಿಂದ ಪಾಶ್ಚಿಮಾತ್ಯ ನಾಟಕಗಳನ್ನು ನೋಡಲು ಯತ್ನಿಸುತ್ತಾರೆ.

ಕ್ಷೇಮೇಂದ್ರನ ಹೇಳಿಕೆಯ ಬೆಳಕಿನಲ್ಲಿ ಮಹಾಭಾರತವನ್ನು ಮಹಾಕಾವ್ಯವನ್ನಾಗಿಯೂ ಮಹಾ ನಾಟಕವನ್ನಾಗಿಯೂ ಪರಿಗಣಿಸಿ ಮಾಡಿದ ವಿಮರ್ಶೆ ಅದ್ಭುತವಾದುದು. ಚಿಕ್ಕದಾಗಿ, ಚೊಕ್ಕದಾಗಿ ಅದರ ಸಮಗ್ರವಾಗಿ ವಿಮರ್ಶಿಸಿದ್ದಾರೆ. ಮಹಾಭಾರತದಲ್ಲಿ ಅಂತರ್ಗತವಾಗಿರುವ ನಾಟಕೀಯತೆಯನ್ನು ಅವರು ಚಿಂತನೆ ಮಾಡಿರುವುದರ ಪ್ರಭಾವ ಇಲ್ಲಿ ಧ್ವನಿತವಾಗುತ್ತದೆ. ವ್ಯಕ್ತವಾಗುತ್ತದೆ. ಅದನ್ನು

"ನೂರಾರು ನಾಟಕಗಳಿಗೆ ತವರು ಮನೆ. ಇಡೀ ಮಾನವಕುಲದ ಬದುಕೇ ವಸ್ತುವಾಗುಳ್ಳ ಭವ್ಯ ನಾಟಕ, ಅದರ ರಸ ಯಾವುದು' ಶಾಂತರಸ ಎಂದು ಹೇಳುವುದುಂಟು." (ಪುಟ 4)

ಎಂದು ಈ ಹೇಳಿಕೆಯನ್ನೇ ವಿಮರ್ಶಿಸಿದ್ದಾರೆ. ಮಹಾಭಾರತದಲ್ಲಿ, ಮಹಾಭಾರತವನ್ನು ಓದುವುದರಿಂದ ಶಾಂತಿ ಇದೆಯೇ' ಎಂದು ಪ್ರಶ್ನೆ ಹಾಕಿಕೊಂಡು ಈ ಪ್ರಶ್ನೆಗೆ ಸಮಂಜಸವಾದ, ಸಮರ್ಪಕವಾಗಿ ಉತ್ತರ ಹೇಳುತ್ತಾ ಹೋಗುತ್ತಾರೆ. ಇಲ್ಲಿಯೂ ಸಹ ಸಮಗ್ರ ಭಾರತವನ್ನು ಆರಂಭದಿಂದ ಅಂತ್ಯದವರೆಗೂ ವಿಮರ್ಶಿಸಿದ್ದಾರೆ. ಸಮಗ್ರ ಭಾರತವನ್ನು ಕೆಲವು ಘಟಕಗಳನ್ನಾಗಿ ವಿಂಗಡಿಸಿಕೊಂಡಿದ್ದಾರೆ.

"ಗಂಗೆ ತನ್ನ ಮಕ್ಕಳನ್ನು ಹೊಳೆಗೆ ಹಾಕಿ ಕುಂತಿಗೆ ಮೇಲ್ಪಂಕ್ತಿ ಹಾಕಿಕೊಟ್ಟಳು". (ಪುಟ 4)

ಇಲ್ಲಿಯೂ ಒಂದು ಘಟನೆಯು ಮತ್ತೊಂದು ಘಟನೆಗೆ ಹೇಗೆ ಪೂರಕವೆಂದು ತೋರಿಸಿಕೊಟ್ಟಿದ್ದಾರೆ. ಈ ಪಾತ್ರ-ಘಟನೆಗಳ ತೌಲನಿಕತೆಯಲ್ಲಿ ಭಾರತದ ಮುಖ್ಯ ಘಟನೆಗಳ ಹಿನ್ನೆಲೆ-ಮುನ್ನೆಲೆಗಳು ಹುದುಗಿವೆ.

ಕ್ಷೇಮೇಂದ್ರ, ವ್ಯಾಸ, ಭರತರ ಸೂತ್ರಗಳನ್ನು ಉಲ್ಲೇಖಿಸಿದಂತೆ ಬೈಬಲ್ಲಿನಿಂದಲೂ ಹೇಳಿಕೆಯೊಂದನ್ನು ಉಲ್ಲೇಖಿಸಿ ಆ ವಾಕ್ಯವನ್ನು ನಾಟಕಕಾರನಿಗೆ ಹೇಗೆ ಮಾದರಿಯಾಗಿರಬೇಕೆಂದು ಸೂಚಿಸುತ್ತಾರೆ. ಸಾಹಿತ್ಯ ಕೃತಿಗಳಲ್ಲಿ ಬರುವ 'ಮಾತು' ಸಹ ಹೇಗೆ ಮಹತ್ವದ, ಪರಿಣಾಮಕಾರಿಯಾದ ಪಾತ್ರವನ್ನು ವಹಿಸುತ್ತದೆ ಎಂಬುದನ್ನು ಕುರಿತೂ ಅವರು ಪ್ರಸ್ತಾಪಿಸುತ್ತಾರೆ. ನಮ್ಮ ನಾಟಕಗಳ ಶೈಲಿಯನ್ನು ಈ ಹಂತದಲ್ಲಿ ವಿಮರ್ಶಿಸುತ್ತಾ ಅವರು "ನಮ್ಮ ನಾಟಕಗಳ ಭಾಷೆಗೂ ಆಡು ಮಾತಿಗೂ ಇರುವ ಅಂತರ ಮಿತಿ ಮೀರಿದ್ದು. ಈ ಶತಮಾನದ ಮೊದಲ ಎರಡು ಮೂರು ದಶಕಗಳಲ್ಲಿ ಎಲ್ಲ ನಾಟಕಗಳ ಶೈಲಿಯೂ ಕೃತಕವೆಂದರೆ ಕೃತಕ. ಆ ಮಾತುಗಳನ್ನು ಆಡುವ ರೀತಿಯು ಕೃತಕ" (ಪುಟ 6)

ಎಂದು ಹೇಳುತ್ತಾರೆ. ಇದಕ್ಕೆ ಕಾರಣ ಅವರು ತಮ್ಮ ಆತ್ಮ ಚರಿತ್ರೆಯಲ್ಲಿಯೂ (6 ಆಗಿನ ನಾಟಕಗಳು ಪುಟ 79-89) ವಿಮರ್ಶಾತ್ಮಕವಾಗಿ ಬರೆದಿದ್ದಾರೆ. ಹೀಗೆ ನಾಟಕಕಾರ ಉಪಯೋಗಿಸಬೇಕಾದ ಅನಿವಾರ್ಯ ಅಂಗವಾದ ಭಾಷೆಯ ಬಗ್ಗೆ ಅವರು ಅತ್ಯುನ್ನತ ಗೌರವಾದರದಿಂದ ಬರೆಯುತ್ತಾರೆ. ಅವರು ಬೈಬಲಿನಿಂದ ಎತ್ತಿಕೊಂಡ ವಾಕ್ಯ

ಅವರು ಬಾಲ್ಯದಲ್ಲಿ ಬೈಬಲ್‌ಅನ್ನು ಆಳವಾಗಿ ಅಧ್ಯಯನ ಮಾಡಿರುವುದಕ್ಕೆ, ಧಾರ್ಮಿಕ ವೈವಿಧ್ಯತೆಗೆ ಅವರು ಕೊಟ್ಟ ಸ್ಥಾನ ಹಾಗೂ ಅವರ ಪರಧರ್ಮಸಹಿಷ್ಣುತೆಗಳಿಗೂ ಸಾಕ್ಷಿಯಾಗಿದೆ. ಹೀಗೆ ನಾಟಕಕಾರರಿಗೂ ಇಲ್ಲಿ ಒಂದು ಮಾರ್ಗದರ್ಶನ, ಸೂತ್ರ ಸಿದ್ಧಾಂತವಿದೆ.

ಯಾವುದೇ ವಿಷಯವನ್ನಾದರೂ ಅವರ ಸಮಗ್ರ ಚಿತ್ರಣವನ್ನು ಕೊಡುವುದು ಮೂರ್ತಿರಾಯರ ಸಾಹಿತ್ಯ- ಬರಹದ ಪ್ರಮುಖ ಲಕ್ಷಣ. ಹಾಗೆಯೇ ಇಲ್ಲಿಯೂ ಸಹ ನಾಟಕದ ಸಮಗ್ರ ರೂಪವನ್ನು ಅವರು ನೀಡುತ್ತಾರೆ. ನಾಟಕ ಕೃತಿಯ ರೂಪದಿಂದ ಪ್ರದರ್ಶನದವರೆಗೂ ಇರುವ ಮಜಲುಗಳನ್ನು, ಬೇಕಾದ ಪರಿಕರಗಳನ್ನು ಅವರು ವಿವರಿಸಿ ಹೇಳುತ್ತಾರೆ. ನಾಟಕದ ಹುಟ್ಟಿನಿಂದ ಪ್ರದರ್ಶನದವರೆಗೂ ಇದರ ಪೂರ್ಣ ಪ್ರಮಾಣದ ಬೆಳವಣಿಗೆಯನ್ನು, ಹಂತ ಹಂತವಾಗಿ ಉಲ್ಲೇಖಿಸುತ್ತಾರೆ. ಪ್ರಾಸಂಗಿಕವಾಗಿ ಕೃತಿ-ಸಂಗೀತ, ಕೃತಿ-ಪ್ರದರ್ಶನ, ಹೀಗೆ ಸಂಗೀತ ಹಾಗೂ ನಾಟಕಗಳನ್ನು ಪರಸ್ಪರ ಪರಿಕರಗಳ ಸಹಿತ ಹೋಲಿಸುತ್ತಾರೆ.

"ಪರಿಪೂರ್ಣವಾದ ನಾಟಕ ಎಂದರೆ ನಾವು ಯಾವುದನ್ನು ರಂಗಸ್ಥಳದ ಮೇಲೆ ನೋಡುತ್ತೇವೆಯೋ ಅದು. ಬರೆದು ಅಚ್ಚಾಗಿರುವ ಪುಸ್ತಕವಲ್ಲ." (ಪುಟ 2)

ಮೂರ್ತಿರಾಯರ ಈ ಉದ್ಘಾಟನಾ ಭಾಷಣ ಒಂದು ಮಹಾಪ್ರಬಂಧದ ವಸ್ತುವನ್ನು ಒಳಗೊಂಡಿರುವಂತಹುದು. ಇದರ ವ್ಯಾಪ್ತಿಯನ್ನು ಎಷ್ಟೋ ಹಿಗ್ಗಿಸಬಹುದು. ಹತ್ತು ಹಲವು ವಿಷಯಗಳನ್ನು ಸಮಯೋಚಿತವಾಗಿ ಬಹು ಸಂಗ್ರಹವಾಗಿ ಬೇಕಾದ ಮೂರ್ತಿರಾಯರು ಕಿರಿದರಲ್ಲಿ ಹಿರಿದರ್ಥವನ್ನು ಹೇಳುವ ಗುಣವುಳ್ಳವರೇ. ಇಲ್ಲಿಯೂ ಸಹ ವಿಸ್ತೃತವಾದ ವಿಚಾರವನ್ನು ಇಷ್ಟು ಸಂಕ್ಷಿಪ್ತವಾಗಿ ಹೇಳಿದ್ದಾರೆ. ವಿಮರ್ಶಾತ್ಮಕವಾದ ಈ ಲೇಖನದಲ್ಲಿ ಅವರು ಪ್ರಸ್ತಾಪಿಸಿರುವ ಹಲವು ಘಟಕಗಳು, ಅಂಶಗಳು ವಿಸ್ತೃತರೂಪದಲ್ಲಿ ವಿವರಿಸಲ್ಪಟ್ಟರೆ ಒಂದೊಂದೂ ಒಂದೊಂದು ಹೆಬ್ಬೊತ್ತಿಗೆಯಾಗುತ್ತದೆ.

## 8.6 ಗುರುಪೀಠಗಳು ಮತ್ತು ಸಮಾಜ

ಮೂರ್ತಿರಾಯರು ಬರೆದಿರುವ ಲೇಖನಗಳು ಬಹುಮುಖ ವಿಷಯಗಳನ್ನುಳ್ಳವು. ಈ ವಸ್ತು ವೈವಿಧ್ಯ ಅವರ ಚಿಂತನಶೀಲತೆಗೆ ಅತ್ಯುತ್ತಮ ಉದಾಹರಣೆ. ಹಳೆಯ ತಲೆಮಾರಿನ ಸಾಹಿತಿಗಳಲ್ಲಿ ಅತ್ಯಂತ ಹಿರಿಯರಾದ ಮೂರ್ತಿರಾಯರು ತಮ್ಮ ಕಾಲದ ಸಮಾಜವನ್ನು ಕಂಡವರು. ಹಾಗೆಯೇ ಇಂದಿನ ಸಮಾಜವನ್ನೂ ಕಂಡವರು. ಇಂದಿನ ಸಮಾಜದ ಸ್ಥಿತಿಗತಿಗಳು, ದಿಕ್ಕುದೆಸೆಗಳು, ನಂಬಿಕೆಗಳು, ಪದ್ಧತಿಗಳು ಅವರಲ್ಲಿ ಉದ್ದೀಪಿಸಿದ ವೈಚಾರಿಕತೆಯ ಫಲವಾಗಿ ಅವರು ನೀಡಿದ ಎರಡು ಉಪನ್ಯಾಸಗಳು, ತಮ್ಮ ಮಗನಿಗೆ ಅವರು ಬರೆದ ಪತ್ರಗಳು, ಈ ಲೇಖನಗಳು ಸಮಾಜವನ್ನು ಕುರಿತ ಕಟು ಟೀಕೆಯಲ್ಲ, ವಿಡಂಬನೆಯಲ್ಲ ಅಥವಾ ಪೂರ್ವಾಗ್ರಹಪೀಡಿತವಾದ ಆಕ್ರೋಶವೂ ಅಲ್ಲ. ಅವರ ಕೊಂಚ ಮಟ್ಟಿನ ಸೌಮ್ಯ ಬಂಡಾಯ ಮನೋಪ್ರವೃತ್ತಿಯೂ ಇಲ್ಲಿದೆ. ಸಮಾಜ ಸುಧಾರಕನ ಅಧಿಕಾರವಾಣಿ ಇಲ್ಲ ನಿಜ. ಆದರೆ ಸಮಾಜದ ಉನ್ನತಿ, ಪುರೋಗತಿಗೆ ಬೇಕಾದ ಸಲಹೆ, ಸೂಚನೆಗಳಿವೆ. ಸಾಮಾಜಿಕ, ಧಾರ್ಮಿಕ, ವೈಜ್ಞಾನಿಕ ದೃಷ್ಟಿಗಳಿಂದ ಮಾಡಿದ ವಿವೇಚನೆ ಇಲ್ಲಿದೆ. ಭಾರತದ ಪ್ರಾಚೀನತೆಯಿಂದ ಆಧುನಿಕತೆ

ಯುವತಿಗೆ ಉದ್ಯೋಗ ಲಭಿಸಿದಾಗ ಹಿರಿಯ ಪರಂಪರೆಯಲ್ಲಿ ಹುದುಗಿದ ಪ್ರಶ್ನೆಗಳ ಬಗ್ಗೆ ಬದಲಿಸಿದ ಗೌರವವನ್ನು ತೋರಿಸುತ್ತದೆ. ಹಳೆಯದೆಂದು ಸಾರಾಸಗಟಾಗಿ ತಿರಸ್ಕರಿಸದ, ಹೊಸದೆಂದು ತಕ್ಷಣವೇ ಅಂಗೀಕರಿಸಿಕೊಳ್ಳದ ಮನೋಭಾವ ಅವರದು. ಎರಡು ಲೇಖನಗಳ ಒಟ್ಟಿರುವಿಕೆಯೂ ಗಮನಾರ್ಹ. ಎರಡೂ ಸ್ಮಾರಕೋಪನ್ಯಾಸಗಳು. ಇವು ಕೇವಲ ಸ್ಮಾರಕೋಪನ್ಯಾಸಗಳಾಗಿರದೆ, ಸಮಕಾಲೀನ ಸಮಾಜಕ್ಕೆ ಸ್ಪಂದಿಸಿದ ಪ್ರತಿಕ್ರಿಯೆಯೂ ಆಗಿದೆ. ಸಮಾಜವನ್ನು ತೆರೆದ ಕಣ್ಣಿನಿಂದ ನೋಡಿ, ಮುಕ್ತ ಮನಸ್ಸಿನಿಂದ ಚಿಂತನೆ ನಡೆಸಿ, ವಿಚಿಕಿತ್ಸಕ ದೃಷ್ಟಿಯಿಂದ ವಿಶ್ಲೇಷಿಸಿದ ರೀತಿ ಇದು. ಇಲ್ಲಿಯೂ ಮೂರ್ತಿರಾಯರು ಉಪಯೋಗಿಸಿದ ಕಥನ ಶೈಲಿ, ತಂತ್ರ, ಆಕರ್ಷಕವಾದದ್ದು, ಪರಿಣಾಮಕಾರಿಯಾದದ್ದು. ಈ ಉಪನ್ಯಾಸ ಒಟ್ಟು ಸಮಾಜ ರಾಷ್ಟ್ರಪ್ರಜ್ಞೆ ರಾಷ್ಟ್ರೀಯ ಅಧ್ಯಯನದಂತಿದೆ. ಓದಿಸಿಕೊಂಡು ಹೋಗುವ, ಕುತೂಹಲ ಕೆರಳಿಸುವ ಹಾಗೂ ನಮ್ಮಲ್ಲಿ ಚಿಂತನೆಗೆ ಪ್ರಚೋದನೆ ನೀಡುವ ಉದ್ಬೋಧಕ ಗುಣವುಳ್ಳದ್ದು.

"ಗುರುಪೀಠಗಳು ಮತ್ತು ಸಮಾಜ" ಎಂಬುದು ವಿ.ಎಸ್. ಭೀಮರಾವ್ ಸ್ಮಾರಕ ಉಪನ್ಯಾಸ. ಇಲ್ಲಿ ಮೂರ್ತಿರಾಯರು ತಮ್ಮ ಅಭಿಪ್ರಾಯವನ್ನು ಸಾರ್ವತ್ರಿಕಗೊಳಿಸಿಲ್ಲ. ಅಂದ ಮೇಲೆ ಅವರು ಗುರುಪೀಠಗಳ ತಾರತಮ್ಯ ಜ್ಞಾನವುಳ್ಳವರೆಂದು ಇದು ಸ್ಪಷ್ಟವಾಗುತ್ತದೆ. ಗುರುಪೀಠಗಳಿಗೂ ಸಮಾಜಕ್ಕೂ ಇರುವ ಅಂತರ, ಸಂಬಂಧ, ಪರಸ್ಪರ ಅವಲಂಬನೆ, ಗುರುಪೀಠಗಳಲ್ಲಿ ಅಧಿಕಾರದಲ್ಲಿದ್ದವರ ಸಂಕುಚಿತ ದೃಷ್ಟಿ, ಮತಾಂಧತೆ, ಅಹಂಕಾರ, ಕರ್ತವ್ಯಲೋಪ, ಕರ್ತವ್ಯ ವಿಮುಖತೆ, ಇವುಗಳೂ ಕೂಡಾ ಇಲ್ಲಿ ಪ್ರಾಸಂಗಿಕವಾಗಿ ಉಲ್ಲೇಖಿತವಾಗಿದೆ. ಪ್ರತ್ಯಕ್ಷ ಸಂದರ್ಶನ, ಬಾಲ್ಯದ ನೆನಪುಗಳು, ಓದಿನ ನೆನಪುಗಳು, ಇವುಗಳಿಂದ ಈ ಲೇಖನ ಒಂದು ಪ್ರಮಾಣಲೇಖನವಾಗಿ ಪರಿಣಮಿಸಿದೆ. ಇಲ್ಲಿ ಮತ್ತೊಂದು ವೈಶಿಷ್ಟ್ಯವೆಂದರೆ ಮೂರ್ತಿರಾಯರು ಒಂದು ಕೂದಲೆಳೆಯಷ್ಟೂ ಯಾವುದೇ ಮತದ ಪರ ವಹಿಸದಿರುವುದು. ನಕಾರಾತ್ಮಕ ವಿಚಾರಗಳನ್ನು ಉಲ್ಲೇಖಿಸುವ ಸಂದರ್ಭದಲ್ಲಿ ಅವರ ಪದ್ಧತಿ ಶಿಷ್ಟಾಚಾರದಂತೆ, ಸಂಕೇತಾಕ್ಷರಗಳನ್ನು ಬಳಸಿದ್ದಾರೆ. ಪ್ರಶಂಸಾರ್ಹವಾದ, ಅನುಕರಣೀಯ ವಿಚಾರಗಳನ್ನು ಉಲ್ಲೇಖಿಸುವ ಸಂದರ್ಭದಲ್ಲಿ ಖಚಿತವಾಗಿ ಮಠದ, ಸ್ವಾಮಿಗಳ ಹೆಸರನ್ನು ಉಲ್ಲೇಖಿಸಿದ್ದಾರೆ. ಎಲ್ಲಾ ಮತಗಳನ್ನು ಅವರು ಅಧ್ಯಯನ ಮಾಡಿರುವುದು ಇಲ್ಲಿ ವ್ಯಕ್ತವಾಗುತ್ತದೆ. ಏಕೆಂದರೆ ಹಿಂದೂ, ಕ್ರೈಸ್ತ, ಇಸ್ಲಾಂ, ಜೈನ, ವೀರಶೈವ ಮುಂತಾದ ಎಲ್ಲಾ ಮತಗಳ ಗುರುಪೀಠಗಳ ಬಗ್ಗೆಯೂ ಇಲ್ಲಿ ವಾಚ್ಯವಾಗಿ ಹೇಳಿದ್ದಾರೆ. ಹೀಗೆ ಕೆಲವೆಡೆ ಸೂಚ್ಯವಾಗಿ (Implicit) ಕೆಲವೆಡೆ ವಾಚ್ಯವಾಗಿ (Explicit) ಹೇಳಿದ್ದಾರೆ. ಸರ್ವಧರ್ಮ ಸಮನ್ವಯತೆಯ ಲಕ್ಷಣ ಇಲ್ಲಿ ಚೆನ್ನಾಗಿ ಪಡಿಮೂಡಿದೆ.

ವಸ್ತುನಿಷ್ಠತೆ (Objectivity) ಮೂರ್ತಿರಾಯರ ಬರಹಗಳ ಪ್ರಮುಖ ಲಕ್ಷಣ. ಟಿ.ಎಸ್. ಇಲಿಯಟ್ ಪ್ರತಿಪಾದಿಸುವ ವ್ಯಕ್ತಿ ನಿರಪೇಕ್ಷತೆಯ ಸಿದ್ಧಾಂತವನ್ನು ಇಲ್ಲಿ ಅನ್ವಯಿಸಬಹುದು. ಏಕೆಂದರೆ ಕವಿ-ಕಾವ್ಯ, ಗುರು-ಗುರುಪೀಠ ಇವು ಪರಸ್ಪರವೂ ಗಾಢವೂ ಆಗಿರುವ ಸಂಬಂಧವನ್ನು ಹೊಂದಿದ್ದರೂ ಕಾವ್ಯ ಹಾಗೂ ಗುರುಪೀಠಗಳನ್ನು ವೈಚಾರಿಕ ದೃಷ್ಟಿಯಿಂದ ವಿಮರ್ಶೆ-ವಿಶ್ಲೇಷಣೆಗೆ ಒಳಪಡಿಸುವಾಗ ಪೂರ್ವಾಗ್ರಹವಿಲ್ಲದ, ನಿಷ್ಪಕ್ಷಪಾತವೆನಿಸಿದ ಹಾಗೂ ವಸ್ತುನಿಷ್ಠವಾದ ದೃಷ್ಟಿ - ತೀರ್ಮಾನಗಳು ಇಲ್ಲಿ

ಪ್ರಧಾನವಾಗಿ ಕಾಣಿಸುತ್ತವೆ. ಮೂರ್ತಿರಾಯರ ದೃಷ್ಟಿಕೋನ ಮತ್ತಷ್ಟು ವ್ಯಾಪಕವಾಗಿ, ವಿಸ್ತಾರವಾಗಿ ಗುರುಪೀಠಗಳನ್ನು ಅವರು ಸಾಮಾಜಿಕ ಪ್ರಯೋಜನದೃಷ್ಟಿಯ ಹಿನ್ನೆಲೆಯಲ್ಲಿ ನೋಡುತ್ತಾರೆ. ಕವಿ-ಕಾವ್ಯ-ಸಹೃದಯ, ಗುರು-ಗುರುಪೀಠ, ಸಾಮಾಜಿಕ, ಸಾಂಘಿಕ ಸಂಸ್ಥೆಗಳನ್ನು ಸಮಾಜ ಶಾಸ್ತ್ರಜ್ಞ ನೋಡುತ್ತಾನೆ. ಸಮಾಜಶಾಸ್ತ್ರಜ್ಞನ ಕಣ್ಣಲ್ಲಿ ಒಂದು ಸಂಸ್ಥೆ ಹೇಗೆ ಕಾಣಿಸುತ್ತದೆ, ಹೇಗಿರಬಹುದು, ಹೇಗಿರಬೇಕು- ಎಂಬಿತ್ಯಾದಿ ವಾಸ್ತವಿಕತೆ, ವಿಧಿ -ನಿಷೇಧಗಳು ಬಹು ಮುಖ್ಯ. ಅಂತಹ ನೋಟವೊಂದು ಇಲ್ಲಿ ನಮಗೆ ಸಿಗುತ್ತದೆ. ತಮ್ಮ ಈ ಸ್ಮಾರಕೋಪನ್ಯಾಸದ ಶೀರ್ಷಿಕೆಯ ಅರ್ಥವ್ಯಾಪ್ತಿಯ ಮಿತಿಯನ್ನು ಅವರೇ ವಿಶ್ಲೇಷಿಸಿ ಹೀಗೆ ನಿರ್ಧರಿಸಿದ್ದಾರೆ.

"ವಾಸ್ತವವಾಗಿ ಸ್ಕೂಲು ಕಾಲೇಜುಗಳೂ ಸೇರಿದಂತೆ ಅಧ್ಯಯನ ಶಿಕ್ಷಣಗಳಿಗೆ ಮೀಸಲಾದ ಎಲ್ಲ ಸಂಸ್ಥೆಗಳೂ ಗುರುಪೀಠಗಳೇ. ಆದರೆ ಇಲ್ಲಿ ನಾನು ಆ ಪದದ ವ್ಯಾಪ್ತಿಯನ್ನು ಬಹು ಮಟ್ಟಿಗೆ ಕಡಿಮೆ ಮಾಡಿಕೊಂಡಿದ್ದೇನೆ. ಇಲ್ಲಿ ಆ ಪದ ನಿರ್ದೇಶಿಸುವುದೆಂದರೆ, ನಾವು ಸಾಮಾನ್ಯವಾಗಿ 'ಮಠಗಳು' ಎಂದು ಕರೆಯುವ ಸನ್ಯಾಸಿಗಳನ್ನು ಅಧಿಪತಿಗಳಾಗಿ ಉಳ್ಳ ಸಂಸ್ಥೆಗಳನ್ನು ಶೃಂಗೇರಿ, ಉತ್ತರಾದಿ ಮುಂತಾದ ಬ್ರಾಹ್ಮಣ ಮಠಗಳನ್ನು ಮತ್ತು ವೀರಶೈವ, ಜೈನ, ಮುಂತಾದ ಇತರ ಮಠಗಳನ್ನು, ರಾಮಕೃಷ್ಣ ಮಠ- ಇವುಗಳನ್ನು ಮಾತ್ರ ಮೇಲೆ ಹೆಸರಿಸಿದ ಮಠಗಳ ವರ್ಗಕ್ಕೆ ಸೇರಿಸುವುದಿಲ್ಲ. ಈ ಉಪನ್ಯಾಸದ ಮಟ್ಟಿಗೆ ನಾನು ರಾಮಕೃಷ್ಣರ ಹೆಸರಿನ ಮಠಗಳನ್ನು ಗಮನಕ್ಕೆ ತಂದುಕೊಂಡಿಲ್ಲ. ಆ ಮಠಗಳ ಲಕ್ಷಣ ಬೇರೆ." (ಪುಟ 1)

ಮಠಗಳಿಗೂ ಸಮಾಜಕ್ಕೂ ಇರುವ ಸಂಬಂಧ, ಮಠಾಧಿಪತಿಗಳ ಕರ್ತವ್ಯ, ಮಠ-ಮಠಾಧಿಪತಿಗಳ ಸ್ಥಿತಿ-ಗತಿ, ಕರ್ತವ್ಯ ಇವು ಇಲ್ಲಿ ಚರ್ಚಿತ ವಿಷಯ. ಮುಖ್ಯವಾಗಿ ಸನ್ಯಾಸದ ನಿಜವಾದ ಲಕ್ಷಣವನ್ನು ಮೂರ್ತಿರಾಯರು ಇಲ್ಲಿ ಪರಿಣಾಮಕಾರಿಯಾಗಿ ತಿಳಿಸಿದ್ದಾರೆ. ಅವರು "ಗೋಪಣ್ಣ" (ಇದು ನಿಜವಾದ ಹೆಸರಲ್ಲ)ನೊಡನೆ ಒಂದು ಮಠಕ್ಕೆ ಹೋದಾಗ ಅಲ್ಲಿಯ ಕಿರಿಯ ಸ್ವಾಮಿಗಳೊಬ್ಬರ ಜೊತೆ ಅವರು ನಡೆಸಿದ ಸಂದರ್ಶನದಿಂದ ಮೂರ್ತಿರಾಯರ ಕಳಕಳಿ, ಮಠಾಧಿಪತಿಗಳ ಮೌಢ್ಯ-ಎರಡೂ ವ್ಯಕ್ತವಾಗುತ್ತವೆ. "ನಮ್ಮ ನೆನಪಿಗೆ ಬರುವಂತಹ ಕೆಲಸಗಳನ್ನೇನಾದರೂ ಮಠಗಳು ಮಾಡಿವೆಯೇ?" (ಪುಟ 4) ಎಂಬ ಪ್ರಶ್ನೆಯ ಬೆಳಕಿನಲ್ಲಿ ಇಲ್ಲಿ ವಿಶ್ಲೇಷಣೆ ಮುಂದುವರಿದಿದೆ. ಇದಕ್ಕೆ 'ಹೌದು', 'ಇಲ್ಲ'-ಎಂಬ ಎರಡೂ ಉತ್ತರಗಳಿವೆ. ಈ ಎರಡೂ ಉತ್ತರಗಳ ಸಾಧಕ-ಬಾಧಕಗಳನ್ನು ಅವರು ವಿವಿಧ ದೃಷ್ಟಾಂತಗಳೊಂದಿಗೆ ವಿವೇಚಿಸುತ್ತಾರೆ.

ತಾವು ಓದಿದ ಡಿ.ವಿ.ಜಿ., ಮಾಸ್ತಿಯವರ ಪುಸ್ತಕಗಳಿಂದ ಉಲ್ಲೇಖ ನೀಡುತ್ತಾರೆ. ಬಾಲ್ಯದಲ್ಲಿ ತಾವು ಕೇಳಿದ ಘಟನೆಗಳನ್ನು ನೆನಪಿಸಿಕೊಳ್ಳುತ್ತಾರೆ. ಇಷ್ಟೆಲ್ಲಾ ಸುದೀರ್ಘ ಚಿಂತನೆಯ ಬಳಿಕ ಒಂದು ನಿರ್ಧಾರಕ್ಕೆ ಬರುತ್ತಾರೆ. ಅವರ ಲೇಖನಗಳಲ್ಲಿ 29 ಪುಟಗಳಷ್ಟು ಸುದೀರ್ಘ ವ್ಯಾಪ್ತಿಯುಳ್ಳ ಈ ಲೇಖನ ವಸ್ತುವಿನ ದೃಷ್ಟಿಯಿಂದಲೂ ಮಹತ್ವವಾದುದು.

ಮೂರ್ತಿರಾಯರು ಸನ್ಯಾಸದ ನಿಜವಾದ ಅರ್ಥವನ್ನು ಬಹುವ್ಯಾಪಕವಾದ ಅರ್ಥದಲ್ಲಿ ಬಳಸುತ್ತಾರೆ. ವ್ಯಾವಹಾರಿಕವಾಗಿಯೂ, ಲೌಕಿಕವಾಗಿಯೂ ಸನ್ಯಾಸಿ ಸಂಸಾರಿಗಳೆಂಬ ತಾರತಮ್ಯವಿದ್ದರೂ, ಮಾನಸಿಕವಾದ ಸನ್ಯಾಸ ಯಾವುದೆಂಬ ವಿಷಯ

ಸಂಸಾರಿ ಸನ್ಯಾಸಿಗಳಿಬ್ಬರ ಸಮಗ್ರ ತುಲನೆ ಇದೆ. ಈ ದೃಷ್ಟಿಯಲ್ಲಿ ಈ ಲೇಖನದಲ್ಲಿ ಮೂರ್ತಿರಾಯರ ದೃಷ್ಟಿ ವಿಷಯ ಪರಿಪೂರ್ಣತೆ ಇದೆ. ಸನ್ಯಾಸದ ಮತ್ತೊಂದು ಮುಖವಾದ ಸಂಸಾರದ ಬಗ್ಗೆಯೂ ತಾತ್ವಿಕ ವಿವರಣೆ ಇದೆ. ಮೂರ್ತಿರಾಯರು ಈ ವಿಚಾರವನ್ನು ಉಪನಿಷತ್ತುಗಳ ವಾಕ್ಯಗಳ ಸಹಾಯದಿಂದ ವಿಶ್ಲೇಷಣೆ ಮಾಡುತ್ತಾರೆ.

## 8.7 ಅದ್ವೈತ

ಈ ಬಗೆಯ ಗುಂಪಿಗೆ ಸೇರಿದ ಮತ್ತೊಂದು ಲೇಖನವೆಂದರೆ "ಅದ್ವೈತ" 27.1.1989ರಂದು ಬಿ.ಎಂ.ಶ್ರೀ ಪ್ರತಿಷ್ಠಾನ ಏರ್ಪಡಿಸಿದ "ಕನ್ನಡ ಸಾಹಿತ್ಯದಲ್ಲಿ ಅದ್ವೈತ" ಎಂಬ ವಿಚಾರಗೋಷ್ಠಿಯ ಉದ್ಘಾಟನಾ ಭಾಷಣ ಈ ಲೇಖನ.

ವೃತ್ತಿಯಿಂದ ಇಂಗ್ಲೀಷ್ ಪ್ರಾಧ್ಯಾಪಕರಾದ ಮೂರ್ತಿರಾಯರು ಪ್ರವೃತ್ತಿಯಿಂದ ಅಧ್ಯಯನಶೀಲರು. ಅವರ ತಲೆಮಾರಿನವರು ಅಧ್ಯಾಪನ (ವೃತ್ತಿ) -ಅಧ್ಯಯನ (ಪ್ರವೃತ್ತಿ)-ಬರವಣಿಗೆ-ಈ ಮೂರನ್ನೂ ಜೊತೆ ಜೊತೆಗೆ ಸಾಗಿಸಿಕೊಂಡು ಬಂದವರು. ಮೂರ್ತಿರಾಯರು ಇಂಗ್ಲೀಷ್ ಸಾಹಿತ್ಯವನ್ನು ಆಳವಾಗಿ, ಗಾಢವಾಗಿ, ಅಧ್ಯಯನ ಮಾಡಿದಂತೆ ಭಾರತೀಯ ದರ್ಶನಶಾಸ್ತ್ರ, ವೇದೋಪನಿಷತ್ತುಗಳನ್ನೂ ಅಷ್ಟೇ ಆಳವಾಗಿ ಗಾಢವಾಗಿ ಅಧ್ಯಯನ ಮಾಡಿದವರು. ಅವರ ಉಪನಿಷತ್ ಪ್ರೇಮ ಇಲ್ಲಿಯೂ ವ್ಯಕ್ತವಾಗಿದೆ. ಅವರು ಅದ್ವೈತವೆಂಬ ದರ್ಶನ ಶಾಸ್ತ್ರದ (ಧರ್ಮಶಾಸ್ತ್ರದ) ಪರಿಭಾಷೆಯನ್ನು ಸ್ವಾನುಭವದ ಬೆಳಕಿನಲ್ಲಿ ಹೇಗೋ ಹಾಗೆ ಉಪನಿಷತ್ತುಗಳ ವಾಕ್ಯಗಳ ಬೆಳಕಿನಲ್ಲಿಯೂ ವಿಶ್ಲೇಷಣೆಗೆ ಗುರಿಪಡಿಸುತ್ತಾರೆ. ಸೇಶ್ವರೋಪನಿಷತ್ತು (ಶ್ವೇತಾಶ್ವತರೋಪನಿಷತ್ತು). ನಾರಾಯಣ ಸೂಕ್ತ, ಶಂಕರಾಚಾರ್ಯರ "ಶಿವೋಹಂ" (ಇಲ್ಲಿ ಇದರ ವಿವರಣೆ ದ್ವೈತದ ಪರವಿದೆ)-ಮುಂತಾದವುಗಳನ್ನು ಉಲ್ಲೇಖಿಸುತ್ತಾರೆ.

ಈ ಅದ್ವೈತಾನುಭವವನ್ನು ಮೂರ್ತಿರಾಯರು ಗುರುತಿಸುವ ಬಗೆ ಅತ್ಯಂತ ವಿಶಿಷ್ಟವಾದುದು. ಇದು ಪೌರ್ವಾತ್ಯ ಮಹನೀಯರ ಅನುಭವದಂತೆ ಪಾಶ್ಚಿಮಾತ್ಯರ ಅನುಭವವೂ ಕೂಡಾ ಇದೆ ಎಂಬುದನ್ನು ಅವರು ಗುರುತಿಸುತ್ತಾರೆ. ಬೆಂಜಮಿನ್ ಡಿಸ್ರೇಲಿಯ ಒಂದು ಅನುಭವವನ್ನೂ ಅವರು ಉಲ್ಲೇಖಿಸುತ್ತಾರೆ. ಮೂರ್ತಿರಾಯರದು ಪೂರ್ವ-ಪಶ್ಚಿಮ ಸಮನ್ವಯ ದೃಷ್ಟಿ. ಪೂರ್ವದ (ಭಾರತೀಯ) ಸಾಹಿತ್ಯ-ಸಂಸ್ಕೃತಿಯದ್ದಾಗಲೀ, ಪಶ್ಚಿಮದ್ದಾಗಲೀ ಅವರ ಮೇಲೆ ಗಾಢವಾದ ಪ್ರಭಾವ ಬೀರಿಲ್ಲ. ಮೂರ್ತಿರಾಯರು ಅವೆರಡರ ಪ್ರಭಾವದ ಸೆಳೆತದಿಂದ ತಪ್ಪಿಸಿಕೊಂಡು, ದೂರ ನಿಂತು, ಮೇಲೇರಿ ಎರಡನ್ನೂ ನಿರ್ಲಿಪ್ತವಾಗಿ ನೋಡಬಲ್ಲರು. ಸ್ವಾನುಭವ-ಪರಾನುಭವ ಅವರಿಗೆ ಮುಖ್ಯ. ತಾತ್ವಿಕ ಪಾರಿಭಾಷಿಕ ಶಬ್ದಗಳನ್ನು ಪೂರ್ವ-ಪಶ್ಚಿಮ ದೇಶಗಳೆರಡಕ್ಕೂ ಅವರು ಅನ್ವಯಿಸಬಲ್ಲರು. ಆದ್ದರಿಂದಲೇ ಬೆಂಜಮಿನ್ ಡಿಸ್ರೇಲಿಯ ಅನುಭವದಲ್ಲಿಯೂ ಇವರು ಅದ್ವೈತವನ್ನು ಅರಸಿದ್ದಾರೆ. (ಪುಟ 8) ಬೆಂಜಮಿನ್ ಡಿಸ್ರೇಲಿಯ ಕಲ್ಪನೆಯನ್ನು, ವಿಕಾಸವಾದವನ್ನು ಅದ್ವೈತದ ಬೆಳಕಿನಲ್ಲಿ ವಿಮರ್ಶಿಸಬಲ್ಲರು.

ಈ ಲೇಖನದ ಬಹು ಮುಖ್ಯವಾದ ಭಾಗ 9-10 ನೇ ಪುಟಗಳಲ್ಲಿದೆ. ಲೇಖನದ ಸಾರಭೂತವೆನ್ನಬಹುದಾದ ಭಾಗ ಅದು. ಅದ್ವೈತವೆಂದರೆ ಎಂದೋ ಒಂದು ದಿನ ನೆನಪಾಗುವಂತಹುದಲ್ಲ. ಅದು ಅವರಿಗೆ ದೈನಂದಿನ ಬದುಕಿನಲ್ಲಿ ಹಾಸು ಹೊಕ್ಕಾಗಿ ಸೇರಿಕೊಂಡ, ಬದುಕಿನ ಒಂದು ಅವಿಭಾಜ್ಯ ಅಂಗ. ಅವರಿಗೆ ಅದ್ವೈತವೆಂದರೆ.

"ಕಲ್ಪನಾತೀತವಾದ ಸಾಧನೆ" (ಪುಟ 10) ಅವರ ಈ ಬಗೆಯ ಆಳದ ಚಿಂತನ ಶಕ್ತಿಗೆ, ಚಿಂತನ ಸಾಮರ್ಥ್ಯಕ್ಕೆ ಸಾಕ್ಷಿ.

"ದಿನ ದಿನ ಬದುಕಿನಲ್ಲಿ ನಮ್ಮ ಆಚಾರ ದ್ವೈತದ್ದೇ. ಅದ್ವೈತವೆ? (ಅದ್ವೈತ ಕೇವಲ ವೇದಾಂತಿಗಳ ಧ್ಯಾನಕ್ಕೆ ಸೀಮಿತವಾಗಿದೆ ಅಷ್ಟೆ. ನಮ್ಮ ಮಾತುಕತೆ, ನಡೆನುಡಿ, ಸಹಮಾನವರೊಡನೆ ವ್ಯವಹಾರ-ಎಲ್ಲದರಲ್ಲೂ ನಾವು ದ್ವೈತಿಗಳೇ. ದೇವರಿಗೆ ಕೂಡ ನಮ್ಮ ಇತಿಮಿತಿಗಳನ್ನೇ ಆರೋಪಿಸಿ ಅವನನ್ನು ಲಂಚಕೋರನನ್ನಾಗಿ ಮಾಡಿ ಆತನಿಂದ ಪ್ರಯೋಜನ ಪಡೆಯಲು ಹವಣಿಸುತ್ತೇವೆ. ದೇವರು ಬೇರೆ, ನಾವು ಬೇರೆ ಎನ್ನುವ ದ್ವೈತ ಇದ್ದೇ ಇದೆ. ಮಾನವರೆಲ್ಲ ಒಂದು ಎನ್ನುವ ಸೀಮಿತ ಅದ್ವೈತವನ್ನೂ ನಾವು ಸಾಧಿಸಿಲ್ಲ." (ಪುಟ 9)

ಅವರ ಅಧ್ಯಯನದ ಕಕ್ಷೆಗೆ ಧರ್ಮ, ಮತಗಳೂ ಒಳಗಾಗಿವೆ. ಒಂದು ವಿಷಯ ವಸ್ತು ಕುರಿತು ಅವರು ಮಾಡುವ ಸಮಗ್ರ ಚಿಂತನೆ, ಆಳ, ವೈಶಾಲ್ಯ ಹಾಗೂ ವಿವರ ವಿಸ್ತಾರಗಳು ಅಭೂತಪೂರ್ವ. ಇಲ್ಲಿ ಹತ್ತು ಪುಟಗಳ ವ್ಯಾಪ್ತಿಯಲ್ಲಿ "ಅದ್ವೈತ" ವೆಂಬ ಶಬ್ದದ ನಿಷ್ಪತ್ತಿಯಿಂದ ತೊಡಗಿ ಅದರ ಲೌಕಿಕ -ಪಾರಮಾರ್ಥಿಕ ವಿಶ್ಲೇಷಣೆಯವರೆಗೂ ಇದರ ವ್ಯಾಪ್ತಿಯನ್ನು ಹಿಗ್ಗಿಸುತ್ತಾರೆ.

ಒಂದು ಅಮೂರ್ತವಾದ, ಪಾರಿಭಾಷಿಕವಾದ ಶಬ್ದವನ್ನು ಎಷ್ಟು ಸರಳವಾಗಿ ಅರ್ಥ ಮಾಡಿಕೊಳ್ಳಬಹುದು ಹಾಗೂ ಅರ್ಥವಾಗುವಂತೆ ಹೇಳಬಹುದು ಎಂಬುದಕ್ಕೆ ಈ ಉಪನ್ಯಾಸ ಒಂದು ನಿರ್ದಿಷ್ಟ ಉದಾಹರಣೆ. ಇದರೊಂದಿಗೆ ಈ ಪದದ ಆಚೆ-ಈಚೆ ಹಾಗೂ ಇದರ ವಿರುದ್ಧಾರ್ಥದ ಕಲ್ಪನೆಯನ್ನೂ ಹೇಗೆ ನೀಡಬಹುದು ಎಂಬುದರ ಒಂದು ನಿರೂಪಣೆ ಇಲ್ಲಿದೆ.

ಅದ್ವೈತ ಎನ್ನುವುದು ಎರಡಲ್ಲ ಎಂಬ ಭಾವನೆ. ದ್ವೈತ ಎನ್ನುವುದು ಎರಡು ಎಂಬ ಭಾವನೆಯಾಗುತ್ತದೆ. (ಪುಟ 1)

ಎಂದು ಆರಂಭವಾಗುವ ಈ ಲೇಖನೋಪನ್ಯಾಸ (ಉಪನ್ಯಾಸ ಲೇಖನ) ಧಾರ್ಮಿಕ ಹಿನ್ನೆಲೆಯಿಂದಲೇ ಆರಂಭವಾಗುತ್ತದೆ. ದ್ವೈತ ಅಥವಾ ಅದ್ವೈತ ಎಂದು ಕೂಡಲೇ ನಮ್ಮ ಕಲ್ಪನೆ ಸಾಮಾನ್ಯವಾಗಿ ಹರಿಯುವುದು ಜೀವಾತ್ಮ ಮತ್ತು ಪರಮಾತ್ಮರನ್ನು ಕುರಿತ ಧಾರ್ಮಿಕ ಅಥವಾ ಮತೀಯ ಸಿದ್ಧಾಂತಗಳ ಕಡೆಗೆ. ಆದರೆ ಮೂರ್ತಿರಾಯರ ಚಿಂತನೆಯ ದೃಷ್ಟಿ ಮಧ್ವಾಚಾರ್ಯ, ಶಂಕರಾಚಾರ್ಯರು ಪ್ರತಿಪಾದಿಸಿದ ಸಿದ್ಧಾಂತಗಳ ಕಡೆಗಲ್ಲ. ವೈದಿಕ ಧಾರ್ಮಿಕ ಹಾಗೂ ಉಪನಿಷದ್ವಾಕ್ಯಗಳೂ ಅವರಿಗೆ ಅನುಭವಗಮ್ಯವಾಗುತ್ತವೆ. ಅವುಗಳನ್ನು ಅವರು ಕೇವಲ ಬಾಯಿಪಾಠ ಮಾಡಿ ತೃಪ್ತಿಪಟ್ಟವರಲ್ಲ. ಆದರೆ ಅವುಗಳ ಅಂತರಾರ್ಥವನ್ನು ಗ್ರಹಿಸಿ ಅದನ್ನು ಜೀವನದಲ್ಲಿ ಅಳವಡಿಸಿಕೊಂಡವರು. ಹಾಗೆಯೇ ಇಲ್ಲಿಯೂ ಸಹ ಅದ್ವೈತವೆಂಬ ಕಲ್ಪನೆಯನ್ನು ಲೌಕಿಕವಾಗಿ ತಮ್ಮ ಸ್ವಾನುಭವಕ್ಕೆ ಬಂದ ಸಂದರ್ಭವನ್ನು ಅವರು ಉಲ್ಲೇಖಿಸಿ, ಆ ಕಲ್ಪನೆ ಕೇವಲ ಅಧ್ಯಾತ್ಮಿಕಕ್ಕೇರಿಸದೆ, ನಮ್ಮ ಅನುಭವವೂ ಆಗುವಂತೆ ಮಾಡುತ್ತಾರೆ. ಹೀಗೆ ಅವರ ಅನುಭವದೊಂದಿಗೆ ನಮ್ಮ ಅನುಭವವೂ ತಾದಾತ್ಮ್ಯ ಪಡೆದು ಸಮರಸವಾಗುತ್ತದೆ.

ಒಂದು ವಾದದ ಎರಡೂ ಬದಿಗಳನ್ನು ಮೂರ್ತಿರಾಯರು ವಿಷದವಾಗಿ ಪರಿಶೀಲಿಸುತ್ತಾರೆ. "ಗುರುಪೀಠಗಳು ಮತ್ತು ಸಮಾಜ" ಎಂಬ ಲೇಖನದಲ್ಲಿ (ಅದು

ಉಪನ್ಯಾಸವೇ) ಸನ್ಯಾಸದಂತೆ ಸಂಸಾರವನ್ನೂ ವಿಶ್ಲೇಷಣೆ ಮಾಡುತ್ತಾರೆ. ಆತ್ಮ ಚರಿತ್ರೆಯಲ್ಲಿಯೂ ಯುವಕ ಆಶ್ರಮವಾಸಿ (ಪುಟ 391)ಗಳ ಮಾತನ್ನು ವಿವೇಚನೆ ಮಾಡುತ್ತಾರೆ. ಡಾ. ರಾಧಾಕೃಷ್ಣನ್‌ರವರ ಪಾಠಕ್ರಮವನ್ನು ಹೀಗೆಯೇ ವಿಮರ್ಶಿಸಿದ್ದಾರೆ. (ಚಿತ್ರಗಳು ಪತ್ರಗಳು ಪುಟ19) ಹಾಗೆಯೇ ಇಲ್ಲಿಯೂ ಸಹ ಮೂರ್ತಿರಾಯರು ಅದ್ವೈತದ ಮತ್ತೊಂದು ಮಗ್ಗುಲಾದ ದ್ವೈತವನ್ನು ಕುರಿತು ಪ್ರಸ್ತಾವಿಸುತ್ತಾರೆ. ಜೊತೆಗೆ ಈ ಪರಸ್ಪರ ವಿರೋಧಗಳೂ ಒಂದೆಡೆ ಸೇರುವ ಬಿಂದುವನ್ನು ಅವರು ಗುರುತಿಸುತ್ತಾರೆ. ಇವರೊಂದಿಗೆ ಒಂದು ಸಮನ್ವಯವನ್ನು ಸಾಧಿಸುತ್ತಾರೆ.

"ಅಂದ ಮೇಲೆ ಅದ್ವೈತ ನಿಜವಾದರೆ ಸಗುಣ ಸಾಕಾರ ಬ್ರಹ್ಮವು ನಾವು ಅನುಕೂಲಕ್ಕಾಗಿ ಮಾಡಿಕೊಂಡ ಕಲ್ಪನೆ, ಅಷ್ಟೆ. ಸಗುಣ ಬ್ರಹ್ಮದ ಉಪಾಸನೆ ನಿಜವಾಗಿ ವಿಕೈಕ ಈಶ್ವರನ personal gods ನ ಉಪಾಸನೆಯೇ. ಇಂಥ ಉಪಾಸನೆಯಲ್ಲಿ ದ್ವೈತ ಅನಿವಾರ್ಯವಾಗಿ ಬಂದೇ ಬರುತ್ತದೆ. ಅದನ್ನು ನಾವು ತಿರಸ್ಕಾರದಿಂದ ಕಾಣಬೇಕಾಗಿಲ್ಲ. ನಿರ್ಗುಣ ನಿರಾಕಾರ ಅಮೇ ಅನಂತ ಇವೆಲ್ಲ ನಕಾರಾತ್ಮಕ ಪದಗಳೆಂಬುದನ್ನು ಗಮನಿಸಬೇಕು. ಇಂಥ ಬ್ರಹ್ಮವನ್ನು ಕಲ್ಪಿಸಿಕೊಳ್ಳುವುದು ಸಾಧ್ಯವಾಗದಿದ್ದಾಗ, ನಮಗೆ ಯಾವುದು ಅತ್ಯಂತ ಉದಾತ್ತ ಎನ್ನಿಸುತ್ತದೆಯೋ, ಅತ್ಯಂತ "ಬೃಹತ್" (ದೊಡ್ಡದು) ಎನ್ನಿಸುತ್ತದೆಯೋ ಆ ಗುಣವನ್ನುಳ್ಳ ಈಶ್ವರನನ್ನು ಕಲ್ಪಿಸಿಕೊಳ್ಳುತ್ತೇವೆ. ಆ ಈಶ್ವರನ ಉಪಾಸನೆಗೆ ನಿಜವಾಗಿ ಉದಾತ್ತತೆಯ ಮನನ, ಧ್ಯಾನ. ಅವನ ಆರಾಧನೆಯು ಬ್ರಹ್ಮವನ್ನು ತಿಳಿಯುವ ಪ್ರಯತ್ನ ಎಂದು ಭಾವಿಸಬಹುದು. ಅಂಥ ಅರ್ಚನೆಯೇ ಅದು ದ್ವೈತದಿಂದ ಅದ್ವೈತಕ್ಕೆ ಏರಲು ನಾವು ನಿರ್ಮಿಸಿಕೊಂಡ ಮೆಟ್ಟಿಲು.

(ಪುಟ 5)

ಕೆಲವರಿಗೆ ದ್ವೈತಕ್ಕೆ ಅದ್ವೈತ ಅಥವಾ ಅದ್ವೈತಕ್ಕೆ ದ್ವೈತ ವಿರುದ್ಧವಾದುದೆಂಬ ನಂಬಿಕೆ ಇದೆ. ಆದರೆ ಮೂರ್ತಿರಾಯರಿಗೆ ಇವು ಪರಸ್ಪರ ಪೂರಕ. ಇವೆರಡರ ನಡುವಣ ಸಂಬಂಧವನ್ನು ಸಾಮರಸ್ಯದಲ್ಲಿ ಪರ್ಯವಸಾನಗೊಳಿಸಿ ಅದನ್ನೊಂದು ಸುಂದರ ಕಲ್ಪನೆಯನ್ನಾಗಿಸಿದ್ದಾರೆ. ಅದೇ ರೀತಿ ಈ "ಅದ್ವೈತ" ಎಂಬ ಪಾರಿಭಾಷಿಕ ಶಬ್ದವನ್ನು ಅವರು ಕೇವಲ ಆಚಾರ್ಯರ ಭಾಷ್ಯಗಳ ವಾಕ್ಯ ಸರಣಿಯಿಂದ ವಿಶ್ಲೇಷಣೆ ಮಾಡುವುದಿಲ್ಲ. ಅದರ ಬದಲಾಗಿ ಅವರ ಚಿಂತನೆ ಹಾಗೂ ಅನುಭವಗಳ ಸಾಕ್ಷಿಯಾಗಿ ಈ ವಿಶ್ಲೇಷಣೆ ಮಾಡಿದ್ದಾರೆ.

"ಅದ್ವೈತ ಎಂಬ ಶಬ್ದವನ್ನು ಕೇಳಿದಾಗ ನನ್ನ ಮನಸ್ಸಿಗೆ ಹೊಳೆದ ಕೆಲವು ಯೋಚನೆಗಳನ್ನು ತಮ್ಮಲ್ಲಿ ಅರಿಕೆ ಮಾಡುತ್ತೇನೆ. ನನ್ನದು ಅಧಿಕಾರವಾಣಿಯಲ್ಲ, ನನ್ನ ಮಾತಿಗೆ ಆಚಾರ್ಯರ ಭಾಷ್ಯಗಳ ಆಧಾರವಿಲ್ಲ." (ಪುಟ 1)

ಎಂಬ ಪೀಠಿಕೆಯೇ ಅವರ ಸ್ವಯಂ ಚಿಂತನೆ ಅನುಭವಗಳ ವ್ಯಾಪ್ತಿಯನ್ನು ತೋರಿಸುತ್ತದೆ. ಆದ್ದರಿಂದಲೇ ಅವರ ದ್ವೈತ ಅದ್ವೈತ ಎರಡನ್ನೂ ಸಮಾನಾಂತರವಾಗಿ ಚರ್ಚಿಸುತ್ತಾ ಮುಂದೆ ಸಾಗುತ್ತಾರೆ. "ದ್ವೈತ ಉಳಿದೇ ಉಳಿಯುತ್ತದೆ" (ಪುಟ 2) ಎಂಬ ಮಾತಿನಲ್ಲಿ ಅದ್ವೈತದ ಹಿನ್ನೆಲೆಯನ್ನೂ ಗುರುತಿಸುತ್ತಾರೆ.

ವೈಯಕ್ತಿಕತೆಯಿಂದ ಸಾರ್ವಜನಿಕತೆಯೆಡೆಗೆ, ವ್ಯಷ್ಟಿಯಿಂದ ಸಮಷ್ಟಿಯೆಡೆಗೆ ಸಾಗುವುದು ಮೂರ್ತಿರಾಯರ ದೃಷ್ಟಿ ವೈಶಿಷ್ಟ್ಯ. ವ್ಯಕ್ತಿಯ ವೈಯಕ್ತಿಕ ಆತ್ಮೋದ್ಧಾರಕ್ಕಿಂತ

ಕೂಡಲೇ ದ್ವೈತಕ್ಕೆ ಜಾರಿ ಬದುಕಿಕೊಂಡೆ, 1976ರಲ್ಲಿ ಅಮೇರಿಕದ ಗ್ರ್ಯಾಂಡ್ ಟೀಟನ್ ಶಿಖರಗಳ ಮುಂದೆ ನಿಂತಾಗ ನನ್ನ ಐದು ಅಡಿ ಮೂರುವರೆ ಅಂಗುಲ ದೇಹ ಆ ಶಿಖರಗಳ ಜೊತೆ ವಿಶ್ವದಲ್ಲಿ ಸೇರಿಹೋದಂತೆ ಭಾಸವಾಯಿತು. ಇನ್ನೊಂದು ಅನುಭವ ಸಂಗೀತವನ್ನು ಕೇಳುವಾಗ ಎರಡು ಮೂರು ಸಾರಿ ಆಗಿದೆ. ಕಛೇರಿ ಆರಂಭವಾಗಿ ಸುಮಾರು ಒಂದು ಘಂಟೆ ಕಳೆದಿದೆ. ನಾದದ ಅನುರಣನ ಸಂಪತ್ತು (resonance) ಮಂದಿರದಲ್ಲಿ ತುಂಬಿದೆ. ರಾಗದ ಆಲಾಪನೆ ವಿಳಂಬದಿಂದ ಮಧ್ಯಮ ಕಾಲಕ್ಕೆ ಸಾಗಿದೆ. ಕಣ್ಣುಗಳು ತಾವಾಗಿಯೇ ಮುಚ್ಚಿದವು. ಪಿಟೀಲು, ಮೃದಂಗ, ಗಾಯನ, ಶ್ರೋತೃಗಳು ಯಾವುದರ ಅರಿವೂ ಇಲ್ಲ, ಇರುವುದೊಂದೇ ನಾದ. ನಾನು ಅದರಲ್ಲಿ ಲೀನವಾಗಿದ್ದೇನೆ. ಅದು ನೆನಪಿಸಿಕೊಂಡರೂ ಬಹಳ ಹಿತವಾದ ಅನುಭವ."

ಮೂರ್ತಿರಾಯರ ಚಿಂತನೆ ಅಧ್ಯಯನ ಸಾಹಿತ್ಯ ಬರಹ ಎಲ್ಲವೂ ಅವರ ದೈನಂದಿನ ವಾಸ್ತವಿಕ ಜೀವನದ ಫಲಿತವೂ ಪ್ರಬಂಧಗಳಂತೆ ಧಾರ್ಮಿಕ ಪರಿಕಲ್ಪನೆಗಳೂ ಅವರ ನಿತ್ಯ ಜೀವನದ ಅನುಭವಗಳು. ಅಂತೆಯೇ ಅವರಿಗೆ ಯಾವುದೂ ಹೆಚ್ಚಲ್ಲ. ಯಾವುದೂ ಕಡಿಮೆಯಲ್ಲ. ಅದ್ವೈತದ ಬಗ್ಗೆ ಮಾತನಾಡುವಾಗಲೂ ಕ್ರೈಸ್ತ, ಇಸ್ಲಾಂ ಮತದ ದೈವತ್ವದ ಕಲ್ಪನೆಗಳನ್ನೂ, ವಿದೇಶೀಯರ ಹೇಳಿಕೆ, ವಿಕಾಸ ವಾದಗಳನ್ನೂ ಉಲ್ಲೇಖಿಸಿ ಒಂದು ತೌಲನಿಕ ಅಧ್ಯಯನ ಸಮೀಕ್ಷೆ ಮಾಡುತ್ತಾರೆ.

## 8.8 ನಾನು ಮತ್ತು ಓದು

'ಗ್ರಂಥಲೋಕ' (ಏಪ್ರಿಲ್ 1985) ಆಹ್ವಾನಿಸಿದ 'ನಾನು ಮತ್ತು ಓದು' ಮಾಲಿಕೆಯ ಮೂರ್ತಿರಾಯರ ಲೇಖನ (ಪುಟ 139-140) ಅವರ ಬದುಕು ಬರಹ ಅಧ್ಯಯನಗಳ ಮೇಲೆ ಪ್ರಭಾವ ಬೀರಿದ ಸಾಹಿತ್ಯ ಕೃತಿಗಳನ್ನು ಅರಿಯುವಲ್ಲಿ ತುಂಬಾ ಸಹಕಾರಿಯಾದ ಲೇಖನ.

ಈ ಲೇಖನದಲ್ಲಿ ಮೂರ್ತಿರಾಯರು ತಮ್ಮ ಹದಿಮೂರನೆಯ ವಯಸ್ಸಿನಿಂದ ಓದಲು ತೊಡಗಿದ ಅವರ ಅನುಭವ ಇದೆ. ಅವರು ಓದಿದ ಮೊದಲ ಪುಸ್ತಕದಿಂದ ತೀರಾ ಇತ್ತೀಚೆಗೆ ಓದಿದ ಪುಸ್ತಕದವರೆಗೂ ಪ್ರಮುಖ ಕೃತಿಗಳ ಬಗ್ಗೆ ಹೇಳಿದ್ದಾರೆ. 'ಲೇಖಕನಾಗಿ ನನ್ನ ಅನುಭವ' (ಸ.ಲ.ಪ್ರ. 1988 ಪುಟ 371-60) ಬರೆದ ಹಾಗೆ ಇದು 'ಓದುಗನಾಗಿ ನನ್ನ ಅನುಭವ' ಎಂದು ಬರೆದ ಪ್ರಬಂಧದಂತಿದೆ.

ಈ ಲೇಖನ ಒಂದು ಕ್ರಮಬದ್ಧವಾದ ಬೆಳವಣಿಗೆಯ ಗತಿಯನ್ನು ಸೂಚಿಸುತ್ತದೆ. ಬಾಲ್ಯ ಸಹಜವಾದ ಕುತೂಹಲದಿಂದ ಆರಂಭಗೊಂಡ ಅವರ ವಾಚನಾಭಿರುಚಿ ಪುಸ್ತಕಗಳನ್ನು ಕೊಂಡು ಸಂಗ್ರಹಿಸುವವರೆಗೂ ಹೋಗುತ್ತದೆ. ಅದು ಮುಂದುವರಿದು ಅಂತಾರಾಷ್ಟ್ರೀಯ ಖ್ಯಾತಿಪಡೆದ ಪ್ರೌಢಗ್ರಂಥಗಳ ಅಧ್ಯಯನದಲ್ಲಿ ಆಸಕ್ತಿಯನ್ನು ಕುದುರಿಸುತ್ತದೆ. ಅವರ ಓದುಗಾರಿಕೆ ಆರಂಭವಾದದ್ದು ಇಂಗ್ಲೀಷ್ ಪುಸ್ತಕದಿಂದಲೇ. ಷೋಪ್ರೋನಾದೇಳಿ ಎಂಬ ಲೇಖಕಿ ಬರೆದ ಓರಿಯಂಟ್ ಪರ್ಲ್ಸ್ ಎಂಬ ಪುಸ್ತಕ ಅದು. ಅನಂತರ ಅವರು ತಮ್ಮ ಇಂಗ್ಲೀಷ್ ಪಠ್ಯಪುಸ್ತಕಗಳನ್ನು ಆಯಾ ತರಗತಿಗಳಿಗೆ ಬರುವ ಮೊದಲೇ ಓದಿದ್ದರು. ಆ ಕಾಲದಲ್ಲಿ ಒಂದಾಣೆ ಬೆಲೆಯ 70-80 ಪುಸ್ತಕಗಳನ್ನು ಕೊಂಡುಕೊಂಡಿದ್ದರು. ಆದರೆ ತಮ್ಮ ಮಗ ಪಠ್ಯೇತರ ಪುಸ್ತಕಗಳನ್ನು ಓದುತ್ತಾನೆಂಬ

ಕಾರಣದಿಂದ ಆ ಪುಸ್ತಕಗಳನ್ನು ಅವರ ತಂದೆ ಅಂಗಡಿಗೆ ಮಾರಿದರು. ಅಷ್ಟು ಹೊತ್ತಿಗಾಗಲೇ ಮೂರ್ತಿರಾಯರು ಆ ಎಲ್ಲಾ ಪುಸ್ತಕಗಳನ್ನು ಓದಿ ಮುಗಿಸಿದ್ದರು. ಈ ಓದುಗಾರಿಕೆಯ ಫಲವನ್ನು ಅವರು ಹೀಗೆ ತಮ್ಮ ಅನುಭವದ ರೂಪದಲ್ಲಿ ನೀಡಿದ್ದಾರೆ.

"ಈ 'ಹಾಳು ಮೂಳೆ'ಯಿಂದ ನನಗಾಗದ ಪ್ರಯೋಜನ ಅಷ್ಟಿಷ್ಟಲ್ಲ. ಆ ಪುಸ್ತಕಗಳ ವಸ್ತು ಯಾವುದೊಂದು ದೇಶಕ್ಕೆ ಸೀಮಿತವಾದುದಲ್ಲ, ಕಥೆಗಳಿಗೆ ಸೀಮಿತವಾದುದೂ ಅಲ್ಲ. ಒಂದು ಮಿತಿಯಲ್ಲಿ ಅವು ವಿಶ್ವಕೋಶದ ಕೆಲಸವನ್ನು(ಹುಡುಗರ ಮಟ್ಟಿಗೆ) ಮಾಡಿದವು." (ಪುಟ 140)

ಮೂರ್ತಿರಾಯರು ಅನಂತರದ "ಹವಳದ ದ್ವೀಪ" ಕೃತಿಯನ್ನು ಅನುವಾದಿಸಲು ಅವರಿಗೆ ದೊರೆತ ಪ್ರೇರಣೆ ಅವರು ಬಾಲ್ಯದಲ್ಲಿ ಓದಿ ಆನಂದಿಸಿದ ಶಿಶು ಸಾಹಿತ್ಯ ಕೃತಿಗಳು. ಅವರು ಕೃತಿಗಳನ್ನು ಓದಿ ಆನಂದಿಸಿದಂತೆ, ಓದಿದರೂ ಅರ್ಥವಾಗದ ಕೃತಿಗಳೂ ಇದ್ದುವು. ಒಂದು ಸಂದರ್ಭವನ್ನು ಅವರು ಹೀಗೆ ಸ್ಮರಿಸಿಕೊಂಡಿದ್ದಾರೆ.

"1981 ರಲ್ಲಿ ನನ್ನ ಗುರುಗಳು ಕೊಟ್ಟ ಬರ್ನಾರ್ಡ್ ಷಾನ "Man and Superman" ಓದಿದೆ. ಆದರೆ ಸರಿಯಾಗಿ ಅರ್ಥವಾಗಲಿಲ್ಲ ಎಂದುಕೊಂಡಿದ್ದು ನೆನಪಿದೆ." (ಪುಟ 140)

ಮೂರ್ತಿರಾಯರು ಓದಿದ ವಿವಿಧ ಲೇಖಕರ ಹೆಸರನ್ನು ಅವರು ಇಲ್ಲಿ ಉಲ್ಲೇಖಿಸಿದ್ದಾರೆ. ಅವರ ವೈವಿಧ್ಯಮಯ ಓದುಗಾರಿಕೆಯು ಅವರ ಬದುಕಿನ ಮೇಲೆ ಬೀರಿದ ಪ್ರಭಾವವನ್ನು ಕುರಿತು ಹೀಗೆ ಬರೆದಿದ್ದಾರೆ. "ನಾಟಕ ಕವನಗಳು ನನ್ನ ಭಾವಜೀವನಕ್ಕೆ ಪುಷ್ಟಿ ಕೊಟ್ಟಿರಬಹುದು. ಮಾಧುರ್ಯವನ್ನು ಹೆಚ್ಚಿಸಿರಬಹುದು. ಆದರೆ ವಿಚಾರ ಶಕ್ತಿಯ ಬೆಳವಣಿಗೆಯ ದೃಷ್ಟಿಯಿಂದ ಗದ್ಯ ಸಾಹಿತ್ಯದ ಬೆಲೆ ಹೆಚ್ಚು ..... ಬಹುಮಟ್ಟಿಗೆ ಓದುವುದೆಂದರೆ ವಿಚಾರ ಸಾಹಿತ್ಯ." (ಪುಟ 140)

ಮೂರ್ತಿರಾಯರು ಕಾವ್ಯಾತ್ಮಕ ಶೈಲಿಯಲ್ಲಿ ಅಥವಾ ಕಾವ್ಯ ಭಾಗಗಳ ಅನುವಾದಗಳಲ್ಲಿ ಹೆಚ್ಚು ಸಫಲರಾಗದೆ ಇರುವುದು ಈ ಕಾರಣದಿಂದ. ಅವರು ಕವನಗಳನ್ನು ಬದುಕಿನ ದೃಷ್ಟಿಯಿಂದ ಓದಿದರೇ ಹೊರತು, ಸಾಹಿತಿಯಾಗಿ, ಸಾಹಿತ್ಯದ ದೃಷ್ಟಿಯಿಂದ ಓದಲಿಲ್ಲ. ಮೂರ್ತಿರಾಯರ ವೈಚಾರಿಕ ನಿಲುವು, ಪ್ರಬಂಧಗಳ ಶೈಲಿ, ಗದ್ಯಾತ್ಮಕ ಬರವಣಿಗೆಯ ಮೇಲೆ ಈ ಪಾಶ್ಚಿಮಾತ್ಯ ಸಾಹಿತ್ಯದ ಪ್ರಭಾವವನ್ನು ಗುರುತಿಸಬಹುದು.

ಮೂರ್ತಿರಾಯರ ಕನ್ನಡ ಸಾಹಿತ್ಯದ ಓದುಗಾರಿಕೆಯ ಬಗ್ಗೆ ಯಾವುದೇ ವಿರಾಭಿಮಾನವೂ ಇಲ್ಲದೇ ಹೇಳುವ ಮಾತು ಅವರೊಬ್ಬ ರೊಮ್ಯಾಂಟಿಕ್ ಲೇಖಕರಲ್ಲವೆಂಬುದನ್ನು ತೋರಿಸುತ್ತದೆ. ಸಾಮಾನ್ಯವಾಗಿ ನವೋದಯ ಕಾಲದ ಲೇಖಕರಲ್ಲಿದ್ದ ಕನ್ನಡ ಭಾಷೆಯ ಬಗ್ಗೆ ಇರುವ ಅಸೀಮ ಉತ್ಕಟ ವೀರಾಭಿಮಾನ ಮೂರ್ತಿರಾಯರಲ್ಲಿ ಕಾಣಬರುವುದಿಲ್ಲ. ಅವರ ಬಿಚ್ಚು ನುಡಿ ಹೀಗಿದೆ.

ನಾನು ವಿದ್ಯಾರ್ಥಿಯಾಗಿದ್ದ ಕಾಲದಲ್ಲಿ ಕನ್ನಡ ಓದಿದ್ದು ತೀರ ಸ್ವಲ್ಪ.......... ಪಂಪ ಇಲ್ಲವೇ ಇಲ್ಲ. ಕೆಲವು ತುಣುಕುಗಳನ್ನು ಬಿಟ್ಟರೆ, ಕುಮಾರವ್ಯಾಸ ಅಲ್ಲಿಷ್ಟು ಇಲ್ಲಿಷ್ಟು. (ಪುಟ 140)

1940ರಿಂದ ಅವರು ಮಾಡಿದ ಸಂಸ್ಕೃತ ಸಾಹಿತ್ಯದ ಅಧ್ಯಯನವನ್ನು ಕುರಿತು ಅವರು ಇಲ್ಲಿ ಪ್ರಸ್ತಾವಿಸಿದರೂ ಅದನ್ನು ಅವರು ವಿಸ್ತರಿಸುವುದಿಲ್ಲ. ಅವರ ವಾಚನಾಭಿರುಚಿ ಸೃಜನ ಸಾಹಿತ್ಯದಿಂದ ಜ್ಞಾನ ಸಾಹಿತ್ಯಕ್ಕೆ ಹೊರಳಿದ್ದನ್ನು ಹೇಳಿದ ಮೂರ್ತಿರಾಯರ ಓದುಗಾರಿಕೆಯ ಸಕ್ರಮವಾದ ವಿಕಾಸವಾದ ಘಟ್ಟದಲ್ಲಿ ಗಮನೀಯ ಅಂಶ ಇದು:

"ವೆಸ್ಲಿಯನ್ ಹೈಸ್ಕೂಲಿನಿಂದ ನನಗಾದ ಇನ್ನೊಂದು ದೊಡ್ಡ ಉಪಕಾರವೆಂದರೆ ಬೈಬಲ್‌ನ ಅಧ್ಯಯನ. ಗಾಸ್ಪೆಲ್‌ಗಳ ಬಹುಭಾಗ ನನಗೆ ಕಂಠಸ್ಥವಾಗಿತ್ತು. ಅವುಗಳನ್ನು ಎಷ್ಟೋ ವೇಳೆ ನೆನಪಿಗೆ ತಂದುಕೊಂಡಿದ್ದೇನೆ, ಹೊಗಳಿದ್ದೇನೆ, ಟೀಕಿಸಿದ್ದೇನೆ, ಉದಾಹರಿಸಿದ್ದೇನೆ. ನನಗೆ ರಿವೈಸ್ಡ್ ವರ್ಷನ್ (revised version) ಹಿತವೆನ್ನಿಸುವುದಿಲ್ಲ. ಆಗ ಓದಿದ ಆಥರೈಸ್ಡ್ ವರ್ಷನ್ (authorised version) ಹಿತ. (ಪುಟ 140)

ಇದೊಂದು ಆತ್ಮ ಕಥಾನಾತ್ಮಕ ಪ್ರಬಂಧ. ಅವರ ಆತ್ಮಚರಿತ್ರೆಯಲ್ಲಿ ಇದನ್ನು ಸಂಕ್ಷಿಪ್ತವಾಗಿ ಹೇಳಿದ್ದಾರೆ. ಅವರ ಜೀವನ ಹಾಗೂ ಸಾಹಿತ್ಯ ಪಡೆದ ಸ್ಫೂರ್ತಿ ಪ್ರಭಾವ ಪ್ರೇರಣೆಗಳನ್ನು ಇಲ್ಲಿ ಅವರು ಸ್ಪಷ್ಟವಾಗಿ ಹೇಳಿದ್ದಾರೆ.

## 8.9 ಮುನ್ನುಡಿಗಳು

ಮೂರ್ತಿರಾಯರ ಪುಸ್ತಕಗಳಿಗೆ ಬೇರೆಯವರು ಮುನ್ನುಡಿ ಬರೆದಿಲ್ಲ. ಅಂತೆಯೇ ಮೂರ್ತಿರಾಯರೂ ಹೆಚ್ಚಾಗಿ ಇತರರ ಕೃತಿಗಳಿಗೂ ಮುನ್ನುಡಿ ಬರೆದವರಲ್ಲ. ಆದರೆ ವಿ.ಎಂ. ಇನಾಂದಾರ್‌ರವರ ಹಾಗೂ ಪ್ರಭುಶಂಕರ ಅವರ ಕೃತಿಗಳಿಗೆ (ವರ್ತುಲದ ವ್ಯಕ್ತಿಗಳು ಮತ್ತು ಬೆರಗು) ಮುನ್ನುಡಿ ಬರೆದಿದ್ದಾರೆ. ಪ್ರಸ್ತುತ 'ಬೆರಗು' ಕೃತಿಗೆ ಬರೆದ ಒಂದು ಕಿರು ಮುನ್ನುಡಿ ಇದು. ಸಾಮಾನ್ಯವಾಗಿ ಮುನ್ನುಡಿಯಲ್ಲಿ ಒಂದೆರಡು ದೋಷಗಳನ್ನೂ ಉದಾಹರಿಸುವುದುಂಟು. ಇಲ್ಲಿ ಮೂರ್ತಿರಾಯರ ಮನೋಧರ್ಮಕ್ಕೆ ಅನುಸಾರವಾಗಿ ದೋಷಗಳ ಉಲ್ಲೇಖ ಮಾಡಿಲ್ಲದಿರುವುದು ಒಂದು ಸಹಜ ಪ್ರಕ್ರಿಯೆ. ಆರಂಭದಲ್ಲೇ ಪ್ರಭುಶಂಕರ ಅವರ ವಸ್ತುನಿಷ್ಠತೆಯನ್ನು ಗುರುತಿಸಿ ಕೊಂಡಾಡುತ್ತಾರೆ. ಕೆಲವು ಉಲ್ಲೇಖಗಳನ್ನು ಮಾಡುತ್ತಾರೆ. ಪಾತ್ರಗಳನ್ನು ಸನ್ನಿವೇಶದ ಹಿನ್ನೆಲೆಯಲ್ಲಿ ಚಿತ್ರಿಸುತ್ತಾರೆ. ಮುನ್ನುಡಿ ಒಂದು ವಸ್ತುನಿಷ್ಠ ವಿಮರ್ಶೆಯೂ ಆಗಿದೆ.

"ವಸ್ತುನಿಷ್ಠೆ ಆತ್ಮನಿಷ್ಠೆಗಳು ಇಲ್ಲಿ ಬೆರೆದಿವೆ. ತಾವು ವಹಿಸಿದ ಪಾತ್ರಗಳ ದೃಷ್ಟಿ, ವೈವಿಧ್ಯದಿಂದಾಗಿ ಅವರು ಒಂದು ಕಡೆ ಬಸವಣ್ಣನವರ ಮೋಹಕತೆಯನ್ನೂ ಉದಾತ್ತತೆಯನ್ನೂ ಕಾಣಬಲ್ಲರು, ಮತ್ತೊಂದು ಕಡೆ ಅವರಲ್ಲಿರುವ ವಿರೋಧಾಭಾಸಗಳನ್ನೂ ಅವುಗಳಿಂದ ಸಮಾಜದ ಮೇಲೆ, ರಾಜಕೀಯ ಪರಿಸ್ಥಿತಿಯ ಮೇಲೆ, ವ್ಯಕ್ತಿಗಳ ಮೇಲೆ ಆದ ಪರಿಣಾಮವನ್ನೂ ಸ್ವಚ್ಛ ದೃಷ್ಟಿಯಿಂದ ನೋಡಬಲ್ಲರು."

(ಪುಟ 63)

ಮೂರ್ತಿರಾಯರ ಮುನ್ನುಡಿಯಲ್ಲಿ ಕೃತಿಯ ಔಚಿತ್ಯ, ವಸ್ತುವಿನ ಸ್ಥಾನ ಹಾಗೂ ಲೇಖಕರ ಮನೋಧರ್ಮ-ಈ ಎಲ್ಲವುಗಳ ವಿವೇಚನೆ ಇದೆ. ಮೂರ್ತಿರಾಯರು ಒಂದು ಕೃತಿಯ ಎಲ್ಲಾ ಮಗ್ಗುಲುಗಳನ್ನೂ ಕೂಲಂಕಷವಾಗಿ ಪರಿಶೀಲಿಸಿದ್ದಾರೆನ್ನುವುದಕ್ಕೆ ಇದು ನಿದರ್ಶನ:

# ಅಧ್ಯಾಯ – 9

# ಪ್ರೊ. ಮೂರ್ತಿರಾಯರ ಇಂಗ್ಲಿಷ್ ಲೇಖನಗಳು

## 9.1 ವ್ಯಕ್ತಿ ಚಿತ್ರಣಗಳು

### (1) B.S. Keshavan

ಮೂರ್ತಿರಾಯರು ಇಂಗ್ಲೀಷ್‌ನಲ್ಲಿ ಬರೆದಿರುವ ವ್ಯಕ್ತಿ ಚಿತ್ರಣಗಳು ನಾಲ್ಕು. ಕಲ್ಕತ್ತಾ ನ್ಯಾಷನಲ್ ಲೈಬ್ರರಿಯನ್ನು ಒಂದು ಸುವ್ಯವಸ್ಥೆಗೆ ಒಳಪಡಿಸಿದ ಬಿ.ಎಸ್. ಕೇಶವನ್ ಬಗ್ಗೆ ಒಂಬತ್ತು ಪುಟಗಳ ಲೇಖನ ಬರೆದಿದ್ದಾರೆ. ಅವರನ್ನು ಭೇಟಿಯಾದ ಹಿನ್ನೆಲೆಯಿಂದ ತೊಡಗಿ ಅವರ ವ್ಯಕ್ತಿತ್ವದ ಹಲವು ವೈಶಿಷ್ಟ್ಯಗಳನ್ನು ದಾಖಲಿಸುತ್ತಾ ಹೋಗುತ್ತಾರೆ. ಸುಮಾರು ಅರ್ಧ ಶತಮಾನದ ಹಿಂದಿನ ಘಟನೆಗಳ ನೆನಪುಗಳ ಸರಮಾಲೆ ಈ ವ್ಯಕ್ತಿ ಚಿತ್ರಣ. ಅವರು ಬರೆದಿರುವ ವ್ಯಕ್ತಿ ಚಿತ್ರಣಗಳಲ್ಲಿ ಇದು ಇತರ ಮೂರು ವ್ಯಕ್ತಿ ಚಿತ್ರಣಗಳಿಗಿಂತ ದೀರ್ಘವಾದುದು.

ಅವರ ಸಹೋದ್ಯೋಗಿ ಪ್ರೊ. ಕಮಲಾಕ್ಷಮ್ಮನವರ ಆಹ್ವಾನದ ಮೇರೆ ಮೂರ್ತಿರಾಯರು ಆಗ ತಾನೆ ಇಂಗ್ಲೆಂಡಿನಿಂದ ಹಿಂದಿರುಗಿದ ಅವರ ಸೋದರ ಸಂಬಂಧಿ ಕೇಶವನ್ ಅವರನ್ನು ಭೇಟಿಯಾದರು. ಅಂದಿನ ಸಂವಾದದಿಂದ ಅವರಿಬ್ಬರ ಗೆಳೆತನ ಆರಂಭವಾಯಿತು. ಇಬ್ಬರೂ ಇಂಗ್ಲೀಷ್ ಸಾಹಿತ್ಯ, ಷೇಕ್ಸ್‌ಪಿಯರ್ ನಾಟಕಗಳ ಸಂಪಾದನೆಯ ಬಗ್ಗೆ ಮಾತನಾಡಿದರು. ಅವರ ಸಲಿಗೆ ಏಕವಚನಕ್ಕೆ ತಿರುಗಿದಾಗ ಮೂರ್ತಿರಾಯರ ಪ್ರತಿಕ್ರಿಯೆ ಹೀಗಿದೆ:

When you are talking in Kannada, such a thing is never done unless you happen to be Keshavan. Well, I did not miss the respect and I valued the singular. (Page 2)

ಅವರ ಕಾರ್ಯದರ್ಶಿಯಿಂದ ನ್ಯಾಷನಲ್ ಲೈಬ್ರರಿಯ ಒಂದು ಯೋಜನೆಗಾಗಿ ಒಂದು ಲಕ್ಷ ರೂಪಾಯಿ ಪಡೆದ ಸನ್ನಿವೇಶವನ್ನು ಮೂರ್ತಿರಾಯರು ಇಲ್ಲಿ ಉಲ್ಲೇಖಿಸಿದ್ದಾರೆ. ಕೇಶವನ್‌ರ ಅದ್ಭುತ ಸಾಧನೆಯಾದ ನ್ಯಾಷನಲ್ ಲೈಬ್ರರಿಯ ಮುಖ್ಯಸ್ಥರಾಗಿದ್ದಾಗ ಅವರ ಕಾಳಜಿಯ ಬಗ್ಗೆ ಮೂರ್ತಿರಾಯರು ಬರೆದ ವಾಕ್ಯ ಕೇಶವನ್‌ರ ಸಾಧನೆಗೆ ಸಂದ ಪ್ರಶಸ್ತಿಯಂತಿದೆ:

"You know Moorthy" he said, "the Librarian deals not only with books, his primary concern should be: the users of the books."

(Page 4)

ಅವರು ನಂತರ ಅನ್ಯತ ಹುದ್ದೆಯಲ್ಲಿದ್ದಾಗಲೂ, ಅವರ ಸಹೋದ್ಯೋಗಿಗಳಿಂದ ಅವರು ಕೆಲಸ ಮಾಡಿಸಿಕೊಳ್ಳುತ್ತಿದ್ದ ದಕ್ಷತೆ ಒಂದು ನಿದರ್ಶನ ಇಲ್ಲಿದೆ.

ಅವರಿಗೆ ಒಮ್ಮೆ ಹನ್ನೆರಡು ಗಂಟೆಯ ಒಳಗಾಗಿ ಕೆಲವು ಪುಟಗಳು ಟೈಪ್ ಆಗಬೇಕಾಗಿತ್ತು. ಆಗ ಅವರ ಟೈಪಿಸ್ಟ್ ಹನ್ನೆರಡು ಗಂಟೆಯೊಳಗಾಗಿ ಅವರು ಹೇಳಿದ ಕೆಲಸವನ್ನು ಮಾಡಿ ಮುಗಿಸಿದಳು. ಆಗ ಮೂರ್ತಿರಾಯರು ಕೇಶವನ್ ಅವರ ದಕ್ಷತೆಯನ್ನು ಹೀಗೆ ವಿಶ್ಲೇಷಣೆ ಮಾಡಿದ್ದಾರೆ

"He got those typed sheets well before 12- 0' Clock, not because of his threat, but because Aditi loved to work for him"

(Page 4–5)

ಗ್ರಂಥ ಭಂಡಾರದ ವ್ಯವಸ್ಥೆಯ ಬಗ್ಗೆ ಮೂರ್ತಿರಾಯರ ಸ್ವಾನುಭವ, ಕೇಶವನ್ ಅವರ ಪರಿಶ್ರಮವನ್ನು ಪರಿಚಯಿಸುತ್ತದೆ:

"It was amazing, the neatness and order, the way the cusicles were located, the arrangement of the furniture..."

ಇವೆಲ್ಲ ವಿಚಾರವನ್ನು ಬಿ.ಎಸ್. ವಯಾಳು 'ಕಸ್ತೂರಿ'ಯಲ್ಲಿ ಹೆಚ್ಚು ವಿಸ್ತೃತವಾಗಿ ಮಾಹಿತಿ ನೀಡಿ ಹೀಗೆ ಬರೆದಿದ್ದಾರೆ:

'ಅಚ್ಚುಕಟ್ಟು, ಸೌಕರ್ಯ, ಜ್ಞಾನಾರಾಧಕರಿಗೆ ದೊರೆಯುವ ಸಹಾನುಭೂತಿ ಇವುಗಳಿಂದ ಇದನ್ನು ಭಾರತದಲ್ಲೇ ಅದ್ವಿತೀಯವೆನಿಸುವಂತೆ ಕೇವಲ ಹತ್ತೇ ವರ್ಷಗಳಲ್ಲಿ ಮಾಡಿಕೊಟ್ಟ ಮನುಷ್ಯನಿಗೆ 1960ರಲ್ಲಿ "ಪದ್ಮಶ್ರೀ" ಬಿರುದನ್ನು ಕೊಟ್ಟು ರಾಷ್ಟ್ರವು ಗೌರವಿಸಿತು. (ಜನವರಿ 1961 : ಪುಟ 11)

ಮೂರ್ತಿರಾಯರು ಕೇಶವನ್ ಅವರ ವಿದ್ವತ್ತು, ದಕ್ಷತೆ, ಸರಳತೆ, ಮಕ್ಕಳ ಹಾಗೂ ಸಂಗೀತ ಪ್ರೇಮಗಳನ್ನು ಸೋದಾಹರಣವಾಗಿ ನಿರೂಪಿಸಿದಂತೆ, ಅವರ ಹಾಸ್ಯಪ್ರಜ್ಞೆಯನ್ನೂ ನಿದರ್ಶನ ಪೂರ್ವಕವಾಗಿ ನಿರೂಪಿಸಿದ್ದಾರೆ. ಒಮ್ಮೆ ಅವರ ಗೆಳೆಯನೊಬ್ಬ ಅವರಿಗೆ ತನ್ನ ಪತ್ನಿಯನ್ನು ಪರಿಚಯಿಸಿದಾಗ ಅವರ ಪ್ರತಿಕ್ರಿಯೆ ಹೀಗಿತ್ತು:

"Why...I mean...what did you see in this fellow.

why did you marry him of all people on earth" (Page 6)

ಕೇಶವನ್ ಅವರು ಮಕ್ಕಳನ್ನು ಎಷ್ಟು ಪ್ರೀತಿಸುತ್ತಿದ್ದರೆಂಬುದನ್ನು ಮೂರ್ತಿರಾಯರು ಪ್ರತ್ಯಕ್ಷ ಕಂಡವರು. ಅಂತಹ ಒಂದು ಘಟನೆಯನ್ನು ಇಲ್ಲಿ ಉಲ್ಲೇಖಿಸಿದ್ದಾರೆ

The moment Keshavan saw the child, he ran up and without any preliminaries took the child from the arms of the stranger and covered it with kisses exclaiming "Oh how lovely. Oh, how sweet"

(Page 6)

ಈ ಲೇಖನದ ವೈಶಿಷ್ಟ್ಯವೆಂದರೆ ಮೂರ್ತಿರಾಯರು ಕೇಶವನ್ ಅವರ ಚಿತ್ರಣಕ್ಕೆ ನೀಡಿದ ಮಹತ್ವ ಘಟನೆಗಳನ್ನು ವೈಭವೀಕರಿಸದೆ, ವ್ಯಾಖ್ಯಾನಿಸದೆ ಯಥಾವತ್ತಾಗಿ ದಾಖಲಿಸಿದ್ದಾರೆ. ಅವರೆ ಮೂರ್ತಿರಾಯರ ಹಾಗೂ ಕೇಶವನ್ ಅವರ ಸಂಬಂಧ ಕುರಿತು

ಹೆಚ್ಚು ಇಲ್ಲಿ ಹೇಳದೆ ಇರುವುದರಿಂದ, ಈ ಕುರಿತು ಬಿ.ಎಸ್. ದಯಾಳು ಬರೆದ ಈ ವಾಕ್ಯ - ಅವರಿಬ್ಬರ ಸಂಬಂಧ ತಿಳಿಯುವಲ್ಲಿ ನೆರವಾಗುತ್ತದೆ.

### (2) Dr. S. Radhakrishnan

ಡಾ. ರಾಧಾಕೃಷ್ಣನ್ ಬಗ್ಗೆ ಅವರು ಮೈಸೂರು ಆಕಾಶವಾಣಿಯಲ್ಲಿ ಮಾಡಿದ ಉಪನ್ಯಾಸವೇ ಈ ಲೇಖನ. ಅವರ "ಚಿತ್ರಗಳು-ಪತ್ರಗಳು" ಕೃತಿಯಲ್ಲಿ ಬರೆದ ಲೇಖನವೇ ಈ ಲೇಖನಕ್ಕೆ ಮೂಲ. ಆದರೆ ಅಲ್ಲಿ ಹೇಳದ ಒಂದು ವಿಷಯ ಇಲ್ಲಿದೆ. ಡಾ. ರಾಧಾಕೃಷ್ಣನ್ ವಿದ್ಯಾರ್ಥಿಗಳನ್ನು ಪರಿಚಯ ಮಾಡಿಕೊಳ್ಳುವ ಸಂದರ್ಭದಲ್ಲಿ ಒಬ್ಬ ವಿದ್ಯಾರ್ಥಿಯ ಹೆಸರಿನ ಬಗ್ಗೆ ಅವರ ಪ್ರತಿಕ್ರಿಯೆ ಹೀಗೆ:

"Well, let us get to know one another. My friend with the brown cap, in the second row, tell us your name. Aswatha Narayana Chetty? A mouth filling name. My dear, why didn't you choose a short name and crisp name?" (Page 2)

ಡಾ. ರಾಧಾಕೃಷ್ಣನ್ ಅವರ ಉಪನ್ಯಾಸ ಕಲೆಯನ್ನು ಕುರಿತು ಬರೆದಿರುವ ವಾಕ್ಯಗಳು ಮೂರ್ತಿರಾಯರು ಆಂಗ್ಲ ಭಾಷೆಯನ್ನೂ ಕನ್ನಡದಂತೆ ಕಾವ್ಯಾತ್ಮಕವಾಗಿಯೂ ಇಂಪಾಗಿಯೂ ಉಪಯೋಗಿಸಬಲ್ಲರೆಂದು ಸೂಚಿಸುತ್ತದೆ.

He seemed to take one leap right into the centre of the problem and from there avenues of thought opened out as petals from a bud. Radhakrishnan was not just an eloquent speaker. He was a wizard in exposition. (Page 3)

### (3) Sir M. Vishveswaraya

ಬಾಕಿ ಉಳಿದಂತೆ "ಚಿತ್ರಗಳು-ಪತ್ರಗಳು" ಕೃತಿಯಲ್ಲಿ ಬಂದ ಲೇಖನದ ಅನುವಾದ: ಸರ್ ಎಂ. ವಿ. ಯವರನ್ನು ಕುರಿತು ಬರೆದಿರುವ ವ್ಯಕ್ತಿ ಚಿತ್ರಣವೂ ಅವರ ಕನ್ನಡ ಲೇಖನದ ಇಂಗ್ಲಿಷ್ ಅನುವಾದ. ಅವರ ಹೆಸರನ್ನು 'ವಿಶ್ವೇಶ್ವರಾಯ' ಎಂದೇ ನಿಖರವಾಗಿ ಬರೆದಿರುವುದು ಒಂದು ವೈಶಿಷ್ಟ್ಯ. ಮೂರ್ತಿರಾಯರಿಗೆ ಅತಿ ಪ್ರಿಯವಾದ human kindness ವಿಶ್ವೇಶ್ವರಾಯರಲ್ಲಿಯೂ ಗುರುತಿಸಿದ್ದಾರೆ. ಇಂಗ್ಲೀಷ್ ಭಾಷೆಯಲ್ಲಿ ಪರಿಣಾಮಕಾರಿಯಾಗಿ ಉಪಯೋಗಿಸಿ, ವಿಸ್ತೃತವಾದ ವಿವರಗಳನ್ನು ಅತ್ಯಂತ ಸಂಗ್ರಾಹ್ಯವಾಗಿ ಅಡಕವಾಗಿ ಹೇಳಿದ್ದಾರೆ.

The boys were sheperded in and Dr. Visveswaraya spoke to them for a few minutes exptempore. He came out profoundly dissatisfied with himself. He had spoken without preparation - a thing he never allows himself to do. (Page 2)

ಭಾಷೆಯಲ್ಲಿರುವ ಗೇಯಾಂಶ ಹಾಗೂ ಸರ್ ಎಂ.ವಿ.ಯವರ ವ್ಯಕ್ತಿತ್ವದ ಒಂದು ವೈಶಿಷ್ಟ್ಯ - ಎರಡನ್ನೂ ಈ ವಾಕ್ಯದಲ್ಲಿ ಕಾಣಬಹುದು.

Respect for his audience and intellectual intetrity characterise his atternences on even the most insignificant occasions (Page 3)

ಸರ್ ಎಂ.ವಿ. ಯವರ ವ್ಯಕ್ತಿ ಚಿತ್ರಣವನ್ನು ಅವರು ಉಪನಿಷತ್ತಿನ ಒಂದು ಸಂದೇಶದಿಂದ ಮುಗಿಸಿದ್ದಾರೆ.

It is true that he does not exalt the spiritual to the negicet of the material – neither do the Upanishads or Visvesvarya, with his gospel of truth, of work, duty and a fuller and richer life for all, is in tune with the Upanishads rather than with the vague and futile mysticism divorced from life, that so often passes for the spirit of India. (P. 5)

ಮೂರ್ತಿರಾಯರು ಈ ಚಿಕ್ಕ ವ್ಯಕ್ತಿ ಚಿತ್ರಣದಲ್ಲಿ ಸರ್ ಎಂ.ವಿ. ಯವರ ಜೀವನದ ತತ್ತ್ವ, ಧ್ಯೇಯಗಳನ್ನು ನಿದರ್ಶನ ಹಾಗೂ ವ್ಯಾಖ್ಯಾನ ಸಹಿತ ನಿರೂಪಿಸಿದ್ದಾರೆ:

## (4) Sri Masthi Venkatesha Iyengar

ಮಾಸ್ತಿಯವರ ಬಗ್ಗೆ ಬರೆದಿರುವ ಮತ್ತೊಂದು ವ್ಯಕ್ತಿ ಚಿತ್ರಣದಲ್ಲಿ ವ್ಯಕ್ತಿ ಚಿತ್ರಣ ಹಾಗೂ ಸಾಹಿತ್ಯ ವಿಮರ್ಶೆಗಳೆರಡನ್ನೂ ಮೇಳೈಸಿದ್ದಾರೆ. ಅವರಿಗೆ ಮಾಸ್ತಿಯವರ ಕಥಾಲೋಕಕ್ಕೆ ಪ್ರವೇಶ ದೊರೆತ ಸಂದರ್ಭದಿಂದ ತೊಡಗಿ, ಅವರ ಕಾದಂಬರಿಗಳನ್ನು ಓದುವವರೆಗೂ ಅವರನ್ನೂ ಅವರ ಸಾಹಿತ್ಯವನ್ನೂ ಕುರಿತು ಬರೆದಿದ್ದಾರೆ. ಅವರ ವ್ಯಕ್ತಿ ಚಿತ್ರಣಕ್ಕಿಂತ ಅವರ ಸಾಹಿತ್ಯ ವಿಮರ್ಶೆಯೇ ಹೆಚ್ಚು ಪ್ರಮಾಣದಲ್ಲಿ ಈ ಲೇಖನದಲ್ಲಿ ಬಂದಿರುವುದರಿಂದ, ಪ್ರಾಸಂಗಿಕವಾಗಿ ಅವರ ವ್ಯಕ್ತಿ ಚಿತ್ರಣ ಬಂದಿದೆ ಎನ್ನಬಹುದು. ಈ ಲೇಖನದಲ್ಲಿ ಮಾಸ್ತಿಯವರ ಸಾಹಿತ್ಯ ಹಾಗೂ ಜೀವನ ಕ್ರಮಗಳೆರಡನ್ನೂ ಸಮನ್ವಯಗೊಳಿಸಿದ್ದಾರೆ.

'ರಂಗನ ಮದುವೆ' ಹಾಗೂ 'ರಂಗಪ್ಪನ ದೀಪಾವಳಿ' ಕಥೆಗಳಿಂದ ತೊಡಗಿ ಅವರ ಜೀವನದರ್ಶನದವರೆಗೆ ಈ ವ್ಯಕ್ತಿ ಚಿತ್ರಣವಿದೆ. ಅವರ ಸಣ್ಣ ಕಥೆಗಳ ಕಥಾವಸ್ತು ನಮ್ಮ ದೈನಂದಿನ ಜೀವನದಿಂದಲೇ ಆರಿಸಿಕೊಂಡ ಬಗೆಯನ್ನು ಆ ಕಾಲದ ಹಿನ್ನೆಲೆಯಿಂದ ಹೀಗೆ ವಿಮರ್ಶಿಸಿದ್ದಾರೆ:

....the our personal experience – all experiences of every day life – could be the stuff of which literature is made. Today we see nothing profound in the idea. But in the early years of this century our great epics still had us in thrall (Page 1)

ಮಾಸ್ತಿಯವರ ಸಣ್ಣ ಕಥೆಗಳು ಹಾಗೂ ಬಿ.ಎಂ. ಶ್ರೀ ಯವರ ಸಾಹಿತ್ಯ - ಎರಡನ್ನೂ ಹೋಲಿಸಿನೋಡಿ, ಶ್ರೀಯವರ ಮೇಲೆ ಮಾಸ್ತಿಯವರ ಪ್ರಭಾವವನ್ನು ಅವರು ಇಲ್ಲಿ ಉಲ್ಲೇಖಿಸಿದ್ದಾರೆ. ಆ ಪ್ರಭಾವವನ್ನು ಕುರಿತು ಹೀಗೆ ಬರೆದಿದ್ದಾರೆ.

He helped his guru B.M. Srikantayya to bring poetry down from chilly epic heights to dwell in the world of men and women

(Page 2)

ಮಾಸ್ತಿಯವರು ಆ ವೇಳೆಗೆ ಬರೆದ 119 ಪುಸ್ತಕಗಳನ್ನು ಮೂರ್ತಿರಾಯರು ಅಧ್ಯಯನ ಮಾಡಿ, ಅವರ ಸಾಹಿತ್ಯ ಪ್ರಕಾರಗಳನ್ನು ಕ್ರಮವಾಗಿ ವಿಂಗಡಿಸುತ್ತಾರೆ. ಅವರ ಪತ್ರಿಕೋದ್ಯಮ, ವೃತ್ತಿ, ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷತೆ ಈ ಎಲ್ಲವುಗಳನ್ನು ಮೂರ್ತಿರಾಯರು ಬಹಳ ಗೌರವಪೂರ್ವಕವಾಗಿ ಹೀಗೆಂದಿದ್ದಾರೆ:

And. let us remember. he did all this work while holding high offices in the Mysore Civl Service. (page 2)

ಮಾಸ್ತಿಯವರ ವ್ಯಕ್ತಿ ಚಿತ್ರಣದ ಸ್ವತಂತ್ರ ಭಾಗ ಈ ಲೇಖನದ ಕೊನೆಯಲ್ಲಿದೆ. ಸಾಹಿತಿ ಮಾಸ್ತಿಯವರನ್ನು ಮರೆತು ವ್ಯಕ್ತಿ ಮಾಸ್ತಿಯವರನ್ನು ಕುರಿತು ಹೀಗೆ ಬರೆದಿದ್ದಾರೆ

Masti is the simplest of men. His way of life is as simple as his dress. He is deeply religious in the best sense of the the word. and he believes that his life has been shapd by divine grace. He is generous in his praise and generous with his purse too. as many a younger writer knows.

ಮೂರ್ತಿರಾಯರು ಇಂಗ್ಲೀಷ್ ಹಾಗೂ ಕನ್ನಡದಲ್ಲಿ ಬರೆದ ವ್ಯಕ್ತಿ ಚಿತ್ರಣಗಳ ಮಟ್ಟಕ್ಕೆ ಇದು ಬರುವುದಿಲ್ಲವಾದರೂ, ಸಾಹಿತ್ಯದ ಹಿನ್ನೆಲೆಯಲ್ಲಿ ಮಾಸ್ತಿಯವರ ವ್ಯಕ್ತಿತ್ವ ಇಲ್ಲೇ ಮೂಡಿಸಲು ಯತ್ನಿಸಿದ್ದಾರೆ. ಜೊತೆಗೆ ಮಾಸ್ತಿಯವರ ಜೀವನ ಅವರ ಸಾಹಿತ್ಯದ ಭಾಗವಾಗಿ ಹೇಗೆ ಎಂಬುದನ್ನು ಅವರು ಇಲ್ಲಿ ಪ್ರತಿಪಾದಿಸಿದ್ದಾರೆ. ಹೀಗಾಗಿ ಇಲ್ಲಿ ಮಾಸ್ತಿಯವರು ವ್ಯಕ್ತಿಯಾಗಿ ಕಾಣಿಸುವುದಕ್ಕಿಂತ ಹೆಚ್ಚಾಗಿ ಸಾಹಿತಿಯಾಗಿಯೇ ಕಾಣಿಸುತ್ತಾರೆ.

## 9.2 ಅನುವಾದಗಳು - ಪ್ರಬಂಧಗಳು

### (1) THE LIVING ROOM :

ಮೂರ್ತಿರಾಯರ ಅತ್ಯಂತ ಜನಪ್ರಿಯ ಪ್ರಬಂಧಗಳಲ್ಲಿ ಒಂದಾದ "ದಿವಾನಖಾನೆಯ ಅಂದ ಚೆಂದ" ಎಂಬ ಪ್ರಬಂಧದ ಇಂಗ್ಲೀಷ್ ಅವತರಣಿಕೆ ಈ ಲೇಖನ. ಮೂಲಕ್ಕಿಂತ ಕೊಂಚ ವಿಸ್ತೃತ ಪ್ರಮಾಣದಲ್ಲಿರುವ ಈ ಲೇಖನ ಅಲ್ಲಲ್ಲಿ ತನ್ನ ವಿಸ್ತಾರವನ್ನು ಹಿಗ್ಗಿಸಿಕೊಂಡಿದೆ. ಕೆಲವು ಕಡೆಗಳಲ್ಲಿ ಮೂಲಕ್ಕಿಂತ ಭಿನ್ನವಾದ ಅರ್ಥ ನೀಡುವ ವಾಕ್ಯಗಳನ್ನು ಬಳಸಿದ್ದಾರೆ. ಸಂಪ್ರದಾಯದ ಆಚರಣೆಗಳನ್ನು ಹೆಸರಿಸುವ ಸಂದರ್ಭದಲ್ಲಿ, ಸಂವಾದಿಯಾದ ಶಬ್ದವನ್ನು ಕಷ್ಟಪಟ್ಟು ಸೃಷ್ಟಿಸದೆ ಸುಲಲಿತವಾಗಿ, ಸರ್ವಗ್ರಾಹ್ಯವಾದ ಶಬ್ದಗಳನ್ನೇ ತಂದಿದ್ದಾರೆ.

ಮೂಲದಲ್ಲಿ ದೇಸೀ ಪ್ರಯೋಗವಿದ್ದು, ಇಂಗ್ಲೀಷ್‌ನಲ್ಲಿ ಇಂಗ್ಲೀಷ್ ವಾಚಕರಿಗೆ (ಕನ್ನಡೇತರರಿಗೆ) ಸುಲಭಗ್ರಾಹ್ಯವಾದ ಶೈಲಿಗೆ ಮಾದರಿ.

ಮೂಲ : ಇನ್ನೊಂದು ಕಡೆ ಬೆಟ್ಟನೆಯ ಬಿಸಿಲಿನಲ್ಲಿ ಮೆಲುಕು ಹಾಕುವ ಬಸವನಂತೆ, ತನಗೆ ಸಹಜವಾದ ಕ್ರೌರ್ಯವನ್ನು ಮರೆತು ಶಾಂತ ಮುದ್ರೆಯಿಂದ ವಿಶ್ರಮಿಸುವ ಸಿಂಹದಂತೆ ಹಿರೋಡೆಯ ಬೆಟ್ಟಗಳು.

(ಹ.ಪ್ರ. ಪುಟ 33)

ಇಂಗ್ಲೀಷ್ ಲೇಖನ : and the two French Rocks* One quaintly resembling a bull and the other a lion in Somnolent repose

* French Rocks = Two hills called French Rocks because French troops were stationed there in the 18th Century.

(Page 1)

ಕೆಲವೆಡೆ ಮೂಲದ ಸಂಗ್ರಹಾನುವಾದ ನೀಡಿದ್ದಾರೆ:

ಗೃಹಾಧಿದೇವತೆ ಲಲಿತಾದೇವಿ ಬಾಗಿಲಿಗೆ ಬೀಗಮುದ್ರೆ ಮಾಡಿದ್ದಾಳೆಂದೂ ಅಲ್ಲ.

(ಪುಟ 34)

ಇಂಗ್ಲೀಷ್ ಲೇಖನ : It is not that Lalitha has locked me, either

(Page 1)

ಮೂಲದ 'ಗೃಹಾದಿದೇವತೆ'ಗೆ ಪರ್ಯಾಯ ಶಬ್ದ ಇಂಗ್ಲೀಷಿನಲ್ಲಿ ಸಮರ್ಪಕವಾಗಿ ದೊರೆಯುವುದಿಲ್ಲವಾದ ಕಾರಣ ಮೂಲದ 'ಲಲಿತಾದೇವಿ' 'Lalitha' ಎಂದಾಗಿದೆ. ಮೂಲದ ವ್ಯಂಗ್ಯ, ಪರಿಹಾಸಿಕ ಸಲಿಗೆ, ಇಂಗ್ಲೀಷ್ ಲೇಖನದಲ್ಲಿ ಒಂದು ಗಾಂಭೀರ್ಯ ವನ್ನು ಸಾಧಿಸಿದೆ. ಹಾಗೆಯೇ ಮೂಲದ 'ರಾಯರು' ಎಂಬ ಶಬ್ದದ ಸ್ಥಾನ ಪಲ್ಲಟ ಗಮನಾರ್ಹ.

ಹಲವಾರು ವರ್ಷ ಹೀಗೆಯೇ ಕಳೆದ ಮೇಲೆ ಒಂದು ದಿನ ಲಲಿತೆ ನನಗೆ ಪರಿಚಿತರಾದವರೊಬ್ಬರ ಮನೆಗೆ ಅರಿಸಿನ ಕುಂಕುಮಕ್ಕೆ ಹೋಗಬೇಕಾಗಿ ಬಂತು.

(ಅದೇ ಪುಟ 34)

Some years passed. One day Lalitha attended a party given by our neighbour Mr. Rao. in honour of his daughter's birth–day.....

(Page 2)

ಕೆಲವೆಡೆ ಮೂಲ ದೀರ್ಘವಾಗಿದ್ದು, ಇಂಗ್ಲೀಷ್ ಲೇಖನದಲ್ಲಿ ಅದೇ ವಿಚಾರ ಸಂಕ್ಷಿಪ್ತವಾಗಿದ್ದು, ಕೆಲವು ಭಾಗ ಬಿಟ್ಟು ಹೋಗಿದೆ.

ನಮ್ಮಲ್ಲಿ ಹುದುಗಿರುವ ಸದ್ಗುಣಗಳ ತೇಜಸ್ಸು ಯುದ್ಧ ಕಾಲದಲ್ಲಿ ಹೊರಹೊಮ್ಮಿ ದುಸ್ಸಾಧ್ಯವಾದ ಕೆಲಸಗಳನ್ನು ಸುಲಲಿತವಾಗಿ ಸಾಗಿಸುತ್ತವೆಯಷ್ಟೆ.

(ಅದೇ ಪುಟ 35)

We all know that wars bring out virtues the existence of which we had never suspected (Page 2)

ಮೂಲದಲ್ಲಿ ಉದ್ಧರಿಸಿದ ಸಂಸ್ಕೃತ ಶ್ಲೋಕ ಭಾಗಗಳನ್ನು ಇಂಗ್ಲೀಷ್‌ನಲ್ಲಿ ಬರೆಯುವುದು ಕಷ್ಟಕರವಾದ ಪ್ರಯಾಸದ ಕೆಲಸವೆನಿಸಿದ ಕಾರಣ ಮೂಲವನ್ನು ಕೈಬಿಟ್ಟು ಅದರ ಸಾರಾಂಶವನ್ನಷ್ಟೇ ಬರೆದಿದ್ದಾರೆ.

"ನನ್ನ ಬಟ್ಟೆಗಳು ಕೊಳೆಯಾಗಬಹುದೆಂಬ ಎಣಿಕೆ ಅವನಿಗೂ ಇಲ್ಲ
ನನಗೂ ಇಲ್ಲ...." – ಧವ್ಯಾಸ್ತದಂತ ರಜಸಾ ಮಲಿನೀ ಭವಂತಿ..........

(ಅದೇ ಪುಟ 44)

Elessed are they whose cloths are stained with the dust on their children's bodies Kalidasa knew what he was talking about.

ಮೂಲದ 'ಉಪಾಹಾರ' (39) ಇಂಗ್ಲೀಷ್ ಲೇಖನದಲ್ಲಿ idli (6) ಎಂದಾಗಿದೆ. ಬಹಳ ಹೆಮ್ಮೆಯಿಂದ (34) Pardonable pride (3). ಹಾಗೆಯೇ ಮೂಲದ ಒಂದು ವಾಕ್ಯ ಇಂಗ್ಲೀಷ್‌ನಲ್ಲಿ ದೀರ್ಘವಾಗಿದೆ.

ಇಂಥ ವಾತಾವರಣದಲ್ಲಿ ಸೌಹಾರ್ದ ಬೆಳೆಯಲಾದೀತೇ (ಪುಟ 42)

How can conversation be free and intimate when there is this growing fear within ? (Page 9)

ಕೊರಡಿಯನ್ನು ಅಣಿ ಮಾಡುತ್ತೇನೆ (42) ಎಂಬ ವಾಕ್ಯದ I am ready for them ಎಂಬ ಭಾವಾನುವಾದ ಪಡೆದಿದೆ. ನಮ್ಮ ಕೋಪ ತಾಪಗಳನ್ನು ಅವು ಸಹಿಸು ಎಂಬ ವಾಕ್ಯ Our indignation leave them stone-cold (10) ಎಂದು ಅನುವಾದಿಸಿದ್ದಾರೆ. ಇಂಗ್ಲೀಷ್ ವಾಕ್ಯ ಆ ಭಾಷೆಗೆ ಸಹಜವಾಗಿ ಹೊಂದುವಂತಹುದು. ಕನ್ನಡ ವಾಕ್ಯವನ್ನು ಯಥಾವತ್ತಾಗಿ ಇಂಗ್ಲೀಷ್‌ಗೆ ಅನುವಾದಿಸಿದ್ದಿದ್ದರೆ ಅದು ಅತ್ಯಂತ ನೀರಸವಾಗುತ್ತಿತ್ತು.

(2) THE PROFESSIONAL STAMP – THE AUTHOR

ಮೂರ್ತಿರಾಯರ ಮತ್ತೊಂದು ಲೇಖನ The Professional Stamp- The Author. ಇದು ಅವರು ಬರೆದ "ಸಾಹಿತಿಯ ಚಹರೆ" ಎಂಬ ಪ್ರಬಂಧದ ಇಂಗ್ಲೀಷ್ ಅವರತರಣಿಕೆ. ಇಲ್ಲಿಯೂ ಕೂಡಾ ಮೂಲ ಹಾಗೂ ಇಂಗ್ಲೀಷ್ ಲೇಖನಗಳ ನಡುವೆ ಹಲವು ತಾರತಮ್ಯಗಳು, ಸದೃಶೋಕ್ತಿಗಳು, ಹ್ರಸ್ವ-ದೀರ್ಘ ವಾಕ್ಯಗಳು, ಶಬ್ದಾನುವಾದ, ಭಾವಾನುವಾದಗಳು ಕಂಡುಬರುತ್ತವೆ. ನವೋದಯ ಕಾಲದ ಕನ್ನಡದ ವೀರಾಭಿಮಾನ, ಹಿರಿಯ ಸಾಹಿತಿಗಳ ಪ್ರಭಾವ – ಇವುಗಳ ಗೇಲಿ, ವ್ಯಂಗ್ಯ, ಲೇವಡಿ, ಹಾಸ್ಯ ಇಲ್ಲಿಯೂ ಇದೆ.

"ಅವರು ಬರೆದ ಪುಸ್ತಕಗಳು ಪುಸ್ತಕಗಳಲ್ಲ, ಭಕ್ತಿನಮ್ರರಾಗಿ ಕನ್ನಡ ಮಾತೆಯ ಅಡಿದಾವರೆಯಲ್ಲಿ ಅರ್ಪಿಸಿದ ತುಂಬೆಯ ಹೂವಿನ ಅಥವಾ ರೂಪಕವನ್ನು ಬದಲಾಯಿಸಬಹುದಾದರೆ – ತಾಯ ಮೊಣಕಾಲನ್ನಪ್ಪಿ ಅವರಾಡಿದ ನಾಲ್ಕು ತೊದಲು ಮಾತು." (ಪುಟ 129)

ಈ ಭಾಗವನ್ನು ಅವರು ತದ್ವತ್ (ಯಥಾವತ್ತಾಗಿ) ಅನುವಾದಿಸಿದ್ದಾರೆ. ಇಲ್ಲಿ 'ತುಂಬೆಹೂ' ಎಂಬ ಪ್ರಯೋಗ 'way side flowers' ಎಂಬುದಾಗಿ ಅನುವಾದಿಸುವುದು ಅನಿವಾರ್ಯವಾಗಿದೆ. 'articles' ಎಂಬ ಪದ ಅಧಿಕವಾಗಿದೆ.

The articles or books they write are not articles or books, but humble way side flowers reverently placed at the feet of the Mother, or by a variation of metaphor, the baby talk which they bable at the mother's knee. (page 2)

"ಆಹಾ, ಈ ತೊತ್ತು, ಸಮುದ್ರರಾಜ, ನಮ್ಮ ಕನ್ನಡತಾಯಿ ಪಾದಗಳನ್ನು ತೊಳೆಯುತ್ತಿದ್ದಾನೆ" (ಪುಟ 130)

ಈ ಉದ್ಗಾರಸೂಚಕ ವಾಕ್ಯ ಇಂಗ್ಲೀಷ್‌ನಲ್ಲಿ

the slave-girl sea washing the feet of the great mother (3) ಎಂಬ ಸಾಮಾನ್ಯ ವಾಕ್ಯವಾಗಿದೆ. ಜೊತೆಗೆ "ಕನ್ನಡ ತಾಯಿ" ಎಂಬ ಶಬ್ದ "the great mother" ಎಂದಾಗಿದೆ.

ಈ ಪ್ರಬಂಧದ ಕೊನೆಯ ಪ್ಯಾರಾ ಮೂಲದಲ್ಲಿ ಒಂದು ಅರ್ಥವನ್ನು ಸ್ಫುರಿಸುವಂತಿದ್ದರೆ, ಇಂಗ್ಲೀಷ್‌ನಲ್ಲಿ ಮತ್ತೊಂದು ಅರ್ಥವನ್ನು ಧ್ವನಿಸುತ್ತದೆ.

"ತತ್ತ್ವಶಾಸ್ತ್ರವೇತ್ತರಿಗೆ ಒಪ್ಪುವಂತೆ ನಾನು ಸಾಹಿತಿಗಳ 'ಲಕ್ಷಣ' ಹೇಳಿದ್ದೇನೆಯೋ ಇಲ್ಲವೋ ತಿಳಿಯದು. ಇಷ್ಟಕ್ಕೂ "ಸಹಸ್ರ ಶೀರ್ಷಾಪುರುಷಃ ಸಹಸ್ರಾಕ್ಷ ಸ್ಸಹಸ್ರಪಾತ್" ಆದ ಸಾಹಿತಿಯ ಪೂರ್ಣರೂಪವನ್ನು ಒಂದು ಸೂತ್ರದಲ್ಲಿ ಸೆರೆ ಹಿಡಿಯಲು ನಾನು ಯಾರು! ಸಾಹಿತಿಗಳ ಪ್ರತ್ಯಕ್ಷ ಪರಿಚಯ ಬೇಕೆನ್ನುವವರು ಅವರು ಏರ್ಪಡಿಸುವ ಸಮಾರಂಭಗಳಿಗೆ ಹೇಗಾದರೂ ಹೋಗಬೇಕು. ಅಲ್ಲಿ ನಡೆಯುವ ವಾಚನ ಸಲ್ಲಾಪಗಳನ್ನು ಸ್ವತಃ ಕೇಳಬೇಕು. ಹಾಗೆ ಶ್ರುಣ್ವನ್ ಕಾವ್ಯ ಕಥಾನಾದಂ, ಕೋನಯಾತಿ ಪರಾಂಗತಿಂ! ಈಗಲೇ ಪರಾಂ ಗತಿಂ ಪಡೆಯುವುದು ಬೇಡ ಎಂದು ಬದುಕಿಗೆ ಅಂಟಿಕೊಳ್ಳುವ ಪಾಮರರ ಮಾತು ಇಲ್ಲಿ ಅಪ್ರಕೃತ." (ಪುಟ 135)

I do not know whether I have given a formula which sums up the author: but I am hoping I have given indications which will help you to recognise an author when you see one. But strictly speaking, I would not call authorship a profession– not in the kannada world. If it is, it is a profession which does not pay. (page 5)

## (3) THE COMMON ROOM

"ಮಹಾರಾಜ ಕಾಲೇಜಿನ ಕಾಮನ್ ರೂಂ" ಎಂಬ ಆತ್ಮ ಕಥನಾತ್ಮಕವಾದ ಸ್ವಾನುಭವ ಪ್ರೇರಿತ ಪ್ರಬಂಧದ ಇಂಗ್ಲೀಷ್ ಭಾಷಾಂತರ ಈ ಪ್ರಬಂಧ. ಮೂರ್ತಿರಾಯರ ವೃತ್ತಿ ಜೀವನದ ಒಂದು ಭಾಗವನ್ನು ತೆರೆದು ತೋರಿಸುವ ಈ ಪ್ರಬಂಧ ಒಂದು ಮನೋಹರವಾದ ಸರಸದ ಪ್ರಪಂಚವನ್ನು ನಮ್ಮ ಮುಂದೆ ಸಾದರ ಪಡಿಸುತ್ತದೆ. ಮೂರ್ತಿರಾಯರ ಸ್ವಾನುಭವವೇ ಕಥನ ಶೈಲಿಯ ಮೂಲಕ ಪ್ರಬಂಧ ರೂಪವನ್ನು ಪಡೆದಿದೆ.

ಈ ಎಲ್ಲಾ ಅನುವಾದಗಳ ಸಾಮಾನ್ಯ ಲಕ್ಷಣಗಳಂತೆ ಇಲ್ಲಿ ಕೂಡಾ ಹಲವು ಮಾರ್ಪಾಟುಗಳನ್ನು ನಾವು ಗಮನಿಸುತ್ತೇವೆ. ಮೂಲದಲ್ಲಿ ಕಾಣಬರುವ ಸಂಸ್ಕೃತ ಶ್ಲೋಕಗಳ ಉದ್ಧೃತ ಭಾಗಗಳನ್ನು ಇಲ್ಲಿಯೂ ಕೈಬಿಟ್ಟಿದ್ದಾರೆ. ಈ ಪ್ರಬಂಧದಲ್ಲಿ ಒಂದು ವೈಶಿಷ್ಟ್ಯವೆಂದರೆ, ಎಲ್ಲೆಲ್ಲಿ ಮೂಲವನ್ನು ಅನುವಾದಿಸಲು ಭಾಷೆಯು ಸಮರ್ಥವಾಗುವುದಿಲ್ಲವೋ ಅಲ್ಲಲ್ಲಿ ಇಂಗ್ಲೀಷ್ ಭಾಷೆಯಲ್ಲಿಯೇ ದೊರೆಯುವ ಪದಗಳನ್ನು ಉಪಯೋಗಿಸಿ, ಒಂದು ಸಮನ್ವಯವನ್ನು ಸಾಧಿಸಿದ್ದಾರೆ. ಇದಕ್ಕೆ ಒಂದು ನಿದರ್ಶನ:

"ದೇವಾಸುರರಿಗೆ ಅಮೃತ ಹಂಚುವುದು ಕಷ್ಟವಾದರೂ ಮೋಹಿನಿ ಅದನ್ನು ಸಮರ್ಪಕವಾಗಿ ನಿರ್ವಹಿಸಿದಳಂತೆ. ಅದೇ ಮೋಹಿನಿ ನಮ್ಮ ಕ್ಲಬ್ಬಿಗೆ ಬಂದಿದ್ದರೆ ಹಂಚುವ ಕೆಲಸ ತನ್ನಿಂದಾಗದೆಂದು ಹೆದರಿ ಓಡಿಹೋಗುತ್ತಿದ್ದಳೇನೋ." (ಪುಟ 100)

The distribution was not an easy process either. Mr. Shastry had to stand guard at the almirah like Ulysses with drawn sword at the pool of the blood down in Hades. The comparison with Ulysses in Hades is not inapt, one significant difference being that the sword in this case was made of wit quite as shape as steel, though it left no wound. (page 7)

ಇಂಗ್ಲೀಷ್ ಲೇಖನದಲ್ಲಿ ಕೆಲವು ಹೊಸ ವಾಕ್ಯಗಳು ಸೇರ್ಪಡೆಯಾಗಿವೆ. ಅವು ಮೂಲದಲ್ಲಿ ಕಂಡು ಬರುವುದಿಲ್ಲ.

We altered all that (page 4)

In general our life was more warm and genial (page 5)

ಹಾಗೆಯೇ ಮೂಲದ ಹಲವು ಮಾತುಗಳನ್ನು ಅನುವಾದದಲ್ಲಿ ಕೈಬಿಟ್ಟಿದ್ದಾರೆ. ಮೂರ್ತಿರಾಯರಿಗೆ ಸಂದರ್ಭಾನುಸಾರವಾಗಿ ಬೆರಕೆಗೊಂಡ ಸಂಸ್ಕೃತ ಪದಪುಂಜಗಳಿಂದ ಕೂಡಿದ ಕನ್ನಡ ಭಾಷಾಶೈಲಿಯ ಪರಿಣಾಮಕಾರೀ ಪ್ರೌಢಿಮೆ ಸಿದ್ಧಿಸಿದಂತೆ ಇಂಗ್ಲೀಷ್ ಭಾಷೆಯ ಮೇಲೂ ಒಂದು ಪ್ರೌಢಿಮೆ ಸಿದ್ಧಿಸಿದೆ. ಆದ್ದರಿಂದ ಅವರು ಯಥಾವತ್ತಾಗಿ ಅನುವಾದ ಮಾಡುವುದಿಲ್ಲ. ಬದಲು ಅದರ ಭಾವಪ್ರವಾಹ ಭಾಷಾಪ್ರವಾಹದೊಂದಿಗೆ ಮಿತಗೊಂಡು ಸಹಜವಾಗಿ ಹರಿದಿದೆ. ಆದ್ದರಿಂದಲೇ ಅನುವಾದದ ಭಾಷೆಗೆ ಮೀರಿದ ಪದಗಳನ್ನು ಕಷ್ಟಪಟ್ಟು ಅನುವಾದಿಸಹೋಗಿಲ್ಲ. ಬದಲು ಆ ಭಾಗವನ್ನೇ ಕೈಬಿಡುತ್ತಾರೆ. ಇದರಿಂದಾಗಿ ಭಾಷಾಂತರ ವಿಕೃತವಾಗದೆ, ಭಾಷಾ ಸೌಷ್ಠವದಿಂದ ಕೂಡಿದೆ. ಅವರು ಬಿಟ್ಟ ಭಾಗಗಳ ಕೆಲವು ಮಾದರಿಗಳು:

'ಕುಂದೇಂದು ತುಷಾರ ಹಾರ ಧವಳಾ: ಶುಭ್ರಾವಸ್ತ್ರಾನ್ವಿತಾ' (86) ನಾನೇನು ಕುಬೇರನ ಮೊಮ್ಮಗನೋ?....ನೀನೇನು ಕುಬೇರನ ಮೊಮ್ಮಗನೋ?(94) ಆಪಾದ ಮಸ್ತಕ (93). ಇವೆಲ್ಲ ಕರ್ತವ್ಯವೋ ಆನಂದವೋ? (96) ಮಿಷ್ಟಾಹಾರ, ಊರ್ಧ್ವ ಲೋಕ (98) ನಮ್ಮೆಲ್ಲರಲ್ಲೂ ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ-ಈ ಪಂಚ ಭೂತಗಳಿವೆಯಂತೆ. ಶರ್ಮರ ದೇಹದಲ್ಲಿ ಆಕಾಶದ ಭಾಗ ಸ್ವಲ್ಪ ಹೆಚ್ಚಾಗಿರಬೇಕು. (100) ರಾತ್ರಿರೇವ ವ್ಯರಂಸೀತ್ (106)

ಅದರ ಹೆಸರಿನ ಪ್ರಥಮಾಕ್ಷರಗಳಾದ U.T.A. ಮೂರನ್ನೂ ಸೇರಿಸಿ ಯಾರೋ ಅದಕ್ಕೆ 'ಊಟ' ಎಂದು ಹೆಸರು ಕೊಟ್ಟರು.

ಮೂಲದ ಕೆಲವೆಡೆ ಬಿಟ್ಟ ವಿಚಾರ ಅನುವಾದದಲ್ಲಿ ಸೇರ್ಪಡೆಯಾಗಿದೆ. ಹೀಗಾಗಿ ಅನುವಾದವೇ ಮೂಲಕ್ಕಿಂತ ಅರ್ಥಪುಷ್ಟಿಯನ್ನು ಸಾಧಿಸಿಕೊಂಡು ನಿಷ್ಕೃಷ್ಟ ಮಾಹಿತಿಯನ್ನು ಒದಗಿಸುತ್ತದೆ.

"ಹೊಸದೊಂದು ಪುಸ್ತಕದ ಮಾತು ಬಂದರೆ ನಾಲ್ಕು ನಿಷ್ಕೃಷ್ಟವಾದ ವಾಕ್ಯಗಳಲ್ಲಿ ಅದರ ಸಾರಾಂಶವನ್ನು ಹೇಳಿಬಿಡುವರು." (ಪುಟ 103)

But when the latest book on politics was mentioned he would sum it up casually in a couple of neat sentences. (page 9)

ಆದರೆ ಒಮ್ಮೊಮ್ಮೆ ಇದಕ್ಕೆ ವಿರುದ್ಧವಾಗಿ ಇಂಗ್ಲಿಷ್ ಅವತರಣಿಕೆಯಲ್ಲಿ ಸ್ಪಷ್ಟತೆಯಿಲ್ಲದಿರುವುದೂ ಇದೆ. ಮೂಲ ಪ್ರಬಂಧದಲ್ಲಿ ವಿಷಯ ಸಮಗ್ರತೆ ಇದ್ದು, ಅನುವಾದದಲ್ಲಿ ಇದು ಕುಂಠಿತವಾಗಿದೆ.

ಕುವೆಂಪು ಅವರಂಥ ತರುಣರಿಂದ ಕವನಗಳನ್ನು ಓದಿಸಿ ಕೇಳುವುದು.... (96)

.... Listening to a young poet reading his lyrics. (5)

ಮೂರ್ತಿರಾಯರ ಕಾವ್ಯಾತ್ಮಕವಾದ ಶೈಲಿ ಕನ್ನಡ ಇಂಗ್ಲೀಷ್‌ಗಳೆರಡರಲ್ಲಿಯೂ ಗುರುತಿಸಬಹುದು.

"ಅವರನ್ನು ಹೆಂಡಕುಡುಕರಿಗೆ ಹೋಲಿಸಿದವರ ಮಾತು ತೀರ ಅಸತ್ಯವಲ್ಲ. ಆದರೆ ಈ ಮದ್ಯ ವಿಶೇಷ ರೀತಿಯಲ್ಲಿ ತಯಾರಾದದ್ದು. ತ್ಯಾಗರಾಜರ ಮತ್ತು ದೀಕ್ಷಿತರ ಕೃತಿಗಳು, ಈಸ್ಕಿಲಸ್ಸನ ಮತ್ತು ಷೇಕ್ಸ್‌ಪಿಯರ್‌ನ ನಾಟಕಗಳು, ರಸೆಲ್ಲನ ಸಂದೇಹವಾದ, ವರ್ಡ್ಸ್‌ವರ್ತ್‌ನ ಅನುಭವ–ಇಂಥ ಸರಕುಗಳನ್ನು ಸೇರಿಸಿ ಭಟ್ಟಿ ಇಳಿಸಿದ್ದು. ಈ ಮದ್ಯವನ್ನು ಕುಡಿದು ಓಲಾಡುವ ಅಭ್ಯಾಸ ಇನ್ನೂ ನಮ್ಮಲ್ಲಿ ನಿಂತಿದೆ. ಅದರ ಅಮಲು ಕಾಲು ಶತಮಾನ ಕಳೆದರೂ ಇಳಿದಿಲ್ಲ. (ಪುಟ 98)

It must be admitted that cakes and ale had never been championed with more gusto. But that ale was a strange compound. Thyagaraja's music, the plays of Aeschylus and Shakespeare, the Scepticism of Russell and the Mysticism of Wordsworth– such were the ingredients of which it was composed. It was a concoction, was that ale. (page 6)

ಆದರೆ ಒಮ್ಮೊಮ್ಮೆ ಮೂಲಕ್ಕಿಂತ ಇಂಗ್ಲೀಷ್ ಲೇಖನ ವಿಷಯಾಂತರವಾಗುವುದೂ ಇದೆ.

ಹಣ್ಣಿನ ಸೇವನೆಗೆ ಬೇಕಾದ ಈ ಪೂರ್ವಸಿದ್ಧತೆ ನಡೆಯುತ್ತಿರುವ ಅವರು ಯಾವುದೋ ಪ್ರಾಕೃತ ಪದದ ವಿಷಯವಾಗಿಯೋ ಗಾಥಾಸಪ್ತಶತಿಯ ಶ್ಲೋಕವೊಂದರ ವಿಷಯವಾಗಿಯೋ, ವ್ಯಾಖ್ಯಾನ ಮಾಡುತ್ತಿರುತ್ತಾರೆ. (ಪುಟ 101)

This process would be accompanied by the tracking down of a Kannada or Sanskrit word to its roots or the interpretation of a line from Kalidasa. (page 8)

ಆದರೆ ಹದಿನೆಂಟು ವರ್ಷದ ಹಿಂದಿನ ಅಭಿಪ್ರಾಯಕ್ಕೆ ಇಂದೂ ಮನ್ನಣೆ ಕೊಡಬೇಕಾದ ಅಗತ್ಯವೇನಿದೆ ? (ಪುಟ 108)

But is it consistency so great a virtue after all? (page 13)

ಮೂರ್ತಿರಾಯರು ತಮ್ಮ ಕನ್ನಡ ಬರವಣಿಗೆಗಳಲ್ಲಿ ಭಾರತೀಯ ಪುರಾಣಗಳಿಂದ ರೂಪಕಗಳನ್ನು ಧಾರಾಳವಾಗಿ ಬಳಸಿಕೊಂಡಿದ್ದಾರೆ. ಅವುಗಳ ಇಂಗ್ಲೀಷ್ ಅನುವಾದ ಸಾಧ್ಯವಲ್ಲದ ಕಡೆ ಅವುಗಳನ್ನು ಸಂಪೂರ್ಣವಾಗಿ ಕೈಬಿಟ್ಟಿದ್ದಾರೆ. ಆದರೆ ಸಾಧ್ಯವಿರುವಲ್ಲಿ

ಅವುಗಳನ್ನು ಇಂಗ್ಲೀಷ್‌ಗೆ ಅನುವಾದ ಮಾಡಿರುವುದೂ ಇದೆ. ಅಂತಹ ಒಂದು ಮಾದರಿ ಇಲ್ಲಿದೆ :

ಅವರು ಈ ಭೂಮಿಯನ್ನು ಎಂಟು ಮೂಲೆಗಳಲ್ಲಿ ಹೊತ್ತು ನಿಂತಿರುವ ಅಷ್ಟ ದಿಗ್ಗಜಗಳಂತೆ. ತಮ್ಮ ತಮ್ಮ ಸ್ಥಾನಗಳನ್ನು ಬಿಟ್ಟು ಅಲೆಯುವವರಲ್ಲ. (ಪುಟ 93)

They were like the favled elephants bearing up the corners of the world. each a fixture in its own place. (page 4)

ಮೂಲದ ಸೊಗಸು, ಭಾವ ತೀವ್ರತೆ, ಭಾವ ವ್ಯಂಜಕತೆಗಳನ್ನು ಇಂಗ್ಲೀಷ್ ಲೇಖಿನಿ ಸಮರ್ಥವಾಗಿ, ಸಮಗ್ರವಾಗಿ ಪ್ರತಿಬಿಂಬಿಸಲು ತನ್ನ ಶಬ್ದಗಳ ಪರಿಮಿತಿಯಿಂದ ಹೇಗೆ ಸೋತಿದೆ ಎಂಬುದನ್ನು ಈ ಕೆಳಗಿನ ತುಲನೆಯಿಂದ ಸಮರ್ಥಿಸಬಹುದು.

ಯಾವುದೋ ಒಂದು ದಿನ ಶುಭಲಗ್ನದಲ್ಲಿ ಕಾಮನ್ ರೂಮು ಪೊರೆ ಕಳೆದುಕೊಂಡ ಹಾವಿನಂತೆ ತನ್ನ ಹಳೆಯ ಹೊದಿಕೆಯನ್ನು ಕಿತ್ತೊಗೆದು 'ಆರೇಂಜ್ ಕ್ಲಬ್' ಆಗಿ ಪರಿವರ್ತಿತವಾಯಿತು. (ಪುಟ 98)

I do not remember when exactly the Common Room converted itself into the Orange Club. (page 6)

ಯೂನಿಯನ್ ಹೋಟೆಲ್‌ನವನು ಸರಬರಾಜು ಮಾಡುತ್ತಿದ್ದ ತಿಂಡಿಗಳಿಗಿಂತ ಕಿತ್ತಲೆಹಣ್ಣು ಋಷ್ಯಾಹಾರಕ್ಕೂ, ಊರ್ಧ್ವಲೋಕಕ್ಕೂ ಹತ್ತಿರವೆಂದು ಅವರಿಗೆ ತೋರಿರಬೇಕು. (ಪುಟ 98)

Apparently, he considered oranges nearer to heaven than the stuff supplied by the Union Restaurant. (Page 6)

ಮೂಲಕ್ಕಿಂತ ಭಿನ್ನವಾದ ಅನುವಾದ:-

ಮನುಷ್ಯ ಬದುಕುವುದು ಬ್ರೆಡ್ಡಿನಿಂದ ಮಾತ್ರವಲ್ಲ ಎಂದು ಯೇಸುಕ್ರಿಸ್ತ ಹೇಳಿದನಲ್ಲವೆ? ಇದು ಗಮನಿಸಬೇಕಾದ ಮಾತು. ಬ್ರೆಡ್ ಒಂದಾದರೆ ಸಾಲದು, ಬದುಕಬೇಕಾದರೆ, ಬೆಣ್ಣೆ, ಸಕ್ಕರೆಗಳೂ ಬೇಕು. ಇದನ್ನು ನೆನೆದುಕೊಂಡು ನಾವು ಮನುಷ್ಯ ಬದುಕುವುದು ಕಿತ್ತಲೆಹಣ್ಣಿನಿಂದ ಮಾತ್ರವಲ್ಲ, ಅದರ ಜೊತೆಗೆ "ಮಾಣಿಪಲಿ, ನಲ್ಲಿಣ್ಣೆ ಮೊಷಹಾಯಿಪುದಿ" ಇವೂ ಇರಬೇಕೆಂಬ ನಿರ್ಣಯಕ್ಕೆ ಬಂದೆವು. (ಪುಟ 99)

Man does not live by Oranges alone. he needs 'Idli' and coffee also.

"1940ನೆಯ ಇಸವಿ ಬಂತು" (ಪುಟ 107) ಎಂಬುದನ್ನು "Ninteen hundred and thirtynine came" (page 12) ಎಂದು ಅನುವಾದಿಸಿದ್ದಾರೆ. ಇಂತಹ ಕಡೆ ಇರುವ ಈ ಅವಧಿಯ ಘರ್ಷಣೆ ನಮ್ಮನ್ನು ದ್ವಂದ್ವದಲ್ಲಿ ಕೆಡವುತ್ತದೆ.

## (4) THE NAME OF THE BELOVED

"The Name of the Beloved" ಎಂಬುದು "ಹೆಂಡತಿಯ ಹೆಸರು" ಎಂಬ ಪ್ರಬಂಧದ ಇಂಗ್ಲೀಷ್ ಅನುವಾದ. ಒಂದು ಧಾರ್ಮಿಕ ಹಿನ್ನೆಲೆಯ ಸ್ವಾರಸ್ಯಕರವಾದ ಸಮಾರಂಭದಿಂದ ಆರಂಭಗೊಳ್ಳುವ ಈ ಪ್ರಬಂಧ ಮೂರ್ತಿರಾಯರ ಸಹಜ ಹಾಸ್ಯ

ಮನೋಧರ್ಮದ ಪ್ರತೀಕವಾಗಿದೆ. ಕನ್ನಡದಲ್ಲಿ ಎಂಟು ಪುಟಗಳ ಮಿತಿಯನ್ನು ಪಡೆದ ಈ ಪ್ರಬಂಧ ಇಂಗ್ಲೀಷ್‌ನಲ್ಲಿ ಫುಲ್‌ಸ್ಕೇಪ್ ಹಾಳೆಯಲ್ಲಿ ಏಳು ಪುಟಗಳಷ್ಟು ದೀರ್ಘವಾಗಿದೆ. ಈ ಕನ್ನಡ-ಇಂಗ್ಲೀಷ್ ಲೇಖನಗಳ ತೌಲನಿಕ ಅಧ್ಯಯನ ಈ ಕೆಳಕಂಡ ಕೆಲವು ಅಂಶಗಳನ್ನು ವ್ಯಕ್ತಪಡಿಸುತ್ತದೆ.

(1) ಕನ್ನಡದ ಕೆಲವು ವಾಕ್ಯಗಳನ್ನು ಇಂಗ್ಲೀಷ್ ಅನುವಾದದಲ್ಲಿ ಕೈಬಿಟ್ಟಿದ್ದಾರೆ. ಕೆಲವು ಮಾದರಿಗಳು ಹೀಗಿವೆ.

ಈ ವಿಷಯದಲ್ಲಿ ಯಾರಿಗಾದರೂ ಸಂದೇಹವಿದ್ದರೆ ಅದರ ಪರಿಹಾರಕ್ಕೆ ಲಗ್ನಪತ್ರಿಕೆಯ ಸಾಕ್ಷ್ಯವೇ ಇದೆ. (ಪುಟ 28)

ಅನೇಕ ವೇಳೆ ತಂದೆತಾಯಿಯರು ಇಡುವ ಹೆಸರುಗಳು ಉಪಯೋಗಕ್ಕೆ ಅರ್ಹವೂ ಅಲ್ಲ. (ಪುಟ 29)

ಬಂಗಾಳಿ ಕಥೆಗಳನ್ನೋದುವಾಗ, ಕಥೆಯ ಸ್ವಾರಸ್ಯ ಹೇಗಾದರೂ ಇರಲಿ......
(ಪುಟ 29,30)

ಅದು ಹುಟ್ಟು ಹೆಸರಿನ ರೂಪಾಂತರವಿರಬಹುದು, ಅದಕ್ಕಿಂತ ಕರ್ಕಶವಾಗಿ ಕಂಡರೂ ಕಾಣಬಹುದು. (ಪುಟ 30)

(2) ಕನ್ನಡದ ಕೆಲವು ಶಬ್ದಗಳ ಇಂಗ್ಲೀಷ್ ರೂಪಗಳಲ್ಲಿ ಅರ್ಥಸಾದೃಶ್ಯ-ಅರ್ಥಾಂತರ ಎರಡೂ ಇವೆ. (1)

ಧಾರೆಯಾದ ಮೇಲೆ (25) 'giving away' ceremony ಪ್ರಮೀಳೆ (25)–Amazons,ದೇವರಿಗೂ ಹಿರಿಯರಿಗೂ ನಮಸ್ಕಾರ ಮಾಡಿ ಬರುವ ಪದ್ಧತಿ (25)–To seek benediction of the diety (1) ನೀನು (27) – The Second personal pronoun (3)

(3) ಮೂರ್ತಿರಾಯರ ಈ ಪ್ರಬಂಧದ ಮೇಲೆ ಸಂಗೀತ, ಸಂಸ್ಕೃತ ಹಾಗೂ ಇಂಗ್ಲೀಷ್ ಸಾಹಿತ್ಯದ ಪ್ರಭಾವವಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು.

ಪ್ರೇಮರಹಿತಲುಕು ನಾಮರುಚಿದಲುಸುನಾ! ನಾಮಾಮೃತದ ರುಚಿ ಪ್ರಣಯಿಗಳಿಗೆ ಗೊತ್ತು, ಭಕ್ತರಿಗೇನು ಗೊತ್ತು (29)

" He that is without love, what can he know of the sweetness of the name!"–Thyagaraja was wise in his generation.

ಮೂರ್ತಿರಾಯರು ಅಲ್ಲಲ್ಲೆ ಸಂಸ್ಕೃತದ ಶ್ಲೋಕಭಾಗಗಳನ್ನು ಉಲ್ಲೇಖಿಸುವುದರೊಂದಿಗೆ, ಅಲ್ಲಲ್ಲಿ ಅವರು ಸಂಸ್ಕೃತದ ಪದಪುಂಜಗಳನ್ನೂ ಉಪಯೋಗಿಸುತ್ತಾರೆ.

ಇದಂಕೃಷ್ಣಂ ಕೃಷ್ಣಂ ನನುಶ್ವೇತಮಥಕಿಂ (28), ನಾಮಾವಳಿ (28), ಅಲ್ಲೋಲ ಕಲ್ಲೋಲ (29), ರಾಮನು ಸೀತೆಯನ್ನು ಪ್ರಿಯದರ್ಶಿನಿ, ವರವರ್ಣಿನಿ ಎಂದು ಮುಂತಾಗಿ ಕರೆದಿದ್ದಾನೆ (31).

ಮೂರ್ತಿರಾಯರು ತಾವು ಓದಿದ ಷೇಕ್ಸ್‌ಪಿಯರ್ ನಾಟಕಗಳಿಂದ ಆಯ್ದ ಭಾಗಗಳನ್ನು ಇಂಗ್ಲೀಷ್ ಲೇಖನದಲ್ಲಿ ತಂದಿದ್ದಾರೆ. ಒಂದು ಕನ್ನಡ ಪ್ರಬಂಧದಲ್ಲಿ ಕಾಣಬರುವುದಿಲ್ಲ. ಎರಡನೆಯದರ ಛಾಯೆ ಮಾತ್ರ ಕಂಡು ಬರುತ್ತದೆ. ಉಲ್ಲೇಖ ಹಾಗೂ ಮೂಲಗಳು ಹೀಗಿವೆ:

ಪೂರ್ವಕಾಲದ ಪ್ರೇಮಕಥೆಗಳಲ್ಲಿ ಬರುವ ನಾಯಕರು ಮರದ ತೊಗಟೆಯ ಮೇಲೆಲ್ಲಾ ತಮ್ಮ ಪ್ರೇಯಸಿಯರ ಹೆಸರು ಕೆತ್ತುತ್ತಿದ್ದರಂತೆ (29)

Orlando carved the name of Rosalind on every tree in the forest of Arden (4), As you like it, I, II.

ಕನ್ನಡಮ್ಮನಿಗೂ ನಮ್ಮ ಹೆಂಡತಿಯನ್ನು ಕಂಡರೆ ಈ ಬಗೆಯ ಮಾತ್ಸರ್ಯ ವಿರಬಹುದು. (ಪುಟ 32)

She can not help feelings, jealous, Mother Kannada is perhaps similarly possessed by the green eyed monster....

(page 7)

ಈ ವಾಕ್ಯದ ಮೂಲ ಹೀಗಿದೆ.

Iago : O, beware, my lord, of jealousy;

It is a green eyed monster.... Othello ( 3, 3, 169–70)

ಕೆಲವು ಇಂಗ್ಲೀಷ್ ವಾಕ್ಯಗಳು ಇಂಗ್ಲೀಷ್ ಲೇಖನದಲ್ಲಿ ಮಾತ್ರವೇ ಕಂಡು ಬಂದು, ಕನ್ನಡ ಪ್ರಬಂಧದಲ್ಲಿ ಕಂಡುಬರುವುದಿಲ್ಲ. ನಿದರ್ಶನಗಳು:

A day might come when that name becomes a symbol of nameless terror (2), But this is in the privacy of your room (12) He meant no offence (3).

ಮೂಲದೊಡನೆ ಕೆಲವು ಇಂಗ್ಲೀಷ್ ವಾಕ್ಯಗಳನ್ನು ಹೋಲಿಸಿದಾಗ ಎರಡರ ನಡುವಣ ಸಾದೃಶ್ಯ-ಅಂತರಗಳು ಸ್ಪಷ್ಟವಾಗುತ್ತವೆ.

"ನಮ್ಮಲ್ಲಿ ಮದುವೆಯ ದಿನ ಧಾರೆಯಾದ ಮೇಲೆ ವರನು ವಧುವಿನ ಕೈಹಿಡಿದು ದೇವರ ಮನೆಗೆ ಕರೆದುಕೊಂಡು ಹೋಗಿ ದೇವರಿಗೂ ಹಿರಿಯರಿಗೂ ನಮಸ್ಕಾರ ಮಾಡಿ ಬರುವ ಪದ್ಧತಿ. (ಪುಟ 25)

ಮೂಲ ಪ್ರಬಂಧ ಹೀಗೆ ಆರಂಭವಾದರೆ, ಇಂಗ್ಲೀಷ್ ಲೇಖನ ಹೀಗೆ ಆರಂಭವಾಗುತ್ತದೆ. ಈ ಪೀಠಿಕೆ ಮೂಲದಲ್ಲಿ ಕಂಡುಬರುವುದಿಲ್ಲ.

( In India, it has long been the custom for husband and wife not to refer to each other by name. The custom is now disappearing. It must also be remembered that in India most marriages are 'arranged' marriages; and that bride and groom are almost strangers at the time of the wedding.) (page 1)

"ಆದರೆ ಆ ಹೆಂಗಸರು ಸ್ವಜಾತಿಯ ವಾತ್ಸಲ್ಯದಿಂದ ಅವಳನ್ನು ಅಷ್ಟೊಂದು ಪೀಡಿಸುವುದಿಲ್ಲ. ಅವಳು ತಲೆ ತಗ್ಗಿಸಿಕೊಂಡು ಏನೋ ಗೊಣಗಿದರೂ ತೃಪ್ತರಾಗಿ ಅವಳ ಗೊಡವೆ ಬಿಟ್ಟು ತಮ್ಮ ಶಕ್ತಿಯನ್ನೆಲ್ಲಾ ನಿಮ್ಮ ಮೇಲೆಯೇ ಪ್ರಯೋಗಿಸುತ್ತಾರೆ. "ಹೆಂಡತಿಯ ಹೆಸರು ಹೇಳುವ ಧೈರ್ಯವಿದೆಯೇ ಈ ಗಂಡಿಗೆ?" ಎಂದು ಪರೀಕ್ಷೆ ಮಾಡಿ ನೋಡುವುದು ಮದುವೆಯ ಕಲಾಪದಲ್ಲಿ ಅವಶ್ಯವಾದ ಅಂಗವಾಗಿ ಹೋಗಿದೆ."

(ಪುಟ 25)

But clannish and loyal to their sex as they are, they let the girl off cheap and are satisfied with a barely audible mumble. And you, poor unprotected male, are left alone to bear the burnt of the attack. It has become an indispensable part of the ritual connected with marriage -- this testing whether the bridegroom has the courage to utter the name of the girl who has just become his. (page 1)

ಅಂತೂ ತಾಯ್ನುಡಿಯಲ್ಲಿ ಅವರನ್ನು ಸಂಬೋಧಿಸುವುದು ಕಷ್ಟವಾಗಿದೆ (32)

She denies us the privilege of addressing our wives in the tongue she gave us. (page 7)

ಈ ಕನ್ನಡ ವಾಕ್ಯದ ಭಾವಾಭಿವ್ಯಕ್ತಿಗೆ ಇಂಗ್ಲೀಷ್‌ನ ಇಷ್ಟು ದೀರ್ಘವಾದ ವಾಕ್ಯದ ಅಗತ್ಯ ಅನಿವಾರ್ಯವಾಗಿರಲಿಲ್ಲ.

## (5) DO IT YOURSELF – AND SEE

"ಕಾರ್ ರಿಪೇರಿ –ನೀನೇ ಮಾಡಿನೋಡು" ಎಂಬ ವಿನೋದಾತ್ಮಕ ಹಾಗೂ ಆತ್ಮಕಥನಾತ್ಮಕ ಪ್ರಬಂಧದ ಇಂಗ್ಲೀಷ್ ರೂಪದ ಶೀರ್ಷಿಕೆ ಅಸ್ಪಷ್ಟವೂ ಸಂದಿಗ್ಧವೂ ಆಗಿದೆ.

ಈ ಪ್ರಬಂಧದಲ್ಲಿ ಮೂಲದ ಕೆಲವು ವಾಕ್ಯಗಳನ್ನು ಅನುವಾದದಲ್ಲಿ ಕೈಬಿಟ್ಟಿದ್ದಾರೆ. ಅವು:

ರಿಪೇರಿ ಕೆಲಸ ನಿಮ್ಮನ್ನು ತಿಂದು ಬಿಡುತ್ತದೆ. (75)

ಆಳು ಮಾಡುವ ಕೆಲಸ ಹಾಳು. (75)

"ದೋಷೈಕದೃಕ್" ಎಂಬ ನಿಂದೆ ನನ್ನ ವಿಷಯದಲ್ಲಿ ಸಲ್ಲದು. ಆದರೂ ಈ ನೀನೇ ಮಾಡಿನೋಡು ಚಳುವಳಿಯನ್ನು ವಿಶ್ವಾಸದಿಂದ ಸ್ವಾಗತಿಸಲಾರೆ. ಚಳುವಳಿಯ ಉದ್ದೇಶ ನಾನು ಸ್ವಾವಲಂಬಿಯಾಗಬೇಕೆಂದಾಗಲಿ. ನನ್ನ ಕೈಚಳಕ ಹೆಚ್ಚಬೇಕೆಂದಾಗಲೀ, ನನ್ನ ಹಣ ಉಳಿಯಬೇಕೆಂದಾಗಲೀ ಇರಲಾರದು. (75)

ನೀವೇ ಮಾಡಿದ್ದರಿಂದ ನಿಮ್ಮ ಹಣವೇನೂ ಉಳಿಯುವುದಿಲ್ಲ. ಕಾರಿನ ಯಂತ್ರ ಮತ್ತಷ್ಟು ಕೆಟ್ಟು, ವರ್ಕ್‌ಶಾಪಿನವರ ಮತ್ತು ಗ್ಯಾರೇಜಿನವರ ಜೇಬಿಗೆ ಮತ್ತಷ್ಟು ಹಣ ಸೇರುತ್ತದೆ. ಈ ಕೂಗನ್ನೆಬ್ಬಿಸುವವರು ಅವರಿರಬೇಕು ಅಥವಾ ಅವರ ದಳ್ಳಾಳಿ ಗಳಿರಬೇಕು. (76)

ಇಲ್ಲದಿದ್ದರೆ ಅದರ ತಂಟೆಗೇ ಹೋಗಬಾರದು. ಕಾರ್ ಇಟ್ಟುಕೊಳ್ಳುವುದಕ್ಕೆ ಬದಲಾಗಿ ಕಾರ್ ಇರುವ ಸ್ನೇಹಿತನನ್ನು ಸಂಪಾದಿಸುವುದು ಬುದ್ಧಿವಂತಿಕೆಯ ಲಕ್ಷಣ. (77)

ಇಂಗ್ಲೀಷ್ ಲೇಖನದಲ್ಲೂ ಇಂತಹ ಕೆಲವು ಭಾಗಗಳನ್ನು ಗುರುತಿಸಬಹುದು.

It must be sponsored by the Mechanics Association. If we car owners start doing it ourselves, they drive a brisker trade and their hands dipoftener into our pockets (1). It is like self– medication which always means more money to the doctor. (2).

ಈ ಪ್ರಬಂಧದ ಮೂಲ ಹಾಗೂ ಇಂಗ್ಲೀಷ್ ಲೇಖನಗಳನ್ನು ತುಲನೆ ಮಾಡಿದಾಗ ಎರಡರ ಅಂತರ ಸಂಬಂಧಗಳನ್ನು ಗಮನಿಸಬಹುದು.

ಅದೂ ಈ ಯುದ್ಧಾನಂತರದ ಧಾರ್ಮಿಕ ಅವನತಿಯ ಕಾಲದಲ್ಲಿ ! (75) - and in this degenerate post-war era !.

ಯಂತ್ರಗಳನ್ನು ಉಪಯೋಗಿಸುವವರೆಲ್ಲರೂ ವರ್ಕ್‌ಶಾಪಿನವರ ಹಾಗೆ, ತುಂಬಲೆಂದು ದೇವರು ಸೃಷ್ಟಿಸಿರುವ ಬೇಟೆಯ ಮೃಗಗಳಂತೆ, ವರ್ಕ್‌ಶಾಪಿನವರು ಹುಲಿಗಳು, ನಾವು ಜಿಂಕೆಗಳು (76)

In this machine-age the machines are the tigers and we are their natural prey ! (2).

ಒಂದು ದಿನ ಅದನ್ನು ಮಂಡ್ಯಕ್ಕೆ ತೆಗೆದುಕೊಂಡುಹೋಗಬೇಕಾಯಿತು. ಆರೇಳು ಮೈಲಿ ಹೋಗುವವರೆಗೆ ಅದರ ನಡತೆಯನ್ನು ಎಷ್ಟು ಹೊಗಳಿದರೂ ಸಾಲದು (81)

One Sunday a friend suggested that we might spend at Nandi. It occured to me that instead of going by bus I might give the car a treat. It behaved exceedingly well till we covered about twenty miles.

ಇಲ್ಲಿ 'ಮಂಡ್ಯ' 'ಆರೇಳು' ಎಂಬ ಶಬ್ದಗಳನ್ನು ಇಂಗ್ಲೀಷ್‌ನಲ್ಲಿ 'Nandi' 'twenty miles' ಎಂದು ಬದಲಾಯಿಸುವ ಅಗತ್ಯವಿರಲಿಲ್ಲ.

ಯಾರಿಗೂ ಬೇಡವಾಗಿ ಬಣಗುತ್ತ ಬಿದ್ದಿದ್ದ ಆ ಯಂತ್ರಕ್ಕೆ ನೀರು ನೆರಳು ಕೊಟ್ಟು ಆದರಿಸಿದವನು ನಾನು. ತನ್ನನ್ನು ಉಪಯೋಗಿಸಿದ್ದೇ ಮಹಾಪ್ರಸಾದವೆಂದು ತಿಳಿಯಬೇಡವೆ, ಈ ಅನಾಥ ಪರದೇಶೀ ಕಾರಿಗೆ !. ನನ್ನ ಉಪ್ಪು ತಿಂದು ನನ್ನ ಮೇಲೆ ತಿರುಗಿ ಬಿದ್ದ ಆ ಯಂತ್ರ......(81).

I had given it shelter and a sense of belonging: and this is how it repays my kindness – ingratitude, sharper than a serpant's tooth ! (page 5)

ಈ ಭಾಗದ ಕೊನೆಯ ವಾಕ್ಯ ಷೇಕ್ಸ್‌ಪಿಯರ್ ಕವಿಯ 'King Lear' ನಾಟಕದಿಂದ ಆಯ್ದುಕೊಂಡಿದ್ದಾರೆ. ಆ ಭಾಗ ಹೀಗಿದೆ. ಇಂತಹ ಘಟ್ಟಗಳಲ್ಲಿ ಮೂರ್ತಿರಾಯರ ಮೇಲೆ ಉಂಟಾದ ಇಂಗ್ಲೀಷ್ ಸಾಹಿತ್ಯದ ಪ್ರಭಾವ ಗಮನಾರ್ಹ.

How sharper than a serpant's tooth it is
To have a thankless child. Away, Away ! (1. 4. 288–89)

(6) BANGALORE :

ಮೂರ್ತಿರಾಯರು ಕನ್ನಡದಲ್ಲಿ ಬರೆದಿರುವ "ಬೆಂಗಳೂರು" ಹಾಗೂ ಇಂಗ್ಲೀಷ್‌ನಲ್ಲಿ ಬರೆದಿರುವ "BANGALORE" ಲೇಖನಗಳ ಪರಿಕಲ್ಪನೆ, ವಿಷಯ ವಸ್ತು, ಅಭಿಪ್ರಾಯ, ಚಿತ್ರಣಗಳೆಲ್ಲವೂ, ಒಂದೇ ಆದರೂ ಎರಡೂ ಲೇಖನಗಳಿಗೆ ಅಗಾಧ ವ್ಯತ್ಯಾಸಗಳಿವೆ. ಅವರ ಈ ಕನ್ನಡ-ಇಂಗ್ಲೀಷ್ ಲೇಖನಗಳಲ್ಲಿ ಇತರ ಲೇಖನಗಳಿಗಿಂತ ಈ ಲೇಖನದಲ್ಲಿರುವ ಅಂತರ ಅಧಿಕವಾಗಿದೆ. ಕನ್ನಡ ಲೇಖನದಲ್ಲಿ

ಉಪಯೋಗಿಸುವ ಸಂಸ್ಕೃತ ಶ್ಲೋಕ ಭಾಗಗಳೂ, ಪೌರಾಣಿಕ ಉಪಮೆಗಳೂ ಇಂಗ್ಲೀಷ್ ಲೇಖನದಲ್ಲಿ ಕಂಡುಬರುವುದಿಲ್ಲ. ಈ ಎರಡೂ ಲೇಖನಗಳ ಆರಂಭದ ಪೀಠಿಕೆಯೇ ಒಂದರಿಂದೊಂದು ಭಿನ್ನವಾಗಿ ದೂರ ಸರಿದು ನಿಲ್ಲುತ್ತವೆ. ಕೆಲವೆಡೆ ಕನ್ನಡ ಪ್ರಬಂಧದಲ್ಲಿ ಬಳಸಿದ ವಾಕ್ಯ ರಚನಾ ಕ್ರಮ, ಇಂಗ್ಲೀಷ್ ವಾಕ್ಯರಚನೆ ಬೇರೆ ಕ್ರಮದಲ್ಲಿವೆ. ವಾಕ್ಯಗಳು ಕನ್ನಡಕ್ಕಿಂತ ಇಂಗ್ಲೀಷ್‌ನಲ್ಲೇ ದೀರ್ಘವಾಗಿದೆ. ಕೆಲವೆಡೆ ಇಂಗ್ಲೀಷ್ ವಾಕ್ಯಗಳು ಸಂಕ್ಷಿಪ್ತವಾಗಿದ್ದು, ಕನ್ನಡ ವಾಕ್ಯಗಳೇ ದೀರ್ಘವಾಗಿವೆ. ಕನ್ನಡ ಪ್ರಬಂಧದಲ್ಲಿ ಬಳಸಲಾದ ವಾಕ್ಯಗಳನ್ನು ಇಂಗ್ಲೀಷ್‌ನಲ್ಲಿ ಕೈಬಿಡಲಾಗಿದೆ. ಕೆಲವೆಡೆ ಹೊಸ ಇಂಗ್ಲೀಷ್ ವಾಕ್ಯಗಳು ಸೇರ್ಪಡೆಯಾಗಿವೆ. ಈ ಗುರುತಿಸಿದ ಅಂತರಗಳನ್ನು ಸೋದಾಹರಣವಾಗಿ ಸ್ಥಾಪಿಸಬಹುದು:



ಪೀಠಿಕೆ: ನಾನು ಚಿಕ್ಕಂದಿನಿಂದಲೂ ಬೆಂಗಳೂರಿನ ಕೀರ್ತಿಯನ್ನು ಕೇಳುತ್ತಾ ಬಂದಿದ್ದೇನೆ

ನನಗೇನೋ ಮೊದಲಿನಿಂದಲೂ ಮೈಸೂರಿನ ಮೇಲೆ ವ್ಯಾಮೋಹ ಹೆಚ್ಚು (ಸಮಗ್ರ ಲಲಿತ ಪ್ರಬಂಧಗಳು – ಪುಟ 249)

Bangalore can not boast of being an ancient city with a storied past. We have to tower or mausoleum with the majesty.

ಇಂಗ್ಲೀಷ್ ಲೇಖನದಲ್ಲಿ ಕೈಬಿಡಲಾದ ಕನ್ನಡ ವಾಕ್ಯಗಳು :

ರಾಜಾಶ್ರಯದಲ್ಲಿ ಕಲೆ ಸಂಸ್ಕೃತಗಳೇನೋ ಬೆಳೆಯಬಹುದು, ಆದರೆ ದಾಸಭಾವ ಅವಕ್ಕಿಂತಲೂ ಹುಲುಸಾಗಿ ಬೆಳೆಯುತ್ತದೆ. ದಾಸ್ಯದ ಲೇಪನವಿಲ್ಲದೆಯೇ ಕಲೆ ಸಂಸ್ಕೃತಿಗಳನ್ನು ಬೆಳೆಸಿಕೊಂಡೆವೆಂಬುದು ಬೆಂಗಳೂರಿನವರ ಹೆಮ್ಮೆ. (ಪುಟ 250)

ನಾನು ಈಗ ಬೆಂಗಳೂರಿನವರಂತೆ ಮಾತಾಡುತ್ತಿದ್ದೇನೆ. (ಪುಟ 251)

ಈ ಪರಿಸ್ಥಿತಿಯನ್ನು ನೋಡಿ ನನಗೆ ಅನ್ನಿಸುತ್ತಿದೆ, "ನಮ್ಮದುರ್ಗುಣ ಹೆಮ್ಮೆಯಲ್ಲ, ಅದು ಹೆಮ್ಮೆಯೆಂದು ನಾವು ಖಂಡಿತ ಒಪ್ಪುವುದಿಲ್ಲ–ನಮ್ಮ ದುರ್ಗುಣವೆಂದರೆ ಔದಾರ್ಯ, ಅತಿಥಿ ಸತ್ಕಾರದ ಮನೋಭಾವ"ಎಂದು. (ಪುಟ 251)

ಕರ್ಮದ ಫಲವನ್ನು ಅನುಭವಿಸಿ, ಆ ಅನುಭವವನ್ನು ಪರಿಶೀಲಿಸುವಷ್ಟು ವಿರಾಮವು ಇರಬೇಕು. ಅಂಥ ಪರಿಶೀಲನೆಯೂ ಕರ್ಮವೇ. ವಿರಾಮವಿಲ್ಲದಿದ್ದರೆ ನಮ್ಮ ಕರ್ಮಶಕ್ತಿ ಕುಂದುತ್ತದೆ, ನಮ್ಮ ಮಾನವತೆ ವಿಕಾಸಗೊಳ್ಳಲು ಅವಕಾಶವಿರುವುದಿಲ್ಲ. (ಪುಟ 259)

ಇಂಗ್ಲಿಷ್ ಲೇಖನದಲ್ಲಿ ಇರುವ ಹೊಸ ವಾಕ್ಯಗಳು :

Bangalore grew up as the natural and inevitable expression of the spirit of the common people. We fought shy of the Durbar dress but seized on the laced Turban as the most artistic head–dress yet invented. I think it was Bangalore rather than Mysore that perfected the exquisite lines and curves of the "Mysore Turban". (page 1–2)

Chickpet may have its fascination in some moods (3). But they retain their original charm in large measures (14) – Where the Cabots

spoke only to the Lowells and the Lowells spoke only to God (4). These are depressing thoughts (6)

ಇಂಗ್ಲೀಷ್ ಮತ್ತು ಕನ್ನಡ ಪ್ರಬಂಧಗಳ ವಸ್ತು ಒಂದೇ ಆದರೂ ವಾಕ್ಯ ರಚನಾಕ್ರಮದಲ್ಲಿ ಇರುವ ವ್ಯತ್ಯಾಸ ಗಮನಾರ್ಹ.

ನಾವೇನು ಉಪವಾಸವಿದ್ದು ಮೊಣಕಾಲೂರಿ ಕೃತಜ್ಞತೆ ಸಮರ್ಪಿಸಬೇಕಾಗಿತ್ತೆ? ಇದೇನು ಇವರ ಹೆಮ್ಮೆ. ಅತಿಥಿಗಳನ್ನು ಲಘುವಾಗಿ ಕಾಣುತ್ತಾರಲ್ಲ! ಎನ್ನಬೇಡಿ, ಅವರಿಗೆ ನಮ್ಮ ಸ್ವಾಗತವಿದೆ. ಬೆಂಗಳೂರಿನ ಹವ ಅವರ ಮೈಗೆ ಒಳ್ಳೆಯದು, ನಮ್ಮ ಕೃಪಾಶ್ರಯದಲ್ಲಿ ಬೆಳೆದು ಅಭಿವೃದ್ಧಿಗೆ ಬಂದರೆ ನಮಗೆ ಸಂತೋಷವಲ್ಲವೆ?

We do not feel called upon to go down on our knees and thank God fastening. But we are genuinely glad they came to us – it is good for them and we should like them prosper. (2)

ಚಿಕ್ಕಪೇಟೆಯ ಸುತ್ತಮುತ್ತಿನ ರಾತ್ರಿಜೀವನ 'Night–life' ಹೊಗಳು ವಂಥಾದ್ದೇನೂ ಅಲ್ಲವೆಂದು ಕೆಲವರು ಶುಕಮುನಿಗಳು ಗೊಣಗುತ್ತಿದ್ದುದುಂಟು (253)

The uncoquid sometimes shook their heads and talked of the night life of this area (3).

ಕೆಲವು ಕಡೆ ಕನ್ನಡ–ಇಂಗ್ಲೀಷ್ ಶೈಲಿಗಳೆರಡೂ ತಮ್ಮ ರೂಪಕಗಳಿಂದ ನಮ್ಮನ್ನು ಸೆರೆ ಹಿಡಿಯುತ್ತವೆ:

ಆದರೆ ಗುಡ್ಡದ ಇಳಿಜಾರನ್ನು ಮುಚ್ಚಿದ ಹಸುರು ವಸನವನ್ನು ಈಗಿನ ಧಾರ್ತರಾಷ್ಟ್ರರು ಸೆಳೆದು ಹಾಕಿದ್ದಾರೆ (258)

but the slopes of the hill have lost their garments of green (6)

ಕೆಲವೆಡೆ ಕನ್ನಡ –ಇಂಗ್ಲೀಷ್ ವಾಕ್ಯಗಳು ಸಮವಾಗಿವೆ:

ಬೆಂಗಳೂರಿನಲ್ಲಿ ದೊರಕುತ್ತಿದ್ದ ಆಶ್ರಯ ಜನಸಾಮಾನ್ಯದ್ದು (252)

But in Bangalore their patrons were the people (3)

ಚಕ್ರಭೀಮನ ಕೋಟೆಯ ದಾರಿಗಳಂತೆ ಸುತ್ತಿ ಸುತ್ತಿ ಒಂದು ಮತ್ತೊಂದರಲ್ಲಿ ಅದೃಶ್ಯವಾಗುವ ಅಲ್ಲಿಯ ಓಣಿಗಳು ಮಾನವ ಹೃದಯದಲ್ಲಿರುವ ದಿಗ್ಭ್ರಮೆ ಹಿಡಿಸುವಂತಹ ವೈವಿಧ್ಯ ವಿರೋಧಾಭಾಸಗಳ ಸಂಕೇತ (253)

The bewildering mazes of this area were symbolic of the contradictions and the mysterious by ways and alleys of the human spirit.

(3)

ಅನುವಾದವಾಗಿಯೂ, ಹಲವು ಸಂಗತಿಗಳಲ್ಲಿ ಅನುವಾದ–ಮೂಲ ಪರಸ್ಪರ ತಳೆದಿರುವ ಈ ಎರಡು ಲೇಖನಗಳ ಅಧ್ಯಯನದಿಂದ ಭಾಷಾಂತರದ ಪರಿಮಿತಿಗಳು ವ್ಯಕ್ತವಾಗುತ್ತದೆ. ಮೂರ್ತಿರಾಯರು ಇಂಗ್ಲೀಷ್‌ನಲ್ಲಿ ಬರೆಯುವಾಗ ಆ ಭಾಷೆಯ ಜಾಯಮಾನಕ್ಕೆ ಒಪ್ಪದ ಭಾಷೆಯನ್ನು ಉಪಯೋಗಿಸದಿರುವುದು ಅವರ ಭಾಷಾ ಜ್ಞಾನಕ್ಕೆ ಒಂದು ನಿದರ್ಶನ.

## (7) A NOTE ON POETIC IMAGERY IN MEGHADUTA

ಈ ಇಂಗ್ಲೀಷ್ "ಪೂರ್ವಸೂರಿಗಳೊಡನೆ" ಎಂಬ ವಿಮರ್ಶಾತ್ಮಕ ಕೃತಿಯ ಕೊನೆಯ ಲೇಖನದ ಇಂಗ್ಲೀಷ್ ಭಾಷಾಂತರ -21 ಪುಟಗಳ ವ್ಯಾಪ್ತಿಯ ಈ ಮೂಲ ಲೇಖನ ಫುಲ್‌ಸ್ಕೇಪ್ ಪುಟಗಳಲ್ಲಿ ಎಂಟೂವರೆ ಪುಟಗಳ ವ್ಯಾಪ್ತಿಯನ್ನು ಪಡೆದಿದೆ. ಹಿಂದೆ ಹೇಳಿದಂತೆ ಈ ಇಂಗ್ಲೀಷ್ ಲೇಖನ ಹಲವು ದೃಷ್ಟಿಯಲ್ಲಿ ಸ್ವತಂತ್ರ ಲೇಖನದ ಮಾದರಿಯಲ್ಲೇ ಇದೆ. ಕೆಲವು ಕಡೆ ಮೂಲದ ಶಬ್ದಕ್ಕೆ ಅನುವಾದವಿದೆ. ಕೆಲವೆಡೆ ಭಾವಾನುವಾದವಿದೆ. ಕೆಲವು ಸಂದರ್ಭದಲ್ಲಿ ಸಂಗ್ರಹಾನುವಾದವೂ ಇದೆ. ಮೂಲದ ಹಲವು ವಿವರಣೆ-ವ್ಯಾಖ್ಯಾನಗಳೂ ಇಂಗ್ಲೀಷ್ ಲೇಖನದಲ್ಲಿ ಕಂಡುಬಂದಿಲ್ಲ. ಆದರೆ ಇಂಗ್ಲೀಷ್ ಲೇಖನದ ಕೊನೆಯ ಒಂದು ವಿವರಣಾತ್ಮಕ ವಿವರಣೆ ಕಂಡುಬರುವುದಿಲ್ಲ. ಮೂರ್ತಿರಾಯರ ಸ್ವತಂತ್ರ ಚಿಂತನೆಗೆ ಇದೊಂದು ನಿದರ್ಶನ.

"ಮೇಘದೂತದಲ್ಲಿ ಕಾವ್ಯ ಪ್ರತಿಮೆ" ಎಂಬ ಮೂಲ ಲೇಖನದಲ್ಲಿ ನಾಲ್ಕು ವಿಭಾಗಗಳಿವೆ. ಇಂಗ್ಲೀಷ್ ಲೇಖನದಲ್ಲಿಯೂ ನಾಲ್ಕು ವಿಭಾಗಗಳಿವೆ. ಮೂಲದಲ್ಲಿ "ಕಾವ್ಯ ಪ್ರತಿಮೆಯ ಸ್ವರೂಪ" ಎಂಬ ಶೀರ್ಷಿಕೆಯಡಿ "ಕಾವ್ಯ ಪ್ರತಿಮೆ" ಎಂದರೇನು ಎಂದು ಸೋದಾಹರಣವಾಗಿ ವಿಶ್ಲೇಷಿಸುತ್ತಾರೆ. ಏಳು ಪುಟಗಳಲ್ಲಿ ಈ ಕುರಿತು ಅರ್ಥ ವ್ಯಾಖ್ಯಾನ ಮಾಡುತ್ತಾರೆ. ಇದಕ್ಕಾಗಿ ಅವರು ಗುಲಾಬಿ, ಮೇಜು, ಹಕ್ಕಿ, ಕುರಿ-ಮುಂತಾದ ಸಾಮಾನ್ಯ ಶಬ್ದಗಳನ್ನೇ ಆರಿಸಿಕೊಂಡಿದ್ದಾರೆ. ಶಾ. ಬಾಲೂರಾಯರ 'ಸೂರ್ಯ ಇವನೊಬ್ಬನೇ' ಎಂಬ ಪುಸ್ತಕದಿಂದ ಮೂರು ಪದ್ಯಗಳನ್ನು ಆಯ್ದುಕೊಂಡಿದ್ದಾರೆ. ಇಂಗ್ಲೀಷ್ ಲೇಖನದಲ್ಲಿ INTRODUCTORY ಎಂಬ ಶೀರ್ಷಿಕೆಯಡಿ 'mode' ಎಂಬ ಒಂದೇ ಶಬ್ದದಿಂದ 'ಪ್ರತಿಮೆ' ಶಬ್ದದ ವಿಶ್ಲೇಷಣೆ ಎರಡು ಪುಟಗಳಲ್ಲಿ ನೀಡಿದ್ದಾರೆ. ಕನ್ನಡದಲ್ಲಿ ನೀಡಿದ ವಿಶ್ಲೇಷಣೆ ದೀರ್ಘವಾಗಿರುವ ಇಂಗ್ಲೀಷ್ ರೂಪ ಸಂಕ್ಷಿಪ್ತವಾಗಿದೆ.

'ಗುಲಾಬಿ' ಎಂದರೆ ಒಂದು ಬಗೆಯ ಪತ್ರಗಳುಳ್ಳ ಪುಷ್ಪ ವಿಶೇಷ. ಇದು ನಮ್ಮ ಮನಸ್ಸಿಗೆ ಥಟ್ಟನೆ ಹೊಳೆಯುವ, ಗುಲಾಬಿ ಜಾತಿಗೆ ಸೇರಿದ ಎಲ್ಲ ಹೂವುಗಳಿಗೂ ಅನ್ವಯಿಸುವ, ಸಾಮಾನ್ಯ ಕಲ್ಪನೆ. ವಾಸ್ತವವಾಗಿ ನಾವು ಕಣ್ಣು ಮೂಗು ಇತ್ಯಾದಿ ಇಂದ್ರಿಯಗಳಿಂದ ಗ್ರಹಿಸುವ ಗುಲಾಬಿಯಲ್ಲಿ ಮೇಲೆ ಹೇಳಿದ ಕಲ್ಪನೆಯಲ್ಲದೆ ಇನ್ನೂ ಎಷ್ಟೋ ಗುಣಗಳಿರುತ್ತದೆ. ಅದರ ಬಣ್ಣ ಬಿಳಿಯದಾಗಬಹುದು, ಅಚ್ಚಗೆಂಪಾಗಬಹುದು, ಹಳದಿಯಾಗಬಹುದು, ಅದರಲ್ಲಿ ವಾಸನೆ ಇರಬಹುದು, ಎರಡು ಸುತ್ತು ಪತ್ರಗಳಿರಬಹುದು, ನಾಲ್ಕೋ ಐದೋ ಸುತ್ತು ಕೂಡ ಇರಬಹುದು. ನಮ್ಮ ಸಾಮಾನ್ಯ ಕಲ್ಪನೆಯಲ್ಲಿ ಇವುಗಳಿಗೆ ಸ್ಥಾನವಿಲ್ಲ. (ಪುಟ 113-3)

The word 'rose' connotes only as much of colour and fragrance as helps us to recognise the flower, and no more. (1)

ಮೂಲ ಹಾಗೂ ಅನುವಾದಗಳ ಭಾವ ಪುಷ್ಟಿಯ ಸಾದೃಶ್ಯಕ್ಕೆ ಒಂದು ನಿದರ್ಶನ:

ಆ ವೇಳೆಗೆ ಅವನು ಮೇಲೆ ಹೇಳಿದ ಜಾತಿ ಸಾಮಾನ್ಯ ಕಲ್ಪನೆಗಳನ್ನು ತಳ್ಳಿ ಹಾಕಿದ್ದಾನೆ. ಆದರೆ ತನ್ನದೇ ಆದ ಭಾವಪ್ರಚೋದಿತ ಕಲ್ಪನೆಗಳನ್ನು ಸೃಷ್ಟಿಸಿ ಅವುಗಳಲ್ಲಿ ಪಟ್ಟಭದ್ರವಾಗಿ ನಿಲ್ಲುವ ಸ್ಥಿತಿಯನ್ನು ತಲುಪಿಲ್ಲ. ಪ್ರತಿಮೆಗಳು ಅವನ ಮನಸ್ಸಿನ ಮೇಲು ಪದರಕ್ಕೆ ಚಿಮ್ಮಿ ಬರತೊಡಗಿವೆ. ಅವುಗಳಲ್ಲಿ ಕೆಲವು-ತನ್ನ ಕವನ ಯಾವ

ಪೂರ್ಣ ರೂಪದ ಕಡೆಗೆ ಸಾಗುತ್ತಿದೆಯೋ ಅದಕ್ಕೆ ಪುಷ್ಟಿ ಕೊಡುವ ಕೆಲವನ್ನು ಮಾತ್ರ ಅವನು ಆಯ್ದುಕೊಳ್ಳುತ್ತಾನೆ. ಇತರ ಪ್ರತಿಮೆಗಳು ಕೇವಲ ಅಲಂಕಾರಿಕವಾಗಬಹುದು. ಅಪ್ರಸಕ್ತ ಎನ್ನಿಸಬಹುದು. ಕವಿಯ ಪ್ರತಿಭೆ ಉಜ್ವಲವಾಗದಿದ್ದ ಸಮಯದಲ್ಲಿ ಇಂಥವು ಕಾವ್ಯದೊಳಕ್ಕೆ ನುಸಿದು ಬರುವುದು ಸಾಧ್ಯ. ಹಾಗೆ ಬಂದರೆ ಹದ ಕೆಡಬಹುದು.

(118)

He has just discarded the readymade patterns of the world and is yet to pass on to the state in which he can create patterns of his own. Among the images, many are called but few – the few which subserve the total pattern – are chosen The others may be irrelevant, or merely decorative. It is only when the poet's imagination is not working at white heat that such images are included, if included they weaken the final pattern. (2)

ಕನ್ನಡದಲ್ಲಿ ಹೇಳಿದ ಕೆಲವು ಅಂಶಗಳನ್ನು ಇಂಗ್ಲಿಷ್ ಲೇಖನದಲ್ಲಿ ಕೈಬಿಟ್ಟು, ಹೇಳಿರುವುದನ್ನು ಗಮನಿಸಬಹುದು.

ನಾಲ್ಕನೆಯ ಜೋಡಿ ಸ್ವಲ್ಪ ವಿಚಿತ್ರವಾದದ್ದು. ನೀರನ್ನು ಒಳಗೊಂಡ ಮೇಘಕ್ಕೂ ಮಣಿಮಯವಾದ ನೆಲಕ್ಕೂ ಸಾಮ್ಯವನ್ನು ಹೇಳುವುದು ಕಷ್ಟ. ಹೇಳಿದರೂ ಅದು ನಮ್ಮ ಅನುಭವಕ್ಕೆ ಬಂದ ಸಾಮ್ಯವಲ್ಲ. ಕವಿ ಸಮಯದಿಂದಲೋ ರೂಪಕ ಪ್ರಪಂಚದಿಂದಲೋ ಪಾಡುಪಟ್ಟು ಹೊತ್ತು ತಂದ ಸಾಮ್ಯವಾಗುತ್ತದೆ ಅಷ್ಟೆ. (121)

The images in the fourth pair are not merely quaint, they are obscure and it is difficult to see the point of the comparison (3)

ಇಂಗ್ಲೀಷ್ ಅವತರಣಿಕೆಯು ಬಂಧ ಇದಕ್ಕಿಂತಲೂ ಬಿಗುವಾಗಿಯೂ, ಸಂಕ್ಷಿಪ್ತವಾಗಿಯೂ ಇದೆ.

ಇವೆಲ್ಲ ಹೋಲಿಕೆಗಳ ಮೇಲೂ ಶತಮಾನಗಳ ಕಾಲದಿಂದ ಕವಿಗಳ ಮತ್ತು ರಸಿಕರ ಒಪ್ಪಿಗೆಯ, ಅಚ್ಚ! ವಹವ್ವಾ!ಗಳ ಮುದ್ರೆ ಬಿದ್ದಿದೆ. ಸಂಸ್ಕೃತದಲ್ಲಿ ಶೃಂಗಾರ ಕಾವ್ಯದ ಹೆದ್ದಾರಿಯನ್ನು ನಿರ್ಮಿಸಿರುವುದು ಇಂಥ ಚಿತ್ರಗಳಿಂದಲೇ (122)

All these images are 'accepted ' and well-works to the readers of Sanskrit poetry – the kind of images with which the highway of the poetry is paved. (4).

ಕೆಲವೆಡೆ ಕನ್ನಡ ಲೇಖನದ ವಾಕ್ಯಗಳು ಇಂಗ್ಲೀಷ್‌ನಲ್ಲಿ ಹಿಂದು ಮುಂದಾಗಿವೆ, ಸಂಕ್ಷಿಪ್ತವಾಗಿವೆ.

ಇಲ್ಲಿರುವ ಚಿತ್ರಗಳು ಒಂದಾನೊಂದು ಕಾಲದಲ್ಲಿ ಹೊಸಕಳೆಯಿಂದ ಮೆರೆದಿದ್ದಿರಬೇಕು. ಈಗ ಬಳಕೆಯಿಂದ ಮಾಸಲಾಗಿವೆ. ಕಾಳಿದಾಸ ಇಲ್ಲಿ ಯಾರ ಟಂಕಸಾಲೆಯಲ್ಲೋ ಮುದ್ರಿತವಾದ (ಸ್ವಲ್ಪ ಸವೆದೂ ಇರುವ !) ನಾಣ್ಯವನ್ನು ಬಳಸಿ ಅಷ್ಟರಲ್ಲೇ ತೃಪ್ತನಾಗಿದ್ದಾನೆ. ತಾನೇ ನಾಣ್ಯವನ್ನು ಎರಕ ಹೊಯ್ದು ರೂಪಿಸಿಲ್ಲ.

(123)

But all the same one misses fine poetry here mainly because one suspects that Kalidasa is content to accept current coin without minting his own (5)

ಮೂರನೆಯ ಅಧ್ಯಾಯದ ಪೀಠಿಕೆ ಹಾಗೂ ಅನಂತರದ ವಿವರಣೆ, ಇಲ್ಲಿ ಪರಸ್ಪರ ಭಿನ್ನತೆಗಳನ್ನು ಗುರುತಿಸಬಹುದು.

ಈಗ ಇಲ್ಲಿ ಪೊಳ್ಳಾದದ್ದೇನೂ ಇಲ್ಲ. ಇದು ಪ್ರಾಮಾಣಿಕವಾದ, ಕವಿಯ ಸ್ವಂತ ಪ್ರತಿಭೆಯಿಂದಲೇ ಹೊರಬಂದ ಕವನ ಎಂದು ಹೊಗಳಬಹುದಾದ ಶ್ಲೋಕವೊಂದನ್ನು ನೋಡೋಣ. (124)

In the stanza we shall now consider we touch true poetry without any false note (5)

ಒಮ್ಮೊಮ್ಮೆ ಕನ್ನಡದ ವಾಕ್ಯಕ್ಕೂ ಇಂಗ್ಲೀಷ್ ವಾಕ್ಯಕ್ಕೂ ಇರುವ ಸಮಗ್ರ ಅಂತರ ಗಮನಾರ್ಹ.

ಜಿಂಕೆಯೂ ಅವಳೂ ಇದ್ದ ಕಾಡಿನ (ಆಶ್ರಮದ) ಆವರಣವನ್ನು ನಾವು ಮರೆಯುವಂತಿಲ್ಲ. (131)

It is impossible to think of Sakuntala without the woodland in which she grew up (8)

ಇಂಗ್ಲೀಷ್‌ನಲ್ಲಿ ಕೆಲವು ವಾಕ್ಯಗಳು ಮೂಲದಲ್ಲಿ ಕಂಡುಬರುವುದಿಲ್ಲ.

This final complex image does not, as has been indicated above, come like Athene from the Head of Zews automatically arranged into a pattern (2)...the stage which Kents called Negative Capability, in which there is no irritable reaching after fact reason (2).

ಮೂಲದ ಲೇಖನಕ್ಕಿಂತ ಸುಮಾರು ಮುಕ್ಕಾಲು ಪುಟದಷ್ಟು ದೀರ್ಘವಾದ ಹೆಚ್ಚುವರಿ ಲೇಖನವೊಂದು ಇಂಗ್ಲೀಷ್ ಲೇಖನದಲ್ಲಿದೆ. "ಈ ಕಾರಣಕ್ಕಾಗಿಯೇ ನಾವು" ಕವಿಯೂ ಒಬ್ಬ ಸೃಷ್ಟಿಕರ್ತ ಎನ್ನುವುದು. ಇಂಗ್ಲೀಷ್‌ನಲ್ಲಿ ಅವನನ್ನು 'Maker' (ನಿರ್ಮಾತೃ) ಎಂದೂ ಕರೆಯುವುದುಂಟು. (ಪುಟ 114) ಎಂಬ ಮಾತು ಹೀಗಿದೆ.

They have brooded over the shows of life and of the mind and created order from it is Brahma Javu is one of the names for him – created the world. (9)

ಹೋಮರ್ ಹಾಗೂ ಈಸ್ಕಿಲಸ್ ಹಾಗೂ ಪ್ರಾಚೀನ ಗ್ರೀಕರ ಪುರಾಣ ಹಾಗೂ ಪ್ರತಿಮೆಗಳು ಯೂರೋಪಿಯನ್ ಕಾವ್ಯಗಳ ಮೇಲೆ ಬೀರಿದ ಪ್ರಭಾವವನ್ನು ಇಲ್ಲಿ ಉಲ್ಲೇಖಿಸುತ್ತಾರೆ. ಆದರೂ ನಮ್ಮ ಪುರಾಣಗಳು ಪ್ರಪಂಚದಲ್ಲೇ ಶ್ರೀಮಂತವೆಂದು ಅವರು ಹೇಳುತ್ತಾರೆ. ಆದ್ದರಿಂದ ಇಂಗ್ಲೀಷ್ ಲೇಖನಗಳು ಮೂರ್ತಿರಾಯರ ಅನುವಾದಗಳೆನಿಸಿದರೂ ಹಲವು ಘಟ್ಟಗಳಲ್ಲಿ ಮೂಲಕ್ಕಿಂತ ಭಿನ್ನವಾಗಿ ಸ್ವತಂತ್ರ ಚಿಂತನೆಯಿಂದ ಕೂಡಿದೆ ಎಂದು ಹೇಳಬಹುದು. ಮೂರ್ತಿರಾಯರ ದೃಷ್ಟಿ-ಚಿಂತನೆಗಳಲ್ಲಿ ಆದ ಬೆಳವಣಿಗೆಗೂ ಇದು ಸಾಕ್ಷಿ. ಕನ್ನಡ ಲೇಖನ ಕನ್ನಡ ಓದುಗರಿಗಾಗಿ ಹಾಗೂ

ಇಂಗ್ಲೀಷ್ ಲೇಖನ ಇಂಗ್ಲೀಷ್ ಓದುಗರಿಗಾಗಿ ಬರೆದಿರುವ ಕಾರಣ ಮೂರ್ತಿರಾಯರು ತಮ್ಮ ಭಾಷಾ ಪ್ರಯೋಗದಲ್ಲಿ ಔಚಿತ್ಯ ಜ್ಞಾನವನ್ನು ಸಮಂಜಸವಾಗಿ ತೋರಿದ್ದಾರೆ.

## 9.3. ಸ್ವತಂತ್ರ ಲೇಖನಗಳು

### (i) ಚಿಂತನಾಪರ ಲೇಖನಗಳು

ಮೂರ್ತಿರಾಯರು ಸಾಹಿತ್ಯವನ್ನು ಕುರಿತು ಗಂಭೀರ ಚಿಂತನೆ ನಡೆಸಿದಂತೆ ಮಾನವ ಬದುಕನ್ನು ಕೂಡ ಗಂಭೀರವಾಗಿ ಚಿಂತನೆ ಮಾಡಿದವರು. ದೇವರುಗಳನ್ನು ಲಘುವಾಗಿ ಹಾಸ್ಯ ಮಾಡಿದಂತೆ ತಮ್ಮನ್ನು ತಾವೇ ಹಾಸ್ಯ ಮಾಡಿಕೊಂಡವರು. ಅದರಂತೆ ತಮ್ಮ ಜೀವನವನ್ನು ಕುರಿತು ಒಂದು ಒಳನೋಟ ಬೀರಿಕೊಂಡವರು. ಬಸವಣ್ಣನವರು ತಮ್ಮ ಸ್ವಾನುಭವದಿಂದ ಕಂಡುಕೊಂಡ ಹಾಗೂ ಪ್ರತಿಪಾದಿಸಿದ ಅಂತರಂಗ ವಿಮರ್ಶೆ ಮೂರ್ತಿರಾಯರ ಜೀವನದಲ್ಲಿಯೂ ಕಾಣಬಹುದು. ಮೂರ್ತಿರಾಯರು ತಮ್ಮ ಜೀವನವನ್ನು ಸಿಂಹಾವಲೋಕನ ಮಾಡಿದ, ಚಿಂತನೆ ಮಾಡಿದ ಲೇಖನವೇ ಇದು.

### (1) WHAT LIFE HAS TAUGHT ME

ಈ ಲೇಖನ ಒಂದು ರೀತಿಯಲ್ಲಿ ಸಮಷ್ಟಿ ಮಾನವ ಜೀವನದ ಬಗ್ಗೆ ಮಾಡಿದ ಚಿಂತನೆ. ಸ್ವಗತ ಹಾಗೂ ಪ್ರಕಾಶಗಳೆರಡೂ ಇಲ್ಲಿ ಒಂದನ್ನೊಂದು ಕೂಡಿಕೊಂಡು ಜೊತೆ ಜೊತೆಯಲ್ಲಿ ಸಾಗುತ್ತದೆ. ಇದರ ಆರಂಭ ಹಾಗೂ ಮುಕ್ತಾಯಗಳೆರಡೂ ಉತ್ತಮ ಪುರುಷ (First person) ವಾಚಕವಾಗಿದೆ. ಈ ನಡುವೆ ಸ್ವಾತ್ಮಗತ ವಾಕ್ಯಗಳು, ಸಮೂಹ ಪರವಾದ ವಾಕ್ಯಗಳೂ ಇವೆ. ಗೀತೆ, ಉಪನಿಷತ್ತು, ಬೈಬಲ್-ಮುಂತಾದ ಧರ್ಮಗ್ರಂಥಗಳು ಸಾರಿದ ಸಿದ್ಧಾಂತದ ಬೆಳಕಿನಲ್ಲಿ ಬದುಕನ್ನು ಕುರಿತ ಚಿಂತನ-ವಿಶ್ಲೇಷಣೆಗಳು ಸಾಗುತ್ತವೆ. ಹತ್ತು ಹಲವು ನಿದರ್ಶನಗಳನ್ನು ಅವರು ಪೂರಕವಾಗಿ ಉಲ್ಲೇಖಿಸಿದ್ದಾರೆ. ಪ್ರಸ್ತುತ ಈ ಗಂಭೀರ ಚಿಂತನಾತ್ಮಕ ಲೇಖನಗಳ ಆರಂಭ ಹಾಗೂ ಮುಕ್ತಾಯದ ವಾಕ್ಯಗಳು ಹೀಗಿವೆ.

So life has taught me something. it is conforting to be fold. even if it is only by implication. that I have been respective to what life has offered to teach me. (1)

ಆರಂಭದ "So" ಎಂಬ ಶಬ್ದ ಗಮನಾರ್ಹ. ಇದರ ವಿವರಣೆ ಮುಕ್ತಾಯದ ಕೊನೆಯ ವಾಕ್ಯದಲ್ಲಿದೆ. ಮೂರ್ತಿರಾಯರ ಬದುಕಿನ ಮೇಲೆ ಸಾಹಿತ್ಯ ಬೀರಿರುವ ಪ್ರಭಾವವನ್ನು ನಾವು ಗುರುತಿಸಬಹುದು.

Has life taught us how to resist the siren song of the lusts of the eye. the lusts of the flesh. and the pride of life? I dare not answer "Yes".

ಗೀತೆ ಹಾಗೂ ಕಠೋಪನಿಷತ್ತು ಬೋಧಿಸಿದ ಹೃದಯ ದೌರ್ಬಲ್ಯ ಹಾಗೂ ಆತ್ಮ ಬಲಗಳು ತಮ್ಮಲ್ಲಿದೆಯೇ ಎಂಬ ಜಿಜ್ಞಾಸೆಗೆ ತೊಡಗುತ್ತಾರೆ. ಇಂಥಹ ಶಕ್ತಿ ಇಲ್ಲದಾಗ ತಾನೇನು ಮಾಡಬಲ್ಲೆ ಎಂಬುದನ್ನೂ ಮುಕ್ತವಾಗಿ ಹೇಳಿಕೊಂಡಿದ್ದಾರೆ. ಅವರ ಪ್ರಾಮಾಣಿಕತೆಯ ಬಿಚ್ಚು ನುಡಿ ಹೀಗಿದೆ.

But when I am not sure I have reserves though to conquer, it is wise to flee. I would rather be a coward than in Satan's toils (2)

ಹಾಗಾದರೆ ಬದುಕುತ(ನ) ಮಗೇನು ಕಲಿಸಿದೆ ಎಂಬ ಪ್ರಶ್ನೆಗೂ ಅವರು ಉತ್ತರಿಸುತ್ತಾರೆ. "ಇಲ್ಲಿ "ಪರದೇಶದ ಸಾಹಿತ್ಯದಿಂದ ನಾವು ಸ್ಫೂರ್ತಿ ಪಡೆದಿದ್ದೇವೆ. ಇನ್ನು ಮುಂದೆಯೂ ಪಡೆಯಬೇಕು." (ಸಾಹಿತ್ಯ ಮತ್ತು ಸತ್ಯ-ಪುಟ 87) ಎಂಬ ಮೂರ್ತಿರಾಯರ ಮಾತಿಗೆ ಉತ್ತರರೂಪ ಅಥವಾ ನಿದರ್ಶನವೆಂಬಂತೆ ಈ ಮಾತು ಬಂದಿದೆ.

Satan does not accept failure tamely. That is one of the things life teaches us (2)

ಬದುಕು ಕಲಿಸಿದ ಪಾಠವನ್ನು ಮೂರ್ತಿರಾಯರು ಯೋಚಿಸುತ್ತಾರೆ. ಜೀವನದ ಸಮಸ್ತ ಅನುಭವಗಳು, ಸಂತೋಷ, ದುಃಖ, ಒಳಿತುಕೆಡಕುಗಳಿಂದ ಬದುಕು ಬೋಧಿಸಿದ್ದನ್ನು ಅವರು ನೆನೆಯುತ್ತಾರೆ. ಅನುಭವಗಳಿಗೆ ತಮ್ಮ ಭಾವಸ್ಪಂದನವನ್ನು ಹೀಗೆನ್ನುತ್ತಾರೆ.

Whatever the extent of my faith in myself, life is convinced that I am educable.(2)

ಬದುಕು ಅವರಿಗೆ ಹಾಗೂ ನಮಗೆ ಒಡ್ಡಿದ ಸವಾಲುಗಳನ್ನು ಅವರು ಚಿಂತನೆ ಮಾಡುತ್ತಾರೆ. ಇಂತಹ ಸವಾಲುಗಳನ್ನು ಅವರು generalise ಮಾಡುತ್ತಾರೆ. ಮೂರ್ತಿರಾಯರು ಅಂತರ್ಮುಖಿತೆಯಿಂದ ಬಹಿರ್ಮುಖಿತೆಗೆ ಮರಳುತ್ತಾರೆ. ಕುವೆಂಪುರವರಂತೆ ಸಂಪೂರ್ಣ ಅಂತರ್ಮುಖಿಗಳೂ ಅಲ್ಲ, ಶಿವರಾಮಕಾರಂತರಂತೆ ಸಂಪೂರ್ಣ ಬಹಿರ್ಮುಖಿಗಳೂ ಅಲ್ಲ. ಅವರಿಬ್ಬರ ನಡುವೆ ನಿಂತ ಮೂರ್ತಿರಾಯರು ಈ ಸವಾಲುಗಳನ್ನು ಹೀಗೆ ಸಾಮಾನ್ಯೀಕರಿಸುತ್ತಾರೆ.

She warns us that we have not climbed high enough to see patterns in what appears to be wild disorder. She warns and encourages when I succeed. She parades the success before me. I can almost hear her saying "There you are ! You can make the grade" (2)

ಬದುಕಿನ ಹತ್ತು ಹಲವು ಏಳು ಬೀಳುಗಳೂ ಅವರಿಗೆ ಹಲವು ಪಾಠ ಕಲಿಸಿವೆ. ಬದುಕಿನಲ್ಲಿ ಕಹಿ ಇದ್ದರೂ ಅವರಿಗೆ ಬದುಕು ಪ್ರಿಯವಾದುದು. ಅವರ ಹಲವು ಕೃತಿಗಳಲ್ಲಿ ಅವರ ಜೀವನದರ್ಶನ, ಜೀವನೋತ್ಸಾಹಗಳು ನೇರವಾಗಿ ಪ್ರಕಟವಾಗಿವೆ. ವೈರಾಗ್ಯಪರ ವಾದ, ಸಂಸಾರ-ಪ್ರಪಂಚಗಳನ್ನು ಕುರಿತ ವಿರಕ್ತಿಜನಕ ಸಂದೇಶಗಳನ್ನು ಅವರು ಮೆಚ್ಚುವುದಿಲ್ಲ. ಬದುಕಿಗೆ ಅವರು ಸಮರ್ಪಿಸುವ ಗೌರವ ಹೀಗಿದೆ.

I know now that I have learnt one thing, life has had faith in me, and in all decency I must return the compliment I must have faith in her.

ತಮ್ಮ ಆತ್ಮ ಚರಿತ್ರೆಯ ಭರತವಾಕ್ಯವೂ ಧ್ವನಿಯನ್ನು ಪ್ರತಿಬಿಂಬಿಸುತ್ತದೆ. "ಬದುಕಿಗೆ ನಾನು ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ." ಸಂಸಾರದ ಏಳು ಬೀಳುಗಳನ್ನು

ವರ್ಣಿಸಿ ಅದು ತ್ಯಾಜ್ಯ, ಕ್ಷುಲ್ಲಕವೆಂದು ಹೇಳಿದ ಹಲವು ವಾಕ್ಯಗಳನ್ನು ಉದ್ಧರಿಸಿ ಅವುಗಳನ್ನು ವಿಮರ್ಶಿಸುತ್ತಾರೆ. ಕಾಳಿದಾಸ ಹೇಳಿರುವ "ಪುರಾಣಮಿತ್ಯೇವ ನ ಸಾಧು ಸರ್ವಂ" ಎಂಬ ವಾಕ್ಯದಂತೆ, ಈ ಮಾತುಗಳನ್ನು ಅಂಧಾಭಿಮಾನದಿಂದ ಒಪ್ಪದೆ ಲೌಕಿಕ ಸಂಬಂಧಗಳು ವ್ಯಕ್ತಿಗೆ ಎಷ್ಟು ಅನಿವಾರ್ಯ, ಅಗತ್ಯ ಎಂಬ ಚಿಂತನೆ ಮಾಡುತ್ತಾರೆ. ಸಂತರು, ತತ್ತ್ವಜ್ಞಾನಿಗಳು ಮಾಡಿದ ಸಂಸಾರನಿಂದನೆಯನ್ನು ಬದುಕಿಗೆ ಎಷ್ಟರ ಮಟ್ಟಿಗೆ ಅನ್ವಯಿಸುತ್ತವೆ ಎಂಬುದನ್ನು ಅವರು ಹೀಗೆ ಹೇಳುತ್ತಾರೆ.

But let us turn from philosophers and
saints to life (4)

ಶಂಕರಾಚಾರ್ಯರ "ಕಾಂತೇ ಕಾಂತಾ ಕಸ್ತೇ ಪುತ್ರಃ" ಎಂಬ ವೈರಾಗ್ಯ ಬೋಧಕ ವಾಕ್ಯವನ್ನೂ ಅವರು ವಿಶ್ಲೇಷಿಸುತ್ತಾರೆ. ಸಂಸಾರದ ವ್ಯಾಮೋಹವನ್ನು ಮೂರ್ತಿರಾಯರು ಅಲ್ಲಗಳೆಯುವುದಿಲ್ಲ. ಆದರೆ ಅದೇ ಅಂತಿಮವೆಂದು ಅವರು ಒಪ್ಪಿಕೊಳ್ಳುವುದಿಲ್ಲ.

Very often it (too much regard for life in this world – for 'sansar') does lead people to confused material posessions with life.. .....

Well she is my wife and he is my son. Apart from the fact that they are persons in their own, not things to be dismissed with contempt. we have shared joys. And....yes, we have shared sorrows too. (4–5)

ವೈರಾಗ್ಯವನ್ನೇ ಪ್ರತಿಪಾದಿಸಿದವರು ಜೀವನೋತ್ಸಾಹವನ್ನು ಪ್ರತಿಪಾದಿಸಿದ್ದಾರೆ. ಬದುಕನ್ನು ಅಲಕ್ಷಿಸಿದ ಅವರು ಬೆಳೆಸಿಕೊಂಡ ಪ್ರಕೃತಿ ಪ್ರೇಮವನ್ನು ಅವರು ಮೆಚ್ಚಿಕೊಂಡೂ ಅವರು ಗೌಣವಾಗಿ ಕಂಡ ಸಂಸಾರ ನೀಡುವ ಸ್ಫೂರ್ತಿಯನ್ನು ಅವರು ಕಂಡುಕೊಂಡಿದ್ದಾರೆ :

When the saints use the ocean–metaphor to describe "samsar" they are only of the tempestous ocean. Why are they insensitive to its majesty? The snow–clad peaks. the glory of autumnal colours in the forests of the north. the delicacy and fragrance of flowers–is there no joy in all this?

ಸಂಸಾರ ಹಾಗೂ ದೇಹಗಳನ್ನು ಹಲವರು ಬೋಧಿಸಿದ್ದನ್ನು ಮೂರ್ತಿರಾಯರು ಅಧ್ಯಯನ ಮಾಡಿದವರೇ. ಆದರೆ ಅವರು ಅಂತಹ ಮಾತುಗಳಿಂದ ಪ್ರಭಾವಿತರಾಗಲಿಲ್ಲ. ಬದಲಾಗಿ, ಸಂಸಾರದಲ್ಲಿ ಸಂತೋಷ ನೀಡುವ ಘಟನೆಗಳನ್ನು ಕಂಡವರು. ಅವರ ಪಾಲಿಗೆ ಸಂಸಾರ ಸಾಗರವಲ್ಲ. ಆನಂದ ನೀಡುವ ಒಂದು ಘಟಕ. ಜೀವನ ಸಂತೋಷ ಅವರಿಗೆ ಸಂಸಾರ ನೀಡಿದಷ್ಟು ಯಾವುದೂ ನೀಡಿಲ್ಲ. ಅವರ ಸ್ವಾನುಭವ ಹಾಗೂ ಸಾರ್ವತ್ರಿಕ ಅನುಭವ ಹೀಗಿದೆ:

When his child crosses the threshold for the first time he celebrates the event with a feast . I recall my little grandson (who had

been exceptionally troublesome) feeling from his mother's disciplining and clasping me for protection (5)

ಬದುಕು ಯೌವ್ವನದಂತೆ ವೃದ್ಧಾಪ್ಯದಲ್ಲಿಯೂ ಒಂದು ಆನಂದ ನೀಡುತ್ತದೆ. ಹಲವರಿಗೆ ವೃದ್ಧಾಪ್ಯ ಲೌಕಿಕ ವಿಮುಖತೆಯನ್ನು ಪ್ರಚೋದಿಸಿದರೆ, ಮೂರ್ತಿರಾಯರಿಗೆ ಸಂಸಾರದಲ್ಲಿ ವೃದ್ಧಾಪ್ಯದಲ್ಲಿ ನೀಡುವ ಸಂತೋಷ, ಕಲಿಸುವ ಪಾಠ ಎರಡೂ ಮುಖ್ಯ.

To me his (grandson's) arms round me are grace from heaven. To experience such bliss one has to grow old... I have been taught to accept age as I have been taught to accept life.

ಈ ಲೇಖನದಲ್ಲಿ ತಾವು ಕಲಿತ ಕಲಿಯುತ್ತಿರುವ ಹಾಗೂ ಕಲಿಯಬೇಕಾದ ಬದುಕಿನ ಪಾಠಗಳನ್ನು ಚಿಂತನೆ ಮಾಡುತ್ತಾರೆ. ಈ ಲೇಖನದಲ್ಲಿ ಅವರು ಮಾನವ ಜೀವನದಲ್ಲಿ ಅಳವಡಿಸಿಕೊಳ್ಳಬೇಕಾದ, ಜೀವನ ಪ್ರೀತಿ ಹಾಗೂ ಸಹಮಾನವರೊಂದಿಗೆ ನಮಗಿರಬೇಕಾದ ಸಂಬಂಧ-ಮುಂತಾದವುಗಳನ್ನು ಅವರು ಪ್ರತಿಪಾದಿಸುತ್ತಾರೆ. "ನಾವು ನಕಾರಾತ್ಮಕವಾದ ನಿರಾಸಕ್ತಿಯನ್ನು ಬಿಟ್ಟು ಪ್ರೇಮವನ್ನು ಬೆಳೆಸಿಕೊಳ್ಳೋಣ" ('ತೆರೆದ ಮನ' ಸ.ಲ. ಪ್ರಬಂಧಗಳು ಪುಟ 309) ಎಂಬ ಅವರ ವಾಕ್ಯ ಈ ಲೇಖನದಲ್ಲಿ ಧ್ವನಿತವಾಗಿದೆ.

## (2) HUMAN DIGNITY

ಮೂರ್ತಿರಾಯರು ಮಾನವ ಸ್ವಭಾವವನ್ನು ಎಷ್ಟು ಗಂಭೀರವಾಗಿ ಗಣನೆಗೆ ತೆಗೆದುಕೊಳ್ಳಬಲ್ಲರು ಎಂಬುವುದಕ್ಕೆ Human Dignity ಎಂಬ ಈ ಲೇಖನ ಒಂದು ನಿದರ್ಶನ. ಹಿಂದಿನ ಲೇಖನದ ಎರಡನೆಯ ಅಥವಾ ಮುಂದುವರೆದ ಭಾಗದಂತಿರುವ ಈ ಲೇಖನ ಮೂರ್ತಿರಾಯರ ವಾಸ್ತವ ದೃಷ್ಟಿ ಕೋನದ ಒಂದು ಪ್ರತೀಕ. ಅವರೊಬ್ಬ ಕಲ್ಪನಾಜೀವಿಯಲ್ಲ, ಭಾವಜೀವಿಯಲ್ಲ, ಅಥವಾ ಆದರ್ಶವಾದಿಯಲ್ಲ. ಶಿವರಾಮ ಕಾರಂತರಂತೆ ವಾಸ್ತವವಾದಿ. ಕಾರಂತರು ಕೊಂಚ ಕಠೋರವಾಗಿ ಹೇಳುತ್ತಾರೆ. ಮೂರ್ತಿರಾಯರು ಕೊಂಚ ಸೌಮ್ಯವಾಗಿ ಹೇಳುತ್ತಾರೆ. ಈ ಗಂಭೀರ ಪ್ರಬಂಧದಲ್ಲಿ ಮೂರ್ತಿರಾಯರು ಓದುಗನನ್ನು ಒಂದು ಗಂಭೀರ ಚಿಂತನೆಗೆ ತೊಡಗುವಂತೆ ಮಾಡುತ್ತಾರೆ.

ಈ ಲೇಖನದಲ್ಲಿ ವ್ಯಕ್ತಿಯ ಭ್ರಮಾತ್ಮಕ ಘನತೆಯ ಬಗ್ಗೆಯೂ ಬರೆದು ನಿಜವಾದ ಮಾನವೀಯ ಘನತೆಯ ಬಗ್ಗೆ ಹೇಳುತ್ತಾರೆ. ಇದೊಂದು ಉಪನ್ಯಾಸವಾದ್ದರಿಂದ ಅದರ ಉಲ್ಲೇಖ ಹೀಗಿದೆ.

I propose to speak today of the dignity that is inherent in man as man (1)

ಘನತೆವೆತ್ತ ವ್ಯಕ್ತಿಗಳ ಘನತೆಯನ್ನು ತಗ್ಗಿಸಲು ಬಂದ ವ್ಯಕ್ತಿಗಳೇ ಹೇಗೆ ಘನತೆಯನ್ನು ಕಳೆದುಕೊಂಡರೆಂದು ಸಾಕ್ರಟೀಸ್ ಹಾಗೂ ವೇದಾಂತ ದೇಶಿಕರ ಜೀವನದಲ್ಲಿ ನಡೆದ ಘಟನೆಯನ್ನು ನಡೆದ ಘಟನೆಯನ್ನು ಉಲ್ಲೇಖಿಸುತ್ತಾರೆ. ಈ ಎರಡು ನಿದರ್ಶನಗಳನ್ನು ಬಹು ಸೊಗಸಾದ ಆಂಗ್ಲ ಭಾಷೆಯಲ್ಲಿ, ಚಿತ್ರವತ್ತಾಗಿ ಹೀಗೆ ಬರೆಯುತ್ತಾರೆ :

When Socrates stood facing his judges, it was he that was a king among men, not those who had the power to condemn him to death.

His enemies once invited him to a gathering, and with the specific intention of putting him to disgrace, set a bood–trap for him When he opened the door to enter the house, a garland of old shoes descended upon him. The saint walked in unruggled and, without bothering to cast off the shoes, said with head bowed as when receiving a blessing (2)

ಹಾಗೆಯೇ ರೋಮನ್ನನ್ನು ಜಯಿಸಿದ ಅನಾಗರಿಕ ಆಕ್ರಮಣಕಾರರು ಸೆನೆಟರುಗಳನ್ನು ಕೊಲ್ಲಲು ಹೋದಾಗ ಅವರು ವಿಚಲಿತರಾಗದ ಸನ್ನಿವೇಶವನ್ನು ಕುರಿತು ಹೀಗೆ ಬರೆಯುತ್ತಾರೆ :

Dignity then sat not on the brows of the Victors but on those of their victims. (2)

ಕಿಂಗ್ ಲಿಯರ್ ರಾಜನಾಗಿದ್ದ ಸ್ಥಿತಿಗೂ, ಅನಂತರ ಅವನು ಅಧಿಕಾರವನ್ನು ಕಳೆದುಕೊಂಡ ಸ್ಥಿತಿಗೂ ಇರುವ ಅಂತರವನ್ನು ಗುರುತಿಸಿ ಅವನಲ್ಲಾದ ಪರಿವರ್ತನೆಯನ್ನು ಉಲ್ಲೇಖಿಸುತ್ತಾರೆ. ಅದರಂತೆ ಘನತೆ ಆದಿವಾಸಿಗಳಲ್ಲಿಯೂ ಇರುತ್ತದೆ ಎಂಬುದಕ್ಕೆ ಯೂರೋಪಿಯನ್ನರು ಅಮೇರಿಕದ ಕಾಡು ಜನರನ್ನು ಮರಕ್ಕೆ ಕಟ್ಟಿ ಹಿಂಸಿಸುತ್ತಿದ್ದಾಗಲೂ ಅವರು ತಮ್ಮ ಸಹಜ ಘನತೆಯನ್ನು ಉಳಿಸಿಕೊಂಡ ನಿದರ್ಶನವನ್ನು ನೀಡುತ್ತಾರೆ. ಆ ರೆಡ್ ಇಂಡಿಯನ್ ಜನಾಂಗದ ಘನತೆಯನ್ನು ಪ್ರಶಂಸಿಸುವ ಭಾಗ ಹೀಗಿದೆ. ಇಲ್ಲಿ ಮೂರ್ತಿರಾಯರು ಮಾನವನ ಪಶುತ್ವದ ಬಗ್ಗೆ ವ್ಯಕ್ತಪಡಿಸಿದ ವ್ಯಂಗ್ಯ ಹಾಗೂ ಘನತೆಯ ಬಗ್ಗೆ ಮಾಡಿದ ಪ್ರಶಂಸೆಯೂ ಇಲ್ಲಿದೆ.

The more sensitive and honest conquerors have testified to the indefrauble dignity with which the savages bore suffering and humiliation. Defeated and helpless, bound to trees and tortured – they bore it all with a contemplatious smile which put their 'civilised' tormentors to shame. Here again is dignity which does not depend on wealth, power or even education (3)

ಭಾರತದ ಗ್ರಾಮಾಂತರ ಪ್ರದೇಶಗಳಲ್ಲಿಯೂ ಅಧಿಕಾರ-ಶ್ರೀಮಂತಿಕೆಯೂ ಇಲ್ಲದ ಜನ ಹೇಗೆ ತಮ್ಮ ಘನತೆಯನ್ನು ಕಾಯ್ದುಕೊಂಡಿದ್ದರೆಂದು ಹೇಳಿ, ಅವರನ್ನು 'nature's own princes' (3) ಎಂದು ಕರೆಯುತ್ತಾರೆ. ಇದನ್ನು ಅವರು 'Indestrible soul of man' (4) ಎಂದು ಕರೆದಿದ್ದಾರೆ. ವ್ಯಷ್ಟಿಯ ಈ ಘನತೆಯನ್ನು ಸಮಷ್ಟಿಗೆ ಅನ್ವಯಿಸುವ ರೀತಿ ಹೀಗಿದೆ:

It is consistent also with warm relations with one's fellowmen because it recognises and respects the same dignity in others, and

because such dignity does not depend upon the humilation of others.

(Page 4)

ವೈಯಕ್ತಿಕ ಘನತೆಯು ವಿಶ್ವ ಘನತೆಯೊಂದಿಗೆ ಹೊಂದಿದ ಸಂಬಂಧವನ್ನು ಅವರು ಹೀಗೆ ವಿವರಿಸುತ್ತಾರೆ. ಇಲ್ಲಿ ಮೂರ್ತಿರಾಯರು ವ್ಯಕ್ತಿಯಿಂದ ಜಗತ್ತಿನವರೆಗೆ ಹೇಗೆ ತಮ್ಮ ದೃಷ್ಟಿಕೋನವನ್ನು ಬೀರಿದ್ದಾರೆಂಬುದು ಸ್ಪಷ್ಟವಾಗುತ್ತದೆ.

The refusal to respect the dignity of the blackman, the Jew, the poorman, the weakman it is this refusal that lies at the roof of the troubles of the world today, and there is a real fear that it may yet destroy the world.

(page 9)

ಇಂದಿನ ಜಗತ್ತಿನ ಸಮಸ್ಯೆಗಳಿಗೆ ಮಾನವನ ಕ್ಷುಲ್ಲಕ ಮನೋಭಾವ ಹೇಗೆ ಕಾರಣವೆಂದು ಮೂರ್ತಿರಾಯರು ವಿಷದೀಕರಿಸಿದ್ದಾರೆ. ಸಾಮಾಜಿಕ ತಾರತಮ್ಯಗಳು ಹೇಗೆ ಜಗತ್ತಿನ ವಿನಾಶಕ್ಕೆ ಕಾರಣವಾಗಬಲ್ಲವೆಂಬುದನ್ನು ಮೂರ್ತಿರಾಯರು ಚಿಂತನೆ ಮಾಡುವ ದಾರಿ ವಿಶಿಷ್ಟವಾದುದು ಹಾಗೂ ಸಮರ್ಪಕವಾದುದು.

## ವಿಮರ್ಶಾತ್ಮಕ ಲೇಖನಗಳು

### (1) CONSTRUCTIVE CRITICISM

Constructive Criticism ಎಂಬ ಇಂಗ್ಲೀಷ್ ಲೇಖನದಲ್ಲಿ ಸಾಹಿತ್ಯ ರಚನೆಯಲ್ಲಿ ರಚನಾತ್ಮಕ ವಿಮರ್ಶೆ ಎಂತಹ ಮಹತ್ವದ ಪಾತ್ರವಹಿಸುತ್ತದೆ ಎಂಬ ಮೂರ್ತಿರಾಯರ ಚಿಂತನೆ ಆರು ಪುಟಗಳ ವ್ಯಾಪ್ತಿಯಲ್ಲಿ-ಮೂರ್ತಿರಾಯರ ಹಸ್ತಾಕ್ಷರಗಳಲ್ಲಿ ಇದೆ.

ಆರಂಭದಲ್ಲಿ ಅವರು ಉಲ್ಲೇಖಿಸಿದ ಎರಡು ಸ್ವಾನುಭವದ ಘಟನೆಗಳು ಅನಂತರದ ಅವರ ಚಿಂತನೆಯ ವಸ್ತುವಿಗೆ ದಾರಿ ಮಾಡಿಕೊಡುತ್ತವೆ. ಮೊದಲನೆಯದು ಅವರ ಮೊಮ್ಮಗಳು ಆಶಾ ಬರೆದ ಒಂದು ಚಿತ್ರ ಹಾಗೂ ಎರಡನೆಯದು ತರುಣ ಲೇಖಕನೊಬ್ಬ ತನ್ನ ಒಂದು ಕಥಾ ಸಂಕಲನವನ್ನು ಮೂರ್ತಿರಾಯರಿಗೆ ನೀಡಿ ಅವರ 'ಮುಕ್ತ ಅಭಿಪ್ರಾಯ'ವನ್ನು ನಿರೀಕ್ಷೆ ಮಾಡಿದ ಘಟನೆ. ಮೊದಲನೆಯ ಸಂದರ್ಭದಲ್ಲಿ ಆಶಾ ಬಯಸದಿದ್ದರೂ ಅವರು ನೀಡಿದ ಪ್ರತಿಕ್ರಿಯೆಯಿಂದಾಗಿ ಆಶಾಳ ಪ್ರತಿಕ್ರಿಯೆ ಹಾಗೂ ಎರಡನೆಯ ಸಂದರ್ಭದಲ್ಲಿ ತಮ್ಮ ಪ್ರಾಮಾಣಿಕ ಪ್ರತಿಕ್ರಿಯೆಯನ್ನು ಬಯಸಿದ ಲೇಖಕ ಮಿತ್ರನಿಗೆ ಅವರ ಪ್ರತಿಕ್ರಿಯೆ- ಈ ಎರಡೂ ಸಂದರ್ಭಗಳನ್ನೂ ಅವರು ಮೇಳೈಸಿ ಹೀಗೆ ಬರೆಯುತ್ತಾರೆ.

Both had the same distaste for what fondly thought was constructive criticism. It had constructed nothing. I had only punctured two egos.

(page 2)

ರಚನಾತ್ಮಕ (ಮಾರ್ಗದರ್ಶಿ) ವಿಮರ್ಶಕ ಹೇಗೆ ವಿಫಲನಾಗುತ್ತಾನೆ, ಎಂದು ವಿಮರ್ಶಕನಿಗೂ ಕೃತಿಕಾರನಿಗೂ ಇರುವ ಅಂತರವನ್ನು ಅವರು ಇಲ್ಲಿ ನಿರೂಪಿಸಿದ್ದಾರೆ.

ಕೇವಲ ಪ್ರಶಂಸಾಪ್ರಿಯ ಲೇಖಕರ ಮೇಲೆ ವಿಮರ್ಶೆ-ಎಷ್ಟೇ ವಸ್ತುನಿಷ್ಠವಾಗಿದ್ದರೂ-ಪ್ರಭಾವ ಬೀರಲಾರದೆಂದೂ ಈ ಘಟನೆಯ ಮೂಲಕ ಮೂರ್ತಿರಾಯರು ವಿಶದೀಕರಿಸಿದ್ದಾರೆ. ಇಂತಹ ಸಂದರ್ಭಗಳಲ್ಲಿ ವಿಮರ್ಶೆಯ ವೈಫಲ್ಯದ ಸಾಧ್ಯತೆಯನ್ನು -ಸಂಭವನೀಯತೆಯನ್ನು-ಕುರಿತು ವ್ಯಾಖ್ಯಾನಿಸುತ್ತಾರೆ. ಪ್ರಾಮಾಣಿಕವಾದ ವಸ್ತುನಿಷ್ಠವಾದ ಅಭಿಪ್ರಾಯವನ್ನು ಬಯಸುವವರ ಬಯಕೆಯ ಸ್ವರೂಪವನ್ನು ಅವರು ಹೀಗೆ ಗುರುತಿಸುತ್ತಾರೆ:

When people say that they want constructive criticism what they really want– though they really want– though they would never admit it – is that the criticism should be such as to build up their ego (2)

ಪ್ರಾಮಾಣಿಕ ವಿಮರ್ಶೆ ಒಳ್ಳೆಯದೇ ಅಥವಾ ಒಳ್ಳೆಯ ವಿಮರ್ಶೆ ಒಳ್ಳೆಯದೇ ಎಂಬ ಬಗ್ಗೆ ವಿಚಾರ ಮಾಡುತ್ತಾರೆ. ಮೂರ್ತಿರಾಯರು ಇಂತಹ ಸದ್ಗುಣವನ್ನು ವಿಮರ್ಶಕ ಬೆಳೆಸಿಕೊಂಡ ವಿಮರ್ಶಕ ಕೃತಿಕಾರನ-ಅವನು ಲೇಖಕನಾಗಿರಲಿ, ಕಲಾವಿದನಾಗಿರಲಿ,-ದೃಷ್ಟಿಯಲ್ಲಿ ಹೇಗೆ ತಿರಸ್ಕೃತನಾಗುತ್ತಾನೆ ಎಂಬುದನ್ನು ಹೀಗೆ ವಿವರಿಸುತ್ತಾರೆ:

Virtue is valuable to the extent to which it helps to construct a better world. Honest criticism may not necessarily serve that purpose. Far from being a virtue, it is in quite a few people a cathartic process– a purging of accumulated venom (3)

ಹಾಗಾದರೆ ವಿಮರ್ಶಕನ ಪಾತ್ರ ಏನು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಸಾಹಿತ್ಯ ರಂಗ (ಕ್ಷೇತ್ರ)ದಲ್ಲಿ ಈ ಕೆಲಸ-ವಿಮರ್ಶೆಯ ಕೆಲಸ-ಎಷ್ಟು ಕಷ್ಟದ್ದೆಂದು ಅವರು ಹೇಳುತ್ತಾರೆ:

For constructive criticism in these matters a certain degree is necessary. The critic's real business is not to tell the artist what to do but to reconstruct in his own mind what the artist has already created. I prefer the word create because in the higher reaches of human endeavour construction really becomes creation. (4)

ಇಲ್ಲಿ ರಚನೆ ಹಾಗೂ ಸೃಷ್ಟಿಗಳ ವ್ಯತ್ಯಾಸವನ್ನು ಅವರು ಹೇಳುತ್ತಾ-ಅಥವಾ ಹಾಗೆ ಹೇಳಲು 'ರಚನೆ'ಯಿಂದ 'ಸೃಷ್ಟಿ'ಗೆ ಅವರು ಹೊರಳಿ-ಕೇವಲ ವಿಮರ್ಶಕ ಕೇಂದ್ರಿತವಾದಾಗ ಹೇಗೆ ಅದರಿಂದ ದುರಂತಗಳು ಸಂಭವಿಸುತ್ತವೆ ಎಂಬುದನ್ನು ಸೋದಾಹರಣವಾಗಿ ಸಮರ್ಥಿಸುತ್ತಾರೆ:

That was there the Augustan critics erred. From their understanding or misunderstanding of Aristotle they constructed a set of rules and made of them a Procrustes bed on which to streach the creative artists. Obviously such criticism can not be creative. (4)

ಸೃಷ್ಟಿಕಾರ್ಯಕ್ಕೆ ಬಾಹ್ಯ ವಿಮರ್ಶನ ಸೂತ್ರ-ನಿಯಮಗಳಿಗಿಂತಲೂ, ಸೃಷ್ಟಿಕರ್ತನ ಆಂತರಿಕ ವಿಮರ್ಶನ ದೃಷ್ಟಿಕೋನ ಮುಖ್ಯ. ಇಲ್ಲಿ ಇವರಿಬ್ಬರ ಅನಿವಾರ್ಯ ಸಹಯೋಗವನ್ನು ಮೂರ್ತಿರಾಯರು ಒಂದು ಒಳ್ಳೆಯ ನಿದರ್ಶನದಿಂದ ಪರಿಣಾಮಕಾರಿಯಾಗಿ ಹೀಗೆ ಹೇಳುತ್ತಾರೆ:

Meanwhile the artist keeps a continual check on himself and when he goes out of step with the law he tells himself: "No. that is not what I set out to do." Here the critical and creative processes are working hand in hand.

ಹೀಗೆ ಮೂರ್ತಿರಾಯರು ವಿಮರ್ಶಕನನ್ನು ಕೃತಿಕಾರನಿಂದ ಹೊರ ನಿಲ್ಲಿಸುವುದಿಲ್ಲ. ಅವರಿಗೆ ಕೃತಿಕಾರ ಬೇರೆಯಲ್ಲ. ವಿಮರ್ಶಕ ಬೇರೆಯಲ್ಲ. ಕೃತಿಕಾರನಲ್ಲೇ ವಿಮರ್ಶಕನಿದ್ದರೆ, ಅಂತಹ ಕೃತಿಕಾರನೇ ಒಳ್ಳೆಯ ವಿಮರ್ಶಕನಾಗಿ, ತಾನು ಈಗಾಗಲೇ ಮಾಡಿದ ಸೃಷ್ಟಿಕಾರ್ಯ ದೋಷರಹಿತವಾದ ಪುನಸ್ಸೃಷ್ಟಿಯಾಗುತ್ತದೆ. ಹಾಗೆಯೇ ವಿಮರ್ಶಕನೂ ಕೃತಿಕಾರನ ಪರಕಾಯ ಪ್ರವೇಶ ಮಾಡುವಷ್ಟು ಸಮರ್ಥನಾಗಿರಬೇಕು. ಅದಿಲ್ಲದಿದ್ದರೆ ಅವನಿಗೆ ಕೃತಿಯ ಸಮಗ್ರತೆ ಪರಿಚಯವಾಗುವುದಿಲ್ಲ-ಹೀಗೆ ವಿಮರ್ಶಕ ಕೃತಿಕಾರರ ನಡುವಣ ಅನಿವಾರ್ಯವಾದ ಪರಸ್ಪರ ಅಂತರಂಗ ಪ್ರವೇಶದ ಬಗ್ಗೆ ಹೀಗೆ ಹೇಳುತ್ತಾರೆ:

He (critic) steps himself in the work of art. develops for the time being a mind and heart similar to those of the artist. and discovers that inner law. So in him also the critical and creative functions get fused. What he does is reconstructing rather than constructing. That is his function (page 6)

ಹೀಗೆ ಮೂರ್ತಿರಾಯರು ಈ ಲೇಖನದಲ್ಲಿ ವಿಮರ್ಶಕ-ವಿಮರ್ಶೆ-ಕೃತಿಕಾರ (ಕಲಾವಿದ ಅಥವಾ ಲೇಖಕ)-ಸೃಷ್ಟಿಶೀಲತೆ ಹಾಗೂ ಪುನಸ್ಸೃಷ್ಟಿ-ಮುಂತಾದ ಬಹುಮುಖ ವಿಚಾರಗಳನ್ನು ಕುರಿತು ಚಿಂತನೆ ಮಾಡಿದ್ದಾರೆ. ಸಂಕ್ಷಿಪ್ತವಾದರೂ ಸಮಗ್ರತೆಯಿಂದ ಕೂಡಿದ ಈ ಲೇಖನದ ವಸ್ತು ವಿಮರ್ಶಕ ಹಾಗೂ ಕೃತಿಕಾರರ ನಡುವಣ ಅಭೇದ್ಯ ಸಂಬಂಧ. ಅವರು ಪರಿಶೀಲನೆ ಮಾಡಿದ ರೀತಿ "ನಾನೃಷಿ ಕುರುತೇ ಕಾವ್ಯಂ" ಎಂಬ ಭಾರತೀಯ ಸಿದ್ಧಾಂತಕ್ಕೆ ತೀರಾ ಹತ್ತಿರವಾದದ್ದು.

## (3) HINDUISM

Hinduism ಎಂಬ ಹನ್ನೊಂದು ಪುಟಗಳ ಲೇಖನ ಹಿಂದೂ ಧರ್ಮದ ಸಾಮಾನ್ಯ ನಂಬಿಕೆಗಳು, ಪರಂಪರೆ ಹಾಗೂ ಕೆಲವು ಧಾರ್ಮಿಕ ಪರಿಭಾಷೆಯ ವಿವರವನ್ನೊಳಗೊಂಡಿದೆ. ಇದರೊಂದಿಗೆ ಹಿಂದೂ ಧರ್ಮದ ಇತರ ಶಾಖೆಗಳಾದ ಅದ್ವೈತ, ದ್ವೈತ ಹಾಗೂ ವಿಶಿಷ್ಟಾದ್ವೈತ (ಇಲ್ಲಿ ಅವರು ಮಾಧ್ವ ಹಾಗೂ ಶ್ರೀವೈಷ್ಣವ ಎಂದು ಕರೆದಿದ್ದಾರೆ) ಧರ್ಮಗಳ ಸಂಕ್ಷಿಪ್ತ ಪರಿಚಯ ಇದೆ. ಈ ಲೇಖನ 1962 ರಲ್ಲಿ ಅವರು ತಮ್ಮ ಮಗ

ಶ್ರೀ ಸುಬ್ಬರಾಮಯ್ಯನಿಗೆ ಇಂಗ್ಲೆಂಡಿನ ಮಿತ್ರರು ಕೇಳಿದ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಬರೆದಪತ್ರಗಳ ಪಡಿಯಚ್ಚಿನಂತಿದೆ.

ಹಿಂದೂ ಧರ್ಮದ ಪ್ರಮುಖ ದೇವತೆಗಳಾದ ತ್ರಿಮೂರ್ತಿಗಳು, ಇಂದ್ರ, ವರುಣ, ಅಗ್ನಿ, ಅನ್ನಪೂರ್ಣ-ಮುಂತಾದ ದೇವರನ್ನೂ ಕುರಿತ ಉಲ್ಲೇಖ ಇವೆ. ಇಲ್ಲಿ ತ್ರಿಮೂರ್ತಿಗಳ ವಿಶಿಷ್ಟ ಗುಣ-ಕರ್ತವ್ಯಗಳನ್ನು ಹೀಗೆ ಹೇಳುತ್ತಾರೆ. ಬ್ರಹ್ಮನ ಬಗ್ಗೆ ಬರೆಯುವಾಗ ಅವರು ಹೀಗೆನ್ನುತ್ತಾರೆ.

Today there are very few temples dedicated to the worship of Brahma. I have heard of only one (1)

ಇದೇ ವಿಚಾರ ಈ ಮೇಲೆ ಹೇಳಿದ ಸಂದರ್ಭದಲ್ಲಿ ಹೀಗೆ ಉಲ್ಲೇಖಗೊಂಡಿದೆ.

ಬ್ರಹ್ಮನನ್ನು ಗುಡಿಯಲ್ಲಿ ಪೂಜೆ ಮಾಡುವುದು ಈಗ ಎಲ್ಲೂ ಕಾಣುತ್ತಿಲ್ಲ. (ಭಾರತದಲ್ಲಿ ಎಲ್ಲೋ ಒಂದು ಕಡೆ ಬ್ರಹ್ಮನ ಗುಡಿಯಿದೆಯೆಂದು ಕೇಳಿದ್ದೇನೆ)

(ಚಿತ್ರಗಳು –ಪತ್ರಗಳು ಪುಟ 317–318)

ಇಲ್ಲಿ ಹಿಂದೂಧರ್ಮದ ಧರ್ಮಗ್ರಂಥಗಳಾದ ವೇದಗಳ ಬಗ್ಗೆಯೂ ಅವರು ಉಲ್ಲೇಖಿಸುತ್ತಾರೆ. ವೇದಗಳ ಬಗ್ಗೆ ಅವರು ಐತಿಹಾಸಿಕವಾಗಿ ಅಥವಾ ಸಂಶೋಧನಾತ್ಮಕವಾಗಿ ಹೇಳಹೋಗುವುದಿಲ್ಲ. ಬದಲಾಗಿ ಸ್ವಲ್ಪದರಲ್ಲಿ ಹೀಗೆ ಪರಿಚಯಿಸುತ್ತಾರೆ. ಮೂರ್ತಿರಾಯರಿಗೆ ದೇವರ ಅಸ್ತಿತ್ವದಲ್ಲಿ ನಂಬಿಕೆ ಇಲ್ಲದಿದ್ದರೂ ವೇದಗಳ ಗೇಯತೆ, ಉಪನಿಷತ್ತುಗಳು ಎತ್ತಿ ಹಿಡಿದ ಮಾನವ ಜೀವನದ ಮಹತ್ವದಲ್ಲಿ ಅವರಿಗೆ ನಂಬಿಕೆ-ವಿಶ್ವಾಸಗಳಿವೆ. ವೇದಗಳನ್ನು ಕುರಿತು ಅವರು ಹೀಗೆ ಬರೆಯುತ್ತಾರೆ.

The Vedas are not supposed to be the work of man. They are eternal. Originally they were not written down but passed from master to pupil by word of mouth. They were heard, not read. Therefore even today they are called that which is heard. They are to the Hindus what the Bible is to the Christian and the Koran is to the Mohammedan. (4)

ವೇದೋಪನಿಷತ್ತುಗಳು ನಮ್ಮ ಪೂರ್ವಿಕರ ದೃಷ್ಟಿಯಲ್ಲಿ ಅಪೌರುಷೇಯ. ಅಂದರೆ ಅವು ಮಾನವ ಬರೆದ ಗ್ರಂಥಗಳಲ್ಲ, ಅನಾದಿಯಾಗಿ ಬಂದವು. ಮೊದಲು ಅವನ್ನು ಬರವಣಿಗೆಗೆ ಇಳಿಸಿರಲಿಲ್ಲ. ಅವು ಗುರುವಿನಿಂದ ತನ್ನ ಶಿಷ್ಯನಿಗೆ, ಬಾಯಿಪಾಠವಾಗಿ ಉಳಿದು ಬಂದವು. ಜನ ಅದನ್ನು ಓದುವಂತಿರಲಿಲ್ಲ. ಹಾಡುತ್ತಿದ್ದರು-ವೇದ ಹೇಳುವುದನ್ನು ಗಾಯನ ಎಂದರೂ ನಡೆದೀತು-ಮತ್ತು ಹೇಳುತ್ತಿದ್ದರು. ಅದ್ದರಿಂದ ಅವನ್ನು ಇಂದಿಗೂ 'ಶ್ರುತಿ' ಎಂದು ಕರೆಯುತ್ತಾರೆ. ಕ್ರೈಸ್ತರಿಗೆ ಬೈಬಲ್ ನಂತೆ, ಮಹಮ್ಮದೀಯರಿಗೆ ಕೊರಾನಿನಂತೆ.... (312)

ಹಿಂದೂ ಧರ್ಮದ ಶಾಖೆಗಳೇ ಆಗಿರುವ ಅದ್ವೈತ, ಮಾಧ್ವ ಹಾಗೂ ಶ್ರೀವೈಷ್ಣವ ಸಂಘಗಳನ್ನೂ ಇಲ್ಲಿ ವಿಚಾರ ಮಾಡುತ್ತಾರೆ. ಮೂರ್ತಿರಾಯರ ವ್ಯಾಪಕ ದೃಷ್ಟಿ, ಪರಮತ ಸಹಿಷ್ಣುತೆ ಹಾಗೂ ಅಧ್ಯಯನಗಳು ಇಲ್ಲಿ ವ್ಯಕ್ತವಾಗುತ್ತದೆ. ಒಂದು ಮತದ ವ್ಯಕ್ತಿಯಾಗಿ ಅವರು ಮತ್ತೊಂದು ಮತವನ್ನು ಇಷ್ಟು ಸಹನೆಯಿಂದ ಕಾಣುವುದಕ್ಕೆ ಕಾರಣ, ಮೂರ್ತಿ

ರಾಯರು ಸ್ವತಃ ಒಂದು ಮತಕ್ಕೆ ಅಂಟಿಕೊಂಡವರಲ್ಲ. ಹಾಗೆಯೇ ವೇದ ಪ್ರಾಮಾಣ್ಯವನ್ನು ಒಪ್ಪದ ಜೈನ ಬೌದ್ಧ ಧರ್ಮಗಳ ಬಗ್ಗೆಯೂ ಅವರ ಚಿಂತನೆ ಹರಿದಿದೆ.

The Buddhists. Jains and the Charvakas (ಚಾರ್ವಾಕರು)do not admit the authority of the Vedas (4)

ಚಾರ್ವಾಕ ಮತದವರು ವೇದ ಪ್ರಮಾಣವೆಂದು ಒಪ್ಪುವುದಿಲ್ಲ. ಅವರು materialists. ಆ ಮತದ ಗ್ರಂಥಗಳು ಯಾವುವೂ ಉಳಿದು ಬಂದಿಲ್ಲ.

(ಅದೇ ಪುಟ 312)

ಎಲ್ಲಾ ಮತಗಳ ಲಕ್ಷಣಗಳನ್ನು ಒಂದೆರಡು ಮಾತುಗಳಲ್ಲಿ ಹೇಳಿ, ವ್ಯಾಪಕ ಪ್ರಮಾಣದಲ್ಲಿರುವ ವಿಗ್ರಹಾರಾಧನೆಯ ಬಗ್ಗೆ ಒಂದೂ ಧರ್ಮದ ಭಾವನಾತ್ಮಕ ಶ್ರದ್ಧೆಯನ್ನು ಹೇಳುತ್ತಾರೆ. ಈ ಭಾವನಾತ್ಮಕ ಶ್ರದ್ಧೆಯ ಪ್ರತೀಕವೇ ವಿಗ್ರಹಾರಾಧನೆ. ಇಂತಹ ಸಗುಣೋಪಾಸನೆಯನ್ನು ಮೂರ್ತಿರಾಯರೂ ಒಂದು ಕಾಲದಲ್ಲಿ ಮಾಡಿದವರೇ. ಆದರೆ ಆನಂತರ ಅವರು ಈ ಸಗುಣೋಪಾಸನೆಯನ್ನು ಕೈಬಿಟ್ಟರೂ ಅವರು ಅದನ್ನು ಖಂಡಿಸಿದವರಲ್ಲ. ಅದರ ಅಗತ್ಯವನ್ನೂ ಅವರು, ಅದರ ಮಿತಿಯಲ್ಲಿ ಮನಗಂಡವರು. ಆ ಬಗ್ಗೆ ಅದ್ವೈತದಲ್ಲಿಯೂ ವಿಗ್ರಹಾರಾಧನೆ (ಸಾಕಾರ ಉಪಾಸನೆ)ಯ ವಿರೋಧಾಭಾಸವನ್ನೂ ಅವರು ನಿರ್ವಿಕಾರ ದೃಷ್ಟಿಯಿಂದ ನೋಡುತ್ತಾರೆ:

Even to the Advaith (ಅದ್ವೈತಿನ್) the worship of a personal god is not. as I said above. forbidden. Even learned philosophers do worship a personal god as the symbols of the Infinite. There is really no contradiction in this Brahman is infinite. But the finite human mind it might appear vague and shadowy. Therefore. man needs something and tangible, as the symbol of the infinite.

ಈ ವಿಚಾರವನ್ನು ಅವರು ಇಷ್ಟು ವಿಸ್ತೃತವಾಗಿ ಬರೆದಿದ್ದಾರೆ. ಜೊತೆಗೆ ವೇದೋಪನಿಷತ್ತು ನಿಷೇಧಿಸಿದ ವಿಗ್ರಹಾರಾಧನೆಯ ವಿಚಾರ ಬೈಬಲ್ ಕೂಡಾ ನಿಷೇಧಿಸಿರುವುದನ್ನು ಅವರು ಪ್ರಾಸಂಗಿಕವಾಗಿ ಉಲ್ಲೇಖಿಸಿದ್ದಾರೆ. ಮೂರ್ತಿರಾಯರ ಧರ್ಮ ಸಮನ್ವಯ ಇಲ್ಲಿ ವ್ಯಕ್ತವಾಗಿದೆ. ಅದರಂತೆಯೇ ಅವರು "ಅಣೋರಣೀಯಾನ್ ಮಹತೋ ಮಹೀಯಾನ್" ಎಂಬ ವಾಕ್ಯವನ್ನು ಅವರು ಇಲ್ಲಿ ಅನುವಾದಿಸಿರುವುದನ್ನು ಗಮನಿಸಬಹುದು. ಇವರ ಸಂಕ್ಷಿಪ್ತ ರೂಪ ಅವರ ಚಿತ್ರಗಳು – ಪತ್ರಗಳು ರೂಪದಲ್ಲಿ ಹೀಗೆ ಇದೆ.

"ಅದ್ವೈತಕ್ಕೂ ಈ ಬಗೆಯ Personal God ನ ಪೂಜೆ ನಿಷಿದ್ಧವೇನೂ ಅಲ್ಲ. ಒಂದು ಮಟ್ಟದಲ್ಲಿ ಅದು ಅವಶ್ಯಕವೆಂದರೂ ಎನ್ನಬಹುದು. ನಾಮ ರೂಪಗಳಿಲ್ಲದ, ನೆರಳು ನೆರಳಾದ, ಅರಿವಿಗೆ ಸಿಕ್ಕದ ಯಾವುದೋ ತತ್ತ್ವವನ್ನು ಕಲ್ಪಿಸಿಕೊಂಡು ಅದರ ಮೇಲೆ ಮನಸ್ಸನ್ನು ನಿಲ್ಲಿಸುವುದು ಸಾಮಾನ್ಯ ಜನರಿಗೆ ಸಾಧ್ಯವಲ್ಲ. ಅದು ಸಾಧ್ಯ ಎನ್ನಬಲ್ಲವರಿಗೂ ಎಲ್ಲ ಕಾಲದಲ್ಲೂ ಸಾಧ್ಯವಲ್ಲ. ಆದ್ದರಿಂದ ಆ ತತ್ತ್ವದ ಪ್ರತೀಕವಾಗಿ ಏನಾದರೂ ಕಣ್ಣಿಗೆ ಕಾಣುವಂತಾದ್ದು ಬೇಕೇ ಬೇಕಾಗುತ್ತದೆ.

(ಚಿ. ಪ. ಪು 312–3)

ಹಿಂದೂ ಧರ್ಮ ಪ್ರತಿಪಾದಿಸಿದ ಚತುರ್ವಿಧ ಪುರುಷಾರ್ಥ, ಸಂತರ ಮಾನಸ ಪೂಜೆ, ಅದ್ವೈತ ತತ್-ತ್ವಂ-ಅಸಿ ಹಾಗೂ ಗೀತೆಯಲ್ಲಿ ಹೇಳಲ್ಪಟ್ಟ ಕರ್ಮಮಾರ್ಗ, ಭಕ್ತಿಮಾರ್ಗ, ಜ್ಞಾನಮಾರ್ಗಗಳನ್ನು ಅವರು ಚರ್ಚಿಸುತ್ತಾರೆ. ಅದರಲ್ಲೂ ಕರ್ಮ ಸಿದ್ಧಾಂತವನ್ನು ವಿಸ್ತಾರವಾಗಿ ವಿವರಿಸುತ್ತಾರೆ. ಡಿ.ವಿ.ಜಿ. ಯವರ 'ದೇವರು' ಎಂಬ ಕಿರುಪುಸ್ತಿಕೆಯನ್ನು 'ದೇವರು' ಎಂಬ ಪ್ರತಿಕ್ರಿಯಾತ್ಮಕವೂ, ವ್ಯಾಪಕ ಅಧ್ಯಯನಾತ್ಮಕವೂ ಆದ ವೈಚಾರಿಕ ಕೃತಿಯನ್ನು ಬರೆದಂತೆ, ಇಲ್ಲಿ ಅವರ ಪುಸ್ತಕದಲ್ಲಿ ಉಲ್ಲೇಖಿತವಾದ ಉಪನಿಷದ್ವಾಕ್ಯವನ್ನು ಉಲ್ಲೇಖಿಸುತ್ತಾರೆ.

But he is a witness rather than a jungle 'witness' in the sence that he watches the proceedings. (10)

ಡಿ.ವಿ.ಜಿ. ಯವರ 'ದೇವರು' ಪುಸ್ತಿಕೆಯಲ್ಲಿ ಹೀಗೆ ಬರೆಯುತ್ತಾರೆ

ಸಾಕ್ಷೀ = ತಾನು ಜಗತ್ತಿನ ಭಾಗವಾಗದೆ ಜಗತ್ತನ್ನು ನೋಡಿಕೊಂಡು ಮಾತ್ರ ಇರುವ ಚೈತನ್ಯ. (ಪುಟ 16)

ಮೂರ್ತಿರಾಯರು 'ದೇವರು' ಕೃತಿಯಲ್ಲಿ ದೇವರ ಅಸ್ತಿತ್ವವನ್ನು ಕುರಿತು ನಕಾರಾತ್ಮಕ ಧೋರಣೆ (ನಿಲುವು)ಯನ್ನು ತಳೆದಿದ್ದರೂ, ಈ ಲೇಖನದಲ್ಲಿ ದೇವರ ಬಗ್ಗೆ ಉಪನಿಷತ್ತು, ಶ್ರದ್ಧೆ, ಸಗುಣ-ನಿರ್ಗುಣ ಉಪಾಸನೆಗಳನ್ನು ಕುರಿತು ಬರೆದಿದ್ದಾರೆ. ಜೊತೆಗೆ ದೇವರ ಬಗ್ಗೆ ಇರುವ ವಿವಿಧ ಕಲ್ಪನೆಗಳೊಂದಿಗೆ, ಹಿಂದೂಗಳ ಜೀವನ ಮಾರ್ಗವೂ ಹೇಗೆ ಪೂರಕವಾಗಿದೆ, ಸಾಮಾಜಿಕ ವ್ಯವಸ್ಥೆಯಲ್ಲಿ ಈ ಭಾವನೆಗಳು ಹೇಗೆ ರಚನಾತ್ಮಕವಾಗಿ ಪೋಷಕವಾಗುತ್ತದೆ ಎಂಬುದನ್ನೂ ಚಿಂತನೆ ಮಾಡಿದ್ದಾರೆ. ಅವರ ಮಾನವತಾವಾದದ ದೃಷ್ಟಿಯು ಇಲ್ಲಿ ವ್ಯಕ್ತವಾಗಿದೆ.

## (7) INDIANNESS IN INDIAN LITERATURE

Indianness in Indian Literature – ಎಂಬ ಎರಡು ಇಂಗ್ಲೀಷ್ ಲೇಖನಗಳಿವೆ. ಒಂದು INDIAN LITERATURE ನಲ್ಲಿ ಪ್ರಕಟವಾದ ಹತ್ತು ಪುಟಗಳ ಲೇಖನ. ಮತ್ತೊಂದು ಅವರ ಹಸ್ತಾಕ್ಷರದಲ್ಲಿ ಇರುವ 16 ಪುಟಗಳ ಅಪ್ರಕಟಿತ ಲೇಖನ. ಇದು ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವದ ಸಂದರ್ಭದಲ್ಲಿ ಏರ್ಪಡಿಸಿದ್ದ ಚರ್ಚಾಗೋಷ್ಠಿಯಲ್ಲಿ ಅವರು ಮಾಡಿದ ಇಂಗ್ಲೀಷ್ ಭಾಷಣ. ಇದರ ಕನ್ನಡಾನುವಾದ "ನಮ್ಮ ಸಾಹಿತ್ಯದಲ್ಲಿ ಭಾರತೀಯತೆ" (ಸಾಹಿತ್ಯ ಮತ್ತು ಸತ್ಯ- ಪುಟ 89-117)

ಈ ಮೂರೂ ಲೇಖನಗಳನ್ನೂ ಪರಸ್ಪರ ತೌಲನಿಕವಾಗಿ ಅಧ್ಯಯನ ಮಾಡಿದಾಗ, ಮೂರರ ವಸ್ತು ಒಂದೇ ಆದರೂ, ಕೆಲವು ಸಾಮ್ಯಗಳು, ಕೆಲವು ಭಿನ್ನತೆಗಳು ಕಂಡು ಬರುತ್ತವೆ. ಪ್ರಕಟಿತ ಲೇಖನ ಇನ್ನುಳಿದ ಎರಡು ಲೇಖನಗಳಿಗಿಂತಲೂ ಗಾತ್ರದಲ್ಲಿ ಅತ್ಯಂತ ಚಿಕ್ಕದು. ಆದ್ದರಿಂದ ಇದರ ಮುಖ್ಯ ಭಾಗಗಳನ್ನು ಮಾತ್ರವೇ ಗಣನೆಗೆ ತೆಗೆದು ಕೊಳ್ಳಬಹುದಾಗಿದೆ. ಈ ಮೂರೂ ಲೇಖನಗಳ ಆರಂಭದಲ್ಲೇ ಈ ಭಿನ್ನಾಂತರ ವ್ಯಕ್ತವಾಗಿದೆ.

ಅಪ್ರಕಟಿತ ಲೇಖನ: Some months ago a lady said to me, in praise of a common friend, "He is a perfect English gentleman" (1)

ಪ್ರಕಟಿತ ಲೇಖನ: When we speak of a literary work as "racy of our soil, genuinely and unmistakably Indian", we intend a compliment (71).

ಕನ್ನಡ ಲೇಖನ: ಕೆಲವು ದಿನಗಳ ಹಿಂದೆ ನಮ್ಮ ಮನೆಗೆ ಆಂಗ್ಲ ಮಹನೀಯರೊಬ್ಬರು ಬಂದಿದ್ದರು. ಅವರ ಸರಳತೆ, ಸೌಹಾರ್ದಪೂರ್ಣವಾದ ಮಾತು, ಸೌಜನ್ಯ, ಎಲ್ಲವೂ ನನಗೆ ಬಹಳ ಸಂತೋಷ ಕೊಟ್ಟವು. ಅವರು ಹೊರಟುಹೋದ ಮೇಲೆ ನನ್ನ ಸೊಸೆಯ ಅಕ್ಕ-ಅವಳೂ, ಆಂಗ್ಲಳು-

ಈತ ಆಂಗ್ಲ ಸೌಜನ್ಯದ ಪರಮಾವಧಿ, ಎಂದು ಅವನನ್ನು ಹೊಗಳಿದಳು.

ಅಪ್ರಕಟಿತ ಲೇಖನದಲ್ಲಿ "A perfect.........."ಎಂಬ ವಾಕ್ಯದಲ್ಲಿರುವ A ಅಕ್ಷರವನ್ನು ಹೊಡೆದು ಹಾಕಿ ಕೆಂಪು ಮಸಿಯಲ್ಲಿ " He is a ......" ಎಂದು ತಿದ್ದುಪಡಿ ಮಾಡಿದ್ದಾರೆ. ಪ್ರಕಟಿತ ಲೇಖನದ ಆರಂಭ ಅಪ್ರಕಟಿತ ಲೇಖನದ ಎರಡನೆಯ ಪ್ಯಾರಾದಿಂದ ಅದೂ ಅದರ ಭಾಗಶಃ ವಾಕ್ಯಗಳಿಂದ. ಕನ್ನಡ ಲೇಖನದಲ್ಲಿ ಇದು ಐದನೆಯ ಪ್ಯಾರಾ.

ಅಪ್ರಕಟಿತ ಲೇಖನ, ಪ್ರಕಟಿತ ಲೇಖನ ಹಾಗೂ ಕನ್ನಡ ಲೇಖನಗಳ ನಡುವೆ ಇರುವ ಭಿನ್ನತೆಯನ್ನು ಮತ್ತೊಂದು ನಿದರ್ಶನದಿಂದ ಗುರುತಿಸಬಹುದು.

1. It was nearly sixty years ago that I first read Shakespeare's paean in honour of England (2)

2. More than six decades ago, when the British were ruling us, I read for the first time Shakespeare's paean in honour of England (71)

3. ಮೇಲೆ ಹೇಳಿದ್ದು ಕೇವಲ ಯೋಚನೆಯ ಜಾಲವಾಯಿತು ಎನ್ನಿಸಬಹುದು. ಅದನ್ನು ಕೆಲವು ಉದಾಹರಣೆಗೆ ಅನ್ವಯಿಸಿದರೆ ನನ್ನ ಅಭಿಪ್ರಾಯ ಸ್ಪಷ್ಟವಾಗಬಹುದು. ಸುಮಾರು 60ವರ್ಷಗಳ ಹಿಂದೆ ನಾನು ಷೇಕ್ಸ್‌ಪಿಯರ್‌ನ ಕಿಂಗ್ ರಿಚರ್ಡ್ II ನಾಟಕವನ್ನು ಮೊದಲ ಬಾರಿಗೆ ಓದಿದೆ. ಅದರಲ್ಲಿ ಜಾನ್ ಆಫ್ ಗಾಂಟ್‌ನ ಬಾಯಿಂದ ಕವಿ ಭವ್ಯವಾದ ಗೀತೆ (ಅದು ನಳ ರಗಳೆಯಲ್ಲಿದ್ದರೂ ಅಲ್ಲಿ ಕಾಣುವ ಮನೋಧರ್ಮ ಗೀತೆಯದು) ಒಂದನ್ನು ಹೊರಡಿಸಿದ್ದಾನೆ. (ಪುಟ 93)

ಕನ್ನಡ ಲೇಖನದಲ್ಲಿ ಅವರು ಉಲ್ಲೇಖಿಸಿದ ಸರ್ ವಾಲ್ಟರ್ ಸ್ಕಾಟ್‌ನ ದೇಶಭಕ್ತಿ ಗೀತೆಯ ಮೂಲ ಭಾಗ ಹಾಗೂ ಅದರ ವಿವರಣೆ ಎರಡರಲ್ಲೂ ಕಾಣುವುದಿಲ್ಲ. ಮೂರ್ತಿರಾಯರು ಭಾರತೀಯತೆಯ ಲಕ್ಷಣಗಳನ್ನು ಪ್ರಾಚೀನ ದಾರ್ಶನಿಕ ಗ್ರಂಥಗಳ ಪ್ರಭಾವವನ್ನೇ ಹೆಚ್ಚಾಗಿ ಪರಿಗಣಿಸಿದ್ದಾರೆ. ಇದಕ್ಕೆ ಪೂರಕವಾಗಿ ಅವರು ಗ್ರೀಕ್ ಸಾಹಿತ್ಯದಿಂದಲೂ ಉದಾಹರಣೆಗಳನ್ನು ನೀಡುತ್ತಾರೆ. ಇಂಗ್ಲೀಷ್ ಸಾಹಿತ್ಯವನ್ನು ಆಧರಿಸಿ, ಅಲ್ಲಿಯ ಸಾಹಿತಿಗಳ-ಜನಾಂಗದ-ಮನೋಭಾವ ಎಂತಹದಿದ್ದಿತೆಂದು ಅವರು ಗುರುತಿಸುತ್ತಾರೆ. ಇಂಗ್ಲೀಷ್‌ರ ದೇಶಪ್ರೇಮ, ಸಾಹಸ ಪ್ರಿಯತೆ, ಭಾರತೀಯರ ಆಸ್ತಿಕತೆ-ನಾಸ್ತಿಕತೆ, ಗ್ರೀಕರ ವಿಧಿವಾದ-ಇತ್ಯಾದಿಗಳನ್ನೆಲ್ಲಾ ಅವರು ಸೋದಾಹರಣವಾಗಿ ನಿರೂಪಿಸುತ್ತಾರೆ. ಜೊತೆಗೆ ಭಾರತೀಯತೆಯ ಹತ್ತಿರ ಬರುವ, ಸಿಡಿದು ದೂರ ನಿಲ್ಲುವ

ಇನ್ನಿತರ ಅಂಶಗಳನ್ನು ಅವರು ವಿವರಿಸುತ್ತಾರೆ. ಷೇಕ್ಸ್‌ಪಿಯರ್‌ನ ಇಂಗ್ಲೆಂಡ್-ಪಂಪನ ಬನವಾಸಿ, ಭಾರತೀಯರ ಲೌಕಿಕತೆ-ಪಾರಲೌಕಿಕತೆ, ಭಾರತೀಯರ ಮತ್ತು ಗ್ರೀಕರು ಕಂಡ ಬದುಕಿನ ನಿಸ್ಸಾರತೆ, ಭಾರತೀಯ-ಗ್ರೀಕ್ ದೇವತೆಗಳು, ಭಾರತೀಯರ ಮುಗ್ಧ-ಪ್ರೌಢ ಭಕ್ತಿ, ಭಾರತೀಯ-ಪಾಶ್ಚಾತ್ಯರ ಮೇಲೆ ಉಂಟಾದ ಸಾಂಸ್ಕೃತಿಕ ಪ್ರಭಾವ-ಇವೆಲ್ಲವನ್ನು ಅವರು ಸೋದಾಹರಣವಾಗಿ ಹೇಳುತ್ತಾರೆ. ಕನ್ನಡದ ಆಧುನಿಕ ಸಾಹಿತ್ಯ ಕೃತಿಗಳಲ್ಲಿಯೂ ಇಂತಹ ಅಂಶ ಹೇಗೆ ಬಿಂಬಿತವಾಗಿದೆ ಎಂದು ಅವರು ಕಾವ್ಯಭಾಗಗಳನ್ನು ಉದ್ಧರಿಸುತ್ತಾರೆ. ಇಲ್ಲಿ ಮೂರ್ತಿರಾಯರು ಸಂಕೀರ್ಣವಾದ 'ಭಾರತೀಯತೆ' ಶಬ್ದಕ್ಕೆ ಒಂದು ವ್ಯಾಖ್ಯಾನದ ಚೌಕಟ್ಟನ್ನು ತೊಡಿಸಿದ್ದಾರೆ. ಪ್ರಪಂಚವ್ಯಾಪಿ, ಪ್ರತಿಯೊಂದು ಸಾಹಿತ್ಯದ ಮೇಲೆಯೂ ಅಲ್ಲಿಯ ಮೂಲ ಸಂಸ್ಕೃತಿ ಹೇಗೆ ಪ್ರಭಾವ ಬೀರುತ್ತದೆ ಎಂಬುದನ್ನು ಅವರು ಚಿಂತನೆ ಮಾಡುತ್ತಾರೆ. ಅವರ ದೃಷ್ಟಿಯಲ್ಲಿ ಭಾರತೀಯತೆಯ ವಿಶಿಷ್ಟ ಲಕ್ಷಣ ಇಲ್ಲಿಯ ಮಣ್ಣಿನ ವಾಸನೆ. ಅವರು ಇಡೀ ಲೇಖನದ ಸಾರವನ್ನು ಈ ಕೊನೆಯ ಪ್ಯಾರಾದಲ್ಲಿ ಹೀಗೆ ಕ್ರೋಢೀಕರಿಸಿದ್ದಾರೆ:

1. phrases like 'Bhishma pratignya'. 'Sugrivagnya'. Himalayan blunder are in common use. More than any other feature, it is this cultural idiom that our literature its Indian flavour. (16)

2. phrases like 'Bhishma Pratigna' 'Sugrivagna' are in common use. More than anything else, it is this cultural idiom that gives our literature its Indian flavour. (80)

3. ಎಲ್ಲರ ಕಿವಿಗೂ ಬಿದ್ದಿರುವ ಸರಳ ರೀತಿಯ ಕೆಲವು ಉದಾಹರಣೆಗಳನ್ನು ಇಲ್ಲಿ ಕೊಡಬಹುದು. ಸರ್ವವ್ಯಾಪಿಯಾದ ಭಾವವನ್ನು ಬಣ್ಣಿಸಬೇಕಾದರೆ, ಪ್ರಣವ ಬ್ರಹ್ಮಾಂಡವನ್ನು ಆವರಿಸಿದಂತೆ ಎನ್ನುತ್ತೇವೆ. ದಿನಾ ಬಂದು ನಮ್ಮನ್ನು ಯಾವುದಕ್ಕಾದರೂ ಕಾಡುವವನು 'ನಕ್ಷತ್ರಿಕ'ನಾಗುತ್ತಾನೆ. ದೀರ್ಘವಾದ ಪ್ರಸಂಗವೆಲ್ಲ ರಾಮಾಯಣ ವಾಗುತ್ತದೆ. ನಾವು ಮಾಡುವ ಪ್ರತಿಜ್ಞೆ ಭೀಷ್ಮ ಪ್ರತಿಜ್ಞೆ, ಕಟ್ಟುನಿಟ್ಟಾದ ಆಜ್ಞೆ 'ಸುಗ್ರೀವಾಜ್ಞೆ',ಕೊನೆಗೆ ನಾವು ಕುಡಿಯುವ ನೀರು 'ಗಂಗಾಮೃತ.' (ಪುಟ 117)

ಈ ಲೇಖನದ ಕೊನೆಗೆ ಅಡಿ ಟಿಪ್ಪಣಿಯಲ್ಲಿ ಪಾಶ್ಚಾತ್ಯ ಸಾಹಿತ್ಯದಲ್ಲಿ ಕಂಡು ಬರುವ ಸಂವಾದಿ ಪದಪುಂಜಗಳನ್ನು ನೀಡಿದ್ದಾರೆ. ಇದು ಈ ಎರಡೂ ಇಂಗ್ಲೀಷ್ ಲೇಖನಗಳಲ್ಲಿ ಕಂಡು ಬರುವುದಿಲ್ಲ. ಭಾರತೀಯತೆಯನ್ನು ಗುರುತಿಸುವ ಸಂದರ್ಭದಲ್ಲಿ ಮಹಾಭಾರತ, ಉಪನಿಷತ್ತು, ಜೈನದರ್ಶನ, ಭಗವದ್ಗೀತೆ-ಮುಂತಾದವುಗಳ ಪ್ರಭಾವವನ್ನು ಅವರು ವಿವೇಚನೆ ಮಾಡಿದ್ದಾರೆ. ಭಾರತೀಯರು ಹಾಗೂ ಗ್ರೀಕರು ದೃಢವಾಗಿ ನಂಬುವ ಪುನರ್ಜನ್ಮ ಹಾಗೂ ವಿಧಿವಾದಗಳು ಎಲ್ಲೆಲ್ಲಿ ವ್ಯಕ್ತವಾಗಿದೆ ಎಂಬುದನ್ನು ಅವರು ಉಲ್ಲೇಖಿಸಿದ್ದಾರೆ. ಕಾಳಿದಾಸ, ಈಸ್ಕಿಲಸ್, ಷೇಕ್ಸ್‌ಪಿಯರ್ ಕೃತಿಗಳಲ್ಲಿ ಇಂತಹ ದೇಶೀಯತೆ ಹೇಗೆ ಬಿಂಬಿತವಾಗಿದೆ ಎಂಬುದನ್ನು ಅವರು ಈ ಲೇಖನದಲ್ಲಿ ತಂದಿದ್ದಾರೆ. ಈ ಸಮನ್ವಯ ಉಲ್ಲೇಖನಾರ್ಹ.

ಇಲ್ಲಿ ಗಮನಾರ್ಹ ವಿಷಯವಿದು: ನವೋದಯ ಕಾಲದ ಲೇಖಕರ ಬಂಡಾಯ ಪ್ರವೃತ್ತಿಯನ್ನು ಅವರು ಗುರುತಿಸಿದ್ದಾರೆ. ಈ ಬಗ್ಗೆ ಅವರು ಹೀಗೆ ಬರೆಯುತ್ತಾರೆ.

The questioning spirit evident in Indian literature of this century has generally been taken to be the result of our contact with the literature and philosophy of the west.

It can, with justice, be argued that we have only to look into our own past to find rebellion against accepted tradition. But none the less it is true that while we were aware that rebellion is also part of our tradition, that awareness was accentuated and more dynamic by contact with recent Western thought. (76)

ಈ ಶತಮಾನದ ಭಾರತೀಯ ಸಾಹಿತ್ಯದಲ್ಲಿ ಹೊಸದೊಂದು ಪ್ರಶ್ನ ಮನೋವೃತ್ತಿ, ಸ್ವತಂತ್ರವಾಗಿ ವಿಚಾರ ಮಾಡುವ ಪ್ರವೃತ್ತಿ ಕಂಡು ಬಂದಂತಿದೆ. "ಇದು ಭಾರತೀಯರಿಗೆ ಸಹಜವಾದದ್ದಲ್ಲ, ನಾವು ಸ್ವಭಾವತಃ ಸಂಪ್ರದಾಯ ಶರಣರು. ಹಿಂದಿನವರು ನಂಬಿದ್ದನ್ನು ನಾವೂ ನಂಬಬೇಕೆ? ಇದು ವೇದೋಕ್ತವಾದದ್ದು ಎಂದ ಮಾತ್ರಕ್ಕೆ ವಾದ ಮುಗಿಯಿತೆ? ಎಂದು ಪ್ರಶ್ನೆ ಹಾಕಿ, ನನ್ನ ಮನಸ್ಸಿಗೆ ಹೀಗೆ ತೋರುತ್ತೆ, ಹಾಗಲ್ಲ ಎನ್ನುವ ಮನೋವೃತ್ತಿ ಪಾಶ್ಚಾತ್ಯರಿಂದ ಬಂದದ್ದು" ಎಂಬ ಮಾತು ಆಗಾಗ ಕೇಳಿ ಬಂದಿದೆ. ಪಾಶ್ಚಾತ್ಯರಲ್ಲೂ ಸಂಪ್ರದಾಯ ಶರಣತೆ ಇತ್ತು, ಅದನ್ನು ಹಿಂದೂಡಿ ಈ ಪ್ರಶ್ನೆ ಮನೋವೃತ್ತಿ ಹೆಚ್ಚಿದ್ದು ಇತ್ತೀಚೆಗೆ. ಒಂದಾನೊಂದು ಕಾಲದಲ್ಲಿ (ಅವರ ಸಾಕ್ರಟೀಸನಲ್ಲಿದ್ದಂತೆ) ನಮ್ಮಲ್ಲೂ ಅದು ಇದ್ದದ್ದೇ. (ಪುಟ 105)

ವಾದ-ಪ್ರತಿವಾದ, ಪ್ರಶ್ನೋತ್ತರ ಶೈಲಿಯ ಈ ನಿರೂಪಣೆ ಯಾವ ಆಕ್ಷೇಪಕ್ಕೂ ಅವಕಾಶ ಸಿಗದಂತೆ ಇದೆ. ಕನ್ನಡ ಲೇಖನದಲ್ಲಿ ಇದರ ಮುಂದುವರಿದ ಭಾಗ ಈ ಸೈದ್ಧಾಂತಿಕ ಹೇಳಿಕೆಗೆ ಒಂದು ಉದಾಹರಣೆಯಾಗಿದೆ. ಉಪನಿಷತ್ತಿನ ಒಂದು ನಿದರ್ಶನ ನೀಡಿದ್ದಾರೆ. ಡಾ. ಎಸ್. ರಾಧಾಕೃಷ್ಣನ್‌ರವರ ಶೋಧನಾ ಸಮಗ್ರತೆಯನ್ನು ಒಂದು ದೋಷವೆಂದು ಸಾಧಿಸಲು ಅವರು ಪೂರಕವಾಗಿ ತೆಗೆದುಕೊಂಡ ಉಪನಿಷತ್ತಿನ ಭಾಗವನ್ನು ಇಲ್ಲಿ ಪ್ರಾಚೀನ ಭಾರತೀಯರು ಪ್ರೋತ್ಸಾಹಿಸಿದ ಪ್ರಶ್ನಕ ಮನೋವೃತ್ತಿಯನ್ನು ಸಾಧಿಸಲೂ ಬಳಸಿಕೊಂಡಿದ್ದಾರೆ.

## (8) THE DRAMA AT THE CROSS WAYS

The Drama at the Cross Ways ಎಂಬ ಇಂಗ್ಲೀಷ್ ಲೇಖನ 1954 ರಲ್ಲಿ ಬರೆದ "ನಮ್ಮ ನಾಟಕ ಹಿಡಿದ ದಾರಿ" (ವಿಮರ್ಶಾತ್ಮಕ ಪ್ರಬಂಧಗಳು ಪುಟ 26–45) ಎಂಬ ಕನ್ನಡ ಲೇಖನದ ಇಂಗ್ಲೀಷ್ ಅನುವಾದ. ಮೂರ್ತಿರಾಯರು ಸಾಹಿತ್ಯದಂತೆ ಸಂಗೀತದಲ್ಲಿಯೂ ಪರಿಣತಿಯನ್ನು ಪಡೆದವರು. ಶ್ರವ್ಯ ಕಾವ್ಯಗಳಂತೆ ದೃಶ್ಯ ಮಾಧ್ಯಮಗಳಾದ ಅಂದಿನ ಅಂದರೆ ಮೂರ್ತಿರಾಯರ ಕಾಲದ ಸುಪ್ರಸಿದ್ಧ ನಾಟಕಗಳನ್ನು ನೋಡಿದವರು. ಸ್ವತಃ ನಾಟಕ ಕರ್ತೃಗಳಾದ ಮೂರ್ತಿರಾಯರಿಗೆ ನಾಟಕಗಳನ್ನು ನೋಡುವುದು ಕೇವಲ ಮನೋರಂಜನೆಯಷ್ಟೆ ಆಗಿರಲಿಲ್ಲ. ಅವು ನಾಟಕದ ನಿಯಮಗಳ ಚೌಕಟ್ಟಿನಲ್ಲಿದೆಯೇ, ಸಾಮಾಜಿಕ ದೃಷ್ಟಿಯಿಂದ ನಾಟಕಗಳ ಪಾತ್ರ, ನಟರ ನಟನಾ

ಸಾಮರ್ಥ್ಯ ಹಾಗೂ ಪ್ರತಿಭೆ, ಇತ್ಯಾದಿಗಳನ್ನು ಈ ಲೇಖನದಲ್ಲಿ ಅವರು ಚಿಂತನೆ ಮಾಡುತ್ತಾರೆ. ಜೊತೆಗೆ ನಾಟಕರಂಗದ ಅವನತಿಗೆ ಪೂರಕವಾದ ಪ್ರತಿಬಂಧಕಾಂಶಗಳು ಕೂಡಾ ಇಲ್ಲಿ ವಿಶ್ಲೇಷಣೆಗೆ ಒಳಪಟ್ಟಿದೆ.

ಇಲ್ಲಿಯೂ ಸಹ ಹಿಂದಿನ ಲೇಖನಗಳಂತೆ ಕನ್ನಡ ಲೇಖನಕ್ಕಿಂತ ಇಂಗ್ಲೀಷ್ ಲೇಖನ ಸಂಕ್ಷೇಪ ಲೇಖನವಾಗಿದೆ. ಈ ಲೇಖನದ ಆರಂಭವೇ ತುಲನಾರ್ಹ.

The drama in India seems to have fallen on evil days. The Theatrical companies which flourished on the early years of this century have been driven out of the field (1)

ಈ ಶತಮಾನದ ಆದಿಭಾಗದಲ್ಲಿ ಕರ್ನಾಟಕದ ಅನೇಕ ಕಡೆಗಳಲ್ಲಿ ಹುಟ್ಟಿ, ಬೆಳೆಯುತ್ತಿದ್ದ ನಾಟಕ ಕಂಪನಿಗಳು ಈಗ ಅದೃಶ್ಯವಾಗಿವೆ, ಇಲ್ಲವೇ ಹೇಗೋ ಕಷ್ಟದಿಂದ ನೂಕುತ್ತಿವೆ. (ಪುಟ 26)

ಕನ್ನಡದಲ್ಲಿ ಅವರು ಉಲ್ಲೇಖಿಸಿದ ಹಲವು ನಿದರ್ಶನಗಳು ಇಂಗ್ಲೀಷ್ ಲೇಖನದಲ್ಲಿ ಕಂಡು ಬರುವುದಿಲ್ಲ. ಆದ್ದರಿಂದ ಅವರ ಸೈದ್ಧಾಂತಿಕ ನಿಲುವು ಕನ್ನಡದಲ್ಲಿ ವಿಳಂಬವಾಗಿ ಬಂದರೆ, ಲೇಖನದಲ್ಲಿ ಶೀಘ್ರವಾಗಿ ಬರುತ್ತದೆ. ಈ ಮೇಲೆ ಉಲ್ಲೇಖಿಸಿದ ವಾಕ್ಯ ಮುಗಿದ ತಕ್ಷಣವೇ ಮುಂದಿನ ವಾಕ್ಯ ಹೀಗಿದೆ.

It is usual to father the blame on the films and say that they have vulgerised the taste of the public and that consequently we are now satisfied with a kind of dope instead of drama. I hold no brief for the film. (1)

ಮೂರ್ತಿರಾಯರ ಈ ನಿಲುವು ಕನ್ನಡ ಲೇಖನದಲ್ಲಿ ಭಿನ್ನ ಶೈಲಿಯಲ್ಲಿ, ಆರಂಭದಲ್ಲಿ ಹಲವು ನಿದರ್ಶನಗಳು ಸೂಚಿಸಲ್ಪಟ್ಟು ನಂತರ ಬಂದಿದೆ. ಅದರ ಕನ್ನಡ ರೂಪ ಹೀಗಿದೆ :

ಚಲನಚಿತ್ರದ ಮೇಲೆ ಗೂಬೆ ಕೂರಿಸುವುದು ಈಗ ಸರ್ವಸಾಧಾರಣವಾಗಿ ಹೋಗಿದೆ. ನಾನೇನೂ ಅದರ ಪರವಾಗಿ ವಕೀಲಿ ಹಿಡಿದು ನಿಂತಿಲ್ಲ. - ಅದರ ಪಾಪ ಅದಕ್ಕೆ.

(ಪುಟ 26–27)

ಕನ್ನಡ ಲೇಖನದಲ್ಲಿ ಉಲ್ಲೇಖಿಸದೆ ಇರುವ ಕೆಲವು ವಾಕ್ಯಗಳು-ಅಭಿಪ್ರಾಯಗಳು-ಇಂಗ್ಲೀಷ್ ಲೇಖನದಲ್ಲಿವೆ. ನಿದರ್ಶನಗಳು.

Friend and the new psychology were still far away. the play writers did not try to put any new line in the old bottles (1)

The theatre itself. even in big cities. was a ramshackel affair with a crazy roof of thatch (2)

Thus for the Devil's Advocate (2)

ಕನ್ನಡ ಹಾಗೂ ಇಂಗ್ಲೀಷ್ ಲೇಖನಗಳ ಕೆಲವು ಭಾಗಗಳ ಧ್ವನಿಯಲ್ಲಿ ಸಾಮ್ಯತೆ ಇದ್ದರೂ, ವಿವರಣೆಯಲ್ಲಿ ಸಣ್ಣ ಪುಟ್ಟ ಅಂತರಗಳನ್ನು ಗಮನಿಸಬಹುದು. ಮಾದರಿಗಳು

But the strange thing was that in spite of these short comings the theatre was instinct with life, and hundreds of people, drawn from all classes, flocked to it.

ಇದಿಷ್ಟು ಪೂರ್ವಪಕ್ಷ. ಇದನ್ನೆಲ್ಲಾ ಒಪ್ಪದವರೂ ಒಂದು ಅಂಶವನ್ನು ಮಾತ್ರ ಮರೆಯುವಂತಿಲ್ಲ. ಇಷ್ಟೆಲ್ಲಾ ಕುಂದುಕೊರತೆಗಳನ್ನುಳ್ಳ ಈ ರಂಗಭೂಮಿಯಲ್ಲಿ ಜೀವಕಳೆ ತಾಂಡವವಾಡುತ್ತಿತ್ತು.

ಸ್ಕೂಲು ಕಾಲೇಜುಗಳಲ್ಲಿ ಉಚ್ಚಶಿಕ್ಷಣ ಪಡೆದವರು,ಹಳೆಯ ಕಾಲದ ಪಂಡಿತರು ಸಂತೆಪೇಟೆಯ ಸಾಹುಕಾರರು, ಜಟಕಾಗಾಡಿಯವರು ಸಮಾಜದ ಎಲ್ಲಾ ವರ್ಗದವರಿಗೂ ನಾಟಕವೆಂದರೆ ಉತ್ಸಾಹ.

In our modern social drama, have we not been stressing the surface manifestations rather than the impulses beneath them? Have we really come to grips with human nature and tried to explore the strange by ways and alleys of the heart? The social reform play seems to be digging its own grave even while it appears to be most successful. If it is successful the reform is affected and then the play ceases to interest to us (7)

ಇದನ್ನು ಬಿಟ್ಟು ಕೇವಲ ಆಧುನಿಕ ಸಮಾಜದ ಹೊರಮೈಯ ಚಿತ್ರಣಕ್ಕೂ ಸಮಾಜ ಸುಧಾರಣೆಗೂ ಹೊರಟರೆ ನಾವು ಒಂದು ಘಳಿಗೆಯ ಮನರಂಜನೆಯನ್ನೇನೋ ಸಾಧಿಸಬಹುದು–ಆ ಮನೋರಂಜನೆಯನ್ನು ನಾವು ತಿರಸ್ಕರಿಸಬೇಕಾದ್ದಿಲ್ಲ. ಆದರೆ ಅಷ್ಟರಲ್ಲೇ ತೃಪ್ತರಾದರೆ ನಮ್ಮ ನಾಟಕ ಶಕ್ತಿ ಹೀನವಾಗುತ್ತದೆ. ಆದ್ದರಿಂದ ಸಮಾಜ ಸುಧಾರಣೆಯ ಉದ್ದೇಶವೂ ನೆರವೇರುವುದಿಲ್ಲ. (ಪುಟ 44)

CHARLES LAMB ON SOME OF THE OLD ACTS ON THE ARTIFICIAL COMEDY OF THE LAST CENTURY ಎಂಬ ಪ್ರಬಂಧಗಳಿಂದ ಪ್ರೇರಣೆ.

# ಅಧ್ಯಾಯ – 10

# ವೈಚಾರಿಕ ದೇವರು

## 10.1 ದೇವರು

ಮೂರ್ತಿರಾಯರ ಇತ್ತೀಚಿನ (1990) ಪುಸ್ತಕವಾದ "ದೇವರು" ಕೃತಿಗೆ 1992ರ ಪಂಪ ಪ್ರಶಸ್ತಿ ಲಭಿಸಿದೆ. ಈ ಕೃತಿಯನ್ನು ಕುರಿತು ಮೂರ್ತಿರಾಯರು ನಾಲ್ಕು ಪುಟಗಳ ದೀರ್ಘವಾದ ಮುನ್ನುಡಿ ಬರೆದಿದ್ದಾರೆ. ಅವರ ಯಾವುದೇ ಕೃತಿಗೂ ಇಷ್ಟು ದೀರ್ಘವಾದ ಮುನ್ನುಡಿಯನ್ನು ಅವರು ಬರೆದಿಲ್ಲ. ಡಾ. ಡಿ.ವಿ.ಜಿ ಯವರ "ದೇವರು" ಎಂಬ ಕೃತಿಗೆ ಪ್ರತಿಕ್ರಿಯೆಯಾಗಿ ಬರೆದ ಈ ಕೃತಿಯಲ್ಲಿ ಹದಿನೈದು ಅಧ್ಯಾಯಗಳು. ಇವುಗಳಲ್ಲಿ ದೇವರ ಅಸ್ತಿತ್ವದ ಉಗಮದಿಂದ ತೊಡಗಿ ದೈವತ್ವವನ್ನು ಕುರಿತ ಹಲವು ದೇವರನ್ನು ಕುರಿತು ವಿಶ್ಲೇಷಣಾತ್ಮಕವಾದ ಹಾಗೂ ಪ್ರಶ್ನಾರ್ಹವೆನಿಸಿದ ವಿಷಯಗಳಿವೆ.

ಡಾ. ಡಿ.ವಿ.ಜಿ.ಯವರು ಬರೆದ 'ದೇವರು' ಒಂದು ಸಕಾರಾತ್ಮಕ ಕೃತಿ. ದೇವರ ಅಸ್ತಿತ್ವವನ್ನು ಪ್ರತಿಪಾದಿಸುವ ಒಂದು ಧನಾತ್ಮಕ ವಿಶ್ಲೇಷಣೆ. ಉಪನಿಷತ್ತುಗಳ ವಾಕ್ಯಗಳ ಆಧಾರದ ಮೇಲೆ ಅವರು ದೇವರ ದೈವತ್ವದ ಲಕ್ಷಣಗಳನ್ನು ನಿರೂಪಿಸುವ ಒಂದು ಕಿರುಪುಸ್ತಿಕೆ. ಮೂರ್ತಿರಾಯರ ಕೃತಿ 182 ಪುಟಗಳ ವ್ಯಾಪ್ತಿಯಲ್ಲಿ ಬರೆಯಲಾಗಿರುವ ಕೃತಿ. ದೈವದ ನಿರಾಕರಣ, ಹಲವು ದೇವರುಗಳ ಹಿನ್ನೆಲೆಗಳನ್ನು ವೈಚಾರಿಕತೆಯ ಆಧಾರದ ಮೇಲೆ, ವಾಸ್ತವಿಕತೆಯ ನೆಲೆಗಟ್ಟಿನ ಮೇಲೆ ಸ್ಥಾಪಿಸುವ ಪ್ರಯತ್ನವನ್ನು ಇಲ್ಲಿ ಮಾಡಿದ್ದಾರೆ. ಉಪನಿಷತ್ತು, ಇಂಗ್ಲೀಷ್ ಸಾಹಿತ್ಯ, ಗ್ರೀಕ್ ದೇಶದ ದೈವತ್ವದ ಕಲ್ಪನೆಗಳು, ದಾರ್ಶನಿಕರ, ವಿಜ್ಞಾನಿಗಳ ಹೇಳಿಕೆಗಳು, ಮುಂತಾದವುಗಳ ನೆರವಿನಿಂದ ಮೂರ್ತಿರಾಯರು ತಮ್ಮ ವಾದವನ್ನು ಪುಷ್ಟೀಕರಿಸುತ್ತಾರೆ. ಅಲ್ಲಲ್ಲಿ ಭಾರತದ ಹಾಗೂ ಗ್ರೀಕ್ ದೇವತೆಗಳ ಸಮನ್ವಯ ಮಾಡುತ್ತಾರೆ.

ಈ ಕೃತಿಯನ್ನು ರಚಿಸಲು ಅವರಿಗೆ ಪ್ರೇರಣೆ ದೊರೆತ ಸಂದರ್ಭವನ್ನು ಅವರು ಹೀಗೆ ಬರೆಯುತ್ತಾರೆ.

"ಆ ಪುಸ್ತಕದ (ಡಾ. ಡಿ.ವಿ.ಜಿ ಯವರ 'ದೇವರು') ಕಡೆಗೆ ನನ್ನ ಗಮನವನ್ನು ಸೆಳೆದವರು ನನ್ನ ಸ್ನೇಹಿತ ಶ್ರೀ ಡಿ.ವಿ.ಕೆ. ಮೂರ್ತಿಯವರು. ನಮ್ಮಿಬ್ಬರಿಗೂ ಗುಂಡಪ್ಪನವರೆಂದರೆ ಅಪಾರ ಗೌರವ. ಅವರು ನಮಗೆ ಗುರು ಸಮಾನರು. ಅವರೂ ಮೂರ್ತಿಯವರಿಗೆ ಆ ಪುಸ್ತಕದ ವಿಚಾರಸರಣಿ ಸರಿ ಎನ್ನಿಸಲಿಲ್ಲ. ಅವರ ಪ್ರತಿಯನ್ನು

ನನಗೆ ಕೊಟ್ಟು, "ಇವನ್ನು ಓದಿ ಗುಂಡಪ್ಪನವರ ವಾದ ನಿಮಗೆ ಹೇಗೆ ತೋರುತ್ತದೆ? ಹೇಳಿ, ಸಾಧ್ಯವಾದರೆ ನಿಮ್ಮ ಅನಿಸಿಕೆಗಳನ್ನು ಕಾಣಿಸಿ ಒಂದು ಪುಸ್ತಕವನ್ನೇ ಬರೆಯಿರಿ, ನಾವು ಪ್ರಕಟಿಸುತ್ತೇವೆ" ಎಂದರು.

ಹೀಗಾಗಿ ಮೂರ್ತಿರಾಯರ ಈ ಕೃತಿ ಒಂದು ಪ್ರತಿಕ್ರಿಯಾತ್ಮಕ ಧೋರಣೆ. ಮೂರ್ತಿರಾಯರ ಈ ಕೃತಿಯ ವೈಶಿಷ್ಟ್ಯವೆಂದರೆ, ದೇವರ ಅಸ್ತಿತ್ವವನ್ನು ಅವರು ಸಾರಾಸಗಟಾಗಿ ತಿರಸ್ಕರಿಸುವುದಿಲ್ಲ. ಹಾಗೆಂದು ಭಾವುಕರಾಗಿ ದೈವದ ಅಸ್ತಿತ್ವವನ್ನು ಪ್ರತಿಪಾದಿಸುವುದೂ ಇಲ್ಲ. ಆದರೆ ದೈವೀಕತೆಯ ಅಸ್ತಿತ್ವಕ್ಕೆ, ಉಗಮಕ್ಕೆ ಮೂಲ ಕಾರಣವೆನಿಸಿದ ಮಾನವನ ವಿಸ್ಮಯವನ್ನು ಗುರುತಿಸುತ್ತಾರೆ. ಅಂದಿನಿಂದಲೂ ದೇವರ ಬಗ್ಗೆ ನಡೆದು ಬಂದ, ಬೆಳೆದುಬಂದ ಕಥೆಗಳನ್ನು ಪ್ರಾತಿನಿಧಿಕವಾಗಿ ಆರಿಸಿಕೊಂಡು ಅವುಗಳಲ್ಲಿ ಹುದುಗಿರಬಹುದಾದ ಅಸಂಗತತೆಗಳನ್ನು ನಿರಾಕರಿಸುತ್ತಾ ಹೋಗುತ್ತಾರೆ. ಇವುಗಳಿಗೆ ಸಮಾನವಾದ ಇತರ ಗ್ರಂಥಗಳಿಂದಲೂ ಕೆಲವು ಕಥೆಗಳನ್ನು ಉದ್ಧರಿಸಿ ಅಲ್ಲಿಯೂ ಕಾಣಬರುವ ಸಾದೃಶ್ಯಗಳನ್ನು ಉಲ್ಲೇಖಿಸುತ್ತಾರೆ.

ಮೂರ್ತಿರಾಯರು ಈ ಪುಸ್ತಕವನ್ನು ಬರೆಯಲು ಮೊದಲ ಕಾರಣ ಈ ಮೇಲೆ ಉಲ್ಲೇಖಿಸಲಾಗಿರುವ ಪ್ರೇರಣೆ ಮೊದಲನೆಯದು. ಅನಂತರ ಅವರದೇ ಆದ ಸ್ವಂತ ಕಾರಣ. ಇನ್ನೂ ಕೆಲವು ಪ್ರಮುಖವೂ, ಪ್ರಾತಿನಿಧಿಕವೂ ಆಗಿರುವ ಸ್ವಯಂ ಪ್ರೇರಿತ ಕಾರಣಗಳು ಇವು, "ಎಲ್ಲ ದೇವರು-ಮತಗಳನ್ನು ಕುರಿತ ಸಮಸ್ಯೆಗಳನ್ನು ನಾನು ವೈಚಾರಿಕ ದೃಷ್ಟಿಯಿಂದ ಪರಿಶೀಲಿಸಲು ಹೊರಟಿದ್ದೇನೆಯೇ ಹೊರತು ಹೀಯಾಳಿಸುವ ಉದ್ದೇಶದಿಂದಲ್ಲ.

ಈಗ ನಾವು ಮಾಡಬಹುದಾದ ಕೆಲಸ ಇದು, ಬೇರೆ ಬೇರೆ ದೇಶಗಳ, ಬೇರೆ ಬೇರೆ ಕಾಲಗಳ ಮಾನವರು ಯಾವುದನ್ನು ದೇವರು ಎಂದು ಭಾವಿಸುತ್ತ ಬಂದಿದ್ದಾರೆ? ಆ ದೇವರುಗಳ ಸ್ವರೂಪಗಳೇನು? ಸಾಧ್ಯವಾದ ಮಟ್ಟಿಗೆ ಅದನ್ನು ತಿಳಿದುಕೊಳ್ಳೋಣ. ಅನಂತರ, ನಾವು ಪಡೆದ ತಿಳುವಳಿಕೆಯ ಆಧಾರದ ಮೇಲೆ ದೇವರ ಸಾಮಾನ್ಯ ಸ್ವರೂಪವನ್ನು ತಿಳಿಯುವ ಪ್ರಯತ್ನ ಮಾಡೋಣ." (2–3)

ಇಲ್ಲಿ ಮೂರ್ತಿರಾಯರ ಕಲ್ಪನೆಯ ಒಂದು ದೇವರು ಇದೆ. ಆದ್ದರಿಂದ ಅವರ ವೈಚಾರಿಕ ವಾದಕ್ಕೆ ಎರಡು ಮಗ್ಗಲುಗಳಿವೆ. ಮೊದಲನೆಯದು ಬೇರೆ ಬೇರೆ ದೇಶ ಕಾಲಗಳಲ್ಲಿ ದೈವತ್ವದ ಕಲ್ಪನೆ. ಎರಡನೆಯದು ದೈವತ್ವದ ಲಕ್ಷಣವನ್ನು ಸ್ಥಾಪಿಸುವ ಪ್ರಯತ್ನ. ದೈವತ್ವದ ಕಲ್ಪನೆಯಿಂದಾಗಿ ಮಾನವ ತನ್ನ ವೈಚಾರಿಕತೆಯನ್ನು ಕಳೆದು ಕೊಳ್ಳುತ್ತಿದ್ದಾನೆ. ಚಿಂತನದ ಸ್ವಾತಂತ್ರ್ಯ ಸಾಮರ್ಥ್ಯಗಳನ್ನು ಕಳೆದುಕೊಳ್ಳುತ್ತಿದ್ದಾನೆ ಎಂಬುದನ್ನು ಅವರು ಕಂಡ, ಕೇಳಿದ ಘಟನೆಗಳನ್ನು ಆಧರಿಸಿ ಪ್ರತಿಪಾದಿಸುತ್ತಾರೆ. ಪ್ರಾತಿನಿಧಿಕವಾದ ಕೆಲವು ಪೌರಾಣಿಕ ಘಟನೆಗಳನ್ನು ಪ್ರಶ್ನಕ ಪ್ರವೃತ್ತಿಯಿಂದ ಪ್ರಶ್ನಿಸುತ್ತಾರೆ. ರೂಢಮೂಲವಾದ ಹಲವು ಮೌಢ್ಯಗಳಿಂದ ಆಗುತ್ತಿರುವ ಸಾಮಾಜಿಕ ಅಶಾಂತಿಗಳನ್ನು ಉಲ್ಲೇಖಿಸುತ್ತಾರೆ. ಕೆಲವು ಮಾದರಿಗಳು ಹೀಗಿವೆ.

"ಶುಭ್ರತೆಗೂ ಆತ್ಮಗೌರವಕ್ಕೂ ತಿಲಾಂಜಲಿ ಕೊಟ್ಟು, ದೇಹದಂಡನೆ ಮಾಡಿಕೊಂಡು ಸೇವೆ ಸಲ್ಲಿಸಲೆಂದು ಯಾವ ದೇವರೂ (ಅವನು ದೇವರಾದರೆ) ಬಯಸಲಾರ ! (71)

ಎಲ್ಲವನ್ನೂ ದೇವರಿಗೇ ಬಿಟ್ಟುಕೊಟ್ಟು, ನಾವು ಜಡವಾಗಿ ಕೂತರೆ ಅವನೇ ಕೊಟ್ಟ ಸ್ವಾತಂತ್ರ್ಯವನ್ನು ತಿರಸ್ಕರಿಸಿದಂತಾಗುತ್ತದೆ." (73)

ದೇವರ ಕಲ್ಪನೆ ಆದಿ ಮಾನವನಿಗೆ ಹೇಗೆ ಬಂದಿತೆಂಬ ವಿಚಾರದಿಂದ ಆರಂಭಗೊಂಡ ಈ ಕೃತಿ ದೇವರ ಕಲ್ಪನೆಯನ್ನು ನಿರಾಕರಿಸುತ್ತಾ ಸಾಗುತ್ತದೆ. ದೇವರ ಹೆಸರಿನಲ್ಲಿ ನಡೆಯುವ ಹಲವು ಮೂಢನಂಬಿಕೆಗಳನ್ನು ಖಂಡಿಸುತ್ತಾ ಸಾಗಿ ಕೊನೆಯಲ್ಲಿ ದೈವತ್ವದ ಕಲ್ಪನೆಯೇ ಇಲ್ಲದೆ ಮಾನವ ಹೇಗೆ ನಿಜವಾದ ಮಾನವನಾಗಬಲ್ಲನೆಂದು ನೀಡುವ ಸಂದೇಶದಲ್ಲಿ ಪರ್ಯವಸಾನವಾಗುತ್ತದೆ. ಈ ಕೃತಿಯಲ್ಲಿ ಭಾರತೀಯವಾದ ಹಬ್ಬಗಳ ಆಚರಣೆಗಳ ಪ್ರಾತಿನಿಧಿಕವಾದ ಕೆಲವು ಹಬ್ಬಗಳನ್ನು ಆಯ್ಕೆ ಮಾಡಿಕೊಂಡು, ಅವುಗಳ ಹಿನ್ನೆಲೆಗಳನ್ನು ವೈಚಾರಿಕತೆಯ ಬೆಳಕಿನಲ್ಲಿ ವಿಶ್ಲೇಷಣೆ ಮಾಡಿದ್ದಾರೆ.

ನವೋದಯ ಕಾಲದಲ್ಲಿ ಕುವೆಂಪು, ಮಾಸ್ತಿ, ಪುತಿನ, ಡಿವಿಜಿ, ಬೇಂದ್ರೆ ಮುಂತಾದವರು ಆಸ್ತಿಕ ಪ್ರಜ್ಞೆಯನ್ನು ಬೆಳೆಸಿಕೊಂಡವರು. ದೇವರ ಅಸ್ತಿತ್ವವನ್ನು ಅಲ್ಲಗಳೆದವರಲ್ಲ. ದೇವರ ಅಸ್ತಿತ್ವವನ್ನು ಒಪ್ಪಿಕೊಂಡೇ ಬಂದವರು. ಆದರೆ ಮೂರ್ತಿರಾಯರು, ಕಾರಂತ -ಮುಂತಾದವರು ದೇವರ ಅಸ್ತಿತ್ವದಲ್ಲಿ ಸಂಶಯವನ್ನೂ, ವಿರೋಧಭಾವವನ್ನೂ ವ್ಯಕ್ತಪಡಿಸಿದವರು. ಮೂರ್ತಿರಾಯರು ಯಾವ ನೆಲೆಯಲ್ಲಿ ಹಾಗೂ ಏತಕ್ಕಾಗಿ ದೈವತ್ವದ ಅಸ್ತಿತ್ವವನ್ನು ನಿರಾಕರಿಸುತ್ತಾರೆ ಎಂಬ ಅಂಶ ಗಮನಾರ್ಹ.

ಬಹಳ ಹಿಂದಿನಿಂದಲೂ ಮೂರ್ತಿರಾಯರಿಗೆ ದೇವರ ಬಗ್ಗೆ ಇಂತಹದೇ ಕಲ್ಪನೆ ಇತ್ತು. "ಭಾರತ ತನ್ನ ದೇವರುಗಳೊಡನೆ ಸಹ ಚಕ್ಕಂದವಾಡಿ ನಗುವ ಹಕ್ಕನ್ನು ಮೊದಲಿನಿಂದಲೂ ಉಳಿಸಿಕೊಂಡು ಬಂದಿದೆ." (ಇದು ಪುಟ 92) ಅವರ ನಗುವ ಹಕ್ಕು ಹಾಗೂ ಚಿಂತನೆಗಳ ಸಹಯೋಗ ಈ ಕೃತಿಯಲ್ಲಿ ಪರಿಪಕ್ವಗೊಂಡಿದೆ.

ಹಲವು ಅನುಭವಗಳ ಹಿನ್ನೆಲೆಯಲ್ಲಿ ಮೂರ್ತಿರಾಯರು ದೈವತ್ವವನ್ನು ನಿರಾಕರಿಸುವ ಕಾರಣಗಳನ್ನು ವಿಶ್ಲೇಷಿಸಿದ್ದಾರೆ. ಅವರ ಅನುಭವದ ಒಂದು ನಿದರ್ಶನ ಹೀಗಿದೆ.

'ಕೆಲವು ದಶಕಗಳ ಹಿಂದೆ ಸತ್ಯನಾರಾಯಣನ ಪೂಜೆ ನಡೆಯುವ ಸ್ಥಳದಿಂದ (ಪ್ರಸಾದ ತೆಗೆದುಕೊಳ್ಳದೆ ಕಥೆ ಕೇಳದೆ) ಹೊರಡಲು ಉದ್ಯುಕ್ತನಾಗಿದ್ದ ನನ್ನನ್ನು why do you tempt providence? (ದೇವರನ್ನು ಬೇಕೆಂದೇ ಏಕೆ ರೇಗಿಸುತ್ತೀರಿ?) ಎಂದು ಕೇಳಿ ತಡೆದವರು ವಿಜ್ಞಾನದ ಪ್ರಾಧ್ಯಾಪಕರು. ಅಂದ ಮೇಲೆ ಈ ಕಥೆಗಳೆಲ್ಲ ಬುದ್ಧಿಹೀನರ ಕಲ್ಪನೆಗಳು, ಅವನ್ನು ಕುರಿತು ಚಿಂತಿಸಬೇಕಾದ್ದಿಲ್ಲ, ಎಂಬ ವಾದ ಬಿದ್ದು ಹೋಗುತ್ತದೆ. ಕಲ್ಪನೆಗಳು ನಮ್ಮ ಸಮಾಜದ ಮೇಲೆ ಗಣನೀಯವಾದ ಪ್ರಭಾವ ಬೀರುತ್ತಿದೆ." (ಪುಟ 30)

ಮೂರ್ತಿರಾಯರ ದೃಷ್ಟಿಯಲ್ಲಿ ಮನುಷ್ಯನ ವೈಚಾರಿಕತೆಯ ಅಭಾವವೇ ಈ ರೀತಿಯ ದೈವತ್ವದ ಕಲ್ಪನೆಗೆ ಕಾರಣ. ವೈಜ್ಞಾನಿಕವಾಗಿ ಚಿಂತನೆ ಮಾಡಬೇಕಾದ ಜನರೇ ಈ ರೀತಿಯ ಅಜ್ಞಾನಕ್ಕೆ ಪಕ್ಕಾಗಿದ್ದಾರೆಂಬ ವಿಷಾದ ಅವರದು.

ದೈವತ್ವದ ಸೃಷ್ಟಿ ಮಾನವನಿಂದಲೇ ಎನ್ನುತ್ತಾರೆ ಮೂರ್ತಿರಾಯರು. ದೇವರನ್ನು ನಂಬಿದ ಮಾನವ ತನ್ನನ್ನು ತಾನು ಮರೆಯುತ್ತಾನೆ. ದೇವರನ್ನು ನೆಚ್ಚಿದ ಮಾನವ ಎಂದೂ ಉದ್ಧಾರವಾಗಿಲ್ಲ. ಈ ಅರ್ಥದಲ್ಲಿ ಅವರು ಹೀಗೆ ಬರೆಯುತ್ತಾರೆ.

"ನಮ್ಮ ಉದ್ಧಾರಕ್ಕಾಗಿ ನಾವು ದೇವರನ್ನು ಸೃಷ್ಟಿಸಿದರೆ ಪ್ರಯೋಜನವಿಲ್ಲ. ನಾವು ನೆಚ್ಚಬೇಕಾದದ್ದು ನಮ್ಮನ್ನೇ, ಅಂದರೆ ಮಾನವನನ್ನೇ."

(ಪುಟ 126)

ಡಾ. ಡಿ.ವಿ.ಜಿ ಯವರು "ನೀವು ಈ ವಿಶ್ವದಲ್ಲಿ ಸೌಂದರ್ಯವಿದೆ ಎಂದು ಒಪ್ಪುತ್ತೀರೋ? ಮೌಲ್ಯಗಳನ್ನು ಒಪ್ಪುತ್ತೀರೋ? ಒಪ್ಪುತ್ತೀರಿ ಎಂದು ನಾನು ಬಲ್ಲೆ. ಒಪ್ಪುತ್ತೀರಾದ್ದರಿಂದ ನೀವು ನಿರೀಶ್ವರವಾದಿಯಲ್ಲ.....ಎಂಬ ಮಾತಿಗೆ ಪ್ರತಿಕ್ರಿಯೆಯಾಗಿ ಮೂರ್ತಿರಾಯರು ಮೌಲ್ಯ ಹಾಗೂ ಆಚರಣೆ ಎಂಬ ಎರಡು ಬಿಂದುಗಳನ್ನೂ ಧ್ರುವೀಕರಿಸಿ ನೋಡುತ್ತಾರೆ. ಅವುಗಳ ಪರಸ್ಪರ ಸಾಹಚರ್ಯವನ್ನೂ ಅವರು ಸ್ಥಾಪಿಸಿ ಹೀಗೆ ಬರೆಯುತ್ತಾರೆ,

"ಲೋಕ ಹಿತಕ್ಕಾಗಿ ನಾವೇ ಸ್ವತಃ ದುಡಿಯದೆ ನಮ್ಮ ಜವಾಬ್ದಾರಿಯನ್ನು ದೇವರ ಮೇಲೆ ಹೊರಿಸುವಂತಾಗುತ್ತದೆ. ಮೌಲ್ಯಗಳನ್ನು ದೇವರು ಎಂದು ಕರೆಯುವುದಕ್ಕೆ ಬದಲಾಗಿ ದೇವರು ಎಂದರೆ ಮೌಲ್ಯಗಳು, ಅವುಗಳ ಧ್ಯಾನ, ಅವನ್ನು ಕಾರ್ಯಕ್ಷೇತ್ರದಲ್ಲಿ ಸಹಾ ಬಳಸುವುದು- ಅದೇ ಪೂಜೆ" ಎಂದು ಭಾವಿಸಿದರೆ ಅದಕ್ಕೆ ಯಾವ ವಿರೋಧವೂ ಇರಬೇಕಾದ್ದಿಲ್ಲ. ಮೌಲ್ಯಗಳಿಗೆ ಅಭಿಷೇಕ ಮಾಡಿ, ವಸ್ತ್ರ ಸಮರ್ಪಿಸಿ, ನೈವೇದ್ಯ ಇಡಬೇಕಾದ್ದಿಲ್ಲ, ಸ್ತೋತ್ರ ಸಲ್ಲಿಸಬೇಕಾದ್ದಿಲ್ಲ. ಅವನ್ನು ಆಚರಣೆಯಲ್ಲಿಟ್ಟುಕೊಂಡರೆ ಸಾಕು. ಪೂಜೆ ಮಾಡುವುದು ಸುಲಭ. ಮೌಲ್ಯಗಳಿಗೆ ಅನುಸಾರವಾಗಿ ಬದುಕು ನಡೆಸುವುದು ಕಷ್ಟ." (128–9)

ದೇವರನ್ನು ನಂಬಿ ಮನುಕುಲ ಕೆಟ್ಟಿತೆಂದು ಅವರ ಸಮರ್ಥನೆ. ದೇವರ ಅಗತ್ಯವನ್ನು ಅವರು ಮನುಕುಲದ -ಸಮಷ್ಟಿಯ- ಪರವಾಗಿ ಒತ್ತಿ ಹೇಳುತ್ತಾರೆ. ಏಕೆಂದರೆ ಮಾನವನ ದೈವಭಕ್ತಿ ಮಾನವನ ಉದ್ಧಾರಕ್ಕೆ ಹೇತುವಾಗಬೇಕು. ಮಾನವನಿಂದ ಇಷ್ಟೆಲ್ಲಾ ಪೂಜೆ, ಸ್ತೋತ್ರ, ಭಜನೆಗಳನ್ನು ಸ್ವೀಕರಿಸುವ ದೇವರು ಐತಿಹಾಸಿಕ ದುರಂತಗಳು ಸಂಭವಿಸಿ ಮಾನವ ಜನಾಂಗ ದ್ವೇಷ-ನಾಶದ ದಳ್ಳುರಿಯಲ್ಲಿ ದಹಿಸಿ ಹೋದಾಗ ರಕ್ಷಣೆಗೆ ಬರಲಿಲ್ಲವೇಕೆಂಬುದು ಅವರ ಧ್ವನ್ಯರ್ಥ. ಈ ಅಭಿಪ್ರಾಯವನ್ನು ಅವರು ಹೀಗೆ ವ್ಯಕ್ತಪಡಿಸುತ್ತಾರೆ.

ಇರಾನಿನಲ್ಲಿ ಆದಂಥ ಭೂಕಂಪಗಳನ್ನು ತಡೆಯಬಲ್ಲ ದೇವರು, ಹಿಟ್ಲರ್, ಮುಸೊಲಿನಿಯಂಥವರನ್ನು ಹದಕ್ಕೆ ತರುವ ದೇವರು, ನ್ಯೂಕ್ಲಿಯರ್ ಅಸ್ತ್ರಗಳನ್ನು ಬಳಸದಂತೆ ತಡೆಯಬಲ್ಲ ದೇವರು, ಇವರ ನೆರಳೂ ನಮ್ಮ ಮೇಲೆ ಬೀಳಬಾರದು ಎನ್ನಿಸುವಷ್ಟು ಅಸಹ್ಯಗೊಳಿಸುವ ರಾಜಕಾರಣಿಗೆ ಬುದ್ಧಿ ಕಲಿಸಬಲ್ಲ ದೇವರು, ಒಟ್ಟಿನಲ್ಲಿ ಜೀವ ಕೋಟಿಯ ಸಂಕಟವನ್ನು ಪರಿಹರಿಸಬಲ್ಲ ದೇವರು- ಅಂಥ ದೇವರಿದ್ದರೆ ಯಾರು ಬೇಡ ಎನ್ನುತ್ತಾರೆ !?" (133)

ಮೂರ್ತಿರಾಯರು ಒಂದು ರೀತಿಯಲ್ಲಿ ಮಾನವ ಬದುಕಿನಲ್ಲಿಯೇ ದೈವತ್ವದ ಲಕ್ಷಣಗಳನ್ನು ಗುರುತಿಸಿದವರು. ಈ ಮೇಲ್ಕಂಡ ಉದ್ಧೃತ ಭಾಗದಲ್ಲಿ ಈ ಕಲ್ಪನೆ ಸ್ಪಷ್ಟವಾಗಿದೆ. ಮನುಕುಲದ ಕಷ್ಟಗಳನ್ನು ದೂರ ಮಾಡುವ ಶಕ್ತಿಯೇ ದೇವರೆಂದು ತಿಳಿದವರು. ಅಂತಹ ಲೋಕೋಪಕಾರಕ ಶಕ್ತಿಯೋ, ಮಾನವನೋ ಇದ್ದರೆ ಅಂತಹ ಶಕ್ತಿಯನ್ನೋ, ಮಾನವನನ್ನೋ ಅವರು ದೈವತ್ವದ ನೆಲೆಗೇರಿಸಿಯಾರು. ಮೂರ್ತಿ

ರಾಯರು ಕಾರಂತರಂತೆ ತಾವು ನಿಂತ ನೆಲದ ಬಗ್ಗೆಯೇ ಹೆಚ್ಚು ವಾಸ್ತವವಾಗಿ ಯೋಚಿಸುವವರು. ಅವರಿಗೆ ಪರಲೋಕಕ್ಕಿಂತ ಇಹಲೋಕವೇ ಹೆಚ್ಚು ಮುಖ್ಯ. ಈ ಬಗ್ಗೆ ಅವರು ಬರೆಯುತ್ತಾರೆ.

ದೇವರು, ಇಂದ್ರಾದಿ ದೇವತೆಗಳು, ಪರಲೋಕ, ವೈಕುಂಠ, ಕೈಲಾಸ, ಮೋಕ್ಷ, ಇವೆಲ್ಲ ಪವಿತ್ರ ಭಾವವನ್ನು ಪಸರಿಸುವ ಪದಗಳು. ಅದನ್ನು ಹುಟ್ಟಿದಂದಿನಿಂದ ಕೇಳುತ್ತ ಬಂದಿದ್ದೇವೆ. ಆ ಪರಿಕಲ್ಪನೆಗಳಿಗೆ ಅಲೌಕಿಕ ಸೌಂದರ್ಯವನ್ನೂ ಭವ್ಯತೆಯನ್ನೂ ಕೊಟ್ಟಿದ್ದೇವೆ. ಅವುಗಳ ಪ್ರಭೆಯಿಂದ ಮರುಳಾಗಿರುವುದರಿಂದ ನಮಗೆ ಇಹಲೋಕವೂ, ಅದರ ಬದುಕೂ ನೀರಸ, ಅರ್ಥಹೀನ ಎನ್ನಿಸುತ್ತದೆ. ಕಲ್ಪನೆಯ ಕೂಸಾದ ಪರಲೋಕದ ಅಮಲಿನಲ್ಲಿ 'ಇಹಲೋಕ ಮಿಥ್ಯ' ಎನ್ನುವವರೆಗೂ ಹೋಗಿದೆ ನಮ್ಮ ಪೂರ್ವಗ್ರಹ. ಇಹಲೋಕವನ್ನು ಸ್ವಚ್ಛ ದೃಷ್ಟಿಯಿಂದ ನೋಡೋಣ. (ಪುಟ 180)

ಕಾಣದ ಪರಲೋಕದ ಕಲ್ಪನೆ ಕಾಣುವ ಇಹಲೋಕದ ಮೇಲೆ ಬೀರಿದ ದುಷ್ಪರಿಣಾಮಗಳನ್ನು ಅವರು ಸಂಕ್ಷಿಪ್ತವಾಗಿಯಾದರೂ ಸಮಗ್ರವಾಗಿ ಹೇಳಿದ್ದಾರೆ. ಬಸವಣ್ಣನವರ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ, ಎಂಬ ಮಾತನ್ನು ನೆನಪಿಸುವಂತಹ ಮಾತು. ಮನುಷ್ಯ ತಾನು ನಿಂತ ನೆಲವನ್ನು ಕೀಳಾಗಿ ಕಾಣುತ್ತಾ ಪಾರಮಾರ್ಥಿಕ ಸಾಧನೆ ಮಾಡಲು ಹೊರಟರೆ ಎಷ್ಟು ಅವಿವೇಕವಾಗುತ್ತದೆ ಎಂಬುದನ್ನು ಅವರು ಈ ಮಾತುಗಳಲ್ಲಿ ಹಿಡಿದಿಟ್ಟಿದ್ದಾರೆ. ದೇವರನ್ನು ನಂಬದ ಮೂರ್ತಿರಾಯರು ತಮ್ಮ ಮಾತಿಗೆ ಪೋಷಕವಾಗಿ ದೇವರನ್ನು ಧೃಡವಾಗಿ ನಂಬಿದ ಡಿ.ವಿ.ಜಿ. ಯವರ ಮಾತನ್ನು ಉಲ್ಲೇಖಿಸುತ್ತಾರೆ.

ಕುವೆಂಪುರವರ "ಮನುಜಮತ ವಿಶ್ವಪಥ"ಕ್ಕೆ ವಿಶ್ವಮಾನವನ ಕಲ್ಪನೆಗೆ ಅತ್ಯಂತ ಹತ್ತಿರವಾದ ಸಂದೇಶವನ್ನು ಮೂರ್ತಿರಾಯರೂ ನೀಡುತ್ತಾರೆ. ಕುವೆಂಪುರವರ ನೂರು ಮತದ ಹೊಟ್ಟ ತೂರಿ; ಎಲ್ಲ ತತ್ವದೆಲ್ಲೆ ಮೀರಿ...... ಎಂಬ ಘೋಷಣೆಗೆ ಸಮನಾಗಿ ಮೂರ್ತಿರಾಯರು ಅಷ್ಟೇ ವಿಶಾಲವಾಗಿ ಯೋಚನೆ ಮಾಡುತ್ತಾರೆ. ಠಾಗೂರರ 'ವಿಶ್ವ ಮಾನವನೆಡೆಗೆ' ಎಂಬ ಸಿದ್ಧಾಂತದಂತೆ ಮೂರ್ತಿರಾಯರೂ ಅಂತಹದೇ ಸಿದ್ಧಾಂತವನ್ನೇ ಪ್ರತಿಪಾದಿಸುತ್ತಾರೆ.

"ದೇವರು, ಪರಲೋಕ ಇತ್ಯಾದಿಗಳನ್ನು ಕುರಿತು ನಾವು ಪರಿಶೀಲಿಸಿರುವ ನಂಬಿಕೆಗಳಿಗೆ ಬದಲಾಗಿ ನಾವು ತಂದುಕೊಳ್ಳುವ ನಂಬಿಕೆ ಇಹಲೋಕವನ್ನು ಕುರಿತದ್ದೇ ಆಗಬೇಕು, ಇಲ್ಲಿಯ ಬದುಕನ್ನು ಕುರಿತದ್ದೇ ಆಗಬೇಕು. ತಾಯಿ ತಂದೆಯರು, ಹೆಂಡತಿ ಮಕ್ಕಳು, ಬಂಧುಗಳು, ಸಹಮಾನವರು ಇವರೆಲ್ಲರನ್ನೂ ಮತ್ತು ಅವರ ಬದುಕನ್ನೂ ಕುರಿತದ್ದೇ ಆಗಬೇಕು. ಬದುಕಿಗೆ ಉದ್ದೇಶವನ್ನೂ ಸಾರ್ಥಕ್ಯವನ್ನೂ ಕೊಟ್ಟು ಅದನ್ನು ನಿಂತು ನಡೆಸುವ ಈ ಮತದಲ್ಲೂ ಸೇವೆಗೆ ಮುಖ್ಯ ಸ್ಥಾನವುಂಟು. ಆದರೆ ಅದು ಮಾನವ ಕುಲದ ಸೇವೆ. ಈ ಮತವನ್ನು ಶೈವ ಮತ, ವೈಷ್ಣವ ಮತ, ಇತ್ಯಾದಿಗಳಿಗೆ ಬದಲಾಗಿ ನಾವು ತಂದುಕೊಂಡಿರುವ ಮತವನ್ನು-'ಮಾನವ ಮತ' (ಪುಟ 181)

ಮಾನವನ ಮಿತಿಮೀರಿದ ದೈವ ಭಕ್ತಿಯ ಹೆಸರಿನಲ್ಲಿ ನಡೆಯುತ್ತಿರುವ ಅಂಧಶ್ರದ್ಧೆಯ ಹಲವು ದುಷ್ಪರಿಣಾಮಗಳನ್ನು ಮೂರ್ತಿರಾಯರು ಸೋದಾಹರಣವಾಗಿ ನಿರೂಪಿಸುತ್ತಾರೆ. ಐತಿಹಾಸಿಕ, ಸಮಕಾಲೀನ, ಭಾರತದ ಘಟನೆಗಳನ್ನು ಉಲ್ಲೇಖಿ

ಸುತ್ತಾರೆ. ಕಾವ್ಯ-ನಾಟಕ ರಾಮಾಯಣಾದಿಗಳಿಂದ ಉದಾಹರಣೆಗಳನ್ನು ಆಯ್ದುಕೊಂಡು ತಮ್ಮ 'ದೇವರಿಲ್ಲ'ವೆಂಬ ವಾದಕ್ಕೆ ಪುಷ್ಟಿ ನೀಡುತ್ತಾರೆ. ದೇವರಿಲ್ಲ ಎಂಬ ವಾದಕ್ಕೆ ಸಮರ್ಥನೆಗಳನ್ನು ವಿಪುಲ ಪ್ರಮಾಣದಲ್ಲಿ ನೀಡುತ್ತಾರೆ, ಅವರು ಮಾಡಿದ ಅಧ್ಯಯನದಿಂದಾಗಿ ಅವರು ನೀಡುವ ಸಮನ್ವಯ ಈ ಕೃತಿಯ ವೈಶಿಷ್ಟ್ಯ. ಭಾರತೀಯ ದೇವರ ಗುಣ, ಸ್ವಭಾವ, ಕಥೆಗಳನ್ನು ಗ್ರೀಕ್ ದೇವರೊಂದಿಗೆ ಸಮನ್ವಯಗೊಳಿಸುತ್ತಾರೆ.

"ನಮ್ಮ ಇಂದ್ರ, ಅಗ್ನಿ, ವಾಯು ಇತ್ಯಾದಿಗಳು ವಾಸ್ತವವಾಗಿ ನಾಮರೂಪಗಳನ್ನು ಪಡೆದ ಪ್ರಕೃತಿ ಶಕ್ತಿಗಳು. ಆ ಶಕ್ತಿಗಳಿಗೆ ದೈವತ್ವವನ್ನು ದಾನ ಮಾಡುವುದು ಬಹಳ ಹಳೆಯ ಹವ್ಯಾಸ. ಪುರಾತನ ಗ್ರೀಕರ ಜ್ಯೂಸ್ (Zeus) ಪ್ರಕೃತಿ ಶಕ್ತಿಯೇ. ನಮ್ಮ ಇಂದ್ರ ಹಿಂದೆ ಪಡೆದಿದ್ದಂತೆ ಸರ್ವೋಚ್ಚ ಸ್ಥಾನವನ್ನು ಪಡೆದಿದ್ದ. ಇಂದ್ರನಿಗೆ ವಜ್ರಾಯುಧ ವಿರುವಂತೆ ಅವನಿಗೆ ಸಿಡಿಲೇ ಆಯುಧ. ಹೆಲಿಯಸ್ (Helios) ಸೂರ್ಯದೇವ, ಆರ್ಟೆಮಿಸ್ (Artemis), ಚಂದ್ರ, ಈಯಲಸ್ (Aeolus) ನಮ್ಮ ವಾಯುದೇವ, ಪೊಸೈಡನ್ (Poseidon) ಸಮುದ್ರದ ಅಧಿದೇವತೆ. (6)

"ತನ್ನ ರೂಪವನ್ನು ಕೊಟ್ಟ ಮಾನವ ತನ್ನ ಗುಣಗಳನ್ನೂ ಆರೋಪಿಸಿದ, ಇದು ಸ್ವಾಭಾವಿಕ. ಆದ್ದರಿಂದ ದೇವರುಗಳ ಚರಿತ್ರೆ ಅನೇಕ ವೇಳೆ ನಮ್ಮ ಚರಿತ್ರೆಯನ್ನು ಹೋಲುತ್ತದೆ. ನಮ್ಮ ಲೋಪದೋಷಗಳು ಅವರಲ್ಲೂ ಕಾಣಿಸಿಕೊಳ್ಳುತ್ತವೆ. ಈ ಮಾತಿಗೆ ಎಲ್ಲ ದೇಶಗಳ ಮಿಥಿಕಗಳೂ (Myths) ಸಾಕ್ಷಿ...... ಹೆಣ್ಣಿನ ವಿಷಯದಲ್ಲಿ ಅವನ ಅನಾಚಾರ ಒಂದಲ್ಲ, ಎರಡಲ್ಲ. ನಮ್ಮ ಇಂದ್ರ ಇವನಿಂದ ಪಾಠ ಕಲಿಯ ಬಹುದು." (ಪುಟ 17)

**10.2** ಡಾ. ಕೆ.ಶಿವರಾಮ ಕಾರಂತರೂ ದೇವರ ಬಗ್ಗೆ ಹೀಗೆಯೇ ವೈಚಾರಿಕವಾಗಿ ಚಿಂತನೆ ಮಾಡಿದವರು. ಅವರ ಅಭಿಪ್ರಾಯವೂ ಈ ವಿಷಯದಲ್ಲಿ ಮೂರ್ತಿರಾಯರ ಅಭಿಪ್ರಾಯದೊಂದಿಗೆ ಸರಿಹೊಂದುವಂತಹದು. ಮಾನವ ನಿರ್ಮಿತ ದೈವ ಸೃಷ್ಟಿಯ ಬಗ್ಗೆ ಮಾನವನೇ ವಿಧಿಸಿರುವ ಸೀಮಿತ ವಲಯವನ್ನು ಅವರು ಹೀಗೆ ಗುರುತಿಸುತ್ತಾರೆ.

"ಮಾನವನು ನಿರ್ಮಿಸಬಲ್ಲ ದೈವ, ಇಲ್ಲವೆ ದೈವತ್ವದ ಗುಣಗಳು, ಅವನ ಇತಿಮಿತಿಗಳಿಂದ ರೂಪುಗೊಳ್ಳಬೇಕೇ ಹೊರತು ಅನ್ಯತಃ ಸಾಧ್ಯವಿಲ್ಲ ಎನಿಸಿತು. ಬದುಕಿನಲ್ಲಿ ಬೆಳೆಯಿಸದ ದೊಡ್ಡಗುಣಗಳು, ನಮ್ಮ ಧ್ಯಾನದಲ್ಲಿ ಬಂದಾವೆ? ನೋಟದಲ್ಲೂ ಅದೇ ಮಿತಿ ಬರುತ್ತದೆ. ಮನುಷ್ಯನ ಪಾಲಿನ ದೇವರು ವಿಶ್ವದ ದೇವನೆನಿಸಿದರೂ, ಅವನಿಗೆ ಮಾನವನದೇ ರೂಪ, ಭರತ ಖಂಡದ ಭಕ್ತರಿಗೆ ಕೃಷ್ಣನು ಭಾರತೀಯ. ಅವನು ಚೆಲುವನಾದರೆ, ನಾವು ಕಿರು ಬಾಲರಲ್ಲಿ ಕಾಣಬಹುದಾದ ಚೆಲುವೇ ಅವನ ಆಕಾರದಲ್ಲಿ ತೋರುತ್ತದೆ. ಅವನ ಬಣ್ಣವನ್ನೆಣಿಸಹೋಗಬೇಕೆ? ನಾವು ಪ್ರಕೃತಿಯಲ್ಲಿ ಕಂಡ ಬಣ್ಣವೇ ಅವನಿಗೂ ಬರುತ್ತದೆ. ಹೀಗಿರುತ್ತ ಮಾನವ ತಾನು ದೊಡ್ಡವನಾದ, ತನ್ನ ದೇವರನ್ನು ದೊಡ್ಡದು ಮಾಡಲಾರ-ಎಂದು ಅನಿಸಿತು.

ಪ್ರಪಂಚದ ಇತಿಹಾಸವನ್ನು ಓದಿದವರಿಗೆ, ಆಯಾಯ ಕಾಲದ ಜನಗಳ ದೇವರು, ಅವರವರ ಸಂಸ್ಕಾರ ಮತ್ತು ಆವರಣಗಳ ಮಿತಿಯನ್ನು ಹೊಂದಿದ್ದಾನೆಂಬುದು ಸ್ಪಷ್ಟವಾಗುತ್ತದೆ. ವಿಶ್ವದ ದೇವನಾದವನು ಮನುಷ್ಯನ ಆಕಾರವನ್ನು ಏತಕ್ಕೆ ತಾಳಬೇಕು?

ಇದಕ್ಕೆ ಕಾರಣವೆಂದರೆ ಭಾರತೀಯರ ದೇವರು ಹತ್ತು ಅವತಾರಗಳನ್ನೇತಕ್ಕೆ ತಾಳಬೇಕು? ನಮ್ಮಷ್ಟೇ ಉದಾರಿ ಆ ದೇವರು. ನಮ್ಮಷ್ಟೇ ಕಾಮಿಯೂ ಅತ. ನಮ್ಮಷ್ಟೇ ಪ್ರೇಮಿಯಾತ...... ಈ ಪ್ರಪಂಚವನ್ನು ಯಾರೇ ಸೃಷ್ಟಿಸಿರಲಿ, ದೇವರೇ ನಿರ್ಮಿಸಲಿ, ಪ್ರಪಂಚವನ್ನೇ ದೇವರೆಂದು ನಾವು ತಿಳಿದಿರಲಿ, ನಮ್ಮ ಪಾಲಿನ ದೇವರು ಮಾತ್ರ ನಮ್ಮ ಮನಸ್ಸು, ಊಹೆ, ಬುದ್ಧಿ, ಇಂದ್ರಿಯಾನುಭವಗಳಿಂದಲೇ ಆದುದು. ಗೀತೆಯು ಒಂದು ಈ ವಿಚಾರಕ್ಕೆ ತೀರ ಒಪ್ಪುತ್ತದೆ. "ಭಕ್ತನು ಯಾವ ರೂಪದಿಂದ ಚಿಂತಿಸುತ್ತಾನೋ ಆ ರೂಪದಿಂದ ನಾನವನಿಗೆ ದರ್ಶನ ಕೊಡುವೆನೆಂಬ ಮಾತದು. ತೀರ ಸಹಜ. ನಮ್ಮಲ್ಲೇ ಸೃಷ್ಟಿಸಿಕೊಂಡ ದೇವರಿಗೆ, ನಮ್ಮ ಸಂಸ್ಕಾರ ಕೊಡುವ ರೂಪವಲ್ಲದೆ ಅನ್ಯರೂಪ ಬರುವುದೆಂತು? ತನ್ನ ಸೃಷ್ಟಿಯನ್ನೇ ಸದಾ ನೆನೆಯುತ್ತ, ಕಣ್ಣೆದುರಿನ ದರ್ಶನವನ್ನು ಪಡೆಯುವುದು ಭಕ್ತನ ಪ್ರಯತ್ನ.

(ಹುಚ್ಚು ಮನಸ್ಸಿನ ಹತ್ತು ಮುಖಗಳು)

(ಗದ್ಯ ಪದ್ಯ ಸಂಗಮ ಪು. 109 -110 ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ) (1962)

"ವೈದಿಕ ಯುಗದ ಇಂದ್ರ, ವರುಣ, ಮರುತರೆಲ್ಲ ಮನುಷ್ಯನ ಭೀತಿಯ ಮೂರ್ತಿವೆತ್ತ ರೂಪಗಳಲ್ಲದೆ ಬೇರೆಯಲ್ಲ. (ಬಾಳ್ವೆಯೇ ಬೆಳಕು 25)

ಮನುಷ್ಯ ದೇವರನ್ನು ಬಾಯಿ ಮಾತಿನಲ್ಲಿ ಎಷ್ಟೇ ದೊಡ್ಡವನೆಂದು ಕರೆಯಲು ಯತ್ನಿಸಿದರೂ, ಅವನು ತನ್ನ ನೆಲ, ತನ್ನ ಜನ, ಇವುಗಳ ಸ್ವಾರ್ಥದ ಮೇರೆಯಿಂದ ದಾಟಲಾರನಾದನು. ಇಷ್ಟೊಂದು ಸಂಕುಚಿತ ಆವರಣದಲ್ಲಿ ಜನಿಸಿದ ದೇವರು, ವಿಶ್ವದ ಹೊಣೆ, ಜಗತ್ತಿನ ಉದ್ಧಾರ ಮಾಡಲು ಅಸಮರ್ಥನಾದಾನೆಂದೇ ತೀರ್ಮಾನಿಸಬೇಕು". (ಪುಟ 36)

ಮೂರ್ತಿರಾಯರು ಒಂದು ರೀತಿಯಲ್ಲಿ ಈ ಕೃತಿಗೆ ಸಂಬಂಧಿಸಿದಂತೆ, ಪ್ರಗತಿಶೀಲ ಅಥವಾ ಪುರೋಗಾಮಿ ಸಾಹಿತಿಯಾಗಿ ಕಾಣಿಸುತ್ತಾರೆ. "ಪುರೋಗಾಮಿ ಸಾಹಿತಿಗಳು ಮಾನವತೆಯನ್ನು ತಮ್ಮ ಧರ್ಮವನ್ನಾಗಿ ಸ್ವೀಕರಿಸಿದ್ದಾರೆ. ಈ ಕಸೋಟಿಯ ಮೇಲೆ ಜಗತ್ತಿನ ನೀತಿ, ಧರ್ಮ, ಸಾಮಾಜಿಕ ತತ್ವಗಳನ್ನು ಅರೆದು ನೋಡಿ, ಅವುಗಳೊಳಗಿನ ಮಿಥ್ಯ ಹಾಗೂ ಗೌಣ ವಿಷಯಗಳನ್ನು ಹೊರಗೆಡಹಲು ಅಂಜುವುದಿಲ್ಲ. ಪುರೋಗಾಮಿ ಸಾಹಿತಿಗೆ ತಾನು ಹುಟ್ಟಿದ ಧರ್ಮ, ಬೆಳೆದ ವಾತಾವರಣ ಮುಖ್ಯವಲ್ಲ. ಜಗತ್ತಿನ ಜೀವನವನ್ನೆಲ್ಲಾ ಒಂದುಗೂಡಿಸುವ ತಂತು ಯಾವುದೋ ಅದೇ ಅವನ ಧರ್ಮ. ಅದರ ಸಲುವಾಗಿ ಅವನು ತನ್ನ ಹುಟ್ಟಿನ ಕಟ್ಟನ್ನು ಹರಿಯಲು ಹಿಂಜರಿಯುವುದಿಲ್ಲ...... ಪುರೋಗಾಮಿ ಸಾಹಿತಿ ಇಂದಿನ ಜಗತ್ತು ಈಗ ಇರುವುದಕ್ಕಿಂತಲೂ ಹೆಚ್ಚು ಸುಂದರವಾಗಬೇಕೆಂದು ಬಯಸುತ್ತಾನೆ. (ಅನಕೃ "ಪ್ರಗತಿ ಶೀಲ ಸಾಹಿತ್ಯ" ಕನ್ನಡ ವಿಮರ್ಶೆ ಪು. 50 ಪ.ಕ.ಸ.) ಅನಕೃ ನೀಡಿದ ಈ ಸೈದ್ಧಾಂತಿಕ ವಿವರಣೆ ಮೂರ್ತಿರಾಯರ "ದೇವರು" ಕೃತಿಗೆ ಬಹು ಸಮಂಜಸವಾಗಿ ಅನ್ವಯಿಸುತ್ತದೆ. 1990 ರಲ್ಲಿ ಮೂರ್ತಿರಾಯರು ವ್ಯಕ್ತಪಡಿಸಿದ ಅವರ ವೈಚಾರಿಕ ದೃಷ್ಟಿ, ಪುರೋಗಾಮಿ ಸಿದ್ಧಾಂತವನ್ನು ಪ್ರತಿಪಾದಿಸುತ್ತದೆ. ಪುನರುಜ್ಜೀವನಗೊಳಿಸಿದೆ.

ಈ ವಿಚಾರವನ್ನು ಮೂರ್ತಿರಾಯರು ತಮ್ಮ "ದೇವರು" ಕೃತಿಯಲ್ಲಿಯೂ ವಿಶ್ಲೇಷಣೆ ಮಾಡುತ್ತಾರೆ, ಆ ಕುರಿತು ತಮ್ಮ ಚಿಂತನೆಗೆ ಶ್ರೀ ಎ.ಆರ್. ಕೃಷ್ಣಶಾಸ್ತ್ರಿಗಳ ಮಾತನ್ನೂ ಪೂರಕವಾಗಿ ಉಲ್ಲೇಖಿಸುತ್ತಾರೆ. ಪ್ರಾರ್ಥನೆಗಳ ಸಾಧಕ-ಬಾಧಕಗಳನ್ನು ಕುರಿತು ಅವರು ಚಿಂತನೆ ಮಾಡುತ್ತಾರೆ. ಪ್ರಾರ್ಥನೆಯ ಎರಡು ಮುಖಗಳನ್ನು ಅವರು ಹೀಗೆ ಬರೆಯುತ್ತಾರೆ. "ನಾವು ಯಾವುದನ್ನು ಪರಮ ಸತ್ಯ, ಪರಮ ಸುಂದರ, ಪರಮ ಶ್ರೇಷ್ಠ ಎಂದು ನಂಬಿದ್ದೇವೆಯೋ ಅದೇ ದೇವರು ಎಂದುಕೊಂಡು ಅದನ್ನು ಸ್ತುತಿಸುವ ಜನರನ್ನು ಹಳಿದರೆ ತಪ್ಪಾಗುತ್ತದೆ. ಆ ಮೂಲಕ ಮನಶ್ಶಾಂತಿ ಪಡೆದವರನ್ನು ನಾನು ಸ್ವತಃ ಬಲ್ಲೆ. ನನಗೆ ಮತ್ತು ನನ್ನಂಥ, ಎಷ್ಟೋ ಜನರಿಗೆ ಒಳ್ಳೆಯ ಸಂಗೀತ ಕೇಳುತ್ತಿರುವಾಗ ನಾವೂ ಅದರ ಜೊತೆಗೆ ದನಿಗೂಡಿಸಬೇಕು ಎನಿಸುತ್ತದೆ.......... ದೇವಾಲಯದಲ್ಲಿ ದೇವರೆದುರು ನಿಂತಾಗ ಭಕ್ತರಿಂದ ಸ್ತೋತ್ರ ಹೀಗೆಯೇ ಹೊರಹೊಮ್ಮಿದ್ದನ್ನು ಕಂಡಿದ್ದೇನೆ. ಅವರ ಭಾವಾವೇಶದ ಆನಂದ-ಭಕ್ತನಲ್ಲದ ನನಗೂ ಆನಂದ ಕೊಟ್ಟಿದೆ". (ಪುಟ 66) ಆದರೆ ಈ ವಿಚಾರದಲ್ಲಿ ಕಾರಂತರ ಅಭಿಪ್ರಾಯ-ಅನುಭವ ಬೇರೆಯೆ. ಮೂರ್ತಿರಾಯರು ತಮ್ಮ ಬಾಲ್ಯದಲ್ಲಿ ದೇವರ ರಥೋತ್ಸವದ ಕಾಲದಲ್ಲಿ ನಡೆಯುತ್ತಿದ್ದ ವೇಷಭೂಷಣವನ್ನು ಕೇಳಿ ಅದರ ನಾದ ಮಾಧುರ್ಯಕ್ಕೆ ಮಾರುಹೋದವರು. ದೇವರ ಪೂಜೆಯ ಮಂತ್ರಗಳನ್ನು ಸಂಗೀತದ ದೃಷ್ಟಿಯಿಂದ ನೋಡಿ ಆನಂದಿಸಿದವರು. ಕಾರಂತರು ತಮ್ಮ ಬಾಲ್ಯದಲ್ಲಿ ಯಕ್ಷಗಾನದ ಹಾಡುಗಾರಿಕೆಗೆ ಕಿವಿ ನೀಡಿದವರು. ಅವರ ಅಭಿಪ್ರಾಯ ಹೀಗೆ:

"ಗಾಂಧೀಜಿಯವರ ಸಾಬರ್ಮತಿ ಆಶ್ರಮದಲ್ಲಿ ಕೆಲ ದಿನ ಇದ್ದುದರ ಫಲವಾಗಿ ಅಲ್ಲಿನ ಭಜನೆಯ ರೀತಿ ಹಿತವಾಗಿ ಕಂಡಿತು. ಆದರೂ ದೇವರನ್ನು ಗುಲ್ಲೆಬ್ಬಿಸಿ ಎಚ್ಚರಿಸುವ ಸಪ್ತಾಹ ಮಾರ್ಗ ಎಂದೂ ನನಗೆ ರುಚಿಸಿರಲಿಲ್ಲ. (ಬಾಳ್ವೆಯೇ ಬೆಳಕು-38)

ಪ್ರಾರ್ಥನೆಯ ಮತ್ತೊಂದು ಮುಖವನ್ನೂ ಅವರು ಗಮನಿಸುತ್ತಾರೆ. ಪ್ರಾರ್ಥನೆಯ ಪರಿಣಾಮಗಳನ್ನು ಅವರು ಮನಶ್ಶಾಸ್ತ್ರೀಯ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡುತ್ತಾರೆ. ಈ ಸಂದರ್ಭದಲ್ಲಿ ಅವರು ಮಾಡುವ ವಿಶ್ಲೇಷಣೆ ಹೀಗಿದೆ:

"..........ಅವರ ಮನಸ್ಸು ನಿರ್ಮಲವಾದದ್ದಕ್ಕೆ ಕಾರಣ ಮನಸ್ಸಿಗೆ ಸಹಜವಾದ, ಸ್ವಾಭಾವಿಕವಾದ, ವ್ಯಾಪಾರವೇ ಇರಬಹುದು. ಅದರಲ್ಲಿ ದೇವರ ಕೈವಾಡವನ್ನು ಕಾಣಬೇಕಾದ್ದಿಲ್ಲ. ಅದು ಹಾಗಿರಲಿ, ನಮ್ಮಲ್ಲಿ ಭಾವಾವೇಶವನ್ನು ಕೆರಳಿಸುವ ಆ ತತ್ತ್ವ ಅಥವಾ ಆ ಸತ್ವ (ಅದನ್ನು ಹೇಗೆ ಬೇಕಾದರೂ ಕರೆಯಿರಿ) ನಮ್ಮ ಹೊಗಳಿಕೆಯನ್ನು ಬಯಸುತ್ತದೆ. ಅದರಿಂದ ಸಂತೋಷ ಪಡೆಯುತ್ತದೆ. ಅದಕ್ಕೆ ಪ್ರತಿಫಲವಾಗಿ ನಮ್ಮ ಇಷ್ಟಾರ್ಥಗಳನ್ನು ಹುಲು ಮನುಜರಿಗೂ ಕೆಲವು ವೇಳೆ (ಕೆಲವು ವೇಳೆ ಮಾತ್ರ, ನಾವು ಹೊಗಳಿಕೆಗೆ ಬಾಯಿ ಬಿಡುವುದೇ ಹೆಚ್ಚು) ಮುಖಸ್ತುತಿ ಬೇಡವಾಗುತ್ತದೆ. ಹೊಗಳು ಭಟ್ಟರು ಬೇಸರ ತರುತ್ತಾರೆ. ದೇವರಿಗೆ ಮತ್ತಷ್ಟು ಬೇಸರವಾಗಬೇಕು," (ಪುಟ 67)

ಮೂರ್ತಿರಾಯರು ವೇದೋಪನಿಷತ್ತು. ಗೀತೆ, ಮುಂತಾದ ಧರ್ಮಗ್ರಂಥಗಳಿಂದ ಕೆಲವು ಪ್ರಾತಿನಿಧಿಕ ವಾಕ್ಯಗಳನ್ನು ಉದಾಹರಿಸಿ ಅವುಗಳ ಔಚಿತ್ಯವನ್ನು ಪ್ರಶ್ನಿಸುತ್ತಾರೆ. ಅವರ ಪ್ರಶ್ನಕ ಮನೋವೃತ್ತಿ ಇಂತಹ ಸಂದರ್ಭಗಳಲ್ಲಿ ಸೂಕ್ತವೆನಿಸಿ, ಆಸ್ತಿಕರೂ ತಳೆಯಬಹುದಾದ ಸಂಶಯವೆನಿಸುತ್ತದೆ.

....... ಗೀತಾಚಾರ್ಯ ಕೃಷ್ಣ ತಾನು ಈ ಕೆಲಸದಲ್ಲಿ ನಿರತನಾಗಿರುವುದಾಗಿ ಭರವಸೆ ಕೊಡುತ್ತಾನೆ.

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।

ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥

(ಸಾಧುಗಳನ್ನು ರಕ್ಷಿಸುವುದಕ್ಕೂ, ದುಷ್ಟರನ್ನು ನಾಶಮಾಡುವುದಕ್ಕೂ, ಧರ್ಮವನ್ನು ಸ್ಥಾಪಿಸುವುದಕ್ಕೂ ನಾನು ಯುಗಯುಗಗಳಲ್ಲೂ ಅವತರಿಸುತ್ತೇನೆ)

ಈ ಮಾತು ಸುಮಾರು 3000ವರ್ಷಗಳ ಹಿಂದೆ ಆಡಿದ್ದು. ಇವತ್ತಿನವರೆಗೆ ಆ ಕೆಲಸವೇನೂ ಸಮರ್ಪಕವಾಗಿ ನಡೆದಿಲ್ಲ. ಅಟಂ ಬಾಂಬು ಹಾಕಿದ್ದು, ನಿನ್ನೆ ಮೊನ್ನೆ, ವಿಯಟ್ನಾಂ ಯುದ್ಧ, ಭಯೋತ್ಪಾದಕರು, ನಿರಪರಾಧಿಗಳನ್ನು ಕೊಲ್ಲುವುದು, ಪರ್ಷಿಯನ್ ಕೊಲ್ಲಿಯ ಬಳಿ ಕುವೈಟ್ ಅನ್ನು ಇರಾಕಿನವರು ಆಕ್ರಮಿಸಿದ್ದು, ಅಮೇರಿಕನ್ನರು ಸೈನ್ಯ ಜಮಾಯಿಸಿ ಹಲ್ಲು ಕಡಿಯುತ್ತ ಕೂತಿರುವುದು- ಇವತ್ತಿನ ಮಾತು. ಬಂಡವಾಳಗಾರರು ಪಟ್ಟಭದ್ರರಾಗಿ ಕುಳಿತು ರಾಜಕೀಯ ಮತ್ತು ಆರ್ಥಿಕ ಸೂತ್ರಗಳನ್ನು ತಮ್ಮ ಕೈಯಲ್ಲಿಟ್ಟುಕೊಂಡು ಮಾನವಕುಲವನ್ನು ತಮ್ಮ ಪುಂಗಿಯ ಲಯಕ್ಕೆ ಇವತ್ತೂ ಕುಣಿಸುತ್ತಿದ್ದಾರೆ. ದುಷ್ಟರು ನಾಶವಾಗಿಲ್ಲ. ಧರ್ಮ ಸಂಸ್ಥಾಪನೆ ನಡೆದಿಲ್ಲ. ಹಿಂದೆ ಕೌರವರನ್ನು ನಾಶಮಾಡಲಿಲ್ಲವೆ ಎಂದು ಹೇಳಬಹುದು. ಕೌರವರು ಹೋದರೇ ಹೊರತು ಕೇಡೇನೂ ಹೋಗಲಿಲ್ಲ. ಯಾದವರು ಅಂತಃಕಲಹದಲ್ಲಿ ತೊಡಗಿ ತಮ್ಮನ್ನು ತಾವೇ ನಾಶ ಮಾಡಿಕೊಂಡಿದ್ದು, ಕೃಷ್ಣ "ಧರ್ಮ ಸಂಸ್ಥಾಪನೆ ಮಾಡುತ್ತೇನೆ" ಎಂದು ಭರವಸೆ ಕೊಟ್ಟ ಮೇಲೆ. ಆ ಕೃಷ್ಣನೇ ಯಾದವ ಕಲಹದಲ್ಲಿ ಭಾಗಿಯಾಗಿದ್ದು, ತಾನೂ ಕೆಲವರನ್ನು ಕೊಂದ. ದೇವರು ಕೇಡನ್ನು ಒಂದೇ ಪೆಟ್ಟಿಗೆ 'ಸತ್ತನ್ ಮತ್ತೆ ಪುಟ್ಟನ್' ಎನ್ನುವಂತೆ ನಿರ್ನಾಮ ಮಾಡಬಾರದಿತ್ತೆ? ದುಷ್ಕೃತರು ಹುಟ್ಟುತ್ತಲೇ ಇರುವ (ಕೇಡೂ ಸಂಭವಾಮಿ ಯುಗೇ ಯುಗೇ ಎಂದು ಘೋಷಿಸುತ್ತಿದೆ) ತಾನು ಅದರ ವಿನಾಶಕ್ಕಾಗಿ ಮತ್ತೆ ಮತ್ತೆ ಅವತಾರ ಮಾಡುತ್ತಲೇ ಇರುವ ವಿಚಿತ್ರ ವ್ಯವಸ್ಥೆಯೇಕೆ? ಕೇಡನ್ನು ನಿರ್ಮೂಲ ಮಾಡಿದರೆ ತಾನು ನಿರುದ್ಯೋಗಿಯಾದೇನೆಂದು ದೇವರು ಹೆದರಿದ್ದಾನೆಯೆ? (126)

ದಿ. ವಸುದೇವ ಭೂಪಾಲರೂ ಇದೇ ಶ್ಲೋಕವನ್ನು ತೆಗೆದುಕೊಂಡು ಹೆಚ್ಚು ಕಡಿಮೆ ಹೀಗೆಯೇ ವಿಶ್ಲೇಷಣೆ ಮಾಡುತ್ತಾರೆ.

ಅವರ ವಿಶ್ಲೇಷಣೆ ಮಹಾಭಾರತ ಯುದ್ಧ ಕುರಿತಂತೆ ವಿಮರ್ಶಾತ್ಮಕವಾಗಿ ಹಾಗೂ ಸುದೀರ್ಘವಾಗಿ ವಿವೇಚನೆ ಮಾಡಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಅವರು ಹಲವು ಪ್ರಶ್ನೆಗಳನ್ನು ಎತ್ತುತ್ತಾರೆ. ಈ ಬಗ್ಗೆ ಅವರ ಮಂಡನೆ ಹೀಗಿದೆ.

"ಅವ್ಯಕ್ತನೂ ಸರ್ವಶಕ್ತನೂ ಸರ್ವ ಸೂತ್ರಧಾರನೂ ಆದ ದೇವರು ಜನಗಳನ್ನು ಜನಾಂಗಗಳನ್ನು ಅಂಕೆಯಲ್ಲಿಟ್ಟು ಮುನ್ನಡೆಸಿದನೆಂದು ಯಾರಾದರೂ ವಾದಿಸಿದರೆ, ಸಮಗ್ರ ಇತಿಹಾಸದಲ್ಲಿ ನಡೆದ ಕ್ರೂರವೂ, ರಕ್ತಮಯವೂ ಆದ ದಾಂಧಲೆಗಳೆಲ್ಲ ದೇವರದೇ ಹೊಣೆಯಾಗುತ್ತದೆ. ಶತಮಾನಗಳಾದ ಮೇಲೆ ಶತಮಾನಗಳು ಬಲಶಾಲಿಗಳು ಬಲಹೀನರನ್ನು ತುಳಿದಿದ್ದಾರೆ. ಕಪಟಿಗಳೂ ನಿಷ್ಕರುಣಿಗಳೂ ಆದವರು ನಿಷ್ಕಪಟಿಗಳೂ

ನಿರಪರಾಧಿಗಳೂ ಅವವರನ್ನು ಗುಲಾಮರನ್ನಾಗಿ ದುಡಿಸಿದ್ದಾರೆ. ಯಾವ ದೇಶದ ಇತಿಹಾಸದಲ್ಲೇ ಆಗಲೀ ದೀನದಲಿತರನ್ನು ಕಾಪಾಡಲು ಯಾವ ದೇವರೂ ಅಗಮಿಸಿಲ್ಲ.

ಪರಿತ್ರಾಣಾಯ ಸಾಧೂನಾಂ।
ವಿನಾಶಾಯ ಚ ದುಷ್ಕೃತಾಂ।
ಧರ್ಮ ಸಂಸ್ಥಾಪನಾರ್ಥಾಯ।
ಸಂಭವಾಮಿ ಯುಗೇ ಯುಗೇ ॥

...... ನ್ಯಾಯವಾದ ಪಾಲನ್ನು ಸೋದರರಿಗೆ ಕೊಡದೆ ಅನ್ಯಾಯ ಮಾಡುವ ನೀಚ ಮೋಸಗಾರರಿಗೆ ಶ್ರೀ ವಿನಾಶಾಯ ದುಷ್ಕೃತಾಂ ಏಕೆ ಬರುವುದಿಲ್ಲ? (ದೇವರು ಸತ್ತ - ಪುಟ 64-66)

ಮೂರ್ತಿರಾಯರಂತೆ ಇದೇ ವಿಚಾರವನ್ನು ಕುರಿತು ಧ್ವನ್ಯಾತ್ಮಕವಾಗಿ ಚಿಂತನೆ ಮಾಡಿದವರಲ್ಲಿ ಶ್ರೀ ಗೌರೀಶ ಕಾಯ್ಕಿಣಿಯವರೂ ಒಬ್ಬರು. ಅವರೂ ಸಹ ಈ ವಿಸೆಯಲ್ಲಿಯೇ ಚಿಂತನೆ ಮಾಡಿದವರು. ಅವರು ತಮ್ಮ "ನಾಸ್ತಿಕನು ಮತ್ತು ದೇವರು ಅರ್ಥಾತ್ ಎಲ್ಲಿ ಅಜೆಯ ದಂಡೆ" ಎಂಬ 120 ಪುಟಗಳ ವ್ಯಾಪ್ತಿಯಲ್ಲಿ ಈ ಕುರಿತು ವಿವೇಚನೆ ಮಾಡುತ್ತಾರೆ. ದೇವರ ಬಗ್ಗೆ ಅವರ ಖಚಿತವಾದ ನಿಲುವು ಹೀಗೆ ವ್ಯಕ್ತವಾಗಿದೆ.

"ಅವಜಾನಂತಿ ಮಾಂ ಮೂಢಾಃ। ಮಾನುಷೀ-ತನುಂ ಅಶ್ರಿತಂ-ನನ್ನನ್ನು ಮೂಢರು ಮನುಷ್ಯ ದೇಹಧಾರಿಯೆಂದು ತಿಳಿಯುತ್ತಾರೆ. ಅಂದರೆ ಹಾಗೆ ತಿಳಿಯುವುದು ತಿಳಿಗೇಡಿತನವೆಂದು ಆ ಕೃಷ್ಣ ಪರಮಾತ್ಮನೇ ಹೇಳುತ್ತಾನೆ. ಹಾಗೆಯೇ " ಅವತಾರ" ವಾದದ ಪ್ರಸ್ತಾಪ ಮೊಟ್ಟ ಮೊದಲಿಗೆ ಭಗವದ್ಗೀತೆಯಲ್ಲಿಯೇ ಬರುತ್ತದೆ. ಅದನ್ನು ಪ್ರಸ್ತಾಪಿಸುವ ಆ ಸುಪ್ರಸಿದ್ಧ ಎರಡು ಶ್ಲೋಕಗಳಲ್ಲಿಯೂ ಸಂಭವಾಮಿ ಯುಗೇಯುಗೇ ಮತ್ತು ತದಾ ಆತ್ಮಾನಂ ಸೃಜಾಮಿ ಅಹಂ ಎಂಬ ಮಾತುಗಳಿಂದ ದೇವತ್ವವನ್ನು ಮೂರ್ತೀಕರಿಸುವ ಅವತಾರ ಕಾಲಧರ್ಮಕ್ಕೆ ಹುಟ್ಟಿ ಬರುತ್ತದೆ. ಅಂದಾಗ ಆ ಮುಂದೆ ಅದು ನಿರಾಕಾರ, ನಿರ್ಗುಣವಾಗಿಯೇ ಇರುವಂತಹದು ಎಂಬ ಭಾವ ವ್ಯಕ್ತವಾಗುವುದಿಲ್ಲವೆ?

ಹಾಗೆಯೇ ಇನ್ನೂ ಖಚಿತವಾಗಿ ಭಗವದ್ಭಕ್ತರ ಬಗೆಗೆ ಭಗವಾನ್ ಶ್ರೀ ಕೃಷ್ಣ ಒಂದು ಸಂಖ್ಯಾಪ್ರಮಾಣವನ್ನೇ ಕೊಡುತ್ತಾನೆ. "ಸಾವಿರ ಮನುಷ್ಯರಲ್ಲಿ ಯಾವನೋ ಒಬ್ಬ ಸಿದ್ಧಿಗಾಗಿ ಯತ್ನಿಸುತ್ತಾನೆ. ಅಂಥ ಸಾವಿರ ಸಿದ್ಧರಲ್ಲಿ ಯಾವನೋ ಒಬ್ಬ ತನ್ನನ್ನು ಸ್ವತಃ ತಿಳಿದುಕೊಳ್ಳುತ್ತಾನೆ" ಅಂದರೆ ಈ ದೇವರೆಂಬುದನ್ನು ವಸ್ತುತಃ ತಿಳಿಯುವದಲ್ಲ, ಸ್ವತಃ ಅದೊಂದು ತತ್ವವೆಂದು ತಿಳಿದುಕೊಳ್ಳುವುದೇ ನಿಜವಾದ ಅಂತಿಮ ಸಿದ್ಧಿಯಾಗಿದೆ"

ಮೂರ್ತಿರಾಯರಂತೆಯೇ (ಪುಟ 36) ಕಾಯ್ಕಿಣಿಯವರು ಸಹ ದೇವರ ಮಾನುಷೀಕರಣ (ಪುಟ 22) ದ ವ್ಯಾಪ್ತಿ ಹಾಗೂ ಅಸಂಗತತೆಯನ್ನು ಕುರಿತು ಒಪ್ಪುವುದಿಲ್ಲ. ಭಾಸ್ಕರಾಚಾರ್ಯನ ಖಗೋಲ ಜ್ಞಾನ ಹಾಗೂ ರೂಢಮೂಲವಾದ ನಂಬಿಕೆಗಳ ಪರಸ್ಪರ ವೈರುಧ್ಯವನ್ನು ಉಲ್ಲೇಖಿಸುತ್ತಾರೆ. (ಪುಟ 13) ಹಿಂದೂ ಹಾಗೂ ಗ್ರೀಕ್ ದೇವದೇವತೆಗಳ ಪ್ರತಿಮೆಗಳಲ್ಲಿಯ ಮನುಷ್ಯ-ಪ್ರಾಣಿ ಸಂಗಮಗಳ ಬಗ್ಗೆ ಚರ್ಚಿಸುತ್ತಾರೆ. (38) ದಶಾವತಾರಗಳ ಬಗ್ಗೆ ಮೂರ್ತಿರಾಯರು ಹೀಗೆ ಬರೆಯುತ್ತಾರೆ.

"ಈ ಕಥೆಯು ಮತ್ತು ಅದನ್ನು ಕುರಿತ ವ್ಯಾಖ್ಯಾನದ ಆಧಾರದ ಮೇಲೆ ಯಾರಾದರೂ ನಮ್ಮ ಪೂರ್ವಿಕರಿಗೆ ವಿಕಾಸವಾದ (The Theory of Evolution) ಗೊತ್ತಿತ್ತು ಎಂಬ ತೀರ್ಮಾನಕ್ಕೆ ಬಂದರೆ ಅದು ಹುಚ್ಚುತನ- ಅಷ್ಟೇನೂ ಅಪರೂಪವಲ್ಲದ ಹುಚ್ಚುತನ. (ಪುಟ 24)

ಈ ವಿಚಾರವಾಗಿ ಕಾಯ್ಕಿಣಿಯವರು ಹೀಗೆ ಬರೆಯುತ್ತಾರೆ :

"ಥಿಯೋಸೋಫಿಯ ಅನುಯಾಯಿ ವಿದ್ವಾಂಸರನೇಕರು ನಮ್ಮ ದಶಾವತಾರ ಗಳನ್ನು ಡಾರ್ವಿನ್‌ನ ಉತ್ಕ್ರಾಂತಿವಾದದ ಜೀವವಿಕಾಸದ ಹಂತಗಳಾಗಿ ಪ್ರತಿ ಪಾದಿಸಿದ್ದುಂಟು. (ಪುಟ 47)

ವೇದಾಂತದ ಪರಿಭಾಷೆಗಳಲ್ಲಿ ಒಂದಾದ "ಬ್ರಹ್ಮ" ಶಬ್ದದ ವ್ಯಾಪ್ತಿಯನ್ನು ಲೌಕಿಕವಾಗಿಯೂ ಹಿಗ್ಗಿಸಿದಂತೆ ಕಾಯ್ಕಿಣಿಯವರೂ ಸಹ ಅದರ ಅರ್ಥವನ್ನು ಹಿಗ್ಗಿಸಿದ್ದಾರೆ. ಆದರೆ ಒಂದು ವ್ಯತ್ಯಾಸವಿದೆ. ಕಾಯ್ಕಿಣಿಯವರು ಬ್ರಹ್ಮದ ಅಂಶಗಳನ್ನು ಮಾನವರಿಗೆ ಮಾತ್ರವೇ ಸೀಮಿತಗೊಳಿಸಿದ್ದಾರೆ. ಮೂರ್ತಿರಾಯರು ಈ ವ್ಯಾಪ್ತಿಯನ್ನು ಇನ್ನೂ ಹಿಗ್ಗಿಸುತ್ತಾರೆ. ಈ ತೌಲನಿಕತೆ ಈ ಕೆಳಕಂಡಂತಿದೆ.

ಕಾಯ್ಕಿಣಿ: ಈ ಬ್ರಹ್ಮ-ಈ ಬ್ರಹ್ಮತೆ ಅಂದರೆ, ಮಹಾವ್ಯಾಪಕ ತತ್ವ ಒಂದು ಶಕ್ತಿಯಾಗಿದ್ದು ಅದರಿಂದ ಈ ಸೃಷ್ಟಿಯಲ್ಲಿ ನಾವೂ ನೀವೂ ಒಡಗೂಡಿ ಹುಟ್ಟಿ ಬಂದಿದ್ದರಿಂದ ನಾವೆಲ್ಲ ಆ ಬ್ರಹ್ಮದ ಅಂಶಗಳೇ ಎನ್ನಬಹುದು. (ಪುಟ 55)

ಮೂರ್ತಿ : "ಮೇಲಿನ ಆಲೋಚನಾ ಸರಣಿಯನ್ನು ನಮ್ಮ ಅನುಭವಕ್ಕೆ ಬಂದಿರುವ ಪ್ರಪಂಚಕ್ಕೆ ನೋಡೋಣ. ಇರುವುದೆಲ್ಲ ಸತ್ಯ. ಬ್ರಹ್ಮ ಅಂದ ಮೇಲೆ ಒಳ್ಳೆಯದು, ಕೆಟ್ಟದು, ಚಿಕ್ಕದು, ದೊಡ್ಡದು, ಸುಖ, ದುಃಖ, ನ್ಯಾಯ, ಅನ್ಯಾಯ, ಈ ದ್ವಂದ್ವಗಳೆಲ್ಲ ಸತ್ಯದಲ್ಲಿ ಸೇರುತ್ತವೆ. ನಾವೂ ಸೇರಿದಂತೆ, ಇರುವುದೆಲ್ಲ ಬ್ರಹ್ಮ, ದೇವರಿರಲಿ, ಇಲ್ಲದಿರಲಿ ಈ ಬ್ರಹ್ಮ ಇದೆ.........ಸೈತಾನನೂ(ಇದ್ದರೆ) (101-2)

ಕಾಯ್ಕಿಣಿಯವರೂ ಹಾಗೂ ಮೂರ್ತಿರಾಯರೂ ದೇವರ ಅಸ್ತಿತ್ವದ ಬಗ್ಗೆ ಒಂದು ಬಿಂದುವಿನಲ್ಲಿ ಸೇರುತ್ತಾರೆ. ಅವರು ನಿರೂಪಿಸುವ, ಆರೋಪಿಸುವ ದೈವತ್ವದ ಲಕ್ಷಣಗಳು ಇಬ್ಬರಲ್ಲೂ ಒಮ್ಮತದಿಂದ ಕೂಡಿವೆ. ಇದು ಈ ಇಬ್ಬರ ಮಿತಿಯೂ ಆದರೂ, ದೇವರನ್ನು ಸೃಷ್ಟಿಸಿದವ ಮಾನವನೇ ಎಂಬ ಮಾತನ್ನು ನಾವು ಒಪ್ಪುವುದಾದಲ್ಲಿ ಈ ಎರಡು ವಾದಗಳನ್ನೂ ಒಪ್ಪಬಹುದಾಗುತ್ತದೆ. ಈ ಇಬ್ಬರ ಅಭಿಪ್ರಾಯ ಸಾಮ್ಯ ಹೀಗಿದೆ.

"ಈ ದೇವರು ಪ್ರೇಮದ ಸಾಕಾರ ಮೂರ್ತಿ- ಪ್ರೇಮವೇ ದೇವರು. ನಮ್ಮನ್ನು ಸಲಹುವುದಕ್ಕೆ ಅವನು ತಾನೇ ಓಡಿಬರುತ್ತಾನೆ. ಪಾಪಿಗಳನ್ನು ಕೂಡ (ಅವರು ಪಶ್ಚಾತ್ತಾಪ ಪಟ್ಟರೆ) ಅಪ್ಪಿಕೊಂಡು ಮುತ್ತಿಟ್ಟು ಬರಮಾಡಿಕೊಳ್ಳುತ್ತಾನೆ. ಇದುವರೆಗೆ ನಾವು ಪರಿಶೀಲಿಸಿದ ಎಲ್ಲ ಕಲ್ಪನೆಗಳಿಗಿಂತ ಶ್ರೇಷ್ಠವಾದ ಕಲ್ಪನೆ ಇದು. ಇಂಥವನು ನಮಗೆ ಬೇಕಾದ ದೇವರು. (ಮೂರ್ತಿರಾಯರು 79)

ಇನ್ನು ಭಾವನೆ ಮತ್ತು ಇಚ್ಛೆ (ಚಿತ್ ಮತ್ತು ಶಿವ)ಗಳನ್ನು ಕೂಡಿಯೇ ವ್ಯಾಪಿಸಿ ಚೈತನ್ಯ ನೀಡಬಲ್ಲ ಇನ್ನೊಂದು ಪ್ರೇರಣೆ ಇದೆ. ಅದು ಪ್ರೇಮ. ನಾರದ ಭಕ್ತಿ ಸೂತ್ರಗಳಲ್ಲಿ ಈಶ್ವರನ ವ್ಯಾಖ್ಯೆಯನ್ನೇ ಸಃ ಈಶಃ ಅನಿರ್ವಚನೀಯ ಪ್ರೇಮ ಸ್ವರೂಪಃ... ಎಂದು ಮಾಡಲಾಗಿದೆ. ಅಂದರೆ ಈ ಪ್ರೇಮ ಒಂದು ಪರಮ ಮೌಲ್ಯ. ಪ್ರೇಮವೇ ದೇವರು.

ಅಂದರೆ ಆ ಕುರಿತು ನಮ್ಮ ತಕರಾರು, ಯಾವುದೇ ಕರಾರು ಇಲ್ಲ. (ಕಾಯ್ಕಿಣಿ ಪು.75) ಕಾಯ್ಕಿಣಿಯಾದರೂ ಸಹ ಸಂಪ್ರದಾಯ, ಪೂಜೆ, ಆಚರಣೆಗಳನ್ನು ಗೌರವಿಸುವುದು ಅಲ್ಲಿ ಕಾಣುವ ಅಂದ, ಕಲಾತ್ಮತೆಗಾಗಿ. ಮೂರ್ತಿರಾಯರು ತಮ್ಮ ಪ್ರವಾಸ ಗ್ರಂಥದಲ್ಲಿ, ಆತ್ಮ ಚರಿತ್ರೆಯಲ್ಲಿ ಈ ವಿಚಾರನ್ನು ಹಲವು ಸಲ ಉಲ್ಲೇಖಿಸಿದ್ದಾರೆ. ಸಂಧ್ಯಾವಂದನೆ, ದೇವರ ಪೂಜೆ ಮುಂತಾದವುಗಳ ಆಚರಣೆಗಳ ಸಂದರ್ಭದಲ್ಲಿ ಅವರ ಮಂತ್ರ ಪಠನ ಅವರಿಗೆ ಸಂಗೀತದ ಆನಂದ ನೀಡಿದೆ. ಕಾಯ್ಕಿಣಿಯವರೂ ಇಂತಹ ಅನುಭವದ ಪ್ರಭಾವಕ್ಕೆ ಒಳಗಾದವರು. ಅವರ ಅನುಭವ ಹೀಗಿದೆ.

"ನಾನು ಸ್ವತಃ ಪರಮ ನಾಸ್ತಿಕ. ಆದರೆ ಬಾಲ್ಯದಿಂದಲೂ ನೋಡಿದ ಮಾಡಿಕೊಂಡು ಬಂದ ದೇವರ ಪೂಜೆಯಲ್ಲಿ ನನಗೊಂದು ಅಂದ, ಒಂದು ಸೊಗಸು ಕಾಣುತ್ತದೆ. ಅದು ತಪ್ಪಿದಾಗ ಏನೋ ಕಳೆದುಕೊಂಡಂತೆಯೂ ಅನಿಸುತ್ತದೆ. ದಿನಾಲೂ ನೇಮದಿಂದ ಚರಕಾ ನೂಲುವವರಿಗೆ ಆ "ಸೂತ್ರ ಯಜ್ಞ" ತಪ್ಪಿದಂತೆ ಅದೊಂದು ವಾಡಿಕೆಯ ಒಲವು. ಚಟದ ಒತ್ತಾಯ, ಖಾಸಗಿ ಚೇಷ್ಟೆ ಹೊರತು ಆಸ್ತಿಕತೆಯ ದಾಖಲೆ ಆಗುವುದಿಲ್ಲ.(15–16)

ದೇವರ ಬಗ್ಗೆ ತೀವ್ರವಾಗಿ ಚಿಂತನೆ ಮಾಡಿದ ಮತ್ತೊಬ್ಬ ವಿಚಾರವಂತ ಲೇಖಕರೆಂದರೆ ಬೀಚಿಯವರು. ಅವರೂ ಸಹ ಕಲೆಯ ದೃಷ್ಟಿಯಿಂದ ದೇವರನ್ನು ನೋಡುತ್ತಾರೆ. ಅವರ ಪ್ರವಾಸ ಕೃತಿಯ ಹೆಸರೇ 'ದೇವರಿಲ್ಲದ ಗುಡಿ' (1989) ರಷಿಯನ್ನರು ರಾಮಾಯಣದ ಬ್ಯಾಲೆಗಳ ಪ್ರದರ್ಶನಗಳನ್ನು ಏರ್ಪಡಿಸುವುದನ್ನು ಕಂಡು ಅವರು ಹೀಗೆ ಬರೆಯುತ್ತಾರೆ,

"ರಾಮಾಯಣದ ದೃಶ್ಯಗಳನ್ನೂ ಮಾಡುತ್ತಾರಂತೆ-ರಾಮ ದೇವರೆಂದಲ್ಲ, ಕೇವಲ ಕಲೆಗಾಗಿ" (68)

ಮೂರ್ತಿರಾಯರ ದೇವರು ಮೌಲ್ಯ ಮತ್ತು ಪ್ರೇಮಗಳಲ್ಲಿದ್ದಾನೆ. ಬೀಚಿಯವರ ದೇವರು ಸಹ ಹೀಗೆಯೇ. ಮೂರ್ತಿರಾಯರು ಯಾವ ಮೌಲ್ಯಗಳು ದೇವರ ಸ್ಥಾನವನ್ನು ಆಕ್ರಮಿಸುತ್ತವೆ ಎಂದು ಹೇಳಲಿಲ್ಲ. ನಿರೀಶ್ವರವಾದಿಯಾದ ಬೀಚಿಯವರು ತಮ್ಮ ಪ್ರವಾಸ ಕೃತಿಯ ಪುಟಪುಟಗಳಲ್ಲಿಯೂ ರಷಿಯಾ ಹಾಗೂ ಭಾರತಗಳ ನಡುವೆ ಕಾಣುವ ವ್ಯತ್ಯಾಸಗಳನ್ನು ದೇವರ ಅಸ್ತಿತ್ವದ ದೃಷ್ಟಿಯಿಂದಲೇ ನೋಡುತ್ತಾರೆ. ಮೌಲ್ಯಗಳೇ ದೇವರೆಂದು ಒಪ್ಪಿದ ಮೂರ್ತಿರಾಯರು ನೇರವಾಗಿ ಅವುಗಳನ್ನು ವಿವರಿಸುವ ಗೋಜಿಗೆ ಹೋಗದಿದ್ದರೂ, ಪರೋಕ್ಷವಾಗಿ, ಸೂಚ್ಯವಾಗಿ ಅವುಗಳನ್ನು ಅವರ ಇನ್ನಿತರ ಸಾಹಿತ್ಯಕೃತಿಗಳಲ್ಲಿ ಉಲ್ಲೇಖಿಸುತ್ತಾರೆ. ಬೀಚಿಯವರು ಇದೇ ಅಭಿಪ್ರಾಯವನ್ನು ವಾಚ್ಯವಾಗಿ ಹೀಗೆ ಬರೆಯುತ್ತಾರೆ.:

"ದುಡಿತ ಅವರ ಮೊದಲ ದೇವರಾದರೆ, ಪ್ರಾಮಾಣಿಕತೆ ಅವರ ಎರಡನೆಯ ದೇವರು."( ಪುಟ 58)

ಮೂರ್ತಿರಾಯರು ತಮ್ಮ ಆತ್ಮ ಚರಿತ್ರೆಯಲ್ಲಿ ಒಂದು ಪ್ರಸಂಗವನ್ನು ಅವರ ಸಹಜ ಹಾಸ್ಯ ಶೈಲಿಯಲ್ಲಿ ಬರೆಯುತ್ತಾರೆ. (ಪ್ರಸ್ತುತ ವಿಭಾಗ ಅವರ "ದೇವರು" ಕೃತಿಯನ್ನು ಕುರಿತಾಗಿದ್ದರೂ, ಆತ್ಮ ಚರಿತ್ರೆಯ ಕೆಲವು ಪುಟಗಳಲ್ಲಿಯೂ, ಇದರ ಪ್ರಾತಿನಿಧಿಕ ಸ್ವರೂಪವನ್ನು ಕಾಣಬಹುದು. ಅವರ ಸಮಗ್ರ ಸಾಹಿತ್ಯದ ದ್ರವ್ಯವೂ

ಇದೇ ಆಗಿದೆ) ಮೂರ್ತಿರಾಯರು ಸತ್ಯನಾರಾಯಣ ಪೂಜೆಯ ದಿನ ನಡೆದ ಘಟನೆಯನ್ನು (ಪು. 28–29, 30 ವಿಶ್ಲೇಷಿಸುತ್ತಾರೆ)

ಬೀಚಿಯವರ ಒಂದು ಅಭಿಪ್ರಾಯ ಹೀಗಿದೆ.

"(ರಷಿಯಾದಲ್ಲಿ) ಒಂದು ಕಾಸಿಗೆ ಒಂದು ದಿನಕ್ಕೆ ಒಂದೇ ಒಂದು ಕಾಸು ಬಡ್ಡಿ ತೆಗೆದುಕೊಂಡು, ಆ ಪಾಪ ಪರಿಹಾರಕ್ಕೆಂದು ತಿಂಗಳಿಗೊಮ್ಮೆ ತಿರುಪತಿಗೆ ಹೋಗಿ ತಲೆ ಬೋಳು ಮಾಡಿಕೊಂಡು, ಮನೆಯಲ್ಲಿ ಸತ್ಯನಾರಾಯಣ ಮಾಡುವ ಬಡ್ಡಿ ಮಕ್ಕಳಂತೂ ಇಲ್ಲವೇ ಇಲ್ಲ". (ಪುಟ 65)

ಬೀಚಿಯವರ ಈ ಪ್ರವಾಸ ಕೃತಿಯಲ್ಲಿ "ದೇವರು"ಎಂಬ ಒಂದು ಅಧ್ಯಾಯವೇ ಇದೆ. (ಪು.129–139) ಮೂರ್ತಿರಾಯರಂತೆ ಬೀಚಿಯವರೂ ನಿರೀಶ್ವರವಾದಿ. ಆದರೆ ಮೂರ್ತಿರಾಯರ ಪತ್ನಿಯಂತೆ ಬೀಚಿಯವರ ಪತ್ನಿಯೂ ಸಹ ಈಶ್ವರವಾದಿ. ಮೂರ್ತಿರಾಯರು ಪ್ರಯಾಣಕ್ಕೆ ಪ್ರವಾಸ ಹೋದಾಗ ಅವರ ಪತ್ನಿ "ವೇಣಿ ದಾನ" ಮಾಡಿದ ಪ್ರಸಂಗ ಅವರ ಆತ್ಮ ಚರಿತ್ರೆಯಲ್ಲಿ ಬರುತ್ತದೆ. ಬೀಚಿಯವರು ತಮ್ಮ ಪತ್ನಿಯ ದೇವತಾಶ್ರದ್ಧೆಯ ಬಗ್ಗೆ ಹೀಗೆ ಬರೆಯುತ್ತಾರೆ.

"ಆದರೆ ನನ್ನ ಮನೆಯಲ್ಲಿ ದೇವರ ಕೋಣೆಯಿದೆ, ಪುಟ್ಟಿಗಟ್ಟಲೆ ದೇವರುಗಳಿವೆ. ಅವೆಲ್ಲವೂ ನನ್ನ ಹೆಂಡತಿಯ ದೇವರುಗಳು. ತನ್ನ ಪಾಲಿನ ಮತ್ತು ನನ್ನ ಪಾಲಿನ ಪೂಜೆಯನ್ನು ನನ್ನ ಮಡದಿಯೇ ಮಾಡುತ್ತಾಳೆ. ನಾನು ನಿರೀಶ್ವರವಾದಿಯಾಗಿರುವುದು ನನ್ನ ಹೆಂಡತಿಗೆ ಎಷ್ಟು ದುಃಖವಾಗಿದೆ ಎಂಬುದು ಈ ಘಟನೆಯಿಂದ ಸ್ಪಷ್ಟವಾದೀತು". (138)

ಮೂರ್ತಿರಾಯರು, ಬೀಚಿಯವರು, ಇಬ್ಬರೂ ನಿರೀಶ್ವರವಾದಿಗಳು. ಆದರೆ ಒಂದು ವಿಶಿಷ್ಟವಾದ ವ್ಯತ್ಯಾಸವಿದೆ. ಮೂರ್ತಿರಾಯರು ಹಲವು ವರ್ಷ ದೇವರ ಪೂಜೆ ಮಾಡಿದವರು. ಅನಂತರ ಅದರಲ್ಲಿ ತನ್ಮಯತೆ ಇಲ್ಲದುದರಿಂದ ಬಿಟ್ಟುಬಿಟ್ಟರು. ಆದರೆ ಮಂತ್ರದ ನಾದ ಮಾಧುರ್ಯಕ್ಕೆ ಮನಸೋತವರು. ವೇದಘೋಷವನ್ನು ಮೆಚ್ಚಿ ಕೊಂಡವರು. ಮಂತ್ರಪಠನ ಅವರಿಗೆ ಸಂಗೀತ ನೀಡುವ ಆನಂದವನ್ನು ನೀಡುವುದೆಂದು ಅವರೇ ಹೇಳಿಕೊಂಡಿದ್ದಾರೆ. ಆದರೆ ಬೀಚಿಯವರ ಅನುಭವ ಬೇರೆ. ಅವರು ಹೀಗೆನ್ನುತ್ತಾರೆ. ದೇವರು, ಧೂಪ, ಪೂಜೆ, ಮಂತ್ರ ಮುಂತಾದವುಗಳಲ್ಲಿ ನನಗೆಷ್ಟೂ ಶ್ರದ್ಧೆ ಇಲ್ಲ.... ದೇವರ ಪೂಜೆ ನನಗಿಲ್ಲ. (138)

ಬೀಚಿಯವರ ಸೃಜನಶೀಲ ಬರವಣಿಗೆಗಳಲ್ಲಿ ಹೇಗೋ ಹಾಗೆ ಕಾದಂಬರಿ ಗಳಲ್ಲಿಯೂ ಸಹ ಅವರ ನಾಸ್ತಿಕತೆಯ ಅಭಿವ್ಯಕ್ತಿಯಾಗುತ್ತದೆ. ಇದು ಅವರ ಜೀವನ ದರ್ಶನವೂ ಹೌದು. ಅವರು ತಮ್ಮ "ಬ್ರಹ್ಮಚಾರಿಯ ಮಗ" ಎಂಬ ಕಾದಂಬರಿಯಲ್ಲಿ ಹೀಗೆ ಬರೆಯುತ್ತಾರೆ.

"ದೇವನಿಲ್ಲದ ಲೋಕೋದ್ಧಾರದ ಮೋಹ ದೇವನ ಏಜೆಂಟರಾದ ಅರ್ಚಕರು ಗಳಿಗೆ. ತಂತಮ್ಮ ದೇವರುಗಳ ಮಹಿಮೆಯನ್ನು ಕರಪತ್ರಗಳಲ್ಲಿ ಅಚ್ಚು ಮಾಡಿಸಿ, ದೇಶ ದಲ್ಲೆಲ್ಲಾ ಹಂಚುವ ಹುಚ್ಚು ಇವರದು. ಇದನ್ನೆಲ್ಲಾ ಅರಿತೂ ಕಣ್ಣು ಮುಚ್ಚಿ ಕುಳಿತು ಕೊಳ್ಳುವ ನಾಟಕೀಯತೆಗೆ ಕೊರತೆಯೇ ಕಳ್ಳ ದೇವರುಗಳಲ್ಲಿ? ಸುಳ್ಳು ಪೂಜಾರಿಗಳಿಗೆ ಕಳ್ಳ ದೇವರೇ ಗತಿ.

ಮೂಢೋ ಮೂರ್ಖೋ, ಗಾರ್ದಭೋ, ಏಕರಾಶಿಃ ಮೂಢರಿರುವವರೆಗೂ ಮಠಾಧಿಪತಿಗಳು, ಮೂರ್ಖರಿರುವವರೆಗೂ. (1989 ಪುಟ 33)

ಮೂರ್ತಿರಾಯರ ಸಮಕಾಲೀನರಾದ, ಸುಪ್ರಸಿದ್ಧ ಚಿಂತನಕಾರರಾದ ಶಿವರಾಮ ಕಾರಂತರು ಈ ವಿಷಯವನ್ನು ಕುರಿತು ಮೂರ್ತಿರಾಯರಷ್ಟು ಖಚಿತವಾಗಿ ದೇವರ ಬಗ್ಗೆ ಹೇಳುವುದಿಲ್ಲ. ಏಕೆಂದರೆ, ಅವರೊಬ್ಬ ಅಜ್ಞೆಯತಾ ವಾದಿ. ಅವರ ನಿಲುವು ಖಚಿತವೆಂದು ಹೇಳಲಿಕ್ಕಾಗದಿದ್ದರೂ, ಹೇಳುವುದನ್ನು ಅವರು ಪ್ರಾಮಾಣಿಕವಾಗಿ ಹೇಳುತ್ತಾರೆ. ಅವರ ಪ್ರಾಮಾಣಿಕ ಬಿಚ್ಚುನುಡಿ ಹೀಗಿದೆ.

"ನಿಜವನ್ನು ಹೇಳಲೆ? ಎರವಲು ತಂದ ಪರರ ಮಾತುಗಳಲ್ಲದೆ ಹೋದರೆ ಸ್ವಂತಕ್ಕೆ ಅವನು ಇದ್ದಾನೆಯೇ, ಇಲ್ಲವೇ, ಹೇಗಿದ್ದಾನೆ, ಹೇಗಿರಬೇಕು- ಎಂಬ ವಿಚಾರದಲ್ಲಿ ನನಗೆ ಏನೇನೂ ಗೊತ್ತಿಲ್ಲ. ಗೊತ್ತಿಲ್ಲದ ವಿಷಯವನ್ನು ಗೊತ್ತಿದೆ ಎಂದು ತಿಳಿದು ನನ್ನ ವಾಕ್ಚಾತುರ್ಯವನ್ನು ಮೆರೆಯಿಸುವ ಚಪಲ ತೋರಿಸಿಕೊಳ್ಳಲಾರೆ. ಊಹೆಯಿಂದ ಆ ವರ್ಣನೆಯನ್ನು ಎಷ್ಟೋ ಮಾಡಬಹುದು. ಅನಂತ, ಸರ್ವವ್ಯಾಪ್ತಿ, ಸರ್ವಜ್ಞ..... ಇತ್ಯಾದಿ ಇತ್ಯಾದಿ. ಮಾತುಗಳು ತುಂಬಾ ದೊಡ್ಡದಾಗಿ ಕಾಣಿಸುವ ಮಾತುಗಳೇ. ಆ ಶಬ್ದಗಳನ್ನು ವಿವರಿಸಲು ಒಂದೊಂದು ಉದಾಹರಣೆ ಕೊಡು ಎಂದರೆ ಆ ಕೆಲಸ ನನ್ನಿಂದಾಗದು ಎಂದೇನು. ಅದರ ಜೊತೆಗೆ ನನ್ನ ಪಾಲಿಗೆ ಇನ್ನೊಂದು ಕಷ್ಟವೆಂದರೆ ಏನೇನೂ ಗೊತ್ತಿಲ್ಲದ ಒಡವೆಯನ್ನೋ, ವಸ್ತುವನ್ನೋ, ಅದಕ್ಕೆ ಮೀರಿದ್ದನ್ನು ನಂಬುವ ಕೆಲಸ. ಅದು ಮತ್ತಷ್ಟೂ ಕಷ್ಟದ್ದು.

ಪ್ರಾಯಶಃ ಯಾವನೇ ವ್ಯಕ್ತಿ ಯಾವುದೇ ಒಂದು ಕಲ್ಪನೆಯನ್ನು, ಅದು ಅಧರ್ಮವೇ ಇರಲಿ, ಕಾಲು ಅಡಿಯೇ ಇರಲಿ "ಅದು ಹೀಗೆಯೇ ಇದೆ" "ಹೀಗೆಯೇ ಇರಬೇಕು" "ಉಳಿದಾವುದೂ ನಿಜವಲ್ಲ" ಎಂದು ತನಗೆ ತಾನೇ ಗಟ್ಟಿಯಾಗಿ ಪಾಠ ಹೇಳುತ್ತಾ ಹೋದರೆ, ಅವನ ಪಾಲಿಗೆ ಅವನು ಎಣಿಸಿದ್ದು ನಿಜವಾಗಿಯೇ ಕಾಣಿಸೀತು. ಏಕೆಂದರೆ ಬದಲೊಂದನ್ನೂ ಆತ ಎಣಿಸಲಾರ, ಒಪ್ಪಲಾರ. ಆದರೆ ಅದು ಎಲ್ಲರಿಗೂ ಕಾಣಿಸಲೇಬೇಕಾದ, ಕಾಣಿಸಬಲ್ಲ ಸತ್ಯ ಎಂಬ ಮಾತಿಗೆ ನಿದರ್ಶನವಾಗಬೇಕಾಗಿಲ್ಲ ಎನಿಸುತ್ತದೆ ನನಗೆ. ಇಷ್ಟೆಲ್ಲವನ್ನೂ ಹೇಳಿ ನಿಮ್ಮನ್ನು ಪೀಡಿಸುವ ಬದಲು 'ದೇವರು' ಎಂಬ ಶಬ್ದ ಇದೆ, ಆ ಶಬ್ದಕ್ಕೆ ಗುರಿಯಾದ ವಸ್ತು ಇಂಥದು ಎಂದು ನಾನಾಗೇ ಕಲ್ಪಿಸಿಕೊಳ್ಳಲಾರೆ. ಹಾಗೆ ಕಲ್ಪಿಸಿಕೊಂಡವರ ಸಹಾಯವೂ ನನಗೆ ಪ್ರಯೋಜನ ಕೊಡಲಾರದು ಎಂದರೆ ಆಗದೆ? (ಸುಧಾ, 25 ಸೆಪ್ಟೆಂಬರ್ 83 ಪುಟ 15)

ಡಾ. ಹೆಚ್. ನರಸಿಂಹಯ್ಯನವರು ಗೋಪರಾಜು ರಾಮಚಂದ್ರರಾವ್ (ಗೋರಾ)ಎಂಬ ನಾಸ್ತಿಕರ ಬಗ್ಗೆ ಬರೆದಿದ್ದಾರೆ. ಅವರ ಸಮಾಜ ಸುಧಾರಣೆ, ಗಾಂಧೀ ವಾದದ ಅನುಷ್ಠಾನ, ಸಮಾಜ ಸೇವೆ ಇತ್ಯಾದಿಗಳ ಬಗ್ಗೆ ಹೀಗೆ ಬರೆಯುತ್ತಾರೆ.

"ನಾಸ್ತಿಕ ಕೇಂದ್ರದಲ್ಲಿ ಗೋರಾ ಅವರ ಮಕ್ಕಳು, ಸೊಸೆಯರು ಮೊಮ್ಮಕ್ಕಳು ಎಲ್ಲ ವಾಸಿಸುತ್ತಾರೆ, ಒಟ್ಟು 20–25 ಮಂದಿ ಆಗಬಹುದು. ಅವರೆಲ್ಲ ಕಟ್ಟಾ ನಾಸ್ತಿಕರೇ. ನಾಸ್ತಿಕ ಕೇಂದ್ರಕ್ಕೆ ನಾನು ಎರಡು ಸಲ ಭೇಟಿ ನೀಡಿದ್ದೇನೆ. ಅದೊಂದು ದೇವರಿಲ್ಲದ ಆಶ್ರಮ. ಅಲ್ಲಿರುವವರೆಲ್ಲರೂ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ನಿಸ್ವಾರ್ಥ ಸೇವೆಗಾಗಿ ತಮ್ಮನ್ನು ತಾವೇ ಅರ್ಪಿಸಿಕೊಂಡಿದ್ದಾರೆ. ದೇವರು ಇದ್ದರೆ ನಾಸ್ತಿಕ ಕೇಂದ್ರದಲ್ಲಿ

ಇರುವುದು ಖಚಿತ. ಸಾಂಪ್ರದಾಯಿಕ ಮತದಲ್ಲಿರುವುದು ತುಂಬಾ ಅನುಮಾನ. (ಸುಧಾ-8-1-95 ಪುಟ-31)

ಮೂರ್ತಿರಾಯರ ಇದೇ ವಿಚಾರವನ್ನು ಕುರಿತ ಅಭಿಪ್ರಾಯ ಇನ್ನೂ ಖಚಿತವಾಗಿ ಹೀಗಿದೆ.

"ನಾನು ಕಾಣದ ಆದರೆ ಭಾರತ ಸ್ವಾತಂತ್ರ್ಯ ಚಳುವಳಿ ನಡೆಯುತ್ತಿದ್ದ ಕಾಲದಲ್ಲಿ ಪ್ರಸಿದ್ಧರಾಗಿದ್ದ 'ಗೋರಾ' (ರಾಮಚಂದ್ರ?)ಎಂಬುವವರು ಗಾಂಧೀಜಿಯವರ ಅನುಯಾಯಿಗಳು. ಉಪ್ಪಿನ ಸತ್ಯಾಗ್ರಹ, ಹರಿಜನೋದ್ಧಾರ, ನಿರಕ್ಷರತಾ ನಿರ್ಮೂಲನ ಇತ್ಯಾದಿ ದೇಶೋದ್ಧಾರಕ್ಕಾಗಿ ನಡೆದ ಚಳುವಳಿಗಳಲ್ಲೆಲ್ಲಾ ಉತ್ಸಾಹದಿಂದ ಕೆಲಸ ಮಾಡಿದವರು. ತತ್ಸಂಬಂಧವಾಗಿ ಜೈಲಿಗೆ ಹೋದವರು. ನಿಷ್ಕಲ್ಮಶ ಜೀವನ ನಡೆಸಿದವರು. ಈ ಮಹನೀಯರು ಉಗ್ರ ನಿರೀಶ್ವರವಾದಿ. ಇದನ್ನು ತಿಳಿದೂ ತಿಳಿದೂ ಗಾಂಧೀಜಿ ಆತನಲ್ಲಿ ಸಂಪೂರ್ಣ ನಂಬಿಕೆ ಇಟ್ಟಿದ್ದರು. ಅಂದ ಮೇಲೆ ಆತನ ಸಜ್ಜನಿಕೆ, (ಮತ್ತು ಗಾಂಧಿಯವರ ದೊಡ್ಡತನ) ಎಷ್ಟು ಎತ್ತರದ ಮಟ್ಟದ್ದು ಎಂಬುದು ಸ್ಪಷ್ಟವಾಗುತ್ತದೆ.
(ಪುಟ -127)

ಈಚೆಗಿನ ದಿನಗಳಲ್ಲಿ ಪವಾಡ, ವಿಭೂತಿ ಸೃಷ್ಟಿ, ಮೂಢ ನಂಬಿಕೆಗಳ ವಿರುದ್ಧ ಯುದ್ಧ ಸಾರಿದ ನರಸಿಂಹಯ್ಯನವರು ವಿಜ್ಞಾನ ವಿದ್ಯಾರ್ಥಿಯಾಗಿ ದೇವರೆಂಬ ಅಮೂರ್ತ ಶಬ್ದವನ್ನು ಪ್ರಾಯೋಗಿಕವಾಗಿ ಅನುಭವಕ್ಕೆ ತಂದುಕೊಂಡಿದ್ದರಲ್ಲದೆ, ನಂಬುವವರಲ್ಲ. ಅವರು ಈ ಕುರಿತಾಗಿ ಮಾಡಿದ ಅಧ್ಯಯನದ ವ್ಯಾಪ್ತಿಯಲ್ಲಿ ಅವರ ಅನಿಸಿಕೆ ಹೀಗೆ ಸಾಗುತ್ತದೆ.

"ದೇವರು ಇದ್ದಾನೆಯೇ, ಇಲ್ಲವೆ, ಇದ್ದರೆ ಅವನ ಗುಣಗಳೇನು, ಬದುಕಿಗೆ ಉದ್ದೇಶವೇನಾದರೂ ಇದೆಯೇ, ಸಾವೇ ಜೀವನದ ಕೊನೆಯೇ, ಅಥವಾ ಪುನರ್ ಜನ್ಮವಿದೆಯೇ ಎಂಬ ಸಮಸ್ಯೆಗಳು ನನ್ನನ್ನು ಸುಮಾರು 40 ವರ್ಷಗಳಿಂದ ಕಾಡುತ್ತಿವೆ. ಇವುಗಳ ಸತ್ಯಾಸತ್ಯತೆಯನ್ನು ಅರಿಯಲು ಸಾಕಷ್ಟು ಧಾರ್ಮಿಕ ಗ್ರಂಥಗಳನ್ನು ಓದಿದ್ದೇನೆ. ಧರ್ಮ ಗುರುಗಳೊಂದಿಗೆ, ಆಸ್ತಿಕರೊಂದಿಗೆ, ವಿಚಾರವಾದಿಗಳೊಂದಿಗೆ, ನಾಸ್ತಿಕರೊಂದಿಗೆ ಚರ್ಚೆ ಮಾಡಿದ್ದೇನೆ. ಸ್ವತಂತ್ರವಾಗಿ ಚಿಂತನೆ ಮಾಡಿದ್ದೇನೆ. ಆದರೂ ಈ ಮೂಲ ಪ್ರಶ್ನೆಗಳಿಗೆ ಖಚಿತವಾದ, ಸ್ಪಷ್ಟವಾದ ಉತ್ತರ ನನಗಿನ್ನೂ ಸಿಕ್ಕಿಲ್ಲ.
(ಸುಧಾ,25-9-83 ಪುಟ-15)

ದೇವರ ಬಗ್ಗೆ ಚಿಂತನೆ ಮಾಡಿದ, ಈಚೆಗೆ ನಿಧನರಾದ ಡಾ. ಎಸ್. ಚಂದ್ರಶೇಖರ ಅವರು ದೇವರ ಬಗ್ಗೆ ತಳೆದ ಅಭಿಪ್ರಾಯ ಮೂರ್ತಿರಾಯರ ಅಭಿಪ್ರಾಯದೊಂದಿಗೆ ಸಮನ್ವಯಗೊಳಿಸಬಹುದು.

We humans invented god to be the target of our own joys and sorrows. The greatest invention man has ever made is god. I am a Hindu Atheist with no belief in god but following a rational way of life.
(I.E. 23-08-95 P-5)

ಮೂರ್ತಿರಾಯರು ಯುದ್ಧ ಹಾಗೂ ದೌರ್ಜನ್ಯಗಳನ್ನು ಕುರಿತು ದೇವರ ನಿಷ್ಕ್ರಿಯತೆಯನ್ನು ಮತ್ತು ಅಸಹಾಯಕತೆಯನ್ನು ಕುರಿತು ಚಿಂತನೆ ಮಾಡಿದಂತೆ (ಪುಟ

107, 119) ಸುಪ್ರಸಿದ್ಧ ಕ್ರಾಂತಿಕಾರಿ ಭಗತ್ ಸಿಂಗ್‌ನ ಚಿಂತನೆಯೂ ಉಲ್ಲೇಖನಾರ್ಹ. ಅವನು ಸೆರೆಮನೆಯಲ್ಲಿದ್ದಾಗ ಬರೆದ "ನಾನೇಕೆ ನಾಸ್ತಿಕ" ಎಂಬ ಒಂದು ಸಣ್ಣ ಪುಸ್ತಿಕೆಯಲ್ಲಿ ಹೀಗೆ ಬರೆಯುತ್ತಾನೆ.

"ಹಿಂದೆ ಮತ್ತು ಇಂದೂ ಕೂಡ ಪ್ರತಿಯೊಂದು ದಿನದಲ್ಲೂ, ಪ್ರತಿಯೊಂದು ಘಂಟೆಯಲ್ಲೂ, ಪ್ರತಿಯೊಂದು ನಿಮಿಷದಲ್ಲೂ, ಅಸಂಖ್ಯಾತ ದುರಂತಗಳಿಗೆ ಕಾರಣನಾಗಿದ್ದು, ಸಾರ್ವಕಾಲಿಕ ಹೀರೋ ಆಗಿ ವಿಜೃಂಭಿಸುತ್ತಿರುವ ನಿಮ್ಮ ಸರ್ವಶಕ್ತ ಭಗವಂತನನ್ನು ಹೇಗೆ ಸಮರ್ಥಿಸಿಕೊಳ್ಳುತ್ತೀರಿ? ಆ ಛಂಗೀಸ್‌ಖಾನ್‌ನ ಕಾರ್ಯಗಳನ್ನು ಮೀರಿಸುವಂತಹ ದುಷ್ಕೃತ್ಯಗಳನ್ನು ಪ್ರತಿ ಕ್ಷಣದಲ್ಲೂ ಮಾಡುತ್ತಿರುವ ಅವನಿಗೆ ಹೇಗೆ ಬೆಂಬಲ ನೀಡುತ್ತೀರಿ? ಸದಾ ವಿಷಮಯ ಅಶಾಂತಿಯ ತಾಣವಾಗಿರುವ, ನಿಜವಾಗಿಯೂ ಒಂದು ನರಕವಾಗಿರುವ ಜಗತ್ತನ್ನು ಆತ ಏಕೆ ಸೃಷ್ಟಿಸಿದ ಎಂದು ನಿಮ್ಮೊಡನೆ ನಾನು ಕೇಳುತ್ತೇನೆ. ಮಾನವನನ್ನು ಸೃಷ್ಟಿ ಮಾಡದೆ ಇರಬಲ್ಲ ಸಾಮರ್ಥ್ಯವಿದ್ದಾಗ್ಯೂ ಆ ಸರ್ವ ಶಕ್ತ ಅವನನ್ನೇಕೆ ಉಂಟು ಮಾಡಿದ? (ಪುಟ 32)

ಇನ್ನೊಂದು ಪ್ರಶ್ನೆಯಿದೆ. ಒಬ್ಬ ಮನುಷ್ಯ ಯಾವುದೋ ಒಂದು ಪಾಪ ಅಥವಾ ಅಪರಾಧವನ್ನು ಮಾಡುತ್ತಿರುವಾಗ ಆ ನಿಮ್ಮ ಸರ್ವಶಕ್ತ ದೇವರು ಅವನನ್ನು ನಿಲ್ಲಿಸಿ ಹಾಗೆ ಮಾಡದಂತೆ ತಡೆಯುವುದಿಲ್ಲವೇಕೆ? ಅವನು ಅದನ್ನು ಬಹಳ ಸುಲಭವಾಗಿ ಮಾಡಬಹುದು. ಯುದ್ಧಕೋರರನ್ನು ಅವನೇಕೆ ನಾಶ ಮಾಡಲಿಲ್ಲ ಅಥವಾ ಅವರಲ್ಲಿದ್ದ ಯುದ್ಧೋನ್ಮಾದವನ್ನು ನಾಶ ಮಾಡಿ ಮನುಕುಲದ ಮೇಲೆ ಎರಗಿ ಬಂದ ಮಹಾಯುದ್ಧದ ಸರ್ವನಾಶವನ್ನು ಏಕೆ ತಪ್ಪಿಸಲಿಲ್ಲ? ಭಾರತವನ್ನು ವಿಮುಕ್ತಿಗೊಳಿಸುವುದಕ್ಕಾಗಿ ಬ್ರಿಟಿಷ್ ಜನತೆಯ ಮನಸ್ಸಿನಲ್ಲಿ ಕೊಂಚವಾದರೂ ಅಂತಹ ಭಾವನೆಗಳನ್ನು ನಿಮ್ಮ ದೇವರು ಏಕೆ ಹುಟ್ಟಿಸುವುದಿಲ್ಲ? ಉತ್ಪಾದನೆಯ ಸಾಧನೆಗಳ ರೂಪದಲ್ಲಿರುವ ತಮ್ಮೆಲ್ಲ ವೈಯಕ್ತಿಕ ಆಸ್ತಿಯ ಮೇಲಿನ ಹಕ್ಕನ್ನೂ ಪರೋಪಕಾರ ಭಾವನೆಯ ಉತ್ಸಾಹದಿಂದ ಬಿಟ್ಟು ಕೊಡುವಂತೆ ಎಲ್ಲ ಬಂಡವಳಿಗಾರರ ಹೃದಯದಲ್ಲಿ ಆ ದೇವರೇಕೆ ಪ್ರೇರಣೆಯನ್ನು ಬಿತ್ತುವುದಿಲ್ಲ? ಇದರಿಂದ ಇಡೀ ಶ್ರಮಿಕ ಸಮುದಾಯವನ್ನು ಬಂಡವಾಳ ಶಾಹಿ ದಾಸ್ಯ ದಿಂದ ವಿಮೋಚನೆಗೊಳಿಸಬಹುದಲ್ಲ. ಆದರೆ ದೇವರೇಕೆ ಆ ಮನಸ್ಸು ಮಾಡುವುದಿಲ್ಲ."

(ಪುಟ –36)

ಮೂರ್ತಿರಾಯರ ಒಂದು ಅಭಿಪ್ರಾಯ ಭಗತ್ ಸಿಂಗ್‌ನ ಈ ಅಭಿಪ್ರಾಯ ದೊಂದಿಗೆ ಹೀಗೆ ಸಮನ್ವಯಗೊಳಿಸಬಹುದು.

"ಈ ಥಿಯರಿ ನಮ್ಮನ್ನು ವಿಕಾಸವಾದದ (Theory of Evaluation) ಬಳಿಗೆ ಒಯ್ಯುತ್ತದೆ. ವಿಕಾಸವಾದವು ವಿಜ್ಞಾನದ ಭಾಷೆಯನ್ನು ಬಳಸುತ್ತದೆ. . .

(ಪುಟ –100)

ಈ ಜಗತ್ತಿನ ಉಗಮ ಮತ್ತು ಮನುಷ್ಯನ ಗುಟ್ಟನ್ನು ಕುರಿತಂತೆ ನಾನು ಏನು ವಿವರಣೆ ನೀಡುತ್ತೇನೆಂದು ನೀವು ಕೇಳುತ್ತೀರಾ? ಸರಿ ಹೇಳುತ್ತೇನೆ ಕೇಳಿ. ಚಾರ್ಲ್ಸ್ ಡಾರ್ವಿನ್ ಈ ವಿಷಯದ ಬಗ್ಗೆ ಸ್ವಲ್ಪ ಬೆಳಕು ಚೆಲ್ಲಿದ್ದಾನೆ....... ಡಾರ್ವಿನ್‌ನ "ಜೀವಿಗಳ ಹುಟ್ಟು" ಎಂಬ ಗ್ರಂಥವನ್ನು ಓದಿ.

(ಪುಟ–37)

ಈ ಅಮೂರ್ತ ಶಬ್ದವನ್ನು ಕುರಿತು ಇನ್ನೂ ಕೆಲವರನ್ನು ಪ್ರಶ್ನಿಸಿದಾಗ ಅವರಲ್ಲಿ ಇದರ ಬಗ್ಗೆ ಏನೂ ಖಚಿತವಾಗಿ ಹೇಳಬಹುದಾದ ಇದಮಿತ್ಥಮ್ ಎಂಬ ಉತ್ತರವಿಲ್ಲದ ಕಾರಣ ಅವರು ನೀಡಿದ ಉತ್ತರ ಕೊಂಚ ಅಸ್ಪಷ್ಟವೇ ಆಗಿದೆ. ಈ ಕೆಳಗಿನ ಹೇಳಿಕೆಗಳು ಗಮನಾರ್ಹ.

"ನನಗೆ ದೇವರಲ್ಲಿ ನಂಬಿಕೆ ಉಂಟೆ? ಪ್ರಶ್ನೆಗೆ ನೇರ ಉತ್ತರ ಕೊಡುವುದು ಅಷ್ಟು ಸುಲಭವಲ್ಲ. ಆದರೆ ಒಂದು ಮಾತು ನಿಶ್ಚಿತ. ನಮ್ಮ ಜನಕ್ಕೆ ಬಹಳ ಪ್ರಿಯವಾದ ಬ್ರಹ್ಮ, ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳ ಅಥವಾ ಇತರ ನಮ್ಮ ಅಗಣಿತ ದೇವತಾ ಮೂರ್ತಿಗಳ ರೂಪ ಕಲ್ಪನೆಯಲ್ಲಿ ನನಗೆ ನಂಬಿಕೆಯಿಲ್ಲ. ನಿಜಕ್ಕೂ ಈ ರೂಪವೇ ಒಂದು ಮಿಥ್ಯ. (ಪ್ರೊ. ಜೆ.ಸಿ. ಭಟ್ಟಾಚಾರ್ಯ, ಸುಧಾ–25–9–83 ಪುಟ 16) 'ದೇವರು' ಎಂಬುದಕ್ಕೆ 'ಕಲ್ಪನೆ'ಯಲ್ಲಿ ಮಾತ್ರ ಅಸ್ತಿತ್ವ ಸಾಧ್ಯ. ಅರ್ಥಾತ್ ಅದೂ ಅನೇಕ ಕಲ್ಪನೆಗಳಂತೆ ಒಂದು ಕಲ್ಪನೆ. ಈ ಕಲ್ಪನೆ ಕಲ್ಪನೆಯಾಗಿಯೇ, ಅಮೂರ್ತವಾಗಿಯೇ ಉಳಿದಿದ್ದರೆ, ಯಾವ ಗೊಂದಲವೂ ಉಂಟಾಗುತ್ತಿರಲಿಲ್ಲ. ಆದರೆ ಮಾನವ ಸಮಾಜ ಬೆಳೆದು ಬಂದಂತೆಲ್ಲಾ ಈ ಕಲ್ಪನೆಗೆ ಅನೇಕ ಆಕಾರಗಳೂ, ಬಣ್ಣಗಳೂ ಮೂಡಿಕೊಂಡು ಕೆಲವೊಮ್ಮೆ ಮನುಷ್ಯನ ಇತರೆ ವಿಚಾರಗಳನ್ನೂ, ಆಚಾರಗಳನ್ನೂ ನಿಯಂತ್ರಿಸುವಷ್ಟು ಸಾಮರ್ಥ್ಯ ಇದಕ್ಕೆ ಬಂದುದರಿಂದ ಇದು ಇರುವುದಾದರೂ ಏನು? ದೇವರೆಂದರೆ ಯಾರು? ಏಕೆ ಎಂದು ಜಿಜ್ಞಾಸೆಗೆ ದಾರಿಯಾಗಿದೆ....'ದೇವರು' ಎಂಬುದರ ಮೂಲ ಅರ್ಥ ಏನೇ ಇರಲಿ, ಇದು ಅನೇಕ ಸುಂದರ ಹಾಗೂ ಅಕರಾಳ ವಿಕರಾಳ ಮೂರ್ತಿಗಳ ಹೆಸರು. ಕಾಣದ ಜಗತ್ತಿನ ಹೆಸರಿನಲ್ಲಿ ಕಂಡ ಜಗತ್ತಿನ ಕೆಲವೇ ಜನ ಬಹುಸಂಖ್ಯಾತ ಜನಸಮುದಾಯವನ್ನು ಅವತಾರ, ಧರ್ಮ, ಪುನರ್‌ಜನ್ಮ, ಪಾಪ – ಪುಣ್ಯ, ಸ್ವರ್ಗ–ನರಕ, ಇತ್ಯಾದಿಗಳ ಹೆಸರಿನಲ್ಲಿ ಆರ್ಥಿಕವಾಗಿಯೂ, ಸಾಮಾಜಿಕವಾಗಿಯೂ, ಮಾನಸಿಕವಾಗಿಯೂ ಸುಲಿಯಲು ಬಳಸಿಕೊಳ್ಳುತ್ತಿರುವ ಸಾಧನ. ಮನುಷ್ಯನ ಹಾಗೂ ಸಮಾಜದ ಸಹಜ ಬೆಳವಣಿಗೆಯನ್ನು ಕುಂಠಿತಗೊಳಿಸಿ, ಅವನನ್ನು ಸದಾ ದಾಸನನ್ನಾಗಿ ಮಾಡುತ್ತಿರುವ ಒಂದು ಕ್ರೂರ ಶಕ್ತಿ.

ಆದ್ದರಿಂದ ನನ್ನ ಕಲ್ಪನೆಯಲ್ಲಿ 'ದೇವರು' ಎಂಬ ಶಬ್ದಕ್ಕೆ ಸ್ಥಾನವೇ ಇಲ್ಲ. ಕೆಲವರು 'ನಾನೇ ದೇವರು' 'ಜನತೆಯೇ ದೇವರು' 'ಆತ್ಮವೇ ದೇವರು' ಮುಂತಾಗಿ ದೇವರು ಎಂಬ ಕಲ್ಪನೆಗೆ ಪುನರ್ ವ್ಯಾಖ್ಯೆ ಮಾಡುವವರು (ಬಹುಶಃ) ತಮಗೆ ಅರಿವು ಇಲ್ಲದೆಯೇ ಆ ಕಲ್ಪನೆಯನ್ನು ಗಟ್ಟಿಗೊಳಿಸುತ್ತಾರೆ ಅಷ್ಟೆ.

'ದೇವರು' ಎಂಬುದಕ್ಕೆ ಎಲ್ಲಿಯಾದರೂ ಸ್ಥಾನವಿದ್ದರೆ ಅದು ಕೋಶದಲ್ಲಿ ಮಾತ್ರ. ಭಾಷೆಯ ಅಸ್ತಿತ್ವವನ್ನು ಅಲ್ಲಗಳೆಯಲು ಬರುವುದಿಲ್ಲವಾದ್ದರಿಂದ ಇದು ಅನಿವಾರ್ಯ. (ಅದೆ ಪುಟ 16, 17) ದೇವರು ಇದ್ದಾನೆ ಎನ್ನುವವರು ಎಷ್ಟು ಸುಳ್ಳು ಹೇಳುತ್ತಾರೋ ಇಲ್ಲ ಎನ್ನುವವರು ಅವರಿಗಿಂತ ಹೆಚ್ಚು ವಂಚಕರಿದ್ದಾರೆ. ಇದ್ದಾನೆ ಎನ್ನುವವರಿಗೆ ಅವನಿರುವ ಬಗ್ಗೆ ಗಟ್ಟಿ ಅನುಭವ ಇಲ್ಲ. ಇಲ್ಲ ಎನ್ನುವವರಿಗೆ ಅವನ ಇರುವಿಕೆಯ 'ಭೂತ' ಬಾಧೆ ಬಿಟ್ಟಿಲ್ಲ. 'ನಾವು ಅಶಕ್ತನಾದರೆ ನನ್ನಲ್ಲಿ ದೇವರು ಹುಟ್ಟಿಕೊಳ್ಳುತ್ತಾನೆ. ಅಶಕ್ತತೆ ನೀಗಲು ಆತ ಬೇಕಾಗುತ್ತಾನೆ.' (ಸತ್ಯಕಾಮ ಅದೆ)

ಈ ಮೇಲಿನ ಕೆಲವು ಹೇಳಿಕೆಗಳನ್ನು ಮೂರ್ತಿರಾಯರ ಹೇಳಿಕೆಗಳೊಂದಿಗೆ ತುಲನೆ ಮಾಡಿ ನೋಡಿದಾಗ, ಮೂರ್ತಿರಾಯರು ಈ ಎಲ್ಲ ಚಿಂತನ ಶೀಲರೊಂದಿಗೆ ಸಮೀಕರಿಸಿಕೊಂಡರೂ ತಮ್ಮದೇ ಆದ ಒಂದು ವಿಶಿಷ್ಟವಾದ ಹಾಗೂ ವಿಭಿನ್ನವಾದ ನೆಲೆಯನ್ನು ಕಾಯ್ದುಕೊಂಡಿದ್ದಾರೆ ಎಂಬ ಅಂಶ ವ್ಯಕ್ತವಾಗುತ್ತದೆ. ದೇವರು ಎಂಬ ಶಬ್ದ ಕಿವಿಗೆ ಬಿದ್ದೊಡನೆ ಭಾವುಕರಾಗಿಬಿಡುವುದು ಒಂದು ವಿಭಾಗವಾದರೆ, ದೇವರೆಂದೊಡನೆಯೇ ತಮ್ಮ ಅನುಭವದ ಅರಿವಿನ ವ್ಯಾಪ್ತಿಗೆ ಬಾರದ ಅಮೂರ್ತ ಕಲ್ಪನೆಯನ್ನು ಸಾಮಾನ್ಯೀಕರಿಸುವುದು ಒಂದು ವಿಭಾಗ. ಇಲ್ಲಿಯ ಕೆಲವು ಚಿಂತಕರು ತಮ್ಮ ತಮ್ಮ ಅನುಭವಗಳ ನೆಲೆಯಲ್ಲಿಯೇ ದೇವರ ಬಗೆಗಿನ ತಮ್ಮ ಅನಿಸಿಕೆಗಳನ್ನು ಮುಕ್ತವಾಗಿ ಪ್ರಕಟಪಡಿಸಿದ್ದಾರೆ. ದೇವರ ಬಗೆಗಿನ ಗಾಢ ಭಾವುಕತೆಯನ್ನೂ ಹೊಂದಿದ ಕೆಲವು ಹೇಳಿಕೆಗಳನ್ನು ನಾವು ಗಮನಿಸಬಹುದು. ಕೋ. ವಾಸುದೇವ ಕಾರಂತರು ಹೀಗೆ ಹೇಳುತ್ತಾರೆ.

"ಕಲಿಯ ಮಹತ್ವದಿಂದ ಧಾರ್ಮಿಕ ಸಾಧನೆಗಳು ಕಷ್ಟವಾಗುತ್ತಾ ಬರುವುದರಿಂದ ಅದರ ಅಭ್ಯಾಸ ಅಸಾಧ್ಯವಾದುದರಿಂದ ಅನುಕೂಲಕ್ಕಾಗಿ ದೇವರೇ ಮಹಾಪುರುಷರನ್ನು ಕಳುಹಿಸಿ ಸನಾತನ ಧರ್ಮದಿಂದ ಕೆಳಮಟ್ಟದ ಶಾಖಾ ಧರ್ಮಗಳನೇಕವನ್ನು ಉಂಟು ಮಾಡಿದ್ದಾನೆ. ಆದರೆ ನಮ್ಮ ಜನ್ಮವನ್ನು ಸಂಪೂರ್ಣವಾಗಿ ದೇವರೇ ನಿರ್ಧರಿಸುವುದರಿಂದ ಅವನ ಸಂಕಲ್ಪದಂತೆ ನಾವು ಸನಾತನ ಧರ್ಮದಲ್ಲೇ ಜನ್ಮ ಪಡೆದವರು. ಆದಷ್ಟು ಮಟ್ಟಿಗೆ ಅದರ ವರ್ಣ ಧರ್ಮಗಳನ್ನು ಆಚರಿಸುವುದು ಮಾತ್ರವೇ ದೇವರು ಮೆಚ್ಚುವ ಸಾಧನ ಕ್ರಮವಾದೀತು ಎಂದು ನನಗೆ ತೋರುತ್ತದೆ." (ದೇವರನ್ನು ನಂಬುವ : ಪುಟ-342)

ಇಂತಹ ಮಾರ್ಗಗಳು ಹಿಂದಿನ ಹೇಳಿಕೆಗಳನ್ನೇ ಪ್ರತಿಪಾದಿಸುತ್ತವೆ. ಅವು ಹೊಸ ದೇನನ್ನೂ ಹೇಳುವುದಿಲ್ಲ. ಮಾತ್ರವಲ್ಲ ಕೇವಲ ಭಾವುಕತೆಯಿಂದ ಕೂಡಿದವಾಗಿರುತ್ತವೆ. ಇಲ್ಲಿ ವಿಮರ್ಶೆಗೋ ವಿಶ್ಲೇಷಣೆಗೋ ಸಿಗುವ ಯಾವ ಅಂಶಗಳೂ ಇಲ್ಲ. ಪರಂಪರಾ ಗತವಾದ ನಂಬಿಕೆಗಳನ್ನೇ ಎತ್ತಿ ಹಿಡಿಯುತ್ತವೆ. ಆದರೆ ಮೂರ್ತಿರಾಯರ ಅಭಿಪ್ರಾಯಗಳು ಪ್ರಸ್ತುತವೆನಿಸುವುದು, ಅಥವಾ ವಿಶಿಷ್ಟವೆನಿಸುವುದು ಅವುಗಳಲ್ಲಿ ಇರುವ ವಿಮರ್ಶೆಗೆ ಒಳಗಾಗುವ ಅಂಶಗಳಿಂದ. ಮೂರ್ತಿರಾಯರಂತೆ ದೇವರ ಅಸ್ತಿತ್ವ ಕಲ್ಪನೆಗಳನ್ನು ಕುರಿತು ಚಿಂತನೆ ಮಾಡಿದ ಮತ್ತೊಬ್ಬ ಧೀಮಂತ ಚಿಂತಕ ಪಂಡಿತ ತಾರಾನಾಥರು ಮೂರ್ತಿ ರಾಯರಂತೆ ತಮ್ಮ "ಧರ್ಮಸಂಭವ" ಎಂಬ ಕೃತಿಯಲ್ಲಿ ಹೀಗೆ ಹೇಳುತ್ತಾರೆ.

"ದೇವರೆಂಬ ಕಲ್ಪನೆಯೇ ಇಲ್ಲದೆ ಬದುಕಿರುವ ಸಂಘಗಳೆಷ್ಟೋ ಇವೆ...... ಪ್ರಕೃತಿಯು ಯಾವಾಗಲೂ ಅನುಕೂಲವೇ ಆಗಿರುವ ಶಕ್ತಿಯಲ್ಲ. ಅದಕ್ಕೊಮ್ಮೊಮ್ಮೆ ಭಯಂಕರ ರುದ್ರಾವೇಶ ಬಂದು ಸೃಷ್ಟಿಯನ್ನು ಒಂದೇ ಉಸುರಿನಿಂದ ಹಾರಿಸುವುದೂ ಉಂಟು. ಆಗಿನ ಭೀಕರ ಉತ್ಪಾತ ಉಪದ್ರವಗಳು ಜೀವರಾಶಿಗಳಿಗೆ ಸಹಿಸಲಸಾಧ್ಯ. ಸದ್ದಿಲ್ಲದೆ ಬಂದ ಆ ಸಂಕಟಗಳಿಗೆ ಬಲಿಯಾಗಲೇ ಬೇಕಾಗುತ್ತದೆ. ಪ್ರಾಚೀನ ಮನುಷ್ಯನಿಗೆ ಅವನ್ನು ನಿರ್ಬಂಧಿಸುವ ಶಕ್ತಿಯು ಇದ್ದಿಲ್ಲವಾದರೂ ಆತನ ಮನಸ್ಸೇನೋ ಸುಮ್ಮನಿರದೆ ಹೋದುದು ಸಹಜವೇ. ಅವನು ಆ ಪ್ರಕೃತಿಯ ಭೀಕರ ಶಕ್ತಿಗಳಿಗೆ ನಾಮಕರಣ ಮಾಡಿ ದೇವ ದೇವತೆಗಳನ್ನು ನಿರ್ಮಿಸಿದನು. ಆ ತನ್ನ ಊಹೆಯಿಂದುದ್ಭವಿಸಿದ ದೇವತೆಗಳಿಗೆ

ಶಾಂತಿ ಸಮಾಧಾನಗಳನ್ನು ಕಲ್ಪಿಸಿದನು. ಅಷ್ಟೇ ಅಲ್ಲ, ಜಗತ್ತಿನಲ್ಲಿ ಎಷ್ಟೋ ಜೀವ ರಾಶಿಗಳು – ಅವುಗಳಲ್ಲಿ ಅವನೊಬ್ಬನು. ಅವುಗಳಿಗೆ ಇಲ್ಲದ ಆತ್ಮ ಪ್ರಜ್ಞೆಯೊಂದು ಇವನಿಗೆ ವಿಶೇಷ. ಇವನಿಗೆ ಅಹಂಕಾರವು ಬಿಟ್ಟಿದ್ದಲ್ಲ. ಆದರೆ ಪ್ರಕೃತಿಗೆ ಇವನೂ ಇತರ ಜೀವ ರಾಶಿಗಳಂತೆ ಅಧೀನನೇ. ಪ್ರಕೃತಿಯ ಉಪೇಕ್ಷೆಯು ಇವನಿಗೆ ಅಸಹ್ಯವಾಗಿ ತೋರುವುದು ಸಹಜವೇ. ಆದರೆ ಇವನ ಅಹಂಕಾರವು ಸುಮ್ಮನಿದ್ದೀತೋ? ಆ ಅಹಂಕಾರದಿಂದ ಹುರಿಗೊಂಡು ಇವನು ತನ್ನ ದೊಡ್ಡಸ್ತಿಕೆಯ ಸಾಮುಗ್ರಿಗಳನ್ನೂ ಕಲ್ಪಿಸಿಬಿಟ್ಟನು. ತನ್ನನ್ನೂ, ತನ್ನ ಪಂಗಡವನ್ನೂ, ಪ್ರಾಂತವನ್ನೂ ಅಭಿಮಾನದಿಂದ ಕಾಪಾಡುತ್ತಿರುವ ಭೀಕರ ಶಕ್ತಿ ವ್ಯಕ್ತಿಯೊಬ್ಬನು ಕಣ್ಣಿಗೆ ಬೀಳದೆ ಕುಳಿತಿದ್ದಾನೆಂಬ ಕಲ್ಪನೆಯನ್ನೆಬ್ಬಿಸಿದನು. ಆತನಿಗೆ ನಾಮರೂಪ ಗುಣ ವರ್ಣಗಳನ್ನು ಕಲ್ಪಿಸಿದನು. ಆತನನ್ನು ಮನ್ನಿಸದವರು ನಾಶಗೊಳ್ಳುವರೆಂಬ ಭಾವನೆಯನ್ನು ಹಬ್ಬಿಸಿದನು. ಆತನನ್ನು ಒಲಿಸುವ ರೀತಿಗಳನ್ನುಂಟು ಮಾಡಿದನು. ಆತನಿಗೆ ಅಸಮ್ಮತವಾದ ಗುಣಭಾವ ವಿಚಾರ ಆಚಾರಗಳನ್ನು ಆತನಿಗೆ ಅಸಮ್ಮತವಾಗಿರುವುದನ್ನು ವಿವರಿಸಿದನು. ಹೀಗೆ ಮುಂದೆ ಒಬ್ಬ ದೇವನನ್ನು ಹುಟ್ಟಿಸಿದನು." (ಪುಟ 38, 39, 40)

ದೇವರ ಅಸ್ತಿತ್ವವನ್ನು ಕುರಿತು ಧನಾತ್ಮಕವಾಗಿ ಆಲೋಚನೆ ಮಾಡಿದವರೂ ಇದ್ದಾರೆ. ಧರ್ಮಕ್ಕೂ ದೇವರಿಗೂ ಸಂಬಂಧವನ್ನು ಕಲ್ಪಿಸಿ ಧರ್ಮವನ್ನೇ ದೇವರು ಎಂದವರೂ ಇದ್ದಾರೆ. ಅಗೋಚರ ಶಕ್ತಿಯಲ್ಲಿ ನಂಬಿಕೆಯನ್ನು ಇರಿಸಿಕೊಂಡವರೂ ಇದ್ದಾರೆ. ದೇವರಲ್ಲಿ ಶ್ರದ್ಧೆಯನ್ನಿರಿಸಿಕೊಂಡು ಅದರಿಂದ ಲೌಕಿಕ ಪ್ರಯೋಜನಗಳಿವೆ ಎಂದು ಭಾವಿಸಿದವರೂ ಇದ್ದಾರೆ. ವೈಜ್ಞಾನಿಕತೆ ಹಾಗೂ ವೈಚಾರಿಕತೆಗಳನ್ನು ಮೆಟ್ಟಿ ನಿಂತು ಪವಾಡಗಳಲ್ಲಿ ನಂಬಿಕೆಯನ್ನಿರಿಸಿಕೊಂಡ ಭಾವುಕರೂ ಇದ್ದಾರೆ. ಈ ಕೆಳಗಿನ ಕೆಲವು ಹೇಳಿಕೆಗಳನ್ನು ಗಮನಿಸಿದರೆ ಈ ವಿಚಾರ ವ್ಯಕ್ತವಾಗುತ್ತದೆ. ತೋಂಟದಾರ್ಯ ಮಹಾಸ್ವಾಮಿಗಳು ಹೀಗೆನ್ನುತ್ತಾರೆ.

ನನ್ನ ಕಲ್ಪನೆಯಲ್ಲಿ ದೇವರು ಮಾತ್ರ ತೀರಾ ಸರಳ. ನಾನು ವೀರಶೈವ ಧರ್ಮದ ಪ್ರತಿನಿಧಿ. ಹೀಗಾಗಿ (ನಿಜವಾದ) ವೀರಶೈವ ಧರ್ಮ ನಂಬಿದ ದೇವರೇ ನನ್ನ ಕಲ್ಪನೆಯ ದೇವರು (ಸುಧಾ 25–9–83 ಪುಟ–17). ಡಾ. ವೈ. ಎಸ್. ಲೂಯಿಸ್ ಹೀಗೆನ್ನುತ್ತಾರೆ.

ನನ್ನ ಮಟ್ಟಿಗೆ ಹೇಳುವುದಾದರೆ ದೇವರೆನ್ನುವುದು ವಿಶ್ವದಾದ್ಯಂತ ವ್ಯಾಪಿಸಿರುವ, ಅದನ್ನು ಹತೋಟಿಯಲ್ಲಿಟ್ಟುಕೊಂಡಿರುವ ಒಂದು ಶಕ್ತಿ. ಅದರ ಪ್ರಭಾವದಿಂದಲೇ ಗ್ರಹ, ನಕ್ಷತ್ರ ನೀಹಾರಿಕೆಗಳು ಕ್ರಮಬದ್ಧವಾಗಿ ನಡೆದುಕೊಳ್ಳುತ್ತಿರುವುದು. ಅದು ವ್ಯಕ್ತಿಯೂ ಹೌದು. ಏಕೆಂದರೆ ನಮಗೆ ತಿಳಿದಿರುವ ವಿದ್ಯುತ್, ಅಣು ಮುಂತಾದ ಭೌತ ಶಕ್ತಿಗಳಿಗೆ ವ್ಯಕ್ತಿಗಿರುವ ವಿವೇಚನೆ, ಕರುಣೆ ಪ್ರೀತಿ ಇರುವುದಿಲ್ಲ. ದೇವರಿಗಾದರೋ ಅಪಾರ ಶಕ್ತಿ ಇರುವುದಲ್ಲದೆ, ಲೋಕವನ್ನೂ, ವ್ಯಕ್ತಿಗಳನ್ನೂ ಕರುಣೆಯಿಂದ ನೋಡಿ, ಅವರನ್ನು ಪ್ರೀತಿಸಿ ಕಾಪಾಡಿ, ಅವರವರ ಬೇಡಿಕೆಗಳನ್ನು ಈಡೇರಿಸುವ ಗುಣಗಳೂ ಇವೆ. (ಅದೆ)

ಶ್ರೀ ವಿಶ್ವೇಶ ತೀರ್ಥ ಪಾದಂಗಳವರು ಹೀಗೆನ್ನುತ್ತಾರೆ.

ವಿಶ್ವದ ಎಲ್ಲ ಆಗು ಹೋಗುಗಳ ಮೂಲ ಶಕ್ತಿ ಸ್ರೋತವೆನಿಸಿದ ಮಹಾ ಚೈತನ್ಯವೇ ದೇವರು. ವಿಶ್ವದ ಎಲ್ಲಾ ಚಲನವಲನಗಳು ಈ ಜಡ ಚೇತನಗಳಿಂದ ನಡೆಯುತ್ತಿದ್ದರೂ

ಅವುಗಳಿಗೆ ಪೂರಕವಾದ ವಿಶ್ವವ್ಯಾಪಿ ಚೈತನ್ಯ ಶಕ್ತಿಯೇ ದೇವರು. ಎಷ್ಟೇ ಶಕ್ತಿ ಸಾಮರ್ಥ್ಯಗಳಿದ್ದರೂ ವಿದ್ಯುತ್ ನಿಂತುಹೋದಲ್ಲಿ ಯಂತ್ರಗಳು ಸ್ತಬ್ಧವಾಗುವಂತೆ ಈ ಚೈತನ್ಯ ಶಕ್ತಿಯಿಲ್ಲದೆ ಜಗತ್ತಿನ ವ್ಯವಹಾರವೂ ನಡೆಯದು. ಜಗತ್ತಿನ ಈ ಅದ್ಭುತ ರಚನೆಯ ಹಿನ್ನೆಲೆಯಲ್ಲಿರುವ ಮಹಾ ಚೈತನ್ಯ ಶಕ್ತಿಯೇ ನನ್ನ ದೃಷ್ಟಿಯಲ್ಲಿ ದೇವರೆನಿಸಿದ್ದಾನೆ. ಸತ್‌ಚಿತ್ ಆನಂದ ರೂಪಿಯೂ, ಸಕಲ ಸದ್ಗುಣಗಳ ನಿಧಿಯೂ ಆದ ಈ ಮಹಾ ಚೇತನವೇ ವಿಶ್ವದ ಸಕಲ ಚೇತಕರಿಗೆ ಸ್ಫೂರ್ತಿಯ ನೆಲೆ ಮತ್ತು ಆದರ್ಶದ ನೆಲೆ.

ಪ್ರೊ. ಎಸ್.ಕೆ. ರಾಮಚಂದ್ರರಾವ್ ಅವರ ಕಲ್ಪನೆಯಲ್ಲಿ ದೇವರು ಹೀಗೆ.

ಮನುಷ್ಯರಾಗಿ ಹುಟ್ಟಿ ಸಾಹಸದಿಂದ ಬದುಕಿ ಸಾಹಸದಿಂದಲೇ ಸತ್ತು ದೆವ್ವವೋ, ದೇವರೋ ಆಗಿ ಜನರ ನೆನಪಿನಲ್ಲಿ ಉಳಿದುಕೊಳ್ಳುವುದು ಒಂದು ಎಳೆ. ಕಣ್ಣಿಗೆ ಎಂದೂ ಕಾಣಿಸಿಕೊಳ್ಳದೆ ಇದ್ದರೂ ಅದ್ಭುತ ಶಕ್ತಿಯಾಗಿ ಪ್ರಕೃತಿಯ ಪ್ರಸಂಗಗಳಲ್ಲಿ ಮೈದಳೆದು ಜನರನ್ನು ಕಾಡುವ ಅಥವಾ ಕಾಪಾಡುವ 'ಚೇತನ' ಮೂರನೆಯ ಎಳೆ.....ಮನುಷ್ಯನ ಕೈ ತಡೆದಾಗ, ಕಾಲು ನಡೆಯದಾದಾಗ, ಮಿದುಳು ಮುಂದರಿಯದಾದಾಗ, ಮುಂದೇನೆಂಬ ಆತಂಕ ಮೆಟ್ಟುವಾಗ ದೇವರ ಕಲ್ಪನೆ ಅಷ್ಟಿಷ್ಟು ನೆರವಿಗೆ ಬರುತ್ತದೆ. ಒಂದಿಷ್ಟು ನೆಮ್ಮದಿಯನ್ನೂ ತರುತ್ತದೆ. ಧೈರ್ಯವನ್ನು ತುಂಬುತ್ತದೆ. ಇದು ನಂಬಿಕೆಯ ಮಾತು, ಶ್ರದ್ಧೆಯ ಮಾತು, ವಿಚಾರದ ಮಾತಲ್ಲ, ಆಲೋಚನೆಯ ಮಾತಲ್ಲ. (ಅಧೇ ಪುಟ 13)

ಮೂರ್ತಿರಾಯರು ಕೇವಲ ಚಿಂತನ ಶೀಲ ಪ್ರಜ್ಞೆಯನ್ನೂ, ವೈಚಾರಿಕತೆಯನ್ನೂ ಬೆಳೆಸಿಕೊಂಡವರು. ಅವರು ದೇವರನ್ನು ಕುರಿತ ರೂಢ ಮೂಲ ಭಾವನೆಗಳನ್ನು ವಿಮರ್ಶೆಗೆ, ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ನವೋದಯ ಕಾಲದ ಇತರ ಸಾಹಿತಿಗಳು ಯೋಚಿಸಿದ ದಾರಿಯಲ್ಲಿ ಅವರು ಯೋಚಿಸಿದರು. ಹೀಗೆ ಮೂರ್ತಿರಾಯರು ಆ ಕಾಲದ ಯುಗಧರ್ಮದ ಪ್ರಭಾವಕ್ಕೆ ಒಳಗಾಗದೆ ತಮ್ಮದೇ ಆದ ವಿಭಿನ್ನ ಮಾರ್ಗದಲ್ಲಿ ನಡೆದರು. ಆದರೆ ವೃತ್ತಿಯಿಂದ ವೈದ್ಯರೇ ಆಗಿರುವ ಡಾ. ರಾಮರಂಗಯ್ಯ ಬರೆದಿರುವುದನ್ನು ಕಂಡರೆ ಅವರ ವೃತ್ತಿಧರ್ಮಕ್ಕೂ, ಚಿಂತನೆಗೂ ಎಷ್ಟು ಅಂತರವಿದೆ ಎಂದು ತಿಳಿಯುತ್ತದೆ. ಅವರ ಅಭಿಪ್ರಾಯ ಹೀಗಿದೆ.

"ಈ ಸಂದರ್ಭದಲ್ಲಿ ದೇವರ ಬಗ್ಗೆ ಗಾಢ ನಂಬಿಕೆಯಿರುವವರಿಗೆ ಉಪಯೋಗ ವಿಲ್ಲದಿಲ್ಲ. ಹಾವು ಕಚ್ಚಿದಾಗ ಎಷ್ಟೋ ಮಂದಿ ಸಾಯುತ್ತೇವೆಂದು ಗಾಭರಿ ಪಡುವುದರಿಂದ ರಕ್ತ ಪರಿಚಲನೆ ತೀವ್ರವಾಗಿ ವಿಷ ಬೇಗ ಹರಡಿ ಮಾರಕವಾಗುತ್ತದೆ. ಮತ್ತೆ ಕೆಲವರು ವಿಷವಿಲ್ಲದಿದ್ದರೂ ಹೆದರಿ ಪ್ರಜ್ಞೆ ತಪ್ಪುವುದುಂಟು, ಸಾಯುವುದುಂಟು. ದೇವರ ಬಗೆಗೆ ಅಚಲ ನಂಬಿಕೆ ಇರುವವರಲ್ಲಿ ತಮ್ಮ ದೇವರು ತಮ್ಮನ್ನು ಉಳಿಸಿಯೇ ಉಳಿಸುತ್ತಾನೆಂದು ಧೈರ್ಯ ಮಾಡುವುದರಿಂದ ವಿಷ ಬೇಗ ಹರಡುವುದು ತಪ್ಪುತ್ತದಲ್ಲದೆ ದಂಗಿಗೊಳಗಾಗುವ ಪರಿಸ್ಥಿತಿಯಿಂದ ಹೊರಗುಳಿದು ಬದುಕುತ್ತಾರೆ."

(ಆರೋಗ್ಯ ತರಂಗ ಅಕ್ಟೋಬರ್-94 ಪುಟ-23)

ಈ ಕೃತಿಯನ್ನು ಕುರಿತು ವಾದ ವಿವಾದಗಳ ಅಲೆಗಳು ಎದ್ದರೂ ಮೂರ್ತಿರಾಯರು ಮಾತ್ರ ನಿರ್ಲಿಪ್ತರಾಗಿಯೇ ಇದ್ದಾರೆ. ಯಾವುದೇ ಒಂದು ಅಭಿಪ್ರಾಯಕ್ಕೂ ತಮ್ಮ

ಪ್ರತಿಕ್ರಿಯೆಯನ್ನು ಸೂಚಿಸಲಿಲ್ಲ. ಇದಕ್ಕೆ ಕಾರಣ ಅವರ ಸ್ಥಿತಪ್ರಜ್ಞತೆ ಹಾಗೂ ವಯಸ್ಸಿನ ಪರಿಪಕ್ವತೆಗೆ ಅನುಗುಣವಾಗಿ ಅವರು ರೂಢಿಸಿಕೊಂಡ ಮಾನಸಿಕ ಸಮತೋಲನ ಹಾಗೂ ಭೌತಿಕ ಪರಿಪಕ್ವತೆ. ಡಾ.ಹಾ.ಮಾ.ನಾಯಕರ ಈ ಮಾತು ಅತ್ಯಂತ ಸಮಂಜಸವಾದುದು.

"ನಮ್ಮ ಪ್ರೊಫೆಸರ್ ಮೂರ್ತಿರಾಯರನ್ನೇ ನೋಡಿ (ಜ 1900) ಅವರಿಗೀಗ ತೊಂಭತ್ತನಾಲ್ಕು. ಆದರೇನು! ಯಾವುದರಲ್ಲೂ ಆಸಕ್ತಿಯನ್ನು ಕಳೆದುಕೊಂಡಿಲ್ಲ. ಸಾಹಿತ್ಯ, ಸಂಗೀತ, ಕಲೆ, ವಿಜ್ಞಾನ ಯಾವುದೇ ವಿಚಾರ ಕುರಿತು ಅವರೊಡನೆ ಮಾತನಾಡಬಹುದು. ಮೈಸೂರಿನಲ್ಲಿ ಯಾವುದಾದರೂ ಒಳ್ಳೆಯ ಸಂಗೀತವಿದ್ದರೆ ಅದನ್ನು ಕೇಳುವುದಕ್ಕಾಗಿಯೇ ಈಗಲೂ ಬೆಂಗಳೂರಿನಿಂದ ಬರುತ್ತಾರೆ. ಒಬ್ಬರೇ ಬರುತ್ತಾರೆ. ಮೊನ್ನೆ ಮೊನ್ನೆ ಅಮೇರಿಕಾಕ್ಕೆ ಹೋಗಿ ಬಂದರು. ಅವರನ್ನು ವಯಸ್ಸು ಮಾತನಾಡಿಸಿಲ್ಲವೆಂದೇ ನನಗನ್ನಿಸುತ್ತದೆ. ನಮ್ಮ ಎಷ್ಟು ಜನ ತರುಣ ತರುಣಿಯರಿಗೆ ಮೂರ್ತಿರಾಯರಲ್ಲಿರುವ ಆಸಕ್ತಿಗಳಿವೆ?"

(ತರಂಗ –12–3–95 ಪುಟ –44)

'ದೇವರು' ಕೃತಿಯನ್ನು ಕುರಿತು ಇಷ್ಟೆಲ್ಲಾ ಪರ ವಿರೋಧ ಅಭಿಪ್ರಾಯ ಗಳಿದ್ದಾಗ್ಯೂ ಇದೊಂದು ವಿಭಿನ್ನ ಕೃತಿ. ಏಕೆಂದರೆ ನವೋದಯದ ಕಾಲದ ಲೇಖಕರು ಅದರಲ್ಲೂ ಮೂರ್ತಿರಾಯರ ಸಮಕಾಲೀನರೂ ಆದ ಶಿವರಾಮ ಕಾರಂತ, ಶ್ರೀರಂಗ ಮುಂತಾದವರನ್ನು ವಿನಾಯಿತಿಸಿದರೆ ದೇವರ ಅಸ್ತಿತ್ವವನ್ನು ಕುರಿತು ಬರೆದವರು ಕುವೆಂಪುರವರು. 'ದೇವರು ರುಜು ಮಾಡಿದನು' ಎಂಬ ಕವಿತೆಯು ಪ್ರಾತಿನಿಧಿಕವಾದುದು. ಮೂರ್ತಿರಾಯರ 'ದೇವರು' ಕೃತಿಯ ಬಗ್ಗೆ ಈ ಮಾತು ಎಲ್ಲರೂ ಒಪ್ಪುವಂತಹದು.

ಒಂಭತ್ತು ದಶಕಕ್ಕೂ ಅಧಿಕ ಕಾಲ ಬದುಕನ್ನು ಆಸ್ವಾದಿಸಿದ ತರುವಾಯ ಬಹುತೇಕ ಜನ ದೇವರನ್ನು ಧೇನಿಸುತ್ತಾ ಸಮಯದೂಡುವುದು ಸಾಮಾನ್ಯ. ರಾಯರೂ ಕೂಡ ತಮ್ಮ 'ದೇವರು' ಕೃತಿಯಲ್ಲಿ ದೇವರ ಕುರಿತು ಚಿಂತಿಸಿದ್ದಾರೆ. ಭಕ್ತಿ ಭಾವದಿಂದಲ್ಲ, ಅವರದೇನಿದ್ದರೂ ವೈಚಾರಿಕ ಬೆಳಕಿನಲ್ಲಿ ಅವಲೋಕನ. ದೇವರು ಇಲ್ಲದಿರುವ ಬಗ್ಗೆ ಈ ನಿರೀಶ್ವರವಾದಿಗೆ ವಿಪರೀತ ಬೇಸರ. ಮನುಕುಲಕ್ಕೆ ಕರುಣಾರ್ದ್ರ ಹೃದಯನಾದ ದೇವರ ಅಗತ್ಯವಿದೆ. ಆದರೆ ಅವನಿಲ್ಲವಲ್ಲ. ಅವರು ತರ್ಕ ಸಮ್ಮತವಲ್ಲದ ನಂಬಿಕೆಗಳನ್ನು ಖಂಡಿಸುವಾಗಲೂ ವ್ಯಂಗ್ಯ, ವಿಡಂಬನಾಸ್ತ್ರಗಳನ್ನು ಔಚಿತ್ಯಪೂರ್ಣವಾಗಿ ಬಳಸ ಬಲ್ಲರು......... ಮೂರ್ತಿರಾಯರ ಪ್ರತಿಪಾದನೆಗಳನ್ನೆಲ್ಲಾ ಅಲ್ಲಗಳೆಯುವ ಆಸ್ತಿಕರಿಗೇನೂ ಕೊರತೆಯಿಲ್ಲ. ಆದರೆ ಅವರು ವೈಚಾರಿಕ ದೃಷ್ಟಿಕೋನದಲ್ಲಿ ದೇವರನ್ನು ಪುರಸ್ಕರಿಸುವ ವಿಧಾನ ಅನನ್ಯವಾದುದು. ಆ ಬಗ್ಗೆ ಹಾರಾಡುವವರು ಕಡಿಮೆ. (ಕರ್ಮವೀರ 12–6–94 ಪು–8) ಈ ಕೃತಿಯ ಬಗ್ಗೆ ಡಾ. ಹಾ.ಮಾ. ನಾಯಕರ ಅಭಿಪ್ರಾಯವೂ ಇಲ್ಲಿ ಗ್ರಾಹ್ಯ.

"ನಮ್ಮ ಅತ್ಯಂತ ಹಿರಿಯ ಹಾಗೂ ಗೌರವಾನ್ವಿತ ಲೇಖಕರಲ್ಲಿ ಪ್ರೊಫೆಸರ್ ಎ. ಎನ್. ಮೂರ್ತಿರಾಯರೂ ಒಬ್ಬರು. ಲಲಿತ ಪ್ರಬಂಧ ಪ್ರಕಾರದ ರೂವಾರಿಗಳಲ್ಲಿಯೂ ಅವರು ಪ್ರಮುಖರು. ವೈಚಾರಿಕ ಸಂಗತಿಗಳನ್ನು ಅವರ ಹಾಗೆ ಲಲಿತವಾಗಿ, ಸ್ಪಷ್ಟವಾಗಿ, ಖಚಿತವಾಗಿ, ಆಕರ್ಷಕವಾಗಿ ಬರೆಯುವವರು ಬಹಳ ಕಡಿಮೆ. ಇದೀಗ ಪ್ರಕಟವಾಗಿರುವ 'ದೇವರು' ಅವರ ಬರವಣಿಗೆಯ ಸೊಗಸಿಗೆ ಒಂದು ಅತ್ಯುತ್ತಮ ಉದಾಹರಣೆ. ಇದರಲ್ಲಿ

ದೇವರ ಅಸ್ತಿತ್ವವನ್ನು ಕುರಿತ ಚರ್ಚೆಯಿದೆ. ಮೂರ್ತಿರಾಯರ ನಿಚ್ಚಳವಾದ ನಿಲುವು ಇದೆ.... ' ಈ ಪುಸ್ತಕದಲ್ಲಿ ಮೂರ್ತಿರಾಯರು ತಮ್ಮ ಅಭಿಪ್ರಾಯಗಳಿಗೆ ಒಂದು ಖಚಿತವಾದ ರೂಪ ಕೊಟ್ಟಿದ್ದಾರೆ. ಶಿವರಾಮ ಕಾರಂತರ 'ಬಾಳ್ವೆಯೇ ಬೆಳಕು' ವಸುದೇವ ಭೂಪಾಲಂ ಅವರ 'ದೇವರು ಸತ್ತ' ಪುಸ್ತಕಗಳ ಸಾಲಿನಲ್ಲಿ ಅವುಗಳಿಗಿಂತ ಹೆಚ್ಚು ಕಲಾತ್ಮಕವಾದ ಪುಸ್ತಕ ಇದು. (ತರಂಗ : 1-5-1992 ಪುಟ 66 )

'ದೇವರು' ಕೃತಿ ಆಧುನಿಕ ಯುಗದ ಚಿಂತನಶೀಲ ಬರಹಗಳಲ್ಲಿ ಒಂದು. (ವಿಕ್ರಾಂತಿ ಸೆಪ್ಟೆಂಬರ್ 94 ಪುಟ 22) ಈ ಕೃತಿಯನ್ನು ಕುರಿತು ಶ್ರೀ ಶಾಮ ಸುಂದರ ಕುಂದಿ ಈ ಕೃತಿಯ ಬಗ್ಗೆ ಬರೆಯುತ್ತಾ ಹೀಗೆ ಬರೆಯುತ್ತಾರೆ.

"ಸ್ವಾನುಭವದ ಬೆಳಕು ಬೆಳೆದ ಬಾಳಿನ ಗತಿಶೀಲ ಕ್ರಮ ಮತ್ತು ಮುಖ್ಯವಾಗಿ ಮಾನವೀಯವಾದ ನಿಚ್ಚಳ ನೋಟದಿಂದ ಪ್ರೇರಿತವಾದ ವಾದ ಮಂಡಿಸುವುದು ಸ್ವಾಗತಾರ್ಹ. ಕನ್ನಡದ ಹಿರಿಯ ಪ್ರಬಂಧಕಾರ, ವಿಚಾರವಂತ ಪ್ರೊ. ಎ.ಎನ್. ಮೂರ್ತಿ ರಾಯರು ತಮ್ಮ ಇಳಿ ವಯಸ್ಸಿನಲ್ಲಿ ತಮ್ಮ ಬದುಕಿನ ಸಾರವನ್ನೇ ಅನ್ವಯಿಸಿಕೊಂಡಂತೆ ಬರೆದ ದೇವರು ಸರ್ವಂಕಶವೆನ್ನಬಹುದಾದ ಇತ್ತೀಚಿನ ವೈಚಾರಿಕ ಕೃತಿ. ಓದುಗನ ನಂಬಿಕೆಯನ್ನು ಕೇವಲ ಅಲ್ಲಾಡಿಸಿ ಕೈ ಬಿಡದೆ ಅವನೊಳಗೆ ಚಿಂತನ ಮಂಥನ ನಡೆಯುವಂತೆ ಈ ಪುಸ್ತಕದ ವಿಶಿಷ್ಟತೆ. ಮಂಡನೆಕಾರನ ಧೋರಣೆ, ನಯ ವಿನಯ ಪರವಾಗಿರುವುದರಿಂದ ಖಂಡನೆಯ ಅವಸರ, ಗೆಲುವಿನ ವಿಜೃಂಭಣೆಯ ಧಾಟಿ ಇವರಲ್ಲೆಲ್ಲಿಯೂ ಇಲ್ಲ. ಅಂತೆಯೇ ಇದು ಪರಿಶೀಲಿಸಬೇಕಾದ ಕೃತಿ.

ಪ್ರೊ. ಮೂರ್ತಿರಾಯರ ವಿವೇಚನೆಯ ಉದ್ದಕ್ಕೂ ಕಾಣಬರುವುದು ಅವರ ಪರಿಪಕ್ವ ವಿಚಾರ ವಾದ. ಕಂಡ ಸಂಗತಿಗಳನ್ನು ವಿಕೃತಗೊಳಿಸದೆ ಅವುಗಳ ಇತಿ ಮಿತಿ ಸಮೇತ ಓದುಗರೆದುರು ಇಡುತ್ತಾರೆ. ಕಾರ್ಯ ಕಾರಣ ಸಂಬಂಧ ವಿವರಿಸುತ್ತಾರೆ. ವಾಸ್ತವಿಕವಾಗಿ ದೇವರ ಬಗೆಗಿನ ಭಾವನೆ, ಮನುಷ್ಯನ ಮನಸ್ಸಿನ ಸೂಕ್ಷ್ಮ ಪ್ರಕ್ರಿಯೆ ಅದನ್ನು ಅಷ್ಟೇ ನವುರಾಗಿ ಬಿಡಿಸಿ ನೋಡುವ ಸಂಯಮ ಕೌಶಲ್ಯ ಮೂರ್ತಿರಾಯರದು. ತೀರಾ ಗಡುಚಾದ, ಸನಾತನವಾದ ನಂಬಿಕೆಯ ವಿರುದ್ಧ ವಾದಿಸುವಾಗ ಏನೆಲ್ಲಾ ಸಾಹಿತ್ಯ ಸಾಮಗ್ರಿ ಬೇಕೋ ಅದನ್ನೆಲ್ಲಾ ಅವರು ಸಿದ್ಧಪಡಿಸಿಕೊಂಡು ಉದಾಹರಿಸುತ್ತಾರೆ. ಎಂತಹ ಆಸ್ತಿಕನನ್ನೂ ಮನ ಒಲಿಸುವ ಧಾಟಿ ಬರಬಹುದಾಗಿರುವುದರಿಂದ ಮನವರಿಕೆಯ ಕೆಲಸ ಪರಿಣಾಮಕಾರಿಯಾಗಿದೆ. ಅಂತೆಯೇ ತಮ್ಮ ವಾದವನ್ನು ಮಾಡುವಲ್ಲಿ ಯಶಸ್ವಿ ಯಾಗಿದ್ದಾರೆ.

(ಕಸ್ತೂರಿ : ಮಾರ್ಚ್ 92, ಪುಟ–97, 100)

ಈ ಕೃತಿಯನ್ನು ಹೀಗೆ ಏಕಮುಖವಾಗಿ ಕಂಡವರೂ ಇದ್ದಾರೆ. ಅವರ ಮೇಲಿನ ಅಭಿಮಾನವನ್ನು ಉಳಿಸಿಕೊಂಡು ಸತ್ಯವನ್ನು ಹೇಳಿದವರೂ ಇದ್ದಾರೆ. ಈ ಕೃತಿಯ ಇತಿಮಿತಿಗಳನ್ನು ಗುರುತಿಸಿದವರೂ ಇದ್ದಾರೆ. ಪ್ರೊಫೆಸರ್ ಎಲ್.ಎಸ್. ಶೇಷಗಿರಿ ರಾಯರ ಈ ಮಾತುಗಳನ್ನು ಉಲ್ಲೇಖಿಸಬಹುದು.

"ಪ್ರಾಯಶಃ ಇಲ್ಲಿ ಸ್ವಲ್ಪ ಅಸಂಗತ್ಯ ಗೇಲಿ ಸೇರಿಸಿಕೊಂಡಿದೆ.... ಮೋಹಿನಿ ರೂಪದ ವಿಷ್ಣುವನ್ನು ಕೂಡಿದ್ದರಿಂದ ಅಯ್ಯಪ್ಪನ ಜನನವಾಯಿತೆಂಬ ಕಥೆಯನ್ನು ಹೇಳುವುದು ಅಷ್ಟೇನೂ ಸೂಕ್ತವಲ್ಲ ಎನಿಸುತ್ತದೆ..... ಈ ಮೂರು ಅಧ್ಯಾಯಗಳಲ್ಲಿ ಅವರ ಮಾತು

ಗಳನ್ನು ಬಹುಮಟ್ಟಿಗೆ ಒಪ್ಪಬಹುದಾದರೂ ಕೆಲವು ಭಾಗಗಳಲ್ಲಾದರೂ ಅವರ ವಿಶಿಷ್ಟ ತರ್ಕ ಶಕ್ತಿ ಹೊಸ ದೃಷ್ಟಿಯನ್ನು ನಮಗೆ ತಂದುಕೊಟ್ಟರೂ (ಉದಾ: ಪುಟ 37) ಈ ವಿಷಯಕ್ಕೆ ಇಷ್ಟು ಪ್ರಾಶಸ್ತ್ಯದ ಅಗತ್ಯ ಇರಲಿಲ್ಲವೇನೋ.

ಪ್ರೊ. ಮೂರ್ತಿರಾಯರ ವಾದಗಳನ್ನು ಪ್ರಶ್ನಿಸುವುದು ಸಾಧ್ಯವಿದೆ. ಮೂರ್ತಿರಾಯರ ಪುಸ್ತಕವನ್ನು ಓದುವುದು ಒಂದು ಭೌತಿಕ ಲಾಭ.

ಮೂರ್ತಿರಾಯರ ಈ ಪುಸ್ತಕದಂತಹ ಪುಸ್ತಕಗಳನ್ನು ಓದಿ ನಮ್ಮ ವಿಚಾರ ಶಕ್ತಿಯನ್ನು ಚೈತನ್ಯಮಯವಾಗಿ ಉಳಿಸಿಕೊಳ್ಳಬಹುದು.

ಇಷ್ಟೆಲ್ಲ ವಿಮರ್ಶೆ ವಾದ ವಿವಾದ ನಡೆಯುತ್ತಿರುವಾಗ ಮೂರ್ತಿರಾಯರು ತಮ್ಮ ಪಾಡಿಗೆ ತಾವು ನಿರ್ಲಿಪ್ತರಾಗಿಯೇ ಇದ್ದಾರೆ. ಯಾವುದೇ ವಾದ ವಿವಾದಗಳಿಗೆ ವಿಚಲಿತರಾಗದೆ, ತಮ್ಮ ನಿಲುವಿಗೆ ಅವರು ದೃಢವಾಗಿ ಅಂಟಿಕೊಂಡೇ ಇದ್ದಾರೆ. ಪರ ವಿರೋಧ ಅಭಿಪ್ರಾಯಗಳಿಗೆ ಪ್ರತಿಕ್ರಿಯೆ ತೋರದೆ ಸಮಾಧಾನಚಿತ್ತರಾಗಿಯೇ ಇದ್ದಾರೆ. ಅವರ ದೃಢ ನಿರ್ಧಾರವನ್ನು ಅವರು ಹಲವು ಸಂದರ್ಭಗಳಲ್ಲಿ ಹೀಗೆ ವ್ಯಕ್ತಪಡಿಸಿದ್ದಾರೆ.

"ವೇದವನ್ನು ನಂಬಿದವರು ಆಸ್ತಿಕ ಎನ್ನಬಹುದಾದರೆ ವೇದ ಅನಾದಿ, ಅಪೌರುಷೇಯ, ಅದರಲ್ಲಿರುವುದೆಲ್ಲಾ ಸತ್ಯ ಎನ್ನುವುದಾದರೆ, ಇಡೀ ಜಗತ್ತಿಗೆ ಅನ್ವಯಿಸದೆ, ಭಾರತೀಯರಿಗೆ ಮಾತ್ರ ಯಾಕೆ ಅನ್ವಯಿಸುತ್ತೆ? ವೇದದಲ್ಲಿರುವ ಎಷ್ಟೋ ಮಾತುಗಳನ್ನು ಕ್ರೈಸ್ತರ ಬೈಬಲ್ ವಿರೋಧಿಸುತ್ತೆ. ದೇವರು ಯಾಕೆ ಈ ಪಕ್ಷಪಾತ ಮಾಡಿದ? ವೇದದಲ್ಲಿ ಬರುವ ಪುರುಷ ಸೂಕ್ತ ಕ್ಲಾಸಿಕಲ್ ಸಂಸ್ಕೃತದಲ್ಲಿದೆಯೇ ವಿನಹ ವೇದಿಕೆ ಸಂಸ್ಕೃತದಲ್ಲಿ ಇಲ್ಲ. ಹಾಗಿದ್ದರೆ ವೇದ ಅನಾದಿಯಾದದ್ದು ಎಂತು ? ವೇದವನ್ನು ಓದಿದ್ದೇನೆ, ಅದರಲ್ಲಿನ ಕಾವ್ಯವನ್ನು ಆಸ್ವಾದಿಸಿದ್ದೇನೆ. ಅದರ ನಾದ, ಮಾಧುರ್ಯಕ್ಕೆ ಸಂತೋಷ ಪಟ್ಟಿದ್ದೇನೆ, ವೇದವನ್ನು ಓದಿ ತಿಳಿದುಕೊಂಡರೆ ಪ್ರಪಂಚದಲ್ಲಿರುವುದನ್ನೆಲ್ಲಾ ತಿಳಿದುಕೊಂಡಂತೆ ಅನ್ನೋದನ್ನ ವಿರೋಧಿಸ್ತೇನೆ."

ಬೈಬಲ್‌ನಲ್ಲಿ ದೇವರ ಬಾಯಿಂದ ಬರೋ ಮಾತಿದು: ನಾನಲ್ಲದೆ ಇನ್ನೊಬ್ಬ ದೇವರಿದ್ದಾನೆ ಎನ್ನುವವರು ನಿನ್ನ ಹೆಂಡತಿಯಿರಲಿ, ತಾಯಿಯೇ ಆಗಿರಲಿ ಅವರನ್ನು ಕಲ್ಲು ಹೊಡೆದು ಕೊಲ್ಲು: ಈ ಪ್ರಪಂಚದ ಬದುಕು ಇದೇ (ಅಸ್ತಿ) ಎನ್ನುತ್ತೇವೆ. ಆದ್ದರಿಂದ ನಾನೂ ಒಂದು ಬಗೆಯ ಆಸ್ತಿಕನೇ. ಬದುಕನ್ನು ಬಿಟ್ಟು ಒತ್ತಟ್ಟಿಗಿಟ್ಟು ಭಜ ಭಜ ಪಾರ್ವತೀ ವಲ್ಲಭ ಎಂದರೆ ನಾನು ಒಪ್ಪಲ್ಲ.... ದೇವರ ಮೇಲೆ ಭಾರ ಹಾಕ್ತೇನೆ ಅನ್ನುವ ಮಾತನ್ನು ಬಿಟ್ಟು ಬಿಡುವುದು ಒಳ್ಳೆಯದು..... ಧರ್ಮ ಸಂಸ್ಥಾಪನೆ ಮಾಡಬೇಕಾದರೆ ಒಳ್ಳೆಯ ಕೆಲಸ ಆಗಬೇಕಾದರೆ ಯಾರೋ ಅವತಾರ ಎತ್ತಬೇಕಾಗಿಲ್ಲ, ನಾವೇ ಮಾಡಿದರೆ ಮಾತ್ರ ಅದು ಸಾಧ್ಯ.

ಆನಂದದಿಂದ ಹೇಗಿದ್ದೀನಿ ಎಂದರೆ, ನಾನು ನಂಬಿದ ದೇವರ ದಯೆಯಿಂದ. ನಿಮ್ಮೆಲ್ಲರ ಪ್ರೀತಿ ವಿಶ್ವಾಸದಿಂದ. (ಅವರಿಗೆ 91 ತುಂಬಿದಾಗ ಬೆಂಗಳೂರಿನ ಕ.ಸ.ಪ. ದಲ್ಲಿ ಅವರ ಅಭಿಮಾನಿಗಳು ಪ್ರೊ. ಎ.ಎನ್. ಮೂರ್ತಿರಾಯರ ಜೊತೆ ಒಂದು ಸಂಜೆಯ ಸಂದರ್ಭದಲ್ಲಿ ಕನ್ನಡ ಪ್ರಭ 18-6-91 ಪುಟ 3)

ಇಲ್ಲಿ ಮೂರ್ತಿರಾಯರು ಎತ್ತಿರುವ ಪ್ರಶ್ನೆಗಳು ಗುರುತಿಸಿದ ಭಾಷಾ ಶೈಲಿ ವೇದಗಳ ಬಗೆಗಿನ ಅವರ ವಿಶ್ಲೇಷಣೆಗಳು ಧರ್ಮ ಸಂಸ್ಥಾಪನೆ ಬಗ್ಗೆ ಮಾನವನ ಜವಾಬ್ದಾರಿ

ಇತ್ಯಾದಿಗಳು ಅವರ ವಾಸ್ತವಿಕ ದೃಷ್ಟಿಕೋನವನ್ನು ಸೂಚಿಸುತ್ತವೆ. ವೇದ ಹಾಗೂ ದೇವರುಗಳ ಬಗ್ಗೆ ನವೋದಯದ ಇತರ ಲೇಖಕರಾದ ಮಾಸ್ತಿ, ಬೇಂದ್ರೆ, ವಿನಾಯಕ, ಕುವೆಂಪು, ಪುತಿನ, ಡಿವಿಜಿ, ಗೋವಿಂದ ಪೈ ಮುಂತಾದವರಿಗಿಂತ ಮೂರ್ತಿರಾಯರು ಹೇಗೆ ಭಿನ್ನರಾಗುತ್ತಾರೆ ಎಂಬುದು ಅವರ ಈ ಮೇಲಿನ ಹಾಗೂ ಕೆಳಗಿನ ನಿಲುವು ಸ್ಪಷ್ಟಪಡಿಸುತ್ತದೆ. " ಸರ್ವಜ್ಞ, ಸರ್ವಶಕ್ತ" ಎಂದೆಲ್ಲಾ ಕರೆಯಲ್ಪಡುವ ದೇವರು ಈ ಜಗತ್ತಿನಲ್ಲಿ ಸಂಕಷ್ಟಗಳನ್ನು ಹೋಗಲಾಡಿಸಿ, ಜನರಿಗೆ ಒಳಿತನ್ನು ಮಾಡುವ ಯೋಜನೆ ಮಾಡಿಲ್ಲವಾದ್ದರಿಂದ ದೇವರನ್ನು ನಂಬುವ ಗೋಜಿಗೆ ನಾನು ಹೋಗಿಲ್ಲ. ಅವರವರಿಗೆ ಬೇಕಾದ ದೇವರನ್ನು ಅವರು ನಂಬಲಿ, ಆದರೆ ತಾನು ನಂಬುವ ದೇವರನ್ನು ನಂಬಬೇಕು ಎಂಬ ಬಲವಂತ ಸಲ್ಲದು. ಮತ ಮತ್ತು ದೇವರು ಜನರಿಗೆ ಏನೂ ಮಾಡುವುದಿಲ್ಲ. ಅವುಗಳ ಹೆಸರಿನಲ್ಲಿ ಕೆಲವರು ಕೆಟ್ಟ ಪ್ರವೃತ್ತಿ ಬೆಳೆಸಿಕೊಂಡಿದ್ದಾರೆ. ಧರ್ಮಾಂಧತೆ ಮಿತಿ ಮೀರಿದರೆ ಅದು ವಿನಾಶಕ್ಕೆ ಕಾರಣವಾಗುತ್ತದೆ. ದೇವರಲ್ಲಿ ಭಕ್ತಿ ಇಡುವುದಕ್ಕಿಂತ ಮಾನವ ಹಿತದಲ್ಲಿ ಭಕ್ತಿ ಇಡುವುದು ಉತ್ತಮ.

(ಮೂರ್ತಿರಾವ್ ಸಾಹಿತ್ಯ ಕುರಿತು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಏರ್ಪಡಿಸಿದ ಸಂವಾದ ಕಾರ್ಯಕ್ರಮದಲ್ಲಿ ಪ್ರಜಾವಾಣಿ 29–7–95 ಪುಟ 5)

ಈ ಕೃತಿಯನ್ನು ಕುರಿತು ಪ್ರೊ. ಎಲ್. ಎಸ್. ಶೇಷಗಿರಿ ರಾವ್ ಅವರ ಅಭಿಪ್ರಾಯವನ್ನು ನಾವು ಒಪ್ಪಬಹುದು.

ಕನ್ನಡದಲ್ಲಿ ನಾನು ಓದಿರುವ ಉತ್ತಮ ಕೃತಿಗಳಲ್ಲಿ ಇದೂ ಒಂದು. ಇದರ ವಿಸ್ತಾರ, ಕೇಂದ್ರ, ಮನೋಧರ್ಮ ಅತ್ಯಂತ ಆರೋಗ್ಯಕರ, ಜೀವನ ಪರ. ಮತ್ತೆ ಮತ್ತೆ ಓದುಗನು ತನ್ನ ನಂಬಿಕೆಗಳನ್ನು ಪರೀಕ್ಷಿಸಿಕೊಳ್ಳುವಂತೆ ಮಾಡಿ ಚಿಂತನೆಗೆ ಹಚ್ಚುವ ಪುಸ್ತಕ. ಆಧುನಿಕ ಮನೋಧರ್ಮ ರೂಪಿಸಿದ, ಪರಂಪರೆಯನ್ನು ಗೌರವಿಸುವ ಚಿಂತನಶೀಲರೊಬ್ಬರ ಕೃತಿ (ಕನ್ನಡ ಪ್ರಭ 22–5–94 ಪುಟ–1)

ಶ್ರೀಮತಿ. ಸಿ.ಎಸ್. ಸರ್ವಮಂಗಳ ರವರ ತೌಲನಿಕ ಅಭಿಪ್ರಾಯ ಸಮರ್ಥನೀಯ.

His 'Devaru' takes a position quite distinct from that of D.V. Gundappa, who locates godlyness in value of aesthetics and beauty and that of H. Narasimhaiah who takes up Cudgeles against god and godmen in the cause of scientific temper. Rather, Murthy Rao joins issue with the believers on their own terms. That is why he succeeds where dry rationalists like H.N. fail. It is easy to dismiss the puelile rationalism of H.N which is grounded in very simplistic motion of the scientific temper, but it is difficult to take the arguments of Murthy Rao lightly for his rationality is of a much deeper kind, drawing as it does from sources as diverse as Socrates, Kant and the Upanishads.

(Deccan Herald, 04–6–94)

## ಅಧ್ಯಾಯ – 11

### 11.1 ಉಪನಿಷತ್ತುಗಳ ಪ್ರಭಾವ

ಪ್ರತಿಯೊಬ್ಬ ಲೇಖಕನೂ ಒಂದೊಂದು ಪ್ರಭಾವಕ್ಕೆ ಒಳಗಾಗುವುದು ಸಹಜ. ತಾನು ಕಂಡ, ಅಧ್ಯಯನ ಮಾಡಿದ ಕ್ಷೇತ್ರದ ಒತ್ತಡಕ್ಕೆ ಬಾಗುವುದು ಅಥವಾ ಮಣಿಯುವುದು ಯುಗಧರ್ಮ. ಪ್ರೊ. ಎ.ಎನ್. ಮೂರ್ತಿರಾಯರ ಸಮಕಾಲೀನರಲ್ಲಿ ಅನೇಕರು ಭಾರತೀಯ ದರ್ಶನ ಗ್ರಂಥಗಳು, ವೇದೋಪನಿಷತ್ತು, ರಾಮಾಯಣ ಭಾರತ, ಭಾಗವತ, ಗೀತೆಗಳಿಂದ ಪ್ರಭಾವಿತರಾಗಿದ್ದಾರೆ. ಮೂರ್ತಿರಾಯರ ಬದುಕು ಬರಹಗಳನ್ನು ಗಾಢವಾದ ಪ್ರಭಾವದ ಕಕ್ಷೆಗೆ ಒಳಪಡಿಸಿದ ಅಂಶವೆಂದರೆ ಉಪನಿಷತ್ತುಗಳು.

ಮೂರ್ತಿರಾಯರು ಆರಂಭದಿಂದಲೂ ಒಂದು ಬಗೆಯ ಪ್ರಶ್ನಕ ವೃತ್ತಿಯ ಮನೋಭಾವನೆಯನ್ನು ಬೆಳೆಸಿಕೊಂಡವರು. ಆದರೆ ಭಾರತೀಯ ಪದ್ಧತಿ, ಸಂಪ್ರದಾಯಗಳನ್ನು ವೈಚಾರಿಕತೆಯ ಸೋಗಿನಲ್ಲಿ ಕೀಳಾಗಿ ಕಂಡವರಲ್ಲ, ಹಳಿದವರೂ ಅಲ್ಲ. ಹಬ್ಬ ಹರಿದಿನ ಇನ್ನಿತರ ಸಾಂಪ್ರದಾಯಿಕ ಆಚರಣೆಗಳ ಹಿನ್ನೆಲೆ, ಕಲಾತ್ಮಕತೆ ಹಾಗೂ ಮೌಲ್ಯಗಳನ್ನು ಗುರುತಿಸಿದವರು. 'ಮಂದೇವರ' ಪೂಜೆಯ ದಿನ ನೈಷ್ಠಿಕ ಉಪವಾಸವನ್ನು ಮಾಡಲೇಬೇಕೆಂಬ ನಿಯಮವನ್ನು ಪರೀಕ್ಷಿಸಲು ಯಾರಿಗೂ ತಿಳಿಯದಂತೆ, ಅವಲಕ್ಕಿ ಬೆಲ್ಲ ತಿಂದು ನಿಯಮದ ಉಲ್ಲಂಘನೆ ಮಾಡಿದವರು. ಹೀಗೆ ಒಂದು ರೀತಿಯ ಸೌಮ್ಯ ಬಂಡಾಯ ಒಂದು ಕಡೆ, ಧಾರ್ಮಿಕ ಆಚರಣೆಗಳ ಹಿನ್ನೆಲೆಯಲ್ಲಿ ಕಾಣುವ ಮಾನವೀಯ ಮೌಲ್ಯಗಳು, ಚೆಲುವು, ಪ್ರಸನ್ನಮಯ ವಾತಾವರಣವನ್ನು ಒಪ್ಪಿಕೊಂಡು ಉಳಿಸಿಕೊಂಡು ಬಂದವರು. ಮತ್ತೊಂದು ಕಡೆ ವೇದೋಪನಿಷತ್ತುಗಳನ್ನು ಆಳವಾಗಿ ಅಧ್ಯಯನ ಮಾಡಿದವರು. ಪುರುಷಸೂಕ್ತ ಹೇಳಿ ಕೆಲವು ತಿಂಗಳು ಪೂಜೆ ಮಾಡಿದವರು. ಮಂತ್ರಗಳು ಪ್ರತಿಪಾದಿಸುವ ಅರ್ಥ ಗಾಂಭೀರ್ಯವನ್ನು ಮನಗಂಡವರು. ವೇದೋಪನಿಷತ್ತುಗಳು ಮೂರ್ತಿರಾಯರ ಪಾಲಿಗೆ ಕೇವಲ ಬಾಯಿಪಾಠ ಮಾಡುವಷ್ಟಕ್ಕೇ ಸೀಮಿತವಾಗಿರಲಿಲ್ಲ. ಕೇವಲ ಗಿಳಿಪಾಠದಂತೆ ಅರ್ಥವನ್ನು ಅರಿಯದೆ ಪುನರುಚ್ಚರಿಸುವ ಕ್ರಮ ಅವರದ್ದಾಗಿರಲಿಲ್ಲ. ಆದ್ದರಿಂದಲೇ ವೇದೋಪನಿಷತ್ತು, ರಾಮಾಯಣಗಳ ಆಳಕ್ಕೆ ಇಳಿಯಲು ಅವರಿಂದ ಸಾಧ್ಯವಾಯಿತು. ಕಥೆ, ಮೌಲ್ಯ, ಸಂದೇಶಗಳನ್ನು ವಿಮರ್ಶಾತ್ಮಕವಾಗಿ ನೋಡುವ ಪರಿಪಾಠ ಅವರದ್ದಾಯಿತು.

ಉಪನಿಷತ್ತುಗಳು ಪ್ರತಿಪಾದಿಸುವ ಉದಾತ್ತ ಜೀವನ ಮೌಲ್ಯಗಳಿಗೆ ಮೂರ್ತಿರಾಯರು ಮಾರು ಹೋದವರು. ಅಲ್ಲಿ ವ್ಯಕ್ತಪಡಿಸಲಾದ ಹಲವು ಮೌಲ್ಯಗಳಿಗೆ ಅವರು

ಸ್ಪಂದಿಸಿದವರು. ಅವರ ಕೃತಿಗಳಲ್ಲಿ ಹತ್ತು ಹಲವು ಕಡೆ ಉಪನಿಷತ್ತಿನ ಮಂತ್ರಗಳ ಉಲ್ಲೇಖ ಕಂಡುಬರುತ್ತದೆ. ಉಪನಿಷತ್ತುಗಳ ದಟ್ಟವಾದ ಪ್ರಭಾವದ ಛಾಯೆ ಇವರ ಬರಹಗಳನ್ನು ಆವರಿಸಿರುವುದನ್ನು ನಾವು ನೋಡುತ್ತೇವೆ. ಇದರಿಂದ ಮೂರ್ತಿರಾಯರು ಉಪನಿಷತ್ತುಗಳನ್ನು ಎಷ್ಟು ತನ್ಮಯತೆಯಿಂದ, ಗಾಢವಾಗಿ ಹಾಗೂ ತಲಸ್ಪರ್ಶಿಯಾಗಿ ಅಧ್ಯಯನ ಮಾಡಿರುವರೆಂಬುದು ಸ್ಪಷ್ಟವಾಗುತ್ತದೆ. ಅಧ್ಯಯನದಿಂದ ಅರಳಿದ ಬದುಕು ಎಂತಹ ಉನ್ನತ ಮಟ್ಟದ ಬರಹವನ್ನು ಸೃಷ್ಟಿಸುತ್ತದೆ ಎಂಬುದಕ್ಕೆ ಇದೇ ಒಂದು ನಿದರ್ಶನ.

ಡಾ. ಎಸ್. ರಾಧಾಕೃಷ್ಣನ್‌ರವರ ಪ್ರವಚನ ಲಾಲಿತ್ಯ ಕೆಲವು ವೇಳೆ ದೋಷವಾಗಿ ಹೇಗೆ ಪರಿಣಮಿಸುತ್ತಿತ್ತು ಎಂಬುದನ್ನು ಸಮರ್ಥಿಸಲು ಉಪನಿಷತ್ತಿನ ಒಂದು ರಮ್ಯ ರೂಪಕವನ್ನು ನಮ್ಮ ಮುಂದೆ ಹೀಗೆ ಇಡುತ್ತಾರೆ.

"ಆದರೆ ರಾಧಾಕೃಷ್ಣನ್‌ರು ಇದು ನೀವು ಹೋಗಬೇಕಾದ ದಾರಿ ಎಂದು ತೋರಿಸಿಕೊಟ್ಟು 'ತಪಸಾಬ್ರಹ್ಮ ವಿಜ್ಞಾಸಸ್ವ, ತಪೋ ಬ್ರಹ್ಮ ಇತಿ ಹೇಳುವ ಬದಲು ಬ್ರಹ್ಮದ ಸ್ವರೂಪ ಇದು ಎಂದು ಹೇಳಿಬಿಟ್ಟರು. ಅವರ ಶಿಷ್ಯರು ತಾತ್ಕಾಲಿಕವಾಗಿ ಪಡೆದ ಜ್ಞಾನದಿಂದ ತೃಪ್ತರಾಗದೆ ಸಮಿತ್ಪಾಣಿಗಳಾಗಿ ಬ್ರಹ್ಮನನ್ನು ಅರಸಿಕೊಂಡು ಹೊರಡುವ ಮನೋವೃತ್ತಿಯನ್ನು ಬೆಳೆಸಿಕೊಳ್ಳಲಿಲ್ಲ ಎಂದು ನನಗೆ ಅನ್ನಿಸಿರುವುದುಂಟು".. (ಚಿತ್ರಗಳು..... ಪುಟ 19) ಇಲ್ಲಿ ಸಮಿತ್ಪಾಣಿ ಬ್ರಹ್ಮ ಮುಂತಾದ ಪಾರಿಭಾಷಿಕ ಶಬ್ದಗಳು ಗಮನಾರ್ಹ. ಅಂದಿನ ಕಾಲದ ಒಂದು ಪ್ರತಿಮೆ ಇಂದು ನಮ್ಮ ಮುಂದೆ ಜೀವ ತಳೆಯುತ್ತದೆ. ಅದರಂತೆಯೇ ಭಾರತ ಹಾಗೂ ಉಪನಿಷತ್ತುಗಳ ಅವಿನಾದ್ವೈತ ಸಂಬಂಧವನ್ನು ಅವರು ಹೀಗೆ ಪ್ರಸ್ತಾವಿಸುತ್ತಾರೆ.

ಸಾಹಿತ್ಯದಲ್ಲೂ ತತ್ವಶಾಸ್ತ್ರದಲ್ಲೂ ಭಾರತ ಮಾಡಿದ್ದ ಸಾಧನೆಯ ವಿಷಯ ಇಲ್ಲೊಬ್ಬ ಗಯಟೆಗೆ ಅಲ್ಲೊಬ್ಬ ಮ್ಯಾಕ್ಸ್‌ಮುಲ್ಲರ್‌ಗೆ ತಿಳಿದಿದ್ದಿರಬಹುದು. ಆದರೆ ಪಶ್ಚಿಮದ ರಾಜಕೀಯ ವಾತಾವರಣದಲ್ಲೂ ಜನಸಾಮಾನ್ಯರಲ್ಲೂ ಇದ್ದ ಭಾರತದ ಪ್ರತಿಮೆ (Imagae) ವಾಲ್ಮೀಕಿ, ಕಾಳಿದಾಸ, ಉಪನಿಷತ್ಕಾಲದ ಋಷಿಗಳು ಇಂಥವರಿಂದ ರಚಿತವಾದದ್ದಲ್ಲ..(ಪುಟ 24) ಹೀಗೆಂದಾಗ ಮೂರ್ತಿರಾಯರ ಭಾರತ ಕಲ್ಪನೆ ಎಂತಹುದೆಂದು ನಮಗೆ ವಿಧಿತವಾಗುತ್ತದೆ. ಇಂದಿನ ಭಾರತಕ್ಕೆ ಅಂದಿನ ಋಷಿ, ಕವಿಋಷಿಗಳು, ಉಪನಿಷತ್ಕಾಲದ ಋಷಿಗಳ ಕೊಡುಗೆ ಏನು, ಅವರು ಸೃಷ್ಟಿಸಿದ ಭವ್ಯ ಭಾರತ ಎಷ್ಟು ಎತ್ತರದ್ದು ಎಂಬುದನ್ನು ಅವರು ಅರ್ಥ ಮಾಡಿಕೊಂಡಿದ್ದಾರೆ. ಅದು ಪಾಶ್ಚಿಮಾತ್ಯರಲ್ಲಿ ಗಯಟೆ, ಮ್ಯಾಕ್ಸ್‌ಮುಲ್ಲರ್‌ರಂತಹ ಋಷಿಸದೃಶ ಚೇತನಗಳಿಗೆ ಅರ್ಥವಾದೀತೇ ಹೊರತು ಎಲ್ಲರಿಗೂ ಅರ್ಥವಾಗುವಂತಹುದಲ್ಲ.

ಉಪನಿಷತ್ತುಗಳ ಸಾರ್ವತ್ರಿಕತೆ ಹಾಗೂ ಸಾರ್ವಜನಿಕತೆಗಳನ್ನು ಮೂರ್ತಿರಾಯರು ವಿಶ್ವವ್ಯಾಪಿಯಾಗಿ ಅನ್ವಯಿಸುವಂತಹ ಒಂದು ನಿದರ್ಶನವನ್ನು ಉಲ್ಲೇಖಿಸುತ್ತಾರೆ.

ಯಾನಿ ಅಸ್ಮಾಕ್‌ಗ್‌ಂ ಸುಚರಿತಾನಿ, ತಾನಿ ತ್ವಯೋಪಾಸ್ಯಾನೀ ನೋ ಇತರಾಣಿ. (ನಮ್ಮಲ್ಲಿ ಒಳ್ಳೆಯ ನಡತೆಗಳೇನುಂಟೋ ಅವನ್ನು ಅನುಸರಿಸಬೇಕು, ಉಳಿದವುಗಳನ್ನು-ಒಳ್ಳೆಯದಲ್ಲದವನ್ನು-ಅನುಸರಿಸಬಾರದು) ಎಂಬ ಉಪನಿಷದ್ವಾಕ್ಯವನ್ನು ರಾಲೋ ಕೇಳಿದ್ದರೆ ಅದನ್ನು ಮನಸಾರ ಒಪ್ಪುತ್ತಿದ್ದರು. (ಚಿ.ಪ) (ಪುಟ 56)

ಮೂರ್ತಿರಾಯರ ಗುರುಗಳಾಗಿದ್ದ ಶ್ರೀಯವರನ್ನು ಕುರಿತ ಚಿತ್ರಣ ಮುಗಿಯುವುದು ಉಪನಿಷದ್ವಾಕ್ಯವೊಂದರ ಮಂಗಳಾಶಂಸನಾ ಭರತವಾಕ್ಯದಿಂದ. ಅದರ ಹಾರೈಸಿರುವ ಆಶಯ ಒಂದು ರೀತಿಯ ಗುರುದಕ್ಷಿಣೆಯೂ ಹೌದು, ಗುರುಸ್ಮರಣೆಯೂ ಹೌದು. ಭಾರತೀಯ ಪರಂಪರೆಯಲ್ಲಿ ಅವಿಚ್ಛಿನ್ನವಾಗಿ ಬೆಳೆದು ಬಂದಿರುವ ಗುರುಶಿಷ್ಯರ ಆಧ್ಯಾತ್ಮಿಕ ಸಂಬಂಧವನ್ನೂ, ಅಲೌಕಿಕ ಹಿನ್ನೆಲೆಯನ್ನೂ ಹಾಗೂ ಪಾರಮಾರ್ಥಿಕ ಔನ್ನತ್ಯವನ್ನೂ ಪ್ರತಿಬಿಂಬಿಸುವ ಉಪನಿಷತ್ತಿನ ಈ ಸಂದೇಶದೊಂದಿಗೆ ಹೀಗೆ ಈ ಶಬ್ದ ಚಿತ್ರಣವನ್ನು ಮುಗಿಸುತ್ತಾರೆ.

"ಅದು ನನ್ನನ್ನು ಕಾಪಾಡಲಿ, ಅದು ವಕ್ತಾರನನ್ನು(ಗುರುವನ್ನು) ಕಾಪಾಡಲಿ"

ತನ್ಮಾಮವತು, ತದ್ವಕ್ತಾರಮವತು ।
ಅವತು ಮಾಂ, ಅವತು ವಕ್ತಾರಂ ॥ (ಪುಟ 83) (ಚಿ.ಪ.)

ಶ್ರೀ. ಟಿ.ಎಸ್. ವೆಂಕಣ್ಣಯ್ಯನವರ ಆತ್ಮೀಯತೆಯನ್ನು "ಅದೊಂದು ಆಧ್ಯಾತ್ಮಿಕ ಸಿದ್ಧಿಯೆಂದೇ ಹೇಳಬೇಕು" (88) ಎಂದು ಮನುಷ್ಯ ಸಂಸ್ಕಾರದ ಹಿನ್ನೆಲೆಯನ್ನು ಗುರುತಿಸಿದ ಮೂರ್ತಿರಾಯರು ಉಪನಿಷತ್ತಿನ ಮಂತ್ರಾರ್ಥವನ್ನು ಬದುಕಿನ ಮೂಲ ಮಂತ್ರವನ್ನಾಗಿ ಕಂಡವರು. ಈ ವಿಮರ್ಶಕ ವಾತಾಪಿಗೆ ಜೀರ್ಣೋಭವ ಎಂದು ಹೇಳುವ ಅಗಸ್ತ್ಯ ಶಕ್ತಿ ನಮ್ಮಲ್ಲಿ ಪ್ರಬಲವಾಗಬೇಕು" (ಪುಟ 95 ) ಎಂಬ ಪೌರಾಣಿಕ ರೂಪಕ ಮೂರ್ತಿರಾಯರು ಹಳೆಯದನ್ನು ಹೊಸದೃಷ್ಟಿಯಿಂದ, ಪ್ರಾಚೀನತೆಯನ್ನು ಅರ್ವಾಚೀನತೆಗೆ ಹೊಂದಿಸುವ (ಸಮತೋಲನಗೊಳಿಸುವ) ದೃಷ್ಟಿಯನ್ನು ಬೆಳೆಸಿಕೊಂಡಿದ್ದರ ಸಂಕೇತ. ವಿಶೇಷ ಶಿಕ್ಷಣ ಪಡೆಯಲು ಇಂಗ್ಲೆಂಡಿಗೆ ಹೋಗಿದ್ದ ಅವರ ಮಗ ಶ್ರೀ ಸುಬ್ಬರಾಮಯ್ಯನವರಿಗೆ ಅವರ ಆಂಗ್ಲಮಿತ್ರರು ಕೇಳಿದ್ದ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಬರೆದ ಪತ್ರ (ಪತ್ರ, 71 ಪುಟ 311-321) ಅವರ ಧಾರ್ಮಿಕ ದೃಷ್ಟಿಕೋನಕ್ಕೂ, ದರ್ಶನ ಗ್ರಂಥಗಳ ವ್ಯಾಖ್ಯಾನ ಸಾಮರ್ಥ್ಯಕ್ಕೂ ಸಾಕ್ಷಿ.

ವ್ಯಕ್ತಿ ಚಿತ್ರಣಗಳನ್ನು ಬರೆಯುವಾಗಲೂ ಮೂರ್ತಿರಾಯರು ಉಪನಿಷತ್ತುಗಳು ಬೋಧಿಸುವ ಮಾನವ ಜನ್ಮದ ಸಾರ್ಥಕ್ಯದ ಹಿನ್ನೆಲೆಯಲ್ಲಿಯೇ ಆಲೋಚಿಸುತ್ತಾರೆ. VISVESWARAYA : MAN AND LEGEND ಎಂಬ ವ್ಯಕ್ತಿ ಚಿತ್ರಲೇಖನದಲ್ಲಿ ಎಂ.ವಿ ಯವರ ಜೀವನ ಕ್ರಮವನ್ನು ವಿಶ್ಲೇಷಿಸುವಾಗ" Dr. Visveswaraya, with his gospel of truth, of work, duty and a fuller and richer life for all, is in tune with the Upanishads rather than the vague and futile mysticism, diverced from life, that so often passes for the 'spirit of India'. (P. 5) ಎಂಬ ಒಂದು ಸ್ಪಷ್ಟ ನಿಲುವನ್ನು ವ್ಯಕ್ತಪಡಿಸುತ್ತಾರೆ. ಆಧ್ಯಾತ್ಮಿಕ ಅನುಭೂತಿ ಎಂದರೆ ಜೀವನದಿಂದ ವಿಮುಖತೆಯಲ್ಲ. ಅದರ ಬದಲು ಜೀವನದ ವಿಚಿತ್ರ ಗುಣಧರ್ಮಗಳು. ಎಂ.ವಿ. ಯವರು ಜೀವನದಲ್ಲಿ ಅಳವಡಿಸಿಕೊಂಡಿದ್ದ ಆದರ್ಶಗಳನ್ನು ಮೂರ್ತಿರಾಯರು ಉಪನಿಷತ್ತುಗಳ ಬೆಳಕಿನಲ್ಲಿ ಅರ್ಥಮಾಡುತ್ತಾರೆ.

"The Gita tells me that faintness of heart is evil, and has to be cast out. The Katopanishad tells me that the weak can never attain the ' Self '. It is true – strength is what we need " ( What life has

Taught Me.) (p.1) ಇದರ ಇನ್ನೊಂದು ಮುಖದ ವಿಸ್ತೃತ ವಿವರಣೆ ಮುಂದಿದೆ. ಜೀವನದಲ್ಲಿ ಉತ್ಕಟ ವಿರಕ್ತಿಯನ್ನು ಬೋಧಿಸುವ ಭಾಗಗಳನ್ನೂ ಅವರು ಅಧ್ಯಯನ ಮಾಡಿದವರೇ. ಆದರೆ ಅವುಗಳು ಅವರಲ್ಲಿ ಆತ್ಮಾನುಕಂಪದ ಅಲೆಗಳನ್ನೆಬ್ಬಿಸಲಿಲ್ಲ. ಅದಕ್ಕಿಂತಲೂ ಅವರಿಗೆ ಪ್ರಿಯವಾದ ಜೀವನದ ಸಕಾರಾತ್ಮಕತೆಯನ್ನು ಎತ್ತಿ ಹಿಡಿಯುವ ಸಾಲುಗಳು.

On Indianness in India Literature ಎಂಬ ಲೇಖನದಲ್ಲಿಯೂ, ಭಾರತೀಯ ಲೇಖಕರು ಗ್ರಹಿಸಿದ ದರ್ಶನ ಶಾಸ್ತ್ರಗಳ ಧ್ವನಿಯನ್ನು ಗುರುತಿಸಿದ್ದಾರೆ. ಭಾರತೀಯ ಪಾಶ್ಚಿಮಾತ್ಯ ಲೇಖಕರ ಬರಹಕ್ಕೆ ಹಿನ್ನೆಲೆಯಾದ ಬದುಕಿನ ದೃಷ್ಟಿಕೋನವನ್ನು ಸಾಮ್ಯ ವ್ಯತ್ಯಾಸಗಳನ್ನು ಸೋದಾಹರಣವಾಗಿ ಗುರುತಿಸಿದ್ದಾರೆ. "Love of life and joy in it "....... ಎಂದು ಸಂಗ್ರಹರೂಪದ ಸಾರವನ್ನು ಪ್ರತಿಪಾದಿಸಲು ಉಪನಿಷತ್ತುಗಳ ಕೆಲವು ವಾಕ್ಯಗಳನ್ನು (72–73) ಯಾಜ್ಞವಲ್ಕ್ಯರ ಪ್ರವೃತ್ತಿ–ನಿವೃತ್ತಿ, ಭೋಗ ಯೋಗ ಲೌಕಿಕ ಸಾಮರಸ್ಯಗಳನ್ನು ಉಲ್ಲೇಖಿಸುತ್ತಾರೆ. (ಮೂಲ ಲೇಖನದಲ್ಲಿ ಉಪನಿಷತ್ತಿನ ಮೂಲ ವಾಕ್ಯಗಳನ್ನೇ ಉದಾಹರಿಸಿದ್ದಾರೆ)

ಸಹಸ್ರ ಸಹಸ್ರ ವರ್ಷಗಳ ಕೆಳಗೆ ರಚಿತವಾದ ಉಪನಿಷತ್ತುಗಳು ಇಂದು ಬದುಕಿನ ವಿವಿಧ ಮಜಲುಗಳಲ್ಲಿ ಹೇಗೆ ಅರ್ಥಪೂರ್ಣವಾಗಬಲ್ಲದು ಎಂಬುದಕ್ಕೆ ಮೂರ್ತಿ ರಾಯರ ಬದುಕು ಬರಹಗಳೇ ಸಾಕ್ಷಿ. ಅವರ ಬದುಕಿಗೆ ದೊರೆತ ಸ್ಫೂರ್ತಿ ಉಪನಿಷತ್ತು ಗಳಿಂದಲೇ. ಜೀವನ ಅವರಿಗೆ ಅತ್ಯಂತ ಗೌರವಾರ್ಹವಾದದ್ದು. "ನನ್ನ ಜೀವನ ದೃಷ್ಟಿ" ಕುರ್ವನ್ನೇವೇಹ ಕರ್ಮಾಣಿ ಜಿಜಿವಿಷೇತ್ ಶತಗ್ಂ ಸಮಾಬಿಚಿವಿಷೇತ್ ಶತಗಂ ಸಮಾ" (ತರಂಗ : 25.11.1984 ಪುಟ 26) ಅವರ ಜೀವನ ದೃಷ್ಟಿಯೇ ಉಪನಿಷತ್ತಿನಿಂದ.

ಮೂರ್ತಿರಾಯರು ಬಾಲ್ಯದಲ್ಲಿ ತಮ್ಮ ಊರಿನ ರಥೋತ್ಸವ ಕಾಲದಲ್ಲಿ ಎರಡು ತಂಡಗಳು ಮಾಡುತ್ತಿದ್ದ ವೇದಘೋಷವನ್ನು ಕೇಳಿ ಆನಂದಿಸಿದವರು. ಅದರ ನಾದ ಮಾಧುರ್ಯಕ್ಕೆ ಮನಸೋತವರು. ಅರ್ಥಗಾಂಭೀರ್ಯವನ್ನು ಮನಗಂಡವರು. ವೃತ್ತಿ ಜೀವನಕ್ಕೆ ಪದಾರ್ಪಣ ಮಾಡಿದ ಬಳಿಕ ರಘುವಂಶ, ಮೇಘಸಂದೇಶ, ರಾಮಾಯಣ, ಗೀತೆ, ಕುಮಾರಸಂಭವ, ಉತ್ತರ ರಾಮಚರಿತೆ, ಗೃಹ್ಯಸೂತ್ರಗಳು ಮುಂತಾಗಿ ಸಂಸ್ಕೃತ ಸಾಹಿತ್ಯ, ವೈದಿಕ ಸಾಹಿತ್ಯಗಳನ್ನು ಕ್ರಮಬದ್ಧವಾಗಿ ಅಧ್ಯಯನ ಮಾಡಿದವರು. ಅವರ ಆತ್ಮಚರಿತ್ರೆ, ಪತ್ರಗಳು, ವ್ಯಕ್ತಿಚಿತ್ರಣಗಳು, ವಿಮರ್ಶೆ ಇತ್ಯಾದಿ ಸಾಹಿತ್ಯ ಪ್ರಕಾರಗಳಲ್ಲಿ ಈ ಅಂಶ ವ್ಯಕ್ತವಾಗುತ್ತದೆ ಅವರ ಚಿಂತನಶೀಲತೆ ವಸ್ತುಗಳ ಬಗ್ಗೆ ಅವರಿಗಿರುವ ನಿರ್ಲಿಪ್ತತೆ ಅವರ ಪ್ರಬಂಧಗಳಲ್ಲಿ ದಿವಾನ ಖಾನೆಯ ಅಂದ ಚೆಂದ, ( Living Room) ಆತ್ಮಚರಿತ್ರೆಯಲ್ಲಿ(479–493) ಸ್ಪಷ್ಟವಾಗಿ ಕಂಡುಬರುತ್ತದೆ. ಸಂಧ್ಯಾ ವಂದನೆಯ ಆಚರಣೆಯಲ್ಲಿ ಅವರಿಗೆ ಅತ್ಯಂತ ಶ್ರೇಷ್ಠವಾದದ್ದು ಗಾಯತ್ರೀ ಮಂತ್ರ. ಅವರಿಗೆ ಮಂತ್ರಪಠನ ಒಳ್ಳೆಯ ಸಂಗೀತ ಕೊಡುವ ಉದಾತ್ತ ಆನಂದವನ್ನೇ ಕೊಡುತ್ತದೆ." (ಸಂಜೆಗಣ್ಣಿನ ಹಿನ್ನೋಟ 63). ಮಂತ್ರಗಳ ಗಂಭೀರವಾದ ನಾದ ಮಾಧುರ್ಯ (137) "ಇದರಲ್ಲಿ ಬದುಕನ್ನು ಉದ್ಧರಿಸುವ ಗುಣ ಏನೋ ಇದೆ, ಎಂಬ ಭಾವನೆ ಒಳ್ಳೆಯ ಸಂಗೀತವನ್ನು ಕೇಳಿದಾಗ ಬರುವ ಭಾವನೆ ಬಂದಿದೆ." (138) ಅವರ ದೃಷ್ಟಿಯಲ್ಲಿ

ವೇದವೆಂದರೆ ಕೇವಲ ಚತುರ್ವೇದಗಳಿಗೆ ಮಾತ್ರ ಸೀಮಿತವಾದದ್ದಲ್ಲ. ಲೌಕಿಕ ಜೀವನದ ಪ್ರಗತಿಗೆ ಪೂರಕವಾದ ಎಲ್ಲಾ ಮಾನವಿಕ ಶಾಸ್ತ್ರಗಳೂ 'ವೇದ'ವೇ. ಚತುರ್ವೇದಗಳ ಅಧ್ಯಯನದಿಂದ ಮನುಷ್ಯ ಪೂರ್ಣ ಜ್ಞಾನಿಯಾಗಲಾರ. ಅವರ ಈ ನಿಲುವನ್ನು ಮಂಡಿಸಲು ಅವರು ಈಶೋಪನಿಷತ್ತಿನ ಮಂತ್ರವನ್ನು ಉಲ್ಲೇಖಿಸುತ್ತಾರೆ. ಅಡಿ ಟಿಪ್ಪಣಿಯಲ್ಲಿ ಅದರ ಪೂರ್ಣ ರೂಪವನ್ನು ಕೊಡುತ್ತಾರೆ''-

"ಎರಡು ಮೂರು ಸಾವಿರ ವರ್ಷಗಳ ಹಿಂದೆ ಮಾನವಿಕ ಶಾಸ್ತ್ರಗಳೂ (ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಇತ್ಯಾದಿ) ಭೌತಶಾಸ್ತ್ರಗಳೂ ಬೆಳೆದಿರಲಿಲ್ಲವಾದ್ದರಿಂದ ವೇದವೊಂದೇ ಜ್ಞಾನವಾಗಿತ್ತು. ಈಗ ಲೌಕಿಕ ಜೀವನಕ್ಕೆ ಸಂಬಂಧಪಟ್ಟಂತೆ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ನೀತಿಶಾಸ್ತ್ರ, ಜೀವಶಾಸ್ತ್ರ, ಮುಂತಾದುವೆಲ್ಲ ಬೆಳೆದಿವೆ. ಬೆಳೆಯುತ್ತಲೂ ಇವೆ. ಇವೆಲ್ಲಕ್ಕೂ ವೇದ ಎಂಬ ಹೆಸರು ಸಲ್ಲಬಹುದು. ಹಿಂದಿನ ವೇದ ಎಂಬ ಪದಕ್ಕೆ ಈ ವಿಶಾಲವಾದ ಅರ್ಥವನ್ನು ಕೊಟ್ಟರೆ, ಹಿಂದಿನ ಚತುರ್ವೇದಗಳನ್ನು ಮಾತ್ರ ಅಧ್ಯಯನ ಮಾಡಿದವನು ವೇದ ಪಾರಂಗತನಾಗಲಾರ 'ತಪೋ ಭೂಯ ಇವತೇ ತಪೋ (ಪ್ರವಿಶಂತಿ)ಯ ಉ ವಿದ್ಯಾಯಾಂ ರತಾಃ' ಎಂಬ ಉಪನಿಷದ್ವಾಕ್ಯ ಅವನ ವಿಷಯದಲ್ಲಿ ಸತ್ಯವಾದೀತು. ವೇದವೇ ಎಲ್ಲ ಜ್ಞಾನ, ಎನ್ನುವುದಕ್ಕೆ ಬದಲಾಗಿ ಎಲ್ಲ ಜ್ಞಾನವೂ ವೇದ ಎನ್ನುವುದು ಸತ್ಯಕ್ಕೆ ಹತ್ತಿರವಾದ ಮಾತು. ಪುಟ (145)

ಇಂತಹ ಕಡೆಗಳಲ್ಲಿ (ಘಟ್ಟಗಳಲ್ಲಿ) ನಮಗೆ ಮೂರ್ತಿರಾಯರ ದೃಷ್ಟಿ ಗೋಚರ ವಾಗುತ್ತದೆ. ಅವರಲ್ಲಿ ಹಳತು ಹೊಸತರ ಸಂಗಮ ಮೇಳವಿಸಿರುವುದನ್ನು ಕಾಣುತ್ತೇವೆ. ಹಳೆಯದನ್ನು ಹೊಸದೃಷ್ಟಿಯಿಂದ ನೋಡಿ, ಹಳೆಯದನ್ನು ಹೊಸತಿಗೆ ಹೊಂದಿಸುವುದು, ಅನ್ವಯಿಸುವುದು ಮೂರ್ತಿರಾಯರಲ್ಲಿ ನಾವು ಕಾಣಬಹುದಾದ ಒಂದು ವಿಶೇಷ. ಇಲ್ಲಿಯೂ ಸಹ ನಾವು ಅದನ್ನೇ ಕಾಣುತ್ತಿದ್ದೇವೆ. ನಮಗೆ ಸಾಮಾನ್ಯವಾಗಿ ವೇದವೆಂದರೆ ನೆನಪಿಗೆ ಬರುವುದು ರೂಢಿಯಲ್ಲಿರುವ ಚತುರ್ವೇದಗಳು. ನಾವು ಅದನ್ನು ದಾಟಿ ಆಲೋಚಿಸುವುದಿಲ್ಲ. ಆದರೆ ಮೂರ್ತಿರಾಯರು ಪಾರಿಭಾಷಿಕ ಶಬ್ದಗಳ ವ್ಯಾಪ್ತಿಯನ್ನು ಹಿಗ್ಗಿಸುವುದು, ಅವುಗಳನ್ನು ಒಂದು ವಿಶಾಲಾರ್ಥಕ್ಕೆ ಒಳಪಡಿಸುವುದು ಹಾಗೂ ಅದನ್ನು ಅನ್ವಯಿಸುವ ಕ್ರಮ ಅವರ ಚಿಂತನಶೀಲತೆಗೆ ಸಾಕ್ಷಿ. 1941ರಲ್ಲಿ ಮೂರ್ತಿರಾಯರೂ Chemistry Lecturer ಶ್ರೀ ಟಿ.ಎಸ್. ಕಸ್ತೂರಿ ರಂಗಾಚಾರ್ಯರೂ ಶಿವಮೊಗ್ಗದಲ್ಲಿ ಇರುವಾಗ ಅಲ್ಲಿಯ ವಿದ್ವಾಂಸರೊಬ್ಬರ ನೆರವಿನಿಂದ ಗೃಹ್ಯಸೂತ್ರ, ರಘುವಂಶ, ಮಲ್ಲಿನಾಥನ ವ್ಯಾಖ್ಯಾನ ಇತ್ಯಾದಿಗಳನ್ನು ಸಕ್ರಮವಾಗಿ ಅಧ್ಯಯನ ಮಾಡಿದರು. ಸಂಸ್ಕೃತ ಸಾಹಿತ್ಯದೊಂದಿಗೆ ಭಾಷೆಯನ್ನು ಚೆನ್ನಾಗಿ ಅಧ್ಯಯನ ಮಾಡಿ ಸ್ವತಂತ್ರ ಕವಿತೆಗಳನ್ನು ರಚಿಸುವಷ್ಟರವರೆಗೆ ಪ್ರಭುತ್ವ ಗಳಿಸಿದರು. ಇಲ್ಲಿಯೂ ಅವರ ಹಾಸ್ಯ ಪ್ರವೃತ್ತಿ ಎದ್ದು ಕಾಣಿಸುತ್ತದೆ. ಅಂತಹ ಒಂದು ಸೊಗಸಾದ ಹಾಸ್ಯಪೂರ್ಣ ಪ್ರಸಂಗವನ್ನು ತಮ್ಮ ಆತ್ಮ ಚರಿತ್ರೆಯ (315-316) ಪುಟಗಳಲ್ಲಿ ವಿವರಿಸುತ್ತಾರೆ. ಅವರ ಮನಸ್ಸು ಉಪನಿಷತ್ತುಗಳ ಕಡೆಗೆ ತಿರುಗಿದ್ದನ್ನೂ, ಆ ಬಗ್ಗೆ ಇರುವ ಪ್ರಚಲಿತ ಮೌಢ್ಯವನ್ನೂ ಅವರು ಉಲ್ಲೇಖಿ ಸುತ್ತಾರೆ. "ಉಪನಿಷತ್ತುಗಳಲ್ಲಿ ಬರುವ ಪ್ರಸಂಗಗಳೂ ಸಾರವತ್ತಾದ ಮಂತ್ರಗಳೂ ನೆನಪಿಗೆ ಬರುತ್ತಿರುತ್ತವೆ": ಇದಕ್ಕೆ ಹೀಗೇಕೆ ಅರ್ಥ ಮಾಡಬಾರದು! ಎಂದು

ಕೊಳ್ಳುತ್ತೇನೆ" (ಪುಟ 164) ಮೂರ್ತಿರಾಯರ ಉಪನಿಷತ್ ಅಧ್ಯಯನ ಅರ್ಥಪೂರ್ಣವಾದುದು. ಅದರ ಆಳಕ್ಕೆ ಇಳಿಯುವ ತಳಕ್ಕೆ ಮುಳುಗುವಷ್ಟರ ಅಧ್ಯಯನದ ವ್ಯಾಪ್ತಿ; ಹೀಗೆ ಆರಂಭವಾದ ಅವರ ಉಪನಿಷತ್‌ಗಳ ಅಧ್ಯಯನ ನಿರಂತರವಾಗಿ ಮುಂದುವರಿಯಿತು. ಇದು ಓದುಗಾರಿಕೆಗೆ ಸೀಮಿತವಾಗದೆ, ಅಧ್ಯಯನದ ವ್ಯಾಪ್ತಿಗೂ ವಿಸ್ತರಿಸಲ್ಪಟ್ಟಿತು. ಸಂಸ್ಕೃತ ಕಾವ್ಯ ನಾಟಕಗಳೂ ಈ ಕಕ್ಷೆಗೆ ಬಂದವು. ಅವರ ಅಧ್ಯಯನದ ಕ್ರಮಬದ್ಧವಾದ ಮುಂದುವರಿಕೆಯನ್ನು, ಅದರ ಕುರಿತಾಗಿ ತಮ್ಮ ಮಿತಿಯನ್ನೂ ತಾವೇ ಸ್ವತಃ ಹೀಗೆ ವ್ಯಕ್ತಪಡಿಸಿದ್ದಾರೆ. 13263-

"1949ರಲ್ಲಿ, ಬೆಂಗಳೂರಿಗೆ ವರ್ಗವಾಗಿ ಹೋದಮೇಲೆ, ರಾಮಕೃಷ್ಣಾಶ್ರಮದವರು ಪ್ರಕಟಿಸಿರುವ ಉಪನಿಷತ್ ಪುಸ್ತಕಗಳನ್ನು (ಸಂಸ್ಕೃತ ಮೂಲ ಮತ್ತು ಸ್ವಾಮಿ ಶರ್ವಾನಂದರ ಭಾಷಾಂತರ, ಪ್ರತಿಪದಾರ್ಥ ಸಹಿತ) ಕೊಂಡು ಅವನ್ನು ಶ್ರದ್ಧೆಯಿಂದಲೇ (ಛಾಂದೋಗ್ಯಕ್ಕೆ ಶ್ರದ್ಧೆ ಸಾಲದೆ ಹೋಯಿತು)ವ್ಯಾಸಂಗ ಮಾಡಿದೆ. ಅರವತ್ತರ ದಶಕದಲ್ಲಿ ನಾನು ಭೋಪಾಲಿನಲ್ಲಿದ್ದಾಗ ಗೀತೆ ಉಪನಿಷತ್ತು ಇತ್ಯಾದಿಗಳನ್ನು ಆಸ್ಥೆಯಿಂದ ಅಧ್ಯಯನ ಮಾಡಿದ್ದವರೊಬ್ಬರು-ರಾಮಸ್ವಾಮಿ ಅಯ್ಯರು-ಸ್ನೇಹಿತರಾದರು. ಅವರು ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರರಾಗಿದ್ದ ವೇದಾಂತಿ ವಿ. ಸುಬ್ರಹ್ಮಣ್ಯ ಅಯ್ಯರ ತಮ್ಮನ ಮಗ. ಅವರೊಡನೆ ಭಗವದ್ಗೀತೆಯನ್ನೂ ಕೆಲವು ಉಪನಿಷತ್ತುಗಳನ್ನೂ ಆಳವಾಗಿಯೇ ವ್ಯಾಸಂಗ ಮಾಡಿದೆ. ಆದರೆ ಪೂರ್ಣಕಾಲದ ಪಂಡಿತರ ಕ್ರಮವನ್ನು ಅನುಸರಿಸಿ ಭಾಷ್ಯ ಸಹಿತ ವ್ಯಾಸಂಗ ಮಾಡುವುದು ನನಗೆ ಸಾಧ್ಯವಾಗಿಯೇ ಇಲ್ಲ. ಹಾಗೆ ಮಾಡಿದ ಹೊರತು ಅವುಗಳನ್ನು ಕುರಿತು ಜ್ಞಾನ ನಿಷ್ಕೃಷ್ಟವಾಗುವುದಿಲ್ಲ; ಪರಿಪೂರ್ಣವಾಗುವುದಿಲ್ಲ. ಆಶ್ರಮದ ವೇದಾಂತದ ವಿಷಯ ಬರೆಯಲಾಗಲಿ ಮಾತಾಡಲಾಗಲೀ ನನಗೆ ಅಧಿಕಾರವಿಲ್ಲ(319) ("ಆದರೆ ಅವುಗಳ (ಉಪನಿಷತ್) ವಿಷಯ ಮಾತಾಡುವ ಅಥವಾ ಬರೆಯುವ ಸಾಹಸಕ್ಕೆ ಕೈ ಹಾಕಲೊಲ್ಲೆ 164)."

ಇಂತಹ ಭಾಗಗಳನ್ನು ನಾವು ಗಮನಿಸಿದಾಗ ಮೂರ್ತಿರಾಯರು ಉಪನಿಷತ್ತುಗಳನ್ನು ಎಷ್ಟು ಶ್ರದ್ಧೆಯಿಂದ ಅಧ್ಯಯನ ಮಾಡಿದರೆಂದು ವ್ಯಕ್ತವಾಗುತ್ತದೆ. ಅಧ್ಯಯನ, ವಿದ್ವಾಂಸರ ಮಾರ್ಗದರ್ಶನ, ಚರ್ಚೆ, ವಿಚಾರ ವಿನಿಮಯ ಹೀಗೆ ಪರಿಪಕ್ವತೆ ಪಡೆದ ಜ್ಞಾನ ಅವರದು.

ನಮ್ಮಲ್ಲಿ ಅನೇಕ ಇಂಗ್ಲೀಷ್ ಅಧ್ಯಾಪಕರಿದ್ದಾರೆ. ಇಷ್ಟರ ಮಟ್ಟಿಗೆ ಆ ಕಾಲದ ಪ್ರೊಫೆಸರ್‌ಗಳು ಒಂದು ರೀತಿಯಲ್ಲಿ ಸಂಸ್ಕೃತಿಯ ಹಿನ್ನೆಲೆಯ ಭಾರತೀಯ ಹಿನ್ನೆಲೆಯನ್ನು ಪಾಶ್ಚಾತ್ಯ ಹಿನ್ನೆಲೆಯನ್ನು ಎಲ್ಲವನ್ನೂ ಅರಗಿಸಿಕೊಂಡು ತಮ್ಮ ಪರಂಪರೆಯ ಪ್ರಜ್ಞೆಯನ್ನು ವಿಸ್ತಾರ ಮಾಡಿಕೊಂಡು ಬರೆದಿರುವುದು ಕಡಿಮೆ.

–ಡಾ. ಜಿ.ಎಸ್. ಶಿವರುದ್ರಪ್ಪ (ಸಂದರ್ಭಪೂರ್ವೋಕ್ತ)

ಇಷ್ಟಾದರೂ ಅವರು ಅದರಿಂದ ಅಹಂಕಾರ ಪಡಲಿಲ್ಲ. ಬದಲಾಗಿ ತಮ್ಮ ಮಿತಿಯನ್ನು ಬಲ್ಲವರು. ಆ ಕುರಿತಾಗಿ ಅಧಿಕಾರ ವಾಣಿಯಿಂದ ಮಾತಾಡಬಲ್ಲರು, ಬರೆಯಬಲ್ಲರು ಎಂದು ಧ್ವನಿತವಾಗುತ್ತದೆ. ಆದರೆ ಅವರ ವಿನಯ ನಮ್ರತೆಗಳು ಅವರನ್ನು ಇಂದು ಹಿರಿಯ ವಿದ್ಯಾರ್ಥಿ-ಗುರುವಿನ ಸಾಲಿನಲ್ಲಿ ನಿಲ್ಲಿಸುತ್ತವೆ. ಹೀಗೆ

ಮೂರ್ತಿರಾಯರು ಬದುಕು-ಬರಹ-ಅಧ್ಯಯನಗಳ ಒಂದು ಸುಂದರ ತ್ರಿವೇಣಿ ಸಂಗಮ. ಈ ಮೂರನ್ನೂ ಪರಸ್ಪರ ಸಮನ್ವಯಗೊಳಿಸಿಕೊಂಡವರು ಅವರು.

ತೈತ್ತರೀಯೋಪನಿಷತ್ತಿನ 'ತಪಸಾ ಬ್ರಹ್ಮ ವಿಜಿಜ್ಞಾಸಸ್ವ' ಎಂಬ ಮಂತ್ರವನ್ನು ಮಾನವ ಸಂಸಾರಕ್ಕೆ ಅನ್ವಯಿಸಿದ್ದಾರೆ ಅವರು. ಉಪನಿಷತ್ತಿನಲ್ಲಿ ಬರುವ ಕಥೆ ಮಾನವನ ಸ್ವಯಂ ಪ್ರಗತಿಗಾಗಿ ಸ್ವಪ್ರಯತ್ನಶೀಲತೆಯನ್ನು ಕುರಿತು ಹೇಳುತ್ತದೆ. ಇದರ ಸಂದೇಶವನ್ನು ಅವರು ಗ್ರಹಿಸಿದ್ದಾರೆ. ಇದೇ ಪ್ರಸಂಗವು "ಚಿತ್ರಗಳು -ಪತ್ರಗಳು" ಕೃತಿಯಲ್ಲಿ ಬಂದಿರುವುದನ್ನು ಹಿಂದೆ ಉಲ್ಲೇಖಿಸಿದೆ. ಈ ಅನ್ವಯ ಹೀಗೆ ಇದೆ.

"ಮುಂದಿನ ಭೃಗುವಾರುಣಿಯೊಬ್ಬ, ತನ್ನ ತಂದೆಯ ಬಳಿಗೆ ಹೋಗಿ 'ಸಾಂಸಾರಿಕ ಪ್ರೇಮವೇ ಬ್ರಹ್ಮ' ಎನ್ನಬಹುದು. ತಂದೆ ನಸುನಕ್ಕು 'ಮತ್ತೆ ತಪಸ್ಸು ಮಾಡಿ ಬ್ರಹ್ಮವನ್ನು ತಿಳಿದುಕೋ' ಎನ್ನಬಹುದು. ತಪಸ್ಸು ಮಾಡಿದ ನಂತರ ಆ ಸಾಧಕ 'ವಿಶ್ವಪ್ರೇಮವೇ ಬ್ರಹ್ಮ' ಎಂದು ತಿಳಿದುಕೊಳ್ಳಬಹುದು. ನಮ್ಮ ಕುವೆಂಪು ಹಿಂದೊಂದು ಸಾರಿ "ನೂರು ದೇವರನೆಲ್ಲ ನೂಕಾಚೆದೂರ; ಭಾರತಾಂಬೆಯೇ ದೇವಿ ಪೂಜಿಸುವ ಬಾರ" ಎಂದು ಹಾಡಿದರು. ಅದೇ ಕುವೆಂಪು ಈಗ ನಮ್ಮನ್ನು ವಿಶ್ವಮಾನವನ ಪೂಜೆಗೆ ಆಹ್ವಾನಿಸುತ್ತಿದ್ದಾರೆ.

(ಪುಟ 479).

ಅಡಿ ಟಿಪ್ಪಣಿಯಲ್ಲಿ ತೈತ್ತರೀಯೋಪನಿಷತ್ತಿನ ಪೂರ್ಣ ಅನುವಾದವನ್ನು ನೀಡಿ "ಈ ಕಥೆ ಅರ್ಥಪೂರ್ಣವಾದದ್ದು" (419) ಎಂದು ಕೊಂಡಾಡಿದ್ದಾರೆ. ಉಪನಿಷತ್ತುಗಳ ಇಂತಹ ಮಾನವೀಯ ಮೌಲ್ಯಾಧಾರಿತ ಸಿದ್ಧಾಂತಗಳ ಸಂದೇಶಗಳನ್ನು ಮೂರ್ತಿರಾಯರು ಗ್ರಹಿಸಿದ್ದಾರೆ. ಸಾಂಸಾರಿಕ ಪ್ರೇಮದಿಂದ ವಿಶ್ವಮಾನವ ಪ್ರೇಮದವರೆಗೆ ಹಂತಹಂತವಾಗಿ ಏರಿದ ಕುವೆಂಪುರವರ ದೃಷ್ಟಿಕೋನವನ್ನು ಉಪನಿಷತ್ತುಗಳ ಆಧಾರದಿಂದ, ಅವುಗಳ ಬೆಳಕಿನಲ್ಲಿ ಅರ್ಥೈಸಿಕೊಳ್ಳುತ್ತಾರೆ. ಉಪನಿಷತ್ತುಗಳ ಇಂದಿನ Relevance/application – ಔಚಿತ್ಯ-ಅನ್ವಯಗಳನ್ನು ಸೋದಾಹರಣವಾಗಿ ಅರ್ಥಪೂರ್ಣವಾಗಿ ವಿಶ್ಲೇಷಿಸುತ್ತಾರೆ. ಈ ಅರ್ಥಪೂರ್ಣವಾದ ಅನ್ವಯ ಮೂರ್ತಿರಾಯರು ಉಪನಿಷತ್ತುಗಳನ್ನು ಎಷ್ಟು ಶ್ರದ್ಧೆಯಿಂದ ಅಧ್ಯಯನ ಮಾಡಿದ್ದಾರೆ ಹಾಗೂ ಅರ್ಥಮಾಡಿಕೊಂಡು ಅನುಷ್ಠಾನಗೊಳಿಸಿಕೊಂಡಿದ್ದಾರೆ ಎಂಬುದರ ಪ್ರತೀಕ.

"Contemporary Literature Tradition" ಎಂಬ ಇಂಗ್ಲೀಷ್ ಲೇಖನದಲ್ಲಿ ಮೂರ್ತಿರಾಯರು ಸಮಕಾಲೀನ ಸಾಹಿತ್ಯದ ಗೊತ್ತು ಗುರಿ ನೆಲೆ ಸ್ಥಿತಿಗತಿಗಳನ್ನು ವಿವೇಚಿಸಿದ್ದಾರೆ. ಹೊರಳು ದಾರಿಯಲ್ಲಿರುವ ಕನ್ನಡ ಸಾಹಿತ್ಯದ ಗುಣಲಕ್ಷಣಗಳನ್ನು ಕುರಿತ ಈ ಲೇಖನದಲ್ಲಿ ಸಾಹಿತ್ಯ ಕವಿಗಳ ಪ್ರಶ್ನಕ ಮನೋವೃತ್ತಿಯನ್ನು ಅವರು ಗುರುತಿಸಿದ್ದಾರೆ. ಈ ಪ್ರಶ್ನಕ ಮನೋಭಾವದ ಬೇರು ನಮ್ಮ ಉಪನಿಷತ್ತುಗಳಲ್ಲಿರುವುದನ್ನು ಅವರು ಉಲ್ಲೇಖಿಸಿದ್ದಾರೆ. ಸಂಪ್ರದಾಯ ಶರಣತೆಯ ದಾಸ್ಯ ಭಾವವನ್ನು ಮೀರಿ ಬೆಳೆದ ಕನ್ನಡ ಬಹುಶ್ರುತ ಲೇಖಕರ ಕ್ರಾಂತಿಕಾರಕ ಮಾರ್ಪಾಡುಗಳನ್ನು ಸೋದಾಹರಣವಾಗಿ ವಿವರಿಸಿದ್ದಾರೆ. ಪ್ರಶ್ನಕ ಮನೋವೃತ್ತಿ ಈ ಲೇಖಕರಲ್ಲಿ ಬೆಳೆದು ಬರಲು ಅಥವಾ ಉಂಟಾಗಲು ಭಾರತೀಯ ದರ್ಶನಗಳು ಹೇಗೆ ಪ್ರಭಾವ ಬೀರಿವೆ ಎಂಬುದನ್ನು ನಿರೂಪಿಸಲು ಉಪನಿಷತ್ತುಗಳನ್ನು ಆಧರಿಸಿ ಹೀಗೆ ಬರೆಯುತ್ತಾರೆ.

1. The questioning spirit of course it is possible to point out that in India it is as old as the Upanishads. Before the philosophers said ನ ತತ್ರಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ ನೋ ಮನಃ– he had asked himself the question "What is it that makes the eye see and ear hear?" In the tune scientific spirit he had not taken vision and hearing for granting Brigu Varuni was not handed truth on a platter. He was told to think. ತಪೋಃಬ್ರಹ್ಮ Krishna tells Arjuna to consider all that had been said and decide for himslef. Arjuna has to question and sit in judgement" (Page 4)

....we started not from life but from the ಪ್ರಮಾಣಾಸ, ಶ್ರುತಿ, ಬ್ರಹ್ಮಸೂತ್ರಾಸ್, the Gita and what have you. We went on singing changes on what the Upanishads, the Brahma Suthras or the Gita said.....(Page 5–4). ಮೂರ್ತಿರಾಯರು ವೇದ ಉಪನಿಷತ್ತು, ಗೀತೆ, ಬ್ರಹ್ಮಸೂತ್ರ-ಇತ್ಯಾದಿಗಳನ್ನು ಸಕ್ರಮವಾಗಿ ಅಧ್ಯಯನ ಮಾಡಿದರು. ಕನ್ನಡ ಸಾಹಿತ್ಯದ ಮೇಲೆ ಅದರ ಪ್ರತ್ಯೇಕ-ಪರೋಕ್ಷ ಪ್ರಭಾವಗಳನ್ನು ಹೀಗೆ ಸೂಕ್ಷ್ಮವಾಗಿ ಗುರುತಿಸಿದ್ದಾರೆ.

ಸಂಗೀತ ಪ್ರೇಮಿಗಳಾದ ಮೂರ್ತಿರಾಯರು ಸಂಗೀತವನ್ನೂ ಕೂಡಾ ಉಪನಿಷತ್ತುಗಳ ಹಿನ್ನೆಲೆಯಲ್ಲಿ ಅನುಭವಕ್ಕೆ ತಂದುಕೊಳ್ಳುತ್ತಾರೆ. ಸಂಗೀತಕ್ಕೂ ಉಪನಿಷತ್ತಿಗೂ ಹೀಗೆ ನಂಟನ್ನು ಬೆಸೆದ ಮುರ್ತಿರಾಯರ ಸಂಗೀತ ಪ್ರೇಮ ಉಪನಿಷತ್ತು ಬೋಧಿಸುವ ಮಾನವೀಯ ; ಆಧ್ಯಾತ್ಮಿಕ ಮೌಲ್ಯ -ಎರಡನ್ನೂ ಮೇಳಯಿಸಿದ ಶೈಲಿ ಹೀಗಿದೆ.

(ಸಂಗೀತದಿಂದ ಅದರಿಂದಾಗುವ ಪರಿಣಾಮ....ಅದ್ಭುತವಾದ ಪ್ರಸನ್ನತೆ, ಪ್ರಶಾಂತತೆ, ಇವೆರಡೂ ಸಂದರ್ಭಗಳಲ್ಲೂ ನಾದೋಪಾಸನೆಯ ಆನಂದವೂ ಭಕ್ತಿಯೂ ಹದವಾಗಿ ಬೆರೆತಿದ್ದವು. ಸಂಗೀತಗಾರರ ಮನೆಯ ಭಜನೆ, ವೇದಘೋಷ, ಸಾಮಾನ್ಯ ಭಜನೆ-ಇವು-ಮೂರರಲ್ಲೂ ಕಾಣುವ ಸಾಮಾನ್ಯ ಲಕ್ಷಣವೆಂದರೆ, ಪರವಶತೆ: ನಮ್ಮನ್ನು ನಾವು ಮರೆತಿರುವುದು. ಆದರೆ ಮೊದಲ ಎರಡರಲ್ಲಿ ಪರವಶತೆಯು ಉದ್ವೇಗದ ಮಟ್ಟದಿಂದ ಮೇಲೇರಿ, ತೈತ್ತಿರೀಯೋಪನಿಷತ್ತು ಬಣ್ಣಿಸುವ ಬ್ರಹ್ಮಾನಂದವನ್ನು (ಸಾಧಿಸದಿದ್ದರೂ) ನೆನಪಿಗಾದರೂ ತರುತ್ತದೆ. (ಸಂಜೆಗಣ್ಣಿನ ಹಿನ್ನೋಟ ಪುಟ 23).

ಮೂರ್ತಿರಾಯರು ಪ್ರಾಸಂಗಿಕವಾಗಿ ಉಪನಿಷತ್ಕಾರರ ನುಡಿಗಳನ್ನು ಉದಾಹರಿಸಿದಂತೆ, ವರ್ತಮಾನ ಕಾಲವನ್ನೂ ಉಪನಿಷತ್ಕಾಲದೊಂದಿಗೆ ಸಮನ್ವಯಗೊಳಿಸುತ್ತಾರೆ. ಪ್ರೊ. ಹಿರಿಯಣ್ಣ ಹಾಗೂ ತೀ.ನಂ.ಶ್ರೀಯವರ ಗುರು-ಶಿಷ್ಯರ ಸಂಬಂಧವನ್ನು ಉಪನಿಷತ್ತಿನ ಹಿನ್ನೆಲೆಯಲ್ಲಿ ಅದಕ್ಕೊಂದು ಔನ್ನತ್ಯವನ್ನು ನೀಡುತ್ತಾರೆ. "ಉಪನಿಷತ್ಕಾಲದ ಗುರುಗಳು ಒಳ್ಳೆಯ ಶಿಷ್ಯರನ್ನು ತೋಳು ಚಾಚಿ ಬರಮಾಡಿಕೊಳ್ಳುತ್ತಿದ್ದಿರಬೇಕು. ಇದಕ್ಕೆ ತೈತ್ತಿರೀಯೋಪನಿಷತ್ತಿನಲ್ಲಿ ಸಾಕ್ಷ್ಯವಿದೆ" (ತೀನಂಶ್ರೀಗೆ ಪಂಪ ಪ್ರಶಸ್ತಿ ಪ್ರದಾನ ಭಾಷಣ ಪುಟ 5)

ಯಾವುದೇ ವಿಚಾರ ಧಾರೆಯಿರಲಿ, ಮೂರ್ತಿರಾಯರಿಗೆ ಅದರಲ್ಲಿ ಒಂದು ವಾಸ್ತವಿಕ ದೃಷ್ಟಿ, ಹಾಗೂ ಉದಾತ್ತ ಹಿನ್ನೆಲೆ ಅಗತ್ಯ. ಘಟನೆ ಇರಲಿ, ವ್ಯಕ್ತಿ ಚಿತ್ರಣವಿರಲಿ,

ಉಪನಿಷತ್ತಿನ ವಾಕ್ಯಗಳ ಬೆಳಕಿನಲ್ಲಿ ಅವುಗಳ ವಿಶ್ಲೇಷಣೆ ಮಾಡುವುದು ಮೂರ್ತಿರಾಯರ ಲಕ್ಷಣ. "ಗುರುಪೀಠಗಳು ಮತ್ತು ಸಮಾಜ" ಎಂಬ ಲೇಖನ ಸಂಪೂರ್ಣವಾಗಿ ಉಪನಿಷದ್ವಾಕ್ಯಗಳ ಹಿನ್ನೆಲೆಯಲ್ಲಿಯೇ ವಿವೇಚನೆ ಮಾಡಿದ್ದಾರೆ. ಸನ್ಯಾಸ, ಆತ್ಮ ಮುಂತಾದ ತತ್ವಶಾಸ್ತ್ರಗಳ ಪಾರಿಭಾಷಿಕ ಶಬ್ದಗಳನ್ನೂ ಅವರು ಉಪನಿಷತ್ತುಗಳ ಆಧಾರದಿಂದ ಅರ್ಥೈಸಿಕೊಳ್ಳುವ ರೀತಿ ಗಮನಿಸಬಹುದು. "ಆತ್ಮ" ಎನ್ನುವುದು ನನ್ನೊಬ್ಬನ, ನಿಮ್ಮೆಲ್ಲರ ಆತ್ಮವಲ್ಲ. ಈಶಾವಾಸ್ಯೋಪನಿಷತ್ತಿನ

ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂತ್ ವಿಜಾನತಃ

(ಎಲ್ಲ ತಿಳಿದವನಿಗೆ ಎಲ್ಲ ಭೂತಗಳೂ ಆತ್ಮವೇ ಆಗುತ್ತದೆ).

ಎಂಬ ಮಂತ್ರದಲ್ಲಿ ಕಾಣ ಬರುವ ಆತ್ಮ. ವಿಶ್ವ ಮೌಲ್ಯವೊಂದನ್ನು ಸಾಧಿಸಿದವನಿಗೆ ನಮ್ಮ ಪೃಥ್ವಿ ಸಣ್ಣದಾಗಿಯೇ ಕಂಡೀತು. ಅದನ್ನು ತ್ಯಜಿಸಬೇಕು ಎನ್ನುವುದು ಸಹಜವಾಗಿಯೇ ತೋರೀತು. (ಪುಟ 26)

ಸಂಸಾರ- ಹೆಂಡತಿ ಮಕ್ಕಳನ್ನು ಕುರಿತ ಅವರ ಧೋರಣೆ ಎಷ್ಟು ಉಚ್ಚ ಮಟ್ಟದ್ದು ಎಂಬ ಕಲ್ಪನೆ ಅವರ ಪ್ರಬಂಧಗಳನ್ನು ಓದುವಾಗ ಉಂಟಾಗುತ್ತದೆ. ಅಂತಹ ಒಂದು ನಿದರ್ಶನ ಇಲ್ಲಿದೆ. "ಜೀವ ಜ್ಯೋತಿ ನಂದಿ ಹೋಗಕೂಡದೆಂದು ನಮ್ಮ ಉಪನಿಷತ್ತೇ ಹೇಳುತ್ತದೆ. ಪ್ರಜಾತಂತುಂ ಮಾವ್ಯವಚ್ಛೇತ್ಸಿ (ಸಂತತಿಯನ್ನು ವಿಛಿನ್ನಗೊಳಿಸಬೇಡ) ಹೆಂಡತಿ ಮಕ್ಕಳನ್ನು ಕುರಿತು ಲಘುವಾದ ಮಾತನ್ನೇಕೆ ಆಡಬೇಕು? (ಪುಟ 27). ಇದೇ ಪುಟದಲ್ಲಿರುವ ಅಡಿ ಟಿಪ್ಪಣಿ "ಪುನಃ ಪುನರ್ಜಾಯಮಾನಾ ಪುರಾಣೀ, ಸಮಾನಂ ವರ್ಣನುಭಿ ಶಂಭಮಾನಾ, ವೇದದಲ್ಲಿ ಉಷೆಯನ್ನು ಕುರಿತ ಮಾತು"- ಎಂಬ ವೇದ ಸೂಕ್ತ ಅತ್ಯಂತ ಉಲ್ಲೇಖನೀಯ."

ಇದೇ ಲೇಖನದ ಮುಂದುವರಿದ ಭಾಗದಲ್ಲಿ ವಿದ್ಯೆ-ಅವಿದ್ಯೆಗಳ ಅಂತರವನ್ನು ಗುರುತಿಸಲೂ ಅವರು ಉಪನಿಷದ್ವಾಕ್ಯವೊಂದರ ಪ್ರಯೋಜನವನ್ನು ಪಡೆಯುತ್ತಾರೆ. ಅದರ ಪೂರ್ವಾಪರ ಉಲ್ಲೇಖವಿದು.

"....ಸಂಸಾರದ ಅನುಭವ 'ಅವಿದ್ಯೆ. ಅವಿದ್ಯೆಯನ್ನು ಸಂಯೋಜಿಸಿದ್ದರಿಂದ ಬರುವ ಜ್ಞಾನ 'ವಿದ್ಯೆ'. ಇವೆರಡರಲ್ಲಿ ಒಂದಿಲ್ಲದೆ ಮತ್ತೊಂದಿಲ್ಲ."

ಅಂಧತಮಃ ಪ್ರವಿಶಾಂತಿ ಯೇ ವಿದ್ಯಾಮುಪಾಸತೇ

ತತೋ ಭೂಯ ಇವತೇ ತಮೋ ಯು ವಿದ್ಯಾಯಾಂ ರತಾ :

(ಯಾರು ಅವಿದ್ಯೆಯನ್ನು ಉಪಾಸಿಸುತ್ತಾರೋ ಅವರು ಕಗ್ಗತ್ತಲೆಯನ್ನು ಪ್ರವೇಶಿಸುತ್ತಾರೆ. ಯಾರು ವಿದ್ಯೆಯಲ್ಲಿ ನಿರತರಾಗುತ್ತಾರೋ ಅವರು ಇನ್ನೂ ಹೆಚ್ಚಿನದೆನ್ನಿಸುವ ಕತ್ತಲೆಯನ್ನು ಪ್ರವೇಶಿಸುತ್ತಾರೆ) ಇದರ ವಿವರಣೆ ಮೂರ್ತಿರಾಯರ ಅಂತರ್ದೃಷ್ಟಿ. ಲೌಕಿಕ ಅನುಭವಕ್ಕೆ ಅವರು ನೀಡಿದ ಮಹತ್ವ ಇಲ್ಲಿ ಪ್ರಕಟವಾಗಿದೆ.

ಉಪನಿಷತ್ತುಗಳು ಮೂರ್ತಿರಾಯರ ಬರಹವನ್ನು ಆಕ್ರಮಿಸಿರುವುದನ್ನು ಅವರ ಎಲ್ಲಾ ಬಗೆಯ ಲೇಖನ ಪ್ರಕಾರಗಳಲ್ಲಿಯೂ ಕಾಣುತ್ತೇವೆ. ಉಪನ್ಯಾಸವಿರಲಿ, ಜೀವನಚರಿತ್ರೆಯಿರಲಿ, ಆತ್ಮ ಚರಿತ್ರೆಯಿರಲಿ, ಉದ್ಘಾಟನೆಯಿರಲಿ, ಅಲ್ಲೆಲ್ಲ ಮೂರ್ತಿ ರಾಯರ ಉಪನಿಷತ್ತುಗಳಿಂದ ವಾಕ್ಯಗಳನ್ನು ಸಮಯೋಚಿತವಾಗಿ ಉಲ್ಲೇಖಿಸುತ್ತಾರೆ. "ಕನ್ನಡ ಸಾಹಿತ್ಯದಲ್ಲಿ ಅದ್ವೈತ" ಎಂಬ ವಿಚಾರಗೋಷ್ಠಿಯನ್ನು ಉದ್ಘಾಟಿಸುತ್ತಾ

ಮಾಡಿದ ಉಪನ್ಯಾಸ ಅವರ ಅದ್ವೈತ ದರ್ಶನದ ಪ್ರಭುತ್ವಕ್ಕೆ ಸಾಕ್ಷಿ. ಈ ಉಪನ್ಯಾಸ ಲೇಖನದಲ್ಲಿ ಶ್ವೇತಾಶ್ವತರೋಪನಿಷತ್ತಿನ ಏಕೋದೇವ ............ ಎಂಬ ಮಂತ್ರವನ್ನು ಉದ್ಧರಿಸುತ್ತಾರೆ. ಉಪನಿಷತ್ತುಗಳು ಪ್ರಮಾಣ ಗ್ರಂಥಗಳಾದ್ದರಿಂದ ಅವುಗಳನ್ನು ಕೊಂಚ ಮಾರ್ಪಡಿಸಿ ಉಂಟಾದ ಸೂಕ್ತಗಳನ್ನು ಉದಾಹರಿಸುತ್ತಾರೆ. ನಾರಾಯಣ ಸೂಕ್ತದ ಒಂದು ಮಂತ್ರ ಹೇಗೆ ಉಪನಿಷತ್ತಿನ ಮತ್ತೊಂದು ರೂಪ ಎಂಬುದನ್ನು ಅವರು ಹೀಗೆ ಉದಾಹರಿಸುತ್ತಾರೆ.

"ತತ್ವಶಾಸ್ತ್ರಜ್ಞರು ಉಪನಿಷತ್ತುಗಳ ಮಂತ್ರಗಳನ್ನು 'ಪ್ರಮಾಣ' ಎಂದು ಭಾವಿಸುತ್ತಾರಾದ್ದರಿಂದ ತಮ್ಮ ಅನುಕೂಲಕ್ಕಾಗಿ ಅವುಗಳ ಪದಗಳನ್ನೂ ಅರ್ಥವನ್ನೂ ಸ್ವಲ್ಪ ತಿರುಚಿ ತಮ್ಮ ತತ್ವದ ಪರವಾಗಿ ವ್ಯಾಖ್ಯಾನ ಮಾಡುವುದು ಅಪರೂಪವೇನಲ್ಲ. ಉದಾಹರಣೆಗೆ ನಾರಾಯಣ ಸೂಕ್ತದ ಈ ಮಂತ್ರವನ್ನು ನೋಡಿ:

ಯಚ್ಚಕಿಂಚಿತ್ ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಪಿವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥

ಈ ಶ್ಲೋಕಕ್ಕೆ ವ್ಯಾಪಿಸಿರುವವನು ಬೇರೆ, ವ್ಯಾಪ್ತವಾಗಿರುವುದು ಬೇರೆ ಎಂದು ಅರ್ಥ ಮಾಡಬಹುದು. ಅದು ದ್ವೈತ. ಪ್ರಪಂಚದ ಕಣಕಣದಲ್ಲೂ ಒಳಗೂ ಹೊರಗೂ ಅವನಿದ್ದಾನೆ ಎಂದ ಮೇಲೆ ಅವನಿಲ್ಲದ್ದು ಏನೂ ಇಲ್ಲ ಎಂದಂತಾಯಿತು. ಅರ್ಥಾತ್ ಎಲ್ಲವೂ ಅವನೇ, ಎಂದೂ ಅರ್ಥ ಮಾಡಬಹುದು. ಇದು ಅದ್ವೈತ (ಪುಟ 3).

ಉಪನಿಷತ್ತಿನ ಸಾರವಾದ ಭಗವದ್ಗೀತೆಯಿಂದಲೂ ಅವರು ಉಲ್ಲೇಖಿಸಿ ಅದರ ಬೆಳಕಿನಲ್ಲಿ ತಮ್ಮ ಲೇಖನ ಉಪನ್ಯಾಸದ ವಸ್ತುವನ್ನು ವಿಶ್ಲೇಷಣೆ ಮಾಡುತ್ತಾರೆ. ಇದೇ ಲೇಖನದ ಕೊನೆಯಲ್ಲಿ ಅವರು ಗೀತೆಯಿಂದ ಒಂದು ಶ್ಲೋಕವನ್ನು ಉದಾಹರಿಸಿ ಅದ್ವೈತವೆಂದರೆ ಒಬ್ಬ ವ್ಯಕ್ತಿಯಲ್ಲಿಯೇ ಸಮನ್ವಯಗೊಳಿಸುತ್ತಾರೆ. ಆ ಭಾಗ ಹೀಗಿದೆ.

1. "ಸರ್ವವೂ ನಾನೇ ಎಂಬ ಅರಿವಿನಿಂದಾಗಿ ನನ್ನ ಕುತೂಹಲ, ಆಸಕ್ತಿ ಪ್ರೇಮಗಳು ವಿಶ್ವೀಯವಾಗುತ್ತವೆ. ಹಾಗಾಗಲೇ ಬೇಕು ವಿಶ್ವ ನಾನೆ ಆದ್ದರಿಂದ.

ಯಸ್ಮಿನ್ ಸರ್ವಾಣಿ ಭೂತಾನಿ ಅತ್ಮೈವಾಭೂತ್ ವಿಜಾನತಃ ।
ತತ್ರಕೋ ಮೋಹಃ ಶೋಕಃ ಏಕತ್ವ ಮನುಪಶ್ಯತಃ ॥

(ತಿಳಿದವನಿಗೆ ಎಲ್ಲ ಭೂತಗಳು ಆತ್ಮವೇ ಆದವಲ್ಲ. ಅಂಥಸ್ಥಿತಿಯಲ್ಲಿ, ಏಕತ್ವವನ್ನು ಕಾಣುತ್ತಲೇ ಇರುವವನಿಗೆ ಶೋಕವೆಲ್ಲಿಯದು, ಮೋಹವೆಲ್ಲಿಯದು).

2. ಎಲ್ಲವೂ ನಾನೇ ಆದ್ದರಿಂದ ನಮ್ಮನ್ನು ಉತ್ತಮಗೊಳಿಸಿಕೊಳ್ಳುವ ಕೆಲಸವನ್ನು ನಾವೇ ಕೈಗೊಳ್ಳಬೇಕು. ಯೋಗಕ್ಷೇಮಂ ವಹಾಮ್ಯಹಂ (ಯೋಗಕ್ಷೇಮವನ್ನು ನಾನು ವಹಿಸಿಕೊಳ್ಳುತ್ತೇನೆ) ಎನ್ನುವ ಬೇರೊಬ್ಬರಿಲ್ಲ. ನನ್ನ ಉದ್ಧಾರಕ್ಕೆ ನಾನೇ ದುಡಿಯಬೇಕು. ಈ ಅರಿವು ನಮಗೆ ಒಳ್ಳೆಯದು.

(ಪುಟ 10)

ಒಂದು ಹಾಸ್ಯ ಶೈಲಿಯ ಲಘು ಪ್ರಬಂಧವನ್ನು ಬರೆಯುವಾಗಲೂ ಅವರು ಅಲ್ಲಲ್ಲಿ ಉಪನಿಷತ್ತನ್ನು ಉಲ್ಲೇಖಿಸುತ್ತಾರೆ. " What about the Upanishadic doctrine that we have to do Karma in this life? Yes, but let us remember that they also work who only stand and see".

## 11.2 ಮೂರ್ತಿರಾಯರು ಮತ್ತು ಸಂಗೀತ

ಮೂರ್ತಿರಾಯರು ಮೈಸೂರು ಮಹಾರಾಜರು ಸಂಗೀತ ಸಾಹಿತ್ಯ ಲಲಿತ ಕಲೆಗಳನ್ನು ಪೋಷಿಸುತ್ತಿದ್ದ ಕಾಲದಲ್ಲಿ ತಮ್ಮ ವಿದ್ಯಾರ್ಥಿ ಜೀವನವನ್ನೂ, ವೃತ್ತಿ ಜೀವನವನ್ನೂ ನಡೆಸಿದ ಕಾಲ. ಸಾಹಿತ್ಯ ಅವರ ವೃತ್ತಿ ಜೀವನಕ್ಕೆ ಪೂರಕವಾಯಿತು. ಸಂಗೀತ ಅವರ ಪ್ರವೃತ್ತಿ ಜೀವನಕ್ಕೆ ಪೂರಕವಾಯಿತು. ಅವರ ಅಭಿರುಚಿ ಸಾಹಿತ್ಯದಂತೆ ಸಂಗೀತದ ಕಡೆಗೂ ಹರಿಯಿತು. ಅವರ ಬಾಲ್ಯದಲ್ಲಿ ಅವರ ಅಜ್ಜಿ ಹೇಳುತ್ತಿದ್ದ ಭಗವದ್ಗೀತೆಯನ್ನು ಹಾಡಿನ ಲಯಕ್ಕೆ ಅಳವಡಿಸಿದ ಹಾಡು, ಅಭಿಮನ್ಯುವಿನ ಶೌರ್ಯದ ಹಿನ್ನೆಲೆಯ ಹಾಡು, ದೇವಸ್ಥಾನದಲ್ಲಿ ರಾಮಕೃಷ್ಣರು ಹಾಡುತ್ತಿದ್ದ ಹಾಡು, ರಥೋತ್ಸವ ಕಾಲದಲ್ಲಿ ತಮಿಳುನಾಡಿನಿಂದ ಬಂದ ಶ್ರೀ ಶೈಲಪತಿ ಎಂಬುವರ ಶಾಸ್ತ್ರೀಯ ಸಂಗೀತ, ರತ್ನಾವಳಿ ಥಿಯೇಟ್ರಿಕಲ್ಸ್ ಕಂಪೆನಿಯಲ್ಲಿ ಬೋಘರಾವ್, ನಾಗೇಂದ್ರರಾವ್ ಮುಂತಾದವರು ಹಾಡುತ್ತಿದ್ದ ನಾಟಕದ ಮಟ್ಟುಗಳು ಮೂರ್ತಿರಾಯರ ಸಂಗೀತಾಭಿರುಚಿಯನ್ನು ಪೋಷಿಸಿದವು. ಮೈಸೂರಿಗೆ ವಿದ್ಯಾಭ್ಯಾಸಕ್ಕಾಗಿ ಬಂದ ಕಾಲದಲ್ಲಿ ಚಿಕ್ಕರಾಮರಾಯರೆಂಬುವರ ಮನೆಯಲ್ಲಿ ನಡೆಯುತ್ತಿದ್ದ ಭಜನೆಗೆ ಮೂರ್ತಿರಾಯರು ಹೋಗುತ್ತಿದ್ದರಂತೆ. ಹಾಗೆಯೇ ಮೈಸೂರಿನಲ್ಲಿ ಸುಂದರ ಶಾಸ್ತ್ರಿಗಳ ಮನೆಯಲ್ಲಿ ನಡೆಯುತ್ತಿದ್ದ ಭಜನೆಯ ಕಾರ್ಯಕ್ರಮದಲ್ಲಿ ವೀಣೆ ಸುಬ್ಬಣ್ಣನವರ ಹಾಡು -ಅವರ ಮನಸ್ಸಿನಲ್ಲಿ ಅಚ್ಚೊತ್ತಿ ನಿಂತಿದೆ. ಅವರ ಊರಿನಲ್ಲಿ (ಅಕ್ಕಿ ಹೆಬ್ಬಾಳಿನಲ್ಲಿ) ವೈದಿಕರ ಎರಡು ತಂಡ ಮಾಡಿಕೊಂಡು ಮಾಡುತ್ತಿದ್ದ ವೇದಘೋಷ ಅವರಿಗೆ ರೋಮಾಂಚನ ವುಂಟು ಮಾಡುತ್ತಿತ್ತೆಂದು ಅವರು ಬರೆದಿದ್ದಾರೆ. (ಸಂಜೆಗಣ್ಣು ಪುಟ 23) ಈ ಎಲ್ಲವುಗಳ ಹಿನ್ನೆಲೆಯಲ್ಲಿರುವ ಸಂಗೀತ ಅವರಿಗೆ ಅತ್ಯಂತ ಪ್ರಿಯವಾದುದು. ಅವರ ಬಾಲ್ಯದ ಈ ಅನುಭವವೇ ಅವರ ಮುಂದಿನ ಸಂಗೀತ ಪ್ರೇಮಕ್ಕೆ ತಳಹದಿಯಾಯಿತು. ಈ ಸಂಗೀತದ ಮಹತ್ತರ ಪರಿಣಾಮವನ್ನು ಅವರು ಹೀಗೆ -ಒಂದು ತಾತ್ವಿಕ ಎತ್ತರದಲ್ಲಿ-ವಿವರಿಸುತ್ತಾರೆ.

".....ಅದರಿಂದಾಗುವ ಪರಿಣಾಮ........ ಅದ್ಭುತವಾದ ಪ್ರಸನ್ನತೆ, ಪ್ರಶಾಂತತೆ, ಇವೆರಡು ಸಂದರ್ಭಗಳಲ್ಲೂ ನಾದೋಪಾಸನೆಯ ಆನಂದವೂ ಭಕ್ತಿಯೂ ಹದವಾಗಿ ಬೆರೆತಿದ್ದವು. ಸಂಗೀತಗಾರರ ಮನೆಯ ಭಜನೆ, ವೇದಘೋಷ, ಸಾಮಾನ್ಯ ಭಜನೆ - ಇವು ಮೂರರಲ್ಲೂ ಕಾಣುವ ಸಾಮಾನ್ಯ ಲಕ್ಷಣವೆಂದರೆ, ಪರವಶತೆ, ನಮ್ಮನ್ನು ನಾವು ಮರೆತಿರುವುದು. ಆದರೆ ಮೊದಲ ಎರಡರಲ್ಲಿ ಪರವಶತೆಯು ಉದ್ವೇಗದ ಮಟ್ಟದಿಂದ ಮೇಲೇರಿ, ತೈತ್ತಿರೀಯೋಪನಿಷತ್ತು ಬಣ್ಣಿಸುವ ಬ್ರಹ್ಮಾನಂದವನ್ನು (ಸಾಧಿಸದಿದ್ದರೂ) ನೆನಪಿಗಾದರೂ ತರುತ್ತದೆ.

(ಸಂಜೆಗಣ್ಣು 23).

1913ರಲ್ಲಿ ಸುಬ್ಬಯ್ಯ (ಅಯ್ಯ)ನವರ ಮನೆಗೆ (ಮೈಸೂರಿಗೆ) ಮುಂದಿನ ಶಿಕ್ಷಣಕ್ಕಾಗಿ ಬಂದಾಗ ಅವರ ಮಕ್ಕಳು ಪುಟ್ಟು, ಕಾವೇರಿಯವರು ಹಾಡುತ್ತಿದ್ದ, ಅದರಲ್ಲೂ ಕಾವೇರಿ ಹೇಳಿಕೊಟ್ಟ ಹಾಡುಗಳು ಅವರ ಮನಸ್ಸಿನಲ್ಲಿ ಸ್ಥಿರವಾಗಿ ನಿಂತಿವೆ (ಪುಟ 66). ಮಂತ್ರಪಠನದ ನಾದವೂ ಗೇಯತೆಯೂ ಅವರಿಗೆ ಅತ್ಯಂತ ಪ್ರಿಯವೂ ಹಿತವೂ ಆಗಿತ್ತು. ಅವರು ಆಕಾಶವಾಣಿಯಲ್ಲಿದ್ದಾಗ ವೇದಮಂತ್ರ ಪ್ರಸಾರ, ಗೌರಿ-ಗಣಪತಿ ಪೂಜೆಯ ಮಂತ್ರ ಪ್ರಸಾರ ಮಾಡುವ ಕಾರ್ಯಕ್ರಮ ಒಂದನ್ನು ಹಮ್ಮಿಕೊಂಡಿದ್ದರು.

(ಚಿತ್ರಗಳು- ಪತ್ರಗಳು ಪು. 63) ಅದು (ಮಂತ್ರ ಪಠಣ) ಒಳ್ಳೆಯ ಸಂಗೀತ ಕೊಡುವ ಉದಾತ್ತ ಆನಂದವನ್ನೇ ಕೊಡುತ್ತದೆ. (ಪು.63) ವೇದಮಂತ್ರಗಳು ಅವರಿಗೆ ಪ್ರಿಯವಾದದ್ದು. ಈ ನಾದ ಮಾಧುರ್ಯದಿಂದಾಗಿ ಸಿ.ಆರ್. ನರಸಿಂಹಶಾಸ್ತ್ರಿಗಳು ಉದಾಹರಿಸಿದ ಮಂತ್ರ ಒಂದರ ನಾದ ಮಾಧುರ್ಯದಿಂದಲೂ ಸಹ ಆಕರ್ಷಿತ ರಾಗಿದ್ದರಂತೆ. ಆಗಿನ ನಾಟಕಗಳನ್ನು ನೋಡುತ್ತಿದ್ದ ಮೂರ್ತಿರಾಯರಿಗೆ ನಟರ ನಟನಾ ಪ್ರತಿಭೆಯಂತೆಯೇ ಸಂಗೀತ ಪ್ರತಿಭೆಯೂ ತುಂಬಾ ಇಷ್ಟವಾಯಿತು. ಆಗಿನ ನಾಟಕಗಳಲ್ಲಿ ಸಂಭಾಷಣೆಯ ಸಿಂಹಪಾಲು ಹಾಡುಗಳ ರೂಪದಲ್ಲಿ, ಅದೂ ಶಾಸ್ತ್ರೀಯ ಸಂಗೀತದ ರೂಪದಲ್ಲಿ. ಹೀಗೆ ನಟ ಗಾಯಕನೂ ಆಗಿರಬೇಕಿತ್ತು. ವರದಾಚಾರ್ಯರು, ನಾಗೇಂದ್ರರಾವ್, ಬೋಧರಾವ್, ಸ್ಥಾನಂ ನರಸಿಂಹಾಚಾರ್ಯರು- ಮುಂತಾದ ನಟರ ಶಾಸ್ತ್ರೀಯ ಹಾಡುಗಾರಿಕೆಯನ್ನು ಕೇಳಿದ ಮೂರ್ತಿರಾಯರು ಹೀಗೆ ಬರೆಯುತ್ತಾರೆ. .... ಕಿವಿ ಯೊಂದೇ ಹೆಚ್ಚು ಕ್ರಿಯಾಶೀಲವಾಗುತ್ತಿತ್ತು, ನಮ್ಮನ್ನು ನಾವು ಗಾನಕ್ಕೆ ಒಪ್ಪಿಸಿ ಬಿಡುತ್ತಿದ್ದೆವು. ಹೀಗೆ ನಾವು ನಾಟಕವನ್ನು ಮರೆತು ಪರವಶರಾಗಬೇಕಾದರೆ ಆ 'ಪರ' (ಸಂಗೀತ) ಉತ್ತಮಗುಣವುಳ್ಳದ್ದೇ ಆಗಬೇಕು....... ನಾಟಕವನ್ನು ನೋಡುತ್ತಲೂ ಇದ್ದೆವು, ಕೇಳುತ್ತಲೂ ಇದ್ದೆವು. ಹಾಡುಗಾರಿಕೆಯಲ್ಲಿ ನಾಟಕ ಅವಿಭಾಜ್ಯವಾಗಿ ಸೇರಿತ್ತು." (84–85)ಹೀಗೆ ಅಂದಿನ ನಾಟಕ–ಹಾಡುಗಾರಿಕೆಯ ಅವಿನಾಭಾವ ಸಂಬಂಧ.

ಅನಂತರ ಅವರ ಸಂಗೀತ ಕಲಿಕೆ ಆರಂಭವಾಯಿತು. ಮೂರ್ತಿರಾಯರು ಇಂದು ಸಂಗೀತಗಾರರಾಗಿಲ್ಲದಿರಬಹುದು. ಆದರೆ ಶಾಸ್ತ್ರೀಯ ಸಂಗೀತವನ್ನು ಕುರಿತು ಖಚಿತ ಜ್ಞಾನ ಅವರಿಗಿದೆ. ಅವರ ಸಹೋದ್ಯೋಗಿಗಳಾಗಿದ್ದ ರಾಳ್ಳಪಲ್ಲಿ ಅನಂತ ಕೃಷ್ಣ ಶರ್ಮರು ವಿದ್ವಾಂಸರೂ ಸಂಗೀತಗಾರರೂ ಆಗಿದ್ದರು. ಅವರ ರಾಗಜ್ಞಾನ ಅಸದೃಶ. ಹಲು ದಶಕಗಳಿಂದ ಕೇಳುತ್ತಾ ಬಂದ ಸಂಗೀತದ ಪ್ರಭಾವ ಅವರ ಮೇಲೆ ಅಪರಿಮಿತ. ಆತ್ಮ ಚರಿತ್ರೆಯ 97–100ನೇ ಪುಟಗಳು ಸಂಗೀತವನ್ನು ಕುರಿತ ವಿಮರ್ಶೆಯೂ ಆಗಿದೆ. ಒಂದು ಅಧ್ಯಾಯಕ್ಕೆ ಅವರು 'ಹಿಂದೋಳಲೀಲೆ' ಎಂದೇ ಹೆಸರನ್ನಿಟ್ಟಿದ್ದಾರೆ. 'ಹಿಂದೋಳ ನನಗೆ ಪ್ರಿಯವಾದ ರಾಗವೊಂದರ ಹೆಸರು'(130)ಎಂದು ಅವರು ಅದಕ್ಕೆ ಕಾರಣ ಕೊಟ್ಟಿದ್ದಾರೆ. ಮೂರ್ತಿರಾಯರು ಹೈಸ್ಕೂಲಿನಲ್ಲಿ ಮಾಸ್ತರಿಕೆ ಮಾಡುತ್ತಿದ್ದಾಗ ಅವರ ಸಹೋದ್ಯೋಗಿ ತೆಲುಗು ಪಂಡಿತರಾಗಿದ್ದ ರಾಳ್ಳಪಲ್ಲಿ ಅನಂತ ಕೃಷ್ಣ ಶರ್ಮರ ಹಾಡುಗಾರಿಕೆಯ ವಿಮರ್ಶೆ ಕೇವಲ ಪ್ರಶಂಸೆಯಾಗಿರದೆ ಮೂರ್ತಿರಾಯರು ಶಾಸ್ತ್ರೀಯ ಸಂಗೀತದ ಮೇಲೆ ಪಡೆದ ಪ್ರಭುತ್ವವನ್ನು ಎತ್ತಿ ತೋರಿಸುತ್ತದೆ. (227–231) 'ಗಾನ ಮೋಹಿನಿ' ಎಂಬ ಒಂದು ಉಪಶೀರ್ಷಿಕೆಯಡಿ ತಾವು ಪ್ರಯತ್ನಿಸಿದ ಸಂಗೀತ ಕಲಿಕೆಯನ್ನು ಬಹು ಸ್ವಾರಸ್ಯವಾಗಿಯೇ ವಿವರಿಸಿದ್ದಾರೆ. (171–172). ಅವರ ವಿವಾಹ ನಿಷ್ಕರ್ಷೆ, ವಧುದರ್ಶನವೂ ಶಾಸ್ತ್ರೀಯ ಸಂಗೀತದ ಹಿನ್ನೆಲೆಯಲ್ಲೇ ನಡೆಯಿತು. ಇವರ ಗಮನ ಭಾವೀಪತ್ನಿಗಿಂತಲೂ ಅವರು ಹಾಡುತ್ತಿದ್ದ ಶಾಸ್ತ್ರೀಯ ಸಂಗೀತದ ರಚನೆಯ ಸಾಹಿತ್ಯದ ಕಡೆಗೇ ಇತ್ತು. ಆದ್ದರಿಂದ ಇಲ್ಲಿಯೂ ಶಾಸ್ತ್ರೀಯ ಸಂಗೀತದ ಒಂದು ಕಿರುವಿಮರ್ಶೆ ಬಂದಿದೆ. (ಪುಟ 151–152). ಆದರೆ ಇದು ಅಲ್ಲಿಗೇ ಮುಗಿಯಲಿಲ್ಲ. ಶಾಸ್ತ್ರೀಯ ಸಂಗೀತದ ರಚನೆಗಳನ್ನು ಹಾಡುವಾಗ 'ರೀ' ಎಂಬ ಅನವಶ್ಯಕ ಸ್ವರವನ್ನು ಉಪಯೋಗಿಸಿಕೊಂಡು ಅವರ ಪತ್ನಿಗೆ ಕೀಟಲೆ ಮಾಡಿದ್ದರು. (152). ಮೂರ್ತಿ

ರಾಯರು 1947ರಲ್ಲಿ ಆಕಾಶವಾಣಿಯಲ್ಲಿರುವಾಗ ಶ್ರೀ ಟಿ. ಎಸ್. ತಾತಾಚಾರ್ಯರ ಸಲಹೆಯಂತೆ ಅವರಿಂದಲೇ ಕೊಂಚಕಾಲ ಸಂಗೀತವನ್ನು ಅಭ್ಯಾಸ ಮಾಡಿದ್ದರ (338-339) ಫಲವಾಗಿ ಅವರ ರಾಗಜ್ಞಾನ ಪಕ್ವವಾಯಿತು. ಮನೆಯಲ್ಲಿ ಒಮ್ಮೆ ಅವರ ಪತ್ನಿ, ನಾದಿನಿಯರು, ತಮ್ಮ ಇವರೆಲ್ಲರೂ ಒಟ್ಟಿಗೆ ಕುಳಿತು ಗಾನ ಗೋಷ್ಠಿಯೊಂದರ ಅಣಕು ಅಭಿನಯ ಮಾಡುತ್ತಾ ಸಂತೋಷದಿಂದ ಇದ್ದ ಸಂದರ್ಭವನ್ನು ತಮ್ಮ ಆತ್ಮ ಚರಿತ್ರೆಯಲ್ಲಿ ಉಲ್ಲೇಖಿಸಿದ್ದಾರೆ. (ಪುಟ 238) "ಇದು, ಮನೆಯಲ್ಲಿರಬೇಕಾದ ವಾತಾವರಣ" (238) ಎಂದು ಸಂಗೀತದ ಈ ಆನಂದವನ್ನು ವರ್ಣಿಸುತ್ತಾರೆ.

ಉಪನಿಷತ್ಸಂದೇಶವನ್ನು ನಿತ್ಯ ಜೀವನಕ್ಕೂ, ಹಿರಿಯರ ಶ್ರಮಕ್ಕೂ (ಡಾ. ರಾಧಾಕೃಷ್ಣನ್‌ರವರ ಬೋಧನಾ ಶೈಲಿ : ವಿಧಾನ : ಕ್ರಮ : ರೀತಿ) ಹೋಲಿಸಿದಂತೆ ಸಂಗೀತವನ್ನು ಉಪಯೋಗಿಸಿಕೊಂಡು ಹೋಲಿಸಿರುವುದು ಇದೆ. ಡಾ. ರಾಧಾಕೃಷ್ಣನ್ ರವರ ಬೋಧನಾ ವಿಧಾನಕ್ಕೆ ಉಪನಿಷತ್ತಿನ ಮಂತ್ರವೊಂದು ಹೋಲಿಕೆಗಾಗಿ ಬಂದರೆ ರಾಲೋರವರ ಪಾಠದ ಪ್ರಭಾವಕ್ಕೆ ಸಂಗೀತ ಅವರ ನೆರವಿಗೆ ಹೋಲಿಕೆಯಾಗಿ ಧಾವಿಸಿ ಬರುತ್ತದೆ. ಆ ಸಂದರ್ಭ ವಿಶೇಷವನ್ನು ಮೂರ್ತಿರಾಯರು ಹೀಗೆ ವರ್ಣಿಸಿರುತ್ತಾರೆ. ಸಂಗೀತ ಸಾಹಿತ್ಯಗಳ ಪರಸ್ಪರ ಸಾಂಗತ್ಯವನ್ನು ಸಾಧಿಸಿದ ಅದ್ಭುತ ಶೈಲಿ ಹೀಗಿದೆ. ಸಂಗೀತದ ಪರಿಣಾಮವನ್ನು ರಾಲೋರವರ ಬೋಧನೆಗೆ ಅನ್ವಯಿಸಿದ ರೀತಿ ಹೀಗಿದೆ :

"ಅವು (ವಾಚನೋಪನ್ಯಾಸಗಳು) ಶಿಷ್ಯರಿಗೆ ಹೇಳಿದ ಪಾಠವಲ್ಲ, ಆತ್ಮಾನಂದಕ್ಕಾಗಿ ಹಾಡಿಕೊಂಡ ಗಾನ. ಒಂದು ಸಾರಿ ಕಾಲೇಜಿನ ಉಪನ್ಯಾಸ ಮಂದಿರದಲ್ಲಿ ಬಿಡಾರಂ ಕೃಷ್ಣಪ್ಪನವರ ಹಾಡುಗಾರಿಕೆ ನಡೆಯಿತು. ಸುಮಾರು ಎರಡು ಘಂಟೆ ಹಾಡಿದ ನಂತರ ಅವರು ಗಾನಸ್ವರ್ಗವನ್ನು ಬಿಡಲಾರದೆ ತಮಗೆಲ್ಲ ಬೇಸರವಾಗಿಲ್ಲದಿದ್ದರೆ ಇನ್ನಷ್ಟು ಹೊತ್ತು ಹಾಡುತ್ತೇನೆ ಎಂದದ್ದು ಈಗ ತಾನೆ ಕೇಳಿದಂತೆ ನೆನಪಿದೆ. ಸಭಿಕರು ಒಕ್ಕೊರಲಾಗಿ ತಾವು ಹಾಡಿದರೆ ನಾವು ಧನ್ಯರು, ಕೃಪೆ ಮಾಡಬೇಕು ಎಂದು ಬೇಡಿದರು. ಅವತ್ತಿನದು ನೂರಕ್ಕೆ ನೂರರಷ್ಟು ಸ್ವಾರ್ಥದ ಕಛೇರಿ- ಬಿಡಾರಂ ಕೃಷ್ಣಪ್ಪನವರು ಬಿಡಾರಂ ಕೃಷ್ಣಪ್ಪನವರನ್ನು ಸಂತೋಷಪಡಿಸಲು ಹಾಡಿದ್ದು, (ಅವರ ಸಂತೋಷ ಶ್ರೋತೃಗಳ ಸಂತೋಷದ ಫಲ ಎಂದರೂ ಎನ್ನಬಹುದು-ಅಂಥ ಸಂದರ್ಭಗಳು ವಿಶ್ಲೇಷಣೆಗೆ ಸಿಕ್ಕುವುದಿಲ್ಲ) ಅಂಥ ಒಂದೆರಡು ಕಛೇರಿಗಳನ್ನು ಕೇಳುವ ಭಾಗ್ಯ ನನಗೆ ದೊರೆತಿದೆ. ರಾಲೊ ಸಾಹಿತ್ಯವನ್ನು ಬೋಧಿಸುತ್ತಿದ್ದುದು ಹಾಗೆ ( ಚಿತ್ರಗಳು ಪುಟ 53)."

ಸಂಗೀತವನ್ನು ಕುರಿತು ಮೂರ್ತಿರಾಯರ ಒಲವು ಕೇವಲ ಕರ್ಣಾನಂದಕ್ಕೆ ಮಾತ್ರವೇ ಸೀಮಿತವಾಗಿರದೆ ಅದನ್ನು ಕುರಿತು ಆಳವಾದ ಅಧ್ಯಯನಕ್ಕೂ ವ್ಯಾಪಿಸಿದೆ. ಅವರು ತಮ್ಮ ಆತ್ಮಚರಿತ್ರೆಯಲ್ಲಿ ಹಲವು ಕಡೆ ಸಂಗೀತದ ಪ್ರಸ್ತಾಪ ಮಾಡಿದ್ದಾರೆ. ಅವರಿಗೆ ಜೀವನವೇ ಒಂದು ಸಂಗೀತ. ಪ್ರಕೃತಿಯಲ್ಲಿ, ವೇದಘೋಷ, ಪುರುಷಸೂಕ್ತ ಸಂಸ್ಕೃತ ಕಾವ್ಯ ಎಲ್ಲವೂ ಅವರಿಗೆ ಸಂಗೀತಮಯವೇ. ಬಾಲ್ಯದಲ್ಲಿ ಅವರು ಅವರ ಊರಿನ ಗುಡಿಯಲ್ಲಿ ಹತ್ತಾರು ಜನ ಸೇರಿ ವೇದ ಮಂತ್ರಗಳನ್ನು ಹಾಡುತ್ತಿದ್ದಾಗ ಅವರ ನಾದಮಾಧುರ್ಯ, ಸಂಧ್ಯಾವಂದನೆಯ ಮಂತ್ರಗಳು ಅವರನ್ನು ಆಕರ್ಷಿಸುತ್ತಿದ್ದುದು ಅದರ ಗಂಭೀರ ನಾದ ಮಾಧುರ್ಯ. (137-138). ಅದನ್ನು ಕೇಳಿದಾಗ ಅವರಿಗೆ "ಅದರಲ್ಲಿ ಬದುಕನ್ನು ಉದ್ಧರಿಸುವ ಗುಣ ಏನೋ ಇದೆ" ಎಂಬ ಭಾವನೆ- ಒಳ್ಳೆಯ

ಸಂಗೀತವನ್ನು ಕೇಳಿದಾಗ ಬರುವ ಭಾವನೆ- ಬಂದಿದೆ" (ಪುಟ138). ಈ ಆಸಕ್ತಿ ಅವರನ್ನು ಶಾಸ್ತ್ರೀಯ ಸಂಗೀತವನ್ನು ಶಾಸ್ತ್ರೀಯವಾಗಿಯೇ ಕೇಳುವಂತಹ ಸ್ಥಿತಿಗೆ ಒಯ್ದಿತು. ಅತ್ಯಂತ ಪರಿಷ್ಕಾರವುಳ್ಳ ಅವರ ಸಂಗೀತಾಭಿರುಚಿ, ಸಂಗೀತ ಶಾಸ್ತ್ರದ ಪಾರಿಭಾಷಿಕ ಪಲುಕುಪ್ರವಿ, ಚಿಟ್ಟೆಸ್ವರ, ಕಲ್ಪನಾಸ್ವರ, ರಾಗಗಳ ಹೆಸರುಗಳು, ತನಿ,ರಾಗ, ತಾನ, ಪಲ್ಲವಿ, ಆಲಾಪನೆ, ತೇವಾರಂ, ತಿರುಪ್ಪುಗಳ್, ಕಾರಡಿಬಂದು, ಜಾವಳಿ, ತಿಲ್ಲಾನ, ನೆರವಲು, ಇತ್ಯಾದಿ ಶಬ್ದಗಳನ್ನೂ ಅರ್ಥಮಾಡಿಕೊಂಡು ಆನಂದಿಸುವ, ವಿಮರ್ಶಿಸುವಷ್ಟು ಪ್ರಭುತ್ವವನ್ನು ಅವರಿಗೆ ನೀಡಿದೆ.

ಸಂಗೀತವನ್ನು ಕುರಿತು ಅವರು ಬರೆದಿರುವ ಎರಡು ಸ್ವತಂತ್ರ ಲೇಖನಗಳೂ, ಒಂದು ಉದ್ಘಾಟನಾ ಭಾಷಣವೂ ಅವರ ಸಂಗೀತ ಪರಿಶ್ರಮಕ್ಕೆ ನಿದರ್ಶಷ್ಟ ಸಾಕ್ಷಿಯನ್ನೊದಗಿಸುತ್ತವೆ.

"ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿ ನಿರೀಕ್ಷಿಸುವುದೇನು?" ಎಂಬ ಲೇಖನ ಅಗ್ರಪಂಕ್ತಿಯದು. ಇದರಲ್ಲಿ ಅವರ ಏಳು ದಶಕಗಳ (75 ವರ್ಷ) ಸಂಗೀತಾಭಿರುಚಿಯ ಹಿನ್ನೆಲೆಯಲ್ಲಿ ಕರ್ನಾಟಕ ಶಾಸ್ತ್ರೀಯ ಸಂಗೀತ ನಡೆದು ಬಂದ ದಾರಿಯನ್ನು ಗುರುತಿಸಿದ್ದಾರೆ. ಸಂಗೀತದ ಅಂದಿನ-ಇಂದಿನ ಅಂತರ, ಶ್ರೋತೃಗಳಿಗಾಗಿಯೇ ಮೀಸಲಾದ ಶಾಸ್ತ್ರೀಯ ಸಂಗೀತ, ಶಾಸ್ತ್ರೀಯ ಸಂಗೀತ ಕಛೇರಿಯ ಎರಡು ಮುಖಗಳು- ಶ್ರೋತೃಗಳಿಗಾಗಿ, ಆತ್ಮಾನಂದಕ್ಕಾಗಿ- ಶಾಸ್ತ್ರೀಯ ಸಂಗೀತದಲ್ಲಿ ಸಂಗೀತಗಾರರ ಕೈವಾಡ- ಗಾಯಕ-ಶ್ರೋತೃಗಳ ಸಂಬಂಧ ಅಂದಿನ ಇಂದಿನ ಸಂಗೀತ ಕಛೇರಿಗಳು ಉತ್ತರಾದಿ- ದಕ್ಷಿಣಾದಿ ಸಂಗೀತಗಳ ನಡುವಣ ಬೇಧ"-ಸಂಗೀತದಲ್ಲಿ ಭಾವ, ಮೊಗಗಳ ಸ್ಥಾನ, (ಭಾವದ ಸ್ಥಾನವನ್ನು ನಿರೂಪಿಸಲು ಸೊಗಸಾದ ಒಂದು ವರ್ತಮಾನ ಕಾಲದ ವ್ಯಾವಹಾರಿಕವಾದ ಸಾಮಾಜಿಕವಾದ ಕೌಟುಂಬಿಕ ಸಾಮ್ಯ-Analogy ವೊಂದನ್ನು ಉಲ್ಲೇಖಿಸುತ್ತಾರೆ). ಸ್ವರ ಇತ್ಯಾದಿಗಳನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಣೆ ಮಾಡಿದ್ದಾರೆ. ಇಂದಿನ ಸಂಗೀತಗಾರರಿಗೆ ತೋರುಬೆರಳಾಗಬಲ್ಲ ಈ ಲೇಖನ ಒಂದು ಸತ್ವಪೂರಿತ ವಿಮರ್ಶೆ. ಹಿಂದಿ ಸಿನೇಮಾಗಳಲ್ಲಿ ಅಂತರ್ಗತವಾಗಿದ್ದ ಶಾಸ್ತ್ರೀಯ ರಾಗಗಳ ಗೀತೆಗಳನ್ನೂ ಅವರು ಮೆಚ್ಚಿಕೊಂಡವರೇ.

ಜೀವನ-ಸಂಗೀತಗಳ ನಡುವಣ ಅಭೇದ ಅಂತರವನ್ನು ಅವರು ಗುರುತಿಸಿಕೊಂಡ ಬಗೆ ಹೀಗಿದೆ.

ಒಟ್ಟಿನಲ್ಲಿ ನಾವು ಶಾಸ್ತ್ರೀಯ ಸಂಗೀತದಿಂದ ನಿರೀಕ್ಷಿಸುವುದು ಗೊಂದಲವಲ್ಲ, ಗಣಿತವಲ್ಲ, ಅಟ್ಟಹಾಸವಲ್ಲ, ಬದುಕಿನ ಸುಖ ದುಃಖಗಳೆಲ್ಲವನ್ನೂ ಅನುಭವಿಸಿ ಮೆಲುಕು ಹಾಕಿದ್ದರಿಂದ ಬರುವ ನೆಮ್ಮದಿ. ಕೆಲವು ವೇಳೆ ನಾವು ಆಲೋಚನಾಪರರಾಗಿ ಬದುಕಿನ ದೃಶ್ಯಾವಳಿಯ ಮೇಲೆ ವಿಸ್ಮಯದ ದೃಷ್ಟಿಯನ್ನು ಬೀರುತ್ತೇವೆ. ಜಡತೆ ಉತ್ಸಾಹಗಳ, ಆಸೆ ನಿರಾಸೆಗಳ, ಸುಖ-ದುಃಖಗಳ ಉಯ್ಯಾಲೆಯಾಟವನ್ನು ಮುಗಿಸಿ ಸ್ವಸ್ಥವಾಗಿ ಕುಳಿತು, "ಹೌದು, ಇದು ವಿಚಿತ್ರ ಬದುಕು, ಆದರೆ ಹಿತ" ಎಂದುಕೊಂಡು ಕುಣಿದು ಕುಪ್ಪಳಿಸುವುದಿಲ್ಲ. ಮೈಮನಗಳ ಬಿಗುವನ್ನು ಸಡಿಲಿಸಿ ನೆಮ್ಮದಿಯಲ್ಲಿ ನೆಲಸುತ್ತೇವೆ. ಈ ನೆಮ್ಮದಿ ಜಡತೆಯಲ್ಲಿ ಅಂತರ್ಗತವಾದ, ಹೃದಯಸ್ಥವಾದ ವಿಚಾರ ಸಂಪತ್ತುಳ್ಳದ್ದು. ಇಂಥ ನೆಮ್ಮದಿಯನ್ನೇ ನಾವು ಸಂಗೀತದಿಂದ ನಿರೀಕ್ಷಿಸುವುದು. ನಮ್ಮ ಸಂಗೀತ

ಕೆಳಷಡ್ಜದಿಂದ ಹೊರಟು ವಿಳಂಬ-ಮಧ್ಯಮ-ದ್ರುತಗತಿಯಲ್ಲಿ ಪ್ರಯಾಣ ಮಾಡಿ ಅನುಭವ ಪಡೆದು ಮತ್ತೆ ಯಾವ ಷಡ್ಜದಿಂದ ಹೊರಟಿತೋ ಅಲ್ಲಿಗೇ ಮರಳಿ ಬಂದು ನೆಲಸುತ್ತದೆ. ಆ ಷಡ್ಜ ಮೊದಲಿದ್ದಂತೆಯೇ ಇರುವುದಿಲ್ಲ-ಬಿರುಗಾಳಿ ಮಿಂಚು ಸಿಡಿಲು ಮಳೆಗಳು ಮುಗಿದ ಮೇಲೆ ಬಂದ ಬಿಸಿಲಿನಲ್ಲಿರುವ ಪ್ರಸನ್ನತೆ- the calm after the storm. ತುಮುಲ ಮುಗಿದ ಮೇಲೆ ಬರುವ ಶಾಂತಿ ಆ ಷಡ್ಜದಲ್ಲಿ ನೆಲಸಿರುತ್ತದೆ. ಶ್ರೋತೃಗಳಿಗೆ ಅದರ ಅನುಭವವಾಗಬೇಕು. ಇದನ್ನೇ ನಾವು ಶಾಸ್ತ್ರೀಯ ಸಂಗೀತದಿಂದ ನಿರೀಕ್ಷಿಸುವುದು.

(ಸುಧಾ : ಯುಗಾದಿ ವಿಶೇಷಾಂಕ 1989 ಪುಟ 105)

ಮೂರ್ತಿರಾಯರು ಇಷ್ಟು ಬರೆಯಲು ಕೊಟ್ಟ ಓನ್ನೆಲೆ ಅಧ್ಯಯನಾರ್ಹ. ಒಂದು ಕಾಲದಲ್ಲಿ ಶಾಸ್ತ್ರೀಯ ಸಂಗೀತ ನೀಡಿದ್ದನ್ನು ಅನುಭವಿಸಿ, ನಡುವೆ ಅದರಿಂದ ವಂಚಿತರಾಗಿ, ಪುನಃ ಅವರಿಗೆ ಬೇಕಾದ ಆ ಪೂರ್ವಾನುಭವದ ಸುಖವೊಂದರ ನೆನಪು-ಕನಸು-ನಿರೀಕ್ಷೆ ಇಲ್ಲಿದೆ. ಹಲವು ಸಂಗೀತ ಪ್ರೇಮಿಗಳ ಕೊರಳಾಗಿ, ಪ್ರತಿನಿಧಿಯಾಗಿ ಬರೆದ ಈ ಭರತವಾಕ್ಯದಲ್ಲಿ ಜೀವನ-ಪ್ರಕೃತಿ ವ್ಯಾಪಾರ-ಸಂಗೀತ ಪ್ರಭಾವಗಳು ಬೆರಕೆಯಾಗಿವೆ. ಲೇಖನದ ಪ್ರಶ್ನಾರ್ಥಕ ಶೀರ್ಷಿಕೆಗೆ ಇದು ಉತ್ತರ ರೂಪದ ಉಪಸಂಹಾರ. ಈ ಲೇಖನ ಮೂರ್ತಿರಾಯರ ಸೂಕ್ಷ್ಮಾವಲೋಕನ-ಚಿಂತನೆಗಳಿಗೆ ಸಾಕ್ಷಿ.

ದಕ್ಷಿಣಾದಿ-ಉತ್ತರಾದಿ ಸಂಗೀತಗಳ ನಡುವಣ ಅಂತರವನ್ನು ಈ ಒಂದೇ ಒಂದು ಸ್ಫುಟವಾದ ವಾಕ್ಯದಲ್ಲಿ ಹಿಡಿದಿಟ್ಟಿದ್ದಾರೆ. "ಉತ್ತರಾದಿಯಲ್ಲಿ ಶ್ರುತಿಸೌಖ್ಯ ಹೆಚ್ಚು. ದಕ್ಷಿಣಾದಿಯಲ್ಲಿ ಕೃತಿಸೌಖ್ಯ ಹೆಚ್ಚು" (ಅದೇ ಪುಟ 105). ಈ ವಾಕ್ಯ ನಾಳೆ ಏನಾದರೂ ವಿವಾದದ ತೆರೆಗಳನ್ನು ಎಬ್ಬಿಸೀತು ಎಂದು ಅವರಿಗೆ ತೋರೀತೋ ಏನೋ, ಆದುದರಿಂದ ಅದಕ್ಕೆ ಒಂದು ಕುಂಟು ಪಂಕ್ತಿಯನ್ನು ಸೇರಿಸಿ ಅಂತಹ ಚರ್ಚೆಗೆ ಅವಕಾಶ ಇಲ್ಲದಂತೆ ಒಂದು ತೆರೆಯನ್ನೂ ಎಳೆದರು. "ಈ ಮಾತಿನಲ್ಲಿ ಸ್ವಲ್ಪ ಉತ್ಪ್ರೇಕ್ಷೆ ಇದೆ. ಅದು ಕ್ಷಮಾರ್ಹವಾದ ಉತ್ಪ್ರೇಕ್ಷೆ"(ಇದೇ).

ಸಂಗೀತ-ಸಮಾಜ-ಸಂಸಾರಗಳ ಸಮನ್ವಯ ಮೂರ್ತಿರಾಯರ ಸಂಗೀತ ಜ್ಞಾನ ಪ್ರೇಮಗಳ ವೈಶಿಷ್ಟ್ಯ. ಆದುದರಿಂದಲೇ ಅವರು ಉಪಯೋಗಿಸುವ ಹೋಲಿಕೆಗಳು ಇದನ್ನೇ ಬಿಂಬಿಸುತ್ತವೆ." ಸಮಾಜದಲ್ಲಿ ನಾವು ಬದುಕುವುದು ಮಾನವ ಸ್ನೇಹದಿಂದ. ಹಾಗೇ ಗಾನ ಪ್ರಪಂಚದಲ್ಲಿ ಬದುಕುವುದು ಸ್ವರಸ್ನೇಹದಿಂದ". "ನಾವು ನಿರೀಕ್ಷಿಸುವುದು ಆಪಾತ ಮಧುರ ಆಲೋಚನಾಮೃತಗಳ ಭಾವಪೂರ್ಣ ದಾಂಪತ್ಯ. ಈ ದಾಂಪತ್ಯದ ಸಾಧನೆಗೆ ಶ್ರುತಿ, ಲಯ, ನೆರವಲು, ಕಲ್ಪನಾ ಸ್ವರಗಳು, ವಿಳಂಬ ಮಧ್ಯಮ ದ್ರುತಗತಿಗಳು ಎಲ್ಲದರ ನೆರವೂ ಬೇಕು. ಅವುಗಳ ಉಚಿತವಾದ, ಹದವಾದ, ಮಿಲನ ಬೇಕು. ಅವೊಂದು ಗುರಿಯಲ್ಲ. ಎಲ್ಲ ಆ ದಾಂಪತ್ಯಕ್ಕೆ ಸಾಧನಗಳು. ಆ ದಾಂಪತ್ಯವೇ ಗುರಿ" (ಅದೇ).

ಇಲ್ಲಿಯೂ ಮೂರ್ತಿರಾಯರ ಕಾವ್ಯಾತ್ಮಕ ಶೈಲಿಯನ್ನು ನಾವು ಗುರುತಿಸಬಹುದು. ಈ ಒಂದೆರಡು ನಿದರ್ಶನಗಳು ಗಮನಾರ್ಹ.

"ಶ್ರುತಿಲೀನವಾದ ಅನುನಯದಿಂದ ದೇವಿಯ ಕೃಪೆ ಬೇಡಿ ಬಳಸಿ ಬಳಸಿ ಬರುವ ನೆರವಲಿನ ನಮನ ಸಲ್ಲಿಸಿ ಅನುಗ್ರಹ ಪಡೆದು ಗಾಯಕರು ನಮಗೆ ಸೌಂದರ್ಯ ದರ್ಶನ ಮಾಡಿಸಬೇಕು.......... ಆದರೆ ಸಂಗೀತ ವಿದ್ವಾಂಸರಲ್ಲಿ ದೇವಿಯ ಮೇಲೆ ಕಲ್ಪನಾಸ್ವರಗಳ

ಡಾಳಿ ಅವಳನ್ನು ವಿಕೃತರೂಪ ಪ್ರಯತ್ನ ಮಾಡುವವರೇ ಹೆಚ್ಚು ಜನ. ದೇವಿ ಪ್ರಸನ್ನಳಾಗುವುದು ನೆರವಲಿಗೆ, ಕಲ್ಪನಾ ಸ್ವರಗಳ ಜಿಪರಿಕೆಗಲ್ಲ" (ಅದೇ ಪುಟ 102).

"ಒಂದಾದ ಮೇಲೊಂದರಂತೆ ಎರಡು ಮೂರು ಸ್ವರಗಳೊಡನೆ ಹತ್ತಿಪ್ಪತ್ತು ಸೆಕೆಂಡಿನಷ್ಟು ಕಾಲ ಕಳೆದು ಯೋಗಕ್ಷೇಮ ವಿಚಾರಿಸಬಹುದು: ರುಷಭಕ್ಕೆ 'ಇರು' ಎವೆಯಿಕ್ಕುವುದರೊಳಗೆ ಬಂದು ಬಿಡುತ್ತೇವೆ ಎಂದು ಹೇಳಿ ಗಾಂಧಾರಕ್ಕೆ ಹಲೋ ಹೇಳಿ ಮತ್ತೆ ರುಷಭದ ಬಳಿಗೆ ಬರಬಹುದು(ರಿಗರಿ): "ಬಿಟ್ಟು ಹೋಗಲಾರದೆ ಹಿಂತಿರುಗಿ ನೋಡುತ್ತ ನಿಧಾನವಾಗಿ ನಿಷಾದಕ್ಕೆ ಜಾರಿಕೊಳ್ಳಬಹುದು." (105) ಇಲ್ಲಿ ಕಾವ್ಯಗುಣ, ಗೇಯಗುಣ ಹಾಗೂ ತಿಳಿಹಾಸ್ಯಗಳ ಮುಪ್ಪುರಿಯಿಂದ ಕೂಡಿದ ವಿವರಣೆಯಿದೆ. ಆಲಂಕಾರಿಕವಾದ ಶೈಲಿ ಅವರ ಸಂಗೀತದ ಪ್ರೇಮದಿಂದಾದ ಪರವಶತೆಗೆ ಸಾಕ್ಷಿ.

ಈ ರೀತಿಯಾದ ರೂಪಕಕ್ಕೆ ಮೂರ್ತಿರಾಯರು ಯಾವಾಗಲೂ ವಿರುದ್ಧ. ಈ ರೀತಿಯಾಗಿ ರೂಪಕ ಮಾಡಿದವರನ್ನು ಅವರು ಅಲ್ಲಲ್ಲಿ ವ್ಯಂಗ ಮಾಡಿದ್ದೂ ಇದೆ. ಆದರೆ ಇಲ್ಲಿ ಮೂರ್ತಿರಾಯರೇ ರೂಪಕಗಳ ಮೂಲಕ ತಮ್ಮ ಭಾವಾಭಿವ್ಯಕ್ತಿಗೆ ಅವಕಾಶ ನೀಡಿದ್ದಾರೆ. ಪರಿಣಾಮದ ತೀವ್ರತೆಯನ್ನು ಸಾಧಿಸಿದ್ದಾರೆ. ಸಂಗೀತದ ಬಗ್ಗೆ ಹೀಗೆ ಬರೆಯುವಾಗ ಅವರ ಈ ಗೇಯತೆ ಅಪ್ರಯತ್ನವಾಗಿ ಬಂದಿದೆಯೇ ಹೊರತು ಇದೊಂದು ಶಬ್ದಾಡಂಬರವಲ್ಲ.

"ಸಂಗೀತ ಜ್ಞಾನಮು, ಅರ್ಥ ವಿನಾ" ಎಂಬ ಮತ್ತೊಂದು ಲೇಖನದಲ್ಲಿ ಸಂಗೀತವನ್ನು ಮತ್ತೊಂದು ಮಗ್ಗುಲಿನಿಂದ ಪರಿಶೀಲಿಸುತ್ತದೆ. ಈ ಕೃತಿಯ ಲೇಖನದ ಹೆಸರೇ ಸೂಚಿಸುವಂತೆ ಸಂಗೀತ ಕೃತಿ (ಸಾಹಿತ್ಯ)ಗಳಲ್ಲಿ ಅರ್ಥದ ಸ್ಥಾನವನ್ನು ನಿರ್ಧರಿಸುವಂತಿದ್ದರೂ, ಆ ಮಟ್ಟಕ್ಕಿಂತ ಮೇಲೇರಿ ಸಂಗೀತ ನೀಡುವ "ಅನುಭವ"ದ ಬಗ್ಗೆ ಪ್ರಸ್ತಾಪ ಇದೆ. ನಮ್ಮ ಒಂದು ಕೃತಿ ಸಂಗೀತವಿರಲಿ, ಸಾಹಿತ್ಯವಿರಲಿ ಅರ್ಥ ವಾಗುವುದು ಆ ಭಾಷಾಜ್ಞಾನದಿಂದ. ಆದ್ದರಿಂದ ಇಲ್ಲಿ ಭಾಷೆ ಮುಖ್ಯ. ಆದರೆ ಮೂರ್ತಿ ರಾಯರು ಈ ಸಂಕುಚಿತ ಆವರಣದಿಂದ ಹೊರಬಂದು, ಭಾಷೆಯ ಮಟ್ಟದಿಂದ ಭಾವದ ಮಟ್ಟವನ್ನು ಮುಟ್ಟಿದ್ದಾರೆ. ಸಂಗೀತ ನೀಡುವ ಹಿತವಾದ ಆನಂದದ ಅನುಭವದ ಮುಂದೆ ಭಾಷಾಬಂಧ ಹೇಗೆ ಗೌಣವಾಗುತ್ತದೆ ಎಂಬುದನ್ನು ತಮ್ಮ ಹಾಗೂ ಇತರರ ಅನುಭವದಿಂದಲೂ, ಸಾಹಿತ್ಯ ಕೃತಿಗಳ ಉಲ್ಲೇಖದಿಂದಲೂ ವಿವರಿಸಿದ್ದಾರೆ. ಒಮ್ಮೊಮ್ಮೆ ನಮ್ಮ ಅರಿವಿಗೆ ಬರುವ ಭಾಗಗಳನ್ನೂ ಗಮನಿಸದಿರುವ ಉದಾಹರಣೆಯನ್ನು ಅವರು ನಿರೂಪಿಸುತ್ತಾರೆ. ಈ ವಿಸ್ತೃತವಾದ ಲೇಖನಕ್ಕೆ ಇದೇ ವಿಷಯವನ್ನು ಕುರಿತ ಒಂದು ಘಟನೆ. ಕೃತಿ ಅರ್ಥವಾದರೂ ಆ ಕೃತಿ ದೋಷಪೂರ್ಣವಾಗಿದ್ದರೂ ಅದರ ನೀರಸತೆ ದೋಷಗಳು ನಮ್ಮ ಆನಂದಕ್ಕೆ ಅಡ್ಡಿ ತರುವುದಿಲ್ಲ ಎಂಬ ಸತ್ಯವನ್ನು ದೀಕ್ಷಿತರ ಒಂದು ರಚನೆಯಿಂದ ಸಮರ್ಥಿಸಿದ್ದಾರೆ. ಒಮ್ಮೊಮ್ಮೆ ಸಾಹಿತ್ಯ ಸಾಹಿತ್ಯಕ್ಕಾಗಿ ಅರ್ಥಕ್ಕಾಗಿಯಲ್ಲ ಎಂಬುದನ್ನು ತಿಳಿಹಾಸ್ಯದಿಂದ ಹೀಗೆ ಹೇಳುತ್ತಾರೆ. "ಅದು (ಸುರದನೆ)ಕೇವಲ ಪ್ರಾಸಕ್ಕಾಗಿಯೇ ಹೊರತು ಹಲ್ಲು ಚೆನ್ನಾಗಿದೆ ಎಂಬ ಅರ್ಥವನ್ನು ತಿಳಿಸುವುದಕ್ಕಲ್ಲ-ದೇವತೆಗಳ ಹಲ್ಲು ಚೆನ್ನಾಗಿರುತ್ತದೆಂದು ನಾವೆಲ್ಲ ಬಲ್ಲೆವು."

(ಸಂಗೀತ ಜ್ಞಾನಮು, ಅರ್ಥವಿನಾ, ಸುಧಾ ವಿಶೇಷಾಂಕ 1987 ಪುಟ 89)

ಸ್ವತಃ ಕನ್ನಡಿಗರಾದ ಮೂರ್ತಿರಾಯರು ತೆಲುಗು ಸಂಸ್ಕೃತ ಕೃತಿಗಳನ್ನು ಪರಿಶೀಲಿಸಿದ್ದಾರೆ. ಅರ್ಥಾಭಿವ್ಯಕ್ತಿಯ ಮಾಧ್ಯಮವಾಗಿ ಬಳಸಲ್ಪಡುವ ಸಾಹಿತ್ಯದ ಪುನರಾವರ್ತನೆ, ಅನಗತ್ಯ ವಿಶೇಷಣಗಳು ಹಾಗೂ ಅರ್ಥ ಸಂಪತ್ತಿನಿಂದ ದೂಷಿತವಾಗದ ಭಾಗಗಳನ್ನೂ ಉದಾಹರಿಸಿದ್ದಾರೆ. ಜೊತೆಗೆ ಈ ವಿಶೇಷವಾದ ಪುನರುಕ್ತಿಗಳು ಸಂಗೀತದ ದೃಷ್ಟಿಯಿಂದ ಹೇಗೆ ಅನಿವಾರ್ಯ ಎಂದೂ ತಿಳಿಸಿ ಅದಕ್ಕೊಂದು ನ್ಯಾಯಸಮರ್ಥನೆ ನೀಡಿದ್ದಾರೆ. ಸಂಗೀತ ಸಾಹಿತ್ಯಗಳೆರಡೂ ಚೆನ್ನಾಗಿ ಕರಗತವಾಗಿದ್ದವರಿಗೆ ಮಾತ್ರ ಇದು ಸಾಧ್ಯ.

ಈ ಲೇಖನ ಚಿಂತನೆಗಳಿಗೆ ಕಾರಣವಾದ ಘಟನೆ ಮರೆಯಾಗಿ ವಿಷಯ ಪ್ರಮುಖವಾಗುತ್ತದೆ. ಸಂಗೀತ ವಾದ್ಯವಾದನ ಹಾಗೂ ಗಾಯನಗಳಲ್ಲಿ ವ್ಯಕ್ತವಾದಾಗ ಅರ್ಥ ಗೌರವವೂ ಮರೆಯಾಗಿ, ರಸಾನಂದವೊಂದೇ ಮುಖ್ಯವಾಗುತ್ತದೆ. ಪದ ಕೃತಿಗಳು ಗೌಣವಾಗಿ ನಾದ ಪ್ರಧಾನವಾಗಿ ಆನಂದ ನೀಡುತ್ತದೆ. ಮೂರ್ತಿರಾಯರು ತಮ್ಮ ಈ ಭಾವನೆ, ಅಭಿಪ್ರಾಯಗಳಿಗೆ ತಮ್ಮ ಹಲವಾರು ವರ್ಷಗಳ ಹಿಂದಿನ ಹಲವಾರು ಅನುಭವಗಳನ್ನು ಆಧಾರವಾಗಿಸಿಕೊಂಡಿದ್ದಾರೆ. ಅಲ್ಲಲ್ಲಿ ಸಂಗೀತವನ್ನು ಹಾಡುವುದರ ಕುರಿತು ವಿಮರ್ಶೆಯೂ ಇದೆ. ಅವರು ಪಡೆದ ಆನಂದ ಕಾವ್ಯಾತ್ಮಕವಾಗಿ ಹೀಗೆ ಹೇಳುತ್ತಾರೆ.

ಮುಂಜಾನೆ ಕತ್ತಲಿನ ಒಡಲಿನಿಂದ ಅರುಣೋದಯದ ರಾಗ (ಬಣ್ಣ) ಅರಳುವಂತೆ ಕಾಲದ ಒಡಲಿನಿಂದ ದಶಕಗಳ ಹಿಂದಿನ ಆನಂದ ಮತ್ತೆ ನನ್ನಲ್ಲಿ ಅರಳಿತು.

(ಅದೇ ಪುಟ 96)

ಪದ-ಕೃತಿಗಳು ಗಾನದ ಮೂಲಕ ಹೊರಹೊಮ್ಮಿದಾಗ ಅವು ನೀಡುವ ರಸಾನಂದವನ್ನು ಮೂರ್ತಿರಾಯರು ವಿವರಿಸಲು ಉಪಯೋಗಿಸಿದ ಈ ರೂಪಕ ಗಮನಾರ್ಹ.

ವಿಮಾನ ಹಾರುವುದಕ್ಕೆ ಮುಂಚೆ ಸ್ವಲ್ಪ ದೂರ ಟಾರ್‌ಮ್ಯಾಕ್‌ನ ಮೇಲೆ ಹೋಗಬೇಕಷ್ಟೆ. ವಾಚ್ಯಾರ್ಥ ಆ ಟಾರ್‌ಮ್ಯಾಕ್ ಅಷ್ಟೆ. ಗಗನ ಸಂಚಾರವೇನಿದ್ದರೂ ಸಂಗೀತದ, ಅದನ್ನು ಸೃಷ್ಟಿಸುವ ಗಾಯಕನ, ಅದನ್ನು ಆಸ್ವಾದಿಸುವ ಶ್ರೋತೃವಿನ ಕೆಲಸ. ರಾಗಾಲಾಪನೆ ಮಾಡುವ ಕಲೆಗಾರನಿಗೆ ಟಾರ್‌ಮ್ಯಾಕ್ ಬೇಕಿಲ್ಲ. ಅವನದ್ದು ಪುಷ್ಪಕ ವಿಮಾನ. ನೇರವಾಗಿ ಹಾರಿ ನೀಹಾರಿಕೆಗಳ ನಡುವೆ ವಿಹರಿಸುತ್ತದೆ. (ಅದೇ ಪುಟ 97)

ಈ ಲೇಖನ ಮೂರ್ತಿರಾಯರ ಅನುಭವ ಅಧ್ಯಯನಗಳ ಸಾರ. ಸಂಗೀತಗಾರರೇ ಸಂಗೀತಗಾರರನ್ನು ಕುರಿತು ಬರೆದಿರುವ ಪುಸ್ತಕಗಳನ್ನೂ ಅವರು ಅಧ್ಯಯನ ಮಾಡಿದ್ದಾರೆ. ಶ್ರೀ ಡಿ.ವಿ ಗುಂಡಪ್ಪನವರಂತಹ ಹಿರಿಯ ಮೇಧಾವಿಗಳ ಅನುಭವವನ್ನು ಉಲ್ಲೇಖಿಸುತ್ತಾರೆ. ಹೀಗೆ ಈ ಲೇಖನದ ಹಲವು ಪ್ರಮಾಣಗಳ ಪುಷ್ಟಿ ಪಡೆದ ಜೀವಂತ ಶಿಲ್ಪ.

ಸಂಗೀತದ ಪರಿಣಾಮವನ್ನು ಕುರಿತ ಅವರ ಅನುಭವ ಹಿಂದಿನ ಲೇಖನದಲ್ಲಿ ಅವರು ಉಲ್ಲೇಖಿಸಿದ ಅನುಭವದೊಂದಿಗೆ ಸಮನ್ವಯಗೊಳಿಸಬಹುದು. ಅವರ ಈ ಅನುಭವವೇ ಸಂಗೀತದ ಆತ್ಯಂತಿಕವಾದ ಉದ್ದೇಶವೂ ಆಗಿದೆ. (Wordsworth ತನ್ನ The Solitary ಕವಿತೆಯಲ್ಲಿ ವ್ಯಕ್ತಪಡಿಸಿದ ಭಾವ ಧ್ವನ್ಯಾತ್ಮಕವಾಗಿ ನಮಗೆ ನೆನಪಾಗುತ್ತದೆ).

"......ನನಗೆ ಆದದ್ದು ಒಂದು ಅನುಭವ, ಅರ್ಥವಲ್ಲ. ಹೂವಿಗೆ ರಾತ್ರಿಯ ಮಂಜಿನ ಸುಖ ಸ್ಪರ್ಶವಾಗುವಂತೆ. ಅಂತೆಯೇ ಮೃದುವೆಂದರೆ ಮೃದುವಾಗಿ ದೇಪಿಯ ಹರಕೆ ನನ್ನ ಮೇಲೆ ತೇಲಿ ಬಂದಿಳಿದು ನೆಲಸಿದಂತಾಯಿತು. ಆ ಅನುಭವದ ಅರಿವುಳ್ಳ ಒಂದು ಬಗೆಯ ಜಾಗೃತ ನಿದ್ರೆ (ಇದು ವಿರೋಧಾಭಾಸವೆಂದು ಬಲ್ಲೆ) ನನ್ನನ್ನು ಆವರಿಸಿತು. ದೇಹದ ಬಿಗುವೆಲ್ಲ ಇಳಿದು ಕಣ್ಣುಗಳು ತಾವಾಗಿ ಮುಚ್ಚಿಕೊಂಡವು. ಈ ಅನುಭವದಲ್ಲಿ ಆತ್ಮನಿಷ್ಠೆಯ (subjectivity) ಅಂಶ ಇದ್ದೇ ಇದೆ. ಬಹುಶಃ ಅಂದು ನನ್ನ ಮನಸ್ಸು ಗಾನಾಮೃತದ ಸೇವನೆಗೆ ಬೇಕಾದ ಹದದಲ್ಲಿದ್ದಿರಬೇಕು. ಹಿಂದೆ ಕೇಳಿದ್ದ ಅದೇ ರಾಗದ ಶ್ರೀ ವೇಣುಗೋಪಾಲ ಶ್ರೀ ರುಕ್ಮಿಣೀಲೋಲ ಎಂಬ ಕೃತಿಯ ಮೆಲದಿ ಕಿವಿಯಲ್ಲಿ ಗೂಂಗುಟ್ಟುತ್ತಿದ್ದಿರಬೇಕು. ಹಿಂದಿನ ಕುರುಂಜಿಯ ಅನುಭವ, ಶಾಂತಿ ನನ್ನಿಂದ ಹೊರಹೊರಟು ಅಂದಿನ ಕುರುಂಜಿಯನ್ನು ಸೇರಿ ಎರಡೂ ಪುಷ್ಟಿಗೊಂಡು ಮತ್ತೆ ನನ್ನಲ್ಲಿಗೆ ಬಂದು ಲೀನವಾಗಿರಬೇಕು. ಅಂತೂ ಒಳಮನಸ್ಸಿನಲ್ಲಿದ್ದ ಶಾಂತಿ ಅರಿವಿನ ಮಟ್ಟಕ್ಕೆ ಏರಿ ತೃಪ್ತ ಬಯಕೆಯಾಯಿತು. ಆಂಗ್ಲಕವಿ ಕೋಲ್‌ರಿಜ್(Coleridge)ಒಂದು ಕವನದಲ್ಲಿ.

"ನಾವು ಪಡೆಯುವುದು ನಾವು ಕೊಟ್ಟಿದ್ದನ್ನೇ" ಎಂದಿದ್ದಾನೆ. ಆ ಮಾತು ಸ್ವಲ್ಪ ಮಟ್ಟಿಗಾದರೂ ನಿಜ. ಇತರರೂ ನನ್ನಂತೆ ಆ ಹಾಡಿನಿಂದ ಶಾಂತಿಯನ್ನು ಬಹುಶಃ ಪಡೆಯುತ್ತಾರೆ. ಆದರೆ ಅದರ ತೀವ್ರತೆ ಅವರಲ್ಲಿ ಕಡಿಮೆಯಾಗಬಹುದು, ಅಥವಾ ಅವರು ಅದನ್ನು ಬೇರೆ ರೀತಿಯಲ್ಲಿ ಬಣ್ಣಿಸಬಹುದು, ಅವರ ಮನಸ್ಸಿಗೆ ಬರುವ ಪ್ರತಿಮೆಗಳು (Imagery) ಬೇರೆಯಾಗಿರಬಹುದು. ಅದು ಹೇಗಾದರೂ ಇರಲಿ, ಇಲ್ಲಿ ಪ್ರಸಕ್ತವಾದದ್ದೆಂದರೆ ಆ ಹಾಡಿನ ಅರ್ಥಕ್ಕೂ ಅಂದರೆ, ಲಕ್ಷ್ಮಿಗೆ ಎತ್ತಿದ ಆರತಿ (ನೀರಾಜನ)ಗೂ ನನ್ನ ಅನುಭವಕ್ಕೂ ಯಾವ ಸಂಬಂಧವೂ ಇಲ್ಲ. ನನ್ನ ಮಟ್ಟಿಗೆ ನನ್ನ ಅನುಭವವೇ ಆ ಹಾಡಿನ ನಿಜವಾದ ಅರ್ಥ." (87)

ಮೂರ್ತಿರಾಯರ ಬಾಳಿನಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡ ಸಾಹಿತ್ಯ ಸಂಗೀತಗಳ ಸುಂದರ ಸಮನ್ವಯಕ್ಕೆ ಇದು ಒಂದು ನಿದರ್ಶನ. ಪಶ್ಚಿಮದ ಸಾಹಿತ್ಯದೊಂದಿಗೆ ಪೂರ್ವದ ಸಂಗೀತವನ್ನು ಬೆಸೆದ ಅವರ ಅನುಭವ ಈ ಎರಡು ಶಕ್ತಿಗೆ ಅವರು ಎಷ್ಟು ಸ್ಪಂದಿಸುತ್ತಿದ್ದರೆಂಬುದಕ್ಕೆ ಪ್ರತ್ಯಕ್ಷ ಪುರಾವೆಯನ್ನು ಒದಗಿಸುತ್ತದೆ.

ಮೂರ್ತಿರಾಯರು ಸಂಗೀತವನ್ನು ಕುರಿತು ಬರೆದಿರುವ ಮತ್ತೊಂದು ಸ್ವತಂತ್ರ ಲೇಖನವೆಂದರೆ "ಬೆಂಗಳೂರಿನ ಗಾನ ಕಲಾ ಪರಿಷತ್ತಿನ 21 ನೇ ಸಂಗೀತ ಸಮ್ಮೇಳನದ ಉದ್ಘಾಟನಾ ಭಾಷಣ." ಇದು ಒಂದು ಕೇವಲ ಔಪಚಾರಿಕ ಉದ್ಘಾಟನಾ ಭಾಷಣ ವಾಗಿರದೆ ಸಂಗೀತವನ್ನು ಕುರಿತ ಒಂದು ವಿಮರ್ಶೆಯಂತಿದೆ. ಈ ಮೊದಲಿನ ಎರಡು ಲೇಖನಗಳ ಒಂದು ಸಾರ ಸಂಗ್ರಹ ರೂಪದಂತಿರುವ ಈ ಉದ್ಘಾಟನಾ ಭಾಷಣ ಲೇಖನ ಹಲವು ದೃಷ್ಟಿಗಳಿಂದ ಗಮನಾರ್ಹವಾಗಿದೆ, ವೈಶಿಷ್ಟ್ಯಪೂರ್ಣವಾಗಿದೆ. ಸರ್ ಎಂ. ವಿಶ್ವೇಶ್ವರಯ್ಯನವರು ಯೋಚನೆ-ಯೋಜನೆಯಿಲ್ಲದೆ ಯಾವ ಕೆಲಸಕ್ಕೂ ತೊಡಗುತ್ತಿರ ಲಿಲ್ಲವಂತೆ. ಪ್ರಾಥಮಿಕ ಶಾಲೆಯ ಮಕ್ಕಳಿಗೆ ಒಮ್ಮೆ ಒಂದು ಉಪನ್ಯಾಸ ನೀಡುವಾಗಲೂ ಸಹ ಪೂರ್ವಭಾವಿಯಾಗಿ ಉಪನ್ಯಾಸವನ್ನು ಬರೆದುಕೊಂಡು ಹೋಗಿ ಓದಿದ್ದರಂತೆ. ನಮಗೆ ಇಲ್ಲಿ ಆ ಮಾದರಿ ನೆನಪಾಗುತ್ತದೆ. ಮೂರ್ತಿರಾಯರು ಈ ಸಮ್ಮೇಳನದ

ಉದ್ಘಾಟನೆಯನ್ನು ಮಾಡುವ ಪೂರ್ವದಲ್ಲಿ ತಮ್ಮ ಉದ್ಘಾಟನಾ ಭಾಷಣವನ್ನು ಬರೆದು ಸಿದ್ಧಪಡಿಸಿಕೊಂಡು ಹೋಗಿದ್ದುದು ಅವರ ಯೋಜನೆಗೆ ಕೈಗನ್ನಡಿಯಾಂತಿದೆ. ಜೊತೆಗೆ ಸೇರಿರುವ ಕಲಾವಿದ – ಕಲಾವಿದೆಯರಿಗೆ ಒಂದು ದಿಕ್ಸೂಚಿಯಂತೆಯೂ ಇದೆ. ಮೂರ್ತಿರಾಯರು ಈ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಡಾಕ್ಟರ್ ಕೆ. ವೆಂಕಟಲಕ್ಷ್ಮಮ್ಮನವರ ಪ್ರತಿಭೆಯನ್ನು ಅನುಲಕ್ಷಿಸಿ ಸಂಗೀತಕ್ಕೂ ಹಾಗೂ ನೃತ್ಯಕ್ಕೂ ಇರುವ ಸಂಬಂಧವನ್ನು ಆರಂಭದಲ್ಲಿ ಹಾಗೂ ಕೊನೆಯಲ್ಲಿ ಗುರುತಿಸಿದಂತೆ, ಈ ಸಮ್ಮೇಳನದ ಉದ್ಘಾಟನೆಯನ್ನು ಮಾಡಿದ ಮೂರ್ತಿರಾಯರ ಪ್ರತಿಭೆ ಸಂಗೀತ ಹಾಗೂ ಸಾಹಿತ್ಯಗಳ ನಡುವಣ ಸಾಮರಸ್ಯಗಳನ್ನು ಗುರುತಿಸಿದಂತಿದೆ.

ಹಿಂದೆ ಮೂರ್ತಿರಾಯರು ಸಂಗೀತಾನುಭವವನ್ನು ವಿವರಿಸಲು ಕೋಲ್‌ರಿಜ್‌ನ ಉಕ್ತಿಯೊಂದನ್ನು ಉಲ್ಲೇಖಿಸಿದಂತೆ ಇಲ್ಲಿ ಬ್ರೌನಿಂಗ್ ಕವಿಯ ಉಕ್ತಿಯೊಂದನ್ನು ಉಲ್ಲೇಖಿಸುತ್ತಾರೆ. "ಮೂರು ಸ್ವರಗಳ ಸಂಯೋಜನೆಯಿಂದ ಉದ್ಭವಿಸುವುದು ನಾಲ್ಕನೆಯ ಸ್ವರವಲ್ಲ, ನಾದ ಮಾತ್ರವಲ್ಲ, ಅದೊಂದು ನಕ್ಷತ್ರ". ಸಂಗೀತದ ಪ್ರಭಾವ ವಿಶ್ವವ್ಯಾಪಿ. ಸಿ.ಆರ್. ನರಸಿಂಹಶಾಸ್ತ್ರಿಗಳ ಮಂತ್ರ ಘೋಷದ ಗೇಯತೆಯನ್ನು ಕೇಳಿ ರಾಲೋ ಆನಂದಿಸಿದಂತೆ (ಸಂಜೆಗಣ್ಣಿನ ಹಿನ್ನೋಟ ಪುಟ 63)ಐನ್‌ಸ್ಟೈನ್‌ನಂತಹವರೂ ಸಂಗೀತಕ್ಕೆ ಶರಣಾದವರು. ಈ ಲೇಖನ ಭಾಷಣದಲ್ಲಿ ಭಾರತೀಯ-ಪಾಶ್ಚಿಮಾತ್ಯ ಸಂಗೀತಗಳ ನಡುವಣ ಅಂತರದ ಉಲ್ಲೇಖವಿದೆ. ಹಿಂದಿನ ಲೇಖನದಲ್ಲಿ ಉಲ್ಲೇಖಿಸಲಾದ 'ವೇಗ' ವನ್ನು ಮೂರ್ತಿರಾಯರು ಇಲ್ಲಿಯೂ ಉದಾಹರಿಸುತ್ತಾರೆ. ಅಮೇರಿಕಾ (ಇಲಿನಾಯ್)ದಲ್ಲಿ ಇವರು ತಮ್ಮ ಪ್ರವಾಸಕಾಲದಲ್ಲಿ ಆಕಾಶವಾಣಿಯ ಮೂಲಕ ಇವರ ಸಂಗೀತವನ್ನು ಕುರಿತ ಭಾಷಣವೊಂದು ಪ್ರಸಾರವಾದ ಬಳಿಕ ಅಲ್ಲಿಯ ಅಮೇರಿಕನ್ ಒಬ್ಬಾತನ ದೃಷ್ಟಿಯಲ್ಲಿ ಭಾರತೀಯ ಸಂಗೀತ ಹೇಗೆ ಕಾಣುತ್ತದೆ ಎಂಬ ವಿಚಾರದ ಬೆಳಕಿನಲ್ಲಿ ಪ್ರಾತಿನಿಧಿಕವಾಗಿ ವಿದೇಶೀಯರು ಭಾರತೀಯತೆಯನ್ನು ಅರ್ಥೈಸಿಕೊಂಡ ರೀತಿ ಇಲ್ಲಿ ಮೂಡಿ ಬಂದಿದೆ.

ಸಂಗೀತವನ್ನು ಕುರಿತು ಮೂರ್ತಿರಾಯರು ಬಹುಕಾವ್ಯಾತ್ಮಕವಾಗಿ ಬರೆಯುತ್ತಾರೆ. ಇಲ್ಲಿ ಸಂಗೀತವನ್ನು ಪ್ರಕೃತಿಯ ರಮಣೀಯತೆಯೊಂದಿಗೆ ಸಮನ್ವಯಗೊಳಿಸಿದ ಬಗೆ ತುಂಬಾ ಪರಿಣಾಮಕಾರಿ. ಪ್ರಕೃತಿಯ ಅಂತರ್ಯವನ್ನು ಕಾಣುವ ಕಣ್ಣು ಸಂಗೀತದ ನಾದವನ್ನು ಆಲಿಸುವ ಕಿವಿ ಎರಡೂ ಏಕತ್ರ ಸಮನ್ವಯಗೊಂಡು ಒಂದು ವಿನೂತನ ಪ್ರತಿಮೆಯನ್ನು ಸೃಷ್ಟಿಸುತ್ತವೆ. ಈ ಪ್ರತಿಮಾ ಸ್ವರೂಪದ ವಿವರಣೆ ಹೀಗಿದೆ

"ಕ್ಷಣಮಾತ್ರದಲ್ಲಿ ಅಂತರಿಕ್ಷವನ್ನು ದಾಟಿ ಮಾಯವಾಗುವ ಸೆಳೆ ಮಿಂಚಿಗೆ ವಿಶಿಷ್ಟವಾದ ಸೌಂದರ್ಯವಿದೆ. ಆದರೆ ಥಳಥಳಿಸದೆ ಸೌಮ್ಯವನ್ನು ಸಪ್ತವರ್ಣ ಮಿಲನದ ಸೌಂದರ್ಯವನ್ನು ಪ್ರದರ್ಶಿಸುತ್ತ ಬಂದು, ನಾವಧಾನವಾಗಿ ಕಂಡೂ ಕಾಣದಂತೆ ಒಂದು ಬಣ್ಣದಿಂದ ಮತ್ತೊಂದಕ್ಕೆ ಹಾರಿಕೊಂಡು ಕೊನೆಗೆ ದಿವ್ಯ ಧಾವಳ್ಯದಿಂದ ಬೆಳಗುತ್ತಾಳಲ್ಲ, ಮುಂಜಾನೆಯ ಅಧಿದೇವತೆ ಉಷಾದೇವಿ ಆ ಸೊಬಗಿನ ಅನುಭವವೂ ಬೇಕಲ್ಲವೇ? ಅದು ಹೆಚ್ಚಿನದಲ್ಲವೇ? ಸೆಳೆ ಮಿಂಚು ಅಚ್ಚರಿಯನ್ನು ಕೆರಳಿಸುತ್ತದೆ. ಉಷಾದೇವಿಯ ಸೌಮ್ಯ ಸೊಬಗು ಶಾಂತಿಯನ್ನು ಕೊಡುತ್ತದೆ."(ಪುಟ 4-5).

ಈ ಲೇಖನ ಕೇವಲ ಶಬ್ದಾಲಂಕಾರದಿಂದ ಕೂಡಿದ ಸಂಗೀತದ ಪ್ರಶಂಸೆ ಮಾತ್ರವಲ್ಲ, ಸಂಗೀತ ತನ್ನ ಮಿತಿಯಲ್ಲಿ ಸಾಧಿಸಬೇಕಾದ ಅಂಶವನ್ನೂ ಒತ್ತಿ ಹೇಳುತ್ತದೆ. ಸಂಗೀತ ನಡೆದು ಬಂದು ನಿಂತ ಸ್ಥಾನವನ್ನು ಗುರುತಿಸಿ, ಅದು ಇರಬೇಕಾದ ಸ್ಥಾನವನ್ನೂ ಹೀಗೆಯೇ ಆಲಂಕಾರಿಕವಾಗಿ ಹೇಳುತ್ತಾರೆ. ಸಂಗೀತದ ಈ ಸ್ಥಿತಿ-ಗತಿಗಳು ಅವರಿಗಿರುವ ನಿಷ್ಕೃಷ್ಟ ಜ್ಞಾನ ಸಂಗೀತ ಪ್ರೇಮಿಯ ಸ್ಥಾನದಿಂದ ಸಂಗೀತ ವಿಮರ್ಶಕನ ಸ್ಥಾನಕ್ಕೇರಿಸಿದೆ. ಈ ಭಾಗ ಹೀಗಿದೆ.

"ಮುಂಜಾನೆಯ ಸೌಮ್ಯ ಸೌಂದರ್ಯಕ್ಕೆ, ತುಂಬು ಹೊಳೆಯ ಗಂಭೀರ ಸ್ಥಾನಕ್ಕೆ ನಮ್ಮ ಸಂಗೀತ ಪ್ರಾಮುಖ್ಯ ಕೊಡಬೇಕು" (ಪುಟ 5) " ಗಾನ ಸರಸ್ವತಿ ಬಾಲ್ಯದ ಕುಣಿತ ಕುಪ್ಪಳಿಕೆಗಳಲ್ಲೇ ಬದುಕನ್ನು ಮುಗಿಸುವುದಿಲ್ಲ, ಬೆಳೆದು ತುಂಬು ಗಾಂಭೀರ್ಯವನ್ನೂ stateliness majesty ಯನ್ನು ಸಾಧಿಸುತ್ತಾಳೆ. ನನ್ನ ಮನಸ್ಸು ಈ majestyಗಾಗಿ ಹಾತೊರೆಯುತ್ತಿದೆ" (ಪುಟ 5).

ಮೂರ್ತಿರಾಯರಿಗೆ ಬದುಕು ಬೇರೆಯಲ್ಲ, ಸಂಗೀತ ಬೇರೆಯಲ್ಲ. ಅವರಿಗೆ ಬದುಕೇ ಸಂಗೀತ. "ಇತರ ಕಲೆಗಳು ಹೇಗೋ ಹಾಗೇ ಸಂಗೀತವೂ ಜೀವನಾನುಭವವನ್ನು ಪ್ರತಿಬಿಂಬಿಸುತ್ತದೆ."(ಪುಟ 4). ಅವರ ಜೀವನದ ಅವಿಸ್ಮರಣೀಯವಾದ ಮಂಗಳ ಮುಹೂರ್ತವೊಂದರ ಕಲ್ಪನೆ ಹೀಗಿದೆ.

ಮೂರ್ತಿರಾಯರು ತಮ್ಮ ಸ್ವಾನುಭವಪೂರ್ವಕವಾದ " ಅಕ್ಕಿಹೆಬ್ಬಾಳು" ಎಂಬ ಸ್ವಾನುಭವ ಪ್ರಬಂಧದಲ್ಲಿ ದೊಡ್ಡ ಸೆಳವಿಗೆ ಮೈಯೊಡ್ಡಿ ಅರ್ಧಘಂಟೆ ಮಲಗಿ ಮೈಯ ನೋವನ್ನೆಲ್ಲಾ ಪರಿಹರಿಸಿಕೊಂಡೆ, ಅದರ ಶ್ರುತಿಗೆ ಕಂಠವನ್ನು ಹೊಂದಿಸಿ ಮನದಣಿಯ ಹಾಡಿಕೊಂಡೆ" (ಸಮಗ್ರ ಲಲಿತ ಪ್ರಬಂಧಗಳು. ಪುಟ 207) ಎಂದು ಬರೆದಿದ್ದಾರೆ. "ಗಾನ ಪ್ರಪಂಚದ ಅಪೂರ್ಣ ಪ್ರಜ್ಞರು" ಎಂಬ ಪ್ರಬಂಧ ಸಂಗೀತದ, ಸಂಗೀತಕಾರರ, ಸಂಗೀತದ ವಿವಿಧ ಮುಖಗಳ, ಶ್ರೋತೃಗಳ, ಸಂಗೀತ ವಿಮರ್ಶಕರ ಬಗ್ಗೆ ಕುತೂಹಲವನ್ನು ಹುಟ್ಟಿಸುವಂತಹುದಾಗಿದೆ. "ಯುವಕನಿಗೆ ಪ್ರೇಯಸಿಯಿರುವಂತೆ ನನಗೆ ನನ್ನ ಸಂಗೀತ" (ಅದೇ 279) ಎಂಬಲ್ಲಿ ಅವರ ಸಂಗೀತದ ನಡುವಣ ಸಂಬಂಧ ವ್ಯಕ್ತವಾಗುತ್ತದೆ.

ಮೂರ್ತಿರಾಯರ ಬದುಕಿನಲ್ಲಿ ಸಂಗೀತ ಎಷ್ಟು ಸ್ಥಾಯಿಯಾಗಿ ನಿಂತಿದೆ. ಅದರಲ್ಲಿ ಅವರ ತನ್ಮಯತೆ ಎಷ್ಟು ಗಾಢವಾಗಿದೆ ಎಂದರೆ, ಮೂರ್ತಿರಾಯರು ಸಂಗೀತದಲ್ಲಿ ಒಂದಾಗಬಲ್ಲರು, ಬೆರೆಯಬಲ್ಲರು. ಬದುಕಿನ ಶ್ರುತಿ ಹಾಗೂ ಸಂಗೀತದ ಶ್ರುತಿಗಳ ಅದ್ವೈತ ಅವರಿಗೆ ಪ್ರಕೃತಿಯ ಆವರಣದಲ್ಲಿ ಒಂದು ರೀತಿಯ ಅಂತರ್ಮುಖತೆಯನ್ನೂ ಬಾಹ್ಯ ಜಗತ್ತಿನಿಂದ ವಿಮುಖತೆ ವಿಸ್ಮೃತಿಗಳನ್ನೂ ನೀಡಬಲ್ಲವು. ಅವರ ವಯಸ್ಸಿನಲ್ಲಿ ಅಮೇರಿಕಾ ಯಾತ್ರೆ ಮಾಡಿ ಬಂದ, ಆಧುನಿಕತೆಯ ಸಹಸ್ರ ಸಹಸ್ರ ಮುಖಗಳನ್ನು ಕಂಡ, ಆಂಗ್ಲ ಭಾರತದಲ್ಲಿ ಆಂಗ್ಲ ಶಿಕ್ಷಕರಿಂದ ಆಂಗ್ಲ ಶಿಕ್ಷಣ ಭಾಷೆ ಸಾಹಿತ್ಯಗಳನ್ನು ಅಧ್ಯಯನ ಮಾಡಿದ, ಆಂಗ್ಲ ಸಾಹಿತ್ಯವನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿ ಬೋಧಿಸಿದ ಮೂರ್ತಿರಾಯರ ಅಭಿರುಚಿ ಶುದ್ಧ ಭಾರತೀಯ ಸತ್ವದಿಂದ ಕೂಡಿದುದು. ಅವರ ಜೀವನದ ಮಹಾಮಂಗಳ ಮುಹೂರ್ತವೇ ಸಂಗೀತಮಯವಾದುದು. ಅದನ್ನು ತಮ್ಮ ಆತ್ಮ ಚರಿತ್ರೆಯಲ್ಲಿ ಹೀಗೆ ಕಾವ್ಯಮಯವಾದ ಭಾಷೆಯಲ್ಲಿ, ಚಿತ್ರವತ್ತಾದ ಶೈಲಿಯಲ್ಲಿ ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ. ಮೇಲೆ ಉಲ್ಲೇಖಿಸಿದ ಅವರ "ಅಕ್ಕಿ

ಹೆಬ್ಬಾಳು'' ಎಂಬ ಪ್ರಬಂಧದೊಂದಿಗೆ ಜೊತೆಯಾಗಿ ಹೆಜ್ಜೆ ಇಕ್ಕುವ ಈ ಕೆಳಗಿನ ವರ್ಣನೆ ಉಲ್ಲೇಖನಾರ್ಹ.

''ಚಿಕ್ಕ ಕೊಪ್ಪರಿಗೆ ಮಡುವಿನ ಬಳಿ ಬಂಡೆಯಿಂದ ನೀರಿಗೆ ಹಿಂಕಣ್ಣು ಮುಂಕಣ್ಣು ಲಾಗಹಾಕಿ, ವಿಸ್ತಾರವಾದ ದೊಡ್ಡ ಕೊಪ್ಪರಿಗೆ ಮಡುವಿನಲ್ಲಿ ಮನದಣಿಯ ಈಜಿ, ಬೆನ್ನ ಮೇಲೆ ತೇಲುತ್ತಾ ಅಂತರಿಕ್ಷದ ನೀಲಿಯನ್ನು ಕಣ್ಣಾನಗಳಲ್ಲಿ ತುಂಬಿಕೊಂಡು, ಮೈಯಲ್ಲಿ ಚಳಿ ಊರಲಾರಂಭಿಸಿದಾಗ ಆಚೆ ದಡದ ಮರಳು ದಿಬ್ಬದ ಮೇಲೆ ಮಲಗಿ, ಮತ್ತೆ ಈಜಿಕೊಂಡು ವಾಪಸ್ಸು ಬಂದು, ದಣಿದ ದೇಹವನ್ನು ಸೆಳವಿಗೆ ಒಡ್ಡಿ ನಿಲ್ಲಬೇಕು. ವಾಸ್ತವವಾಗಿ ಅದು, ನಿಲ್ಲುವುದಿಲ್ಲ, ಸಾಷ್ಟಾಂಗ ನಮಸ್ಕಾರ ಮಾಡಿ ಕತ್ತೆತ್ತುವಾಗಿನ ಭಂಗಿ. ಆಗ ನೀರಿನ ಹೊನಲು ಎಲ್ಲ ಕಡೆಯಲ್ಲೂ ನಮ್ಮನ್ನು ಮುತ್ತಿ, ಮೈಮೇಲೆ ಹರಿದಾಡಿ ಅಲೆಗೈಗಳಿಂದ ನಮ್ಮನ್ನು ಬಳಿಸಿ ಅಪ್ಪುಗೆ ಕೊಟ್ಟು, ಹುಸಿಕೋಪದಿಂದ ಕಪಾಲ ಸೇವೆ ಮಾಡಿ, ಎತ್ತಿದ ಮುಖವನ್ನು ಚುಂಬಿಸುತ್ತದೆ. ಅರ್ಧ ಗಂಟೆ ಹಾಗೇ ಅಲ್ಲಿದ್ದು ಕಲರವದ ಶ್ರುತಿಗೆ ಕಂಠವನ್ನು ಹೊಂದಿಸಿ ಹಾಡಿಕೊಳ್ಳುವ ಆನಂದ ಅವರ್ಣನೀಯ. ಕೇಳುವವರ ಪಾಡು, ಅದನ್ನು ಕಟ್ಟಿಕೊಂಡು ನಮಗೇನು. (ಸಂಜೆಗಣ್ಣಿನ ಹಿನ್ನೋಟ ಪುಟ 13)

## 11.3 ಮೂರ್ತಿರಾಯರ ಮಿತಿಗಳು (" ದೇವರು" ಕೃತಿಗೆ ಸೀಮಿತಗೊಳಿಸಿ)

ಮೂರ್ತಿರಾಯರು ಈಗ ಬದುಕಿರುವ ಕನ್ನಡದ ಖ್ಯಾತ ಬರಹಗಾರರಲ್ಲಿ ಅತ್ಯಂತ ಹಿರಿಯರು. ಅವರು ಬರೆದಿರುವ ಇತರ ಎಲ್ಲಾ ಕೃತಿಗಳಿಗಿಂತಲೂ ಹೆಚ್ಚು ವಿವಾದಾಸ್ಪದ, ಬಹು ಚರ್ಚಿತ ಕೃತಿ "ದೇವರು" ತನ್ನದೇ ಆದ ಕೆಲವು ಮಿತಿಗಳನ್ನು ಒಳಗೊಂಡಿರುತ್ತದೆ. ಈ ಕೃತಿ ಮೂರ್ತಿರಾಯರ ಸೃಜನಶೀಲತೆ ಹಾಗೂ ಚಿಂತನಶೀಲತೆಗಳೆರಡನ್ನೂ ಮೇಳೈಸಿ ಕೊಂಡ ಕೃತಿ. ಪ್ರೊ. ಎಲ್. ಎಸ್. ಶೇಷಗಿರಿರಾಯರು ಬರೆದಿರುವಂತೆ, ಎಂದೋ ಜ್ಞಾನವೃದ್ಧರಾದ ಮೂರ್ತಿರಾಯರು ಈಗ ವಯೋವೃದ್ಧರೂ ಆಗಿದ್ದಾರೆ. ಈ ವಯೋವೃದ್ಧ ಮತ್ತು ಜ್ಞಾನವೃದ್ಧಾಪ್ಯದ ಅಭಿವ್ಯಕ್ತಿ ಈ ಕೃತಿಯಲ್ಲಿ ಕಾಣುವುದಿಲ್ಲ. ಅವರ ಅಧ್ಯಯನ, ಬರವಣಿಗೆ, ಚಿಂತನೆ, ಪ್ರವಾಸಾನುಭವ, ಜೀವನಾನುಭವಗಳ ವಿಸ್ತೃತ ವ್ಯಾಪ್ತಿಯ ಪರಿಪಕ್ವತೆಯ, ಸಮಗ್ರ ಸಾರವನ್ನು ಹೀರಿ ಈ ಕೃತಿ ಪುಷ್ಟವಾಗಿದೆ ಎಂದು ಅನ್ನಿಸುವುದಿಲ್ಲ. ಏಕೆಂದರೆ ಪ್ರಥಮತಃ ಮೂರ್ತಿರಾಯರು ಈ ಕೃತಿಗೆ ನೀಡಿರುವ ತಲೆಬರಹವೇ ಒಂದು ರೀತಿಯ ಗೊಂದಲವನ್ನು ಸೃಷ್ಟಿಸುವಂತಹದು. ಈ ಶೀರ್ಷಿಕೆಯು ದೇವರ ಅಸ್ತಿತ್ವವನ್ನು ಸಮರ್ಥಿಸುವುದೇ ಅಥವಾ ಅಲ್ಲಗಳೆಯುವುದೇ ಎಂದು ಅರ್ಥವಾಗುವುದಿಲ್ಲ. ಕನ್ನಡದಲ್ಲಿ ವಸುದೇವಭೂಪಾಲರ 'ದೇವರು ಸತ್ತ', ಕೋಟ ವಾಸುದೇವ ಕಾರಂತರ 'ದೇವರನ್ನು ನಂಬುವೆ', ಜೀಜಿಯವರ 'ದೇವರಿಲ್ಲದ ಗುಡಿ' (ಪ್ರವಾಸ ಕಥನ), ಮಾಸ್ತಿಯವರ 'ಧರ್ಮಸಂರಕ್ಷಣೆ', ಗೌರೀಶ ಕಾಯ್ಕಿಣಿಯವರ 'ನಾಸ್ತಿಕನ ದೇವರು', ಪಂಡಿತ ತಾರಾನಾಥರ 'ಧರ್ಮಸಂಭವ' ಮುಂತಾದ ಕೃತಿಗಳ ಹೆಸರುಗಳು ವಸ್ತುವಿನ ವ್ಯಾಪ್ತಿ ಸ್ವರೂಪಗಳನ್ನು ಮೇಲ್ನೋಟದಲ್ಲಿಯೇ ತಟ್ಟನೆ ವ್ಯಕ್ತಪಡಿಸುತ್ತವೆ. ಇಂಗ್ಲೀಷ್ ಕಾದಂಬರಿಕಾರ ಶ್ರೀ ಆರ್. ಕೆ. ನಾರಾಯಣ್‌ರವರ

ಕಾದಂಬರಿಯ ಹೆಸರುಗಳಂತೆಯೇ The Guide, Financial Expert 'ದೇವರು', ಕೃತಿಯ ಶೀರ್ಷಿಕೆಯ ವ್ಯಂಗ್ಯ ಓದುಗನಿಗೆ ಪೂರ್ಣ ಪರಿಚಯವಾಗುವುದು ಅದನ್ನು ಓದಿದ ಅನಂತರವೆ. ದೇವರ ಅಸ್ತಿತ್ವದಲ್ಲಿ ಅಸೀಮ ನಂಬಿಕೆ ಇರುವ ಶ್ರದ್ಧಾಳುಗಳು ಈ ಕೃತಿ ಶೀರ್ಷಿಕೆಯಿಂದ ಭ್ರಮಿತರಾಗುವ ಸಾಧ್ಯತೆಯಿದೆ. ಸ್ವಾಮಿ ಜಗದಾತ್ಮಾನಂದರ "ಬದುಕಲು ಕಲಿಯಿರಿ" ಎಂಬಂತಹ ನೇರವಾದ ಹಾಗೂ ವಾಚ್ಯವೆನಿಸುವ ಶೀರ್ಷಿಕೆ ಇದಲ್ಲವಾಗಿರುವುದು ಒಂದು ವಿಪರ್ಯಾಸವೆನಿಸುತ್ತದೆ. ಡಾ. ಡಿ. ಆರ್. ನಾಗರಾಜರವರ "ಶಕ್ತಿ ಶಾರದೆಯ ಮೇಳ"ದಂತೆ ಒಂದು ವಿಧವಾದ ಅಮೂರ್ತ (Abstract) ಕಲ್ಪನೆಯನ್ನು ಈ ತಲೆಬರಹ ನೀಡುವುದೇ ಹೊರತು ಸ್ಪಷ್ಟ ಕಲ್ಪನೆಯನ್ನು ನೀಡುವುದಿಲ್ಲ.

ಈ ಕೃತಿಯ ವಸ್ತುವಿನ ಬಳಕೆ(Treatment of them) ಓದುಗನಲ್ಲಿ ಕೊಂಚ ಗೊಂದಲವನ್ನು ಉಂಟುಮಾಡುತ್ತದೆ. ಮೂರ್ತಿರಾಯರು ಈ ಕೃತಿಯಲ್ಲಿ ದೇವರ ಅಸ್ತಿತ್ವವನ್ನು ನಿರಾಕರಿಸುತ್ತಾರೆ ನಿಜ. ಆದರೆ ದೇವರ ಅಸ್ತಿತ್ವದಲ್ಲಿ ನಂಬಿಕೆಯನ್ನೂ ಶ್ರದ್ಧೆಯನ್ನೂ ಇರಿಸಿಕೊಂಡಿರುವ ಭಾವುಕರು ತಮ್ಮ ಅಂಧಶ್ರದ್ಧೆಯಿಂದ ಮೌಢ್ಯದಿಂದ ಬಳಲುತ್ತಾರೆ ಎಂಬ ವಾದವನ್ನೂ ಸೋದಾಹರಣವಾಗಿ ಪುಷ್ಟೀಕರಿಸುತ್ತಾರೆ. ಆದರೆ ಡಾ. ಹೆಚ್. ನರಸಿಂಹಯ್ಯನವರಂತೆ ಬಹು ಗಂಭೀರವಾಗಿ ಈ ಚರ್ಚೆಗಳನ್ನು ಅವರು ಪ್ರತಿಪಾದಿಸುವುದಿಲ್ಲ.

ಈ ಕೃತಿಯಲ್ಲಿ ದೇವರ ಅಸ್ತಿತ್ವವನ್ನು ಅವರು ನಿರಾಕರಿಸಲು ಎತ್ತುವ ಆಕ್ಷೇಪಗಳು ಸ್ವಲ್ಪಮಟ್ಟಿಗೆ ಬಾಲಿಶವಾಗಿ ಕಾಣುತ್ತವೆ. ಸಾಮಾನ್ಯ ಜನರು ಇಂದು ಸಾಯಿಬಾಬರವರನ್ನು ಯಾವ ನೆಲೆಯಲ್ಲಿ ಪವಾಡಪುರುಷನಲ್ಲವೆಂದು ಸ್ಥಾಪಿಸಲು ಹೊರಡುತ್ತಾರೋ ಮೂರ್ತಿರಾಯರು ಅದೇ ದಾರಿಯಲ್ಲಿ ಸಾಗುತ್ತಾರೆ. ಅವರ ಪ್ರಶ್ನೆಗಳು, ಆಕ್ಷೇಪಗಳೂ ಸಾಮಾನ್ಯರ ಮಟ್ಟವನ್ನು ಬಿಟ್ಟು ಮೇಲೇಳುವುದಿಲ್ಲ. ಐತಿಹಾಸಿಕ ದುರಂತಗಳನ್ನು ಉಲ್ಲೇಖಿಸಿ, ಅಂತಹ ದುರಂತಗಳು ಸಂಭವಿಸಿದ್ದರ ಕಾರಣ ದೇವರ ಅಸ್ತಿತ್ವವಿಲ್ಲವೆಂಬ ವಾದ ಹೂಡುವುದು ಅಷ್ಟೇನೂ ಸಮಂಜಸವಾಗಲಾರದು ಎನಿಸುತ್ತದೆ.

ದೇವರು ಇದ್ದಾನೆ ಅಥವಾ ಇಲ್ಲವೆಂಬ ವಿಚಾರ ಚರ್ಚೆಗೆ ಗ್ರಾಹ್ಯವೇ. ಆದರೆ ಇಂತಹ ಗಂಭೀರ ವಿಚಾರಕ್ಕೆ ಗಂಭೀರ ಶೈಲಿ ಅಗತ್ಯ. ಶ್ರೀ ಬಿ. ಜಿ. ಎಲ್. ಸ್ವಾಮಿಯವರಂತೆ ಮೂರ್ತಿರಾಯರು ಒಂದು ಗಂಭೀರವಾದ ವಿಷಯದ ನಿರೂಪಣೆಗೆ ಹಾಸ್ಯಮಯವಾದ ಶೈಲಿಯನ್ನು ಬಳಸುತ್ತಾರೆ. ಈ ಸಂದರ್ಭದಲ್ಲಿ ದಿ. ಪ್ರೊ. ಎಸ್. ವಿ. ರಂಗಣ್ಣನವರ ಮಾತು ಅತ್ಯಂತ ಸಮಯೋಚಿತವೆನಿಸುತ್ತದೆ.

ಪದಾರ್ಜನೆ ಪದಯುಕ್ತತೆ ಪದಾಸಕ್ತಿಯಲ್ಲಿ ಇದಕ್ಕಿಂತ ಮುಂದೆ ಹೋಗಲಸಾಧ್ಯ ಎಂದು ತೋರಬೇಕು. ಒಂದಕ್ಷರವನ್ನು ಕೂಡ ಬಿಡಲಾಗಲೀ ಬದಲಾಯಿಸಲಾಗಲೀ ಆಗಕೂಡದು. ಆ ಹೇಳಿಕೆ ಆ ಭಾಷೆಯಲ್ಲಿ ಮಾತುಗಾರಿಕೆಯ ಕಟ್ಟಕಡೆಯೆಂದು ಭಾಸವಾಗಬೇಕು. ಭಾವ ಭಾವನೆಯ ಭಾರಿ ಗಣಿಯ ಬಾಗಿಲೊಂದು ತೆಗೆದು ಇಷ್ಟೊಂದು ಐಶ್ವರ್ಯ ಉಂಟೇ ಎಂದೆನ್ನಿಸಬೇಕು. ಅಲ್ಲದೆ ಅದರಲ್ಲಿ ಅಡಗಿರಬೇಕು ಒಂದು ಧ್ವನಿಯಲ್ಲ, ಧ್ವನಿಪರಂಪರೆ. ಇವೆಲ್ಲ ಕಾರಣಗಳಿಂದ ಯಾವುದೋ ಅಪೂರ್ವ ವಿಶಾಲ ಅಗಾಧ ಭವ್ಯತೆಯ, ದಿವ್ಯಾನುಭವದ, ಸ್ವಲ್ಪ ಸಂಪರ್ಕ ನಮಗೆ ಒದಗಿ ಪ್ರತಿಭೆ ಕುದುರಿ,

ಹೃದಯ ಹುರಿಗೊಂಡು, ಸಂತೋಷ ತಾನೇತಾನಾಗಿ, ಕಾವ್ಯಾನಂದ ನಿಜವಾಗಿಯೂ ಬ್ರಹ್ಮಾನಂದ ಸಹೋದರವಾಗುತ್ತದೆ. ಸಾಧಾರಣವಾಗಿ ಪ್ರಪಂಚದ ಅತ್ಯುತ್ತಮ ಕವಿಗಳಲ್ಲಿ ಮಾತ್ರ ಹೆಚ್ಚಾಗಿ ಭವ್ಯ ಶೈಲಿಯ ಸುಳಿದಾಟ. ಏಕೆಂದರೆ ಅದು ಕಾವ್ಯ ಶೈಲಿಯ ಕಡೆಯ ಹಂತ. ಇಂತಹದೇ ವಿಚಾರವನ್ನು ಕುರಿತು ಚಿಂತನೆ ನಡೆಸಿದ ಜಿಡ್ಡು ಕೃಷ್ಣಮೂರ್ತಿಯವರ ಗಾಂಭೀರ್ಯವಾಗಲಿ ಬಿಗುವಾಗಲಿ ಮೂರ್ತಿರಾಯರ ಕೃತಿಗಳಲ್ಲಿ ಕಂಡು ಬರುವುದಿಲ್ಲ. ಇಂತಹ ವಿವಾದಾಸ್ಪದ ಚರ್ಚಾಸ್ಪದ ವಿಷಯಕ್ಕೆ ಇನ್ನೂ ಗಂಭೀರವಾದ ಶೈಲಿಯನ್ನು ಅಳವಡಿಸಬೇಕಾಗಿತ್ತು ಎನ್ನಿಸುತ್ತದೆ. ಮೂರ್ತಿರಾಯರು ಅತ್ಯಂತ ಹಾಸ್ಯಪ್ರಜ್ಞೆಯುಳ್ಳವರು. ಅವರ ಹಾಸ್ಯಪ್ರಜ್ಞೆ ಇಲ್ಲಿಯೂ ಮುಂದಾಗಿದೆ. ಗಂಭೀರವಾದ ಚರ್ಚೆಯನ್ನು ಗಂಭೀರಗತಿಯಲ್ಲಿಯೇ, ಸಾಗಿಸಿದರೆ ಅದರ ಪರಿಣಾಮ ವಿಶಿಷ್ಟವಾಗಿರುತ್ತದೆ. ಆದರೆ, ಹಾಗಾಗದೆ, ಗಂಭೀರ ಚಿಂತನೆಯನ್ನು ಹಾಸ್ಯ ಶೈಲಿಯಲ್ಲಿ ತೆಗೆದುಕೊಂಡು ಹೋದರೆ, ಅದು ಅನುಚಿತವೂ ಅಸಮಂಜಸವೂ ಆಗುತ್ತದೆ. ಮೂರ್ತಿರಾಯರ ಹಾಸ್ಯಪ್ರಜ್ಞೆಯ ಕೈ ಮೇಲಾಗಿ ಆ ಗಂಭೀರತೆಯ ಸರಪಳಿ ತಪ್ಪಿಹೋಗುತ್ತದೆ. ಪರಿಣಾಮವಾಗಿ ಅತ್ತ ಹಾಸ್ಯವೂ ಆಗದೆ ಇತ್ತ ಗಂಭೀರವೂ ಆಗದೆ ಇರುವ ಸ್ಥಿತಿ ಉಂಟಾಗುತ್ತದೆ.

'ದೇವರು' ಎಂಬ ಶಬ್ದವೇ ಅಮೂರ್ತವಾದುದು. ಹೀಗಿರುವಲ್ಲಿ ದೇವರು ಹೀಗೇ ಇರಬೇಕು, ಎಂಬ ಮೂರ್ತಿರಾಯರ ನಿರೀಕ್ಷೆ ಅಷ್ಟೇನೂ ಸಾಧುವಾದುದಲ್ಲ. ವಿಧಿವಾದದ ಬೆಳಕಿನಲ್ಲಾಗಲೀ ಪುರುಷವಾದದ ಬೆಳಕಿನಲ್ಲಾಗಲೀ, ಈ ಮಂಡನೆ ಸಮಂಜಸವಾಗಿ ಕಾಣುವುದಿಲ್ಲ. ಇದಕ್ಕಾಗಿ ಮೀಸಲಿರಿಸಿದ ಅಧ್ಯಾಯದಲ್ಲಿ ಹಲವು ನಿದರ್ಶನಗಳನ್ನೂ ನೀಡುತ್ತಾರೆ.

ಈ ಪುಸ್ತಕದ ಮತ್ತೊಂದು ದೊಡ್ಡ ಮಿತಿ ಎಂದರೆ ವೇದಾಂತದ ಕೆಲವು ಪಾರಿಭಾಷಿಕ ಶಬ್ದಗಳನ್ನು ವೇದಾಂತದ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡದೆ, ತೀರಾ ಲಘುವಾಗಿ ಅವುಗಳನ್ನು ವಿಶ್ಲೇಷಣೆ ಮಾಡಿದ್ದಾರೆ. ಉದಾಹರಣೆಗೆ ಬ್ರಹ್ಮ ಶಬ್ದವನ್ನು ಕುರಿತ ಅವರ ವಿಶ್ಲೇಷಣೆ ಸೂಕ್ತ ಹಿನ್ನಲೆಯಲ್ಲಿ ವಿಶ್ಲೇಷಣೆ ಮಾಡಿಲ್ಲ.

1. ದೇವರು ಹಿಟ್ಲರ್‌ಗೆ (Hitler) ಸ್ವಾತಂತ್ರ್ಯ ಕೊಟ್ಟ. ಲಕ್ಷಗಟ್ಟಲೆ ಜನ ಅದಕ್ಕೆ ಬಲಿಯಾದರು. ಜನರಲ್ ಡೈಯರ್‌ಗೆ (General Dyer) ಸ್ವಾತಂತ್ರ್ಯ ಕೊಟ್ಟ. ಅವನೂ ಅದನ್ನು ಕೊಲೆಗಾಗಿ ಬಳಸಿದ. ಅವರಿಬ್ಬರಿಗೂ ಬಲಿಯಾದ ಜನರಿಗೆ ಕೊಲೆಯಾಗದಿರುವ ಸ್ವಾತಂತ್ರ್ಯವಿತ್ತೆ? ಥಿಯರಿಯಲ್ಲಿ ಇತ್ತೇನೋ. ಇದ್ದರೂ ಕೊಲೆಗಡುಕರನ್ನು ಎದುರಿಸಿ ಪ್ರಾಣ ಉಳಿಸಿಕೊಳ್ಳುವ ಶಕ್ತಿ ಇರಲಿಲ್ಲ. ಶಕ್ತಿಯಿಲ್ಲದ ಸ್ವಾತಂತ್ರ್ಯ ಸ್ವಾತಂತ್ರ್ಯವೇ ಅಲ್ಲ. ಒಬ್ಬನನ್ನು ಕೈಕಾಲುಕಟ್ಟಿ ಸಮುದ್ರಕ್ಕೆ ಒಗೆದು, ನಿನಗೆ ಪ್ರಾಣ ಉಳಿಸಿಕೊಳ್ಳುವ ಸ್ವಾತಂತ್ರ್ಯವಿದೆ. ಎನ್ನಬಹುದೆ?

ಹಿಟ್ಲರ್‌ಗೆ ದೇವರು ಶಿಕ್ಷೆ ಕೊಟ್ಟನೆ? ಅವನು ಕೊನೆಗೆ ಸೋತ, ಸತ್ತ ನಿಜ. ಎಂದೋ ಸಾಯಬೇಕಾಗಿತ್ತು, ಒಂದೆರಡು ವರ್ಷ ಮುಂಚೆ ಸತ್ತ. ಡೈಯರ್‌ಗಂತೂ ಶಿಕ್ಷೆಯ ಮಾತು ಹಾಗಿರಲಿ, ಇಂಗ್ಲೆಂಡಿನ ಜನ ಅವನಿಗೆ (ಕೊಲೆ ಮಾಡಿ ಸಾಮ್ರಾಜ್ಯವನ್ನು ಉಳಿಸಿದ ಎಂದು ಅವನನ್ನು ಹೊಗಳಿ) 26000 ಪೌಂಡಿನ ನಿಧಿಯನ್ನು ಕೂಡಿಸಿಕೊಟ್ಟರು. ಒಂದು ವೇಳೆ ಅವರಿಬ್ಬರಿಗೂ ಶಿಕ್ಷೆಯಾಯಿತು ಎಂದಿಟ್ಟುಕೊಳ್ಳೋಣ. ಅದರಿಂದ ಅವರ ಬಲಿಪಶುಗಳಿಗೆ ಬಂದ ಭಾಗ್ಯವೇನು?

ಅಂತೂ ಪ್ರಪಂಚದಲ್ಲಿ ಕೇಡು ಇದೆ ಎನ್ನುವುದು ಸ್ಪಷ್ಟ. ಅದು ಎಲ್ಲಿಂದ ಬಂತು? ಕೆಲವು ಮತಗಳವರೇನೋ ಸದ್ಗುಣನಿಧಿಯಾದ ದೇವರಿದ್ದಾನೆ ಎಂದು ನಂಬುವಂತೆ ದುರ್ಗುಣನಿಧಿಯಾದ ವ್ಯಕ್ತಿಯೊಬ್ಬ ಇದ್ದಾನೆಂದೂ ನಂಬುತ್ತಾರೆ. ಬೈಬಲ್ ಅವನಿಗೆ ಸೈತಾನ (satan)ಎಂಬ ಹೆಸರು ಕೊಟ್ಟಿದೆ. ಅವನೇ ಎಲ್ಲ ಕೇಡಿಗೂ ಮೂಲ. ಆದರೆ ಸೈತಾನ ತನ್ನನ್ನು ತಾನೇ ಸೃಷ್ಟಿಸಿಕೊಳ್ಳಲಿಲ್ಲವಷ್ಟೆ. ಸೃಷ್ಟಿಕರ್ತ ದೇವರೊಬ್ಬನೇ ಆಗಿರುತ್ತಾನೆ. ಅವನು ಕೇಡನ್ನು ಏಕೆ ಸೃಷ್ಟಿಸಿದ ಎಂಬ ಪ್ರಶ್ನೆಗೆ ಯಾರೂ ಸಮರ್ಪಕವಾದ ಉತ್ತರ ಕೊಟ್ಟಿಲ್ಲ. ಕೇಡು ಇದೆ, ಆದ್ದರಿಂದ ದೇವರಿಲ್ಲ ಎನ್ನಬೇಕಾಗುತ್ತದೆ.

(ಪುಟ 53)

ಇದೇ ಧ್ವನಿ ವಸುದೇವ ಭೂಪಾಲರ "ದೇವರು ಸತ್ತ" ಎಂಬ ಕೃತಿಯಲ್ಲಿಯೂ ವ್ಯಕ್ತವಾಗುತ್ತದೆ.

ಈ ದೈವಭಕ್ತರು ಎಲ್ಲೆಲ್ಲೂ ಕರುಣೆಯನ್ನು, ಎಲ್ಲೆಲ್ಲೂ ಕುಶಲ ಶಿಲ್ಪವನ್ನು ಕಾಣುತ್ತಾರೆ. ಇದೆಲ್ಲ ಅಪಾರ ಕರುಣಾಶಾಲಿಯೂ ಸರ್ವಶಕ್ತನೂ ಆದ ದೇವರ ಕೃತಿ, ಎನ್ನುತ್ತಾರೆ. ಕ್ರೌರ್ಯ, ಕುರೂಪ, ಅಸ್ತವ್ಯಸ್ತತೆ, ಈ ದೈವಭಕ್ತರ ಕಣ್ಣಿಗೆ ಗೋಚರ ವಾಗುವುದೇ ಇಲ್ಲ. ಯಾವುದಾದರೂ ನೋವು, ಗೋಳುಗಳನ್ನು ತೋರಿಸಿದರೆ ಆ ಜೀವಿಯ ಕರ್ಮಫಲ ಪಾಪ ಎಂದುತ್ತರಿಸುತ್ತಾರೆ. ಒಳ್ಳೆಯದಕ್ಕೆಲ್ಲಾ ದೇವರೇ ಕಾರಣ. ಕೆಟ್ಟದ್ದಕ್ಕೆ ಮಾತ್ರ ದೇವರು ಹೊಣೆಯಲ್ಲ.

(ಪುಟ 64)

2. ಸೂರ್ಯ ಎರಡು ಕ್ಷೇತ್ರಗಳಿಂದ ಅಭ್ಯರ್ಥಿಯಾಗಿ ನಿಂತು ಎರಡರಲ್ಲೂ ಗೆದ್ದಿದ್ದಾನೆ. (ಪುಟ 7)

ಒಂದು ಪಾವು ರವೆ, ಒಂದು ಪಾವು ಸಕ್ಕರೆ ಹೀಗೆ ಹಲವಾರು ಸಾಮಾನು ಹಾಕಿ ತಯಾರಿಸುವ ಈ ಭಕ್ಷ್ಯ ರುಚಿಯಾಗಿರುತ್ತದೆ. (ಪುಟ 28)

3. ಈ ದೇವರು ಪ್ರೇಮದ ಸಾಕಾರ ಮೂರ್ತಿ. ಪ್ರೇಮವೇ ದೇವರು. ನಮ್ಮನ್ನು ಸಲಹುವುದಕ್ಕೆ ಅವನು ತಾನೇ ಓಡಿ ಬರುತ್ತಾನೆ. ಪಾಪಿಗಳನ್ನು ಕೂಡ (ಅವರು ಪಶ್ಚಾತ್ತಾಪ ಪಟ್ಟರೆ ) ಅಪ್ಪಿಕೊಂಡು ಮುತ್ತಿಟ್ಟು ಬರಮಾಡಿಕೊಳ್ಳುತ್ತಾನೆ. ಇದುವರೆಗೆ ನಾವು ಪರಿಶೀಲಿಸಿದ ಎಲ್ಲ ಕಲ್ಪನೆಗಳಿಗಿಂತ ಶ್ರೇಷ್ಠವಾದ ಕಲ್ಪನೆ ಇದು. ಇಂಥವನು ನಮಗೆ ಬೇಕಾದ ದೇವರು. (ಪುಟ 79)

4. ಅಸಿಸಿಯ ಸಂತ ಫ್ರಾನ್ಸಿಸ್(St. Francis of Assissi) ಹಿಟ್ಲರ್ ಮತ್ತು ಅವನಿಂದ ಕೊಲೆಯಾದವರು, ಸಾಕ್ರಟೀಸ್ ಮತ್ತು ಅವನಿಗೆ ವಿಷ ಕುಡಿಸಿದವರು, ಅಮೃತಸರದಲ್ಲಿ ಕಗ್ಗೊಲೆ ನಡೆಸಿದ ಜನರಲ್ ಡೈಯರ್, ಅವನ ಕ್ರೌರ್ಯಕ್ಕೆ ಬಲಿಯಾದವರು, ಗಾಂಧಿ ಮತ್ತು ಗೋಡ್ಸೆ, ಆಟಂಬಾಂಬನ್ನು ಹಿರೋಷಿಮಾದ ಮೇಲೆ ಹಾಕಿದವರು, ಹಾಕಿಸಿದ ಸರ್ಕಾರ, ಬಾಂಬಿನಿಂದಾಗಿ ಸತ್ತವರು–ಇವರೆಲ್ಲ ಅಸ್ತಿತ್ವ ದಲ್ಲಿದ್ದರಷ್ಟೆ. ಅವರು, ಅವರ ಮನಸ್ಸಿನ ಪ್ರವೃತ್ತಿಗಳು, ಅವರಲ್ಲಿದ್ದ ಉದ್ಧಾರಕ ಶಕ್ತಿ, ನಾಶಕಾರಕ ಶಕ್ತಿ ಎಲ್ಲವೂ ಬ್ರಹ್ಮದ ಕಲ್ಪನೆಯಲ್ಲಿ ಸೇರುತ್ತವೆ.

(ಪುಟ 104)

## ಉಪಸಂಹಾರ

ಈ ಅಧ್ಯಯನದಿಂದ ಈ ಕೆಳಕಂಡ ಅಂಶಗಳನ್ನು ಗುರುತಿಸಲಾಗಿದೆ.

1) ಪ್ರೊ. ಎ.ಎನ್. ಮೂರ್ತಿರಾಯರ ಸಮಗ್ರ ಕೃತಿಗಳನ್ನು ಅಧ್ಯಯನ ಮಾಡಲಾಗಿದೆ ಹಾಗೂ ಅವುಗಳ ಬಗ್ಗೆ ವಿಮರ್ಶಾತ್ಮಕವಾಗಿಯೂ ತೌಲನಿಕವಾಗಿಯೂ ಅಧ್ಯಯನ ಮಾಡಲಾಗಿದೆ.

2) ಮೂರ್ತಿರಾಯರ ಅಪ್ರಕಟಿತ ಕನ್ನಡ ಹಾಗೂ ಇಂಗ್ಲೀಷ್ ಲೇಖನಗಳನ್ನೂ ಇಲ್ಲಿ ವಿಮರ್ಶಾತ್ಮಕವಾಗಿ ಹಾಗೂ ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ. ಮೂರ್ತಿರಾಯರ ಇಂಗ್ಲಿಷ್ ಭಾಷಾ ಪ್ರಭುತ್ವ ಹಾಗೂ ಸ್ವಾರಸ್ಯವನ್ನು ಗುರುತಿಸಲಾಗಿದೆ. ಇದುವರೆಗೆ ಅವರನ್ನು ಒಬ್ಬ ಇಂಗ್ಲಿಷ್ ಲೇಖಕರೆಂದು ಯಾರೂ ಗುರುತಿಸಿರಲಿಲ್ಲ.

3) ಮೂರ್ತಿರಾಯರನ್ನು ಇದುವರೆಗೆ ಕೇವಲ ಪ್ರಬಂಧಕಾರರೆಂದು ಮಾತ್ರವೇ ಗುರುತಿಸಲಾಗಿದೆ. ಈ ಅಧ್ಯಯನದಲ್ಲಿ ಅವರು ಇನ್ನಿತರ ಕ್ಷೇತ್ರಗಳಿಗೆ ನೀಡಿದ ಕೊಡುಗೆಗಳನ್ನೂ ವಿವೇಚನೆ ಮಾಡಲಾಗಿದೆ.

4) ಮೂರ್ತಿರಾಯರನ್ನು ಇದುವರೆಗೆ ವಿಮರ್ಶಕರೆಂದು ಗುರುತಿಸಿದವರು ಕಡಿಮೆ. ಅವರ ವಿಮರ್ಶಾತ್ಮಕ ಕೃತಿಗಳನ್ನೂ ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ.

5) ಮೂರ್ತಿರಾಯರು ಶಿಶುಸಾಹಿತ್ಯಕ್ಕೆ ನೀಡಿದ ಕೊಡುಗೆ ವಿಶಿಷ್ಟವಾದದ್ದು. ಈ ಪ್ರಕಾರವನ್ನು ಕುರಿತು ಇದುವರೆಗೆ ಅಧ್ಯಯನ ನಡೆದಿರಲಿಲ್ಲ. ಇಲ್ಲಿ ಈ ಪ್ರಕಾರವನ್ನೂ ಗುರುತಿಸಲಾಗಿದೆ.

6) ಮೂರ್ತಿರಾಯರ ಸಾಹಿತ್ಯ ರಚನೆಯ ಮೇಲೆ ಪ್ರಭಾವ ಬೀರಿದ ಕರ್ನಾಟಕ ಶಾಸ್ತ್ರೀಯ ಸಂಗೀತ ಹಾಗೂ ಉಪನಿಷತ್ತುಗಳ ಪಾತ್ರವನ್ನು ಕುರಿತು ಇಲ್ಲಿ ವಿವೇಚನೆ ಮಾಡಲಾಗಿದೆ.

7) ಇದುವರೆಗೆ ಎಲ್ಲೂ ಉಲ್ಲೇಖಗೊಳ್ಳದ ಕೃತಿಗಳನ್ನೂ ಸಂಗ್ರಹಿಸಿ ಅಧ್ಯಯನ ಮಾಡಿ, ಬೆಳಕಿಗೆ ತರಲಾಗಿದೆ.

8) ಇದುವರೆಗೆ ಕೇವಲ ರೊಮ್ಯಾಂಟಿಕ್ ಬರಹಗಾರರೆಂದು ಮಾತ್ರವೇ ಗುರುತಿಸಲ್ಪಟ್ಟ ಮೂರ್ತಿರಾಯರ ಸಾಹಿತ್ಯದಲ್ಲಿ ರೊಮ್ಯಾಂಟಿಕ್ ಅಂಶಗಳ ಜೊತೆಗೆ ಕ್ಲಾಸಿಕಲ್ ಲಕ್ಷಣಗಳನ್ನೂ ಗುರುತಿಸಲಾಗಿದೆ.

9) ಮೂರ್ತಿರಾಯರ 'ದೇವರು' ಕೃತಿಗೆ ಪಂಪ ಪ್ರಶಸ್ತಿ ನೀಡಿದ ನಂತರ ಅವರನ್ನು ವೈಚಾರಿಕ ಸಾಹಿತಿ ಎಂದು ಗುರುತಿಸಲಾಗಿದೆ. ಅಲ್ಲದೆ ಅವರೊಬ್ಬ ನಾಸ್ತಿಕರೆಂದೂ, ಪ್ರಚ್ಛನ್ನ ಬಂಡಾಯ ಲೇಖಕರೆಂದೂ ಕೆಲವರು ಗುರುತಿಸಿದ್ದುಂಟು. ಆದರೆ ಹೊಸಗನ್ನಡ ಸಾಹಿತ್ಯವನ್ನು ನಿರ್ಣಾಯಕವಾಗಿ ಬೆಳೆಸಿದ ಲೇಖಕರಲ್ಲಿ ಅವರೂ ಒಬ್ಬರು ಎಂದು ಗುರುತಿಸಲಾಗಿರಲಿಲ್ಲ. ಇಲ್ಲಿ ಆ ಪ್ರಯತ್ನವನ್ನೂ ಮಾಡಲಾಗಿದೆ.

# ಅಧ್ಯಾಯ – 12

## ಅನುಬಂಧಗಳು

### ಅನುಬಂಧ – I

**12.1 ಕುಟುಂಬ**

| | | |
|---|---|---|
| ತಂದೆ | : | ಶ್ರೀ ಸುಬ್ಬರಾವ್ |
| ಸಹೋದರರು | : | ಶ್ರೀ ಎ. ಸೂರ್ಯನಾರಾಯಣರಾವ್<br>ಶ್ರೀ ಎ. ಕೃಷ್ಣಮೂರ್ತಿ |
| ಪತ್ನಿ | : | ಶ್ರೀಮತಿ ಜಯಲಕ್ಷ್ಮಿ (ನಿಧನರಾಗಿದ್ದಾರೆ) |
| ಮಕ್ಕಳು | : | ಶ್ರೀ ಎ. ಎನ್. ಸುಬ್ಬರಾಮಯ್ಯ, ಇಂಜಿನಿಯರ್ ನೈರೋಬಿಯದಲ್ಲಿದ್ದರು, ಈಗ ಬೆಂಗಳೂರಿನಲ್ಲಿ ಇದ್ದಾರೆ.<br>ಡಾ. ಎ. ಎನ್. ನಾಗರಾಜ, ಅಮೇರಿಕಾ, ಫಿಲಿಫೈನ್ಸ್‌ನಲ್ಲಿ ಕೃಷಿ ವಿಜ್ಞಾನಿಯಾಗಿದ್ದರು. ಈಗ ಭೀಮನಕಟ್ಟೆ (ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು) ಯಲ್ಲಿದ್ದಾರೆ.<br>ಡಾ. ರಾಮಚಂದ್ರರಾವ್, ಅಮೇರಿಕಾದಲ್ಲಿ ವೈದ್ಯರು. |
| ಸೊಸೆಯರು | : | ಶ್ರೀಮತಿ ಲೀಲಾ ಸುಬ್ಬರಾಮಯ್ಯ<br>ಶ್ರೀಮತಿ ಡಯಾನ ರಾಮಚಂದ್ರರಾವ್, ಇಂಗ್ಲೆಂಡ್ ದೇಶದವರು.<br>ಶ್ರೀಮತಿ ನ್ಯಾನ್ಸಿ ನಾಗರಾಜ, ಅಮೇರಿಕಾದವರು. |

ಮೂರ್ತಿರಾಯರು ಪ್ರಸುತ್ತ ಬೆಂಗಳೂರಿನಲ್ಲಿ ಮಗ ಶ್ರೀ ಎ. ಎನ್. ಸುಬ್ಬರಾಮಯ್ಯ ಅವರೊಡನೆ ವಾಸವಾಗಿದ್ದಾರೆ.

### ಅನುಬಂಧ – II

**12.2 ಪ್ರೊ. ಮೂರ್ತಿರಾಯರ ಜೀವನದ ಅನುಕ್ರಮಣಿಕೆ**

| | |
|---|---|
| 16-06-1900 | ಜನನ |
| 1922 | ಬಿ. ಎ. |

| | |
|---|---|
| 1924 | ಎಂ. ಎ. |
| 1925 | ಮದುವೆ |
| 1925–27 | ಮಹಾರಾಜಾ ಹೈಸ್ಕೂಲಿನಲ್ಲಿ ಅಧ್ಯಾಪಕ |
| 1927 | ಕಾಲೇಜ್ ಅಧ್ಯಾಪಕ |
| 1940 | ಅಸಿಸ್ಟೆಂಟ್ ಪ್ರೊಫೆಸರ್ |
| 1942 | ಶಿವಮೊಗ್ಗ ಸರ್ಕಾರಿ ಇಂಟರ್‌ಮೀಡಿಯೆಟ್ ಕಾಲೇಜಿನ ಪ್ರಿನ್ಸಿಪಾಲ್ |
| 1943 | ಮೈಸೂರು ಆಕಾಶವಾಣಿಯ ಸಹಾಯಕ ನಿರ್ದೇಶಕರು |
| 1948 | ಚಿತ್ರದುರ್ಗ ಸರ್ಕಾರಿ ಕಾಲೇಜಿನ ಪ್ರಿನ್ಸಿಪಾಲ್ |
| 1949 | ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರು |
| 30.08.1953 | ಕನ್ನಡ ಸಾಹಿತ್ಯ ಪರಿಷತ್ತಿನ 27ನೆಯ ಕಾರ್ಯದರ್ಶಿ |
| 09.05.1954 | ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮೊದಲ ನಿರ್ದೇಶಕರು |
| 1955 | ನಿವೃತ್ತಿ |
| 09.05.1954 | ಕನ್ನಡ ಸಾಹಿತ್ಯ ಪರಿಷತ್ತಿನ ಹನ್ನೊಂದನೆಯ |
| 17.05.1956 | ಅಧ್ಯಕ್ಷರು |
| 1977 | ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್ ಪ್ರಶಸ್ತಿ |
| | ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. |
| 1978 | 'ಚಿತ್ರಗಳು – ಪತ್ರಗಳು' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ |
| 1984 | ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ |
| 1984 | ಕೈವಾರದಲ್ಲಿ ನಡೆದ 56ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು |
| 1992 | 'ದೇವರು' ಕೃತಿಗೆ ಪಂಪ ಪ್ರಶಸ್ತಿ. 'ಸಾಕ್ರಟೀಸನ ಕೊನೆಯ ದಿನಗಳು' ಕೃತಿಗೆ ದೇವರಾಜ ಬಹದ್ದೂರ್ ಬಹುಮಾನ |
| 1998 | ಗೊರೂರು ಪ್ರಶಸ್ತಿ |

## ಅನುಬಂಧ – III

### 12.3 ಕೃತಿಗಳು

**1. ಮೂರ್ತಿರಾಯರ ಕೃತಿಗಳು :**

1) ಪ್ರಬಂಧ ಸಂಕಲನಗಳು (1937) ಕಾವ್ಯಾಲಯ, ಮೈಸೂರು

2) ಅಲೆಯುವ ಮನ (1957) ಕಾವ್ಯಾಲಯ, ಮೈಸೂರು

3) ಮಿನುಗು ಮಿಂಚು (1962) ಶಾರದಾ ಮಂದಿರ, ಮೈಸೂರು
4) ಸಮಗ್ರ ಲಲಿತ ಪ್ರಬಂಧಗಳು (1988) ಕ್ರೈಸ್ಟ್ ಕಾಲೇಜ್, ಬೆಂಗಳೂರು

**2. ರೂಪಾಂತರ ಕೃತಿಗಳು :**

1) ಆಷಾಢಭೂತಿ (1931) ಕಾವ್ಯಾಲಯ, ಮೈಸೂರು
2) ಸುಧೀರ ಮತ್ತು ಶೈಲಳ ಸಾಹಸ (1969) ಐ. ಬಿ. ಹೆಚ್. ಬೆಂಗಳೂರು

**3. ಭಾಷಾಂತರ ಕೃತಿಗಳು :**

1) ಸಾಕ್ರಟೀಸನ ಕೊನೆಯ ದಿನಗಳು (1934), ಮೈಸೂರು ವಿಶ್ವವಿದ್ಯಾನಿಲಯ
2) ಯೋಧನ ಪುನರಾಗಮನ (1947) ಕಾವ್ಯಾಲಯ, ಮೈಸೂರು
3) ಪಾಶ್ಚಾತ್ಯ ಸಣ್ಣ ಕಥೆಗಳು (1948) ಶಾರದಾ ಮಂದಿರ, ಮೈಸೂರು
4) ಮೋಲಿಯೇರನ ಎರಡು ನಾಟಕಗಳು (1951) ಕೇಂದ್ರ ಸಾಹಿತ್ಯ ಅಕಾಡಮಿ ದೆಹಲಿ, ಪರವಾಗಿ, ಕಾವ್ಯಾಲಯ, ಮೈಸೂರು
5) ಸಂಯುಕ್ತ ಸಂಸ್ಥಾನಗಳ ಸಾಹಿತ್ಯ (1964) ಕಾವ್ಯಾಲಯ, ಮೈಸೂರು
6) ಚಂಡಮಾರುತ (1981) ಅಪರ್ಣಾ ಪ್ರಕಾಶನ, ಮೈಸೂರು
7) ಹವಳದ ದ್ವೀಪ (1982) ಕಾವ್ಯಾಲಯ, ಮೈಸೂರು
8) ಇಂಡಿಯಾ, ಇಂದು ಮತ್ತು ನಾಳೆ (1984) ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ, ನವದೆಹಲಿ
9) The Return to the Soil
10) ಒಡತಿಗೆ ಒಕ್ಕಲುಗಿತ್ತಿಯ ವೇಷ ? ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

**4. ವಿಮರ್ಶೆ :**

1) ಗಂಡುಗೊಡಲಿ (1934) ಕರ್ನಾಟಕ ಸಂಘ, ಶಿವಮೊಗ್ಗ
2) ಷೇಕ್ಸ್‌ಪಿಯರ್ (1962) ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
3) ಮಾಸ್ತಿಯವರ ಕಥೆಗಳು (1971) ಕಾವ್ಯಾಲಯ, ಮೈಸೂರು
4) ಪೂರ್ವಸೂರಿಗಳೊಡನೆ (1977) ನ್ಯೂಯಾರ್ಕ್ ಕನ್ನಡ ಕೂಟ, ಅಮೇರಿಕ
5) ಸಾಹಿತ್ಯ ಮತ್ತು ಸತ್ಯ (1982) ಡಿ.ವಿ.ಕೆ. ಮೂರ್ತಿ, ಮೈಸೂರು
6) ವಿಮರ್ಶಾತ್ಮಕ ಪ್ರಬಂಧಗಳು (1982) ಡಿ.ವಿ.ಕೆ. ಮೂರ್ತಿ, ಮೈಸೂರು

**5. ಪ್ರವಾಸ ಕೃತಿ :**

1) ಅಪರ ವಯಸ್ಕನ ಅಮೇರಿಕ ಯಾತ್ರೆ (1979) ಶ್ರೀನಿಧಿ ಎಂಟರ್‌ಪ್ರೈಸಸ್, ಮೈಸೂರು

**6. ಜೀವನ ಚರಿತ್ರೆ :**

1) B. M. SREEKANTAIAH (1974) ಕೇಂದ್ರ ಸಾಹಿತ್ಯ ಅಕಾಡೆಮಿ, ದೆಹಲಿ
2) ಬಿ. ಎಂ. ಶ್ರೀಕಂಠಯ್ಯ (1975) ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು
3) ಚಿತ್ರಗಳು – ಪತ್ರಗಳು (1978) ಶಾರದಾ ಮಂದಿರ, ಮೈಸೂರು.

**7. ಆತ್ಮ ಚರಿತ್ರೆ :**

1) ಸಂಜೆಗಣ್ಣಿನ ಹಿನ್ನೋಟ (1990) ಡಿ.ವಿ.ಕೆ. ಮೂರ್ತಿ, ಮೈಸೂರು

**8. ವೈಚಾರಿಕ ಕೃತಿಗಳು :**

1) ದೇವರು-(1991) ಡಿ.ವಿ.ಕೆ. ಮೂರ್ತಿ, ಮೈಸೂರು
2) ಜನತಾ ಜನಾರ್ದನ (1995) ಮನೋಹರ ಗ್ರಂಥ ಮಾಲೆ, ಧಾರವಾಡ
3) ಮಹಾಭಾರತದಲ್ಲಿ ಕೇಡು ಎಂಬುದರ ಸಮಸ್ಯೆ (1997) ಡಿ.ವಿ.ಕೆ. ಮೂರ್ತಿ ಮೈಸೂರು (ಮಿಥಿಕ್ ಸೊಸೈಟಿಯಲ್ಲಿ The Problem of Evil in the Mahabharata ಎಂಬ ಉಪನ್ಯಾಸ. Ananda Bharathi (Dr. K. Krishna Moorthy Felicitation Volume) ಸಂಪುಟದಲ್ಲಿ ಪ್ರಕಟ)

**12.4 ಕನ್ನಡ ಲೇಖನಗಳು :**

1) ಶಾಸ್ತ್ರೀಯ ಕರ್ನಾಟಕ ಸಂಗೀತ ಕಛೇರಿಯಲ್ಲಿ ನಾವು ನಿರೀಕ್ಷಿಸುವುದೇನು? (08.01.1989ರಂದು ಹಾಸನದಲ್ಲಿ ಕರ್ನಾಟಕ ಗಾನ ಕಲಾ ಪರಿಷತ್ ಸಮ್ಮೇಳನದ ಅಂಗವಾಗಿ ಏರ್ಪಡಿಸಿದ್ದ ವಿಚಾರ ಸಂಕಿರಣದ ಉದ್ಘಾಟನಾ ಭಾಷಣ (ಸುಧಾ: ಯುಗಾದಿ ವಿಶೇಷಾಂಕ 1989 ಪುಟ 98–105)
2) ತೀ. ನಂ. ಶ್ರೀಯವರಿಗೆ ಪಂಪ ಪ್ರಶಸ್ತಿ ಪ್ರದಾನ ಸಂದರ್ಭದ ಭಾಷಣ
3) ಕರ್ನಾಟಕ ಲೇಖಕಿಯರ ಸಂಘ (ನಾಟಕ ರಚನಾ ಶಿಬಿರದ ಉದ್ಘಾಟನಾ ಭಾಷಣ 26.01.1990)
4) ಬೆಂಗಳೂರಿನ ಗಾನ ಕಲಾ ಪರಿಷತ್ತಿನ 21ನೆಯ ಸಂಗೀತ ಸಮ್ಮೇಳನ ಉದ್ಘಾಟನಾ ಭಾಷಣ
5) ಸಂಗೀತ ಜ್ಞಾನಮು, ಅರ್ಥವಿನಾ (ಗಾನ ಭಾರತಿ (ರಿ) ಸವಿಸಂಚಿಕೆ, 1987 ಪುಟ10–30 ಸುಧಾ : ಯುಗಾದಿ ವಿಶೇಷಾಂಕ 1987 ಪುಟ 84–97)
6) ತಾತನೂ ಹೀಗೇ ಹೇಳ್ತಿದ್ರು ಅಂತ ನಮ್ಮ ತಂದೆನೂ ಹೇಳ್ತಿದ್ರು (ಕರ್ಮವೀರ, ದೀಪಾವಳಿ ವಿಶೇಷಾಂಕ 1988 ಪುಟ 51)
7) ನಾಲ್ಮಡಿ ಕೃಷ್ಣರಾಜ ಒಡೆಯರ ಕಾಲದ ನೆನಪುಗಳು (ಉದಯವಾಣಿ, ದೀಪಾವಳಿ ವಿಶೇಷಾಂಕ ಪುಟ 115–123)
8) ಮಹಾಕಾವ್ಯಗಳನ್ನು ಕುರಿತು
9) ತೌಲನಿಕ ಕಾವ್ಯ ಮೀಮಾಂಸೆ
10) ಸಾಹಿತ್ಯ ಮತ್ತು ಸಮಾಜ (ಕರ್ನಾಟಕ ಸಾಹಿತ್ಯ ಅಕಾಡೆಮಿ ಏರ್ಪಡಿಸಿದ "ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು" ಎಂಬ ಗೋಷ್ಠಿಯ ಉದ್ಘಾಟನಾ ಭಾಷಣ ಪುಟ 119–120)
11) ಸರ್ ಎಂ. ವಿಶ್ವೇಶ್ವರಾಯ ವ್ಯಕ್ತಿ ಮತ್ತು ಐತಿಹ್ಯ
12) ಓದುಗರ ಸಂಖ್ಯೆ ಹೆಚ್ಚುತ್ತಿದೆ (ಪ್ರಜಾವಣಿ : ದೀಪಾವಳಿ ವಿಶೇಷಾಂಕ 1991 ಪುಟ 68–69)
13) ನಗೆಯ ನೆರಳಿನಲ್ಲಿ ಸತ್ಯ ಸಂದರ್ಶನ (ಪ್ರಜಾವಾಣಿ : ದೀಪಾವಳಿ ವಿಶೇಷಾಂಕ 1993 ಪುಟ 237–239)
14) ಸಾಹಿತ್ಯ ಮತ್ತು ಸತ್ಯ (ಇಂಚರ : ಜನವರಿ 1982 ಪುಟ 68.69–80)
15) ನಾನು ಚಿಂತೆ ಮಾಡುವುದೇ ಇಲ್ಲ (ಕರ್ಮವೀರ : 12.03.1995 ಪುಟ15–16)

16) ನಾನು ಮತ್ತು ಓದು (ಗ್ರಂಥಲೋಕ : ಏಪ್ರಿಲ್ 1985 ಪುಟ139)
17) ಬೆರಗು ಒಂದು ಅವಲೋಕನ (ಗ್ರಂಥಲೋಕ : ಜನವರಿ1987 ಪುಟ 63)
18) ಕೂಡಲೆ ಚಿದಂಬರಂ (ವಜ್ರಪಥ)

**12.5 ಇಂಗ್ಲೀಷ್ ಲೇಖನಗಳು**

1) B.S. Keshavan
2) Sir M. Visvesvaraya – Man and Legend
3) Dr. S. Radhakrishnan
4) Sri Masti Venkatesa Iyengar – Jnanapith Laureate
5) The Living Room
6) The Personal Stamp : The Writer
7) The Common Room
8) Do it Yourself and See
9) What Life Has Taught Me?
10) The Name of the Beloved
11) Human Dignity
12) Constructive Criticism
13) Hinduism
14) Bangalore
15) Indianness in Indian Literature
16) The Drama at the Cross Ways
17) A note of poetic Imagery in Meghaduta
18) Contemporary Literature – Tradition
19) Mysore in the Twenties – The Literary Scene

## ಅನುಬಂಧ - IV

**12.6 ಗ್ರಂಥ ಋಣ**

1. ಅನುಪಮಾ ನಿರಂಜನ 1984
ಅಂಗೈಯಲ್ಲಿ ಯೂರೋ ಅಮೆರಿಕ, ಡಿ.ವಿ.ಕೆ. ಮೂರ್ತಿ, ಮೈಸೂರು
2. ಅನಂತಮೂರ್ತಿ ಯು. ಆರ್.
3. ಅಶೋಕ ಟಿ.ಸಿ. 1981
ಹೊಸಹೆಜ್ಜೆ ಹೊಸ ಹಾದಿ, ಅಕ್ಷರ ಪ್ರಕಾಶನ, ಸಾಗರ
4. ಡಾ. ಆರ್ಮುಗಂ
ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಒಂದು ಅಧ್ಯಯನ, (ಕುವೆಂಪು ವಿಶ್ವವಿದ್ಯಾನಿಲಯದ ಡಾಕ್ಟರೇಟ್ ಪಡೆದ ಮಹಾಪ್ರಬಂಧ, ಅಪ್ರಕಟಿತ )
5. ಇನಾಂದಾರ್ ವಿ.ಎಂ. 1983
6. ಕುವೆಂಪು
ಮಲೆನಾಡಿನ ಚಿತ್ರಗಳು (1961). ಉದಯರವಿ, ಮೈಸೂರು

ನೆನಪಿನ ದೋಣಿಯಲಿ (1980), ಸಹ್ಯಾದ್ರಿ ಪ್ರಕಾಶನ, ಮೈಸೂರು
ಬಿರುಗಾಳಿ, ಉದಯ ರವಿ, ಮೈಸೂರು
ದ್ರೌಪತಿಯ ಶ್ರೀಮುಡಿ, ಉದಯ ರವಿ, ಮೈಸೂರು
7. ಕುರ್ತುಕೋಟಿ ಡಿ.ಕೆ. 1962
ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಮನೋಹರ ಗ್ರಂಥಮಾಲೆ, ಧಾರವಾಡ
8. ಕೃಷ್ಣಮೂರ್ತಿ ಕೆ.ಡಾ. 1979
ರುಚಿ, ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ
9. ಕೃಷ್ಣಮೂರ್ತಿರಾವ್ ಕೆ.ಎನ್. 1988
ಅಮೇರಿಕ ಪ್ರವಾಸದ ಅನುಭವಗಳು, ಸುವಿದ್ಯಾ ಪ್ರಕಾಶನ, ಬೆಂಗಳೂರು
10. ಕೃಷ್ಣರಾವ್ ಅ.ನ.
ಸಜೀವ ಸಾಹಿತ್ಯ (1965), ಗೀತಾ ಬುಕ್ ಹೌಸ್, ಮೈಸೂರು
ಯುಗಧರ್ಮ (1952), ಆನಂದ ಬ್ರದರ್ಸ್, ಬೆಂಗಳೂರು
11. ಕೃಷ್ಣ ಶಾಸ್ತ್ರಿ ಎಂ. ಆರ್. (1960)
ಬಂಕಿಮಚಂದ್ರ, ಪ್ರಸಾರಾಂಗ, ಮೈಸೂರು
12. ಕೃಷ್ಣಾನಂದ ಕಾಮತ್ 1969
13. ಗಣಪತಿ ಶರ್ಮ, ಕಟೀಲು, 1976
14. ಗುಂಡಪ್ಪ ಡಿ.ವಿ. 1974
ಮ್ಯಾಕ್‌ಬೆತ್, ಕಾವ್ಯಾಲಯ, ಮೈಸೂರು
ದೇವರು 1975, ಕಾವ್ಯಾಲಯ, ಮೈಸೂರು
ವಸಂತ ಕುಸುಮಾಂಜಲಿ (1951), ಕಾವ್ಯಾಲಯ, ಮೈಸೂರು
ಮುನ್ನುಡಿಗಳು (1988), ಗೋಖಲೆ ಸಾರ್ವಜನಿಕ ಸಂಸ್ಥೆ, ಬೆಂಗಳೂರು
ಹೃದಯಸಂಪನ್ನರು (1974), ಕಾವ್ಯಾಲಯ, ಮೈಸೂರು
ಸಾಹಿತ್ಯೋಪಾಸಕರು (1970), ಕಾವ್ಯಾಲಯ, ಮೈಸೂರು
15. ಜತ್ತಿ ಬಿ.ಡಿ.
ನನಗೆ ನಾನೇ ಮಾದರಿ, ಲೋಕ ಶಿಕ್ಷಣ ಟ್ರಸ್ಟ್, ಹುಬ್ಬಳ್ಳಿ
16. ಜವರೇಗೌಡ ದೇ. 1982
ಯಾತ್ರಿಕರು, ಪುರೋಗಾಮಿ, ಬೆಂಗಳೂರು
17. ತೇಜಸ್ವಿನಿ ನಿರಂಜನ 1977
ಜೂಲಿಯಸ್ ಸೀಜರ್, ಕಥಾ ಸಾಹಿತ್ಯ, ಬೆಂಗಳೂರು
18. ಧಾರವಾಡಕರ್ ರಾ.ಯ.
ನಾನು ಕಂಡ ಅಮೇರಿಕ, ಪವನ ಪ್ರಕಾಶನ, ಧಾರವಾಡ
19. ನರಸಿಂಹಸ್ವಾಮಿ ಕೆ.ಎಸ್. 1991
ಉಪವನ –ಕಾವ್ಯಾಲಯ, ಮೈಸೂರು

20. ನರಸಿಂಹಚಾರ್ ಪು.ತಿ.
ಈಚಲು ಮರದ ಕೆಳಗೆ (1949). ಕಾವ್ಯಾಲಯ, ಮೈಸೂರು
ರಥಸಪ್ತಮಿ (1945). ಕಾವ್ಯಾಲಯ, ಮೈಸೂರು
21. ನಾಗಭೂಷಣಸ್ವಾಮಿ ಒ.ಎನ್. 1933
22. ನಾಗರಾಜಪ್ಪ ಕೆ.ಜಿ. 1989
ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು -ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು
23. ನಾಗರಾಜ್ ಡಿ.ಆರ್. 1983
ಅಮೃತ ಮತ್ತು ಗರುಡ, ಪುಸ್ತಕ ಚಂದನ, ಬೆಂಗಳೂರು
24. ನಾಗೇಶ ಹೆಚ್. ವಿ. 1990
ಪ್ರಬಂಧ ಪ್ರಪಂಚ, ಡಾ. ರಾ.ಯ. ಧಾರವಾಡಕರ ಸನ್ಮಾನ ಸಮಿತಿ, ಧಾರವಾಡ
25. ನಿಸಾರ್ ಅಹಮದ್ ಕೆ.ಎಸ್. 1986
ದಶವಾರ್ಷಿಕ ಪ್ರಬಂಧಗಳು 1974-83, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
26. ನೀಳಾದೇವಿ 1985
ನಾ ಕಂಡ ಆ ಖಂಡ, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು
27. ಪರಮಶಿವಯ್ಯ ಜೀ.ಶಂ. 1988
28. ಪ್ರೊ. ಪಾಂಡುರಂಗ ಉಡುಪ 1993
ವಜ್ರಪಥ, ಕರ್ನಾಟಕ ಸಂಘ, ಶಿವಮೊಗ್ಗ
29. ಪುರುಷೋತ್ತಮ ಬಿಳಿಮಲೆ 1989
ಪ್ರಬಂಧಗಳು 1988, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
30. ಪ್ರಧಾನ್ ಗುರುದತ್ 1989
ಭಾಷಾಂತರ ಕಲೆ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು
31. ಪ್ರಭುಶಂಕರ 1978
ಅಮೇರಿಕದಲ್ಲಿ ನಾನು, ಶಾಂತಿ, ಅಪರ್ಣಾ ಪ್ರಕಾಶನ, ಮೈಸೂರು
32. ಪ್ರಹ್ಲಾದರಾವ್ ಎನ್. 1970
ಮುತ್ತಿನ ಹಾರ, ಗೀತಾ ಬುಕ್ ಹೌಸ್, ಮೈಸೂರು
33. ಬೀ. ಚಿ. 1989
ಬ್ರಹ್ಮಚಾರಿಯ ಮಗ, ಸಮಾಜ ಪುಸ್ತಕಾಲಯ, ಧಾರವಾಡ
34. ಬೇಂದ್ರೆ ದ.ರಾ. 1968
ವಿಚಾರ ಮಂಜರಿ, ಗೀತಾ ಬುಕ್ ಹೌಸ್, ಮೈಸೂರು
35. ಭಟ್ಟ 1989
ಭಾಷಾಂತರ - ನವಕರ್ನಾಟಕ ಪ್ರಕಾಶನ, ಬೆಂಗಳೂರು

36. ಭರತೇಶ 1981
ನಾನಲ್ಲದ ನಾನು, ವಾಗ್ದೇವಿ ಎಂಟರ್‌ಪ್ರೈಸಸ್, ಮೈಸೂರು
37. ಭೈರಪ್ಪ ಎಸ್.ಎಲ್.
ಕಥೆ ಮತ್ತು ಕಥಾವಸ್ತು (1969). ಸಾಹಿತ್ಯ ಭಂಡಾರ, ಹುಬ್ಬಳ್ಳಿ
ಸಾಹಿತ್ಯ ಮತ್ತು ಪ್ರತೀಕ (1978), ಸಾಹಿತ್ಯ ಭಂಡಾರ, ಬೆಂಗಳೂರು
ನಾನೇಕೆ ಬರೆಯುತ್ತೇನೆ? (1980). ಸಾಹಿತ್ಯ ಭಂಡಾರ. ಬೆಂಗಳೂರು
38. ಮಹೇಶ್ವರಪ್ಪ, 1973
ಭಾಷಾಂತರ ಪ್ರವೇಶಿಕೆ, ರವೀಂದ್ರ ಪುಸ್ತಕಾಲಯ, ಸಾಗರ
39. ಮುಗಳಿ ರಂ.ಶ್ರೀ.
ವಿಮರ್ಶೆಯ ವ್ರತ (1970) ಉಷಾ ಸಾಹಿತ್ಯ ಮಾಲೆ, ಮೈಸೂರು
ಕನ್ನಡ ಸಾಹಿತ್ಯದ ಇತಿಹಾಸ (1963), ಗೀತಾ ಬುಕ್ ಹೌಸ್, ಮೈಸೂರು
40. ಮಾಸ್ತಿ ವೆಂಕಟೇಶ ಅಯ್ಯಂಗಾರ್
ಉತ್ತರಕಾಂಡ (1981) ಜೀವನ ಕಾರ್ಯಾಲಯ, ಬೆಂಗಳೂರು
ಚಂಡಮಾರುತ (1989), ಜೀವನ ಕಾರ್ಯಾಲಯ, ಬೆಂಗಳೂರು
ಭಾವ 1, 2, 3 (1968), ಜೀವನ ಕಾರ್ಯಾಲಯ, ಬೆಂಗಳೂರು
ಪತ್ರಗಳು (1977) ಪುರೋಗಾಮಿ, ಬೆಂಗಳೂರು
41. ಮಿತ್ರ ಅ.ರಾ.
ಬಾಲ್ಕನಿಯ ಬಂಧುಗಳು (1968) ಡಿ.ವಿ.ಕೆ. ಮೂರ್ತಿ, ಮೈಸೂರು
ಲಲಿತ ಪ್ರಬಂಧಗಳು (1985), ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ
ನಿರ್ದೇಶನಾಲಯ, ಬೆಂಗಳೂರು,
42. ರಾಘವೇಂದ್ರ ಕುಲಕರ್ಣಿ 1985
ಗಾಳಿಪಟ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು
43. ರಾಜರತ್ನಂ ಜಿ.ಪಿ. 1972
ಹತ್ತು ವರುಷ, ವಿದೇಹ, ಬೆಂಗಳೂರು
44. ರಾಜೇಂದ್ರ ಚೆನ್ನಿ, 1991
ಮಾಸ್ತಿಯವರ ಕಥೆಗಳು
45. ರಾಮಚಂದ್ರಮೂರ್ತಿ ಹೆಚ್. ಆರ್.
ಮೋಲಿಯರ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
46. ರಾಮಚಂದ್ರನ್ ಸಿ.ಎನ್. 1989
ಸಾಹಿತ್ಯ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
47. ರಾಮರಾವ್ ಎಂ.
ಪಾದಯಾತ್ರೆ 1971. ಸುರುಚಿ ಪ್ರಕಾಶನ ಮೈಸೂರು
ನಮ್ಮ ಅರಣ್ಯಯಾತ್ರೆ 1957. ಸುರುಚಿ ಪ್ರಕಾಶನ, ಮೈಸೂರು

48. ರಾಮಸ್ವಾಮಿ ಎಸ್. ಆರ್. 1972
ಮಹಾಭಾರತದ ಬೆಳವಣಿಗೆ, ಕಾವ್ಯಾಲಯ, ಮೈಸೂರು
49. ರಾಮಸ್ವಾಮಿ ಅಯ್ಯಂಗಾರ್ ಗೊರೂರು.
ಬೆಟ್ಟದ ಮನೆಯಲ್ಲಿ, ಹೇಮಾವತಿ ಪ್ರಕಾಶನ, ಗೊರೂರು
ಹಳ್ಳಿಯ ಬಾಳು (1948) ಕಾವ್ಯಾಲಯ, ಮೈಸೂರು
ಹೇಮಾವತಿಯ ತೀರದಲ್ಲಿ (1966). ಶ್ರೀ ಲಕ್ಷ್ಮೀ ಬುಕ್ ಹೌಸ್, ಮೈಸೂರು
ಅಮೆರಿಕದಲ್ಲಿ ಗೊರೂರು (1979), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
50. ರಂಗಣ್ಣ ಎಸ್.ವಿ. 1971
ಶೈಲಿ 1, 2, 3, ಕಾವ್ಯಾಲಯ, ಮೈಸೂರು
51. ಡಾ. ರಂಗನಾಥ ಹೆಚ್.ಕೆ. 1983.
ಪರದೇಶಿಯಾದಾಗ, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು
52. ವರದರಾಜ್ ಜೆ. 1971
ಸಾಹಿತ್ಯ ಸಾನಿಧ್ಯ, ಉಷಾ ಸಾಹಿತ್ಯ ಮಾಲೆ, ಮೈಸೂರು
53. ವಸುದೇವ ಭೂಪಾಲ 1984
ದೇವರು ಸತ್ತ, ಶಶಿ ಪ್ರಕಾಶನ, ಬೆಂಗಳೂರು
54. ವಸಂತಕುಮಾರ, ಮಳಲಿ
ಪ್ರಬಂಧ ಸಾಹಿತ್ಯ (1978), ಪ್ರಸಾರಾಂಗ, ಮೈಸೂರು
ಮೂರ್ತಿರಾವ್ ಎ.ಎಸ್. (1984), ಜನಮಿತ್ರ ಪ್ರಕಾಶನ, ಹಾಸನ
55. ವಾಸುದೇವ ಕಾರಂತ, ಕೋಟ 1972
ದೇವರನ್ನು ನಂಬುವ, ಕೋಟ ವಾಸುದೇವ ಕಾರಂತ, ಮಂಗಳೂರು
56. ವಾಸುದೇವಾಚಾರ್ಯ ಕೆ. 1978
ನೆನಪುಗಳು 1978 ಕಾವ್ಯಾಲಯ, ಮೈಸೂರು
57. ವ್ಯಾಸರಾಯ ಬಲ್ಲಾಳ, 1987
ನಾನೊಬ್ಬ ಭಾರತೀಯ ಪ್ರವಾಸಿ, ಗೀತಾ ಬುಕ್ ಹೌಸ್, ಮೈಸೂರು
58. ಶಿವರಾಮ ಕಾರಂತ ಕೆ.
ಬಾಳ್ವೆಯೇ ಬೆಳಕು (1993), ಎಸ್.ಬಿ.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು
ಜೂಲಿಯಸ್ ಸೀಜರ್ (1984), ಸಾಹಿತ್ಯ ಭಂಡಾರ, ಹುಬ್ಬಳ್ಳಿ
ಪಾತಾಳಕ್ಕೆ ಪಯಣ (1973), ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು
59. ಶಿವರುದ್ರಪ್ಪ ಜಿ. ಎಸ್.
ವಿಮರ್ಶೆಯ ದಾರಿ (1982), ಪ್ರಸಾರಾಂಗ, ಬೆಂಗಳೂರು
ಹಿನ್ನೆಲೆ (1982), ಜಿ. ಕಲ್ಲಯ್ಯ ಅಂಡ್ ಸನ್, ಬೆಂಗಳೂರು
ವಿಮರ್ಶೆಯ ಪೂರ್ವ ಪಶ್ಚಿಮ (1977) ತಂ. ನಂ. ಸ್ಮಾರಕ ಗ್ರಂಥಮಾಲೆ, ಮೈಸೂರು
ಪರಿಶೀಲನ (1972), ಉಷಾ ಸಾಹಿತ್ಯ ಮಾಲೆ, ಮೈಸೂರು

60. ಶೇಷಗಿರಿರಾವ್ ಎಲ್. ಎಸ್.
ಇಂಗ್ಲೀಷ್ ಭಾಷೆಯಲ್ಲಿ ಆಧುನಿಕ ಸಾಹಿತ್ಯ ವಿಮರ್ಶೆ, ಪ್ರಸಾರಾಂಗ, ಮೈಸೂರು,
ಕನ್ನಡ ಭಾರತಿ (1984) ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
ಹೊಸಗನ್ನಡ ಸಾಹಿತ್ಯ (1988) ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು
ಪ್ರಿಯ ಕನ್ನಡ ಬಂಧು (1990), ಸುವಿದ್ಯಾ ಪ್ರಕಾಶನ, ಬೆಂಗಳೂರು.
61. ಶೇಷಗಿರಿರಾವ್ ಡಿ.ವಿ. 1983
ಪದ್ಮಭೂಷಣ ಡಿ.ವಿ., ಐ.ಬಿ.ಹೆಚ್ ಪ್ರಕಾಶನ, ಬೆಂಗಳೂರು
62. ಶ್ರೀಕಂಠಯ್ಯ ತೀ. ನಂ.
ನಂಟರು, ಪದವಿಪೂರ್ವ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು.
63. ಶ್ರೀನಿವಾಸರಾವ್ ಎಸ್. ವಿ. 1989
ಕನ್ನಡ ಸಾಹಿತಿ ದರ್ಶನ
64. ಸೀತಾರಾಮಯ್ಯ ವಿ.
ಮಹನೀಯರು (1970), ಶ್ರೀ ಸರಸ್ವತಿ ಪ್ರಕಾಶನ, ಬೆಂಗಳೂರು
65. ಸೀತಾರಾಮಯ್ಯ ವಿ.
ಬೆಳದಿಂಗಳು (1994), ನೇತ್ರಾ ಪ್ರಕಾಶನ, ಬೆಂಗಳೂರು
ಸೀಕರಣೆ (1971), ಗೀತಾ ಬುಕ್ ಹೌಸ್, ಮೈಸೂರು
66. ಸೀತಾರಾಮಯ್ಯ ಎಂ. ವಿ.
ಬಾಳಿನ ಬುತ್ತಿ (1957) ಸಾಹಿತ್ಯ ಮಂದಿರ, ಬೆಂಗಳೂರು
ಕನ್ನಡ ಜೀವನ ಚರಿತ್ರೆ (1973) ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು
ಹೊಸಗನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು (1958)
ರಾಘವ ಪ್ರಕಾಶನ, ಬೆಂಗಳೂರು
67. ಸುಜಾತ ಸೆಟ್ಟಿ ಹೆಚ್. ಎಸ್. 1981
ಎಂ. ಎಸ್. ಪುಟ್ಟಣ್ಣ - ಒಂದು ಅಧ್ಯಯನ, ಐ. ಬಿ. ಹೆಚ್. ಬೆಂಗಳೂರು
68. ಡಾ. ಸುಬ್ಬರಾಯಾಚಾರ್ ಉ.ಕಾ. 1967
ಸಹೃದಯ ಸ್ಪಂದನ, ಸುರುಚಿ ಪ್ರಕಾಶನ, ಮೈಸೂರು
ಅಮೇರಿಕಾದ ಅನುಭವ 1985, ಜಿ. ಸಾವಿತ್ರಿ, ಮೈಸೂರು
69. ಸ್ವಾಮಿ ಬಿ.ಜಿ.ಎಲ್.
ಪಂಚಕಲಶ ಗೋಪುರ (1979), ಕಾವ್ಯಾಲಯ, ಮೈಸೂರು
ಅಮೇರಿಕಾದಲ್ಲಿ ನಾನು (1970), ಕಾವ್ಯಾಲಯ, ಮೈಸೂರು
ಕನ್ನಡ ವಿಶ್ವಕೋಶ -ಭಾಗ 3
ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ
**ಪತ್ರಿಕೆಗಳು :-**
ಇಂಚರ, ಉದಯವಾಣಿ
ಕನ್ನಡಪ್ರಭ, ಕರ್ಮವೀರ



ಕಸ್ತೂರಿ, ಗ್ರಂಥಲೋಕ
ತರಂಗ, ತುಷಾರ
ದಿಕ್ಸೂಚಿ, ಪುಸ್ತಕ ಪ್ರಪಂಚ
ಪ್ರಜಾಮತ, ಸುಧಾ
ಸಂಕೇತ, ಪ್ರಜಾವಾಣಿ
ಡೆಕ್ಕನ್ ಹೆರಾಲ್ಡ್, ಇಂಡಿಯನ್ ಎಕ್ಸ್‌ಪ್ರೆಸ್

1. Charles Lamb – 1924
The Essays of Elia & The Last Essays of Elia.
Oxford University Press, London
2. Church H.J. – 1913
The Trial and Death of Socrates.
Macmillan & Co., Ltd., London
3. Essie Chamberlain – 1935
Essays Old and New
Harcourt, Brace & Company, New York
4. Lockitt 1983
The Art of the Essayist
Orient Longman Ltd., New Delhi.
5. Louise and Aylmer Mande – 1954
Twentythree Tales by Leo Tolstoy
Oxford University Press, London
6. Oliver Goldsmith – 1981
Complete Works
Macmillan & Co., London
7. Peter Alexander (Ed) – 1964
The Complete Works of William Shakespeare.
The English Language Book Society, London.

# ಹಲವರ, ಕೆಲವು ಅಭಿಪ್ರಾಯಗಳು

(1) ಈ ತಲೆಮಾರಿನವರಿಗೆ ಶ್ರೀ (ಈಗ ಡಾ.) ಮೂರ್ತಿರಾಯರ ವಿಷಯ ಹೆಚ್ಚಾಗಿ ತಿಳಿದಿರಲಾರದು. "ಹಗಲುಗನಸುಗಳು" "ಅಲೆಯುವ ಮನ" ಮುಂತಾದ ಪ್ರಬಂಧ ಸಂಕಲನಗಳಿಂದಲೂ, "ಆಷಾಢಭೂತಿ "ನಾಟಕದಿಂದಲೂ ಕನ್ನಡ ಸಾಹಿತ್ಯ ಲೋಕದಲ್ಲಿ ಗಟ್ಟಿಯಾದ ಮನೆ ಕಟ್ಟಿಕೊಂಡರು ಅವರು. ಇಂಗ್ಲೀಷ್ ಪ್ರಾಧ್ಯಾಪಕರಾಗಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷ ಸೇವೆ ಸಲ್ಲಿಸಿದವರು. ಇಂಗ್ಲೀಷ್, ಕನ್ನಡಗಳಲ್ಲಿ ಪ್ರಕಾಂಡ ಪಾಂಡಿತ್ಯ ರಸಿಕರು. ಒಂದು ಗಂಟೆ ಅವರ ಜೊತೆ ಮಾತನಾಡಿದರೆ ಸ್ವಲ್ಪವೂ ಆಯಾಸವಿಲ್ಲದೆ ಹತ್ತಾರು ಪುಸ್ತಕಗಳನ್ನು ಓದಿದ ಅನುಭವವಾಗುತ್ತದೆ. ಹರಟೆ ಹೊಡೆಯಲು ಅಂಥ ವ್ಯಕ್ತಿ ಇನ್ನೊಬ್ಬರು ಸಿಕ್ಕುವುದು ಕಷ್ಟ.

**ಡಾ. ಪ್ರಭುಶಂಕರ**

"ಅಮೇರಿಕದಲ್ಲಿ ನಾನು, ಶಾಂತಿ" (1978) ಪುಟ 22

(2) Perhaps after the private talk together, A.N. Murthi Rao could join us for tea. It would certainly be fine to see him again.

**Chadburne Gilpatric**

(ಅಮೇರಿಕ ರಾಕ್‌ಫೆಲ್ಲರ್ ಫೌಂಡೇಷನ್ನಿನ ಪ್ರಮುಖರು)

ಮಾಸ್ತಿಯವರಿಗೆ ಬರೆದ ಪತ್ರದಲ್ಲಿ. "ಪತ್ರಗಳು"

ಮಾಸ್ತಿ ವೆಂಕಟೇಶ ಅಯ್ಯಂಗಾರ್ (1977) (ಪುಟ 108)

(3) ನಿಜಜೀವನದಲ್ಲಿ ಒಂದು ಪರಿಪಕ್ವ ಚೇತನ, ಇದನ್ನು ಅನುಭವಿಸಿದ ರೀತಿ ಮನುಷ್ಯ ಸ್ವಭಾವದ ಓರೆಕೋರೆಗಳನ್ನು ಕ್ಷುದ್ರತನವನ್ನು ಕಂಡೂ ಅವುಗಳ ಆಘಾತವನ್ನು ಅನುಭವಿಸಿಯೂ ಮನುಷ್ಯನಲ್ಲಿ ಗೌರವನ್ನು ಅಭಿಮಾನವನ್ನು ಉಳಿಸಿಕೊಂಡ, ಸಂಪ್ರದಾಯಕ್ಕೆ ಗಂಟುಬೀಳದಿದ್ದರೂ ಪರಂಪರೆಯ ಮಹತ್ವವನ್ನು ಗುರುತಿಸುವ, ಜೀವನವನ್ನು ಗಂಭೀರವಾಗಿ ಕಂಡು ಚಿಂತಿಸುವಾಗಲೂ ಹಾಸ್ಯಪ್ರವೃತ್ತಿ ತುಂಟತನಗಳನ್ನು ಕಳೆದುಕೊಳ್ಳದ, ಬುದ್ಧಿಜೀವಿಯಾದರೂ ಅಂತಃಕರಣದ ಪಾತ್ರವನ್ನು ಅರಿಯುವ, ಪ್ಲೇಟೋ, ಅರಿಸ್ಟಾಟಲ್, ವ್ಯಾಸ, ವಾಲ್ಮೀಕಿಗಳನ್ನು ಪ್ರೀತಿಯಿಂದ ಅಧ್ಯಯನ ಮಾಡಿದಂತೆಯೇ ಷೇಕ್ಸ್‌ಪಿಯರ್, ಟಾಲ್‌ಸ್ಟಾಯ್, ಇಬ್ಬರನ್ನೂ ಅಧ್ಯಯನ ಮಾಡಬಲ್ಲ, 'ಬೈಟರ್ ದ್ಯಾನ್ ಎ ಥೌಸಂಡ್ ಸನ್ಸ್' 'ಸ್ಮಾಲ್ ಈಸ್ ಬ್ಯೂಟಿಫುಲ್', 'ಫ್ಯೂಚರ್ ಷಾಕ್' ಗಳಿಗೆ ಸ್ಪಂದಿಸಬಲ್ಲ ಜೀವನದ ಅನುಭವ ಇಲ್ಲಿ ನಿರೂಪಣೆ ಪಡೆದಿದೆ.

**ಪ್ರೊ. ಎಲ್. ಎಸ್. ಶೇಷಗಿರಿ ರಾವ್**

(ಅಪರವಯಸ್ಕನ ಅಮೇರಿಕ ಯಾತ್ರೆ ಕುರಿತು)

ಸುಧಾ ನವೆಂಬರ್ 02,1980 ಪುಟ 45

(4) ಸಜ್ಜನಿಕೆ, ಸಂಸ್ಕೃತಿ, ಸಹಿಷ್ಣುತೆ, ಮಿತಭಾಷಿತ್ವ, ಪ್ರಿಯಭಾಷಿತ್ವ, ಶುದ್ಧಸ್ನೇಹ, ಆಳವಾದ ಪಾಂಡಿತ್ಯ, ಪಾಂಡಿತ್ಯದ ಅಪ್ರದರ್ಶನ, ರಸಿಕತೆ, ಆಳವಾದ ಆಲೋಚನೆ, ವಿಚಾರ ಪ್ರಖರತೆ, ಹರಿತವಾದ ಬುದ್ಧಿಶಕ್ತಿ, ಹಾಸ್ಯಪ್ರವೃತ್ತಿ ಇವುಗಳಲ್ಲಿ ಯಾವುದಕ್ಕಾದರೂ ಅಥವಾ ಎಲ್ಲಕ್ಕೂ ವ್ಯಾಖ್ಯಾನ, ನಿದರ್ಶನ ಬೇಕು ಎನಿಸಿದರೆ ಶ್ರೀ ಎ. ಎನ್. ಮೂರ್ತಿರಾಯರನ್ನು ತೋರಿಸಿದರೆ ಆಯಿತು. ಮೂರ್ತಿರಾಯರು ಈ ಗುಣಗಳನ್ನೆಲ್ಲಾ ಬೆಳೆಸಿಕೊಂಡಿದ್ದು ಸಾಧನೆಯಿಂದ, ಶ್ರಮದಿಂದ, ಆಳವಾದ ಅಧ್ಯಯನದಿಂದ.

**ಡಾ. ಪ್ರಭುಶಂಕರ**

ಪ್ರಜಾವಾಣಿ : ತಾ 18.03.1984. ಪುಟ 1. (ಸಾಪ್ತಾಹಿಕ ಪುರವಣಿ) ಕಾಲಂ 1-2

(5) ನಿಸರ್ಗ ಸೌಂದರ್ಯವನ್ನೋ, ಮನಸೂರೆಗೊಳ್ಳುವ ಸಂಗೀತವನ್ನೋ ಅನುಭವಿಸುವುದೆಂದರೆ ಹೊಸದೊಂದು ಲೋಕವನ್ನು ಪ್ರವೇಶಿಸಿದಂತೆ. ಆ ಸೌಂದರ್ಯ, ಆ ಭಾವತೀವ್ರತೆ ಬಹುಕಾಲ ನೆನಪಿನಲ್ಲುಳಿದು 'ಮಿನುಗುಮಿಂಚ'ನಂತೆ ಆಗಾಗ ಮನಸ್ಸಿಗೆ ಮುದ ಕೊಡುತ್ತದೆ. ಸಾಹಿತ್ಯ ಕ್ಷೇತ್ರದಲ್ಲಿ ಓದುಗರನ್ನು ಇಂಥ ಹೊರಲೋಕಕ್ಕೆ ಕರೆದೊಯ್ದು ಸಂತೋಷ ಕೊಡುವಂಥ ಕೃತಿಗಳನ್ನು ರಚಿಸಿದವರಲ್ಲಿ ಡಾ . ಅಕ್ಕಿಹೆಬ್ಬಾಳು ನರಸಿಂಹಮೂರ್ತಿರಾಯರದು ಬಹು ದೊಡ್ಡ ಹೆಸರು. ಅವರ ಕೃತಿಗಳ ರೂಪ ಬಂಧಗಳು ಒಂದನ್ನೊಂದು ಸಂಧಿಸುತ್ತ, ಒಂದು ಇನ್ನೊಂದರೊಳಗೆ ಹಾಸುಹೊಕ್ಕಾಗುತ್ತಾ ಸಾಗುವ ಕ್ರಮದಲ್ಲಿ ಪರಿಪಕ್ವಗೊಂಡ ಸುಸಂಸ್ಕೃತ ಮನಸ್ಸೊಂದು ತೆರೆದುಕೊಳ್ಳುತ್ತದೆ. ಓದುಗನನ್ನು ತಾದಾತ್ಮ್ಯಗೊಳಿಸುವ ಈ ಉದಾರ ಮನಸ್ಸಿನಲ್ಲಿ ಪ್ರಾಮಾಣಿಕತೆಯ, ಸದಭಿರುಚಿಯ, ಜೀವನಾನುಭವದ ಒಂದು ಸಮೃದ್ಧ ಲೋಕವೇ ಅಡಗಿದೆ.

ಅವರ ಕೃತಿಗಳನ್ನು, ಅದರಲ್ಲೂ ಅವರ ಲಲಿತ ಪ್ರಬಂಧಗಳನ್ನು ಓದಿದವರು ಕನ್ನಡ ಭಾಷೆಗೆ ಇಷ್ಟೆಲ್ಲ ಸೊಗಸಿದೆಯೆ ಎಂದು ವಿಸ್ಮಯ ಪಡದೆ ಇರಲಾರರು. ಶುಚಿ ರುಚಿಯಾದ ಮನೋಧರ್ಮದಿಂದ ಕೂಡಿದ್ದ, ಔಚಿತ್ಯದ ಎಲ್ಲೆಯನ್ನು ಮೀರದೆ ಅತ್ಯಂತ ಲವಲವಿಕೆಯಿಂದ ಸಾಗುವ ಅವರ ಗದ್ಯಕ್ಕೆ ಅಪೂರ್ವವಾದ ಲಯವಿದೆ, ಅಸಾಧಾರಣ ಕಾಂತಿಯಿದೆ. ಅದು ಉದ್ವೇಗಗೊಂಡ ಮನಸ್ಸನ್ನು ಸಮಾಧಾನ ಸ್ಥಿತಿಗೆ ತರುವಂಥ, ಚೈತ್ರ ಋತುವಿನ ಉಲ್ಲಾಸವನ್ನು ಕೆರಳಿಸುವಂಥ ಗದ್ಯ, ಒಂದು ಅರ್ಥದಲ್ಲಿ ಉತ್ತಮ ಕಾವ್ಯವೇ ಅವರ ಗದ್ಯ. ಕನ್ನಡದಲ್ಲಿ ಬರೆಯಬಯಸುವವರು ಎ. ಆರ್. ಕೃಷ್ಣಶಾಸ್ತ್ರಿಗಳ ಮತ್ತು ಮೂರ್ತಿರಾಯರ ಬರಹಗಳನ್ನು ಒಮ್ಮೆಯಾದರೂ ಓದಬೇಕು, ಎಂದು ಹಿಂದೊಮ್ಮೆ ಡಿ. ವಿ. ಜಿ. ಯವರು ಹೇಳಿದ್ದು ಉತ್ಪ್ರೇಕ್ಷೆಯ ಮಾತಲ್ಲ.

**ಶ್ರೀ ಎಸ್. ದಿವಾಕರ**

ಸುಧಾ : 26.02.1984 ಪುಟ 12-13

(6) ಇಡೀ ಸಮ್ಮೇಳನದಲ್ಲಿ ಬಹುಜನರನ್ನು, ಅದರಲ್ಲೂ ಸಾಹಿತಿಗಳನ್ನು ಆಕರ್ಷಿಸಿದವರು ಡಾ. ಎ. ಎನ್. ಮೂರ್ತಿರಾಯರು. ಕಾರಣ ಬೇರೆಯದೇ. ಸ್ವತಃ ಸಮ್ಮೇಳನಾಧ್ಯಕ್ಷರಾಗಿದ್ದರೂ, ಅತ್ಯಂತ ಸರಳವಾಗಿ ಎಲ್ಲೆಂದರೆ ಅಲ್ಲಿ ಯಾವ ತಾರತಮ್ಯವೂ ಇಲ್ಲದೆ ಕುಳಿತು ಬಿಡುತ್ತಿದ್ದರು. ಮೂರು ದಿನ ಅವರ ಪೋಷಾಕು ಸಾದಾ ಪಂಚೆ, ಒಂದು ಬಿಳೀ ಷರಟು. ಮೊದಲ ದಿನ ಉದ್ಘಾಟನಾ ಸಮಾರಂಭದ

ನಂತರ ಅವರು ಯಾರ ಜೊತೆಯೂ ಇಲ್ಲದೆ ಭೋಜನ ಶಾಲೆಗೆ ಬಂದು, ಸಾಮಾನ್ಯರಲ್ಲಿ ಸಾಮಾನ್ಯರಂತೆ ತಮ್ಮ ಸರದಿಗಾಗಿ ಬಿಸಿಲಿನಲ್ಲಿ ನಿಂತಿದ್ದನ್ನು ಕಂಡು ಊಟ ಮಾಡುತ್ತಿದ್ದ ವರಿಗೂ ಸಂಕೋಚವಾಯಿತು. ಬಹುಶಃ ಅಷ್ಟೆಲ್ಲ ಮಂದಿ ಸಚಿವರನ್ನು ಬೀಳ್ಕೊಡುವ ತರಾತುರಿಯಲ್ಲಿದ್ದ ಸ್ವಾಗತ ಸಮಿತಿಯವರಿಗೆ ಸಮ್ಮೇಳನಾಧ್ಯಕ್ಷರನ್ನು ಉಪಚರಿಸಲು ಸಮಯವಿದ್ದಿರಲಿಕ್ಕಿಲ್ಲ. ಆ 'ಕ್ಲೀಷಾಪ್ರವೀಣರಿಂದ' ತಪ್ಪಿಸಿಕೊಂಡೆನಲ್ಲ ಎಂಬ ಸಂತೋಷವೇ ಮೂರ್ತಿರಾಯರ ಮುಖದಲ್ಲಿ ಕುಣಿಯುತ್ತಿದ್ದಂತಿತ್ತು.

ಶ್ರೀ ಎಸ್. ದಿವಾಕರ

ಸುಧಾ : 15.04.1984. ಪುಟ 24. ಕಾಲಂ 02

(7) ಸೊಗಸಾಗಿ ಓದಿಸಿಕೊಂಡು, ಮನದಲ್ಲುಳಿಯುವ ಅವರ ಇಂಗ್ಲೀಷ್ ಅನುವಾದಗಳು, ಲಲಿತ ಪ್ರಬಂಧ ಸಂಗ್ರಹಗಳು, ಪ್ರವಾಸ ಅನುಭವಗಳು, ಈಗ ಕನ್ನಡ ಸಾಹಿತ್ಯದಲ್ಲೊಂದು ಮೇಲ್ಮಟ್ಟದ ಸ್ಥಾನ ಗಳಿಸಿದೆ.

ಶ್ರೀ ಚಿರಂಜೀವಿ

ತರಂಗ : 25.03.1984. ಪುಟ 25. ಕಾಲಂ 02

(8) ಉತ್ತಮ ಭಾಷಣಕಾರರು, ಭಾಷಾಂತರಕಾರರು ಎಲ್ಲಕ್ಕೂ ಮಿಗಿಲಾಗಿ ಕನ್ನಡದ ಶ್ರೇಷ್ಠ ಪ್ರಬಂಧಕಾರರು. ನಮ್ಮೆಲ್ಲನೇಕರಿಗೆ ಪ್ರಬಂಧ ಎಂಬ ಸಾಹಿತ್ಯ ಪ್ರಕಾರದ ರುಚಿ ತೋರಿಸಿದವರೆ ಮೂರ್ತಿರಾಯರು. ಅವರ ಪ್ರಬಂಧಗಳನ್ನು ಸವಿಯುವುದಾಗಲಿ, ಸವಿದು ಮೆಲುಕು ಹಾಕುವುದಾಗಲಿ, ಬದುಕಿನ ಅಪ್ಪಟ ಸಂತೋಷಗಳೆನ್ನಬೇಕು.

ಶ್ರೀ ವಿಹಂಗಮ

ಉದಯವಾಣಿ : 22.03.1984. ಪುಟ 2 ಕಾಲಂ 1

(9) ಸಾಹಿತ್ಯ ಸಮ್ಮೇಳನಾಧ್ಯಕ್ಷ ಶ್ರೀ ಎ. ಎನ್. ಮೂರ್ತಿರಾಯರು ಇತ್ತಕಡೆಗೂ (ಚಳುವಳಿಗಳ ಕಡೆಗೆ) ದೀರ್ಘಚಿಂತನೆ ಹರಿಸಿ, ಮಂಡಿಸಿದ ಅಭಿಪ್ರಾಯಗಳು ಇಲ್ಲಿ ಗಮನಾರ್ಹವಾಗಿವೆ.

ಸಂಪಾದಕೀಯ

ಪ್ರಜಾಮತ : 08. 04. 1984 ಪುಟ 3 ಕಾಲಂ 02

(10) ಮೂರ್ತಿರಾಯರು ತಮ್ಮ ಮಿತಿಯನ್ನು ಅರಿತಿರುವ ಬರಹಗಾರರು. ಹಾಗಾಗಿ ಎಲ್ಲೂ ಅವರು ಪ್ರಯತ್ನಪೂರ್ವಕ ಸೀಮೋಲ್ಲಂಘನಕ್ಕೆ ಹಾಕುವವರಲ್ಲ. ಅವರಲ್ಲಿ ಎಲ್ಲವನ್ನೂ ತಮ್ಮ ಸ್ವಂತ ಅನುಭವದ, ಅಧ್ಯಯನದ ಚೌಕಟ್ಟಿಗೆ ಅನ್ವಯಿಸಿಕೊಂಡು ಬರೆಯುವ ಪ್ರಾಮಾಣಿಕತೆಯಿದೆ.

ಶ್ರೀ T. P. ಅಶೋಕ

ಪ್ರಜಾವಾಣಿ : (ಸಾಪ್ತಾಹಿಕ ಪುರವಣಿ)

(11) ಮೂರ್ತಿರಾಯರು (ಇಬ್ಬರು ವಿದೇಶಿ ಸೊಸೆಯರನ್ನು ಪಡೆದುಕೊಂಡವರು) ಹೆಚ್ಚು ಕಾಲ ವಿರಾಮವಾಗಿ ವಿದೇಶ ಕಂಡವರು. ಬೇರೆ ಬೇರೆ ಮತಗಳನ್ನು ಹಿಂದೂ ಮತದೊಂದಿಗೆ ತುಲನಾತ್ಮಕವಾಗಿ ಚರ್ಚಿಸಲು ಕಣಕ್ಕಿಳಿಯಬಲ್ಲಂಥವರು. ಅಮೇರಿಕಾ ದಲ್ಲಿ ಇವರು ಕಾಣುವ ಜನ, ಬದುಕು, ರೀತಿ, ನೀತಿಗಳು ಅತ್ಯಂತ ಮೇಲ್‌ಸ್ತರದ್ದು.

ಅವರ ಪ್ರವಾಸ ಕೃತಿಗಳಲ್ಲಿ ಗಂಭೀರ ಬದುಕಿನ ಆಳವಾದ ನೋಟ ಅತಿ ಗಂಭೀರವಾಗಿ ಕಾಣಿಸುತ್ತದೆ.

ಶ್ರೀ ಚಿರಂಜೀವಿ

ತುಷಾರ : (ತುಂತುರು ಅಂಕಣ) ಆಗಸ್ಟ್ 1989 ಪುಟ 165 ಕಾಲಂ 2

(12) ತಮ್ಮ ಪ್ರಬಂಧಗಳಿಂದ ಕನ್ನಡದ ಅಗ್ರಮಾನ್ಯ ಲೇಖಕರಾಗಿರುವ ಎ. ಎಸ್. ಮೂರ್ತಿರಾವ್ ಪ್ರವಾಸ ಸಾಹಿತ್ಯಕ್ಕೆ ಲಲಿತ ಪ್ರಬಂಧದ ಚೆಲುವನ್ನು ತಮ್ಮ ಉತ್ಕೃಷ್ಟ ಕೃತಿ 'ಅಪರವಯಸ್ಕನ ಅಮೇರಿಕಾ ಯಾತ್ರೆ'ಯಲ್ಲಿ ನೀಡಿದ್ದಾರೆ. ಮೂರ್ತಿರಾಯರು ತಮ್ಮ ಇಡೀ ವ್ಯಕ್ತಿತ್ವವನ್ನು ಅಖಂಡವಾಗಿ ತೊಡಗಿಸಿ ಬರೆಯುವ ಲೇಖಕ. ಅವರ ಅಪಾರವಾದ ಓದು, ವಿಸ್ತಾರವಾದ ಅನುಭವ, ಆರೋಗ್ಯ ಪೂರ್ಣವಾದ ನಿಲುವು, ಧ್ಯಾನಶೀಲವೆನ್ನಿಸುವ ಬರವಣಿಗೆ, ಎಲ್ಲವೂ ಹದವಾಗಿ ಕೂಡಿ 'ಅಪರವಯಸ್ಕನ ಅಮೇರಿಕಾ ಯಾತ್ರೆ'ಯಂತಹ ಉತ್ತಮ ಕೃತಿ ಸಿದ್ಧವಾಗಿದೆ. ಮೂರ್ತಿರಾಯರು ಆರ್. ಎಂ. ಬ್ಯಾಲೆಂಟೈನ್‌ನ ಪ್ರವಾಸಕೃತಿ CORAL ISLAND ಎಂಬುದನ್ನು 'ಹವಳದ ದ್ವೀಪ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆಂಬುದನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು.

ಶ್ರೀ ನರಹಳ್ಳಿ ಬಾಲಸುಬ್ರಹ್ಮಣ್ಯ

ತುಷಾರ : 'ಕನ್ನಡ ಸಾಹಿತ್ಯವಾಹಿನಿ' 8 ಆಗಸ್ಟ್ 1989 ಪುಟ10 ಕಾಲಂ 1-2

(13) ಕನ್ನಡದ ಲಲಿತ ಪ್ರಬಂಧಕಾರರಲ್ಲಿ ತೀ. ನಂ. ಶ್ರೀ ಮತ್ತು ಎ. ಎಸ್. ಮೂರ್ತಿರಾವ್ ಅವರ ಸ್ಥಾನ ವಿಶಿಷ್ಟವಾದುದು. ಸಂಖ್ಯೆ ಮತ್ತು ಗುಣ ಎರಡು ದೃಷ್ಟಿಯಿಂದಲೂ ಈ ಇಬ್ಬರ ಪ್ರಬಂಧಗಳು ಈ ಸಾಹಿತ್ಯ ಪ್ರಕಾರಕ್ಕೆ ಉತ್ತಮ ಕೊಡುಗೆಯಾಗಿದೆ. ಅಷ್ಟೇ ಅಲ್ಲ, ಈ ಪ್ರಬಂಧಗಳು ಬೇರೆಯವರಿಗೆ ಮಾರ್ಗದರ್ಶಕವಾಗಿಯೂ ಇವೆ.

ಉದಯವಾಣಿ : ದೀಪಾವಳಿ 1986 ಪುಟ 139. ಕಾಲಂ 1

(14) ಪ್ರೊ. ಎ.ಎಸ್. ಮೂರ್ತಿರಾಯರ ಹೆಸರು ಕಿವಿಗೆ ಬಿದ್ದೊಡನೆಯೇ ಅವರ ಲಲಿತ ಪ್ರಬಂಧಗಳ ಕಂಪು ಮೂಗಿಗೆ ತಟ್ಟುತ್ತದೆ. ಕನ್ನಡ ಸಾಹಿತ್ಯದ ಸಣ್ಣದೊಂದು ಕ್ಷೇತ್ರದಲ್ಲಿ ಕೈಯಾಡಿಸಿ ಮೂರ್ತಿರಾಯರಂತೆ ದೊಡ್ಡ ಹೆಸರನ್ನು ಗಳಿಸಿದವರು ವಿರಳವೆಂದರೂ ಸಲ್ಲುತ್ತದೆ............. ಲಘು ಪ್ರಬಂಧಕಾರರ ಪಂಕ್ತಿಯಲ್ಲಿ ಮೂರ್ತಿರಾಯರಿಗೇ ಮೊದಲ ಮಣೆ ಎಂಬುದನ್ನು ನಿರ್ವಿವಾದವಾಗಿ ನೆಲೆಗೊಳಿಸಿದೆ.

ಶ್ರೀ ಎಂ. ರಾಮಚಂದ್ರ

ಉದಯವಾಣಿ : (ಸಾಪ್ತಾಹಿಕ)17.06.1990 ಪುಟ 01.ಕಾಲಂ 1

(15) ಪ್ರೊಫೆಸರ್ ಎ.ಎಸ್.(ಅಕ್ಕಿ ಹೆಬ್ಬಾಳು ನರಸಿಂಹ)ಮೂರ್ತಿರಾಯರು ನಮ್ಮ ಹಿರಿಯ ಲೇಖಕರಲ್ಲಿ ಒಬ್ಬರು. ಅವರದೇ ಆದ ಅನೇಕ ಗುಣಗಳಿಂದ ಅವರೊಬ್ಬ ವಿಶಿಷ್ಟ ವ್ಯಕ್ತಿಯಾಗಿದ್ದಾರೆ. ತಮ್ಮ ವಯಸ್ಸು, ಜ್ಞಾನ, ಕೀರ್ತಿ, ಅನುಭವಗಳನ್ನೆಲ್ಲ ನಿರಾಡಂಬರವಾಗಿ ತಮ್ಮ ಹೆಗಲುಗಳ ಮೇಲೆ ಕೂರಿಸಿಕೊಂಡಿರುವ ಅವರೊಡನೆ ಸಮಯ ಕಳೆಯುವುದೇ ಒಂದು ಅನುಭವ, ಶಿಕ್ಷಣ ಮೇಲಾಗಿ ಸಂಸ್ಕಾರ ಅವರಲ್ಲಿ ಅತೃಪ್ತಿ ಎಂಬುದೇ ಇಲ್ಲ. ಮತ್ತೊಬ್ಬರನ್ನು ಕುರಿತು ಲಘುವಾಗಿ ಮಾತಾಡುವುದಿಲ್ಲ. ಅವರ

ಅನುಭವಗಳನ್ನು ಕೇಳುತ್ತಿದ್ದರೆ ಸಮಯ ಸರಿಯುವುದೇ ತಿಳಿಯುವುದಿಲ್ಲ. ಸವ್ಯರಾದ ಹಾಸ್ಯದಿಂದ ಅವರೊಂದಿಗಿನ ಸಂಭಾಷಣೆ ಮೆರಗು ಪಡೆಯುತ್ತದೆ. ಮ್ಯಾಥ್ಯೂ ಅರ್ನಾಲ್ಡ್ ಹೇಳಿದ ಬೆಳಕು ಮತ್ತು ಮಾಧುರ್ಯಗಳ ಸಂಗಮ ಅವರು.

**ಡಾ. ಹಾ.ಮಾ. ನಾಯಕ್**
ಸಂಕೇತ : 01.04.1990. ಪುಟ 59

(16) ಪ್ರೊ. ಮೂರ್ತಿರಾಯರು ಕನ್ನಡ ಸಾಹಿತ್ಯದ ಹಲವು ಪ್ರಕಾರಗಳಿಗೆ ಸಾಹಿತ್ಯ ವಿಮರ್ಶೆ, ಪ್ರವಾಸ ಸಾಹಿತ್ಯ, ಪತ್ರ ಸಾಹಿತ್ಯ, ಅನುವಾದ ಹೀಗೆ ಹಲವು ಪ್ರಕಾರಗಳಿಗೆ ಮೌಲಿಕವಾದ ಕೊಡುಗೆಯನ್ನು ಸಲ್ಲಿಸಿದ್ದರೂ, ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅವರನ್ನು ನೆನೆಯುವುದು, ಪ್ರಬಂಧ ಸಾಹಿತ್ಯಕ್ಕೆ ಅಂದರೆ ಲಲಿತ ಪ್ರಬಂಧವೆಂಬ ಪ್ರಕಾರಕ್ಕೆ ಅವರು ಗಳಿಸಿಕೊಟ್ಟ ಸ್ಥಾನ ಮಾನಗಳಿಗಾಗಿ, ಸಣ್ಣ ಕತೆಗೆ ಮಾಸ್ತಿಯವರು ಹೇಗೋ, ಹಾಗೆ ಲಲಿತ ಪ್ರಬಂಧಕ್ಕೆ ಮೂರ್ತಿರಾಯರು. ಲಲಿತ ಪ್ರಬಂಧಕ್ಕೆ ಒಂದು ವಿಶಿಷ್ಟವಾದ ಚಹರೆಯನ್ನೂ ಘನತೆಯನ್ನೂ ತಂದುಕೊಟ್ಟು ಅದಕ್ಕೊಂದು ಪರಂಪರೆಯನ್ನು ತಂದುಕೊಟ್ಟು ಒಂದು ವಿಶಿಷ್ಟ ಪರಂಪರೆಯನ್ನೇ ನಿರ್ಮಿಸಿದವರು ಮೂರ್ತಿರಾಯರು. ನವೋದಯ ಸಾಹಿತ್ಯ ಸಂದರ್ಭದ ರಭಸ ಉತ್ಸಾಹ ಆವೇಶಗಳ ಕಾಲದಲ್ಲಿ ಕವಿತೆ, ಸಣ್ಣಕತೆ, ಕಾದಂಬರಿಗಳಂಥ ಆಕರ್ಷಕವೂ, ಬಹು ಜನಪ್ರಿಯವೂ ಆದ ಪ್ರಕಾರಗಳ ಸೆಳೆತದಿಂದ ತಪ್ಪಿಸಿಕೊಂಡು ಲಲಿತಪ್ರಬಂಧದಂತಹ ಪ್ರಕಾರಕ್ಕೆ ಒಲಿದದ್ದು ಮೂರ್ತಿರಾಯರ ಮನೋಧರ್ಮಕ್ಕೆ ತಕ್ಕುದಾಗಿಯೇ ಇದೆ.

**ಡಾ. ಜಿ.ಎಸ್. ಶಿವರುದ್ರಪ್ಪನವರು**
ಸುಧಾ : 21.10.1990. ಪುಟ 30-31

(17) ಮೂರ್ತಿರಾಯರು ತಮ್ಮ ಇಡೀ ಬದುಕನ್ನು ಒಂದು ಲಲಿತ ಪ್ರಬಂಧ ದಂತೆಯೇ ಕಳೆದಿರುವಂತಿದೆ. ಲಲಿತಪ್ರಬಂಧಕಾರನಿಗೆ ತನ್ನ ವ್ಯಕ್ತಿತ್ವವು ಮುಖ್ಯ. ಜೀವನದ ನಿರಂತರ ಗತಿಯು ಮುಖ್ಯ.

**ಶ್ರೀ ಕೆ. ಸತ್ಯನಾರಾಯಣ**
ಕನ್ನಡ ಪ್ರಭ : ನವಂಬರ್ 1990

(18).............ಅವರ ವಿಮರ್ಶೆಯಲ್ಲಿ ವಿಚಾರ ವಿಶ್ಲೇಷಣೆಗಳು ತುಂಬಿದ್ದರೂ ಅದು ಪಾಂಡಿತ್ಯದ ಭಾರದಿಂದ ಕುಸಿಯುವುದಿಲ್ಲ. ಆಧುನಿಕ ಕನ್ನಡ ಸಾಹಿತ್ಯಕ್ಕೆ ಅತ್ಯಗತ್ಯವಾದ ಸ್ಫೂರ್ತಿ ಪ್ರೇರಣೆ ಪೋಷಣೆಗಳನ್ನು ಪ್ರತ್ಯಕ್ಷವಾಗಿ ಪರೋಕ್ಷವಾಗಿ ನೀಡಿದವರಲ್ಲಿ ಮೂರ್ತಿರಾಯರೊಬ್ಬರು.

ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಿ.ಲಿಟ್ ಪದವಿ ನೀಡಿದ
ಸಂದರ್ಭದಲ್ಲಿ 1977

(19) ಪ್ರೊ. ಎ.ಎನ್. ಮೂರ್ತಿರಾಯರು ಬರೆದಿರುವ ಗ್ರಂಥಗಳು ಹಲವಾರು. ಕನ್ನಡದ ಶ್ರೇಷ್ಠ ಲಲಿತ ಪ್ರಬಂಧಕಾರರಲ್ಲಿ ಅವರೊಬ್ಬರು. ಇವರ ಪ್ರಬಂಧಗಳು ಸಣ್ಣಕತೆಗಳಂತೆ ಕಂಗೊಳಿಸುತ್ತವೆ. ಭಾವಗೀತೆಯಂತೆ ಬೆಳಗುತ್ತವೆ. ಹಾಸ್ಯ ವ್ಯಂಗ್ಯಗಳಿಂದಲೂ ಕೂಡಿವೆ. ಅವುಗಳಲ್ಲಿಯ ಕಾವು ಬೆಳಕನ್ನು ನೀಡುತ್ತದೆ.

**ಶ್ರೀ ಎಚ್ಚೆಸ್ಕೆ**
ಸುಧಾ : 05.08.1990 ಪುಟ 71. ಕಾಲಂ 4

(20) ಅವರ ಬರವಣಿಗೆ ಗಾತ್ರದಲ್ಲಿ ಕಡಿಮೆಯಾದರೂ ಆತ್ಮೀಯ ಪ್ರಬಂಧದ ಸಹಜ ಗಂಭೀರ ಸ್ವರೂಪಕ್ಕೆ ಅದರ ಬಹುಭಾಗ ಮಾದರಿಯಾಗಿದೆ. ಅದರಲ್ಲಿ ಜೀವನದ ಸತ್ ಪ್ರವೃತ್ತಿಗಳಿಂದ, ಕಾವ್ಯ ಶಾಸ್ತ್ರ ವಿನೋದದಿಂದ ಪರಿಪಕ್ವಗೊಂಡ ವ್ಯಕ್ತಿತ್ವದ ಗುರುತು ಹೆಜ್ಜೆ ಹೆಜ್ಜೆಗೂ ಮೂಡಿರುತ್ತದೆ. ಅವರ ಶೈಲಿ ಸಂಸ್ಕಾರಯುತವಾದರೂ ಸಹಜತೆಯನ್ನು ಕಳೆದುಕೊಂಡಿಲ್ಲ. ನಿರ್ಮಲವಾದ ನೀರಿನಿಂದ ತನ್ನ ತಳವನ್ನು ತೋರಿಸುತ್ತ ಶಾಂತವಾಗಿ ಹರಿಯುವ ಹೊಳೆಯಂತೆ ಅದು ಸಾಗುತ್ತದೆ. ಅದಕ್ಕೆ ಆಳ ಕಡಿಮೆ ಇರಬಹುದು. ಆದರೆ ಅದರ ನೈರ್ಮಲ್ಯ ಪ್ರಸನ್ನತೆಗಳು ಮನಸೆಳೆಯುತ್ತವೆ. ಮಾರ್ಮಿಕವಾದ ವಿಡಂಬನೆ ಅದರಲ್ಲಿ ಆಗಾಗ ಬಂದರೂ ಲಘುವಾದ ಹಾಸ್ಯದಲ್ಲಿ ಅದರ ಕೊಂಕು ಕರಗುತ್ತದೆ.

**ಡಾ. ರಂ.ಶ್ರೀ. ಮುಗಳಿ**

ಕನ್ನಡ ಸಾಹಿತ್ಯದ ಇತಿಹಾಸ : 1963 ಪುಟ 271

(21)...............ಕನ್ನಡ ಭಾಷಕರಾಗಿದ್ದ ಶ್ರೀ ಎಸ್.ವಿ. ಪರಮೇಶ್ವರಭಟ್ಟರು ನಮಗೆ ನಿಮ್ಮ ಹಗಲುಗನಸುಗಳು ಸಂಗ್ರಹದಿಂದ ಪ್ರಬಂಧಗಳನ್ನು ಓದಿ ಗೌರಜ್ಜಿಯ ದರ್ಶನ ಮಾಡಿಸಿದ್ದರು..........ಇದರಿಂದಾಗಿ ನಿಮ್ಮ ಕುರಿತು ಆಸಕ್ತಿ ಕುತೂಹಲಗಳು ಬೆಳೆಯಲಿಕ್ಕೂ ಆರಂಭವಾದದ್ದು ಆವಾಗಲೇ. ಪರಕಾಯ ಪ್ರವೇಶ ವಿದ್ಯೆ ನಮಗೆ ತಿಳಿಯದು. ಅದು ಗೊತ್ತಿದ್ದಿದ್ದರೆ ಆಗ ನಿಮ್ಮ ಬರಹ ಮತ್ತು ಶ್ರೀ ಭಟ್ಟರ ವರ್ಣನೆಗಳು ಯಾರ್ಯಾರ ಮನಸ್ಸಿನಲ್ಲಿ ಎಂತೆಂತಹ ಚಿತ್ರ ಬಿಡಿಸಿದೆ, ಎಂಥೆಲ್ಲ ಭಾವನೆಗಳನ್ನು ಅರಳಿಸಿವೆ ಕೆರಳಿಸಿವೆ ಎಂಬುದನ್ನು ತಿಳಿಯಬಹುದಿತ್ತು........ಶ್ರೀ ಭಟ್ಟರೇನೋ `ಸುತ್ತಲೂ ಸೌಂದರ್ಯವೇನೋ ತುಂಬಿದೆ. ನೋಡಲು ಕಣ್ಣು ಬೇಕು, ಅನುಭವಿಸಲು ತಕ್ಕ ಮನೋಭಾವ ಬೇಕು`, ಎಂಬ ನಿಮ್ಮ ವಾಕ್ಯಗಳನ್ನು ಮತ್ತೆ ಮತ್ತೆ ಸಾರಿ ಹೇಳುತ್ತಿದ್ದರು.

**ಖಜಾನೆ ಶ್ರೀ ಕೃಷ್ಣಮೂರ್ತಿ**

ಕಸ್ತೂರಿ : ಡಿಸೆಂಬರ್ 1990 ಪುಟ 98-99

(22) ತಮ್ಮ ಎಂಬತ್ತೇಳನೆಯ ವರ್ಷದಲ್ಲಿರುವ ಮೂರ್ತಿರಾಯರು ಈ ಕೃತಿಯಲ್ಲಿ (ಸಂಜೆಗಣ್ಣಿನ ಹಿನ್ನೋಟ) ತಮಗೆ ಬುದ್ಧಿ ತಿಳಿದ ಕಾಲದಿಂದ ಇದುವರೆಗಿನ ಸುಮಾರು ಎಂಟು ದಶಕಗಳ ವಿದ್ಯಮಾನಗಳನ್ನು ಇಂದಿನ ದೃಷ್ಟಿಯಿಂದ ನೋಡಿದ್ದಾರೆ. ಈ ಕೃತಿಗೆ ಆತ್ಮಕಥೆಯ ಚೌಕಟ್ಟಿದೆ. ಚೌಕಟ್ಟಿನೊಳಗಿರುವ ವಸ್ತುವೆಂದರೆ, ಒಂದು ಕಡೆ ಸಂಪ್ರದಾಯ, ಮತ್ತೊಂದು ಕಡೆ ಕಾಲಪುರುಷನ ಚುಚಿತ್ತ, ಮಗದೊಂದು ಕಡೆ ಮಾನವನ ಚುಚಿತ್ತ - ಈ ಮೂರೂ ಅಂಶಗಳ ಕ್ರಿಯೆ ಪ್ರತಿಕ್ರಿಯೆಗಳನ್ನು ಕುರಿತ ವ್ಯಾಖ್ಯಾನ.

ದೇಶ, ಜಾತಿ, ಮತ, ವರ್ಗ, ವೃತ್ತಿ ಇವೆಲ್ಲವನ್ನೂ ಬದಿಗಿಟ್ಟು ಬದುಕನ್ನು ಕೇವಲ ಮಾನವ ಮಾತ್ರದವನಾದವನ ವಸ್ತುನಿಷ್ಠ ದೃಷ್ಟಿಯಿಂದ ನೋಡುವುದೇ ಲೇಖಕರ ಉದ್ದೇಶ. ಇದು ಈ ಕೃತಿಯ ಹೆಸರಿನ ಪೂರ್ವಾರ್ಧದಿಂದ (ಶ್ರೀಸಾಮಾನ್ಯ ಉವಾಚ) ಧ್ವನಿತವಾಗುತ್ತದೆ.

**ಪುಸ್ತಕ ಪ್ರಪಂಚ**

ಏಪ್ರಿಲ್, 1987 ಪುಟ 63

(23) ತಮ್ಮ ಕೃತಿಗಳ ಮೂಲಕ ಕನ್ನಡ ಸಾಹಿತ್ಯವನ್ನು ನಿಜವಾಗಿಯೂ ಶ್ರೀಮಂತಗೊಳಿಸಿರುವ ಹಿರಿಯರಾದ ಎ.ಎನ್. ಮೂರ್ತಿರಾಯರು "ಪುಸ್ತಕ ಪ್ರಪಂಚ"ಕ್ಕಾಗಿ ಶ್ರೀ ಸಾಮಾನ್ಯ ಉವಾಚ "ಸಂಜೆಗಣ್ಣಿನ ಹಿನ್ನೋಟ" ಅನ್ನುವ ಆತ್ಮಕಥಾನಕವನ್ನು ಬರೆದುಕೊಟ್ಟಿದ್ದಾರೆ.

**ಪುಸ್ತಕ ಪ್ರಪಂಚ : ಏಪ್ರಿಲ್ 1987 ಪು: ಸಂಪಾದಕೀಯ**

(24) ಅನುಭವ ಹಾಗೂ ವಿಚಾರಗಳೆರಡೂ ಸಮಪ್ರಮಾಣದಲ್ಲಿ ಹದವಾಗಿ ಬೆರೆತ ಆರೋಗ್ಯ ಪೂರ್ಣ ಮನಸ್ಸಿನ ಅಭಿವ್ಯಕ್ತಿಯಾದ "ಸಂಜೆಗಣ್ಣಿನ ಹಿನ್ನೋಟ" ಎ.ಎನ್. ಮೂರ್ತಿರಾಯರ ಈ ವರ್ಷದ ಒಂದು ಮುಖ್ಯ ಕೃತಿ.

**ನರಹಳ್ಳಿ ಬಾಲಸುಬ್ರಹ್ಮಣ್ಯ**

1990 ಸಾಹಿತ್ಯ ಸಮೃದ್ಧಿ ವರ್ಷ : ಪ್ರಜಾವಾಣಿ.27.01.1991 ಪುಟ 5. ಕಾಲಂ 3-4

(25 ) ತಮ್ಮ ಪ್ರಬಂಧಗಳಿಂದ ಕನ್ನಡ ಪ್ರಬಂಧ ಸಾಹಿತ್ಯಕ್ಕೆ ಒಂದು ಗುಣವನ್ನೂ ಗರಿಮೆಯನ್ನೂ ದೊರಕಿಸಿಕೊಟ್ಟು, ಪ್ರಬಂಧಕಾರರೆಂದೇ ಹೆಸರಾದ ಹಿರಿಯ ಲೇಖಕರು ಪ್ರೊ. ಎ.ಎನ್. ಮೂರ್ತಿರಾವ್. ಗುಣದಲ್ಲಿ ಗಾತ್ರದಲ್ಲಿ ಅವರ ಪ್ರಬಂಧ ಸಾಹಿತ್ಯಕೃಷಿ ಸಮೃದ್ಧವಾದುದು. ಅವರ ಗದ್ಯದ ಲಾಲಿತ್ಯವಂತೂ ಹೊಸಗನ್ನಡದ ಎಲ್ಲ ಚೆಲುವನ್ನೂ ಸೂರೆಮಾಡಿರುವಂಥದ್ದು. ಆ ಗದ್ಯದಲ್ಲಿ ಚಿಂತನೆ, ಭಾವವಿಲಾಸ,ಅಕ್ಷುಲ್ಲಕ ಹಾಸ್ಯ ಮತ್ತು ವಿಸ್ತಾರವಾದ ವ್ಯಾಸಂಗದಿಂದ ಪಕ್ವಗೊಂಡ ಮನಸ್ಸು ಎಲ್ಲವೂ ಕಾಣುತ್ತದೆ.

**ಶ್ರೀ ಎಚ್.ಎಸ್. ವೆಂಕಟೇಶಮೂರ್ತಿ**

ಸುಧಾ : 10.02.1991 ಪುಟ 56. ಕಾಲಂ 02

(26) ಆನರ್ಸ್ ತರಗತಿಗಳಿಗೆ ಪಾಠ ಹೇಳುವಾಗ ನನ್ನ ಅನುಮಾನಗಳನ್ನು....... ಪ್ರೊಫೆಸರ್ ಮೂರ್ತಿರಾವ್...... ಮುಂತಾದವರನ್ನು ಕೇಳಿ ಪರಿಹಾರ ಮಾಡಿಕೊಂಡಿದ್ದೇನೆ. ಆದರೆ ತೊಂಬತ್ತು ವಯಸ್ಸಿನ ಪ್ರೊ. ಎ.ಎನ್. ಮೂರ್ತಿರಾಯರ ಪ್ರೀತಿ ವಿಶ್ವಾಸಗಳಿಂದ ಹಿಡಿದು ಇಪ್ಪತ್ತು ಮೂವತ್ತು ವಯಸ್ಸಿನ ನನ್ನ ವಿದ್ಯಾರ್ಥಿ - ವಿದ್ಯಾರ್ಥಿನಿಯರು ಮತ್ತಿತರ ಕಿರಿಯರವರೆಗೆ ಹಲವರು ತೋರುವ ಪ್ರೀತಿಗೌರವಗಳು ನಾನು ತತ್ತರಿಸಿದಾಗ ನನಗೊಂದು ಆಧಾರ ನೀಡುವ ಶಕ್ತಿಯಾಗಿವೆ.

**ಪ್ರೊ. ಎಲ್.ಎಸ್. ಶೇಷಗಿರಿರಾಯರು**

ತುಷಾರ : ಫೆಬ್ರವರಿ 1991 ಪುಟ 14-17

(27) ತೊಂಭತ್ತೆರಡು ವರುಷ ವಯಸ್ಸಿನ ಈ ಹಿರಿಯ ಲೇಖಕರು ಬದುಕು ಬರಹಗಳ ಬಗ್ಗೆ ಇನ್ನೂ ಇಷ್ಟು ಉತ್ಸಾಹದಿಂದ ಇರುವುದು, ಯಾವುದೇ ಬಗೆಯ ಸಿನಿಕತನ, ಕಹಿ ಬೆಳೆಸಿಕೊಳ್ಳದೆ ಮನಸ್ಸಿನ ಆರೋಗ್ಯ ಉಲ್ಲಾಸಗಳನ್ನು ಉಳಿಸಿ ಕೊಂಡಿರುವುದು ತುಂಬಾ ಸಂತೋಷದ ಸಂಗತಿ.....ಮೂರ್ತಿರಾಯರ ಸರಳ ಸುಂದರ ಗದ್ಯ, ಬೆಚ್ಚನೆಯ ಸ್ನೇಹಶೀಲತೆಗಳಿಗೆ ಮುಪ್ಪಿಲ್ಲ...ಮೂರ್ತಿರಾಯರದು ಶಿಕ್ಷಣದಿಂದ ಸಂಸ್ಕಾರಗೊಂಡ ಮನಸ್ಸು. ಓರ್ವ ಸಂವೇದನಾಶೀಲ ವಿದ್ಯಾವಂತನ ಗ್ರಹಿಕೆಗಳು ಅವರವು. ಅವರ ಗ್ರಹಿಕೆಗಳಲ್ಲಿ ಅಸ್ಪಷ್ಟತೆ ಇಲ್ಲ. ಆದರೆ ತೀವ್ರತೆ ಕಡಿಮೆ. ಆದರೆ ಮೂರ್ತಿರಾಯರು ಕನ್ನಡದ ಅತ್ಯುತ್ತಮ ಗದ್ಯ ಬರಹಗಾರರಲ್ಲಿ ಒಬ್ಬರು ಎಂಬುದನ್ನು ಮರೆಯದಿರೋಣ.

**ಶ್ರೀ ಟಿ.ಪಿ. ಅಶೋಕ**

ಮಯೂರ : ಜುಲೈ 1990 ಪುಟ 12-15

(28) ಈ ಪ್ರಕಾರದಲ್ಲಿ (ಪ್ರಬಂಧ) ಅತ್ಯಂತ ಶ್ರೇಷ್ಠ ಸಾಧನೆ ಎ. ಎನ್. ಮೂರ್ತಿರಾಯರದು. (ಹಗಲುಗನಸುಗಳು -1937, ಅಲೆಯುವ ಮನ 1957, ಮಿನುಗುಮಿಂಚು1962), ಎರಡನೆಯ ಸಂಗ್ರಹದಲ್ಲಿರುವ ಕೆಲವು ಪ್ರಬಂಧಗಳು ಪ್ರಪಂಚದ ಅತ್ಯಂತ ಶ್ರೇಷ್ಠ ಪ್ರಬಂಧಗಳ ಪಂಕ್ತಿಯಲ್ಲಿ ನಿಲ್ಲಬಲ್ಲವು. ಮನುಷ್ಯ ಸ್ವಭಾವದಲ್ಲಿ ಆಸಕ್ತಿ, ಇತರರನ್ನು ತೂಗಿ ನೋಡುವಾಗ ಅನುಕಂಪ, ಸಹನೆ ಒಳ್ಳೆಯದು. ಎಲ್ಲಿದ್ದರೂ ಕಾಣುವ ಕಣ್ಣು, ಒಂದು ವಿಷಯವನ್ನು ಅಥವಾ ಸನ್ನಿವೇಶವನ್ನು ಬೇರೆ ಬೇರೆ ದೃಷ್ಟಿಗಳಿಂದ ಕಾಣುವ ಶಕ್ತಿ, ಚಿಂತನೆ, ಹಾಸ್ಯಗಳ ಅನನ್ಯ ಹೆಣಿಗೆ, (ಮುಖ್ಯವಾಗಿ ಎರಡನೆಯ ಸಂಗ್ರಹದಲ್ಲಿ) ಸಾಮಾನ್ಯ ಸಂಗತಿಯಿಂದ ಪ್ರಾರಂಭವಾಗಿ, ಸಹಜವಾಗಿ ಆಳವಾದ ಚಿಂತನೆಯತ್ತ ಪ್ರಬಂಧ ಸಾಗುವ ವೈಖರಿ ಇವು. ಲವಲವಿಕೆಯ ಪ್ರಸನ್ನವಾದ ಶೈಲಿಯೊಡನೆ ಸೇರಿ, ಮೂರ್ತಿರಾಯರನ್ನು ಈ ಕ್ಷೇತ್ರದಲ್ಲಿ ಅದ್ವಿತೀಯರನ್ನಾಗಿ ಮಾಡಿವೆ.

**ಪ್ರೊ. ಎಲ್. ಎಸ್. ಶೇಷಗಿರಿರಾಯರು**

ಹೊಸಗನ್ನಡ ಸಾಹಿತ್ಯ : 1988 ಪುಟ 296

(29) ವ್ಯಾಪಕವಾದ ಅಧ್ಯಯನ, ದಟ್ಟವಾದ ಅನುಭವ, ಸೂಕ್ಷ್ಮ ಆಲೋಚನಾ ಸಾಮರ್ಥ್ಯ, ಒಳ್ಳೆಯ ವಿಶ್ಲೇಷಣಾ ಶಕ್ತಿ, ಅನನ್ಯವಾದ ಮಾನವೀಯತೆ, ಉತ್ತಮ ವರ್ಣನಾ ಕಲೆ ಮತ್ತು ಮೋಹಕ ಕಲ್ಪನೆಯಿಂದ ಕೂಡಿರುವ ಇವರ ಪ್ರಬಂಧಗಳು ಕನ್ನಡ ಸಾಹಿತ್ಯದಲ್ಲಿ ಯಾವತ್ತೂ ಅಳಿಯದ ಆಸ್ತಿ.

**ಮಳಲಿ ವಸಂತಕುಮಾರ**

ಪ್ರಬಂಧ ಸಾಹಿತ್ಯ : 1978. ಪುಟ 44-45

(30) ಇವರ (ಮೂರ್ತಿರಾಯರ) ಪ್ರಬಂಧಗಳನ್ನು ಓದುತ್ತಿರುವಾಗ ಪುಷ್ಪಭರಿತ ವಾದ ಉದ್ಯಾನವನದಲ್ಲಿ ಪಚ್ಚೆಯ ಹಸಿರುಹುಲ್ಲಿನ ಮೇಲೆ ನಡೆಯುತ್ತ ಬಗೆ ಬಗೆಯ ಹೂಗಳ ಪರಿಮಳಗಳನ್ನು ಆಘ್ರಾಣಿಸುವ ಮನೋಭಾವ ಉಂಟಾಗುತ್ತದೆ. ಇವರ ಪ್ರಬಂಧ ಗಳಲ್ಲಿ ಒಂದು ಅಪೂರ್ವವಾದ ಅಚ್ಚುಕಟ್ಟುತನ ಸರ್ವಾಂಗ ಸಂಪೂರ್ಣತೆ ಇದೆ.

**ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್**

"ಹೊಸಗನ್ನಡ ಪ್ರಬಂಧ ಸಂಕಲನ"

(31) ಇವರದು (ಶ್ರೀ ಎ. ಎನ್. ಮೂರ್ತಿರಾಯರದು) ಬಹುಮುಖಿ ಪ್ರತಿಭೆ. ನಾಟಕ, ಪ್ರಬಂಧ, ಕತೆ, ಕಾದಂಬರಿ, ಪ್ರವಾಸ ಸಾಹಿತ್ಯ, ವಿಡಂಬನ ಸಾಹಿತ್ಯ ಮೊದಲಾಗಿ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಸಂಪನ್ನಗೊಳಿಸಿದ್ದಾರೆ. ಪ್ರಬಂಧ ಸಾಹಿತ್ಯಕ್ಷೇತ್ರ ದಲ್ಲಂತೂ ಇವರು ಅಗ್ರಗಣ್ಯರು. ಇವರ ಪ್ರಬಂಧಗಳಲ್ಲಿ ಕಾವ್ಯದ 'ಹೊಳಪು', ಕಥೆಯ 'ಕುತೂಹಲ', ನಾಟಕದ 'ಪಾತ್ರದೃಷ್ಟಿ', ಮಾತಿನಲ್ಲಿ ಹಾಸ್ಯದ 'ಮಧುಲೇಪನ', ನಿರೂಪಣೆಯಲ್ಲಿ 'ಚಮತ್ಕಾರ' 'ವಿಶೇಷ ಪ್ರಬಂಧ ಧ್ವನಿ' ಕಾಣುತ್ತದೆ. ಅವರ ಮಾತಿನಲ್ಲಿ 'ಪ್ರಬಂಧದ ವಿಶ್ಲೇಷಣೆ ಕೇಳಿ, ಎದುರಿನ ಕುರ್ಚಿಯಲ್ಲಿ ಪ್ರತಿನಿಧಿಯಾಗಿ ಆಪ್ತಮಿತ್ರ ನೊಬ್ಬ ಕುಳಿತಿದ್ದಾನೆಂದು ಭಾವಿಸಿಕೊಂಡು ಮಾತನಾಡುತ್ತಾನೆ. ಪ್ರಬಂಧಕಾರ ಅನ್ನುತ್ತಾರೆ.

**ಕನ್ನಡ ಸಾಹಿತಿ ದರ್ಶನ : ಶ್ರೀ S. V. ಶ್ರೀನಿವಾಸರಾವ್**

(1989) ಪುಟ 386-387

(32) ತರ್ಕಶಕ್ತಿ ಅಂತಃಕರಣಗಳ ಅಸಾಧಾರಣ ಸಮತೋಲನ, ವಿಸ್ತಾರವಾದ ಓದಿಗೆ ಬೆರೆತ ವಿವೇಚನೆ, ಎಲ್ಲೂ ಔಚಿತ್ಯ ತಪ್ಪದ ಸದಭಿರುಚಿ, ನಯವಾದ ಹಾಸ್ಯ, ಅತ್ಯಂತ ಉದಾರವಾದ, ಆದರೆ ಸದಾ ಎಚ್ಚೆತ್ತಿರುವ ನೈತಿಕಪ್ರಜ್ಞೆ, ಹೊಳೆಯುವ ಲವಲವಿಕೆಯ ಶೈಲಿ ಎಲ್ಲ ಸೇರಿ ಮೂರ್ತಿರಾಯರ ಪ್ರಬಂಧಗಳು ಆಧುನಿಕ ಕನ್ನಡದ ಸಾಹಿತ್ಯದ ನಿಧಿಗಳಲ್ಲಿ ಒಂದಾಗಿದೆ. ಮೂರ್ತಿರಾಯರು ನಮ್ಮ ಪ್ರಪಂಚವನ್ನು ಪುನಸ್ಸೃಷ್ಟಿ ಮಾಡಿಬಿಡುತ್ತಾರೆ. ಭಾವ ಬುದ್ಧಿಗಳು ಇನ್ನೂ ಸೂಕ್ಷ್ಮವಾಗಿ ಅದನ್ನು ಗ್ರಹಿಸುವಂತೆ, ಅದಕ್ಕೆ ಸ್ಪಂದಿಸುವಂತೆ ಪುನಸ್ಸೃಷ್ಟಿ ಮಾಡಿಬಿಡುತ್ತಾರೆ. ಮೂರ್ತಿರಾಯರ ಶ್ರೇಷ್ಠ ಪ್ರಬಂಧಗಳ ಮತ್ತೊಂದು ವೈಶಿಷ್ಟ್ಯವೆಂದರೆ, ಒಂದೇ ಭಾವನೆಯೇ ವಿಸ್ತರಿಸಿಕೊಳ್ಳದೆ, ಬದುಕಿನ ಹಲವು ಅನುಭವಗಳೂ ಅವು ಪ್ರಚೋದಿಸುವ ಭಾವನೆಗಳೂ ಹೆಣೆದುಕೊಳ್ಳುತ್ತ ಪ್ರಬಂಧ ಸಾಗುತ್ತದೆ. ಅವರಿಗೆ ಸಹಜವಾದ ಶುದ್ಧ ಅಭಿರುಚಿಯ ಹಾಸ್ಯ ಸಾಮಾನ್ಯವಾಗಿ ಪ್ರತಿ ಪ್ರಬಂಧದಲ್ಲೂ ಹರಿಯುತ್ತದೆ. ನಗುವನ್ನು ತರುವುದಷ್ಟೇ ಅಲ್ಲದೆ, ಸನ್ನಿವೇಶವನ್ನು ಹೊಸ ಬೆಳಕಿನಲ್ಲಿ ಕಾಣಿಸುತ್ತದೆ, ಅದರ ಹೊಸ ಮಗ್ಗುಲನ್ನೂ ಕಾಣಿಸುತ್ತದೆ. ಆವರೆ ಅವರ ಶ್ರೇಷ್ಠ ಪ್ರಬಂಧ ಮನಸ್ಸಿನ ಕಣ್ಣನ್ನು ಅತ್ತ ಇತ್ತ ಹರಿಸುತ್ತ ಬಾಳಿನ ಸಾಧ್ಯತೆಗಳನ್ನು ಗುರುತಿಸುತ್ತ ಸಾಗುತ್ತದೆ. ಆದ್ದರಿಂದಲೇ ಹಲವಾರು ಭಾವನೆಗಳು, ಪ್ರತಿಕ್ರಿಯೆಗಳು ಉಕ್ಕುತ್ತವೆ.

**ಪ್ರೊ. ಎಲ್. ಎಸ್. ಶೇಷಗಿರಿರಾವ್**

(ಕನ್ನಡ ಸಾಹಿತ್ಯದಲ್ಲಿ ಹಿಂದುಳಿದುಬಿಟ್ಟಿರುವ ಸೊಗಸಾದ ಲಲಿತಪ್ರಬಂಧ ಪ್ರಕಾರ-
ತುಷಾರ : ಏಪ್ರಿಲ್ 1988 ಪುಟ 77-78-79

(33) ನಮ್ಮ ಅತ್ಯಂತ ಹಿರಿಯ ಹಾಗೂ ಗೌರವಾನ್ವಿತ ಲೇಖಕರಲ್ಲಿ ಪ್ರೊಫೆಸರ್ ಎ. ಎನ್. ಮೂರ್ತಿರಾಯರು ಒಬ್ಬರು. ಲಲಿತಪ್ರಬಂಧ ಪ್ರಕಾರದ ರೂವಾರಿಗಳಲ್ಲಿಯೂ ಅವರು ಪ್ರಮುಖರು. ವೈಚಾರಿಕ ಸಂಗತಿಗಳನ್ನು ಅವರ ಹಾಗೆ ಲಲಿತವಾಗಿ, ಸ್ಪಷ್ಟವಾಗಿ, ಖಚಿತವಾಗಿ, ಆಕರ್ಷಕವಾಗಿ ಬರೆಯುವವರು ಬಹಳ ಕಡಿಮೆ. ಮೂರ್ತಿರಾಯರು ಯಾವುದನ್ನೂ ಗಟ್ಟಿಯಾಗಿ ಹೇಳುವವರಲ್ಲ. ಇನ್ನೊಬ್ಬರ ಮನಸ್ಸಿಗೆ ಎಲ್ಲಿ ನೋವಾಗುತ್ತದೋ ಎಂದು ಸಂಕೋಚಪಡುತ್ತ ಮಾತನಾಡುವವರು, ಬರೆಯುವವರು.

**ಡಾ. ಹಾ.ಮಾ. ನಾಯಕ್**

(ದೇವರು ಬೇಕು, ಆದರೆ ಅವನಿಲ್ಲ!) –
ತರಂಗ : 05.01.1992. ಪುಟ 66

(34) ನಾನು ಕಂಡಿರುವವರಲ್ಲಿ ಅತ್ಯಂತ ಪರಿಪಕ್ವತೆಯನ್ನು ಸಾಧಿಸಿರುವ ಹಿರಿಯರಲ್ಲಿ ಒಬ್ಬರು.

**ಪ್ರೊ. ಎಲ್. ಎಸ್. ಶೇಷಗಿರಿರಾವ್**

ಮಯೂರ : ಮಾರ್ಚ್ 1992. ಪುಟ 13

(35) ಪರಸ್ಪರ ತುಂಬಾ ಭಿನ್ನವಾಗಿ ಆದರೆ ತಮ್ಮ ಧಿಟ್ಟವಾಗಿ ಚಿಂತಿಸುವ ಹಲವು ಲೇಖಕರು ತಮ್ಮ ಕೃತಿಗಳನ್ನು ಹೊರತಂದಿದ್ದಾರೆ. ಇವುಗಳಲ್ಲಿ ಎ. ಎನ್. ಮೂರ್ತಿರಾವ್‌ರವರ "ದೇವರು" ಹೆಸರಿಸಬೇಕು.

**ಟಿ.ಪಿ. ಅಶೋಕ**

ತುಷಾರ : ಏಪ್ರಿಲ್ 1992. ಪುಟ 30-31

A. N. Murthy Rao was recognised even by undergraduates as a man of considerate literary sensibility and tought with distination when he was inclined and for the rest he gave one the impression of being rather lazy. One now sees he hasn't written a single thing which can be called mediocre. His English and Kannada are of the highest standard but manifestations of his abilities were not available to us, students. It looked as though he had to pass his 50th year and even retire before his unquestioned abilities came to hight.

**- C. D. Narasimhaiah.**

'N for nobody'

Autobiography of an English Teacher (1991 ) page 34

# "ಮಹಾಭಾರತದಲ್ಲಿ ಕೇಡು"

ಕುಲಶೇಖರಿ

ನಮ್ಮ ಭಾರತದಲ್ಲಿ ಮಹಾಭಾರತ ಪಿತೃಪುರಾಣವಾಗಿ, ಧರ್ಮಗ್ರಂಥವಾಗಿ ಪರಿಗಣಿತವಾಗಿದೆ. ಧರ್ಮದ ಪ್ರತಿಷ್ಠೆ ಮೆರೆಸಲು "ಭಗವದ್ಗೀತೆ" ಆದರ್ಶವೆನಿಸಿದೆ. ಅದನ್ನು ವೈಚಾರಿಕ ದೃಷ್ಟಿಕೋನದಿಂದ ಪರಿಭಾವಿಸಿದಾಗ ಕಾಡುವ ಅನುಮಾನಗಳು ಅನೇಕ. ಅಂಥ ಒಂದು ಪ್ರಾಮಾಣಿಕ ಚಿಂತನೆ ಇಲ್ಲಿದೆ. ಓದುಗರನ್ನು ಯೋಚನೆಗೆ ತೊಡಗಿಸುತ್ತದೆ.

ಮಹಾಭಾರತದಲ್ಲಿ ಕೇಡು ಎಂದರೆ ಒಳ್ಳೆಯತನಕ್ಕೆ ವಿರೋಧವಾಗಿ ನಡೆಯುವ ಅನೇಕಾನೇಕ ಪಾತ್ರಗಳು. ಪ್ರಾರಂಭದ ಪರಾಶರ ಮತ್ಸ್ಯಗಂಧಿಯರ ಲೈಂಗಿಕತೆಯಿಂದ ಪ್ರಾರಂಭವಾಗಿ ಅಧಿಕಾರದ, ಸ್ವಾರ್ಥದ ಪರಾಕಾಷ್ಠತೆಯವರೆಗೆ ಅನೇಕ ಮುಖಗಳ ದರ್ಶನವಿದೆ. ತಂದೆ ಶಂತನುವಿಗಾಗಿ ಭೀಷ್ಮನು "ಪ್ರತಿಜ್ಞೆ" ಮಾಡದಿದ್ದರೆ ಮಹಾ ಭಾರತವೇ ನಡೆಯುತ್ತಿರಲಿಲ್ಲ. ಹಸ್ತಿನಾಪುರ ಧೃತರಾಷ್ಟ್ರನ ಸ್ವತ್ತಾಗುತ್ತಿರಲಿಲ್ಲ. ಪಾಂಡವ ಕೌರವರ ದಾಯಾದಿ ಕಲಹಕ್ಕೆ ನಾಂದಿಯಾಗುತ್ತಿರಲಿಲ್ಲ. ತುಂಬಿದ ಸಭೆಯಲ್ಲಿ ಹೆಣ್ಣಾದ ದ್ರೌಪದಿಯ ಮಾನಭಂಗಕ್ಕೆ ಧರ್ಮಸೂಕ್ಷ್ಮ ತಿಳಿದ ಹಿರಿಯರೆಲ್ಲ ಮೂಕ ಪ್ರೇಕ್ಷಕ ರಾಗಿದ್ದಾರೆ. ಶಕುನಿ, ದುರ್ಯೋಧನ, ದುಶ್ಯಾಸನ, ಕರ್ಣರ ಪಡೆ ಮಾಡಲು ಹೇಸದ ಕಪಟಕೃತ್ಯವಿಲ್ಲ. ಪಾಂಡವ ನಾಶಕ್ಕಾಗಿ ವಿಷ, ನೀರಲ್ಲಿ ಮುಳುಗಿಸುವಿಕೆ, ಅರಗಿನ ಮನೆಯಲ್ಲಿ ಬೆಂಕಿಗಾಹುತಿ ಮಾಡುವ ಹುನ್ನಾರು ಹಾಗೂ ಮೋಸದ ದಾಳಗಳೇ ಸಾಕ್ಷಿ.

ಕರ್ಣ ತಾನು ಕುಂತೀಪುತ್ರ ಎಂದು ತಿಳಿದಾಗಲೂ ಸ್ವಾಮಿನಿಷ್ಠೆ ಮೆರೆದ. ಭೀಷ್ಮ ಕೌರವ ಪಕ್ಷದಲ್ಲಿದ್ದರೂ ಶತ್ರುಗಳಾದ ಪಾಂಡವರಿಗೆ ತನ್ನನ್ನು ಕೊಲ್ಲುವ ರೀತಿ ತಿಳಿಸಿ ದ್ರೋಹ ಬಗೆದ. ದ್ರೋಣ ಕೌರವನ ಉಪ್ಪುತಿಂದ ಪಾಂಡವ ಪಕ್ಷಪಾತಿ. ಏಕಲವ್ಯನ ಬಗೆಗೆ ಅವನ ನಡವಳಿಕೆ ಕೀರ್ತಿಗೆ ಕಳಂಕ. ಗಾಂಧಾರಿ ಸಹ ಯುದ್ಧಕ್ಕೆ ಮುನ್ನ "ವಿಜಯೀಭವ" ಎನ್ನದೆ "ಧರ್ಮಕ್ಕೆ ಜಯ" ಎಂದಿದ್ದಾಳೆ.

ಧರ್ಮದ ರಕ್ಷಣೆಗಾಗಿ ಅವತಾರವೆತ್ತಿ ಬಂದ ಕೃಷ್ಣನೂ ಸಹ ಅನ್ಯಾಯಕ್ಕೆ ಅಪವಾದ ವಾಗಿಲ್ಲ. ಮಹಾಭಾರತದ ಯುದ್ಧವನ್ನು ತನ್ನ ಚತುರ ಸಾಮರ್ಥ್ಯದಿಂದ ತಪ್ಪಿಸ ಬಹುದಿತ್ತು. ಅದರ ಬದಲು ಪ್ರತೀಕಾರ ಮನೋಭಾವದ, ಸೇಡನ್ನು ತೀರಿಸಿಕೊಳ್ಳುವ ಯುದ್ಧಕ್ಕೆ ಒತ್ತಾಸೆ ನೀಡಿದ್ದಾನೆ. ಅರ್ಜುನನ ಹಿಂಜರಿಕೆಯನ್ನು "ಪ್ರಜ್ಞಾವಾದ"ದ ಹೆಸರಿನಲ್ಲಿ ಕ್ಷತ್ರಿಯನಾದ ನಿನ್ನ ಕರ್ತವ್ಯ. ಸತ್ತರೆ ವೀರಸ್ವರ್ಗ, ಗೆದ್ದರೆ ರಾಜ್ಯ, ಆತ್ಮ ಅವಿನಾಶಿ, ಶರೀರ ಬಟ್ಟೆ ಬದಲಾಯಿಸಿದಂತೆ ಎಂದೆಲ್ಲ ಉಪದೇಶ ನೀಡುತ್ತಾನೆ. ಹಾಗಾದರೆ

ಹಿಟ್ಲರ್, ಸ್ಟಾಲಿನ್ ಸಹ ನಿರಪರಾಧಿಗಳು. ಆತ್ಮ ಅಮರ, ಕೊಲೆಗಡುಕರಿಗೆ ಶಿಕ್ಷೆಯ ಕೇಡಿಲ್ಲ.

ಮಹಾಭಾರತ ಯುದ್ಧದಲ್ಲಿ ಕರ್ಣನ ರಥ ಕೆಸರಲ್ಲಿ ಹೂತಾಗ ನಿಶ್ಶಸ್ತ್ರನಾದ ಅವನನ್ನು ಕೊಲ್ಲಲು ಅರ್ಜುನನನ್ನು ಪ್ರೇರೇಪಿಸಿದ. ಭೀಮನನ್ನು ದುರ್ಯೋಧನನ ತೊಡೆಗೆ ಹೊಡೆದು ಕೊಲ್ಲುವಂತೆ ಮಾಡಿದ. ಧರ್ಮರಾಯನಿಂದ ಸುಳ್ಳು ಹೇಳಿಸಿದ. ಸತ್ಯದ ಮುಖವಾಡ ಹಾಕಿಕೊಂಡು ಬಂದಿದೆ ಅಸತ್ಯ. ಹೀಗೆ ದುರುದ್ದೇಶ ಸಾಧನೆಗೆ ಸದ್ಗುಣಗಳನ್ನು ಎಳೆದುತಂದು ಬಳಸಿಕೊಳ್ಳಲಾಗಿದೆ.

ಧರ್ಮಸ್ಥಾಪನೆಗಾಗಿ ಒಳಿತುಕೆಡಕುಗಳ ಮುಖಾಮುಖಿಯಾಗಿ ಧರ್ಮಕ್ಕೇ ಜಯ ಎಂದು ಭಗವದ್ಗೀತೆ ಆಶ್ವಾಸನೆ ನೀಡುತ್ತದೆ. ಯುಗಯುಗಗಳ ಅವತಾರಗಳ ಆಶಯವು ಸಹ ಅದೇ ಆಗಿದೆ. ಕೇಡಿನನಾಶ ಯುದ್ಧದಿಂದ ಎಂದಾದರೆ ಸತ್ತವರೆಲ್ಲ ದುಷ್ಟರೇ? ಕೇಡು ನಾಶವಾಯಿತೇ? ಪ್ರಶ್ನಿಸಬೇಕಾದ ಅಂಶಗಳು. ಯುದ್ಧಾನಂತರ ಪುತ್ರವ್ಯಾಮೋಹದ ಧೃತರಾಷ್ಟ್ರಾಲಿಂಗನ, ಯಾದವೀಕಲಹದ ಜೊಂಡುಹುಲ್ಲಿನ ಸಾವು, ಕೃಷ್ಣನ ಅವಸಾನದ ನಂತರ ಅರ್ಜುನನ ದುರ್ಬಲತೆಗಳಿಗೆ ಅರ್ಥವೇನು?

ಧರ್ಮರಾಯ ಸ್ವರ್ಗಕ್ಕೆ ಹೋದಾಗ ಯುದ್ಧಮಾಡಿ ಮಡಿದ ಕ್ಷತ್ರಿಯ ದುರ್ಯೋಧನ ಸಿಂಹಾಸನಾರೂಢನಾದದ್ದನ್ನು ಕಂಡು ಸೋದರರೊಡನೆ ನರಕಕ್ಕೆ ಹೋಗಲು ಬಯಸಿದ. ಅಲ್ಲದೆ ದುರ್ಯೋಧನನಿಗಾದರೋ ತನ್ನ ದುಷ್ಕೃತ್ಯಗಳಿಗೆ ಪಶ್ಚಾತ್ತಾಪ ಲೇಶವೂ ಇಲ್ಲ.

ಮಹಾಭಾರತ ಓದಿದ ನಂತರ ಫಲಿತವಾಗುವುದೇನು? ಕೇಡಿನ ಮುಷ್ಟಿಯಿಂದ ಬಿಡುಗಡೆ ಪಡೆಯಲು ದೈವಸಹಾಯಕ್ಕೆ ಕೃತಜ್ಞತೆ ಇರಲಿ ಎಂದರೂ ಪ್ರಭಾವಯುತವಾದ ವಿಚಾರಸಾಮಗ್ರಿಯನ್ನು ಒದಗಿಸಿ ಚಿಂತನೆಗೆ ದಾರಿಮಾಡಿಕೊಡುತ್ತದೆ. ಹಾಗಾಗಿ "ಮಹಾಭಾರತದಲ್ಲಿ ಕೇಡು" ಎಂಬುದರ ಸಮಸ್ಯೆ ಹಾಗೆಯೇ ಉಳಿದುಬಿಡುತ್ತದೆ.

# ಭಾವುಕತೆ ವೈಚಾರಿಕತೆಗಳ ಸಮತೋಲನ

ಜಿ. ಆರ್. ಲಕ್ಷ್ಮಣ ರಾವ್

ಸುಮಾರು 1932-33 ರಲ್ಲಿ ನಾನು ನನ್ನ ಹುಟ್ಟೂರಾದ ಜಗಲೂರಿನಲ್ಲಿ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿ. ಅಗ್ಗೆ ಸ್ವಲ್ಪ ಕಾಲದ ಹಿಂದೆ ತಾನೇ ಪ್ರಕಟವಾಗಿದ್ದ 'ಆಷಾಡಭೂತಿ' ನಾಟಕವನ್ನು ಆಗ ಓದಿ ಆನಂದಪಟ್ಟಿದ್ದೆ. ನಮ್ಮ ಉತ್ಸಾಹೀ ಉಪಾಧ್ಯಾಯರೊಬ್ಬರು ಶಾಲೆಯ ವಾರ್ಷಿಕೋತ್ಸವದ ಸಂದರ್ಭದಲ್ಲಿ ವಿದ್ಯಾರ್ಥಿಗಳಾದ ನಮ್ಮಿಂದ ಆ ನಾಟಕವನ್ನು ಆಡಿಸಿಯೂ ಇದ್ದರು. ಆ ನಾಟಕದ ಮೂಲಕ ನನಗೆ ಅಷ್ಟು ಹಿಂದೆಯೇ ಎ. ಎಸ್. ಮೂರ್ತಿರಾಯರ ಪರಿಚಯವಾಗಿತ್ತು. ಅವರಿಗೆ ನನ್ನ ಪರಿಚಯವಾದದ್ದು ಹದಿನೇಳು - ಹದಿನೆಂಟು ವರ್ಷಗಳ ತರುವಾಯ. ನಾನು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ರಸಾಯನ ವಿಜ್ಞಾನದ ಅಧ್ಯಾಪಕನಾಗಿದ್ದಾಗ, ನನ್ನನ್ನು ಅವರಿಗೆ ಪರಿಚಯ ಮಾಡಿಕೊಟ್ಟವರು ಅವರ ಪರಮಮಿತ್ರರಾಗಿದ್ದ ನನ್ನ ಹಿರಿಯ ಸಹೋದ್ಯೋಗಿ, ಜಿ. ಎಲ್. ಕಸ್ತೂರಿರಂಗಾಚಾರ್ಯರು. ಮೂರ್ತಿರಾಯರು ಆಗ ಅದೇ ಕಾಲೇಜಿನಲ್ಲಿ ಇಂಗ್ಲೀಷ್ ಪ್ರಧ್ಯಾಪಕರು. ಅವರಿಗಿಂತ ಇಪ್ಪತ್ತು ವರ್ಷ ಚಿಕ್ಕವನಾಗಿದ್ದ ನಾನು ಅಲ್ಲಿ ಕಿರಿಯ ಅಧ್ಯಾಪಕ. ಆದರೆ ನಮ್ಮಂಥ ಕಿರಿಯರೊಡನೆ ಅವರು ಬೆರೆಯುತ್ತಿದ್ದ ರೀತಿ ಹೇಗಿತ್ತೆಂದರೆ, ಅವರಿಗೂ ನಮಗೂ ನಡುವೆ ಇದ್ದ ವಯಸ್ಸಿನ ಮತ್ತು ಸ್ಥಾನದ ಅಂತರವನ್ನು ನಾವು ಸಂಪೂರ್ಣವಾಗಿ ಮರೆತು ಬಿಡುತ್ತಿದ್ದೆವು. ಸಲಿಗೆಯಿಂದ ಅವರನ್ನು ಕೀಟಲೆ ಮಾಡುತ್ತಿದ್ದುದೂ ಉಂಟು. ಹೀಗಾಗಿ, ಕಾಲೇಜಿನಲ್ಲಿ ತರಗತಿಗಳು ನಡೆಯುತ್ತಿದ್ದಾಗ ನಡುವೆ ಏನಾದರೂ ಒಂದು ಗಂಟೆಯಷ್ಟು ಬಿಡುವು ಸಿಕ್ಕರೆ, ನಾನು ನನ್ನ ಸಹೋದ್ಯೋಗಿ, ಮಿತ್ರ ಸೇತೂರಾಯರು ಮೂರ್ತಿರಾಯರ ಕೊಠಡಿಗೆ ಹೋಗಿ ಕುಳಿತು ಅವರೊಡನೆ ಸರಸ ಸಂಭಾಷಣೆಯಲ್ಲಿ ತೊಡಗುತ್ತಿದ್ದೆವು.

ಒಮ್ಮೆ ನಾನು ಕಸ್ತೂರಿರಂಗಾಚಾರ್ಯರೊಂದಿಗೆ ಮಾತನಾಡುತ್ತಿದ್ದಾಗ ಯಾವುದೋ ನಿರ್ದಿಷ್ಟ ಪರಿಸ್ಥಿತಿಯಲ್ಲಿ ಸಾಮಾನ್ಯವಾಗಿ ಜನ ಹೇಗೆ ನಡೆದುಕೊಳ್ಳುತ್ತಾರೆ ಎಂಬ ವಿಷಯವಾಗಿ ಅವರು ಏನೋ ಹೇಳಿದರೂ, ನಾನು ಅವರ ಮಾತನ್ನು ಒಪ್ಪಲಿಲ್ಲ. ಅಂಥದೇ ಪರಿಸ್ಥಿತಿಯಲ್ಲಿ ಮೂರ್ತಿರಾಯರು ಬೇರೆ ರೀತಿ ವರ್ತಿಸಿದ್ದನ್ನು ಅವರ ಗಮನಕ್ಕೆ ತಂದೆ. ಅವರು, "ನೋಡಿ, ನಿಜ ಜೀವನದಲ್ಲಿ ನಾನು ಕಂಡಿರುವ ವ್ಯಕ್ತಿಗಳಲ್ಲಿ ಪರಿಪೂರ್ಣತೆಗೆ ಅತ್ಯಂತ ಸಮೀಪವಿರುವವರೆಂದರೆ ಮೂರ್ತಿರಾಯರು. ಅವರನ್ನು ಉದಾಹರಣೆಯಾಗಿ ಕೊಟ್ಟರೆ ಏನು ಪ್ರಯೋಜನ? ಸರಾಸರಿ ಮನುಷ್ಯರ ವಿಷಯ ಹೇಳಿ" ಎಂದರು. ನನಗೆ ತುಂಬ ಆಶ್ಚರ್ಯವಾಯಿತು. ಕಸ್ತೂರಿರಂಗಾಚಾರ್ಯರು

ಎಂದೂ ಭಾವಪರವಶರಾಗಿ ಮಾತನಾಡುವವರಲ್ಲ. ಅತಿಶಯೋಕ್ತಿ ಅವರ ಬಳಿ ಸುಳಿಯುವುದಿಲ್ಲ. ಯಾವ ವಿಷಯವಾಗಿಯೇ ಆಗಲಿ, ತೂಕ ಮಾಡಿ ವೈಜ್ಞಾನಿಕ ನಿಖರತೆಯಿಂದ ಮಾತನಾಡುವುದು ಅವರ ಪರಿಪಾಠ. ಅಂಥವರು ಹೀಗೆ ಹೇಳಿದರಲ್ಲ, ಯಾರನ್ನೇ ಆಗಲಿ, ಪರಿಪೂರ್ಣ ವ್ಯಕ್ತಿ ಎಂದು ಕರೆಯಬಹುದೇ ಅನ್ನಿಸಿತು. ಅನಂತರ ಸಾವಧಾನವಾಗಿ ಯೋಚಿಸಿದಾಗ ಆಚಾರ್ಯರು ತುಂಬ ಜಾಗರೂಕತೆಯಿಂದ ಪದಗಳನ್ನು ಬಳಸಿದ್ದರೆಂಬುದನ್ನು ಗಮನಿಸಿದೆ. "ನಾನು ಕಂಡಿರುವ ವ್ಯಕ್ತಿಗಳಲ್ಲಿ" ಎಂದಿದ್ದರು. "ಪರಿಪೂರ್ಣತೆಗೆ ಅತ್ಯಂತ ಸಮೀಪದ" ಎಂದಿದ್ದರು.

ಚಿಂತೆ ಇಲ್ಲ, ಕಸ್ತೂರಿರಂಗಾಚಾರ್ಯರು ಸಮತೋಲನವನ್ನು ಕಾಪಾಡಿಕೊಂಡೇ ಮಾತನಾಡಿದ್ದಾರೆ, ಅಂದುಕೊಂಡೆ. ದಿನಗಳು ಕಳೆದಂತೆ, ಅವರು ಕರಾರುವಾಕ್ಕಾಗಿಯೇ ಹೇಳಿದರು ಎಂಬ ತೀರ್ಮಾನಕ್ಕೆ ಬಂದಿದ್ದೇನೆ.

'ಪರಿಪೂರ್ಣವ್ಯಕ್ತಿ' ನಿಜಜೀವನದಲ್ಲಿ ಎಲ್ಲೂ ಕಾಣಬರುವುದಿಲ್ಲ 'ಕೇವಲ ಕಲ್ಪನೆ'ಯಲ್ಲಿ ಮಾತ್ರ ಕಾಣಸಿಕ್ಕುವ ಅಂಥ ಆದರ್ಶ ವ್ಯಕ್ತಿಯಲ್ಲಿ ನಾವು ಏನನ್ನು ನಿರೀಕ್ಷಿಸುತ್ತೇವೆ? ಅನೇಕ ಅಪೇಕ್ಷಣೀಯ ಗುಣಗಳನ್ನು ಅವನಲ್ಲಿ ಕಾಣಬಯಸುತ್ತೇವೆ, ಕೆಲವು ವೇಳೆ ಅಂಥ ಗುಣಗಳು ಪರಸ್ಪರ ವಿರುದ್ಧವಾಗಿರುವುದುಂಟು. ವೈಚಾರಿಕತೆ ಒಂದು ಅಪೇಕ್ಷಣೀಯ ಗುಣವಷ್ಟೆ. ನಿಷ್ಠುರ ವೈಚಾರಿಕತೆಯ ಬೆನ್ನು ಹತ್ತಿದರೆ, ಅದು ರಾಗಭಾವಗಳಿಗೆ ಅವಕಾಶ ನೀಡದೆ ಹೋಗಬಹುದು. ರಸಾಸ್ವಾದನೆಗೂ ದಯಾಪರತೆಗೂ ಅದರಿಂದ ಅಡಚಣೆಯಾಗಬಹುದು. ಭಾವುಕತೆ ಮತ್ತು ವೈಚಾರಿಕತೆಗಳ ನಡುವೆ ಸಮತೋಲನ ಅಗತ್ಯವಾಗುತ್ತದೆ. ನಮ್ಮ ಆದರ್ಶ ವ್ಯಕ್ತಿ ಅಂಥ ಪರಸ್ಪರ ವಿರುದ್ಧವಾದ ಅಪೇಕ್ಷಣೀಯ ಗುಣಗಳ ನಡುವೆ ಅಥವಾ ಅನಪೇಕ್ಷಣೀಯ ಗುಣಗಳ ನಡುವೆ ಪ್ರಶಸ್ತ ಸಮತೋಲನವನ್ನು ಕಾಪಾಡಿಕೊಂಡಿರುವನೆಂದು ನಾವು ನಿರೀಕ್ಷಿಸುತ್ತೇವೆ. ಯಾವುದೋ ಒಂದು ವಿಷಯದಲ್ಲಿ ಹಿತವಾದ ಸಮತೋಲನ ಸಾಧಿಸಿರುವ ಒಬ್ಬ ವ್ಯಕ್ತಿ ನಿಜ ಜೀವನದಲ್ಲಿ ಸಿಕ್ಕಬಹುದು. ಆದರೆ ಭಾವುಕತೆ ಮತ್ತು ವೈಚಾರಿಕತೆಗಳ ನಡುವೆ ಮಾತ್ರವಲ್ಲದೆ, ವಾಚಾಳಿತನ ಮತ್ತು ಮೌನ ಪ್ರವೃತ್ತಿಗಳ ನಡುವೆ, ಜಿಪುಣತನ ಮತ್ತು ದುಂದುಗಾರಿಕೆಗಳ ನಡುವೆ, ಸಂತೃಪ್ತಿ ಮತ್ತು ಮಹತ್ವಾಕಾಂಕ್ಷೆಗಳ ನಡುವೆ, ಹೀಗೆ ಹತ್ತಾರು ವಿಷಯಗಳಲ್ಲಿ ಒಂದೊಂದರಲ್ಲಿಯೂ ಸಮತೋಲನವನ್ನು ಸಾಧಿಸಿರುವ ವ್ಯಕ್ತಿ ಅತ್ಯಂತ ವಿರಳ. ಅಂಥ ಒಂದು ನಿದರ್ಶನವನ್ನು ಮೂರ್ತಿರಾಯರಲ್ಲಿ ನಾವು ಕಾಣುತ್ತೇವೆ. ಆದುದರಿಂದ ಪರಿಪೂರ್ಣತೆಗೆ ಅತ್ಯಂತ ಸಮೀಪದವರು ಎಂದು ಅವರನ್ನು ಕಸ್ತೂರಿ ರಂಗಾಚಾರ್ಯರು ವರ್ಣಿಸಿದುದರಲ್ಲಿ ಆಶ್ಚರ್ಯವೇನಿಲ್ಲ.

ಮೂರ್ತಿರಾಯರೊಡನೆ ನನ್ನ ಒಡನಾಟ ಪ್ರಾರಂಭವಾದುದು ಸುಮಾರು ಐವತ್ತು ವರ್ಷಗಳಷ್ಟು ಹಿಂದೆ. ಆದರೆ, ಮೊದಲ ಇಪ್ಪತ್ತು ವರ್ಷ ನನಗೆ ಅವರ ನಿಕಟ ಸಂಪರ್ಕವಿರಲಿಲ್ಲ. ನನಗೆ ಶಿವಮೊಗ್ಗಕ್ಕೆ ವರ್ಗವಾಗಿ ನಾನು ಅಲ್ಲಿಗೆ ಹೊರಟು ಹೋದೆ. ಅಲ್ಲಿದ್ದ ಐದಾರು ವರ್ಷಗಳಲ್ಲಿ ಎರಡು ಮೂರು ಬಾರಿ ಮಾತ್ರ ಅವರ ಭೇಟಿ ದೊರೆತಿತ್ತು. 1962ರಲ್ಲಿ ಮೈಸೂರಿಗೆ ಬಂದೆ. ಸುಮಾರು ಅದೇ ಕಾಲಕ್ಕೆ ಅವರು ಮೈಸೂರಿಗೆ ಬಂದು ನೆಲಸಿದ್ದರು. ಆಗಾಗ ಅವರನ್ನು ಭೇಟಿಯಾಗುತ್ತಿದ್ದೆ. ಅವರ ಪತ್ನಿ

ತೀರಿಹೋದ ಮೇಲೆ ಕೆಲವು ವರ್ಷಗಳ ಕಾಲ ಅವರು ಭೋಪಾಲ್‌ನಲ್ಲಿ ಅವರ ಮಗನೊಂದಿಗಿದ್ದರು. ಸುಮಾರು 1970 ರಿಂದೀಚೆಗೆ ನಮ್ಮ ಒಡನಾಟ ತುಂಬ ನಿಕಟವಾಯಿತು. ಪ್ರಾರಂಭದಲ್ಲಿ ಮಗ ಡಾ. ನಾಗರಾಜ್ ಅವರೊಂದಿಗೆ ಅವರ ತೋಟದ ಮನೆಯಲ್ಲಿದ್ದರು. ಆಗ ಎಷ್ಟೋ ಸಲ ನಾನು, ಪ್ರಭುಶಂಕರ್, ಎಸ್. ಬಾಲಸುಬ್ರಹ್ಮಣ್ಯಂ ಮುಂತಾದವರೆಲ್ಲ ಬೆಳಿಗ್ಗೆ ಅಲ್ಲಿಗೆ ಹೋಗಿ ಸಂಜೆ ಹಿಂದಿರುಗುತ್ತಿದ್ದೆವು. ಮೂರ್ತಿರಾಯರೂ ಮೈಸೂರಿಗೆ ಬೆಳಿಗ್ಗೆ ಬಂದು ಸ್ನೇಹಿತರನ್ನೆಲ್ಲ ಕಂಡು ಸಂಜೆಯ ವೇಳೆಗೆ ಮಗನ ತೋಟದ ಮನೆಗೆ ಹಿಂದಿರುಗುತ್ತಿದ್ದರು. ಅವರ ಮಗ ಆ ತೋಟದ ಮನೆಯನ್ನು ಬಿಟ್ಟು ತೀರ್ಥಹಳ್ಳಿಗೆ ವಲಸೆ ಹೋದ ಮೇಲೆ, ಮೂರ್ತಿರಾಯರು ಮೈಸೂರಿನಲ್ಲಿಯೇ ಇರುತ್ತಿದ್ದರು. ಈಗ್ಗೆ ಕೆಲವು ವರ್ಷಗಳ ಹಿಂದಷ್ಟೇ ಬೆಂಗಳೂರಿಗೆ ಹೋದರು. ಈ ಇಪ್ಪತ್ತು - ಇಪ್ಪತ್ತೈದು ವರ್ಷಗಳಲ್ಲಿ ನಾನು ಲೆಕ್ಕವಿಲ್ಲದಷ್ಟು ಸಲ ಸಭೆ ಸಮಾರಂಭಗಳಿಗೆ , ಸಂಗೀತ ಕಛೇರಿಗಳಿಗೆ, ಅವರೊಂದಿಗೆ ಹೋಗಿದ್ದೇನೆ. ಉಪನ್ಯಾಸ ಕಾರ್ಯಕ್ರಮಗಳಿಗಾಗಿ, ಗೋಷ್ಠಿಗಳಲ್ಲಿ ಭಾಗವಹಿಸುವುದಕ್ಕಾಗಿ, ಕೆಲವೊಮ್ಮೆ ಕೇವಲ ವಿಹಾರಕ್ಕಾಗಿ, ಅವರೊಂದಿಗೆ ಪ್ರವಾಸ ಮಾಡಿದ್ದೇನೆ. ಒಮ್ಮೆ ನಾನೂ ಮೂರ್ತಿರಾಯರೂ ಡಾ.ಪ್ರಭುಶಂಕರ್ ಅವರೂ ರಾಮಕೃಷ್ಣಾಶ್ರಮದ ಸ್ವಾಮಿ ಸುರೇಶ್ವರಾನಂದರೂ ಮೂರು ವಾರಗಳ ಕಾಲ ಅಸ್ಸಾಮ್ ಮತ್ತು ಮೇಘಾಲಯ ರಾಜ್ಯಗಳಲ್ಲಿ ಪ್ರವಾಸ ಕೈಗೊಂಡೆವು. ಮೈಸೂರಿನಲ್ಲಿಯೇ ಇರುವಾಗ ನಾನು ಅವರನ್ನು ಕಾಣಲು ಹೋದಾಗ ಅಥವಾ ಅವರು ನನ್ನನ್ನು ಕಾಣಲು ಬಂದಾಗ ಮನೆಯಲ್ಲಿಯೋ ಮಾನಸಗಂಗೋತ್ರಿ ಆವರಣದಲ್ಲಿ ಕಲ್ಲುಬೆಂಚಿನ ಮೇಲೋ, ಹುಲ್ಲು ಹಾಸಿನ ಮೇಲೋ ಕುಳಿತು ಗಂಟೆಗಟ್ಟಲೆ ಗಂಭೀರವಾಗಿ ವಿಷಯಗಳನ್ನು ಚರ್ಚಿಸಿದ್ದೇವೆ, ಲಘುವಾಗಿ ಹರಟೆ ಕೊಚ್ಚಿದ್ದೇವೆ. ಅವರೊಡನೆ ನನ್ನ ಒಡನಾಟ ನಿಕಟವಾದಷ್ಟೂ ಕಸ್ತೂರಿರಂಗಾಚಾರ್ಯರು ನೀಡಿದ ಅವರ ವರ್ಣನೆ ಕರಾರುವಾಕ್ಕಾದ್ದೆಂಬುದು ನನಗೆ ಮನವರಿಕೆಯಾಗುತ್ತಿದೆ.

ಉಡಿಗೆತೊಡಿಗೆಗಳಲ್ಲಿ ಅವರ ಸರಳತೆ ಈಗ ಜಗಜ್ಜಾಹೀರಾಗಿದೆ. ಅವರು ವೃತ್ತಿನಿರತರಾಗಿದ್ದಾಗ ಸೂಟು, ಬೂಟು ಧರಿಸಿ ಟೈ ಕಟ್ಟಿಕೊಳ್ಳುತ್ತಿದ್ದರು. ನಿವೃತ್ತರಾದ ಮೇಲೆ ಅವರ ಪೋಷಾಕು ಈಗ ಎಲ್ಲರಿಗೂ ಚಿರಪರಿಚಿತವಾಗಿದೆ. ಬಿಳಿ ದಟ್ಟಿಪಂಚೆ. ಅರ್ಧತೋಳಿನ ಷರಟು ಬಹುಮಟ್ಟಿಗೆ ನಸುನೀಲಿ ಬಣ್ಣದ್ದು. ಈ ಪೋಷಾಕಿನಲ್ಲಿರುವ ಸಣಕಲ ಕುಳ್ಳ ವ್ಯಕ್ತಿ ಎಲ್ಲಾದರೂ ದೂರದಲ್ಲಿ ಕಾಣಿಸಿದರೆ ಅವರು ಮೂರ್ತಿರಾಯರೇ ಎಂದು ತೀರ್ಮಾನಿಸಿಬಿಡಬಹುದು. ಎಂಥ ದೊಡ್ಡ ಸಭೆಗಾಗಲೀ ಸಮಾರಂಭಕ್ಕಾಗಲೀ ಅವರು ಆ ಪೋಷಾಕಿನಲ್ಲೇ ಹೋಗುತ್ತಾರೆ, ಅದೇ ಪೋಷಾಕಿನಲ್ಲಿ ಮುಖ್ಯ ಅತಿಥಿಯಾಗಿಯೂ ರಾರಾಜಿಸುತ್ತಾರೆ. "ನಾನು ವಹಿಸಬೇಕಾಗಿರುವ ಪಾತ್ರಕ್ಕೆ ಈ ಪೋಷಾಕು ಅಡ್ಡ ಬರುವುದಿಲ್ಲವಲ್ಲಾ" ಎಂದು ಅವರು ಪಾಲು ಹಾಕುತ್ತಾರೆ. ಒಮ್ಮೆ ಮಾತ್ರ ಅದೇಕೋ ಅವರು ಈ ನಿಲುವು ತೆಗೆದುಕೊಳ್ಳದೆ, ಜಾರಿ, ಅನಂತರ ಪಶ್ಚಾತ್ತಾಪಪಟ್ಟರು. ಆ ಸಂದರ್ಭ ಸ್ವಾರಸ್ಯಕರವಾಗಿದೆ. ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಗೌರವ ಡಾಕ್ಟೊರೇಟ್ ಕೊಡಲು ನಿರ್ಧರಿಸಿತು. ಗೌರವ ಡಾಕ್ಟೊರೇಟ್ ತೆಗೆದುಕೊಳ್ಳುವವರನ್ನು ಕಾನ್ವೊಕೇಷನ್‌ಗೆ ಕರೆತರಲು ವಿಶ್ವವಿದ್ಯಾನಿಲಯ ಯಾರಾದರೊಬ್ಬರನ್ನು ಕಳಿಸುವುದು ಪದ್ಧತಿ. ವಿಶ್ವವಿದ್ಯಾನಿಲಯದ ಪರವಾಗಿ ಅವರಿದ್ದಲ್ಲಿಗೆ

ಹೋಗಿ ಅವರನ್ನು ಕರೆತರಲು ವಿಶ್ವವಿದ್ಯಾನಿಲಯದವರು ನನ್ನನ್ನು ಕೇಳಿಕೊಂಡರು. ಆ ವೇಳೆಗ್ಗೆ ವಿಶ್ವವಿದ್ಯಾನಿಲಯದ ಕಾರ್ ನನಗೆ ಕೊಟ್ಟರು. ನಾನು ಅವರನ್ನು ಕರೆತರಲು ಅವರ ಮನೆಗೆ ಹೋದೆ. ಅವರು ಸೂಟು, ಬೂಟು ಧರಿಸಿ ಟೈ ಕಟ್ಟಿಕೊಂಡು ಸಿದ್ಧರಾಗಿದ್ದರು. ಆ ಪೋಷಾಕಿನಲ್ಲಿ ಅವರನ್ನು ನೋಡಿ ಇಪ್ಪತ್ತು ವರ್ಷವಾಗಿತ್ತು. ಅವರಿಗೂ ಅದು ವಿನೋದಕರವಾಗಿತ್ತು. ನನ್ನನ್ನು ಕಂಡೊಡನೆ ಅವರು, "ಲಕ್ಷ್ಮಣರಾವ್ ಮೂರ್ತಿರಾಯರನ್ನು ಹುಡುಕುತ್ತಿರುವಿರಾ?" ಎಂದು ತಮಾಷೆ ಮಾಡಿದರು. ಅವರನ್ನು ನಾನು ಕರೆತಂದೆ. ಐದು ನಿಮಿಷದ ಮೇಲೆ ಅಂದು ಅವರೊಡನೆ ಡಾಕ್ಟೊರೇಟ್ ತೆಗೆದುಕೊಳ್ಳಬೇಕಾಗಿದ್ದ ರಾಜರತ್ನಮ್ ಅವರನ್ನು ಬೇರೆ ಯಾರೋ ಕರೆತಂದರು. ರಾಜರತ್ನಮ್ ಎಂದಿನಂತೆ ಪೊಂಡು ತೋಳಿನ ಬನಿಯನ್ ಹಾಕಿಕೊಂಡು ಮೇಲೊಂದು ಉತ್ತರೀಯ ಹೊದೆದಿದ್ದರು. ಅವರನ್ನು ಆ ಪೋಷಾಕಿನಲ್ಲಿ ನೋಡಿದೊಡನೆಯೇ ಮೂರ್ತಿರಾಯರು ನನ್ನ ಕಡೆಗೆ ತಿರುಗಿ "I feel like kicking myself" ಎಂದು "ನನಗೇನು ಮಂಕು ಕವಿದಿತ್ತು? ಈ ಪೋಷಾಕಿನಲ್ಲಿ ಬರಬೇಕೆಂಬ ಯೋಚನೆ ನನಗೇಕೆ ಬಂತು" ಎಂದು ಪೇಚಾಡಿದರು.

ಮೂರ್ತಿರಾಯರು ಉಡಿಗೆತೊಡಿಗೆಗಳಲ್ಲಿ ಎಷ್ಟು ಸರಳರೋ ನಡೆ ನುಡಿಗಳಲ್ಲೂ ಅಷ್ಟೇ ಸರಳರು. ಯಾವ ಗುಂಪಿನಲ್ಲೇ ಆಗಲಿ, ಇತರರಿಂದ ಭಿನ್ನವಾಗಿ ಕಾಣಿಸಿ ಕೊಳ್ಳುವುದು ಅವರಿಗೆ ಮುಜುಗರ. ಯಾರ ಗಮನವನ್ನೂ ಸೆಳೆಯದಂತೆ ಒಂದೆಡೆ ಹೋಗಿ ಕುಳಿತುಕೊಳ್ಳಲು ಅವರ ಆಕಾರ ಅವರ ನೆರವಿಗೆ ಬರುತ್ತದೆ. ಗುರುತು ಹಿಡಿದವರು ಯಾರಾದರೂ ಅವರಿಗೆ ವಿಶೇಷ ಸ್ಥಾನ ನೀಡಿದರೆ ಅದನ್ನು ನಿರಾಕರಿಸುತ್ತಾರೆ. ಹೆಚ್ಚು ಒತ್ತಾಯಿಸಿದರೆ ತಮ್ಮ ಪ್ರತಿಭಟನೆ ಇತರರ ಗಮನವನ್ನು ಸೆಳೆದೀತೆಂಬ ಭಯದಿಂದ ಆ ಒತ್ತಾಯಕ್ಕೆ ಮಣಿದುಬಿಡುತ್ತಾರೆ. ಅವರ "ಚಿತ್ರಗಳು - ಪತ್ರಗಳು" ಪುಸ್ತಕಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರೆತಾಗ ಅವರಿಗೊಂದು ಸನ್ಮಾನ ಸಮಾರಂಭ ಏರ್ಪಡಿಸಲು ನಾವೆಲ್ಲ ಪ್ರಯತ್ನಿಸಿ ವಿಫಲರಾದೆವು. ಡಾ. ಎಸ್. ರಾಮನಾಥನ್ ಅವರ ಹಾಡುಗಾರಿಕೆ ಮೂರ್ತಿರಾಯರಿಗೆ ತುಂಬ ಪ್ರಿಯ. ಅವರ ಕಚೇರಿಯನ್ನು ಏರ್ಪಡಿಸಿ ಮೂರ್ತಿರಾಯರನ್ನು ಮುಖ್ಯ ಅತಿಥಿ ಎಂದು ಕರೆದು ನಾವು ತೃಪ್ತಿಪಟ್ಟುಕೊಂಡ ದ್ದಾಯಿತು. ಅದಕ್ಕೂ ಅವರ ಒಪ್ಪಿಗೆ ಪಡೆಯುವುದು ಕಷ್ಟವಾಯಿತು. ಅವರಿಂದಲೂ ವಂತಿಗೆ ತೆಗೆದುಕೊಳ್ಳಲು ಒಪ್ಪಿ ಅವರ ಅನುಮತಿ ಪಡೆದೆವು. ಕಳೆದ ಮೂರು ನಾಲ್ಕು ವರ್ಷಗಳಿಂದ ಬೆಂಗಳೂರಿನ ವಿವಿಧ ಸಂಘ ಸಂಸ್ಥೆಗಳು ಜೂನ್ 16 ರಿಂದ ಅವರ ಹುಟ್ಟುಹಬ್ಬ ಏರ್ಪಡಿಸಲು ಪ್ರಯತ್ನಿಸಿ ವಿಫಲರಾಗಿದ್ದಾರೆ. ಸಮಾರಂಭಗಳೇನೋ ನಡೆದವು. ಆದರೆ ಅತಿಥೇಯರು ಯೋಚಿಸಿದ ರೀತಿಯಲ್ಲಲ್ಲ. "ಮೂರ್ತಿರಾಯರೊಡನೆ ಒಂದು ಸಂಜೆ" ಎಂದೋ "ಮೂರ್ತಿರಾಯರೊಡನೆ ಸಂವಾದ" ಎಂದೋ ಕರೆದು, ಇತರ ನಾಲ್ಕಾರು ಜನರೊಂದಿಗೆ ಅವರನ್ನು ವೇದಿಕೆಯ ಮೇಲಕ್ಕೆ ತರಬೇಕಾಯಿತು. ಅವರೊಬ್ಬರೇ ವೇದಿಕೆಗೆ ಬಂದು ಆರಾಧ್ಯಮೂರ್ತಿಯಾಗಲು ಅವರು ಒಪ್ಪಲಿಲ್ಲ.

1963-64ರ ಸುಮಾರಿನಲ್ಲಿ ಎಂದು ನನ್ನ ನೆನಪು, "ಅಲೆಯುವ ಮನ" ಎಂಬ ಪ್ರಬಂಧ ಸಂಕಲನ ಸ್ನೇಹಿತರೊಬ್ಬರ ಪುಸ್ತಕ ಸಂಗ್ರಹದಲ್ಲಿದ್ದುದು ನನ್ನ ಕಣ್ಣಿಗೆ ಬಿತ್ತು.

ಮೂರ್ತಿರಾಯರ ಹೆಸರು ನೋಡಿ ಅದನ್ನು ಎರವಲು ಪಡೆದು ಮನೆಗೆ ತಂದೆ. ಮರುದಿನ ಭಾನುವಾರ ಬೆಳಿಗ್ಗೆ ಪುಸ್ತಕವನ್ನು ಕೈಗೆತ್ತಿಕೊಂಡೆ, ಕೆಳಗಿಡಲು ಮನಸ್ಸೇ ಬರಲಿಲ್ಲ. ಮಧ್ಯಾಹ್ನದ ಊಟವನ್ನು ಹದಿನೈದಿಪ್ಪತ್ತು ನಿಮಿಷಗಳಲ್ಲಿ ಮುಗಿಸಿ ಓದುವುದನ್ನು ಮುಂದುವರಿಸಿದೆ. ನಾಲ್ಕು ಗಂಟೆಯಾಗುವುದರಲ್ಲಿ ಕೊನೆಯ ಪುಟ ಓದಿ ಪುಸ್ತಕವನ್ನು ಕೆಳಗಿಟ್ಟೆ. ವಿಧ ವಿಧವಾದ ಮಿಶ್ರಭಾವನೆಗಳು ಮನಸ್ಸಿನಲ್ಲಿ ಮೂಡಿದುವು. ಇಂಗ್ಲೀಷಿನಲ್ಲಿ ಲಲಿತ ಪ್ರಬಂಧಗಳನ್ನು ನಾನು ಓದಿದ್ದೆ. ಚಾರ್ಲ್ಸ್‌ಲ್ಯಾಮ್ ಮತ್ತು ಎ. ಜಿ. ಗಾರ್ಡಿನರ್ ಅವರ ಲಲಿತ ಪ್ರಬಂಧಗಳನ್ನು ನಾನು ಬಹುವಾಗಿ ಮೆಚ್ಚಿಕೊಂಡವನು. ಅವುಗಳನ್ನು ಮೀರಿಸಬಲ್ಲ ಅತ್ಯುತ್ತಮ ಪ್ರಬಂಧಗಳು ಕನ್ನಡದಲ್ಲಿವೆ ಎಂಬುದು ನನ್ನ ಅರಿವಿಗೆ ಬಂದು ನನಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಜೊತೆಗೆ ನನ್ನ ಬಗ್ಗೆ ನನಗೆ ಜಿಗುಪ್ಸೆಯೂ ಆಯಿತು. ಕನ್ನಡದಲ್ಲಿ ಸಣ್ಣ ಕತೆಗಳಿಗೆ ಮಾಸ್ತಿ ಆದ್ಯಪ್ರವರ್ತಕರು, ಲಲಿತ ಪ್ರಬಂಧಗಳಿಗೆ ಮೂರ್ತಿರಾಯರು ಆದ್ಯಪ್ರವರ್ತಕರು ಎಂಬ ಮಾತುಗಳು ನನ್ನ ಕಿವಿಯ ಮೇಲೆ ಬಿದ್ದಿದ್ದುವು. ಮಾಸ್ತಿಯವರ ಸಣ್ಣಕತೆಗಳನ್ನು ಹೆಚ್ಚು ಕಡಿಮೆ ಒಂದೂ ಬಿಡದಂತೆ ಓದಿದ್ದೆನಾದರೂ ಮೂರ್ತಿರಾಯರ ಪ್ರಬಂಧಗಳನ್ನು ಮಾತ್ರ ಓದಿಯೇ ಇರಲಿಲ್ಲ. ಮೂರ್ತಿರಾಯರು ಆ ವೇಳೆಗಾಗಲೇ ಹತ್ತು ಹದಿನೈದು ವರ್ಷಗಳಿಂದ ನನಗೆ ಸುಪರಿಚಿತರಾಗಿದ್ದು, ಅವರ ಬಗ್ಗೆ ಪ್ರೀತಿ ಗೌರವಗಳನ್ನು ಬೆಳೆಸಿಕೊಂಡಿದ್ದೆನಾದರೂ ಅವರ ಒಂದು ಪ್ರಬಂಧವನ್ನೂ ನಾನು ಓದಿರದಿದ್ದ ಬಗ್ಗೆ ನನಗೆ ನಾಚಿಕೆಯಾಯಿತು. ಇಂಗ್ಲೀಷ್ ಲಲಿತ ಪ್ರಬಂಧಗಳನ್ನು ಬಹುವಾಗಿ ಮೆಚ್ಚಿಕೊಂಡಿದ್ದ ನಾನು ಕನ್ನಡದಲ್ಲಿ ಅಂಥವು ಇರಲಾರದೆಂದುಕೊಂಡಿದ್ದೆನೇನೋ. ಆ ಭಾವನೆ ಮನಸ್ಸಿನ ಅಂತರಾಳದಲ್ಲಿದ್ದುದೇ ನಾನು ಓದಿರದಿದ್ದುದಕ್ಕೆ ಕಾರಣವಿರಬಹುದು ಎಂಬ ಯೋಚನೆ ಬಂದು ನನ್ನ ಬಗ್ಗೆ ನನಗೆ ಜಿಗುಪ್ಸೆಯಾಯಿತು. ಇದೆಲ್ಲವನ್ನೂ ನೇರವಾಗಿ ಮೂರ್ತಿರಾಯರಿಗೆ ಹೇಳುವವರೆಗೆ ಮನಸ್ಸು ನಿಲ್ಲಲಿಲ್ಲ. ಕೂಡಲೇ ಚಾಮುಂಡಿಪುರದಲ್ಲಿದ್ದ ಅವರ ಮನೆಗೆ ಹೋಗಿ ಎಲ್ಲವನ್ನೂ ಹೇಳಿದೆ. ಆಧುನಿಕ ಕನ್ನಡದ ಅತ್ಯುತ್ತಮ ಗದ್ಯವನ್ನು ಅವರ ಪ್ರಬಂಧಗಳಲ್ಲಿ ನಾನು ಕಂಡುದಾಗಿ ಹೇಳಿದೆ. "ಬಹುದೊಡ್ಡವರೊಬ್ಬರು ಈ ಮಾತು ಹೇಳಿದ್ದರು" ಎಂದರು. ಅವರ ಪ್ರಬಂಧಗಳನ್ನು ಓದಿದಾಗ ಡಿ. ವಿ. ಗುಂಡಪ್ಪನವರು ಇದೇ ಮಾತು ಹೇಳಿದ್ದರಂತೆ. ಅದನ್ನು ಕೇಳಿ ನನ್ನ ತೀರ್ಪಿನ ವಿಷಯದಲ್ಲಿ ನನಗೆ ಆತ್ಮವಿಶ್ವಾಸ ಮೂಡಿತು.

ಅವರ ಬರವಣಿಗೆಯ ವಿಷಯ ಬಂದಾಗ ಒಂದು ಮಾತು ಹೇಳಬೇಕೆನಿಸುತ್ತದೆ. ಗದುಗಿನನಾರಾಯಣಪ್ಪನ "ಪದವಿಟ್ಟಳುಪದೊಂದಗ್ಗಳಿಕೆ" ಎಂಬ ಮಾತು ಮೂರ್ತಿರಾಯರ ವಿಷಯದಲ್ಲಿ ನಿಜವೇನೋ ಅನ್ನಿಸುತ್ತದೆ. ಅವರು ನನಗೆ ಬರೆದಿರುವ ಐವತ್ತು ಅರವತ್ತು ಪತ್ರಗಳು ನನ್ನಲ್ಲಿವೆ. ಎಲ್ಲಿಯೂ ಒಂದಕ್ಷರವನ್ನೂ ತಿದ್ದಿರುವುದಾಗಲೀ ಒಂದು ಪದವನ್ನು ಹೊಡೆದು ಬೇರೆ ಪದವನ್ನು ಬರೆದಿರುವುದಾಗಲೀ ಕಾಣಸಿಕ್ಕುವುದಿಲ್ಲ. ನನ್ನ ಬರವಣಿಗೆಯಲ್ಲಿ ಹಾಗೆ ತಿದ್ದಿರದ ಒಂದು ಪ್ಯಾರಾ ಸಹ ಸಿಕ್ಕುವುದಿಲ್ಲವಾದ್ದರಿಂದ ನನ್ನಂಥವನಿಗೆ ಇದು ಪರಮಾಶ್ಚರ್ಯ. ಅಕ್ಷರಗಳೋ ಒಂದೇ ಮಾದರಿ, ಒಂದೇ ಗಾತ್ರ, ಜ್ಯಾಮಿತೀಯ ಸರಳ ರೇಖೆಯ ಮೇಲೆ ಅವು ಸಾಲು

ಗೂಡಿರುತ್ತವೆ. ಆ ಬರವಣಿಗೆ ಅವರು ಯೌವನದಲ್ಲಿ ಬರೆದುದೂ ಅಲ್ಲ. ನನ್ನ ಅವರ ಪತ್ರ ವ್ಯವಹಾರ ಪ್ರಾರಂಭವಾದುದೇ ಅವರು ಎಪ್ಪತ್ತು ದಾಟಿದ ಮೇಲೆ.

ವಯಸ್ಸಿನಲ್ಲಿ, ಪಾಂಡಿತ್ಯದಲ್ಲಿ ಸಾಮರ್ಥ್ಯದಲ್ಲಿ ವ್ಯಕ್ತಿತ್ವದಲ್ಲಿ, ಗಾತ್ರ ಒಂದರಲ್ಲಿ ವಿನಾ ಉಳಿದೆಲ್ಲದರಲ್ಲಿಯೂ ನನಗಿಂತ ಅಷ್ಟು ದೊಡ್ಡವರಾದ ಮೂರ್ತಿರಾಯರು ಅದು ಹೇಗೋ ನನ್ನ ನಿಕಟವರ್ತಿಗಳಾದರು. ತಮ್ಮ ಅವ್ಯಾಜ ಪ್ರೇಮದಿಂದ ನನ್ನ ಜೀವನವನ್ನು ಶ್ರೀಮಂತಗೊಳಿಸಿದರು. ನನಗೆ ಅಕಸ್ಮಾತ್ ಒದಗಿಬಂದ ಸೌಭಾಗ್ಯ ಅದು. ಅಷ್ಟು ಸಾಲದೆಂಬಂತೆ ಅವರ ಕೃತಿಗಳ ರಚನೆಯ ಕಾಲದಲ್ಲಿ ತಮಗೆ ಸಹಜವಾದ ನಮ್ರತೆಯಿಂದ ವಿಷಯಗಳನ್ನು ನಮ್ಮಂಥ ಕಿರಿಯರೊಡನೆ ಚರ್ಚಿಸಿದ್ದಾರೆ, ಸಲಹೆಗಳನ್ನು ಕೇಳಿದ್ದಾರೆ, ಇನ್ನೂ ಅನೇಕ ರೀತಿಯಲ್ಲಿ ಅವರೊಡನೆ ಸಾಹಚರ್ಯಕ್ಕೆ ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ಅದೆಲ್ಲದರಿಂದ ಅವರಿಗೆ ಆದ ಲಾಭಕ್ಕಾಗಿ ಕೃತಜ್ಞತೆ ಹೇಳಿದ್ದಾರೆ.

ಅವರು ಷೇಕ್ಸ್‌ಪಿಯರ್‌ನ ಟೆಂಪೆಸ್ಟ್ ನಾಟಕವನ್ನು ಅನುವಾದ ಮಾಡಿದಾಗ ಹಸ್ತಪ್ರತಿಯನ್ನು ನಾವು ನಾಲ್ಕೈದು ಜನರಿಂದ ವಿವರವಾಗಿ ಓದಿಸಿ ಒಂದೊಂದು ಸಾಲಿನ ಬಗ್ಗೆಯೂ ನಮ್ಮ ಅಭಿಪ್ರಾಯವನ್ನೂ ಸಲಹೆಗಳನ್ನೂ ತೆಗೆದುಕೊಂಡ ಪರಿಯನ್ನು 'ಚಂಡಮಾರುತ'ದ ಮುನ್ನುಡಿಯಲ್ಲಿ ಸ್ವಾರಸ್ಯಕರವಾಗಿ ವರ್ಣಿಸಿದ್ದಾರೆ.

ನಮ್ಮ ಜನರ ಆಚಾರ, ವ್ಯವಹಾರ, ಧಾರ್ಮಿಕ ಆಚರಣೆಗಳು, ದೇವರ ಕಲ್ಪನೆ, ಮೂಢನಂಬಿಕೆಗಳು, ಜೀವನದಲ್ಲಿ ಉದ್ಭವಿಸುವ ವೈಯಕ್ತಿಕ ಸಮಸ್ಯೆಗಳು, ಸಾಮಾಜಿಕ ಸಮಸ್ಯೆಗಳು ಮುಂತಾದ ವಿಷಯಗಳ ಬಗ್ಗೆ ನಾನೂ ಅವರೂ ಎಷ್ಟೋ ಸಲ ಗಂಭೀರವಾಗಿ ಚರ್ಚಿಸಿದ್ದೇವೆ, ವಿಚಾರವಿನಿಮಯ ಮಾಡಿಕೊಂಡಿದ್ದೇವೆ. ಬಹುಮಟ್ಟಿಗೆ ನಮ್ಮ ತೀರ್ಮಾನಗಳಲ್ಲಿ ಒಮ್ಮತ ಮೂಡಿರುವುದನ್ನು ನಾನೂ ಗಮನಿಸಿದ್ದೇನೆ, ಅವರೂ ಗಮನಿಸಿದ್ದಾರೆ. ಬಹುಶಃ ಅದೇ ಕಾರಣವಿರಬಹುದು, 'ದೇವರು' ಎಂಬ ಪುಸ್ತಕವನ್ನು ಬರೆಯಲು ಅವರು ನಿರ್ಧರಿಸಿದಾಗ, ಹಸ್ತಪ್ರತಿ ಸಿದ್ಧವಾಗುತ್ತಾ ನಡೆದಂತೆ ಪುಟಗಳನ್ನು ನನಗೆ ಕೊಡುವುದಾಗಿ ಹೇಳಿ, ನನ್ನ ಅಭಿಪ್ರಾಯಗಳನ್ನೂ ಸಲಹೆಗಳನ್ನೂ ನೀಡಬೇಕೆಂದು ನನ್ನನ್ನು ಕೇಳಿದರು. ನಾನು ಒಪ್ಪಿ ಆ ಕೆಲಸ ಮಾಡಿದೆ. ಅದರಿಂದ ಅವರಿಗೆ ಎಷ್ಟು ಪ್ರಯೋಜನವಾಯಿತೋ ನಾ ಕಾಣೆ. ಆದರೆ ನನಗೆ ಅದರಿಂದ ಲಾಭವಾಯಿತು. ಅವರ ನಿಶಿತ ಮತಿ ಹೇಗೆ ಕೆಲಸ ಮಾಡುತ್ತದೆಂಬುದನ್ನು ಹತ್ತಿರದಿಂದ ಕಾಣುವ ಅವಕಾಶ ನನಗೆ ದೊರಕಿತು. ವಿಷಯಗಳನ್ನು ಅವರು ವಿಶ್ಲೇಷಿಸುವ ರೀತಿ, ಹೇಳಬೇಕಾದುದನ್ನು ಕೆಲವೇ ಪದಗಳಲ್ಲಿ ನೇರವಾಗಿ, ಆದರೆ ಖಚಿತವಾಗಿ ಮತ್ತು ಪರಿಣಾಮಕಾರಿಯಾಗಿ ವ್ಯಕ್ತಪಡಿಸುವ ಅವರ ಸಾಮರ್ಥ್ಯ ವಿಸ್ಮಯಕರವಾದುದು. ಅವರ ಆ ಪುಸ್ತಕಕ್ಕೆ ಪಂಪ ಪ್ರಶಸ್ತಿ ದೊರೆತಾಗ ನಮಗೇ ಆ ಪ್ರಶಸ್ತಿ ಬಂದಷ್ಟು ಆನಂದ ನಮಗೆಲ್ಲ ಆಯಿತು.

# ಹಳೆಬೇರಿನ ಹೊಸ ಚಿಗುರು ಡಾ. ಎ.ಎನ್. ಮೂರ್ತಿರಾವ್

ಡಾ. ವರದಾ ಶ್ರೀನಿವಾಸ

ತೊಂಭತ್ತೆಂಟು ವಸಂತಗಳನ್ನು ಕಂಡ ಈ ಜ್ಞಾನವೃದ್ಧ, ವಯೋವೃದ್ಧ, ಶೀಲವೃದ್ಧ ಆಕೃತಿಯಲ್ಲಿ ವಾಮನ. ಕೃತಿರಚನೆಯ ಮೂಲಕ ಎತ್ತರದ ಸ್ಥಾನ ಪಡೆದ ಹಿರಿಯ ಚೇತನ. ಸಂಸ್ಕೃತಿ ಸಂಪ್ರದಾಯಗಳ ಸಂಕೋಲೆ ಕಳಚಿಕೊಂಡ ಧೀಮಂತ ಮಾನವ. ಸಾಹಿತ್ಯ ಕ್ಷೇತ್ರಕ್ಕೆ ತನ್ನದೇ ಆದ ವಿಭಿನ್ನ ಹಾಗೂ ವೈಶಿಷ್ಟ್ಯಪೂರ್ಣ ಕೊಡುಗೆ ಮೂಲಕ ಲಲಿತ ಪ್ರಬಂಧ, ಅನುವಾದ, ವಿಮರ್ಶೆ, ಜೀವನ ಚರಿತ್ರೆ, ಪ್ರವಾಸ ಕಥನಗಳ ಪ್ರಕಾರಗಳನ್ನು ಶ್ರೀಮಂತಗೊಳಿಸಿದ ಗಂಭೀರ ಚಿಂತನೆಯ ಪ್ರತಿಭಾವಂತ ವೈಚಾರಿಕ ನಿಲುವಿನ ಸಾಹಿತ್ಯ ಸೇವಕ ಎ. ಎನ್. ಮೂರ್ತಿರಾವ್.

ಈ ಮಹಾನ್ ವಿಚಾರವಾದಿಯನ್ನು ನಾನು ಮೊದಲು ಕಂಡುದು 'ದಿವಾನಖಾನೆಯ ಅಂದ ಚಂದ' ದಲ್ಲಿ, ಹೈಸ್ಕೂಲ್ ವಿದ್ಯಾರ್ಥಿನಿಯಾಗಿದ್ದಾಗ. ಆ ಲಲಿತ ಪ್ರಬಂಧದ ಸೊಗಸು ಇನ್ನೂ ಮನಸ್ಸಿನಲ್ಲಿ ಅಚ್ಚೊತ್ತಿದಂತಿದೆ. ಆ ಪ್ರಬಂಧಕಾರರನ್ನು ಕಣ್ಣಾರೆ ಕಂಡುದು 1984ರಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಕೈವಾರದಲ್ಲಿ ನಡೆದಾಗ. 'ಕವಿಕಾವ್ಯ ಗೋಷ್ಠಿ'ಯ ನಿರ್ದೇಶನದ ಹೊಣೆ ನನ್ನದಾಗಿತ್ತು. ನಮಸ್ಕರಿಸಿ, ನನ್ನ ಕೃತಿಯೊಂದನ್ನು ಅವರ ಕೈಗಿತ್ತಾಗ "ಓದಿ ಅಭಿಪ್ರಾಯ ಬರೆಯುವೆ, ಇನ್ನಷ್ಟು ಕೃತಿಗಳು ನಿಮ್ಮಿಂದ ಬರಲಿ" ಎಂದು ನಗುಮುಖದಿಂದ ಹಾರೈಸಿದವರು ಅವರು. ಮತ್ತೆ ಹಲವಾರು ಸಭೆ ಸಮಾರಂಭಗಳಲ್ಲಿ ಅವರ ಭಾಷಣ ಕೇಳುವ ಸುಯೋಗ ನನಗೆ ದೊರಕಿತ್ತು.

ವಿಜಯಚಿತ್ರದ "ಪ್ರತಿಭಾಸಂಪನ್ನರು" ಲೇಖನಮಾಲಿಕೆಗೆ ಅವರನ್ನು ಕುರಿತ ಸಂದರ್ಶನ ಲೇಖನ ಬರೆಯಲೆಂದು 1999ರ ಜೂನ್ ತಿಂಗಳಲ್ಲಿ ಇಸ್ರೋ ಲೇಔಟ್ ನಲ್ಲಿರುವ ಅವರ ಮನೆಗೆ ಹೋದಾಗ, ಸುಮಾರು ಮೂರು ಗಂಟೆಗಳ ಅವಧಿಯಲ್ಲಿ ವಾಮನ ರೂಪಿನ ತ್ರಿವಿಕ್ರಮ ವ್ಯಕ್ತಿತ್ವವನ್ನು ಕಂಡು ವಿಸ್ಮಿತಳಾದೆ. ಆ 96ರ ಇಳಿವಯಸ್ಸಿನಲ್ಲೂ ಏರುವಯಸ್ಸಿನ ಉತ್ಸಾಹ ಇತ್ತು. ಮಾತು ನಿಧಾನವಾಗಿ ಆಡುತ್ತಿದ್ದರೂ ನೇರವಿತ್ತು, ಸ್ಪಷ್ಟವಿತ್ತು. ಆಗೊಮ್ಮೆ ಈಗೊಮ್ಮೆ ಮಿಂಚಿದ ಶುಭ್ರ ನಗು ಎಂಥವರನ್ನೂ ಆಕರ್ಷಿಸುವಂತಿತ್ತು.

ಅವರೊಡನೆ ನಡೆಸಿದ ಸಂವಾದದಲ್ಲಿ ಅವರಿಂದ ಪಡೆದ ಮಾಹಿತಿಯಂತೆ ಅವರ ಹುಟ್ಟು, ಬಾಲ್ಯ, ಸಂಸಾರ, ವೃತ್ತಿ, ಪ್ರವೃತ್ತಿ ಕುರಿತ ಕಿರುಪರಿಚಯ ಇದು.

**ಹುಟ್ಟು, ಬಾಲ್ಯ :**

ಅಕ್ಕಿ ಹೆಬ್ಬಾಳು ನರಸಿಂಹಮೂರ್ತಿರಾಯರು ಅಕ್ಕಿ ಹೆಬ್ಬಾಳಿನ ಸಂಪ್ರದಾಯಸ್ಥ ಬ್ರಾಹ್ಮಣ ಮನೆತನದ ಎ. ಸುಬ್ಬರಾವ್ ಮತ್ತು ವೆಂಕಟಲಕ್ಷ್ಮಿ ದಂಪತಿಗಳ ಹಿರಿಯ ಮಗನಾಗಿ 16.6.1900 ರಂದು ಜನಿಸಿದರು. ಸುಬ್ಬರಾಯರು ಮೇಲುಕೋಟೆಯಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಸಬ್‌ಓವರ್‌ಸೀಯರ್ ಆಗಿದ್ದರು. ಸರ್ಕೀಟಿನಿಂದ ಬರುವಾಗ ಕತ್ತಲೆಯಲ್ಲಿ ಕುದುರೆಯಿಂದ ಬಿದ್ದ ಅವರು, ತಗುಲಿದ ಪೆಟ್ಟಿನ ಫಲವಾಗಿ 'ಸೆಳೆತ'ದ ಕಾಯಿಲೆಗೆ ಒಳಗಾದರು. ಅಸಾಮರ್ಥ್ಯದ ಕಾರಣ ತಮ್ಮ ಮೂವತ್ತಾರನೆ ವಯಸ್ಸಿಗೇ ಅನಿವಾರ್ಯವಾಗಿ ನಿವೃತ್ತರಾಗಬೇಕಾಯಿತು.

ನಿವೃತ್ತಿ ವೇತನದ ಜತೆಯಲ್ಲಿ ಪೂರ್ವಿಕರ ಆಸ್ತಿಪಾಲು ಘರ್ಷಣೆ ಮೂಲಕ ದೊರೆತಾಗ ಜೀವನ ಕಷ್ಟವಾಗಲಿಲ್ಲ.

ಅಕ್ಕಿ ಹೆಬ್ಬಾಳಿನಲ್ಲಿ ಮರಳಿನಲ್ಲಿ "ಅಆ – ಇಈ" ತಿದ್ದುವ ಮರಳುಕ್ಲಾಸಿನಲ್ಲಿ ಆರಂಭವಾದ ಮೂರ್ತಿರಾಯರ ವಿದ್ಯಾಭ್ಯಾಸ, ಅನಿವಾರ್ಯ ಕಾರಣಗಳಿಂದಾಗಿ ಮೈಸೂರಿನ ಬಂಧುಗಳ ಮನೆಯಲ್ಲಿದ್ದುಕೊಂಡು ಅಲ್ಲಿನ ವೆಸ್ಲಿಯನ್ ಪ್ರಾಥಮಿಕ ಹಾಗೂ ಪ್ರೌಢಶಾಲೆಯಲ್ಲಿ ಮುಂದುವರಿಯಿತು. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಬಿ. ಎ. ಹಾಗೂ ಎಂ. ಎ. ತರಗತಿಗಳನ್ನು 1925 ರಲ್ಲಿ ಮುಗಿಸಿದ ಮೂರ್ತಿರಾಯರು 1925ರಲ್ಲೇ ಮೈಸೂರಿನ ಮಹಾರಾಜಾ ಹೈಸ್ಕೂಲಿನ ಉಪಾಧ್ಯಾಯರಾಗಿ ನೇಮಕಗೊಂಡರು.



**ಸಂಪ್ರದಾಯದ ಲಕ್ಷ್ಮಣ ರೇಖೆ ದಾಟಿದುದು :**

ವಿಚಾರವಾದಿ ಮೂರ್ತಿರಾಯರು ತಮ್ಮ ಎಳವೆಯಲ್ಲೇ ಪ್ರತಿಯೊಂದು ವಿಷಯವನ್ನೂ ಕುರಿತು ಆಲೋಚಿಸುವ ಚಿಂತಕ ಮನಸ್ಸನ್ನು ಹೊಂದಿದ್ದರು. ಮನೆಯ ಹಿರಿಯರಾಗಲೀ, ಶಾಲೆಯ ಅಧ್ಯಾಪಕರಾಗಲೀ ಹೇಳಿದ ವಿಷಯವನ್ನು ಕುರಿತು ತನ್ನದೇ ಆದ ರೀತಿಯಲ್ಲಿ ವಿಮರ್ಶಿಸುವ ಗುಣ ಆಗಲೇ ಅವರಲ್ಲಿತ್ತು. ಅವರು ನೆನಪಿಸಿಕೊಂಡು ಹೇಳಿದ ಒಂದು ಘಟನೆ ಇಲ್ಲಿದೆ. ಇದು ಅವರ 'ಚಿತ್ರಗಳು – ಪತ್ರಗಳು' ಪುಸ್ತಕದಲ್ಲೂ ಪ್ರಕಟವಾಗಿದೆ.

ಸುಮಾರು 1914ರಲ್ಲಿ ಒಂದು ದಿನ ಮಧ್ಯಾಹ್ನ ನಾಲ್ಕು ಗಂಟೆಯ ಸಮಯ. ರಂಗಾಚಾರ್ಲು ಮೆಮೋರಿಯಲ್ ಹಾಲ್‌ಗೆ ಹೋಗಿ ಪ್ಲೇಗಿನಿಂದ ರಕ್ಷಣೆ ಪಡೆಯಲು ಇನಾಕ್ಯುಲೇಷನ್ ಮಾಡಿಸಿಕೊಂಡು ಮತ್ತೆ ಶಾಲೆಗೆ ಬಂದೆ. ಬಾಗಿಲಿನ ಬಳಿ ಪ್ರಿನ್ಸಿಪಾಲ್ ಆರ್.ಡಬ್ಲ್ಯು. ಬೂಟ್‌ರವರು ನಿಂತಿದ್ದರು. ಎತ್ತರವಾದ ಆಳು, ಕೃಶವೂ ಅಲ್ಲ, ಸ್ಥೂಲವೂ ಅಲ್ಲ ಎನ್ನಬಹುದಾದ ನಿಲುವು. ಕೈಯ್ಯಲ್ಲೊಂದು ಬೆತ್ತ ! ಬಳುಕುವ ಬೆತ್ತ. ನಾನು ಸಲಾಮು ಕೊಡಲು ಕೈಯೆತ್ತುವುದರೊಳಗೆ ಅವರು "Hold out your hand" ಎಂದರು. ಭಯದಿಂದಾಗಿ 'ನಾನೇನು ತಪ್ಪು ಮಾಡಿದೆ', ಎಂದು ಕೇಳುವ ಯೋಚನೆ ನನಗೆ ಹೊಳೆಯಲೇ ಇಲ್ಲ. ನನ್ನ ಕೈ ಮಂತ್ರಮುಗ್ಧವಾದಂತೆ ಅಂಗೈ ಮೇಲಾಗಿ ಮುಂದೆ ಬಂತು. ಬೂಟ್ ಅವರು ಒಂದೇಟು ಬಿಗಿದು "go to your class" ಎಂದು ಬಿರುಸಾಗಿ ಹೇಳಿ ಹೊರಟು ಹೋದರು.

ಇದೇಕೆ ಹೀಗೆ ಮಾಡಿದರು ಎಂದು ನನಗೆ ಆಶ್ಚರ್ಯ. ಅವರು ಮಾಡಿದ್ದು ಶುದ್ಧ ಅನ್ಯಾಯ ಎಂದು ಕೋಪ. "ಏಕೆ ಹೊಡೆದಿರಿ?" ಎಂದು ಕೇಳಿದರೆ ಮತ್ತೆ ಹೊಡೆದಾರೇನೋ ಎಂದು ಭಯ. ಪೆಟ್ಟು ತಿಂದೆನಲ್ಲ ಎಂದು ಅವಮಾನ. ಅಳು ಮೋರೆಯನ್ನು ಹೇಗೋ ಸರಿಪಡಿಸಿಕೊಂಡು ಕಣ್ಣೊರೆಸಿಕೊಳ್ಳುತ್ತ ಕ್ಲಾಸಿಗೆ ಹೋದೆ. ಪಾಠ ಕಿವಿಗೆ ಕೇಳಿಸಿರಬಹುದಾದರೂ ತಲೆಗೆ ಹಿಡಿಸಲಿಲ್ಲ. ಹೊಡೆದದ್ದೇಕೆ ಎಂದು ಪ್ರಿನ್ಸಿಪಾಲರನ್ನು ಕೇಳಿಯೇ ಬಿಡಬೇಕೆಂದು ನಿಶ್ಚಯಿಸಿ ಇದ್ದಬದ್ದ ಧೈರ್ಯವನ್ನೆಲ್ಲ ಕೂಡಿಸಿಕೊಂಡು ಪಾಠ ಮುಗಿದೊಡನೆ ಅವರ ಕೊಠಡಿಗೆ ಹೋದೆ. "May I come in Sir?" ಕ್ಷೀಣಸ್ವರದ ಪ್ರಶ್ನೆ, ಮೈಯಲ್ಲಿ ನಡುಕ.



Yes what is it? ಅವರ ದನಿ ಗಡುಸಾಗಿತ್ತು.

I came to ask to.........

I see; to ask why I camed you !

Why were you not in your class ?

I had gone to get inoculated, Sir.

Did you take permission?

Yes Sir, Mr. Devaputra permitted me to go.

ಹಠಾತ್ತಾಗಿ ಅವರ ಮುಖಮುದ್ರೆ ಬದಲಾಯಿಸಿತು. ಎದ್ದು ನಿಂತು ಎರಡೂ ಕೈಗಳನ್ನು ನನ್ನ ಹೆಗಲುಗಳ ಮೇಲಿಟ್ಟು ಹೇಳಿದರು. "I am sorry. I am so sorry. Why didn't you tell me? (ನನ್ನ ಉತ್ತರಕ್ಕಾಗಿ ಕಾಯದೆ ) of course, you were afraid. I should have asked you why you were not in your class. I am very sorry" ಎಂದರು.

ಅವರ ತೀವ್ರ ಸಂಕಟ ನೋಡಿ ಪೆಟ್ಟು ತಿಂದಿದ್ದ ನನಗೇ ವ್ಯಸನವಾಯಿತು.

ಸುಮಾರು 12ನೇ ವಯಸ್ಸಿಗೆ ಮೂರ್ತಿರಾಯರಿಗೆ ಮುಂಜಿ ಮಾಡಿದರು. ಅವರು ಮಂತ್ರದಿಂದ ಆಕರ್ಷಿತರಾದರೂ ಸಂಧ್ಯಾವಂದನೆಯ ಆಚರಣೆ ಅವರಿಗೆ ಬೇಸರ ತಂದಿತು. ಆ ದಿನಗಳಲ್ಲಿ ಸಂಧ್ಯಾವಂದನೆಯನ್ನು ವಿದ್ಯುಕ್ತವಾಗಿ ಆಚರಿಸಲೇಬೇಕಾಗಿತ್ತು. "ಕೆಲವು ದಿನ ಹಾಗೂ ಹೀಗೂ ತಳ್ಳಿ, ಪಂಚಪಾತ್ರೆ, ಉದ್ಧರಣೆ, ಅರ್ಘ್ಯಪಾತ್ರೆಗಳನ್ನು ತೆಗೆದುಕೊಂಡು ಹೊರಜಗಲಿಯ ಮೇಲೆ ಕೂತು, ಮನಸ್ಸನ್ನು ಅದು ಹೋದ ಕಡೆ ಹರಿಯಬಿಟ್ಟು ನಿಮಿಷಕ್ಕೊಂದು ಸಾರಿ ಉದ್ಧರಣೆಯನ್ನು ಪಂಚಪಾತ್ರೆಯಲ್ಲಿ ಅದ್ದಿ ಟಣ ಟಣ ಸದ್ದು ಮಾಡಿ ಸಂಧ್ಯಾವಂದನೆ ಮಾಡುತ್ತಿದ್ದಾನೆ" ಎಂಬ ಭ್ರಮೆಯನ್ನು ಕಲ್ಪಿಸಿದವರು ಅವರು. ಈ ವೇಷ 19ನೇ ವರ್ಷದಲ್ಲಿ ಅವರು ಕಾಲೇಜಿಗೆ ಸೇರಿಕೊಳ್ಳುವವರೆಗೂ ನಡೆಯುತ್ತಿದ್ದು, ನಂತರ ಆ ಘಟನೆಯು ನಿಂತುಹೋಯಿತೆಂದು ಹೇಳುವಾಗ, ಮೂರ್ತಿರಾಯರು ಹರೆಯದ ಹುಮ್ಮಸ್ಸಿನಲ್ಲಿದ್ದರು.

ಆ ಕಾಲದಲ್ಲಿ ಜಡೆಹಾಕಿಕೊಂಡೇ ಹುಡುಗರು ಕ್ಲಾಸುಗಳಿಗೆ ಬರುತ್ತಿದ್ದರು. ಮೂರ್ತಿರಾಯರು ಜಡೆಹಾಕಿಕೊಳ್ಳಲು ಒಪ್ಪದೇಹೋದಾಗ ಅವರಿಗೆ 'ಬೊಂಬಾಯಿ ಗಂಟು' ಹಾಕಿ ಶಾಲೆಗೆ ಕಳುಹಿಸುತ್ತಿದ್ದರು ಅವರ ತಾಯಿ. ಮೂರ್ತಿರಾಯರು ಎಂ. ಎ.

ಸೇರುವವರೆಗೂ ತಲೆಯಲ್ಲಿ ಶೋಭಿಸುತ್ತಿದ್ದ 'ಜೊಂಪಾಯ ಗಂಟು' ತರುವಾಯ ತಿಂಗಳೆರಡು ಕಳೆಯುವಷ್ಟರಲ್ಲಿ ಮಾಯವಾಯಿತು.

ಹೈಸ್ಕೂಲು ಮತ್ತು ಎಂಟ್ರೆನ್ಸ್ ಕ್ಲಾಸುಗಳ ನಾಲ್ಕು ವರ್ಷಗಳ ಅವಧಿಯಲ್ಲೇ "ಇದನ್ನು ದಾಟಬೇಡ" ಎಂದು ಪುರಾತನ ಮತಧರ್ಮ ಸಂಪ್ರದಾಯಗಳು ಹಾಕಿದ್ದ ಲಕ್ಷ್ಮಣರೇಖೆಗಳಲ್ಲಿ ಕೆಲವು ರೇಖೆಗಳನ್ನು ಅವರು ಎಂದೋ ದಾಟಿದ್ದರು. ಅವರ ಪ್ರಕಾರ, ಅಕ್ಕಿ ಹೆಬ್ಬಾಳಿನಲ್ಲಿ ನೆಲಸುವ ಆಸೆ, ಮತಶುದ್ಧ, ಜಾತಿಶುದ್ಧ, ದೈವಶುದ್ಧ ಇತ್ಯಾದಿಗಳ ಗರ್ಭದಿಂದ ಅವರು ಹೊರಬಂದದ್ದರಿಂದ ಹಿಂದಿನವರು ಕೊಟ್ಟ ಅರ್ಥದಲ್ಲಿ ಅಲ್ಲವಾದರೂ ಅವರು 'ದ್ವಿಜ'ರಾದರು. 1918, 19ರ ಹೊತ್ತಿಗೆ ಅವರ ಮನೆಯಲ್ಲಿ ಮೂರ್ತಿರಾಯರ ಸ್ಟೇಟಸ್ (status) ಏರಿತ್ತು. ಸಂಪ್ರದಾಯವನ್ನು ಟೀಕಿಸಿ ಅಭಿಪ್ರಾಯಗಳನ್ನು ಹಿಂಜರಿಕೆಯಿಲ್ಲದೆ 'ಏನಬಲ್ಲಿರಿ ನೀವು ನೆರೆ ಸುಜ್ಞಾನ ಮೂರುತಿ ನಾನು' ಎಂಬ ಧೋರಣೆಯಲ್ಲಿ ಅವರು ಮಂಡಿಸುತ್ತಿದ್ದರಂತೆ. ಅಷ್ಟೇ ಅಲ್ಲ, "ಹಳ್ಳಿಯಗೊಡ್ಡುಗಳಂತಲ್ಲ, ಅರ್ಥವಿಲ್ಲದ ಪದ್ಧತಿಗಳಿಗೆ ಸೊಪ್ಪು ಹಾಕುವವನಲ್ಲ" ಎಂಬ ಅಹಂಕಾರಕ್ಕೂ ಅಭಾವವಿರಲಿಲ್ಲ.

1919 ರಲ್ಲಿ ಅವರ ಮದುವೆ ನಿಶ್ಚಯವಾದಾಗ ಅವರು ಹೇಳಿದ ಮಾತು- "ಚಿಕ್ಕ ವಯಸ್ಸಿನಲ್ಲಿ ಮದುವೆ ಮಾಡುವುದು ಗೊಡ್ಡು ವೈದಿಕ ಪದ್ಧತಿ. ಸಮಾಜಕ್ಕೆ ಹಾನಿಕರ." ಹಾಗೆ ಅವರು ಹೇಳಿದ್ದರೂ ಅವರ ಹದಿಹರೆಯದ ವಯಸ್ಸು 'ಹೆಂಡತಿಯಾಗುವವಳು ಹಾಗಿರಬೇಕು, ಹೀಗಿರಬೇಕು ಎಂಬ ಹಲವಾರು ಕಲ್ಪನೆಗಳನ್ನು, ಕನಸುಗಳನ್ನು ಕಂಡಿತ್ತು ಎಂಬುದು ನಿಜ' ಎಂಬುದನ್ನು ರಾಯರು ನೆನಪಿಸಿಕೊಂಡರು.

# ಅಕ್ಕಿಹೆಬ್ಬಾಳಿನಿಂದ ಅಮೆರಿಕಕ್ಕೆ

ಡಾ. ಎಂ. ಎ. ಶ್ರೀನಿವಾಸ್

ಅಮೇರಿಕ ದೇಶ ತಾನು ಹುಟ್ಟಿದಂದಿನಿಂದ ಇಂದಿನವರೆಗೂ ಜಗತ್ತಿನ ಎಲ್ಲ ಭಾಗದ ಜನರನ್ನು ಆಕರ್ಷಿಸುವ ಕೇಂದ್ರವಾಗಿದೆ. ಅಪಾರ ಸಂಪತ್ತು, ವಿಜ್ಞಾನ - ತಂತ್ರಜ್ಞಾನ ಕಲೆ, ಶಿಕ್ಷಣ, ವಿದ್ಯೆ, ವಿಹಾರ ಒಂದಲ್ಲ ಹಲವಾರು ಅಂಶಗಳು ಆಸಕ್ತರನ್ನು ಸೂಜಿ ಗಲ್ಲಿನಂತೆ ಅದರತ್ತ ಸೆಳೆಯುತ್ತವೆ. ಪಾರ್ಕ್ಸ್ ಅವರು ಹೇಳುವಂತೆ ಇಲ್ಲಿಗೆ ಬಂದವರು ಯಾರೂ ಈ ದೇಶ-ಸಂಸ್ಕೃತಿ ಬಗ್ಗೆ ತಮ್ಮದೇ ಆದ ಅಭಿಪ್ರಾಯವನ್ನು ಪಡೆದುಕೊಳ್ಳದೆ ಹೋಗಿಲ್ಲ. ಅಸಂಖ್ಯಾತ ಪ್ರವಾಸಿಗರು ಇಲ್ಲಿಗೆ ಬಂದು ಹೋಗಿದ್ದಾರೆ. ಅಮೇರಿಕ ಬಗ್ಗೆ ಅಷ್ಟೇ ಅಭಿಪ್ರಾಯಗಳೂ ವ್ಯಕ್ತವಾಗಿವೆ. ಕನ್ನಡ ನಾಡಿನ ಅನೇಕ ವಿದ್ವಾಂಸರೂ, ವಿದ್ಯಾರ್ಥಿಗಳೂ, ವಿಜ್ಞಾನಿಗಳೂ, ಆಡಳಿತಗಾರರೂ ಈ ದೇಶವನ್ನು ಸಂದರ್ಶಿಸಿದ್ದಾರೆ. ಅನೇಕರು ಅಮೇರಿಕವನ್ನು ಕುರಿತು ತಮ್ಮ ಅನುಭವ ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದಾರೆ. ಕೆಲವು ಲೇಖನಗಳು ಆ ದೇಶದ ಸಂಪತ್ತು, ವೈಭವ ಶಕ್ತಿಯನ್ನು ವಿವರಿಸುತ್ತವೆ. ಕೆಲವು ಪ್ರೌಢ ಕೃತಿಗಳು ಆ ದೇಶದ ಸಂಸ್ಕೃತಿಯ ಚಿತ್ರವನ್ನು ನೀಡುವುದು ಮಾತ್ರವಲ್ಲದೆ, ಬರೆದವರ ಪ್ರೌಢಿಮೆ, ಕಲಾಭಿಜ್ಞತೆ, ಲೋಕಾನುಭವ, ಅಭಿರುಚಿಗಳನ್ನೂ ಸೂಚಿಸುವ ಆಧಾರಗಳಾಗಿವೆ. ಅಂತಹ ಗ್ರಂಥಗಳಲ್ಲಿ ಎ. ಎನ್. ಮೂರ್ತಿರಾಯರ 'ಅಪರ ವಯಸ್ಕನ ಅಮೇರಿಕ ಯಾತ್ರೆ' ಒಂದು ಮಹತ್ವದ ಕೃತಿಯಾಗಿದೆ.

ಗ್ರಂಥದ ವ್ಯಾಪ್ತಿಯನ್ನು ಲೇಖಕರು ಪ್ರಾರಂಭದಲ್ಲಿ ಪ್ರಸ್ತಾಪಿಸಿದ್ದಾರೆ. "ಅದು ದಿನಚರಿಯೂ ಅಲ್ಲ ಸಾಮಾನ್ಯ ಕಥನವೂ ಅಲ್ಲ. ಅವೆರಡರ ಬೆರಕೆ ಅನುಭವ ನಿರೂಪಣೆ ಎಂದು ಕರೆದು ಸುಮ್ಮನಾಗುತ್ತೇನೆ. ಇದರಲ್ಲಿ ಅಮೆರಿಕದಲ್ಲೇ ಆದ ಅನುಭವಗಳ ಜೊತೆಗೆ ಅದರಿಂದ ಪ್ರಚೋದಿತವಾಗಿ ಮನಸ್ಸಿನ ಮೇಲ್ಪದರಕ್ಕೆ ಬಂದ ಹಳೆಯ ಅನುಭವಗಳೂ ಸೇರಿವೆ." ಲೇಖಕರು ತಮ್ಮ ಮನೋಧರ್ಮದ ಬಗ್ಗೆಯೂ ಒಂದು ಮಾತನ್ನು ಹೇಳಲು ಮರೆಯುವುದಿಲ್ಲ. "ರೊಮ್ಯಾಂಟಿಕ್ ಮನೋವೃತ್ತಿಯು ದೂರ ದೇಶಗಳಿಗೆ ಎಲ್ಲೂ ಇಲ್ಲದ ವರ್ಣಸಂಪತ್ತನ್ನೂ ಪ್ರಭೆಯನ್ನೂ ತಂದು ಒದಗಿಸುತ್ತದೆಯಷ್ಟೆ."

ತಮ್ಮ ಮಿತ್ರರೂ, ಸಂಬಂಧಿಗಳೂ ನೀಡಿದ ಆಹ್ವಾನದ ಮೇರೆ, ಅಮೆರಿಕಕ್ಕೆ ಬಂದ ಮೂರ್ತಿರಾಯರು ಅಲ್ಲಿನ ಹಲವಾರು ನಗರಗಳಿಗೆ ಭೇಟಿ ನೀಡುತ್ತಾರೆ. ಅಲ್ಲಿನ ಪ್ರಮುಖ ಪ್ರೇಕ್ಷಣೀಯ ಸ್ಥಳಗಳನ್ನು ಸುತ್ತಿ ಬರುತ್ತಾರೆ. ಆ ದೇಶದ ಇತಿಹಾಸ ಸಂಸ್ಕೃತಿ

ಯನ್ನು ಆಸಕ್ತಿಯಿಂದ ಅಭ್ಯಸಿಸುತ್ತಾರೆ. ಅವರ ಜೀವನ ಕ್ರಮವನ್ನು ಕುತೂಹಲದಿಂದ ಗಮನಿಸುತ್ತಾರೆ. ಅನುಭವ, ಅಭಿಪ್ರಾಯಗಳು ಅವರ ಗ್ರಂಥದಲ್ಲಿ ಮನೋಜ್ಞವಾಗಿ ಮೂಡಿಬಂದಿವೆ.

ಆದರೆ ಅಕ್ಕಿಹೆಬ್ಬಾಳಿನಿಂದ ಅಮೇರಿಕಕ್ಕೆ ಹೋದ ಈ ಲೇಖಕನ ದೃಷ್ಟಿಕೋನ ಭಿನ್ನವೂ ವಿಶಿಷ್ಟವೂ ಆಗಿರುವುದು ಪ್ರತಿಪುಟದಲ್ಲೂ ಎದ್ದು ಕಾಣುತ್ತದೆ. ಪುಸ್ತಕದ ಹೆಸರಲ್ಲೇ ಅದರ ಪೂರ್ವಸೂಚನೆ ದೊರೆಯುತ್ತದೆ. ಅದು ಅಪರ ವಯಸ್ಕನ ಯಾತ್ರೆ. ಇದು ವೃದ್ಧಾಪ್ಯಕ್ಕಿಂತಲೂ ಅವರ ಮನೋವೃತ್ತಿಯನ್ನು ಸೂಚಿಸುವ ಮಾತು. ಆ ದೇಶಕ್ಕೆ ಹೋಗುವ ಇಂದಿನ ಪೀಳಿಗೆಯ ಅನೇಕ ಪ್ರವಾಸಿಗರಂತೆ ಮೂರ್ತಿರಾಯರು ಅಮೆರಿಕದ ಅನೇಕ ಬೆಡಗುಗಳಿಗೆ ಮಾರುಹೋಗಿ ಅದನ್ನು ಹಾಡಿಹೊಗಳುವುದಿಲ್ಲ. ಹಾಗೆಯೇ ಯಾವುದೋ ಪೂರ್ವಗ್ರಹಕ್ಕೆ ಸಿಕ್ಕಿ ಅದನ್ನು ಖಂಡ ತುಂಡವಾಗಿ ಖಂಡಿಸುವುದೂ ಇಲ್ಲ. ಇಡೀ ಗ್ರಂಥದಲ್ಲಿ ಎದ್ದು ಕಾಣುವ ಅವರ ದೃಷ್ಟಿ ಧೋರಣೆ ಪಕ್ಷಪಾತರಹಿತವಾದುದು, ಪ್ರಬುದ್ಧವಾದುದು. ಪ್ರತಿಯೊಂದು ವಾಕ್ಯವೂ ಅವರ ವೈಚಾರಿಕತೆಯನ್ನು, ವಿದ್ವತ್ತನ್ನು, ಹೃದಯ ವೈಶಾಲ್ಯವನ್ನು ಎತ್ತಿ ತೋರಿಸುತ್ತಾ ಹೋಗುತ್ತದೆ. ಆ ದೂರ ದೇಶದ ಬಗ್ಗೆ ಅಲ್ಲಿನ ಸಂಸ್ಕೃತಿಯ ಬಗ್ಗೆ ಕನ್ನಡಿಗನೊಬ್ಬನ ಪ್ರತಿಕ್ರಿಯೆ ವ್ಯಕ್ತವಾಗುತ್ತದೆ. ಈ 'ಅಪರ ವಯಸ್ಕನ' ಬಹುಮುಖ್ಯ ಸಾಧನೆಯೆಂದರೆ, ಈ ದೇಶದ ಬಗ್ಗೆ ಕೆಲವೇ ಪ್ರಾಜ್ಞರಂತೆ ಅಮೆರಿಕ ಹಾಗೂ ಅಮೆರಿಕನ್ನರ ನಡುವಿನ ವ್ಯತ್ಯಾಸವನ್ನು ಅವರು ಗುರುತಿಸಿದ್ದಾರೆ. ಈ ಕಾರಣದಿಂದ ಅವರ ಯಾತ್ರೆ ಸಾಹಿತ್ಯಕವಾಗಿ ಒಂದು ರಸಕಾವ್ಯವಾದರೆ ಸಾಂಸ್ಕೃತಿಕವಾಗಿಯೂ ಮಹತ್ವದ ಕೃತಿಯೆನಿಸಿಕೊಳ್ಳುತ್ತದೆ.

ಅಮೆರಿಕದ ಆಕರ್ಷಣೆಗಳೆಂದು ಪ್ರಸಿದ್ಧವಾಗಿರುವ ಅದ್ಭುತ ದೃಶ್ಯಗಳೂ, ಸಾಧನೆಗಳೂ, ನಮ್ಮ ಯಾತ್ರಿಕನಿಗೆ ಅಷ್ಟು ಆಕರ್ಷಕವಾಗುವುದಿಲ್ಲ. ಅಲ್ಲಿನ ಮಹಾನಗರಗಳು ಗಗನಚುಂಬಿ ಶಿಖರಗಳು, ಅಲ್ಲಿಯ ವಾಹನಗಳು, ವೈಭವಗಳು– ಇವುಗಳ ಬಗ್ಗೆ ಲೇಖಕರ ಪ್ರತಿಕ್ರಿಯೆ ಭಿನ್ನವಾದುದು. ನ್ಯೂಯಾರ್ಕ್‌ನಲ್ಲೂ, ಷಿಕಾಗೋನಲ್ಲೂ ಗಗನಚುಂಬಿ ಸ್ಥಳಗಳಿಗೆ ಹೋದಾಗ ಇದು ದೇವರು ಸೃಷ್ಟಿಸಿದ ಪ್ರಪಂಚದಲ್ಲಿ ಬೇರೊಂದು ನಿರ್ಮಾಣ ಪ್ರಪಂಚ, ..... ನಗರವು "ರಾಕ್ಷಸವಾಗುವುದು ಸಾಧ್ಯ". ಇನ್ನು ಜಗತ್ತಿನಾದ್ಯಂತ ಅತ್ಯಂತ ಹೆಚ್ಚು ಜನ ಪ್ರವಾಸಿಗಳನ್ನು ಸೆಳೆಯುವ ಪ್ರಸಿದ್ಧ ಆಕರ್ಷಣೆಯ ನ್ಯೂಯಾರ್ಕ್ ನಗರದ ಬಗ್ಗೆ ಅವರ ಪ್ರತಿಕ್ರಿಯೆ ಹೀಗಿದೆ "ಅವತ್ತು ನ್ಯಾಯವಾಗಿ ನಾವೆಲ್ಲ ನ್ಯೂಯಾರ್ಕ್ ನಗರವನ್ನು ನೋಡಲು ಹೋಗಬೇಕಾಗಿತ್ತು. ಆದರೆ ಆ ನಗರ 'ನನ್ನನ್ನು ನೋಡಲು ಎಷ್ಟೊಂದು ಜನ ಬರುತ್ತಾರೆ!' ಎಂದು ಹೆಮ್ಮೆಯಿಂದ ಉಬ್ಬಿಹೋಗಿದೆ. ಕೆಲವರಾದರೂ ಅದರ ಕಡೆಗೆ ತಿರಸ್ಕಾರ ದೃಷ್ಟಿಯನ್ನು ಬೀರಿದರೆ ಅದರ ಮೈಗೊಳ್ಳೆಯದು."

ಆದರೆ ಮೂರ್ತಿರಾಯರ ದೃಷ್ಟಿ ತಿರಸ್ಕಾರದ್ದೂ ಅಲ್ಲ, ಪುರಸ್ಕಾರದ್ದೂ ಅಲ್ಲ, ಅದು ವಿಚಾರದೃಷ್ಟಿಯದು, ವಿಶ್ಲೇಷಣೆಯದು. ಸಾಮಾನ್ಯ ಯಾತ್ರಿಕ ಆ ದೇಶದ ಮಹೋನ್ನತ ಶಿಖರವನ್ನು ವೀಕ್ಷಿಸಿದರೆ, ಈ ಲೇಖಕರು ಅದರ ಸಂಸ್ಕೃತಿಯ ಬೇರುಗಳನ್ನು

ಬಿಡಿಸಿ ನೋಡಲು ಪ್ರಯತ್ನಿಸುತ್ತಾರೆ. ತಮ್ಮ ಈ ಯತ್ನದಲ್ಲಿ ಬಹುಮಟ್ಟಿಗೆ ಸಫಲರಾಗಿದ್ದಾರೆ.

ಅಮೇರಿಕದಲ್ಲಿ ಮೆಚ್ಚಬೇಕಾದುದು ಹೊಗಳಿಕೆಗೆ ಅರ್ಹವಾದುದು ಬೇಕಾದಷ್ಟಿದೆ ಎನ್ನುವ ಲೇಖಕರು(ಪುಟ 62) ಅರ್ಹವಾದುದನ್ನೂ,ಅನರ್ಹವಾದುದನ್ನೂ ಬಹು ಎಚ್ಚರಿಕೆಯಿಂದ, ವಿಚಕ್ಷಣೆಯಿಂದ ಪರಿಶೀಲಿಸುತ್ತಾರೆ. ಅಮೆರಿಕನ್ನರ ಒಟ್ಟು ಮನೋಧರ್ಮ "ವೈಚಾರಿಕ ಮಾನವತೆ" ಎಂದು ವಿಶ್ಲೇಷಿಸುವ ಮೂರ್ತಿರಾಯರು ಅವರ ಸಂಸ್ಕೃತಿಯ ಸ್ವರೂಪವನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಅಮೆರಿಕನ್ನರನ್ನು ಚಾರ್ವಾಕರೆಂದು ಕರೆದಿರುವುದು ಎಷ್ಟು ಅರ್ಥಪೂರ್ಣ! (185) ಅವರ ಪ್ರಾಪಂಚಿಕತೆ, ಸುಖಲೋಲುಪತೆಗಳನ್ನು ಬೇರೆ ಹೇಗೆ ವಿವರಿಸುವುದು? ಮುಂದುವರೆದು ಅವರ ಜೀವನ ಧರ್ಮವನ್ನೂ ವಿಶ್ಲೇಷಿಸುತ್ತಾ, "ಅಮೆರಿಕನ್ನರು ವ್ಯವಹಾರ ಚತುರರು. ಅವರದು enlightended selfishness" ಎಂದು ಹೇಳುತ್ತಾರೆ. ಈ ಅಂಶವನ್ನು ಮತ್ತಷ್ಟು ವಿಶ್ಲೇಷಿಸುತ್ತಾ ಹೀಗೆನ್ನುತ್ತಾರೆ. "ಅಮೆರಿಕನ್ನರು ಚತುರರು, ಸ್ವಾರ್ಥಿಗಳು.... ಅವರ ಸ್ವಾರ್ಥ ವ್ಯವಹಾರಜ್ಞಾನವುಳ್ಳದ್ದು. ಇತರರಿಗೆ ಅನುಕೂಲ ಮಾಡಿಕೊಟ್ಟರೆ ನಮಗೂ ಅನುಕೂಲ ಎಂಬ ರಹಸ್ಯವನ್ನು ಬಲ್ಲ ಸ್ವಾರ್ಥ. ಅನೇಕ ವೇಳೆ ಅದು ಔದಾರ್ಯದಂತೆ ಕಾಣುತ್ತದೆ" ಒಮ್ಮೊಮ್ಮೆ ಅವರ ಅನಿಸಿಕೆಗಳು ಸಿನಿಕತನದಂತೆ ಕಂಡರೂ, ಅದು ಅಮೆರಿಕದ, ಅಲ್ಲಿನ ಜನರ ಜೀವನದ ಯಥಾರ್ಥ ಚಿತ್ರವನ್ನು ಕೊಡುತ್ತದೆನ್ನುವುದನ್ನು ಮರೆಯುವಂತಿಲ್ಲ.

ಸಾಮಾನ್ಯವಾಗಿ ಪ್ರತಿಯೊಬ್ಬ ವಿದೇಶೀಯನೂ ತನ್ನ ದೇಶದ ನೀತಿನಿಯಮಗಳನ್ನು ಅಮೆರಿಕದ ಪದ್ಧತಿಗಳನ್ನು ಹೋಲಿಸಿ ನೋಡುತ್ತಾನೆ. ಯಾವುದು ಮೇಲು, ಯಾವುದು ಕೀಳು, ಯಾವುದು ಹಿತ, ಯಾವುದು ಅಹಿತ ಎಂಬ ವಿವೇಚನೆ ಮಾಡುವಾಗ ವ್ಯಕ್ತಿಯ ಸಂಸ್ಕಾರ ಪ್ರಬುದ್ಧತೆ ಕಂಡುಬರುತ್ತದೆ. ಅಮೆರಿಕನ್ನರ extravert ಸ್ವಭಾವವನ್ನು ಲೇಖಕರು ಹೀಗೆ ವಿಶ್ಲೇಷಿಸುತ್ತಾರೆ. "ನಮ್ಮ ಮನೋವೃತ್ತಿಗೂ ಇಲ್ಲಿಯ ಜನರದ್ದಕ್ಕೂ ಅದೆಷ್ಟು ವ್ಯತ್ಯಾಸ. ನಕ್ಕು ನಲಿದು ಕಲೆತು ಕುಪ್ಪಳಿಸಿ ಹಾಡಿ ಕುಣಿದು ಆನಂದಪಡುತ್ತಾರೆ. ನಮ್ಮಲ್ಲಿ ಜೀವನೋತ್ಸಾಹದ ಚಿಲುಮೆ ಬತ್ತಿ ಹೋಗಿದೆಯೇ, ಅದನ್ನು ನಿಯಂತ್ರಿಸಿ ಉಚಿತ ಪ್ರಮಾಣದಲ್ಲಿ ಮಾತ್ರ ಹೊರಹೊಮ್ಮಿಸುತ್ತಿದ್ದೇವೆಯೇ, ನಮ್ಮದು ಉತ್ಸಾಹದ ಅಭಾವವಲ್ಲ ಔಚಿತ್ಯದ ಅಸ್ತಿತ್ವ ಎನಿಸುತ್ತದೆ. ನಮ್ಮ ಗೆಲುವಿನ ಕೊರತೆ ಎಷ್ಟು ಅಸ್ವಾಭಾವಿಕವೋ, ಇವರ ಗೆಲುವು ಅಷ್ಟೇ ಅಸ್ವಾಭಾವಿಕ ಎನ್ನಬಹುದು."

ಅಮೆರಿಕನ್ನರ ಮನೋವೃತ್ತಿಯನ್ನು ಸಂಸ್ಕೃತಿಯನ್ನು ಮೂರ್ತಿರಾಯರು ಕೇವಲ ಭಾರತೀಯರಂತೆ ಅಲ್ಲದೆ, ವಿಶ್ವಮಾನವರಾಗಿ, ದೇಶ, ಕಾಲ, ಭೌಗೋಳಿಕ ಮಿತಿಗಳನ್ನು ದಾಟಿ ಹೋಗಿ ವಿಶ್ಲೇಷಿಸುತ್ತಾರೆ. ಅಮೆರಿಕನ್ನರ ನಿತ್ಯಜೀವನದಲ್ಲಿ ಎದ್ದು ಕಾಣುವ ನಗ್ನತೆ, ಡೇಟಿಂಗ್ ಪದ್ಧತಿಗಳ ಅವರ ನಿಲುವು ವಿಚಾರಪ್ರದವಾಗಿರುವಂತೆ ನಿಷ್ಪಕ್ಷಪಾತವೂ ಆಗಿದೆ. ಲೈಂಗಿಕ ಸ್ವಾತಂತ್ರ್ಯವಿದ್ದರೆ ಅತ್ಯಾಚಾರಗಳು ನಡೆಯುವುದಿಲ್ಲ ಎನ್ನುವ ಅಮೆರಿಕನ್ನರ ಅಭಿಪ್ರಾಯ ಸರಿಯಲ್ಲ. ಮುಕ್ತ ಲೈಂಗಿಕತೆ ಸಾಮಾಜಿಕ ಭದ್ರತೆಗೆ

ಹಾನಿಕಾರಕ ಎಂಬ ತೀರ್ಮಾನಕ್ಕೆ ಬರುತ್ತಾರೆ. ಮೇಲುನೋಟಕ್ಕೆ ಕಾಣುವ ಕ್ಷಣಿಕ ಕೃತಕ ಸಭ್ಯತೆಯ ಪರದೆಯನ್ನು ಸೀಳಿ ಅವರ ವರ್ತನೆಯನ್ನು ವಿಶ್ಲೇಷಿಸುತ್ತಾರೆ. ಅವರ ಸಂಸ್ಕೃತಿಯನ್ನೂ ಮೌಲೀಕರಿಸುತ್ತಾರೆ. ಅಮೆರಿಕನ್ನರ ವ್ಯಕ್ತಿವಾದ, ದೃಷ್ಟಿ, ಸಮಷ್ಟಿ, ವ್ಯಕ್ತಿ ಸ್ವಾತಂತ್ರ್ಯ ಇವುಗಳನ್ನು ಚರ್ಚಿಸುತ್ತಾ ಅಮೆರಿಕನ್ನರು ವ್ಯಕ್ತಿ ಪಾರಮ್ಯವನ್ನು ಎತ್ತಿ ಹಿಡಿಯುತ್ತಾರೆ. ಇದರ ಸಾಧಕ ಬಾಧಕಗಳೇನು ಎಂಬುದನ್ನು ಔಚಿತ್ಯಪೂರ್ಣವಾಗಿ ನಿರೂಪಿಸುತ್ತಾರೆ. (ಪುಟ 254)

ಜಗತ್ತಿನ ಅತ್ಯಂತ ಬಲಿಷ್ಠ, ಅತಿ ವೈಭವದ ನಾಜೂಕಿನ ನಾಗರಿಕತೆಯನ್ನು ನಿರ್ದಾಕ್ಷಿಣ್ಯವಾಗಿ ವಿಮರ್ಶಿಸುತ್ತಾರೆ. ಆ ದೇಶದ ಕ್ರೌರ್ಯ, ಅಪರಾಧಗಳು ಅಧಿಕ ಭಯದ ನಡುವಿನ ಬದುಕಿನ ಅಸ್ವಸ್ಥ ಸಮಾಜದ ಚಿತ್ರ ನೀಡುತ್ತಾರೆ. ಸಾಮಾಜಿಕ ಜೀವನದಲ್ಲಿ ಭದ್ರತೆಯಿಲ್ಲದಿರುವುದನ್ನು ಅದರ ಕಾರಣಗಳನ್ನೂ ಗುರುತಿಸುತ್ತಾರೆ. "ಅಮೇರಿಕನ್ನರು ಬಹಳ chivalrous ನಿಜ. ಆದರೆ ಅವರಿಗೆ ಮಹಿಳೆಯ ಬಗ್ಗೆ ಗೌರವವಿಲ್ಲ. - ಅಲ್ಲಿ 'ಸ್ತ್ರೀಯು ಬೇಟೆಯ ಮೃಗ' ಎಂಬ ಕಠೋರ ಸತ್ಯವನ್ನು ಹೊರಗೆಡಹುತ್ತಾರೆ. ಅಮೇರಿಕನ್ನರು ಇತರ ದೇಶಗಳಿಗಿಂತಲೂ ತಮ್ಮ ಅವಶ್ಯಕತೆಗಳನ್ನು ಹೆಚ್ಚಿಸಿಕೊಂಡಿದ್ದಾರೆ. ಪ್ರಕೃತಿಯ ಭಾಂಡಾರವನ್ನು ಬರಿದು ಮಾಡುತ್ತಿದ್ದಾರೆ" ಎಂದು ಟೀಕಿಸಿದರೂ ಪರಿಸರ ನೀತಿಯಲ್ಲಿನ ದ್ವಂದ್ವವನ್ನು ಗುರುತಿಸುತ್ತಾರೆ. "ಅಮೆರಿಕನ್ನರು ಒಂದು ಕಡೆ ಪರಿಸರವನ್ನು ಕೊಳಕು ಮಾಡುತ್ತಾರಾದರೂ, ಮರಗಿಡ, ಹೂವು, ಗಿರಿ, ವನ, ನದಿ, ಹಿಮಾವೃತ ಪರ್ವತಗಳು ಇವನ್ನು ಮರೆತಿಲ್ಲ." ಅಮೆರಿಕದಲ್ಲಿ ಪರಿಸರ ವಿನಾಶ ಅವ್ಯಾಹತವಾಗಿ ನಡೆದಿದೆ ಎಂಬುದನ್ನು ಎತ್ತಿ ತೋರಿಸುತ್ತಾರೆ. ಅದೇ ರೀತಿ ಆ ದೇಶದ ಯಾಂತ್ರೀಕರಣದ ಹಾವಳಿಯನ್ನು ದಾಖಲಿಸುತ್ತಾರೆ. ಅಮೆರಿಕದ ಬಹುರೂಪೀ ಸಂಸ್ಕೃತಿಯ ವಿವಿಧ ಮುಖಗಳನ್ನು ಸಾಮಾಜಿಕ, ಐತಿಹಾಸಿಕ ಮನೋವೈಜ್ಞಾನಿಕ ದೃಷ್ಟಿಗಳಿಂದ ಪರೀಕ್ಷಿಸಿ ಅದರ ಒಟ್ಟಾರೆ ಚಿತ್ರವನ್ನು ನಮಗೆ ನೀಡುತ್ತಾರೆ. ರೆಡ್ ಇಂಡಿಯನ್ನರ ಸ್ಥಿತಿಗತಿಗಳನ್ನು ವಿಮರ್ಶಿಸುತ್ತಾ "ಬಿಳಿಯರ ಆಗಮನ ಅಮೆರಿಕಕ್ಕೆ ಒಳಿತಾಯಿತೇ" ಎಂಬ ಇತಿಹಾಸದ ಮೂಲಭೂತ ಪ್ರಶ್ನೆಯನ್ನು ಕೇಳುತ್ತಾರೆ. ಇದೇ ಸಂದರ್ಭದಲ್ಲಿ ಅಮೇರಿಕದ ಸಂಸ್ಕೃತಿಗೆ ಯೆಹೂದ್ಯರ ಕೊಡುಗೆ, ಅಲ್ಲಿ ವಿದೇಶೀಯರ ಅಲ್ಪಮತೀಯರ ಸ್ಥಿತಿಯನ್ನು ಚಿತ್ರಿಸುತ್ತಾರೆ. ಮೂರ್ತಿರಾಯರ ಅಮೆರಿಕನ್ ಯಾತ್ರೆಯಲ್ಲಿ ಅಲ್ಲಲ್ಲಿ ಕೆಲವು ಭಾರತೀಯ ಹಾಗೂ ಅಮೆರಿಕನ್ನರ ವ್ಯಕ್ತಿಚಿತ್ರಗಳೂ, ಅವರ ವೈಯಕ್ತಿಕ ಸಂಬಂಧಗಳೂ ಬಂದು ಹೋಗುತ್ತವೆ. ಅವುಗಳ ತಿಳಿಹಾಸ್ಯ ಲೇಪದಿಂದ ಓದುಗರಿಗೆ ಮುದ ನೀಡುತ್ತದೆ.

ಈ ಅಪರವಯಸ್ಕನ ಯಾತ್ರೆಯ ಚಿತ್ರಣ ಸಿಹಿಕಹಿಗಳನ್ನು ಸ್ಥಿತಪ್ರಜ್ಞ ಮನೋಭಾವದಿಂದ ಚಿತ್ರಿಸಿರುವುದರಿಂದ ಓದುಗರಿಗೆ ಸುಲಭಗ್ರಾಹ್ಯವಾಗುತ್ತದೆ. ಲೇಖಕರ ಶೈಲಿಯಲ್ಲಿನ ಕೊಂಕು, ವಿನಮ್ರತೆ ತನ್ನ ಮಿತಿ ಹೇಳಿಕೊಳ್ಳುವ ಪ್ರಾಮಾಣಿಕತೆ ಮನವನ್ನು ಮುಟ್ಟುತ್ತದೆ. ಒಂದೊಂದು ಪ್ರಕರಣದಲ್ಲೂ ಲೇಖಕರು ಇಡೀ ಅಮೆರಿಕನ್ನರ ಮನೋಧರ್ಮವನ್ನು ಪರಶೀಲಿಸುತ್ತಾ ಹೋಗುವುದರಿಂದ ಗ್ರಂಥ ಕಾಲ ದೇಶದ ಗಡಿಗಳನ್ನು

ದಾಟಿ ಸಾರ್ವತ್ರಿಕ ಮಹತ್ವವನ್ನು ಪಡೆಯುತ್ತದೆ. ಒಂದೊಂದು ಸನ್ನಿವೇಶ ಸಂಗತಿಯನ್ನು ವಿವರಿಸುವಾಗಲೂ ಅವರ ಜೀವನಪರ ಧೋರಣೆ ಸ್ಪಷ್ಟವಾಗುತ್ತದೆ. ಅವರ ಜೀವನ ಸ್ಫುಟಗೊಳ್ಳುತ್ತದೆ. ತಿಳಿಹಾಸ್ಯದ ನವಿರಾದ ಲೇಪ ಪುಸ್ತಕದ ಮೆರುಗನ್ನು ಹೆಚ್ಚಿಸಿದೆ. ಆದರೆ ಈ ಹಾಸ್ಯ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರಲ್ಲಿ ( ಅಮೆರಿಕದಲ್ಲಿ ಗೊರೂರು) ಕಾಣುವ ಸ್ಫೋಟಕವಾದುದಲ್ಲ, ಬಹು ಸೂಕ್ಷ್ಮವಾದುದು. ನಾರಿಕೇಳ ಪಾಕದಂತೆ ಸಾಧಾರಣ ಮೇಲ್ನೋಟಕ್ಕೆ ನಮ್ಮ ಗಮನಕ್ಕೆ ಬಾರದೇ ಹೋಗಲೂಬಹುದು. ಮೂರ್ತಿರಾಯರ ಪ್ರವಾಸಕಥನದಲ್ಲಿ ಕಥನ ಭಾಗಕ್ಕಿಂತಲೂ ವಿಚಾರ ವಿಮರ್ಶೆಗಳು ಪ್ರಧಾನವಾದಂತೆ ಕಂಡರೂ ಲೇಖಕರು ನೀಡುವ ಮಾನವೀಯತೆಯ ಸ್ಪರ್ಶ ಅದನ್ನು ಚೈತನ್ಯಶಾಲಿಯನ್ನಾಗಿ ಮಾಡುತ್ತದೆ. ಅಮೆರಿಕ ದೇಶದ ಆತಿಥ್ಯವನ್ನು ಸವಿದು ಅಲ್ಲಿನ ವೈಭವೋಪೇತ ಜೀವನವನ್ನು ಎದುರಿಸಿ ತಮ್ಮ ಊರಿಗೆ ಬಂದಾಗ ಅಕ್ಕಿಹೆಬ್ಬಾಳಿನ ಮೂರ್ತಿರಾಯರಿಗೆ ತಮ್ಮ ಊರಿನ ಕಾಫಿ ಬಹು ಆಪ್ಯಾಯಮಾನವಾಗಿ ಕಾಣುತ್ತದೆ. ಅಮೆರಿಕದ ಕಾಫಿ ರುಚಿಯಾಗಿದ್ದರೂ "ಈ ಸುಗಂಧವನ್ನೂ, ರುಚಿಯನ್ನೂ ಸಾಧಿಸ ಬೇಕಾದರೆ ಅದು ಸಾವಿರ ವರ್ಷ ಪಂಚಾಗ್ನಿಯ ಮಧ್ಯೆ ಒಂಟಿಗಾಲಿನ ಮೇಲೆ ನಿಂತು ತಪಸ್ಸು ಮಾಡಬೇಕು" ಎನ್ನುತ್ತಾರೆ.

# 'ಪೂರ್ವಸೂರಿಗಳೊಡನೆ'-ಒಂದು ಸಿಂಹಾವಲೋಕನ

**ಬಿ. ಜಿ. ಸತ್ಯಮೂರ್ತಿ**

ನಾನಿಲ್ಲಿ ಶ್ರೀ ಎ. ಎನ್. ಮೂರ್ತಿರಾಯರ 'ಪೂರ್ವಸೂರಿಗಳೊಡನೆ' ಕೃತಿಯ ಒಂದು ಸಿಂಹಾವಲೋಕನ ಮಾಡುವ ಪ್ರಯತ್ನ ಮಾಡಿದ್ದೇನೆ. ಕೃತಿಯು ಅವಲೋಕನ ಪೂರ್ಣವಾಗಿದೆಯೆಂದೂ ಹೇಳಲಾರೆ. ಯಾಕೆಂದರೆ ಇಲ್ಲಿ ಶ್ರೀ ಮೂರ್ತಿರಾಯರು ಆದಿ ಕವಿ ವಾಲ್ಮೀಕಿ ರಾಮಾಯಣ ಮಹಾಕಾವ್ಯದಲ್ಲಿ ಬರುವ 'ಸೀತಾಪರಿತ್ಯಾಗ'ದ ಘಟನೆಯನ್ನು ಕುರಿತು, ಈ ಕೃತಿಯನ್ನು ವಿಮರ್ಶಾತ್ಮಕವಾಗಿ ರಚಿಸಿರುವುದರಿಂದ ವಿಮರ್ಶೆಯ ಆಳ ಅಗಲಗಳೂ ಅಷ್ಟೇ ಮಹತ್ವಪೂರ್ಣವಾಗಿರಬೇಕಾಗುತ್ತದೆ. ಅದು ಕಿರು ಪ್ರಬಂಧದಲ್ಲಿ ಸಾಧ್ಯವಾಗುವುದಿಲ್ಲ.

ಹಾಗಾಗಿ ಶ್ರೀ ಮೂರ್ತಿರಾಯರು 'ಪೂರ್ವ ಸೂರಿಗಳೊಡನೆ' ಕೃತಿಯಲ್ಲಿ ಸೀತಾಪರಿತ್ಯಾಗದ ಬಗ್ಗೆ ನಾನಾ ಪೂರ್ವಸೂರಿಗಳು ತಮ್ಮ ಕೃತಿಗಳಲ್ಲಿ ಮಾಡಿರುವ ರಚನೆಗಳನ್ನು ತಮ್ಮ ವಿಮರ್ಶಾತ್ಮಕ ದೃಷ್ಟಿಯಿಂದ ನೋಡಿರುವಂತೆ ನಾನಿಲ್ಲಿ ಈ ಎಲ್ಲ ಪೂರ್ವಸೂರಿಗಳ ಪ್ರಯತ್ನವನ್ನೂ ನನ್ನ ದೃಷ್ಟಿಯಿಂದ ಸ್ಥೂಲವಾಗಿ ಅವಲೋಕಿಸಿದ್ದೇನೆ.

ಈ ಕೃತಿಗೆ ಶ್ರೀ ಮೂರ್ತಿರಾಯರಿಗೆ ಪ್ರೇರಣೆ ನೀಡಿದ ಮೂಲಕೃತಿ ಆದಿಕವಿ ವಾಲ್ಮೀಕಿ ರಾಮಾಯಣದ 'ಸೀತಾಪರಿತ್ಯಾಗ' ವಾದರೂ ಅವರು ಈ ಘಟನೆಯನ್ನು ನಾಲ್ಕು ನಿಟ್ಟಿನಿಂದ ನೋಡುವ ಒಂದು ತೌಲನಿಕ ಅಧ್ಯಯನವನ್ನೇ ನಡೆಸಿದ್ದಾರೆ.

1. ಸೀತಾಪರಿತ್ಯಾಗ-ವಾಲ್ಮೀಕಿಯ ದೃಷ್ಟಿಯಿಂದ
2. ಸೀತಾಪರಿತ್ಯಾಗ-ಉತ್ತರಕಾಂಡಕಾರನ ದೃಷ್ಟಿಯಲ್ಲಿ
3. ಸೀತಾಪರಿತ್ಯಾಗ-ಕಾಳಿದಾಸನ ರಘುವಂಶದಲ್ಲಿ
4. ಸೀತಾಪರಿತ್ಯಾಗ-ಭವಭೂತಿಯ 'ಉತ್ತರರಾಮಚರಿತ' ನಾಟಕ ದೃಷ್ಟಿಯಿಂದ

ಈ ನಾಲ್ಕು ನಿಟ್ಟಿನಿಂದ ನೋಡುವಾಗಲೂ ಶ್ರೀ ಮೂರ್ತಿರಾಯರು ತಮ್ಮ ಅಭಿಪ್ರಾಯವನ್ನು ಅದು ಸರಿ ಇರಲಿ ಬಿಡಲಿ, ಪ್ರಾಮಾಣಿಕವಾಗಿ ಅಭಿವ್ಯಕ್ತಗೊಳಿಸಿರುವುದು ಗಮನಾರ್ಹ.

'ಸೀತಾಪರಿತ್ಯಾಗ' ಇಂದಿಗೂ ವಿದ್ವಾಂಸರಲ್ಲಿ ಚರ್ಚಾಸ್ಪದ ವಿಷಯವಾಗಿದೆ. 'ರಾಮಾಯಣ'ಕಾವ್ಯದ ನಂತರ ರಚನೆಯಾಗಿರುವ ಮಹಾಭಾರತದ ಒಂದು ಘಟನೆಯೂ ಹೀಗೇ ಇಂದಿಗೂ ವಿವಾದಕ್ಕೊಳಪಟ್ಟ ಘಟನೆ - ದ್ರೌಪದೀ ವಸ್ತ್ರಾಪಹರಣ. ಎರಡೂ ಪ್ರಕರಣಗಳ ಬಗ್ಗೆ ವಿದ್ವಾಂಸರು ಬೇಕಾದಷ್ಟು ವಾದ-

ವಿವಾದ ನಡೆಸಿದ್ದರೂ ಸಮಸ್ಯೆ ಮಾತ್ರ ಇಂದಿಗೂ ಬಗೆಹರಿದಿಲ್ಲ. ನನ್ನ ದೃಷ್ಟಿಯಲ್ಲಿ ಹೇಳುವುದಾದರೆ ರಾಮಾಯಣದ ಸೀತೆಯ ಅಗ್ನಿಪ್ರವೇಶ ಕಾಲದಲ್ಲಿ ಅಗ್ನಿ ಇಂದ್ರಾದಿ ದೇವತೆಗಳು ಪ್ರತ್ಯಕ್ಷವಾಗಿದ್ದು ಹಾಗೂ ಮಹಾಭಾರತದ ದ್ರೌಪದಿಯ ವಸ್ತ್ರಾಪಹರಣದ ಕಾಲದಲ್ಲಿ ಶ್ರೀ ಕೃಷ್ಣ ಪ್ರತ್ಯಕ್ಷನಾಗಿ ಅಕ್ಷಯ ವಸ್ತ್ರ ಇತ್ತಿದ್ದು ಎರಡೂ ಪ್ರಕ್ಷಿಪ್ತಕಾರರ ಪರಿಕಲ್ಪನೆ. ಈ ಎರಡೂ ಘಟನೆಗಳೂ ಪೌರಾಣಿಕರ ಪ್ರೇರಣೆಗಳಾಗಿವೆ. ಮುಂದಿನ ಕೃತಿಗಳ ರಚನೆಗೆ ಅವಕಾಶವನ್ನಿತ್ತಿದೆ. ನನ್ನ ವೈಯಕ್ತಿಕ ಅಭಿಪ್ರಾಯದಂತೆ ರಾಮಾಯಣ ಮಹಾಕಾವ್ಯದಲ್ಲಿ ಅಂತ್ಯದಲ್ಲಿ ಸೀತೆ ಅಗ್ನಿಪ್ರವೇಶ ಮಾಡುವುದರೊಂದಿಗೆ ಕಾವ್ಯ ಮುಕ್ತಾಯಗೊಂಡಿದೆ.

ಆದಿಕವಿ ಮೊದಲು ರಾಮಾಯಣವನ್ನು ಐದು ಕಾಂಡಗಳಲ್ಲಿ ರಚಿಸಿದ. ಇದನ್ನು ಶ್ರೀ ಮೂರ್ತಿರಾಯರು ಉಲ್ಲೇಖಿಸಿದ್ದಾರೆ. ಆದರೆ ಯುದ್ಧಕಾಂಡದ ಅಂತ್ಯದಲ್ಲಿ ವಾಲ್ಮೀಕಿ ಸೀತೆಯನ್ನು 'ಅಗ್ನಿಪ್ರವೇಶ' ಮಾಡಿಸಿ ಕಾವ್ಯವನ್ನು ಮುಕ್ತಾಯಗೊಳಿಸಿದ್ದು ಪುರಾಣಕವಿಗಳ ಹಾಗೂ ಉತ್ತರಕಾಂಡಕಾರನ ದೃಷ್ಟಿಯಲ್ಲಿ ಸಮಂಜಸವೆನಿಸಲಿಲ್ಲ. ಹಾಗಾಗಿ ಅವರು ಬಾಲಕಾಂಡ ಮತ್ತು ಉತ್ತರಕಾಂಡಗಳನ್ನು ಪ್ರಕ್ಷಿಪ್ತಗೊಳಿಸಿದ್ದಾರೆ.

ಅಗ್ನಿಪ್ರವೇಶದಿಂದ ಪ್ರೇರಿತನಾದ ಉತ್ತಕಾಂಡಕಾರ ಉತ್ತರಕಾಂಡ ರಚಿಸಿದರೆ, ಇವೆರಡರಿಂದ ಸ್ಫೂರ್ತಿಗೊಂಡ ಕಾಳಿದಾಸ 'ರಘುವಂಶ' ಕೃತಿ ರಚಿಸಿದ. ಇವೆಲ್ಲವು ಗಳಿಂದ ಪ್ರೇರಿತನಾದ ಭವಭೂತಿ 'ಉತ್ತರರಾಮಚರಿತ' ನಾಟಕ ರಚಿಸಿದ.

ಒಟ್ಟಿನಲ್ಲಿ ರಾಮಾಯಣ ಮಹಾಕಾವ್ಯವನ್ನು ಅಧ್ಯಯನ ಮಾಡಿದವರನ್ನೆಲ್ಲಾ ಕಾವ್ಯದ 'ಸೀತಾಪರಿತ್ಯಾಗ' ಸನ್ನಿವೇಶ ಜಿಜ್ಞಾಸೆಯ ಕೇಂದ್ರ ಬಿಂದುವಾಗಿ ಆಕರ್ಷಿಸಿರುವುದಂತೂ ಸತ್ಯಸಂಗತಿ.

ಕಾಳಿದಾಸ, ಭವಭೂತಿ ಮತ್ತು ಉತ್ತರಕಾಂಡಕಾರನಂತೆಯೇ ರಾಮಾಯಣ ಕಾವ್ಯದ ಸೀತಾಪರಿತ್ಯಾಗ ಪ್ರಸಂಗದಲ್ಲಿ ಶ್ರೀ ಮೂರ್ತಿರಾಯರೂ ರಾಮನ ವರ್ತನೆಯನ್ನು ಒಪ್ಪಿಕೊಳ್ಳುವುದಿಲ್ಲ. ಆಕ್ಷೇಪಿಸಿದ್ದಾರೆ.

'ಸೀತಾಪರಿತ್ಯಾಗ' ಘಟನೆ ಸಣ್ಣದೆನಿಸಿದರೂ ಇದನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಇಡೀ ಕಾವ್ಯವನ್ನೇ ಅಭ್ಯಾಸ ಮಾಡಬೇಕಾಗುತ್ತದೆ. ಇಷ್ಟಾದರೂ ಇಲ್ಲಿ ಬರುವ ಎಲ್ಲ ವಿಷಯಗಳನ್ನೂ ಅರ್ಥಮಾಡಿಕೊಂಡೆವೆಂದು ಹೇಳುವ ಧೈರ್ಯ ಯಾರಿಗೂ ಬರುವುದಿಲ್ಲ. ಕಾರಣ ಈ ಕೃತಿಯ ಅನುಭವವ್ಯಾಪ್ತಿ ವಿಶಾಲ ಹರಹು ಸಾಗರೋಪಾದಿಯಲ್ಲಿ ಅನಂತವಾಗಿದೆ.

'ಸೀತಾಪರಿತ್ಯಾಗ' ಘಟನೆ ರಾಮಾಯಣ ಕಾವ್ಯದ ಕೊನೆಯಲ್ಲಿ ಬರುವ ಅತ್ಯಂತ ಪ್ರಮುಖ ಘಟನೆ. ಹಾಗಾಗಿ ಇದನ್ನು ಅರ್ಥಮಾಡಿಕೊಳ್ಳಬೇಕಾದರೆ ಇಡೀ ಕಾವ್ಯದ ಹಿನ್ನೆಲೆಯನ್ನು ಬಯಸುತ್ತದೆ.

ಇದು ಹೆಣ್ಣಿಗೆ ಪಾರಂಪರಿಕವಾಗಿ ಅಂಟಿಕೊಂಡಿರುವ ಎರಡು ಪ್ರಮುಖ ಬಂಧನಗಳನ್ನು ನಾಣ್ಯದ ಎರಡು ಮುಖಗಳಂತೆ ಅಂಟಿಕೊಂಡಿರುವ ಅಂಶವನ್ನೂ ಸದೃಢಗೊಳಿಸುತ್ತದೆ. ಇದು ಜನಪದರ ನಂಬಿಕೆಯೂ ಹೌದು.

ಒಂದು, ಹೆಣ್ಣಿನ ವಿವಾಹ.

ಎರಡು, ಹೆಣ್ಣಿನ ಚಾರಿತ್ರ್ಯ.

ಜಗತ್ತಿನಲ್ಲಿ ಯಾವುದೇ ಕ್ರಾಂತಿ, ಯುದ್ಧ ಇತ್ಯಾದಿಗಳು ನಡೆಯಬೇಕಾದರೂ ಹೆಣ್ಣೇ ಕಾರಣ ಎಂಬ ಮಾತು ಸಾರ್ವಕಾಲಿಕ ಸತ್ಯ ಎನ್ನುವುದನ್ನು ನಾವೆಲ್ಲ ನಂಬಿಕೊಂಡೇ ಬಂದಿದ್ದೇವೆ. ಚರಿತ್ರೆಯೇ ಈ ಹೇಳಿಕೆಯನ್ನು ಸಾಧಿಸಿ ತೋರಿಸಿದೆ.

ಹೆಣ್ಣು ಗಂಡು ನಿರ್ಮಿಸುವ ಒಂದು ಸೀಮಾರೇಖೆಯನ್ನು ದಾಟುವಂತಿಲ್ಲ. ಅವನ ಅಂಕೆಯೊಳಗೇ ಇರಬೇಕು. ಈ ಪರಿಧಿಯಲ್ಲಿದ್ದರೇನೇ ಆಕೆ ಒಂದು ನೈತಿಕ ಮೌಲ್ಯಕ್ಕೆ ಬದ್ಧಳಾಗಿರುತ್ತಾಳೆ. ಇದು ರಾಮಾಯಣ ಕಾಲದ ಯುಗಧರ್ಮ. ಹೆಣ್ಣು ಯಾವುದೇ ಕಾರಣಕ್ಕೂ ಗಂಡು ಹಾಕಿದ ಪರಿಧಿಯನ್ನು ದಾಟುವಂತಿಲ್ಲ. ದಾಟಿದರೆ ಅದು ಆಕೆಗೆ ವಿಧಿಸಿದ ಶಾಪವೇ ಸರಿ. ಆದರೆ ಪರಿಣಾಮ ಏನಾಗುತ್ತದೆ ಎಂದು ಲೋಕಕ್ಕೆ ಹೇಳುವುದೇ ಸೀತಾಪರಿತ್ಯಾಗ ಕಾವ್ಯದ ಕವಿಯ ಗುರಿ. ಇದನ್ನು ಆದಿಕವಿ ತುಂಬ ಪರಿಣಾಮಕಾರಿಯಾಗಿ ಹೇಳಿದ್ದಾನೆ.

ಒಂದು ಕೃತಿಯನ್ನು ಹೇಗೆ ಬೇಕಾದರೂ ವಿಮರ್ಶಿಸಬಹುದು. ಅದು ಆ ಕೃತಿಯನ್ನು ಅರ್ಥಮಾಡಿಕೊಂಡ ಕವಿ ಪ್ರತಿಭೆ, ಪಾಂಡಿತ್ಯಗಳನ್ನು ಅವಲಂಬಿಸಿರುತ್ತದೆ.

'ಸೀತಾಪರಿತ್ಯಾಗ' ವಾಲ್ಮೀಕಿಯಲ್ಲಿ ಎಂದು ಶ್ರೀಮೂರ್ತಿರಾಯರು, ಮೂಲ ರಾಮಾಯಣ ಕೃತಿಯ ಯುದ್ಧಕಾಂಡದಲ್ಲಿ ಬರುವ ಪ್ರಸಂಗ ಕುರಿತು ಹೇಳಿದ್ದಾರೆ. ನಂತರ ಇದೇ ಪ್ರಸಂಗವನ್ನು ಉತ್ತರಕಾಂಡಕಾರ ಸ್ವಲ್ಪ ವ್ಯತ್ಯಾಸದೊಂದಿಗೆ ಹೇಳಿದ್ದಾನೆ. ಇಲ್ಲಿ ಆ ಪ್ರಸಂಗವನ್ನು ಮತ್ತೆ ಓದುವಾಗ ಚರ್ವಿತ ಚರ್ವಣವಾದಂತೆ ಕಾಣುತ್ತದೆ.

ಇಲ್ಲಿ ರಾಯರು ಹೇಳಿದ ಹಾಗೆ ಮಂಗಳ ಹಾಡಿದ ಮೇಲೆ ಕಥೆಯನ್ನು ಹೀಗೇಕೆ ಮುಂದುವರಿಸಬಾರದು ಎನಿಸಿಯೋ ಇಲ್ಲ ವಾಚಕರ ದೃಷ್ಟಿಯಲ್ಲಿ ಸೀತೆಯ ಸ್ಥಾನವನ್ನು ಮತ್ತಷ್ಟು ಎತ್ತರಕ್ಕೆ ಏರಿಸಲೆಂದೋ ಯಾರೋ ಪುರಾಣಿಕರು ಈ ಕಾಂಡವನ್ನು ಸೃಷ್ಟಿಸಿರಬೇಕು ಎನಿಸುತ್ತದೆ. ಅಥವಾ ಶ್ರೀ ಮೂರ್ತಿರಾಯರು ಹೇಳಿರುವಂತೆ ಈ 'ಉತ್ತರಕಾಂಡ' ಕೃತಿಯನ್ನು ಬೇರೊಂದು ಕೃತಿಯೆಂದೇ ಪರಿಗಣಿಸುವುದೂ ಸೂಕ್ತವೆಂದೇ ಕಾಣುತ್ತದೆ.

ಎರಡನೆಯ ಅಂಶ ಯುದ್ಧಕಾಂಡದಲ್ಲಿ ನಡೆಯುವ 'ಸೀತಾಪರಿತ್ಯಾಗ'ದಲ್ಲಿ ಸೀತೆ ಅಗ್ನಿಪ್ರವೇಶ ಮಾಡುತ್ತಾಳೆ. ದೇವತೆಗಳ ಸಮ್ಮುಖದಲ್ಲಿ ಕಾಣಿಸಿಕೊಂಡ ಅಗ್ನಿ ಸೀತೆ ಪರಿಶುದ್ಧಳೆಂದೂ, ಆಕೆಯನ್ನು ಸ್ವೀಕರಿಸಬೇಕೆಂದೂ ಹೇಳುತ್ತಾನೆ. ರಾಮ ಸ್ವೀಕರಿಸುತ್ತಾನೆ. ಹೀಗೆ ಸ್ವೀಕರಿಸಿದುದರಿಂದ 'ಪರಿತ್ಯಾಗ' ನಡೆಯಲೇ ಇಲ್ಲವೆಂದಿಟ್ಟುಕೊಳ್ಳೋಣ ಎಂದು ಹೇಳುತ್ತಾರೆ.

ಲಂಕೆಯಿಂದ ಹಿಂದಿರುಗಿ ಬಂದ ಸೀತೆಯನ್ನು ಕಂಡ ರಾಮನಿಗೆ ತುಂಬ ಮುಜುಗರ ವುಂಟುಮಾಡುವ ಸಂದಿಗ್ಧ ಪರಿಸ್ಥಿತಿ. ರಾಮನಿಗೆ ಸೀತೆಯ ಮೇಲೆ ಅನುಮಾನವಿಲ್ಲ.

ಆದರೆ ಲೋಕನಿಂದನೆಯ ಹೆದರಿಕೆ ಇದೆ. ರಾಜನಾಗಿ ರಾಜಧರ್ಮ ಪಾಲನೆಯ ಭೀತಿ ಬೇಟೆ ಆಡುತ್ತಿದೆ. ಹಾಗಾಗಿ ರಾಮ ಇಲ್ಲಿ ಸೀತೆ ತನ್ನ ಹೆಂಡತಿಯೇ ಆದರೂ ಏನೂ ಮಾಡಲಾಗದೆ, ಏನೂ ಹೇಳಲಾರದ ನಿಸ್ಸಹಾಯಕ ಸ್ಥಿತಿಯಲ್ಲಿರುತ್ತಾನೆ.

ಸೀತೆ! ತಾನು ನಂಬಿದ ನೆಲೆಯೇ ತಪ್ಪಿಹೋಗುತ್ತಿರುವುದರಿಂದ ತಾನಿನ್ನು ಯಾರಿಗಾಗಿ ಬದುಕಿರಬೇಕು ? ಎನ್ನುವ ನಿರ್ಧಾರಕ್ಕೆ ಬರುತ್ತಾಳೆ. ಅಂದಿನ ಯುಗಧರ್ಮದಂತೆ ಆಕೆ ಅಗ್ನಿಪ್ರವೇಶ ಮಾಡುತ್ತಾಳೆ ಅಷ್ಟೇ. ಇಲ್ಲಿಗೆ ಕಾವ್ಯ ಮುಗಿಯುತ್ತದೆ. ಸೀತೆಯ ಅಸ್ತಿತ್ವವೂ ಕೊನೆಗೊಳ್ಳುತ್ತದೆ. ಇದು ಕಾವ್ಯ ಸತ್ಯ.

ಈ ಸಂದರ್ಭದಲ್ಲಿ ಅಗ್ನಿ ಬರುವುದು, ದೇವತೆಗಳು ಪ್ರತ್ಯಕ್ಷವಾಗುವುದು, ಸೀತೆ ಅಗ್ನಿಕುಂಡದಿಂದ ಬದುಕಿ ಬರುವುದು ಇದೆಲ್ಲ ಪುರಾಣಕಾರರ ಕೈವಾಡವಿರಬೇಕು. ಇಲ್ಲಿಂದಲೇ ಭಾರತೀಯ ಕಾವ್ಯಗಳಲ್ಲಿ ದುಃಖಾಂತವನ್ನು ನಿಷೇಧಿಸುವ ದುರಂತ ಕಾವ್ಯ ಸೃಷ್ಟಿಗೆ ತಡೆ ಒಡ್ಡುವ ಪ್ರಯತ್ನ ಪ್ರಾರಂಭವಾಗಿರಬೇಕು.

ಈ ಪ್ರಸಂಗ ಮತ್ತೂ ಒಂದು ಅಂಶವನ್ನು ಪುಷ್ಟೀಕರಿಸುತ್ತದೆ. ವೇದದಲ್ಲಿ ಅಗ್ನಿಗೆ ಪ್ರಮುಖವಾದ ಸ್ಥಾನವನ್ನು ಕೊಟ್ಟಿರುವುದನ್ನು ಗುರುತಿಸಿದ ಪುರಾಣ ಋಷಿಗಳು ಯಾರೋ ಅಗ್ನಿಯಲ್ಲಿ ಕರಗಿ ಹೋದ ಸೀತೆಯನ್ನು ಪರಿಶುದ್ಧಳಾಗಿ ಮತ್ತೆ ಎದ್ದು ಬರುವಂತೆ ಮಾಡಿದ್ದಾರೆ. ಅಗ್ನಿಯಲ್ಲಿ ಭಸ್ಮೀಭೂತಳಾದ ಸೀತೆ ಮತ್ತೆ ಎದ್ದು ಬರುವುದೆಂದರೆ ಆಕೆ ನಿಜವಾಗಿಯೂ ಪರಿಶುದ್ಧಳು ಎಂಬ ಹಣೆಪಟ್ಟಿಯನ್ನು ಕಟ್ಟಿದ್ದಾರೆ. ಇದು 'ಭಕ್ತಿಯುಗ'ದ ಕವಿಗಳ ಪರಿಕಲ್ಪನೆ ಇದ್ದರೂ ಹೆಚ್ಚಲ್ಲ.

ಶ್ರೀ ಮೂರ್ತಿರಾಯರ ಮೂರನೆಯ ಆರೋಪ, ಆದಿಕವಿಯ ದೃಷ್ಟಿಯಿಂದ ತುಂಬ ಮುಖ್ಯವಾದದ್ದು. ಕವಿ ರಾಮನಿಂದ ಈ ಕೆಲಸವನ್ನು ಮಾಡಿಸಿದ್ದು ಸರಿಯೇ? ಎಂದು ನಾವು ವಾಲ್ಮೀಕಿಯನ್ನು ಕೇಳಬೇಕು ಎಂದಿದ್ದಾರೆ. ಇದು ಇಡೀ ಸೀತಾಪರಿತ್ಯಾಗದ ಪ್ರಸಂಗದ ದೃಷ್ಟಿಯಿಂದ ನೋಡಿದರೂ ತುಂಬ ಮುಖ್ಯವಾದ ಪ್ರಶ್ನೆ.

ಆದಿಕವಿಯದು ಕಾವ್ಯದಲ್ಲಿ ಸೀತಾಪರಿತ್ಯಾಗ ಪ್ರಸಂಗ ತರುವುದಕ್ಕಾಗಿಯೇ ರಾಮಾಯಣ ಕಾವ್ಯ ರಚಿಸುವ ಮುಖ್ಯ ಉದ್ದೇಶ ಎನ್ನುವುದನ್ನು ಮರೆಯಬಾರದು.

ರಾಮಾಯಣ ವೇದೋತ್ತರ ಕಾಲದ ಅಥವಾ ವೇದ ಸಮಕಾಲೀನ ಕಾಲದ ಭಾರತೀಯ ಅವಿಭಕ್ತ ಕುಟುಂಬದ ಸಂಸಾರದ ಚಿತ್ರವನ್ನು ಯಥಾವತ್ತಾಗಿ ನಮ್ಮ ಕಣ್ಣು ಮುಂದಿಡುವ ಒಂದು ಮಹತ್ವಪೂರ್ಣವಾದ ಲೌಕಿಕ ಕಾವ್ಯವಾದರೂ ಇಲ್ಲಿ ರಾಮ ಮೊದಲು ರಾಜ, ನಂತರವೇ ಒಂದು ಹೆಣ್ಣಿನ ಪತಿ. ಅವನಿಲ್ಲಿ ಒಂದು ಹೆಣ್ಣಿನ ಪತಿಯಾಗಿರುವುದಕ್ಕಿಂತ ಅಯೋಧ್ಯೆಯ ರಾಜನಾಗಿರುವುದು ಮುಖ್ಯ. ಹಾಗಾಗಿ ರಾಮನಿಗಿಲ್ಲಿ ರಾಜಧರ್ಮವೇ ಮುಖ್ಯವಾಗುತ್ತದೆ.

'ಸ್ತ್ರೀಯ ಚರಿತ್ರೆ ಪುರುಷನ ಭಾಗ್ಯ' ಎನ್ನುವುದೊಂದು ಜನಪದ ಲೋಕೋಕ್ತಿ. ಈ ಲೋಕೋಕ್ತಿಯಂತೆ ತಾನು ಕೈ ಹಿಡಿದ ಸ್ತ್ರೀಯ ಚರಿತ್ರೆ ಚೆನ್ನಾಗಿರಬೇಕು. ಹಾಗಿದ್ದಾಗ ಮಾತ್ರ ಅಂತಹ ಪುರಷ ನೆಮ್ಮದಿಯಾಗಿ ಬದುಕಬಲ್ಲ. ಅದೇ ಅವನ ಎಲ್ಲ ಭಾಗ್ಯಗಳಿಗಿಂತಲೂ ಮಿಗಿಲಾದ ಭಾಗ್ಯ.

ಮತ್ತೊಂದು ಲೋಕೋಕ್ತಿ 'ಯಥಾ ರಾಜಾ ತಥಾ ಪ್ರಜಾ' ಎನ್ನುತ್ತದೆ. ಅಂದರೆ ರಾಜನಂತೆ ಪ್ರಜೆಗಳಲ್ಲವೇ ? ಒಂದು ರಾಜ್ಯ ಆಳುವ ರಾಜನ ಶೀಲವೇ ಸರಿಯಾಗಿಲ್ಲದಿದ್ದ ಮೇಲೆ ಇನ್ನು ಅವನ ಪ್ರಜೆಗಳು ಹೇಗಿದ್ದಾರು?

ಇಲ್ಲಿ ಸೀತೆ ಯಾರೇ ಆಗಿರಲಿ, ಮೊದಲು ಆಕೆ ಒಂದು ಹೆಣ್ಣು. ಪ್ರಾಪಂಚಿಕ ಕಟ್ಟುಪಾಡುಗಳೆಲ್ಲ ಆಕೆಗೂ ಸಂಬಂಧಿಸಿದೆ. ಆಕೆ ಒಬ್ಬ ಅನ್ಯಪುರುಷನ ಬಂಧನದಲ್ಲಿದ್ದಳು ಅಂದ ಮೇಲೆ ಅವಳು ಎಷ್ಟೇ ಪತಿವ್ರತೆಯಾಗಿದ್ದರೂ ಲೋಕನಿಂದೆಗೆ ಹೊರತಾದವಳಲ್ಲ. ಜನ ನಾಳೆ ಸುಮ್ಮನಿದ್ದಾರೇ ? ಆಗ ದೇಶವನ್ನಾಳುವ ಒಬ್ಬ ರಾಜನಾಗಿ ಪ್ರಜೆಗಳಿಗೆ ನ್ಯಾಯ ದೊರಕಿಸಿಕೊಡುವುದು ಹೇಗೆ?

ಮರ್ಯಾದಾ ಪುರುಷೋತ್ತಮ ಎಂದು ಪ್ರಸಿದ್ಧವಾದ ತಾನು ಇಂತಹ ಕ್ಷುಲ್ಲಕ ವಿಚಾರಗಳಿಗೆ, ಜನಾಪವಾದಗಳಿಗೆ ಆಸ್ಪದ ಕೊಡಬಾರದು ಎನ್ನುವುದೇ ರಾಮನ ಮನೋಗತ. ನಾಳೆ ಪ್ರಜೆಗಳು ತನ್ನನ್ನು ದೂಷಿಸಬಾರದು ಎಂದೇ ರಾಮ 'ಸೀತಾ ಪರಿತ್ಯಾಗ' ಮಾಡಿದ್ದು ಎನ್ನುವ ಅಂಶವನ್ನು ಮರೆಯುವಂತಿಲ್ಲ. ರಾಮ ವಾಲ್ಮೀಕೀ ಕೃತ ರಾಮಾಯಣ ಕಾವ್ಯದಲ್ಲಿ ಮಾತ್ರ ಸಾಮಾನ್ಯ ಮಾನವನೇ. ಆದರೆ ಇಂತಹ ಲೋಕಹಿತ ಕಾರ್ಯಗಳನ್ನು ಅದು ತನಗೆಷ್ಟೇ ನಷ್ಟವುಂಟು ಮಾಡಿದರೂ ಲೆಕ್ಕಿಸದೆ ತ್ಯಾಗಗಳನ್ನು ಮಾಡತೊಡಗಿದ. ಇದರಿಂದ ಆತ ಜನರ ಮನದಲ್ಲಿ ದೇವ ಮಾನವನ ಮಟ್ಟಕ್ಕೇರಿದ.

ಶ್ರೀ ಮೂರ್ತಿರಾಯರು ಹೇಳಿರುವ ಮತ್ತೊಂದು ಮಾತು ಗಮನಾರ್ಹ. ಈ ರಾಮ ವಾಲ್ಮೀಕಿಯ ರಾಮನ ರೂಪರೇಷೆಗಳನ್ನೇ ಅನೇಕ ವೇಳೆ ಮಸುಕು ಮಾಡುತ್ತಾನೆ. ವಿಮರ್ಶಕರನ್ನು ತಪ್ಪು ದಾರಿಗೆ ಎಳೆಯುತ್ತಾನೆ. ನಮ್ಮ ಗಮನವನ್ನು ಶಿವನಿಂದ ವಾಲ್ಮೀಕಿಯ ಮತ್ತು ಅವನ ಸೃಷ್ಟಿಯ ಕಡೆಗೆ ತಿರುಗಿಸುವುದು ಅಗತ್ಯ ಎಂದಿರುವ ಮಾತು ನಮ್ಮನ್ನು ಪ್ರಕ್ಷಿಪ್ತಕಾರರ ಕಡೆ ಒಯ್ಯುತ್ತದೆ. ಈ ಪ್ರಕ್ಷಿಪ್ತ ಭಾಗಗಳಿಂದಾಗಿಯೆ 'ಆದರ್ಶ ಮಾನವ'ನಾಗಬೇಕಾದ ರಾಮ 'ಅವತಾರ ಪುರುಷ' ನಾಗಿ ರೂಪುಗೊಂಡಿದ್ದಾನೆ. ದೇವತೆಯಾಗಿ ಮಾರ್ಪಟ್ಟಿದ್ದಾನೆ.

ಶ್ರೀ ಮೂರ್ತಿರಾಯರ ಮತ್ತೊಂದು ಮಾತು ಪ್ರಶಂಶನೀಯವೇ. ಅವನ ಕಾವ್ಯದಲ್ಲಿ ಒಂದೇ ಒಂದು ತಪ್ಪಿಲ್ಲ, ಅನುಚಿತವಾದ ಅಥವಾ ಅಪ್ರಯೋಜಕವಾದ ಒಂದೇ ಒಂದು ಪದವಿಲ್ಲ, ಎಂಬ ಉತ್ಪ್ರೇಕ್ಷೆಯನ್ನು ಬಿಟ್ಟು. ಆದರೆ ಅಂಥ ಕವಿ ಚಕ್ರವರ್ತಿಗೆ ಸಲ್ಲಬೇಕಾದ ವಿನಯ, ಗೌರವಗಳನ್ನು ಬಿಡದೆ ವಿಮರ್ಶೆಯನ್ನು ನಡೆಸಬೇಕು ಎಂದಿದ್ದಾರೆ. ಇದು ದೊಡ್ಡವರಾಡುವ ದೊಡ್ಡ ಮಾತು. ಇದು ಶ್ರೀಮೂರ್ತಿರಾಯರಿಗೆ ಆದಿಕವಿಯ ಬಗ್ಗೆ ಇರುವ ಗೌರವವನ್ನು ಸೂಚಿಸುತ್ತದೆ.

ಹಾಗೇ ಇಲ್ಲಿ ಇನ್ನೂ ಒಂದೆರಡು ಮಾತುಗಳನ್ನು ಹೇಳಬಹುದೇನೋ? ರಾಮಾಯಣ ಆದಿಕಾವ್ಯ ಹಾಗೇ ಪ್ರಪ್ರಥಮ ಲೌಕಿಕಕಾವ್ಯವೂ ಹೌದು. ಈ ಕಾವ್ಯವನ್ನು ನಾವು ಅವಲೋಕಿಸುವಾಗ, ಕಾವ್ಯದಲ್ಲಿ ಇರುವ ತಪ್ಪು, ಅನುಚಿತ ಅಥವಾ ಅಪ್ರಯೋಜಕ ವಾದ ಪದ ಮತ್ತು ಉತ್ಪ್ರೇಕ್ಷೆಗಳನ್ನೆಲ್ಲ ನೋಡುವುದಕ್ಕಿಂತ ಮೊದಲು ಕಾವ್ಯರೂಪ ಗೊಂಡ ಯುಗಧರ್ಮದ ಬಗ್ಗೆ ಸ್ವಲ್ಪ ಯೋಚಿಸುವುದೂ ತಪ್ಪಾಗಲಿಕ್ಕಿಲ್ಲವೇನೋ?

ಕವಿ ವಾಲ್ಮೀಕಿ ಆದಿಕವಿ. ಅಲ್ಲಿಯವರೆಗೆ ವೇದದಲ್ಲಿ ಬೇರೆ ಬೇರೆ ಅರ್ಥಗಳ ಪ್ರಯೋಗದಲ್ಲಿದ್ದ 'ಕವಿ' ಶಬ್ದವನ್ನು ಮೊಟ್ಟ ಮೊದಲ ಬಾರಿಗೆ ಲೌಕಿಕಕ್ಕೆ ತಂದ

ಸಂದರ್ಭ ಹಾಗೂ 'ಕವಿ' ಶಬ್ದದ ಅರ್ಥವನ್ನು ಸಂಪೂರ್ಣವಾಗಿ ಬೇರೊಂದು ಅರ್ಥದಲ್ಲಿ ನವೀಕರಿಸಿ ಠಂಕಿಸಿ ಸಾಹಿತ್ಯ ಸೃಷ್ಟಿಯ ಬ್ರಹ್ಮನನ್ನಾಗಿ ಬಳಕೆಯಲ್ಲಿ ತಂದವನು ವಾಲ್ಮೀಕಿ. ಹಾಗಾಗಿಯೇ ಆತ 'ಆದಿಕವಿ' ಎನಿಸಿದ.

ಜಾಗತಿಕ ಸಾಹಿತ್ಯಕ್ಷೇತ್ರದಲ್ಲಿ ಮೊಟ್ಟ ಮೊದಲ ಲೌಕಿಕ ಕಾವ್ಯವಾದ ಆದಿಕಾವ್ಯ-ರಾಮಾಯಣ ರಚನೆ ಇಲ್ಲಿ ಎಲ್ಲ ದೃಷ್ಟಿಯಿಂದಲೂ ಮುಖ್ಯವಾಗುತ್ತದೆ. ಯಾಕೆಂದರೆ ಈ ಕಾವ್ಯವನ್ನು ಮೀರಿಸುವ ಮತ್ತೊಂದು ಕಾವ್ಯ ಇಂದಿನವರೆಗೂ ಸೃಷ್ಟಿಯಾಗದಿರುವುದು ಹಾಗೂ ಇದಮಿತ್ಥಂ ಎಂದು ಹೇಳುವಂತಹ ವಿಮರ್ಶೆ ಬಾರದಿರುವುದು.

ಈ ಕಾವ್ಯದ ಜನಪ್ರಿಯತೆ ಒಂದು ಕಾಲದಲ್ಲಿ ಎಷ್ಟಿತ್ತೆಂದರೆ, ಈ ಕಾವ್ಯದ ಜನಾದರಣೆಯನ್ನು ತಾವು ಪಡೆಯಬೇಕೆಂದು ಬೇರೆ ಬೇರೆ ಮತ, ಧರ್ಮೀಯರು ಮುಗಿಬಿದ್ದಿದ್ದಾರೆ ಮತ್ತು ತಮತಮಗೆ ಬೇಕಾದ ಹಾಗೆ ಕಾವ್ಯ ಕಥಾಭಾಗವನ್ನು ಪುರಾಣಕಥೆಗಳಿಗೆ ತಕ್ಕುದಾಗಿ ಸಮೀಕರಿಸಿಕೊಂಡು ಪ್ರಕ್ಷಿಪ್ತಗೊಳಿಸಿಕೊಂಡಿದ್ದಾರೆ. ಇದರಿಂದಲೇ ರಾಮಾಯಣ ಕಾವ್ಯದ ರಾಮ ದೇವರಾಗಿದ್ದಾನೆ. ವಾಲ್ಮೀಕಿಗೆ ಈ ಉದ್ದೇಶ ಇರಲಿಲ್ಲ. ಹಾಗಾಗಿ ಈ ಕಾವ್ಯದಲ್ಲಿರುವ ತಪ್ಪುಗಳನ್ನು ಹುಡುಕುವುದೂ ಅಷ್ಟು ಸುಲಭವಲ್ಲ. ಅದೂ ಅಲ್ಲದೆ ಇದು ವೇದಕ್ಕೆ ಸಮಾನವೆಂದಿರುವುದೂ ವಿಮರ್ಶೆಯ ತೊಡಕಿಗೆ ಕಾರಣವಿರಲೂಬಹುದು.

ಶ್ರೀ ಮೂರ್ತಿರಾಯರು ಯುದ್ಧಕಾಂಡದ 116, 121 ನೇ ಸರ್ಗಗಳ ಕಡೆ ನಮ್ಮ ದೃಷ್ಟಿ ಸೆಳೆಯುತ್ತಾರೆ. ಯುದ್ಧಕಾಂಡದ 115ನೇ ಸರ್ಗದಲ್ಲಿ ವಿಭೀಷಣನ ಪಟ್ಟಾಭಿಷೇಕ ವಿಚಾರ ಬರುತ್ತದೆ. ಅದೇ ವರ್ಗದ ಕೊನೇ ಐದು ಶ್ಲೋಕಗಳಲ್ಲಿ ರಾಮ ಹನುಮಂತನ ಮೂಲಕ ಸೀತೆಗೆ ಕಳುಹಿಸಿದ ಸಂದೇಶವೂ ಇದೆ. ಈ ಸಂದೇಶದಿಂದಲೇ ಸೀತೆಯ ಬಗ್ಗೆ ರಾಮನ ಮನೋಗತ ತಿಳಿಯುವುದರಿಂದ ಇಲ್ಲಿಂದಲೇ ಶ್ರೀ ಮೂರ್ತಿರಾಯರು ಪರಿಶೀಲನೆಗೆ ತೊಡಗುತ್ತಾರೆ.

ಸೀತೆಯ ಬಳಿ ಕಳುಹಿಸುವ ಹನುಮಂತನಿಗೆ, ರಾಮ : "ಸೌಮ್ಯ ಆಂಜನೇಯ, ಮಹಾರಾಜನಾದ ವಿಭೀಷಣನ ಅನುಮತಿಯನ್ನು ಪಡೆದು ಲಂಕೆಗೆ ಹೋಗು. ಆ! ವಿಭೀಷಣನ ಅನುಜ್ಞೆಯಂತೆ ಕ್ರಮವರಿತು, ರಾವಣ ಗೃಹಕ್ಕೆ ಹೋಗಿ ಬಾ, ವೈದೇಹಿಗೆ ವಿಜಯವಾರ್ತೆಯನ್ನರುಹು, ಸಂದೇಶ ಏನೆಂದು ತಿಳಿದುಕೊಂಡು ಬಾ."

"ನಾನು ಸುಗ್ರೀವ, ಲಕ್ಷ್ಮಣ ಸಮೇತನಾಗಿ ಕುಶಲದಿಂದಿರುವೆನೆಂದು ತಿಳಿಸು. ವಾನರೋತ್ತಮಾ, ರಾವಣನನ್ನು ಸಂಹರಿಸಲಿದ್ದೇವೆಂಬ ಪ್ರಿಯವಾರ್ತೆಯನ್ನು ಮೈಥಿಲಿಗೆ ಹೇಳಿ, ಅವಳ ಸಂದೇಶ ಏನೆಂಬುದನ್ನು ತಿಳಿದುಕೊಂಡು ಬಾ" ಎಂದು ಹೇಳಿ ಕಳುಹಿಸುತ್ತಾನೆ.

ಶ್ರೀ ಮೂರ್ತಿರಾಯರು ರಾಮ ಹೇಳಿ ಕಳುಹಿಸುವ ಈ ಮಾತಿನಲ್ಲಿ ಆತ್ಮೀಯತೆ ಇಲ್ಲ. ಇದು ಶುಷ್ಕ ಸಂದೇಶ ಎಂದಿದ್ದಾರೆ.

ರಾಮ ಹೀಗೆ ಹೇಳುವುದನ್ನು ನೋಡಿದ ನಾವು ಸ್ವಲ್ಪ ಹಿಂದೆ ಒಂದು ಫ್ಲ್ಯಾಷ್ ಬ್ಯಾಕ್‌ಗೆ ಹೋಗಬೇಕಾಗುತ್ತದೆ. ಇದು ಸೀತೆಯ ಅಪಹರಣಕ್ಕೆ ಸಂಬಂಧಿಸಿದ ಪ್ರಸಂಗ.

ಸುಂದರಿ ಸೀತೆ ಹೂಗಳನ್ನು ಬಿಡಿಸುತ್ತಿರುತ್ತಾಳೆ. ಆಗ ಅವಳಿಗೆ ಶೋಭಾಯಮಾನವಾದ ಮಾಯಾಮೃಗವೊಂದು ಕಾಣಿಸುತ್ತದೆ. ಅವಳು ರಾಮ -ಲಕ್ಷ್ಮಣರಿಬ್ಬರನ್ನೂ ಕರೆದು ತೋರಿಸುತ್ತಾಳೆ. ಆ ಚಿನ್ನದ ಜಿಂಕೆಯನ್ನು ನೋಡಿದ ಲಕ್ಷ್ಮಣನಿಗೆ ಅದು ರಾಕ್ಷಸನ ಕಪಟವೇಷವೆಂದು ತಿಳಿದುಹೋಗುತ್ತದೆ. ಜಿಂಕೆಯು ತನಗೆ ಆಟವಾಡಲು ಬೇಕೆಂದು ಹಟ ಹಿಡಿಯುತ್ತಾಳೆ ಸೀತೆ. ಸೀತೆಯ ಮನಸ್ಸನ್ನು ತೃಪ್ತಿಪಡಿಸುವ ಸಲುವಾಗಿ ರಾಮ ಆ ಕೆಲಸವನ್ನು ಮಾಡಲೇಬೇಕಾಗುತ್ತದೆ. ಹೋಗುವ ಮುನ್ನ ಲಕ್ಷ್ಮಣನಿಗೆ ಜಾಗರೂಕನಾಗಿದ್ದುಕೊಂಡು ಸೀತೆಯನ್ನು ರಕ್ಷಿಸುತ್ತಿರಬೇಕೆಂದೂ ಹೇಳಿ ರಾಮ ಬಂಗಾರದ ಜಿಂಕೆಯ ಬೆನ್ನಟ್ಟಿ ಹೋಗುತ್ತಾನೆ. ಈ ಬಂಗಾರದ ಜಿಂಕೆಯ ಬೆನ್ನೇರಿ ರಾಮ ಹೋಗಲು ಇಲ್ಲಿ ಸೀತೆಯೇ ಕಾರಣಳೆಂಬುದನ್ನು ಮರೆಯಬಾರದು. ರಾಮ ಬಿಟ್ಟ ಬಾಣ ಹೊಕ್ಕ ಜಿಂಕೆ ಸಾಯುವಾಗ "ಹಾ ಸೀತೆ! ಹಾ ಲಕ್ಷ್ಮಣಾ!" ಎಂದು ರಾಮನಂತೆ ದನಿಮಾಡಿ ಕೂಗಿ ಸಾಯುತ್ತದೆ. ಅದು ಮಾರೀಚ ರಾಕ್ಷಸನೆಂದು ರಾಮನಿಗೆ ತಿಳಿಯುತ್ತದೆ. ಆಗಲೇ ರಾಮ ಸೀತೆಯ ಬಗ್ಗೆ ಚಿಂತಿಸತೊಡಗುತ್ತಾನೆ.

ಈ ಆರ್ತ ಧ್ವನಿಯನ್ನು ಕೇಳಿದ ಸೀತೆ ರಾಮ ಆಪತ್ತಿಗೊಳಗಾಗಿದ್ದಾನೆಂದು ತಿಳಿದು ಅವನನ್ನು ರಕ್ಷಿಸಲು ಲಕ್ಷ್ಮಣನಿಗೆ ಹೇಳುತ್ತಾಳೆ. ಲಕ್ಷ್ಮಣ ಇದೆಲ್ಲ ರಾಕ್ಷಸರ ಹೂಟವೆಂದು ಎಷ್ಟು ಹೇಳಿದರೂ ಆಕೆ ಕೇಳುವುದಿಲ್ಲ. ಅದಕ್ಕೆ ಬದಲಾಗಿ ಆಕೆ, ನೀನು ನನ್ನನ್ನು ಪಡೆಯಲು ರಾಮನ ವಿನಾಶವನ್ನು ಬಯಸುತ್ತಿರುವೆ ಎಂಬ ಕರ್ಣ ಕಠೋರವಾದ ನುಡಿಗಳಿಂದ ನಿಂದಿಸುತ್ತಾಳೆ. ಅಷ್ಟೇ ಅಲ್ಲ, ನಡತೆಗೆಟ್ಟವನೇ, ದಯೆ ಇಲ್ಲದವನೇ, ಕ್ರೂರಿ ಹಾಗೂ ಕುಲಾಧಮ ಎಂದೆಲ್ಲಾ ಹೇಳುತ್ತಾಳೆ. ಆಗ ಲಕ್ಷ್ಮಣ, "ತಾಯೇ ! ನೀನು ನನಗೆ ದೇವತೆಯ ಸಮಾನಳಾಗಿರುವುದರಿಂದ ಈ ವಿಷಯದಲ್ಲಿ ಯಾವ ಉತ್ತರವನ್ನು ಕೊಡಲೂ ನನಗೆ ಉತ್ಸಾಹವಿಲ್ಲ" ಎಂದು ಹೇಳಿಬಿಡುತ್ತಾನೆ. ಮತ್ತು "ಆಡಬಾರದ ಮಾತುಗಳನ್ನಾಡುತ್ತಿರುವ ನೀನು ವಿನಾಶಹೊಂದುವೆ" ಎಂದು ಶಪಿಸಿಬಿಡುತ್ತಾನೆ. ಲಕ್ಷ್ಮಣ ಇಲ್ಲಿ ಇಷ್ಟು ಕಠಿಣವಾಗಿ ವರ್ತಿಸಬೇಕಾದರೆ ಅವನ ಹೃದಯ ಎಷ್ಟು ನೊಂದಿರಬೇಕೆಂದು ಊಹಿಸಿಕೊಳ್ಳಬಹುದಲ್ಲವೇ ?

ಸೀತೆ ಮಾಡಿದ ಈ ಎರಡನೇ ತಪ್ಪಿನಿಂದಾಗಿ ಮಾರು ವೇಷದಲ್ಲಿ ಬಂದ ರಾವಣ ಸೀತೆಯನ್ನು ಅಪಹರಿಸಿಕೊಂಡು ಹೋದ. ಇಲ್ಲಿ ಸೀತೆ ಮಾಡಿದ ಎರಡು ಗುರುತರವಾದ ತಪ್ಪುಗಳೇ ಮುಂದಿನ ರಾಮನ ಅನರ್ಥ ಪರಂಪರೆಗೆ ಕಾರಣವಾಯಿತೆಂಬುದನ್ನು ಯಾರೂ ಮರೆಯುವಂತಿಲ್ಲ. ಸೀತೆ ಲಕ್ಷ್ಮಣರೇಖೆಯನ್ನು ದಾಟಿದ್ದರಿಂದ, ರಾಮನ ಸಾಮೀಪ್ಯವೂ ತಪ್ಪುವಂತಾಯಿತು ಎನ್ನುವ ಅಂಶ ಮುಖ್ಯವಾಗುತ್ತದೆ.

ಉತ್ತರಕಾಂಡದ ಉತ್ತರರಾಮಾಯಣದ ಪ್ರಕಾರ ರಾಮನಿಗೆ ಪಟ್ಟಾಭಿಷೇಕವಾಗುತ್ತದೆ. ನಂತರ ಸೀತೆ ಗರ್ಭಿಣಿಯಾಗುತ್ತಾಳೆ. ಆಗ ಆಕೆಗೆ ಋಷ್ಯಾಶ್ರಮ ನೋಡುವ ಬಯಕೆಯುಂಟಾಗುತ್ತದೆ. ಸೀತೆಗೇನೋ ಈ ಅಪೇಕ್ಷೆಯುಂಟಾಯಿತು. ಆದರೆ ಇಷ್ಟು ದಿನಗಳ ಮೇಲೆ ಒಂದಾಗಿರುವ ಹೆಂಡತಿಯನ್ನು ರಾಮ ಬಿಟ್ಟಿರುವುದು ಹೇಗೆ ? ಈ ಯೋಚನೆ ರಾಮನಿಗೆ ಬರುವ ಮೊದಲೇ ದೈವ ಅವನ ಸಹಾಯಕ್ಕೆ ಬರುತ್ತದೆ. ಭದ್ರ

ಲೋಕಾಪವಾದದ ಸುದ್ದಿಯೊಂದನ್ನು ತರುತ್ತಾನೆ. ಅದನ್ನು ಕೇಳಿ ರಾಮ ಸೀತೆಯನ್ನು ವಾಲ್ಮೀಕಿಗಳ ಆಶ್ರಮದ ಸಮೀಪದ ಕಾಡಿನಲ್ಲಿ ಬಿಟ್ಟು ಬರುವಂತೆ ಹೇಳುತ್ತಾನೆ.

'ಉತ್ತರಕಾಂಡಕಾರ ಹಿಂದಿನ ರಾಮನ ಚಿತ್ರದಲ್ಲಿರುವ ದೋಷಗಳನ್ನೆಲ್ಲ ಒಂದೊಂದಾಗಿ ಅವನ್ನು ನಿವಾರಿಸುವ ಪ್ರಯತ್ನ ಮಾಡಿದಂತಿದೆ' ಎಂದು ಶ್ರೀ ಮೂರ್ತಿ ರಾಯರು ಹೇಳಿರುವ ಮಾತು ಇಲ್ಲಿ ನಿಜವಾಗಿದೆ. ಆದರೆ ಅವರು ಹೇಳುವಂತೆ 'ರಾಮ ಉನ್ನತಮಟ್ಟದಿಂದ ಹಠಾತ್ತಾಗಿ ಇಲ್ಲಿ ಕೆಳಕ್ಕೆ ಇಳಿದ' ಎನ್ನುವ ಮಾತನ್ನು ಒಪ್ಪಲಾಗುವುದಿಲ್ಲ.

ಮುಂದಿನದೇ ಕಾಳಿದಾಸ ವಿರಚಿತ ರಘುವಂಶದಲ್ಲಿ ಬರುವ 'ಸೀತಾ ಪರಿತ್ಯಾಗ' ಪ್ರಸಂಗ. ವಾಲ್ಮೀಕಿ ರಾಮಾಯಣದಲ್ಲಿನ ನಿಷ್ಠೂರ ಸನ್ನಿವೇಶಗಳನ್ನು ಉತ್ತರಕಾಂಡಕಾರ ಕಾಳಿದಾಸ ಹಾಗೂ ಭವಭೂತಿಯು ತಮ ತಮಗೆ ತೋಚಿದ ಹಾಗೆ ಅಲ್ಪ ಸ್ವಲ್ಪ ಬದಲಾವಣೆ ಮಾಡಿಕೊಂಡು ಕೃತಿ ರಚಿಸಿರುವುದರಿಂದ ರಾಮನ ಪಾತ್ರ ಉದಾತ್ತವೆನಿಸಿ ಔನ್ನತ್ಯವನ್ನು ಮುಟ್ಟಿದೆ.

ಕಾಳಿದಾಸ ಹಾಗೂ ಭವಭೂತಿ ಇಬ್ಬರೂ ತಮ್ಮ ಕೃತಿಗಳಿಗೆ ಕಾರಣಕರ್ತರಾದ ಪೂರ್ವಸೂರಿಗಳನ್ನು ಸ್ಮರಿಸಿದ್ದಾರೆ. ಇದನ್ನೇ ಶ್ರೀ ಮೂರ್ತಿರಾಯರೂ ಅನುಸರಿಸಿ ತಮ್ಮ ವಿಮರ್ಶಾಪ್ರಬಂಧಕ್ಕೆ 'ಪೂರ್ವಸೂರಿಗಳೊಡನೆ' ಎಂಬ ಶೀರ್ಷಿಕೆಯನ್ನಿಟ್ಟಿರುವುದು ಕೃತಿಯ ಮಹತ್ವವನ್ನು ಹೆಚ್ಚಿಸಿದೆ.

ಭವಭೂತಿ ನಾಟಕದ ಪ್ರಾರಂಭದಲ್ಲೇ, 'ಪೂರ್ವಕವಿಗಳಿಗಿಂದು ನಾವೀ ನಮನ ವಾಕ್ಯವನಿದನು ಮೊದಲುಚ್ಚರಿಪೆವು' ಎಂದಿರುವುದು ಅವನಿಗೆ ಹಿಂದಿನ ಕವಿಗಳ ಬಗ್ಗೆ ಇದ್ದ ಗೌರವಾದರಗಳನ್ನು ಸೂಚಿಸುತ್ತದೆ. 'ಸೀತಾಪರಿತ್ಯಾಗ' ಸನ್ನಿವೇಶ ನಿರ್ಮಾಣ ದಲ್ಲಂತೂ ಭವಭೂತಿ ಮತ್ತಷ್ಟು ವಿನೂತನತೆಯನ್ನು ತೋರಿದ್ದಾನೆ. ಇದು ಶ್ರೀ ಮೂರ್ತಿರಾಯರಿಗೆ ತುಂಬ ಮೆಚ್ಚುಗೆಯಾಗಿದೆ. ಕವಿಯನ್ನವರು ಕೊಂಡಾಡಿದ್ದಾರೆ.

ಭವಭೂತಿಯ ಉತ್ತರರಾಮ ಚರಿತಕ್ಕೆ ವಾಲ್ಮೀಕಿಯು ನಂತರದ ಉತ್ತರ ಕಾಂಡಕಾರರೇ ಮೂಲಾಧಾರವಾದರೂ ಕಥೆ ಹೇಳುವ ರೀತಿಯಲ್ಲಿ ಭವಭೂತಿಯಲ್ಲಿ ಮತ್ತಷ್ಟು ವೈವಿಧ್ಯತೆ ಇದೆ, ವಿನೂತನ ತಂತ್ರ ಇದೆ.

ಒಟ್ಟಿನಲ್ಲಿ ಬೇರೆ ಬೇರೆ ಕವಿಗಳ 'ಸೀತಾಪರಿತ್ಯಾಗ' ಪ್ರಸಂಗವನ್ನು ಶ್ರೀ ಮೂರ್ತಿ ರಾಯರು ತಮ್ಮ ವಿಮರ್ಶೆಯ ಒರೆಗಲ್ಲಿಗೆ ಹಚ್ಚಿ, ಕೃತಿಪರೀಕ್ಷೆ ನಡೆಸಿದ್ದಾರೆ. ಅವತರಣಿಕೆ ಯಲ್ಲಿ ಬರೆಯುತ್ತಾ ವಾಲ್ಮೀಕಿಯ ರಾಮನನ್ನು ವಾಲ್ಮೀಕಿ ಕಾಣ, ಭವಭೂತಿ ಚೆನ್ನಾಗಿ ಬಲ್ಲ ಎಂದಿರುವ ಶ್ರೀಮಾನ್ ವೆಂಕಣ್ಣಯ್ಯನವರ ಮಾತು ಪರಿಣಾಮ ಬೀರದಿದ್ದರೆ ನಮಗಿಂದು ಇಂತಹ ಒಂದು ಅಪೂರ್ವ, ವಿಮರ್ಶಾಕೃತಿ ಲಭ್ಯವಾಗುತ್ತಿತ್ತೋ ಇಲ್ಲವೋ?

ಆದರೆ ಆದಿಕವಿ ವಾಲ್ಮೀಕಿಯ ರಾಮಾಯಣ ಮಹಾಕಾವ್ಯದ ಮೂಲೋದ್ದೇಶ ವನ್ನು ಸರಿಯಾಗಿ ಅರ್ಥ ಮಾಡಿಕೊಂಡರೆ ಅದರಿಂದ ಹೊರಡುವ ಧ್ವನಿಯೇ ಬೇರೆ ಎನ್ನುವುದು ನನ್ನ ಅಭಿಪ್ರಾಯ.

ವಾಲ್ಮೀಕಿ ರಾಮನನ್ನು ಕಂಡ ಹಾಗೆ ಉತ್ತರಕಾಂಡಕಾರ ಕಾಳಿದಾಸ ಮತ್ತು ಭವಭೂತಿ ಇವರುಗಳು ಯಾರೂ ಕಂಡಿಲ್ಲವೆನಿಸುತ್ತದೆ. ಯಾಕೆಂದರೆ ಆದಿಕವಿಯ ಕಾವ್ಯಕ್ಕೂ ಉಳಿದವರು ರಚಿಸಿರುವ ಇದೇ ಸೀತಾಪರಿತ್ಯಾಗ ಪ್ರಸಂಗಗಳ ರಚನೆಗೂ ಮೂಲೋದ್ದೇಶದಲ್ಲೇ ವ್ಯತ್ಯಾಸವಿದೆ.

ವಿಮರ್ಶೆ ಯಾವಾಗಲೂ ಮೂಲಕೃತಿಯ ಆಶಯಕ್ಕೆ ಸಮೀಪವಾಗಿ ಸ್ಪಷ್ಟವಾಗಿರುವುದು ಮುಖ್ಯವಲ್ಲವೇ ?

# ಶತಮಾನದ ಹೊಸ್ತಿಲಿನಲ್ಲಿ ಸಾಹಿತ್ಯ - ಸಂತ ಎ.ಎನ್.ಮೂರ್ತಿರಾವ್

**ಕೆ. ಎಚ್. ಸಾವಿತ್ರಿ**

ನಾವು ಇಸ್ರೋ ಲೇಔಟ್‌ನ ಬೀದಿ ಬೀದಿ ಸುತ್ತಿ ಆ ಮನೆ ತಲುಪಿದಾಗ ಗಡಿಯಾರದ ಮುಳ್ಳುಗಳು ಆಗಲೇ 12ರ ಗಡಿ ದಾಟಿದ್ದವು. ಹೊರಗಡೆ ತುಂತುರು ಮಳೆ. ಜೊತೆಗೆ ಆಷಾಢದ ಗಾಳಿ. ಕೊನೆಗೂ ಮನೆ ಸಿಕ್ಕ ಸಂಭ್ರಮದಲ್ಲಿ ಗೇಟ್ ಸಮೀಪಿಸಿದಾಗ ಮಣ್ಣಿನ ಸೂರ್ಯ ನಮ್ಮನ್ನು ಸ್ವಾಗತಿಸಿದ. ಸೂರ್ಯನ ಬೆನ್ನ ಹಿಂದೆಯೇ ಮುಖ ತುಂಬಿಕೊಂಡ ಸಂಧ್ಯಾ "ಬನ್ನಿ, ನಿಮಗಾಗಿ ಕಾಯುತ್ತಿದ್ದೇವೆ. ಮನೆ ಸಿಗುವುದು ಕಷ್ಟವಾಯಿತೇ?" ಎಂದರು.

ಮಣೆಯ ತೋರಣ ಕಟ್ಟಿದ ಬಾಗಿಲು ದಾಟಿ ಒಳಹೋಗುತ್ತಿದ್ದಂತೆಯೇ ಮಣ್ಣಿನ ವಿವಿಧ ಆಕೃತಿಗಳು ನಗು ಚೆಲ್ಲುತ್ತಾ ಕುಳಿತಿದ್ದವು. ಅವೆಲ್ಲವೂ ಸಂಧ್ಯಾರ ಸೃಷ್ಟಿ. ಅವುಗಳ ಸೌಂದರ್ಯ, ಕಲಾತ್ಮಕತೆ ಸವಿಯುತ್ತಿದ್ದಂತೆಯೇ 'ಅವರು' ಎದುರಾದರು.

ಬಿಳಿಪಂಚೆ, ತಿಳಿನೀಲಿ ಬಣ್ಣದ ಷರಟು, ತಲೆ ತುಂಬಾ ಬೆಳ್ಳಿ ಕೂದಲು. ಎರಡೂ ಕೈಜೋಡಿಸಿ ಮುಗಿದರು. 99 ರ ತುಂಬು ಬದುಕಿನಲ್ಲೂ ಕೊಂಚವೂ ಬಾಗದ ನಿಲುವು. ಪರಿಪೂರ್ಣತೆಯೇ ಮೈವೆತ್ತಂತೆ... ಅವರೇ ಅಕ್ಕಿಹೆಬ್ಬಾಳು ನರಸಿಂಹಮೂರ್ತಿ ರಾವ್ ಅರ್ಥಾತ್ ಎ.ಎನ್. ಮೂರ್ತಿರಾಯರು. ಮೂರು ಶತಮಾನಗಳಿಗೆ ಕೊಂಡಿಯಾಗಲಿರುವವರು. ಕನ್ನಡ ಗದ್ಯ ಸಾಹಿತ್ಯಕ್ಕೆ ಹೊಸ ಆಯಾಮವನ್ನೇ ಕೊಟ್ಟವರು. ಅವರು ಬರೆದದ್ದು ಸುಮಾರು 25 ಕೃತಿಗಳು. ಆದರೆ ಬರೆದದ್ದೆಲ್ಲವೂ ಗಟ್ಟಿ ಸತ್ವವುಳ್ಳದ್ದು.

ಸಾಕ್ರಟೀಸ್‌ನ ಕೊನೆಯ ದಿನಗಳು, ಪಾಶ್ಚಾತ್ಯ ಸಣ್ಣ ಕಥೆಗಳು, ಮೊಲಿಯೇರನ ಎರಡು ನಾಟಕಗಳು, ಹವಳದ ದ್ವೀಪ, ಷೇಕ್ಸ್‌ಪಿಯರ್‌ನ ಟೆಂಪೆಸ್ಟ್-ಕನ್ನಡಕ್ಕೆ 'ಚಂಡಮಾರುತ' ಅನುವಾದ ಕೃತಿಗಳು ಸೇರಿದಂತೆ ಉತ್ಕೃಷ್ಟ ಕೊಡುಗೆಗಳನ್ನು ನೀಡಿದವರು. ಹಗಲುಗನಸುಗಳು, ಮಿನುಗು ಮಿಂಚು, ಅಲೆಯುವ ಮನ ಅವರ ಶ್ರೇಷ್ಠ ಪ್ರಬಂಧ ಕೃತಿಗಳಾದರೆ 'ಅಪರ ವಯಸ್ಕನ ಅಮೆರಿಕಾ ಯಾತ್ರೆ' ಅತ್ಯುತ್ತಮ ಪ್ರವಾಸ ಕಥನ. ಇದಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ. ಸಂಜೆಗಣ್ಣಿನ ಹಿನ್ನೋಟ ಅವರ ಆತ್ಮ ವೃತ್ತಾಂತ. ಅತ್ಯಂತ ಸರಳವಾಗಿ ಯಾವುದೇ ಪೂರ್ವಾಗ್ರಹಗಳಿಗೆ ಅಂಟಿಕೊಳ್ಳದೆ, ಮಾನವೀಯ ಮೌಲ್ಯಗಳಿಗೆ ಸ್ಪಂದಿಸುತ್ತಲೇ ತಾವು ಅನುಭವಿಸಿದ್ದನ್ನು ಬಿಚ್ಚಿಡುತ್ತಾ ಅಂದಿನ ಆ ಕಾಲವನ್ನೇ ನಮ್ಮ ಮುಂದೆ ಚಿತ್ರಿಸುವ ಪರಿಯೇ ಬೆರಗು

ಗೊಳಿಸುವಂಥದು. ಎಲ್ಲೂ ಆತ್ಮರತಿಯ ಅಗ್ಗಳಿಕೆಯೂ ಇಲ್ಲ. ಮುಚ್ಚು ಮರೆಯೂ ಇಲ್ಲ.

'ಚಿತ್ರಗಳು – ಪತ್ರಗಳು' ಮೂರ್ತಿರಾಯರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ತಂದುಕೊಟ್ಟಿದೆ. ಅಪರೂಪದ, ವಿಶಿಷ್ಟ ಕೃತಿ 'ದೇವರು' ಪಂಪ ಪ್ರಶಸ್ತಿಯ ಗರಿ ಮೂಡಿಸಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ (1954-56), ಆಕಾಶವಾಣಿಯ ಮೈಸೂರು ನಿಲಯದ ನಿರ್ದೇಶಕರಾಗಿ, ಕನ್ನಡ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯ ನಿರ್ದೇಶಕರಾಗಿ, ಸಾಹಿತ್ಯ ಅಕಾಡೆಮಿಯ ಕನ್ನಡ ಸಲಹಾ ಸಮಿತಿಯ ನಿರ್ವಾಹಕರಾಗಿ ಕಾರ್ಯನಿರ್ವಹಿಸಿದ ಮೂರ್ತಿರಾಯರದು ಬಹುಮುಖ ಪ್ರತಿಭೆ. ಯಾವುದೇ ಕೆಲಸ ಕೊಟ್ಟರೂ ಅದರಲ್ಲಿ ಅಚ್ಚುಕಟ್ಟು, ಶ್ರದ್ಧೆ ಅವರ ವೈಶಿಷ್ಟ್ಯ.

1984ರಲ್ಲಿ ನಡೆದ 56ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದವರು. ಮೈಸೂರು ವಿಶ್ವವಿದ್ಯಾಲಯ ಗೌರವ ಡಿ.ಲಿಟ್ ಪ್ರಶಸ್ತಿ ನೀಡಿ ಗೌರವಿಸಿದೆ.

ಅತ್ಯುತ್ತಮ ವಾಙ್ಮಿ, ಅಧ್ಯಾಪಕ, ಮೇಧಾವಿ, ಕನ್ನಡ, ಇಂಗ್ಲೀಷ್, ಸಂಸ್ಕೃತ ಹಾಗೂ ಫ್ರೆಂಚ್ ಭಾಷೆಯ ಕೋವಿದ, ವಿಚಾರವಂತರು. ಅದಕ್ಕೂ ಮಿಗಿಲಾಗಿ ಹೃದವಂತಿಕೆಯುಳ್ಳವರು. ಮಾನವೀಯ ಮೌಲ್ಯಗಳಿಗಾಗಿ ಬದುಕುತ್ತಿರುವವರು.

ಅಂಥ ಮೂರ್ತಿರಾಯರು ನಮ್ಮ ಮುಂದೆ ಯಾವುದೇ ಹಮ್ಮು ಬಿಮ್ಮು ಇಲ್ಲದೆ ಕುರ್ಚಿಗೊರಗಿ 'ನಿಮ್ಮೊಂದಿಗೆ ಮಾತುಕತೆಗೆ ಸಿದ್ಧ' ಎಂಬ ಭಂಗಿಯಲ್ಲಿ ಕುಳಿತು "ಹೇಳಿ" ಎಂದರು. ಮೂರು ದಿನಗಳ ಹಿಂದಷ್ಟೇ ಅಮೇರಿಕೆಯ ಪ್ರವಾಸ ಮುಗಿಸಿ ಬಂದಿದ್ದರೂ ಮುಖದಲ್ಲಿ ಸ್ವಲ್ಪವೂ ಆಯಾಸದ ಸುಳಿವಿಲ್ಲ. ಅದೇ ಲವಲವಿಕೆಯ, ಚೈತನ್ಯದಿಂದ ಕೂಡಿದ ಮುಖಭಾವ.

(ಅಮೇರಿಕ ಪ್ರವಾಸದಿಂದಲೇ ನಮ್ಮ ಮಾತು ಮೊದಲಿಟ್ಟಿತು.)

"ನಾನು 12-13 ಬಾರಿ ಅಮೆರಿಕಕ್ಕೆ ಹೋಗಿರಬಹುದು. ಕೆಲವೊಮ್ಮೆ ಕರ್ನಾಟಕ ಸಂಘದವರು ಏರ್ಪಡಿಸಿದ್ದ ಸಭೆಗಳಲ್ಲೂ ಭಾಗವಹಿಸಿದ್ದೆ. ಹಿಂದೆ ಹೋಗಿದ್ದಕ್ಕೂ ಈಗ ಹೋಗಿದ್ದಕ್ಕೂ ಅಂಥ ವ್ಯತ್ಯಾಸವಿಲ್ಲ. ಈ ಬಾರಿ ಹೆಚ್ಚಾಗಿ ಅಮೆರಿಕನ್ನರು ಅಥವಾ ಭಾರತೀಯರನ್ನು ಭೇಟಿ ಮಾಡಿಲ್ಲ. ಹೆಚ್ಚಿನ ಸಮಯವನ್ನು ಕುಟುಂಬದವರ ಜೊತೆಯೇ ಕಳೆದೆ.

ಮಾತು ಹಾಗೆಯೇ ಭಾರತದ ಪರಮಾಣು ಸ್ಫೋಟದ ಕಡೆಗೆ ತಿರುಗಿತು.

ಪೋಖ್ರಾನ್‌ನಲ್ಲಿ ನಡೆದ ಬಾಂಬ್ ಸ್ಫೋಟಕ್ಕೂ ನಂತರ ನಡೆದ ಘಟನೆಗಳಿಗೂ ನಮಗೂ ನೇರ ಸಂಬಂಧವಿಲ್ಲ. ಯಾವುದೇ ವಿಶ್ವ ಮಹಾಯುದ್ಧದಲ್ಲಿ ಭಾರತ ಎಂದೂ ಮುಂಚೂಣಿಯಲ್ಲಿದ್ದ ಅಥವಾ ಮುಂಚೂಣಿ ವಹಿಸಿದ ದೇಶವಲ್ಲ. ಇಂಥ ದೇಶವೊಂದು ಬಾಂಬ್ ಉತ್ಪಾದಿಸಿದೆ ಎಂಬುದೇ ಅಮೆರಿಕದಲ್ಲಿ ತೀವ್ರ ಸಂಚಲನ ಉಂಟು ಮಾಡಿದೆ.

ಆದರೆ ಅಮೆರಿಕದವರು ಬಾಂಬ್ ಇಟ್ಟುಕೊಳ್ಳಬಹುದಾದರೆ ನಾವೇಕೆ ಇಟ್ಟುಕೊಳ್ಳಬಾರದು? ಅವರಿಗೊಂದು ನೀತಿ ನಮಗೊಂದು ನೀತಿಯೇ ?

ಅಮೆರಿಕದಲ್ಲಿ ನಾನಿದ್ದಷ್ಟು ದಿನ ಅಮೆರಿಕ ಮತ್ತಿತರ ರಾಷ್ಟ್ರಗಳು ಭಾರತದ ಮೇಲೆ ವಿಧಿಸಿರುವ ಆರ್ಥಿಕ ದಿಗ್ಬಂಧನ ಕುರಿತು ಯಾರೂ ನನ್ನೊಡನೆ ಚರ್ಚಿಸಿಲ್ಲ."

ಪ್ರ: *ಅಲ್ಲಿಯ ಮುಕ್ತ ಜೀವನ ಹಾಗೂ ಇಲ್ಲಿಯ ಬದುಕಿನ ಬಗ್ಗೆ ಏನನಿಸುತ್ತದೆ?*

ಉ: "ಅವರ ಬದುಕು ಅವರಿಗೆ. ನಮ್ಮ ಬದುಕು ನಮಗೆ. ನಾನು ಮದುವೆಯಾದಾಗ ಜನರು ಹೆಚ್ಚಾಗಿ ಒಂದು ಊರಿನಿಂದ ಇನ್ನೊಂದು ಊರಿಗೆ, ಇನ್ನೊಂದು ದೇಶಕ್ಕೆ ಓಡಾಡುತ್ತಿರಲಿಲ್ಲ. ಈಗ ಎಲ್ಲರೂ ಪ್ರಪಂಚದಾದ್ಯಂತ ಓಡಾಡುತ್ತಾರೆ. ಪರಸ್ಪರ ಸಂಪರ್ಕ ಹೆಚ್ಚುತ್ತಿದೆ. ಒಂದು ಕಾಲದಲ್ಲಿ ಬ್ರಾಹ್ಮಣರಲ್ಲೇ ಸ್ಮಾರ್ತರು ಮಾಧ್ವರು ಮದುವೆ ಮಾಡಿಕೊಳ್ಳುತ್ತಿರಲಿಲ್ಲ. ಆದರೆ ಪಾಶ್ಚಿಮಾತ್ಯ ಶಿಕ್ಷಣದಿಂದ ಈ ಭೇದ ಹೊರಟು ಹೋಗಿದೆ. ಎಲ್ಲರೂ ಎಲ್ಲಾ ಕಡೆ ಓಡಾಡುತ್ತಿರುವುದರಿಂದ ಪೂರ್ವಗ್ರಹ ಮನೋಭಾವಗಳು ಹೊರಟುಹೋಗುತ್ತಿವೆ. ಹಿಂದೆ ಬ್ರಾಹ್ಮಣರು ಒಕ್ಕಲಿಗರು ಒಟ್ಟಿಗೆ ಕುಳಿತು ಊಟ ಮಾಡುತ್ತಿರಲಿಲ್ಲ. ಹಾಗೆ ಊಟ ಮಾಡುವುದನ್ನು ಊಹಿಸಲೂ ಆಗುತ್ತಿರಲಿಲ್ಲ. ಆದರೆ ಈಗ ಮೆಚ್ಚಿ ಮದುವೆಯಾಗುತ್ತಾರೆ. ಉದಾ: ನನ್ನ ಮೂವರು ಸೊಸೆಯಂದಿರಲ್ಲಿ ಒಬ್ಬರು ಮಾತ್ರ ಭಾರತೀಯರು. ಇನ್ನೊಬ್ಬರು ಅಮೆರಿಕನ್ ಪ್ರಜೆ. ಮತ್ತೊಬ್ಬರು ಬ್ರಿಟಿಷ್ ಪ್ರಜೆ. ಮೊಮ್ಮಗ ಹಾಲೆಂಡ್‌ನವಳನ್ನು ಮದುವೆಯಾಗಿದ್ದಾನೆ. ನಮ್ಮದು ವಿಶ್ವಕುಟುಂಬ. ಈಗ ಇವೆಲ್ಲ ಸಹಜ. ಹಿಂದೆ ಅಂಥದನ್ನು ಮನದಲ್ಲಿ ಊಹಿಸಲೂ ಸಾಧ್ಯವಿರಲಿಲ್ಲ.

ಆದರೂ ಹೊರಗಿನ ಪ್ರಪಂಚದ ಅರಿವಿಲ್ಲದ ಹಳ್ಳಿಗಳಲ್ಲಿ ಅನೇಕ ಸಂಪ್ರದಾಯಗಳು ಇಂದಿಗೂ ಇದ್ದೇ ಇವೆ."

ಪ್ರ: *ಪಾಶ್ಚಾತ್ಯ – ಪೌರಾತ್ಯ ಸಾಹಿತ್ಯ ಹಾಗೂ ಜೀವನ ಎರಡನ್ನೂ ನೋಡಿರುವ ನಿಮಗೆ ಅಲ್ಲಿ – ಇಲ್ಲಿಗೆ ಕಾಣುವ ಸಾಮ್ಯ ಹಾಗೂ ವಿರೋಧ?*

ಉ: "ಸಾಮ್ಯತೆ ಇಲ್ಲ. ಇಂಗ್ಲಿಷ್ ಸಾಹಿತ್ಯ ಕನ್ನಡ ಸಾಹಿತ್ಯಕ್ಕಿಂತ ಅತಿಹೆಚ್ಚು ಶ್ರೀಮಂತ, ಸಮೃದ್ಧ. ಬ್ರಿಟಿಷರು ಬರುವುದಕ್ಕೆ ಮುಂಚಿತವಾಗಿ ನಮ್ಮ ಸಾಹಿತ್ಯ ಪುರಾಣ, ಪುಣ್ಯಕಥೆಗಳಲ್ಲಿತ್ತು. ಕಾದಂಬರಿ, ಗೀತಸಾಹಿತ್ಯ ಇರಲಿಲ್ಲ. ನಾವು ಬ್ರಿಟಿಷರನ್ನು ಈ ವಿಷಯದಲ್ಲಿ ಕಾಪಿ ಮಾಡಿದೆವು. ಬದುಕಿನ ವಿಷಯದಲ್ಲೂ ಬ್ರಿಟಿಷರನ್ನು ಅನುಸರಿಸಿದೆವು. ಬ್ರಿಟಿಷರು ಬಂದ ಮೇಲೆ ಅಂದರೆ ನಾನು 14-15 ವರ್ಷದವನಿದ್ದಾಗ ವೇಸ್ಟ್ ಕೋಟ್, ಷರ್ಟ್ ಧರಿಸಲು ಆರಂಭಿಸಿದೆ. ನಮ್ಮಲ್ಲಿ ಹೊಲಿಗೆ ಯಂತ್ರವೇ ಇರಲಿಲ್ಲ. ಬ್ರಿಟಿಷರು ಬರುವ ಮುನ್ನ ಪಂಚೆಯನ್ನೇ ಉಟ್ಟುಕೊಂಡು ಪಂಚೆಯನ್ನೇ ಹೊದೆಯುತ್ತಿದ್ದೆವು."

ಪ್ರ: *ಇಂಗ್ಲೀಷ್ ಕನ್ನಡ ಸಾಹಿತ್ಯ ಎರಡರಲ್ಲೂ ಪ್ರಾವೀಣ್ಯತೆ ಗಳಿಸಿರುವ ನಿಮಗ ಮೆಚ್ಚಿನ ಪುಸ್ತಕ ಯಾವುದು ?*

ಉ: "ಷೇಕ್ಸ್‌ಪಿಯರ್‌ನ ಕೃತಿಗಳು. ಬೇರೆಲ್ಲಾ ಸಾಹಿತಿಗಳಿಗಿಂತ ಬದುಕಿನ ಬಗ್ಗೆ ತೀವ್ರ ಆಸೆ ಉಳ್ಳವನು ಷೇಕ್ಸ್‌ಪಿಯರ್. ವಿಭಿನ್ನ ವ್ಯಕ್ತಿತ್ವಗಳನ್ನು ನೋಡಿದವನು, ಅವರ ಚಿತ್ರಣ ಮಾಡಿದವನು. ಷೇಕ್ಸ್‌ಪಿಯರ್‌ನ ಒಂದು ಕೃತಿಯಂತೆ ಇನ್ನೊಂದು ಕೃತಿಯಿಲ್ಲ.

ನಾನು ಕನ್ನಡದಲ್ಲಿ ಓದಿದ ಮೊದಲ ಕಾದಂಬರಿ ಎಂ. ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಹಾರಾಯ'. ನನಗೆ ಓದಿನ ಹುಚ್ಚು ಹತ್ತಿಸಿದ್ದು ಸೋದರಮಾವ ಗಂಗಯ್ಯ. ಅವನು ಹೇಳುತ್ತಿದ್ದ 'ಅರೇಬಿಯನ್ ನೈಟ್ಸ್' ಕಥೆಗಳನ್ನು ಕೇಳಿಯೇ ಸಾಹಿತ್ಯದ ಮೇಲೆ ಅಭಿರುಚಿ ಬೆಳೆಯಿತು. ಸಿಕ್ಕಿದ್ದೆಲ್ಲವನ್ನೂ ಓದತೊಡಗಿದೆ.

ಕಾರಂತರ ಕಾದಂಬರಿಗಳು ನಿಜಕ್ಕೂ ಗ್ರೇಟ್. ಬೇಂದ್ರೆ, ಕುವೆಂಪು ಎಲ್ಲರೂ ಪಾಶ್ಚಾತ್ಯ ಸಾಹಿತ್ಯದಿಂದ ಪ್ರಭಾವಿತರಾದವರೇ. ಕವಿತೆ ಸಹ ಪಾಶ್ಚಾತ್ಯರ ಕೊಡುಗೆ. ಗೀತಸಾಹಿತ್ಯ ನಮ್ಮಲ್ಲಿ ಯಾರೂ ಬರೆಯುತ್ತಿರಲಿಲ್ಲ. ಕೆ. ಎಸ್. ನರಸಿಂಹಸ್ವಾಮಿ ಅವರ 'ರಾಯರು ಬಂದರು ಮಾವನ ಮನೆಗೆ' ಅಂಥ ಕವನಗಳು ಹಿಂದಿನ ಶತಮಾನದಲ್ಲಿ ಕಂಡುಬರದಿರುವುದಕ್ಕೆ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಇಲ್ಲದಿರುವುದೇ ಕಾರಣ."

ಪ್ರ: *ಎಲ್ಲಾ ಸಾಹಿತ್ಯಗಳು ಮತಧರ್ಮದಲ್ಲಿ ರಾಜಕೀಯದಲ್ಲಿ ಬಂಧಿಯಾದಂತೆ ಕಂಡುಬರುತ್ತವೆ. ಇದರಿಂದ ಹೊರಬರುವ ಸಾಹಿತ್ಯ ಸಮಾಜದ ಮೇಲೆ ಯಾವ ರೀತಿಯ ಪರಿಣಾಮ ಬೀರಲು ಸಾಧ್ಯ?*

ಉ: "ಧರ್ಮ ಆಧಾರಿತ ಪುಸ್ತಕಗಳು ಹೊರಟುಹೋಗಿವೆ. ರಾಜಕೀಯ ಸಾಹಿತ್ಯ ಎಂದುಕೊಂಡು ಬರೆದರೆ ಅದು ಸಾಹಿತ್ಯವೇ ಆಗುವುದಿಲ್ಲ. ಕೇವಲ ರಾಜಕೀಯ ವಾಗುತ್ತದೆ.

ರಾಜಕೀಯ ಬರೆಯುವವರು ಕೇವಲ ಬುದ್ಧಿವಂತರಾದರಷ್ಟೇ ಸಾಲದು. ಅವರಿಗೆ ಸಾಮಾಜಿಕ ಕಳಕಳಿ, ಚಿಂತನೆ ಇರಬೇಕು. ಪ್ರಧಾನಿ ವಾಜಪೇಯಿ ಬರೆದಿದ್ದಾರೆ ಎಂದ ಮಾತ್ರಕ್ಕೆ ಅದು ಸಾಹಿತ್ಯ ಆಗಬೇಕೆಂದೇನೂ ಇಲ್ಲ. ಆದರೆ ಕಾರಂತರು ಬರೆದರೆ ಅದು ರಾಜಕೀಯವೂ ಆಗುತ್ತದೆ ಸಾಹಿತ್ಯವೂ ಆಗಿರುತ್ತದೆ."

ಪ್ರ: *ಇಂಗ್ಲೀಷ್ ಸಾಹಿತ್ಯದಲ್ಲಿನ ಟ್ರೆಂಡ್ಸ್ ನಮ್ಮ ಸಾಹಿತ್ಯ ಹಾಗೂ ಉಪಖಂಡದ ಸಾಹಿತ್ಯದ ಮೇಲೆ ಯಾವ ಪರಿಣಾಮ ಉಂಟುಮಾಡಲು ಸಾಧ್ಯ ?*

ಉ: "ಸಾಮಾನ್ಯ ಮನುಷ್ಯನ ಜೀವನ, ಅವನ ದೈನಂದಿನ ಬದುಕನ್ನು ಕುರಿತು ಅಥವಾ ಯಾವುದೇ ವಿಷಯವನ್ನು ಕಾವ್ಯದ ನೆಲೆಗೆ ತೆಗೆದುಕೊಂಡು ಹೋಗಿ ಬರೆಯುವ ಟ್ರೆಂಡ್ಸನ್ನು ಪಾಶ್ಚಾತ್ಯ ಸಾಹಿತ್ಯ ಸೃಷ್ಟಿಸಿದೆ. ಉದಾ: "ಅಣುಶಕ್ತಿ ಬೇಕು ಅಥವಾ ಬೇಡ ಎಂದು ಸಹ ಅತ್ಯುತ್ತಮ ಕವನಗಳನ್ನು ಬರೆಯಬಹುದು."

ಪ್ರ: *ಮಹಿಳಾ ಅಭಿವ್ಯಕ್ತಿ ಸ್ವಾತಂತ್ರ್ಯದ ಬಗ್ಗೆ ನಿಮ್ಮ ಅಭಿಪ್ರಾಯ ?*

ಉ: "ಹೆಂಗಸು ಹೇಳಿದ ಮಾತು ಎಂಬ ಕಾರಣಕ್ಕಾಗಿಯೇ ಅದನ್ನು ಗಮನಕ್ಕೆ ತೆಗೆದುಕೊಳ್ಳಬಾರದು ಎಂಬ ನಿಲುವು ಸರಿಯಿಲ್ಲ. ತಪ್ಪು ಮಾಡಿದಾಗ ಹೆಂಡತಿಯಾದವಳು ಅದನ್ನು ತಪ್ಪೆಂದು ಮನಗಾಣಿಸಿದಾಗ ಅಥವಾ ಟೀಕಿಸಿದಾಗ ಅದನ್ನು ಗಂಡು ಜವಾಬ್ದಾರಿಯಿಂದ ಸ್ವೀಕರಿಸಬೇಕೇ ವಿನಾ ತಾತ್ಸಾರ ಮಾಡಬಾರದು. ನೀನು ಹೇಳಿದ್ದು ಸರಿ ಎಂದು ತಪ್ಪು ಒಪ್ಪಿಕೊಂಡರೆ ತಪ್ಪು ಒಪ್ಪಿಕೊಂಡವನು ದೊಡ್ಡವನಾಗುತ್ತಾನೆ. ಪತಿ ದೈವಂ ಅಥವಾ ಪತ್ನಿ ದೈವಂ ಎರಡೂ ಸರಿಯಲ್ಲ. ಯಾರು ವಿವೇಕಯುತವಾಗಿ ಮಾತಾನಾಡುತ್ತಾರೋ ಅವರ ಮಾತಿಗೆ ಮನ್ನಣೆ ದೊರೆಯಬೇಕು."

(ಹಾಗೆಯೇ ಮಾತು ಮೂರ್ತಿರಾಯರಿಗೆ ಪ್ರಿಯವಾದ ಕಳೆದ 7-8 ದಶಕಗಳಿಂದ ಅವರು ಬಲವಾಗಿ ನಂಬಿಕೊಂಡು ಬಂದಿರುವ 'ದೇವರಿಲ್ಲ' ಎಂಬ ವಿಷಯದ ಕಡೆಗೆ ಹೊರಳಿತು.

ದೇವರ ವಿಷಯದಲ್ಲೂ ಮೂರ್ತಿರಾಯರ ನಿಲುವು ಧೋರಣೆಗಳು ಕಿಂಚಿತ್ತೂ ಬದಲಾಗಿಲ್ಲ. ದೇವರಿಲ್ಲ ಎಂಬ ವಾದವನ್ನು ಇಂದಿಗೂ ಅವರು ಎಷ್ಟು ಸಮರ್ಥವಾಗಿ ಖಚಿತವಾಗಿ ಮುಂದಿಡುತ್ತಾರೆಂದರೆ ಎಂತಹವರಿಗೂ ತಾವು ಇಷ್ಟು ದಿನ ಪೂಜಿಸುತ್ತಾ ಬಂದಿದ್ದು ವ್ಯರ್ಥ ಎಂಬ ಭಾವನೆ ಮೂಡಿಸದೇ ಇರದು. ಆದರೆ ಮೂರ್ತಿರಾಯರು ನಂಬಿರುವ 'ದೇವರೇ' ಬೇರೆ.)

"ಜನಸಾಮಾನ್ಯರ ಬದುಕಿಗೆ 'ದೇವರು' ಎಂಬ ಪರಿಕಲ್ಪನೆ ಎಷ್ಟರ ಮಟ್ಟಿಗೆ ಸಂಗತ? ಆಕಾಶದಲ್ಲೋ, ಸ್ವರ್ಗದಲ್ಲೋ ದೇವರಿದ್ದಾನೆ ಎಂದರೆ, ಅಂತಹ ದೇವರು ಇಲ್ಲ."

ಒಳ್ಳೆಯ ಅಭಿಪ್ರಾಯಗಳು ಮನಸ್ಸಿನಲ್ಲಿ ಮೂಡಿ ಒಳ್ಳೆಯ ಕೆಲಸ ಮಾಡುವ ಹಾಗೆ ಆದರೆ ಅದೇ 'ದೇವರು'. ಇನ್ನೊಬ್ಬರ ಕಷ್ಟಕ್ಕೆ ಮರುಗಿ ಅವರ ಸಹಾಯಕ್ಕೆ ಮುಂದಾಗುತ್ತೇವೆಯಲ್ಲ, ಆಗ ನಾವು ದೇವರಾಗುತ್ತೇವೆ. ಇಲ್ಲವಿದ್ದರೆ ಮೃಗ ವಾಗುತ್ತೇವೆ.

ಇತರರ ವಿಷಯದಲ್ಲಿ ಒಳ್ಳೆಯ ರೀತಿಯಲ್ಲಿ ನಡೆದುಕೊಂಡು ಯಾರಿಗೂ ಕೆಟ್ಟದ್ದನ್ನು ಮಾಡುವುದಿಲ್ಲವೋ ಅಂಥವನನ್ನು ಜನ ದೇವತಾ ಮನುಷ್ಯ ಎಂದು ಕರೆಯುತ್ತಾರೆ.

ಕೃಷ್ಣ, ರಾಮ, ಕ್ರೈಸ್ತ, ಮುಸ್ಲಿಮರ ದೇವರುಗಳಾಗಲಿ ಕೇವಲ ಕಥೆಗಳು. ಅವರವರ ಭಾವನೆಗಳಿಗೆ ತಕ್ಕಂತೆ ದೇವರ ಕಥೆ ಹೆಣೆದುಕೊಳ್ಳುತ್ತಾರೆ. ಬಸವಣ್ಣ ಬಂದಾಗ ವಿಷ್ಣು ಬ್ರಹ್ಮ ಓಡಿ ಹೋಗಿ ಶಿವ ಮಾತ್ರ ಉಳಿಯುತ್ತಾನೆ. ಅಯ್ಯಂಗಾರರು ಆನೆ ಕೈಯಲ್ಲಿ ಸತ್ತರೂ ಚಿಂತೆ ಇಲ್ಲ. ಶಿವನ ದೇವಾಲಯದಲ್ಲಿ ಆಶ್ರಯ ಪಡೆಯುವುದಿಲ್ಲ ಎಂದು ಪಣ ತೊಡುತ್ತಾರೆ. ದೇವರಿದ್ದಾನೆ ಎಂದು ನಂಬಿ ಅವನಿಗೆ ಪ್ರಿಯವಾಗಿರಬೇಕು ಎಂದು ಕೊಂಡು ಉತ್ತಮ ರೀತಿಯಲ್ಲಿ ಬದುಕಿದವರನ್ನು ನೋಡಿಬಲ್ಲೆ. ಅವರ ಬದುಕಿಗೆ ದೇವರು ಪುಸ್ತಕ. ಅವರ ಮೇಲೆ ದೇವರ ಪ್ರಭಾವ ಇದೆ. ಆದರೆ ದೇವರ ಮೇಲೆ ನಂಬಿಕೆ ಇದ್ದವರೆಲ್ಲರೂ ಒಳ್ಳೆಯವರಲ್ಲ. ದೇವರು ಬದುಕಿನ ಆಧಾರವಾದರೆ ಅಂತಹ ವರು ದೇವರನ್ನು ನಂಬಲಿ. ದೇವರನ್ನು ನಂಬಿಯೇ ಒಳ್ಳೇ ಜೀವನ ನಡೆಸುತ್ತಿರುವವರು ನಮ್ಮಲ್ಲಿ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ.

ನನ್ನ ಪತ್ನಿಗೆ ದೇವರಲ್ಲಿ ನಂಬಿಕೆ ಇತ್ತು. ಅವಳಿಗೆ ಈ ನಂಬಿಕೆಯಿಂದ ಜೀವನ ಸಂಗಮ ಎನಿಸಿದ್ದರಿಂದ ಪೂಜಾ ವಿಧಿಯಲ್ಲಿ ಪಾಲ್ಗೊಳ್ಳುತ್ತಿದ್ದೆ. ನಾನು ಪಾಲ್ಗೊಂಡರೆ ಅವಳ ಸಂತಸ ಇಮ್ಮಡಿಸುತ್ತಿತ್ತು. ನಾಲ್ಕು ಜನರೊಡನೆ ದೇವಾಲಯಕ್ಕೆ ಹೋದರೆ ನಾನೂ ಕೈಮುಗಿಯುತ್ತೇನೆ. ಆದರೆ ತೀರ್ಥ ತೆಗೆದುಕೊಳ್ಳುವುದಿಲ್ಲ. ಏಕೆಂದರೆ ಅದರಲ್ಲಿ ಅಷ್ಟೊಂದು ಕೊಳೆ ಇರುತ್ತದೆ. ಎಷ್ಟೋ ಸ್ವಾಮೀಜಿಗಳಲ್ಲಿ ನನಗೆ ನಂಬಿಕೆ ಇಲ್ಲ. ಅವರಿಗೆ ಎಂದೂ ಸಾಷ್ಟಾಂಗ ನಮಸ್ಕಾರ ಮಾಡಿಲ್ಲ. ಕೇವಲ ಕೈಮುಗಿಯುತ್ತೇನೆ.

*ಪ್ರ: ಸನ್ಯಾಸತ್ವದ ಬಗ್ಗೆ ನಿಮ್ಮ ಅನಿಸಿಕೆ?*

ಉ: "ಪ್ರಪಂಚದ ಸ್ಥಿತಿಗತಿಗಳನ್ನು ನೋಡಿಕೊಂಡು ಇದರಿಂದ ಜೀವನಕ್ಕೆ ಒಳ್ಳೆಯದು ಮಾಡುವುದೇ ನಿಜವಾದ ತಪಸ್ಸು. ಮನುಷ್ಯ ಒಳ್ಳೆಯತನ ಹಾಗೂ ಕೆಟ್ಟತನಗಳನ್ನೇ ಕಟ್ಟಾವಸ್ತುವಾಗಿಟ್ಟುಕೊಂಡು ಅದರಿಂದ ಸಮಾಜಕ್ಕೆ ಒಳಿತು ಮಾಡ ಬೇಕು. 'ನಾರಾಯಣ' ಎಂದರೆ ಅದಕ್ಕೆ ಅದರದೇ ಆದ ಮಹತ್ವವಿದೆ. ಪ್ರಪಂಚಕ್ಕೆ, ಸಮಾಜಕ್ಕೆ ಒಳ್ಳೆಯದು ಮಾಡುವ ದೇವರು ಬದುಕಿಗೂ ಒಳ್ಳೆಯದನ್ನು ಮಾಡುತ್ತಾನೆ.

ಸನ್ಯಾಸಿಗಳ ಬಗ್ಗೆ ನನಗೆ ತಿರಸ್ಕಾರವಿಲ್ಲ. ಆದರೆ ಬದುಕಿಗೆ ಬೆನ್ನು ಹಾಕುವುದಕ್ಕಿಂತ ಬದುಕನ್ನು ಪ್ರೀತಿಸುವುದು ಮುಖ್ಯ. ನನ್ನ ದೃಷ್ಟಿಯಲ್ಲಿ ಮಹಾತ್ಮಾಗಾಂಧೀಜಿ ಹಾಗೂ ಸರ್ ಎಂ. ವಿಶ್ವೇಶ್ವರಯ್ಯ ನಿಜವಾದ ಗ್ರೇಟ್ ಸನ್ಯಾಸಿಗಳು. ಪ್ರಪಂಚದಲ್ಲಿರುವವರೆಲ್ಲ ಸುಖವಾಗಿರಬೇಕು ಎಂದು ಬಯಸಿದ, ಜನಸಾಮಾನ್ಯರ ಸಮಸ್ಯೆಗಳ ಇತ್ಯರ್ಥಕ್ಕೆ ಹೋರಾಡಿದ ಗಾಂಧೀಜಿಗಿಂತ ದೊಡ್ಡ ಸನ್ಯಾಸಿ ಬೇರಾರೂ ಇಲ್ಲ. ತನ್ನ ಸುಖ ಸಮಾಜದ ಹಿತಕ್ಕೆ ಅಡ್ಡಿ ತರುತ್ತದೆ ಎಂದರೆ, ಆ ಸುಖವನ್ನೇ ಬದಿಗಿಟ್ಟು ಬೇರೆಯವರ ಸುಖಕ್ಕೆ ಶ್ರಮಿಸುವವರೇ ನಿಜವಾದ ಸನ್ಯಾಸಿಗಳು. ನಾನು ಗಾಂಧೀಜಿಯವರ ಜೀವನದಿಂದ ಪ್ರಭಾವಿತನಾಗಿದ್ದೇನೆ. ಈ ಶತಮಾನದಲ್ಲಿ ಬದುಕಿದ ಅತ್ಯಂತ ಉದಾತ್ತ ಮಾನವತಾವಾದಿ ಅವರು."

*ಪ್ರ: ಈಗ ಏನು ಬರೆಯುತ್ತಿದ್ದೀರಾ?*

ಉ: "ಈಶಾವಾಸ್ಯ ಉಪನಿಷತ್‌ಗೆ ವ್ಯಾಖ್ಯಾನ ಬರೆಯುತ್ತಿದ್ದೇನೆ. ಆರು ಶ್ಲೋಕಗಳು ಮುಗಿದಿವೆ. ಈಗ ಏಕಾಗ್ರತೆ ಕಡಿಮೆಯಾಗುತ್ತಿದೆ. ಉಳಿದ 12 ಶ್ಲೋಕ ಗಳನ್ನು ಪೂರ್ಣಗೊಳಿಸುವ ಭರವಸೆ ನನಗಿಲ್ಲ. ಯಾರಾದರೂ ಒತ್ತಡ ಹೇರಿದರೆ ಮಾತ್ರ ಬರೆಯುವ ಹಿಂದಿನ ಪ್ರವೃತ್ತಿ ಈಗಲೂ ಇದೆ."

*ಪ್ರ: ಕರ್ನಾಟಕದಲ್ಲಿ ಕನ್ನಡಕ್ಕೆ ಮನ್ನಣೆ ಇದೆ ಎನಿಸುತ್ತದೆಯೇ?*

ಉ: "ಈಗ ಕಾಲ ಬದಲಾಗಿದೆ. ಕನ್ನಡದಲ್ಲಿ ಚೆನ್ನಾಗಿ ಬರೆದರೆ ಜನ ಮಾನ್ಯತೆ ಕೊಡುತ್ತಾರೆ. ನಾನು ಇಂಗ್ಲೀಷ್‌ನಲ್ಲಿ ಬರೆಯಲು ಪ್ರಾರಂಭಿಸಿದಾಗ ನನ್ನ ಗುರುಗಳಾದ ರಾಲೋ ನಾನು ಬರೆದದ್ದನ್ನು ಓದಿ ಮೆಚ್ಚಿದರಾದರೂ ನಿನ್ನ ಜನರಿಗಾಗಿ ಬರೆಯಬೇಕು, ಎಂದು ಹೇಳಿದ್ದರು. ನಾನು ಕಾಲೇಜಿನಲ್ಲಿ ಕನ್ನಡ ಓದಲೇ ಇಲ್ಲ. ನಾನು ಅಧ್ಯಾಪಕನಾದ ಮೇಲೆಯೇ ಸಂಸ್ಕೃತ, ಫ್ರೆಂಚ್ ಕಲಿತೆ.

*ಪ್ರ: ನಿಮ್ಮ ಆತ್ಮವೃತ್ತಾಂತ 'ಸಂಜೆಗಣ್ಣಿನ ಹಿನ್ನೋಟ'ದ ಕೊನೆಯ ವಾಕ್ಯ 'ಬದುಕಿಗಾಗಿ ನನ್ನ ಕೃತಜ್ಞತೆಯನ್ನು ಸಮರ್ಪಿಸುತ್ತೇನೆ." ಎಂದಿದೆ. ಈ ತುಂಬು ಬದುಕಿನಲ್ಲಿ ನಿಂತು ಬದುಕಿನ ಬಗ್ಗೆ ಸಿಂಹಾವಲೋಕನ ಮಾಡಿದಾಗ ಏನನಿಸುತ್ತದೆ?*

ಉ: "ನಾನು ಬದುಕನ್ನು ಪ್ರೀತಿಸುತ್ತೇನೆ. ನನಗೆಂದೂ ಬದುಕು ಬೇಸರವೆನಿಸಿಲ್ಲ. ಬದುಕಿಗೆ ಬೆನ್ನು ತಿರುಗಿಸಬೇಕೆನಿಸಿಲ್ಲ. ಬದುಕಿಗೆ ಬೆನ್ನು ತಿರುಗಿಸದೆ ಬದುಕನ್ನು ಚೆನ್ನಾಗಿ ನೋಡಿಕೊಂಡು ಇದರಿಂದ ನಾಲ್ಕು ಜನರಿಗೆ ಒಳಿತು ಮಾಡಲು ಸಾಧ್ಯವೇ ಎಂದು ಚಿಂತಿಸಿ ಆ ದಿಕ್ಕಿನಲ್ಲಿ ಕಾರ್ಯ ಪ್ರವೃತ್ತರಾಗಬೇಕು.

ಬದುಕು ನನಗೆ ಎಂತಹ ಒಳ್ಳೆಯ ಕಂಪನಿ ಕೊಟ್ಟಿದೆ. ನನ್ನ ಅಧ್ಯಾಪಕರಾಗಿದ್ದ ರಾಲೋ, ರಾಧಾಕೃಷ್ಣನ್, ತೀ.ನಂ.ಶ್ರೀ., ಬಿ.ಎಂ.ಶ್ರೀ, ಸ್ನೇಹಿತರಾದ ನಿಟ್ಟೂರು ಶ್ರೀನಿವಾಸ ರಾವ್, ಡಿ.ವಿ.ಜಿ., ಮಾಸ್ತಿ, ಪು.ತಿ.ನ – ಒಬ್ಬರೇ ಇಬ್ಬರೇ, ಅವರ ಕಂಪನಿ ನನಗೆಷ್ಟು ಖುಷಿ ಕೊಟ್ಟಿದೆ ಎಂದರೆ ಇವರ ಸಖ್ಯದಿಂದಾಗಿಯೇ ಬದುಕು ನನಗೆ ಪ್ರಿಯ ವಾಗುತ್ತಾ ಹೋಯಿತು. ನನ್ನ ತೀರಾ ಆಪ್ತರಲ್ಲಿ ಈಗ ಬಹಳಷ್ಟು ಜನ ಹೋಗಿಬಿಟ್ಟಿದ್ದಾರೆ.

ಬದುಕು ಹಿತ. ಕೈಕಾಲು ಗಟ್ಟಿಯಾಗಿದ್ದುಕೊಂಡು ಅರಳು ಮರಳು ಬಾರದಿದ್ದರೆ ಇನ್ನೂ ಹೆಚ್ಚು ಕಾಲ ಬದುಕಲು ನಾನು ಬೇಡ ಎನ್ನುವುದಿಲ್ಲ. ಬೆನ್ನನ್ನು ಬಿಲ್ಲಿನಂತೆ ಬಾಗಿಸಿಕೊಂಡು ಕೋಲೂರಿಕೊಂಡು ನಡುಗುತ್ತ, ತೊದಲು ಮಾತನಾಡುತ್ತಾ ಬದುಕ ಬೇಕಾದರೆ, ಅದು ಬೇಡ ಅಷ್ಟೇ."

ಪ್ರ: *ನಿಮ್ಮ ತುಂಬು ಬದುಕಿನ ಗುಟ್ಟೇನು?*

ಉ: "ನಿಯಮಿತ ಆಹಾರ, ಬೆಳಿಗ್ಗೆ ವಾಕಿಂಗ್. ಸಿಗರೇಟ್, ಮದ್ಯ ಸೇವನೆ ಮಾಡಿಯೇ ಇಲ್ಲ. ಹೆಚ್ಚು ಕಾಫಿ, ಟೀ ಕುಡಿಯುವುದಿಲ್ಲ. ನಡೆಯುವಾಗ ನನಗೆ ಕನ್ನಡಕ ಬೇಕಾಗಿಲ್ಲ. ಊರುಗೋಲು ಬೇಡ. ಚೆನ್ನಾಗಿ ನಿದ್ದೆ ಮಾಡುತ್ತೇನೆ. ಸ್ನೇಹಿತರೊಡನೆ ಹರಟೆ ಹೊಡೆಯುತ್ತೇನೆ. ಸಂಗೀತ ಕೇಳುವುದು ನನ್ನ ಪ್ರಿಯವಾದ ಹವ್ಯಾಸ. ಈಗಲೂ ಯಾರಾದರೂ ಕರೆದುಕೊಂಡು ಹೋದರೆ ಸಂಗೀತ ಕಚೇರಿಗೆ ಹೋಗಿಬರುತ್ತೇನೆ."

(ನಮ್ಮ ಮಾತುಕತೆ ನಡೆಯುತ್ತಿದ್ದಾಗ ನಾಗೇಶ್ ಕುಮಾರ್ ಕ್ಯಾಮರಾ ಕ್ಲಿಕ್ಕಿಸುತ್ತಲೇ ಇದ್ದರು. ಆದರೂ ಅವರಿಗೆ ಸಮಾಧಾನವಾದಂತಿರಲಿಲ್ಲ. ಸರ್, ಒಂದೆರಡು ಬೇರೆ ಭಂಗಿಗಳ ಫೋಟೋ ಬೇಕು ಎಂದಾಗ 'ಅಷ್ಟೇ ತಾನೇ' ಎಂದು ಎದ್ದು ನಿಂತ ಮೂರ್ತಿರಾಯರು ನಮ್ಮ ಕೋರಿಕೆಯಂತೆ ಭಂಗಿಗಳನ್ನು ನೀಡುತ್ತಾ ಹೋದರು.)

ಮಳೆ ಹನಿಯುತ್ತಿದ್ದರೂ ಮಗ ಸುಬ್ಬರಾಮಯ್ಯ, ಸೊಸೆ ಲೀಲಾಸುಬ್ಬರಾಮಯ್ಯ ಹಾಗೂ ಮೊಮ್ಮಗಳು ಸಂಧ್ಯಾಳೊಂದಿಗೆ ಹೊರಗೆ ಬಂದು ಕ್ಯಾಮರಾಕ್ಕೆ ಮುಖ ಮಾಡಿದರು. ಅಷ್ಟರಲ್ಲಾಗಲೇ ಅವರು ವಿಶ್ರಾಂತಿ ತೆಗೆದುಕೊಳ್ಳುವ ಸಮಯ ಸಮೀಪಿಸುತ್ತಿತ್ತು.

"ಯಾವ ಕೆಲಸ ಮಾಡುತ್ತೀರೋ ಅದರಲ್ಲಿ ಪ್ರಾವೀಣ್ಯತೆ ಪಡೆಯಬೇಕು. ನಾಲ್ಕು ಜನರಿಗೆ ಒಳ್ಳೆಯದಾಗುವಂತೆ, ಸಹಮಾನವರಿಗೆ ಹಿತವಾಗುವಂತೆ, ಸಂತೋಷವಾಗುವಂತೆ ನಡೆದುಕೊಳ್ಳಬೇಕು."– ಮೂರ್ತಿರಾಯರ ಮಾತುಗಳು ಕಿವಿಯಲ್ಲಿ ಗುಂಯ್‌ಗುಡುತ್ತಿತ್ತು.

ಮಾತುಕತೆ ಮುಗಿದು ಹೊರಡುತ್ತಿದ್ದಂತೆ ಎದ್ದು ಬಂದ ರಾಯರು ಬಾಗಿಲವರೆಗೆ ಬಂದು ಬೀಳ್ಕೊಟ್ಟರು, ಹೊರಗಡೆ ಮಳೆ ನಿಂತಿತ್ತು. ಎಳೆ ಬಿಸಿಲು ಅಪ್ಯಾಯವೆನಿಸಿತು.

# ಬದುಕನ್ನು ಪ್ರೀತಿಸುವ ಸಾಹಿತಿ

**ಪ್ರೊ. ಎಲ್. ಎಸ್. ಶೇಷಗಿರಿರಾವ್**

ಪ್ರೊ. ಮೂರ್ತಿರಾಯರ ನೆನಪು ಬಂದಾಗ, ಅವರ ಮತ್ತು ಅವರ ಸಾಹಿತ್ಯದ ಸ್ವಭಾವ ಕನ್ನಡಿಯಾದ ಹಲವು ಪ್ರಸಂಗಗಳು, ಮಾತುಗಳು ನೆನಪಿಗೆ ಬರುತ್ತವೆ.

ಅವರಿಗೆ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ಬಂದಿತು. ಸುದ್ದಿ ದೂರದರ್ಶನದ, ವಾರ್ತಾಪತ್ರದ ಮೂಲಕ ಮೂರ್ತಿರಾಯರಿದ್ದ ಮೈಸೂರಿಗೆ ತಲುಪಿತು. ಆಗ ಮೂರ್ತಿರಾಯರು ಸಂಗೀತ ಕಚೇರಿಯೊಂದಕ್ಕೆ ಹೋಗಿದ್ದರು. ಅವರ ಸ್ನೇಹಿತರೊಬ್ಬರು ಕಚೇರಿಗೆ ಹೋಗಿ ಸಂತೋಷದ ಸುದ್ದಿಯನ್ನು ರಾಯರಿಗೆ ಹೇಳಿದರು. ರಾಯರು ಅವರಿಗೆ ಹೇಳಿದರು : "ಕಿವಿಯ ತುಂಬ ಸಂಗೀತದ ಮಾಧುರ್ಯ ತುಂಬಿದೆ. ಇತರ ಸಂಗತಿಗಳ ವಿಷಯ ಆಮೇಲೆ ಮಾತನಾಡೋಣ."

ಮೂರ್ತಿರಾಯರು ಸಂಭಾಷಣೆಯಲ್ಲಿ ಆಡಿದ, ನನ್ನ ಮನಸ್ಸಿನಲ್ಲಿ ಉಳಿದಿರುವ ಕೆಲವು ಮಾತುಗಳು :

"ತೀವ್ರ ನೋವಿನಲ್ಲಿರುವ ಮನುಷ್ಯನಿಗೆ ಔಷಧ ಕೊಡಬೇಕು, ಶಸ್ತ್ರಚಿಕಿತ್ಸೆ ಮಾಡಿಯೋ ನೋವನ್ನು ಗುಣಪಡಿಸುವುದೂ ಆಧ್ಯಾತ್ಮವೇ."

"ದೇವರು ಬೇಕೆಂದು ಮನುಷ್ಯ ಹಂಬಲಿಸುತ್ತಾನೆ, ದೇವರು ಇರಬೇಕಾಗಿತ್ತು. ಆದರೆ ಅವನಿಲ್ಲ. ದೇವರಿದ್ದಾನೆ ಎಂದು ಪ್ರಾಮಾಣಿಕವಾಗಿ ನಂಬುವವರ ವಿಷಯದಲ್ಲಿ ನನಗೆ ಗೌರವವಿದೆ. ಆದರೆ ನನ್ನ ಮಟ್ಟಿಗೆ, ಮನುಷ್ಯನ ಒಳ್ಳೆಯತನ ಅಂತಃಕರಣಗಳೇ ದೇವರು"

"ಕಾಲ ಕೆಟ್ಟು ಹೋಯಿತು ಎನ್ನುತ್ತೇವೆ. ಈಗಿನ ಹುಡುಗರು ನಮಗಿಂತ ಹೆಚ್ಚು ತಿಳಿದುಕೊಂಡಿದ್ದಾರೆ. ಅವರಿಗೆ ಹೆಚ್ಚು ಆತ್ಮವಿಶ್ವಾಸವಿದೆ.

ಮೂರ್ತಿರಾಯರು ಗದ್ಯಸಾಹಿತ್ಯದ ಹಲವು ಪ್ರಕಾರಗಳನ್ನು ಶ್ರೀಮಂತಗೊಳಿಸಿದ್ದಾರೆ. ಪ್ರಬಂಧ ಪ್ರಕಾರದಲ್ಲಿ ಕನ್ನಡದಲ್ಲಿ ಅವರನ್ನು ಸರಿಗಟ್ಟುವವರು ಬಂದಿಲ್ಲ. 'ಅಪರ ವಯಸ್ಕನ ಅಮೇರಿಕ ಯಾತ್ರೆ' ಕನ್ನಡ ಪ್ರವಾಸ ಸಾಹಿತ್ಯಕ್ಕೆ ಒಂದು ಅಪೂರ್ವ ಕೊಡುಗೆ. ಇದು ಒಬ್ಬ ವ್ಯಕ್ತಿಯ ವಿದೇಶೀ ಯಾತ್ರೆಯ ವೃತ್ತಾಂತವಷ್ಟೇ ಅಲ್ಲ, ತೆರೆದ ಮನಸ್ಸಿನ ಒಂದು ಪರಿಪಕ್ವ ಚೇತನ. ತೀರ ವಿಭಿನ್ನವಾದ ನಾಗರಿಕತೆ ಸಂಸ್ಕೃತಿಗಳ ಸಂಪರ್ಕ ಪಡೆದ ಅನುಭವ 'ಚಿತ್ರಗಳು – ಪತ್ರಗಳು' ಮತ್ತು 'ಸಂಜೆಗಣ್ಣಿನ ಹಿನ್ನೋಟ' ಅಪೂರ್ವ ಆತ್ಮವೃತ್ತಾಂತಗಳು. ಅವರ ಸಾಹಿತ್ಯ ವಿಮರ್ಶೆಯಲ್ಲಿ

ಷೇಕ್ಸ್‌ಪಿಯರನನ್ನು ಕುರಿತ ಗ್ರಂಥದ ಪ್ರಥಮ ಭಾಗ 'ಸಾಹಿತ್ಯ ಮತ್ತು ಸತ್ಯ', 'ಪ್ಲೇಟೋ ಸೂರಿಗಳೊಡನೆ' ಮೊದಲಾದ ಪುಸ್ತಕಗಳು ಸೇರಿವೆ. 'ಸಾಹಿತ್ಯ ಮತ್ತು ಸತ್ಯ' ಸಂಗ್ರಹದಲ್ಲಿ ಹಲವು ವಿಮರ್ಶಾ ಲೇಖನಗಳಿವೆ. ಪುಸ್ತಕದ ಹೆಸರಿನ ಪ್ರಬಂಧ ಮೊದಲು ಉಪನ್ಯಾಸದ ರೂಪ ತಾಳಿತ್ತು. ಆ ಉಪನ್ಯಾಸವನ್ನು ಕೇಳಿದ ನೆನಪು ನನಗೆ ಇಂದೂ ಸಂತೋಷವನ್ನು ಕೊಡುತ್ತದೆ. ಉಪನ್ಯಾಸ ವಿಷಯದಲ್ಲಿ ಅವರು ಕೊಟ್ಟ ಹೊಸ ಒಳನೋಟಗಳಷ್ಟೇ ಅಲ್ಲ, ಆ ಉಪನ್ಯಾಸದ ರಚನೆ, ಬೆಳವಣಿಗೆ ಅಂದು ನನ್ನನ್ನು ಬೆರಗುಗೊಳಿಸಿದ್ದವು. ಅದರ ಬಿಗಿಯಾದ ತರ್ಕ, ಒಂದಾದ ಮೇಲೆ ಮತ್ತೊಂದು, ಅನಂತರ ಇನ್ನೊಂದು, ಅನಂತರ ಮಗದೊಂದು ಎಳೆಗಳನ್ನು ಸ್ಪಷ್ಟಪಡಿಸುತ್ತ ಜೋಡಿಸುತ್ತ ಅವನ್ನು ಹೆಣೆದ ಕೌಶಲ ಅದ್ಭುತವಾಗಿತ್ತು. ಇವೆಲ್ಲವುಗಳಲ್ಲಿ ಕಾಣುವುದು ಮೊದಲು ಹೇಳಿದ ಪ್ರಸಂಗದಲ್ಲಿ, ಮಾತುಗಳಲ್ಲಿ ಕಾಣುವ ಮನೋಧರ್ಮವೇ: ಪರಿಪಕ್ವತೆ.

ಬದುಕಿನಲ್ಲಿ ಪ್ರೀತಿ, ಚೆಲುವನ್ನೂ ಒಳ್ಳೆಯದನ್ನೂ ಕುರಿತು ಮೆಚ್ಚುಗೆ, ಸುಸಂಸ್ಕೃತಿ, ಅನುಕಂಪ, ಭವಿಷ್ಯದ ವಿಷಯದಲ್ಲಿ ಆಶಾಭಾವನೆ, ಅವರ ಸಾಹಿತ್ಯ ರಚನೆಯ ಪ್ರಾರಂಭದಲ್ಲಿಯೇ 'ಸಾಕ್ರಟೀಸನ ಕೊನೆಯ ದಿನಗಳು', ಫ್ರೆಂಚ್ ವಿನೋದ ನಾಟಕಗಳ ಪ್ರತಿಭಾವಂತ ಮೋಲಿಯೇರನ 'ತಾರ್ತುಫ್' ನಾಟಕದ ಕನ್ನಡ ರೂಪ 'ಆಷಾಢಭೂತಿ' ಬಂದದ್ದು. ಸಾಕ್ರಟೀಸನ ತರ್ಕದಂತಹ •ಹರಿತವಾದ ತರ್ಕ ಅವರಲ್ಲಿದೆ. ಅವರೊಡನೆ ಹತ್ತು ನಿಮಿಷ ಮಾತನಾಡಿದರೆ ಎರಡು ನಿಮಿಷ ತಮ್ಮನ್ನೂ ಹಾಸ್ಯ ಮಾಡಿಕೊಂಡು ನಿಮ್ಮನ್ನೂ ಹಾಸ್ಯ ಮಾಡಿ ನಕ್ಕು ನಗಿಸಿರುತ್ತಾರೆ. (ಆದರೆ ಅವರದು ಮೋಲಿಯೇರನ ವಿಡಂಬನೆಯಲ್ಲ. ಸ್ನೇಹದ ಹಾಸ್ಯ, ವಿವೇಕದ ಹೊಳವಾದ ಹಾಸ್ಯ) ನನಗೆ ಒಂದು ಭಾವನೆ ಇದೆ, ಆಧುನಿಕ ಕನ್ನಡ ಸಾಹಿತಿಗಳಲ್ಲಿ ದುಷ್ಟತನದ ಸಮಸ್ಯೆಯನ್ನು ಎದುರಿಸುವವರು ವಿರಳ ಎಂದು. ದುಷ್ಟತನ ಬದುಕಿನ ಒಂದು ಗಟ್ಟಿ ಭಾಗ. ವಿಕಾರವಾದದ್ದು, ಹಠಮಾರಿತನದ್ದು, ಲಜ್ಜೆ ಇಲ್ಲದ್ದು, ಬದುಕನ್ನು ಕುರಿತು ಬರೆಯುವ ಸಾಹಿತಿಯು ಕಾಮದಂತೆ, ಸಾವಿನಂತೆ ಇದನ್ನು ದೃಷ್ಟಿಸಿ ನೋಡಬೇಕು.

ವ್ಯಾಸರಂತೆ, ಷೇಕ್ಸ್‌ಪಿಯರನಂತೆ, ಟಾಲ್‌ಸ್ಟಾಯ್‌ನ, ಶಿವರಾಮ ಕಾರಂತರಂತೆ, ಮೋಲಿಯೇರ್ ಹಾಸ್ಯ ನಾಟಕಕಾರನಾದರೂ ದುಷ್ಟತನದ ಅರಿವನ್ನು ಸದಾ ಉಳಿಸಿಕೊಂಡವನು. ಅವನು ತರುಣ ಮೂರ್ತಿರಾಯರ ಕಣ್ಣನ್ನು ಸೆಳೆದದ್ದು ಅರ್ಥವತ್ತಾದ ಸಂಗತಿ. ತೊಂಬತ್ತೊಂಬತ್ತನೆಯ ವರ್ಷದಲ್ಲಿ ಕಾಲಿಟ್ಟಿರುವ ಮೂರ್ತಿರಾಯರು ಈಶಾವಾಸ್ಯ ಉಪನಿಷತ್ತಿನ ವ್ಯಾಖ್ಯೋಪನಿಷತ್ತಿನ ವ್ಯಾಖ್ಯಾನವನ್ನು ಬರೆಯುತ್ತಿದ್ದಾರೆ ಎನ್ನುವುದೂ ಅವರ ಸ್ವಭಾವಕ್ಕೆ ಹಿಡಿದ ಕನ್ನಡಿ. ದೇವರಲ್ಲಿ ನಂಬಿಕೆ ಇಲ್ಲದ ರಾಯರು ಉಪನಿಷತ್ ಕುರಿತು ಶ್ರದ್ಧೆಯಿಂದ ಬರೆಯುತ್ತಾರೆ.

ಮೂವತ್ತು ವರ್ಷ ಇಂಗ್ಲೀಷ್ ಸಾಹಿತ್ಯ ಪಾಠ ಹೇಳಿದ, ಫ್ರೆಂಚ್ ಭಾಷೆ ಬಲ್ಲ, ಫ್ರೆಂಚ್ ನಾಟಕವನ್ನು ಕನ್ನಡಕ್ಕೆ ತಂದುಕೊಟ್ಟ ಮೂರ್ತಿರಾಯರು ಮಹಾಭಾರತವನ್ನು ಕುರಿತು ಅದ್ಭುತವಾಗಿ ಉಪನ್ಯಾಸ ಮಾಡಿದ್ದಾರೆ. ಎರಡು ಖಂಡಗಳಲ್ಲಿ ವಾಸ ಮಾಡಿ ಇನ್ನೆರಡು ಖಂಡಗಳಲ್ಲಿ ಪ್ರವಾಸ ಮಾಡಿ, ಅಮೆರಿಕವನ್ನು ಅದ್ಭುತವಾಗಿ ಕನ್ನಡಿಗರಿಗೆ

ಪರಿಚಯ ಮಾಡಿಕೊಟ್ಟ ರಾಯರು ಈಗ ತಮ್ಮ ಅನುಭವ ಮತ್ತು ಚಿಂತನೆಗಳ ಬೆಳಕಿನಲ್ಲಿ ಈಶಾವಾಸ್ಯಕ್ಕೆ ವ್ಯಾಖ್ಯಾನ ಬರೆಯುತ್ತಿದ್ದಾರೆ. ಇಂಗ್ಲೀಷ್ ವಿಮರ್ಶಕ ಮ್ಯಾಥ್ಯೂ ಆರ್ನಾಲ್ಡ್‌ನ ಮಾತುಗಳನ್ನು ಬಳಸುವುದಾದರೆ ಅವರಿಗೆ "ಜಗತ್ತಿನಲ್ಲಿ ಆಡಿರುವ ಮಾತುಗಳಲ್ಲಿ, ಮಾಡಿರುವ ಚಿಂತನೆಯಲ್ಲಿ ಶ್ರೇಷ್ಠವಾದದ್ದರಲ್ಲಿ ಒಲವು" ಭಾರತೀಯ ಸಾಹಿತ್ಯ ಸಂಸ್ಕೃತಿಗಳನ್ನು ಈ ದೃಷ್ಟಿಯಿಂದಲೇ ಅವರು ಕಾಣುತ್ತಾರೆ.

ಮೂರ್ತಿರಾಯರು ಏನನ್ನೇ ಬರೆಯಲಿ, ಒಳ್ಳೆಯದನ್ನು, ಸುಂದರವಾದದ್ದನ್ನು ಕಾಣುವ, ಮೆಚ್ಚುವ ಸಂಸ್ಕಾರ, ತೆರೆದ ಮನಸ್ಸಿನ ಮೌಲ್ಯ ನಿರ್ಣಯ, ಅನುಕಂಪ, ಬದುಕಿನ ಪ್ರೀತಿ, ಹಾಸ್ಯ ಕಾಣುತ್ತದೆ. ಅವರು ಅಮೆರಿಕವನ್ನು ಕುರಿತು ಬರೆಯುವಾಗ ಈ ತೆರೆದ ಮನಸ್ಸನ್ನು, ಸಂಸ್ಕಾರವನ್ನು, ಮೌಲ್ಯ ನಿರ್ಣಯವನ್ನು ಕಾಣಬಹುದು. ಅವರ ಅನುಕಂಪದ ಒಂದು ವಿಶಿಷ್ಟ ನಿದರ್ಶನವನ್ನು 'ದೆವ್ವಗಳನ್ನು ಕುರಿತು' ಪ್ರಬಂಧದಲ್ಲಿ ಕಾಣಬಹುದು. ಇದೊಂದು ಪ್ರಾತಿನಿಧಿಕ ಪ್ರಬಂಧ. ಮೂರ್ತಿರಾಯರು ಮಾತ್ರ ಬರೆಯಬಹುದಾದ ಪ್ರಬಂಧ ಎಂದುಕೊಂಡಿದ್ದೇನೆ. ಇದರಲ್ಲಿ ಸಾಕಷ್ಟು ಹಾಸ್ಯವಿದೆ, ವೈಚಾರಿಕತೆ ಇದೆ. ಮೂರ್ತಿರಾಯರು ಹಲವು ದೆವ್ವಗಳ ಕಥೆಗಳನ್ನು, ದೆವ್ವಗಳನ್ನು ಕುರಿತು ನಂಬಿಕೆಗಳನ್ನು ತಿಳಿಹಾಸ್ಯದಿಂದ ನಿರೂಪಿಸುತ್ತಾರೆ. "ನಾನೇನೋ ದೆವ್ವಗಳ ವಿಷಯದಲ್ಲಿ ನಂಬಿಕೆ ಇಡದಿದ್ದರೂ ಆಸಕ್ತಿ ಇಟ್ಟುಕೊಂಡಿದ್ದೇನೆ" ಎನ್ನುತ್ತಾರೆ. (ದೆವ್ವಗಳಿದ್ದರೆ!) ಅವುಗಳ ಮನೋಧರ್ಮವನ್ನು ಊಹಿಸುತ್ತ ಒಂದು ಕಥೆಯ ಪ್ರಕಾರ ತಾಯಿ ಇಲ್ಲದ ಗರ್ಭಿಣಿಗೆ ಒಂದು ದೆವ್ವ ತೋರಿದ ಕರುಣೆಯನ್ನು ಚಿತ್ರಿಸಿ, "ಎಷ್ಟೋ ಮಾನವರಿಗಿಲ್ಲದ ಮಾನವತೆ ಈ ದೆವ್ವಕ್ಕೆ ಇತ್ತು. ಅದು ಹೆಣ್ಣು ದೆವ್ವವೇ ಇರಬೇಕು. (ತಾನು ಪಟ್ಟ) ಕಷ್ಟದಿಂದ ಆಕೆಯ ಹೃದಯ ಮತ್ತಷ್ಟು ಕಲ್ಲಾಗದೆ ಇನ್ನಷ್ಟು ಮೃದುವಾಗಿ ಪರಿಪಕ್ವವಾಗಿದ್ದಿರಬೇಕು. ತಾಯ್ತನದ ನೋವಿಗೆ ನೆರವಾಗುವುದು, ಎಳೆಯ ಜೀವವನ್ನು ಕಾಪಾಡಿ ಅದರ ನಲಿವಿಗೆ ಬೇಕಾದ್ದನ್ನು ಒದಗಿಸುವುದು ಇಂಥ ಕರ್ಮ ನಿಲ್ಲುವುದಾದರೂ ಏಕೆ?" ಎನ್ನುತ್ತಾರೆ.

ಮೂರ್ತಿರಾಯರ ಸಾಹಿತ್ಯವನ್ನು ಕುರಿತು ಅನೇಕ ಮಾತುಗಳನ್ನು ಹೇಳಬಹುದು (ಅವರ ಅನುವಾದಗಳ ವಿಷಯ ಹೇಳಿಲ್ಲ. ಇಂಗ್ಲೀಷಿನ 'ದಿ ರಿವರ್ ಆಫ್ ಸೈಲೆನ್ಸ್' ಅನ್ನು ಕನ್ನಡನಾಡಿನ ನದಿಯೇ ಎನ್ನುವಂತೆ 'ಮೌನವತಿ' ಎಂದು ಅನುವಾದಿಸುವ ಪ್ರತಿಭೆ ಅವರದು) ಅವೆಲ್ಲಕ್ಕೆ ಇಲ್ಲಿ ಅವಕಾಶವಿಲ್ಲ. ನಾಲ್ಕೈದು ದಿನಗಳ ಹಿಂದೆ ಅವರನ್ನು ನಾನು ಕಂಡಾಗ  ಅವರು ಈಶಾವಾಸ್ಯದಿಂದ ಉದ್ಧರಿಸಿದ ಶ್ಲೋಕ ಅವರ ಮನೋಧರ್ಮದ ಸಾರ. ಅದನ್ನು ಸ್ಮರಿಸಿಕೊಳ್ಳುತ್ತ ಈ ಲೇಖನ ಮುಗಿಸುತ್ತೇನೆ.

'ದೇವರು ನಮ್ಮ ಸೃಷ್ಟಿ. ಅದಕ್ಕೇಕೆ ಮಹತ್ವ ?'

ನಾನು ಹಾಗೂ ಮೂರ್ತಿರಾಯರು ಆಜೀವ ಸ್ನೇಹಿತರು. 7 ದಶಕಗಳಿಗೂ ಮೀರಿದ ನಿಟ್ಟೂರು ಶ್ರೀನಿವಾಸರಾವ್ ಸ್ನೇಹ, ಅನುಬಂಧ ನಮ್ಮದು. ನಾನು ಮೊದಲು ಅವರನ್ನು ನೋಡಿದ್ದು 1922 ರಲ್ಲಿ. ನಾನು ಆಗ ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದೆ. ಮೈಸೂರಿನ ಮಹಾರಾಜ ಕಾಲೇಜಿಗೂ ನಮ್ಮ ಕಾಲೇಜಿಗೂ ಅಂತರ್ ಕಾಲೇಜು ಸ್ಪರ್ಧೆ ಏರ್ಪಟ್ಟಾಗಲೇ ನಾವಿಬ್ಬರೂ ಭೇಟಿಯಾಗಿದ್ದು.

ಅಂದಿನ ಪರಿಚಯ ಸ್ನೇಹದ ಹೆಮ್ಮರವಾಗಿ ಬೆಳೆದಿದೆ. ಮೋಲಿಯೇರನ ಫ್ರೆಂಚ್ ನಾಟಕದ ಅನುವಾದ 'ಆಷಾಢಭೂತಿ'ಯನ್ನು ಆಗ ತಾನೇ ಮೂರ್ತಿರಾಯರು ಮಾಡಿದ್ದರು. ನಂತರ ಇದು 'ಸುಬ್ಬಾಶಾಸ್ತ್ರಿ' ಎಂಬ ಚಲನಚಿತ್ರವಾಯಿತು. ಪು. ತಿ. ನ. ಅವರು 'ಕೃಷ್ಣನಾ ಕೊಳಲಿನಾ ಕರೆ' ಗೀತೆ ರಚಿಸಿದರು. ಈ ಹಾಡು ಮೂರ್ತಿರಾಯರಿಗೆ ಅಚ್ಚುಮೆಚ್ಚು.

ಮೂರ್ತಿರಾಯರದು ದೊಡ್ಡ ಮನಸ್ಸು. ಸಣ್ಣತನ ಅವರ ಬಳಿ ಸುಳಿಯಲೂ ಅಂಜುತ್ತದೆ. ಬೇರೆಯವರ ವಿಷಯದಲ್ಲಿ ಅಸೂಯೆ ಇಲ್ಲ. ಗಾಂಭೀರ್ಯದ ಮುಖಭಾವವಾದರೂ ಅವರದು ತಿಳಿಹಾಸ್ಯದ ಮನೋಭಾವ. ಆದರೆ ಸಂಪ್ರದಾಯದ ಹೆಸರಿನಲ್ಲಿನ ಕಂದಾಚಾರಗಳು ಅವರಿಗೆ ಹಿಡಿಸುತ್ತಿರಲಿಲ್ಲ. ಅವರ ನಮ್ರತೆ, ವಿನಯ ಮಾತನಾಡುವ ರೀತಿ ನೋಡಿ ಯಾರೂ ತಪ್ಪು ತಿಳಿದುಕೊಳ್ಳುತ್ತಿರಲಿಲ್ಲ.

ನನಗೆ ಅವರಿಗೆ ಭಿನ್ನಾಭಿಪ್ರಾಯವೇ ಇರಲಿಲ್ಲ. ಬದುಕಿನ ಬಗ್ಗೆ ಅವರ ಮತ್ತು ನನ್ನ ದೃಷ್ಟಿಕೋನ ಒಂದೇ. ನಾವಿಬ್ಬರೂ ಸಾಹಿತ್ಯದಿಂದ ಹಿಡಿದು ಈ ಭೂಮಿಯ ಮೇಲಿರುವ ಪ್ರತಿಯೊಂದು ವಿಷಯವನ್ನೂ ಚರ್ಚಿಸುತ್ತಿದ್ದೆವು. ಈಗಲೂ ಅವಕಾಶ ಸಿಕ್ಕಾಗಲೆಲ್ಲಾ ಈ ಚರ್ಚೆ ಮುಂದುವರಿಯುತ್ತಲೇ ಇದೆ. ನಾವಿಬ್ಬರೂ ಕನ್ನಡ ಸಾಹಿತ್ಯ ಸಮ್ಮೇಳನಗಳಿಗೆ, ಸಮಾರಂಭಗಳಿಗೆ ಒಟ್ಟಾಗಿ ಹೋಗುತ್ತಿದ್ದೆವು. ಸಮ್ಮೇಳನಗಳು ಎಂದರೆ ಆಗೆಲ್ಲಾ ಸಾಹಿತಿಗಳು ಪರಸ್ಪರ ಭೇಟಿಯಾಗುವ ವೇದಿಕೆಯಾಗಿತ್ತು. ನಾವು ಹಿಮಾಲಯ ಸೇರಿದಂತೆ ಹಲವು ಪ್ರದೇಶಗಳಲ್ಲಿ ಒಟ್ಟಾಗಿ ತಿರುಗಾಡಿದ್ದೇವೆ. ವಿಶಿಷ್ಟ ಅನುಭವಗಳನ್ನು ನಮ್ಮದಾಗಿಸಿಕೊಂಡಿದ್ದೇವೆ.

ದೇವರು ನಮ್ಮ ಸೃಷ್ಟಿ, ಅದಕ್ಕೆ ಎಲ್ಲಿಲ್ಲದ ಮಹತ್ವ ಏಕೆ ಕೊಡಬೇಕು. ಸರ್ವಶಕ್ತ ದೇವರು ಇರಬಹುದು. ಇಲ್ಲಿ ( ಇಹಲೋಕ) ಸರಿಯಾದ ಜೀವನ ನಡೆಸಬೇಕು. ನೀವು ಸರಿಯಾದ ಜೀವನ ನಡೆಸದಿದ್ದರೆ ದೇವರಿದ್ದರೂ ಅವನು ನಿಮ್ಮ ರಕ್ಷಣೆಗೆ ಬರುವುದಿಲ್ಲ. ಬಸವಣ್ಣ ಹೇಳಿದ್ದು ಅದನ್ನೇ. 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು' ಬೇರೆಯವರಿಗೆ ತೊಂದರೆ ಕೊಟ್ಟು ಬದುಕಿ ಏನು ಪ್ರಯೋಜನ? ದೇವರು ಇದ್ದಾನೋ, ಇಲ್ಲವೋ ಎಂಬ ಒಣ ತಾರ್ಕಿಕ ಚರ್ಚೆ ಬೇಡ. ಈ ವಿಷಯಕ್ಕೆ ಹೆಚ್ಚಿನ ಮಹತ್ವ ನೀಡುವುದು ಅಗತ್ಯವಿಲ್ಲವೆನಿಸುತ್ತದೆ.

ಮನೆಯಲ್ಲಿ ಹೊರಗೆ ಕಚೇರಿಯಲ್ಲಿ ಎಲ್ಲರಿಗೂ ಹಿತವಾಗುವಂತೆ, ಹಾನಿ ಉಂಟು ಮಾಡದಂತೆ ಬದುಕುವುದಕ್ಕಿಂತ ದೈವತ್ವ ಬೇರೆ ಏನಿದೆ? ಇದು ಬಹಳ ಸರಳ ಸಂಗತಿ, ಎಲ್ಲದಕ್ಕೂ ಈ ಸೂತ್ರವನ್ನೇ ಅನ್ವಯಿಸಬೇಕು. ಮೂರ್ತಿರಾಯರು ನಂಬಿದ್ದು ಇದನ್ನೇ. ಬದುಕಿದ್ದು ಇದಕ್ಕಾಗಿಯೇ. ಅವರು ದೊಡ್ಡ ವಿದ್ವಾಂಸರು. ಅತ್ಯುತ್ತಮ ವಾಗ್ಮಿ. ಸಂಗೀತದಲ್ಲಿ ಉತ್ತಮ ಅಭಿರುಚಿ ಉಳ್ಳವರು. ಒಳ್ಳೆ ಅಧ್ಯಾಪಕರು. ಅವರು ಏನೇ ಮಾಡಿದರೂ ಶ್ರದ್ಧೆಯಿಂದ ಮಾಡುವಂಥವರು.

ಅವರಂತಹ ಅತ್ಯುತ್ತಮ ವ್ಯಕ್ತಿ ಅಪರೂಪ. ಅಂತಹವರು ನನ್ನ ಆತ್ಮೀಯ ಗೆಳೆಯ ಎಂದು ಹೇಳಿಕೊಳ್ಳಲು ನನಗೆ ಸಂತೋಷವೆನಿಸುತ್ತದೆ.

# ಮಾನವ ಶ್ರೇಷ್ಠರಲ್ಲಿ ಒಬ್ಬರು

ಪ್ರೊ. ಎಸ್. ಕೆ. ರಾಮಚಂದ್ರರಾವ್

ಮಹಾರಾಜಾ ಕಾಲೇಜಿನಲ್ಲಿ ನನಗೆ ಕೊಂಚ ಕಾಲ ಪಾಠ ಹೇಳಿದ್ದರು. ಆದರೆ ನನಗೆ ಅವರಲ್ಲಿ ಗೌರವಬುದ್ಧಿ ಒಡಮೂಡಿದ್ದು ಅವರ 'ಸಾಕ್ರಟೀಸನ ಕೊನೆಯ ದಿನಗಳು' ಪುಸ್ತಕವನ್ನು ಓದಿದಾಗಲೇ. ಅನುವಾದವಾದರೂ ಸ್ವತಂತ್ರವಾದ ಗ್ರಂಥದಂತೆ ನನ್ನ ಮನಸ್ಸಿನ ಮೇಲೆ ಮುದ್ರೆಯೊತ್ತಿತು. ಅದನ್ನು ಓದಿದ ಮೇಲೆ ಗ್ರೀಕ್ ಮೂಲದಲ್ಲೇ ಅದನ್ನು ಓದಬೇಕೆಂಬ ಬಯಕೆ ನನ್ನಲ್ಲಿ ಬೇರುಬಿಟ್ಟಿತು.

ನನ್ನ ವಿದ್ಯಾರ್ಥಿ ದಿಶೆಯಲ್ಲೇ ಅವರ ವಿಚಾರವನ್ನು ಕೇಳಬಲ್ಲೆನಾದರೂ ಅವರೊಂದಿಗೆ ನೇರವಾದ ಸಂಪರ್ಕ ಒದಗಿಬಂದದ್ದು ಅವರು ಸೆಂಟ್ರಲ್ ಕಾಲೇಜಿನಿಂದ ನಿವೃತ್ತಿಗೊಂಡ ಆಗಿನ ಮುಖ್ಯಮಂತ್ರಿಯಾಗಿದ್ದ ಹನುಮಂತಯ್ಯನವರ ಒತ್ತಾಯಕ್ಕೆ ಕಟ್ಟುಬಿದ್ದು ಕನ್ನಡ ಸಂಸ್ಕೃತಿ ವಿಭಾಗದ ನಿರ್ದೇಶಕರಾಗಿ ಕೆಲಸ ಮಾಡುತ್ತಿರುವಾಗ. ಕನ್ನಡ ವಿಶ್ವಕೋಶದ ಯೋಜನೆ ಇವರದ್ದೇ ಎಂದರೂ ನಡೆದೀತು. ಈ ವಿಶ್ವಕೋಶದ ಮೊದಲ ಹಂತದಲ್ಲಿ ಸಾಮಗ್ರಿ ಸಂಗ್ರಹ, ವಿಷಯ ನಿರ್ದೇಶನ, ಆಕರ ಚಿಂತನ ಮಾಡಲೆಂದು ಸಣ್ಣದೊಂದು ಸಮಿತಿಯನ್ನು ಅವರ ನೇತೃತ್ವದಲ್ಲಿ ಮಾಡಿಕೊಂಡಿದ್ದರು. ನರಸಿಂಹಯ್ಯನವರು, ಪು. ತಿ. ನರಸಿಂಹಾಚಾರ್ಯರು, ಕೆ. ಸಂಪದ್ಗಿರಿರಾಯರು, ನಾನೂ ಈ ಸಮಿತಿಯಲ್ಲಿದ್ದೆವು. ಪ್ರತಿದಿನ ಸಂಜೆ ಸಮಿತಿ ಸೇರುತ್ತಿದ್ದಿತು. ಮೈಸೂರಿನಿಂದ ಜಿ. ಹನುಮಂತರಾಯರೂ ಆಗಾಗ ಬರುತ್ತಿದ್ದರು. ಈ ವೇಳೆಯಲ್ಲಿ ಮೂರ್ತಿರಾಯರ ಆಲೋಚನೆಗಳ ಅಚ್ಚುಕಟ್ಟು, ಪಾಂಡಿತ್ಯದ ವ್ಯಾಪಕತೆ, ನಿರುದ್ವಿಗ್ನವಾದ ಚಿಂತನೆ, ಯಾವುದಕ್ಕೂ ಮಣಿಯದ ಪ್ರಾಮಾಣಿಕತೆ, ನಿರಂಕುಶವಾದ ವಿಚಾರಶೀಲತೆ ಇವು ನನ್ನ ಅರಿವಿಗೆ ಬಂದುವು, ನನ್ನ ಮನಸ್ಸನ್ನು ಗೆದ್ದವು.

ಅಂದಿನಿಂದ ನಾನು ಅವರನ್ನು ಮೆಚ್ಚಿಕೊಳ್ಳುತ್ತಲೇ ಬಂದಿದ್ದೇನೆ. ಮೈಸೂರಿನಲ್ಲಿ ಅವರ ಮಗ ಮನೆ ಕಟ್ಟಿದಾಗ ಗೃಹಪ್ರವೇಶಕ್ಕೆ ನಾನು ನನ್ನ ಬೀಗರಾದ ಜೆ. ಆರ್. ಲಕ್ಷ್ಮಣರಾಯರು ಕರೆದರೆಂದು ನಾನು ಹೋದದ್ದು, ನನಗೆ ಕರೆಯೋಲೆ ಇರಲಿಲ್ಲ. ಆಗಿನ್ನೂ ನಾನು ಎಷ್ಟೆಂದರೂ ದೂರದ ಪರಿಚಯವೇ. ಆದರೆ ನನ್ನನ್ನು ಕಂಡೊಡನೆ ಎಷ್ಟು ಆದರದಿಂದ ಬರಮಾಡಿಕೊಂಡರೆಂಬುದನ್ನು ಮರೆಯಲಾರೆ. ಆಗ ನಡೆದ ಮಾತುಕತೆಯಲ್ಲಿ ಧಾರ್ಮಿಕ ಸಮಾರಂಭ, ಸಾಮಾಜಿಕ ಕೂಟಗಳ ನಡುವೆ ಇರುವ ಅಂತರವನ್ನು ಅವರು ವಿವರಿಸಿದರು. ಮಾನವ ಸಹಜವಾದ ವ್ಯವಹಾರಗಳನ್ನು ಕುರಿತಂತೆ ಅವರ ಚಿಂತನೆ ನನಗೆ ತುಂಬ ಹಿಡಿಸಿತು.

ಮುಂದೆ ಅವರನ್ನು ಕಾಣುವ, ಅವರೊಂದಿಗೆ ಮಾತನಾಡುವ ಸಂದರ್ಭಗಳು ಹಲವು ಎದ್ದುಕೊಂಡವೆನ್ನಿ. ಒಮ್ಮೆ ಸಂಜಯ ನಗರದಲ್ಲಿ ನಾನು ಅವರ ಮನೆಗೆ ಹೋದಾಗ ಆಗ ತಾನೆ ಪ್ರಕಟವಾಗಿದ್ದ ಅವರ 'ದೇವರು' ಪುಸ್ತಕವನ್ನು ನನಗೆ ಕೊಟ್ಟರು. ಕೊಡುವಾಗ "ನಾನು ಇದನ್ನು ನಿಮಗೆ ಕೊಡಬಹುದೋ ಇಲ್ಲವೋ ಗೊತ್ತಿಲ್ಲ" ಎಂದು ಪೀಠಿಕೆ ಹಾಕಿದರು. ಅದಕ್ಕೆ ನಾನು "ದೇವರಿರಲಿ ಬಿಡಲಿ, ನನ್ನ ಮೇಲೆ ನಿಮ್ಮ ಪ್ರೀತಿ ಯಿದೆಯಲ್ಲ, ಅಷ್ಟುಸಾಕು" ಎಂದೆ. ಅವರ ಕಣ್ಣುಗಳು ಒದ್ದೆಯಾದುದನ್ನು ಗಮನಿಸಿದೆ. ಇದಕ್ಕೆ ಹಿನ್ನೆಲೆಯಾಗಿ ಒಂದೆರಡು ಮಾತು. ಅವರು ಆ ಪುಸ್ತಕದ ಸಿದ್ಧತೆಯಲ್ಲಿರುವಾಗ ಈಶಾವಾಸ್ಯೋಪನಿಷತ್ತಿನ ಕೆಲವು ವಿವರಣೆಗಳನ್ನು ಬಯಸಿ ನನ್ನೊಂದಿಗೆ ಫೋನಿನಲ್ಲಿ ಮಾತನಾಡುತ್ತಿದ್ದರು, ಮನೆಗೂ ಬರುತ್ತಿದ್ದರು. ಇದಕ್ಕೆ ಬಹುಮುಂಚೆ ಕನ್ನಡ ವಿಶ್ವ ಕೋಶದ ತಯಾರಿ ಬೆಂಗಳೂರಿನಲ್ಲಿ ನಡೆಯುತ್ತಿದ್ದಾಗ ಸಮಿತಿಯ ವಿಚಾರ ಹೇಳಿದೆನಲ್ಲ" ಮುಂದೆ ಈ ವಿಶ್ವಕೋಶ ಮೈಸೂರು ವಿಶ್ವವಿದ್ಯಾಲಯಕ್ಕೆ ಸಂದಿತೆನ್ನಿ. ಬೆಂಗಳೂರಿನಲ್ಲಿನ ಸಮಿತಿಯಲ್ಲಿ ಪು. ತಿ. ನರಸಿಂಹಾಚಾರ್ಯರೂ ನಾನೂ ಪರಮ ಆಸ್ತಿಕರು, ಸಂಪ್ರದಾಯ ಶ್ರದ್ಧೆಯುಳ್ಳವರು. ಆರ್. ಎಲ್. ನರಸಿಂಹಯ್ಯನವರು ಇದು ಯಾವುದನ್ನೂ ತಲೆಗೆ ಹಚ್ಚಿಕೊಂಡವರಲ್ಲ, ವಿಜ್ಞಾನವನ್ನೇ ನಂಬಿಕೊಂಡವರು. ಸಂಪದ್ಗಿರಿರಾಯರದ್ದು ಈ ವಿಚಾರದಲ್ಲಿ ಖಚಿತವಾದ ಯಾವ ನೆಲೆಯೂ ಅಲ್ಲ. ಹನುಮಂತರಾಯರೇನೋ ತರ್ಕಕ್ಕೆ ಒಲಿದವರು. ಇನ್ನು ಮೂರ್ತಿರಾಯರು ಹೇಳಿಕೇಳಿ ನಾಸ್ತಿಕರೆಂದು ಎಲ್ಲರ ತಿಳುವಳಿಕೆಯಿದ್ದಿತು.

ಆಗ ಮಾತುಕತೆ ನಡೆಯುವಾಗ ಮೂರ್ತಿರಾಯರ ಅಭಿಪ್ರಾಯಗಳು ಧಾರಾಳವಾಗಿ ಹೊರ ಹೊಮ್ಮುತ್ತಿದ್ದವು. ವಿಶ್ವಕೋಶದ ವಿಚಾರಕ್ಕೆ ಹೊರತಾಗಿಯೂ ಚರ್ಚೆ ನಡೆಯುತ್ತಿದ್ದದ್ದುಂಟು. ಮೂರ್ತಿರಾಯರ ನಾಸ್ತಿಕತೆಯನ್ನು ನಾನು ಮೆಚ್ಚಿಕೊಂಡದ್ದು ಆಗಲೆ. ದೇವರಿದ್ದಾನೆಯೇ ಇಲ್ಲವೋ ಎಂದು ವಿಚಾರ ಮಾಡುವುದು ಬುದ್ಧಿಯ ಬಲದಿಂದ, ಆದರೆ ಕರುಳು ಮಿಡಿಯುವುದು ಬುದ್ಧಿಯಿಂದಲ್ಲ, ನೊಂದವರಿಗೆ ಮನುಷ್ಯ ಮರುಗದಂತೆ ಮಾಡುವುದಾದರೆ ಅದೆಂಥ ಆಸ್ತಿಕತೆ? ಬದುಕಿನಲ್ಲಿ ಮಾನವೀಯ ಮೌಲ್ಯಗಳೇ ಮುಖ್ಯವಲ್ಲವೆ? ಇವು ವಿಚಾರಗೊಂಡರೆ ಧರ್ಮದ ಸ್ವಾರಸ್ಯವಾಗಲಿ ಅಗತ್ಯವಾಗಲಿ ಎಲ್ಲಿದೆ?

ಮೂರ್ತಿರಾಯರು ಬರಿಯ ವಿಚಾರಶೀಲರಲ್ಲ, ಸಹೃದಯರು. ಮೊದಲೇ ಸುಸಂಸ್ಕೃತವಾದ ಜೀವನಕ್ಕೆ ಸಾಹಿತ್ಯದ ಸಂಸ್ಕಾರ ವಿಪುಲವಾಗಿಯೇ ಒದಗಿತು. ಅವರು ಒಲಿದದ್ದು ನೀತಿಗೆ, ಭಕ್ತಿಗಲ್ಲ. ನಿಯಮಕ್ಕೆ, ಸಾಧನೆಗಲ್ಲ. ವಿಚಾರಕ್ಕೆ, ನಂಬಿಕೆಗಲ್ಲ.

ಮನುಷ್ಯನಿಗೆ ಇರಬೇಕಾದುದು ಪ್ರೀತಿ, ವಿಶ್ವಾಸ, ಅನುಕಂಪ, ಆದರ. ಇವಿಲ್ಲದಿದ್ದರೆ ಆಸ್ತಿಕತೆಗೇನು ಬೆಲೆ? ಇವಿಲ್ಲದಿದ್ದ ನಾಸ್ತಿಕತೆಗಾದರೂ ಬೆಲೆಯದೆಯೆ? ಸಜ್ಜನಿಕೆಯನ್ನು ಬದಿಗೊತ್ತಿ ಧರ್ಮಕ್ಕಾಗಲಿ, ವಿಜ್ಞಾನಕ್ಕಾಗಲಿ ಪಟ್ಟಗಟ್ಟಬಹುದೆ? ಇದು ಮೂರ್ತಿರಾಯರ ನಿಲುವೆಂದು ನನ್ನ ಎಣಿಕೆ.

ಇನ್ನು ಅವರ ಬರಹಗಳಲ್ಲಿನ ಸ್ವಾರಸ್ಯವನ್ನು ಸವಿದ ಸಾವಿರಾರು ಮಂದಿಯಲ್ಲಿ ನಾನೂ ಒಬ್ಬ. ಮಾತಿನಂತೆಯೆ ಬರವಣಿಗೆಯೂ ನೇರ, ಸರಳ. ಎದೆಯಾಳದಿಂದ

ಬಂದಷ್ಟು, ಬೆಳದಿಂಗಳಂತೆ ನಿಷ್ಕ್ರಿಯದು, ಆಟಾಟೋಪವಿಲ್ಲ, ಕೃತಕತೆಯಿಲ್ಲ, ಬಳಸು ಮಾತಿಲ್ಲ, ಚಮತ್ಕಾರವಿಲ್ಲ, ನಂಬಿದಂತೆ ನಡೆದುಕೊಳ್ಳುವವರು, ನಡೆದಂತೆ ನುಡಿಯುವವರು. ಎಲ್ಲರ ಕಣ್ಣನ್ನು ಕೋರೈಸಬೇಕೆಂಬ ಕಾತರವಿಲ್ಲ, ಲೋಕೋಪಕಾರ ಮಾಡುವೆನೆಂಬ ಹಂಬಲವಿಲ್ಲ. 'ಇಟ್ಟಾಂಗೆ ಇರುವೆನೋ ದೊರೆಯೆ' ಎಂದರಲ್ಲವೆ ದಾಸರು! ದೊರೆಯು ಸೊಲ್ಲಿಲ್ಲದಿದ್ದರೂ ಇಟ್ಟಾಂಗೆಯೆ ಇರುವವರು ಇವರು. ಅವರ ನಂಬಿಕೆ ಏನಾದರಿರಲಿ, ನಾನಂತೂ ಎಂದೂ ಅವರನ್ನು " One of God's good men" ಎಂದು ನಂಬಿರುವವನು.

# ಬರೆದದ್ದೆಲ್ಲವೂ ಸತ್ಯವುಳ್ಳದ್ದು

**ಪ್ರೊ. ಜಿ. ವೆಂಕಟಸುಬ್ಬಯ್ಯ**

ನಾನು ಮೂರ್ತಿರಾಯರ ಎರಡು ವಾರಗಳ ಶಿಷ್ಯ! ಅವರು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಮೊದಲ ಬಿ.ಎ. ತರಗತಿಗೆ ಪಾಠ ಮಾಡುತ್ತಿದ್ದರು. ನಮಗೆ ಪಾಠ ಪ್ರಾರಂಭಿಸಿದ ಎರಡು ವಾರಗಳಲ್ಲೇ ಅವರಿಗೆ ಬೆಂಗಳೂರಿಗೆ ವರ್ಗವಾಯಿತು.

ನನ್ನ ಅವರ ನಿಕಟ ಸಂಪರ್ಕ ಆರಂಭವಾಗಿದ್ದು 1916 ರಲ್ಲಿ ಅವರು ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾದಾಗ. ಪರಿಷತ್ತಿಗೆ ಕಾರ್ಯದರ್ಶಿಯಾಗಬೇಕು ಎಂದು ಮಾಸ್ತಿಯವರು ಹಾಗೂ ಮೂರ್ತಿರಾಯರು ಮನೆಗೆ ಬಂದು ನನ್ನನ್ನು ಕೇಳಿದಾಗ "ನೀವು ನನ್ನ ಮೇಷ್ಟ್ರು, ನೀವು ಹೇಳಿದಂತೆ ಆಗಲಿ" ಎಂದೆ. ಎರಡು ವರ್ಷ ನಾನು ಅವರ ಜೊತೆ ಕಾರ್ಯದರ್ಶಿಯಾಗಿ ಕೆಲಸ ಮಾಡಿದೆ. ಆಗ ಪರಿಷತ್ತಿನಲ್ಲಿ ಹಣದ ಅಭಾವ. ವರ್ಷಕ್ಕೆ ಕೇವಲ 3 ಸಾವಿರ ರೂಪಾಯಿ ಕೊಡುತ್ತಿದ್ದರು. ಈಗ 30 ಲಕ್ಷ ರೂಪಾಯಿ ಕೊಡುತ್ತಿದ್ದಾರೆ.

ನಮ್ಮ ಕಾಲದಲ್ಲಿ ನಾವು ನಿಘಂಟಿನ ಕೆಲಸಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡುತ್ತಾ ಬಂದೆವು. ಡಿ. ಎಲ್. ನರಸಿಂಹಾಚಾರ್ ನಿಘಂಟಿನ ಸಂಪಾದಕರು.

ಶ್ರೀಯುತರುಗಳಾದ ಮೂರ್ತಿರಾಯರು, ಎಂ. ಆರ್. ಶ್ರೀನಿವಾಸ್, ಡಿ.ಸಿ. ಸುಬ್ಬರಾಯಪ್ಪ, ಎಸ್. ವರದರಾಜನ್ ಅವರಂಥವರ ಜೊತೆ ಕೆಲಸ ಮಾಡುವುದೇ ವಿಶಿಷ್ಟ ಅನುಭವ. 'ಕಾಸು ಎಂದರೆ ಬೆಂಕಿ, ಅದನ್ನು ಮುಟ್ಟುವುದೇ ಅಪಾಯ' ಎಂದು ತಿಳಿದು ಕೆಲಸ ಮಾಡುತ್ತಿದ್ದೆವು. ಹಣವಿಲ್ಲದೆಯೇ ಹೆಚ್ಚು ಕೆಲಸ ಮಾಡಿ ತೋರಿಸಿದೆವು. ಕಾರ್ಯಕ್ರಮಕ್ಕೆ ಬರುವವರನ್ನು ನಮ್ಮ ಮನೆಯಲ್ಲೋ, ಮೂರ್ತಿರಾಯರ ಮನೆಯಲ್ಲೋ ಇರಿಸಿಕೊಳ್ಳುತ್ತಿದ್ದೆವು. ಕನ್ನಡದ ಕೆಲಸ ಪುಣ್ಯದ ಕೆಲಸ ಎಂದೇ ಮಾಡುತ್ತಿದ್ದೆವು. ಟಿ.ಎ., ಡಿ.ಎ. ಆಗ ಇರಲೇ ಇಲ್ಲ.

ಮೂರ್ತಿರಾಯರು ತುಂಬಾ ಸಂಕೋಚದ ವ್ಯಕ್ತಿ. ತಾವಾಗಿ ಸ್ನೇಹಿತರನ್ನು ಹುಡುಕಿಕೊಂಡು ಹೋಗುವವರಲ್ಲ. ತಮ್ಮ ಬಳಿಗೆ ಬಂದರೆ ಅವರೊಡನೆ ಸ್ನೇಹದಿಂದ ನಡೆದುಕೊಳ್ಳುವ ಸ್ವಭಾವ. ಇತರರ ಬಗ್ಗೆ ಅಭಿಪ್ರಾಯಗಳನ್ನು ಬಹಳ ಸ್ಪಷ್ಟವಾಗಿ ಕಟುವಾಗಿಲ್ಲದ ರೀತಿಯಲ್ಲಿ ಹೇಳುತ್ತಿದ್ದರು.

ಶುಭ್ರ ಮನಸ್ಸಿನ, ಸದಾ ಶಾಂತಿಯಿಂದ ಜೀವನ ನಡೆಸುವ ಯಾರೊಡನೆಯೂ ವಿರೋಧ ಕಟ್ಟಿಕೊಳ್ಳದ, ಯಾರ ಬಗ್ಗೆಯೂ ಕೆಟ್ಟ ಮಾತನಾಡದ ವ್ಯಕ್ತಿ. ಅವರ ಬದುಕು

ನಮಗೆ ಮಾರ್ಗದರ್ಶನವಾಯಿತು. ವಿಶ್ವಾಸದಿಂದ ಹೇಗೆ ಬದುಕಬಹುದೆಂದು ಅವರು ನಮಗೆ ಕಲಿಸಿಕೊಟ್ಟರು.

ಕೆ. ಗೋಪಾಲಕೃಷ್ಣರಾವ್ ಸಣ್ಣ ಕಥೆಗಾರರು. ಪು.ತಿ.ನ. ತಮ್ಮ ಗೀತರೂಪಕಗಳನ್ನು ಅವರ ಮನೆಯಲ್ಲಿ ಓದಿಸುತ್ತಿದ್ದರು. 'ಗೋಕುಲ ನಿರ್ಗಮನ' ಮುದ್ರಣ ಆಗುವ ಮುಂಚೆ ರಾವ್ ಅವರ ಮನೆಯಲ್ಲಿ ಓದಿಸಿಕೊಳ್ಳುತ್ತಿದ್ದೆವು. ಪು.ತಿ.ನ., ಮಾಸ್ತಿ, ತೀ.ನಂ. ಶ್ರೀ., ಮೂರ್ತಿರಾಯರು ಇರುವಂತಹ ಗುಂಪು ಈಗ ಎಲ್ಲಿ ಸಿಗುತ್ತದೆ. ಕವಿಯ ಬಾಯಿಂದಲೇ ಅವರ ಕೃತಿಗಳನ್ನು ಸವಿಯುವ ಸೌಭಾಗ್ಯ ಯಾರಿಗೆ ದೊರೆಯುತ್ತದೆ?

ಷೇಕ್ಸ್‌ಪಿಯರ್‌ನ 'ಟೆಂಪೆಸ್ಟ್'ನ್ನು ಮೂರ್ತಿರಾಯರು ಕನ್ನಡಕ್ಕೆ 'ಚಂಡಮಾರುತ' ಎಂದು ಅನುವಾದಿಸಿದರು. ಷೇಕ್ಸ್‌ಪಿಯರ್‌ನಂತಹ ಶ್ರೇಷ್ಠ ನಾಟಕಕಾರನ ನಾಟಕವನ್ನು ಕನ್ನಡಕ್ಕೆ ಅನುವಾದ ಮಾಡುವುದು ಹೇಗೆ ಎಂಬುದಕ್ಕೆ 'ಚಂಡಮಾರುತ' ಸೊಗಸಾದ ದೃಷ್ಟಾಂತ. ಇದು ಕನ್ನಡದಲ್ಲಿ ಬಂದ ಷೇಕ್ಸ್‌ಪಿಯರ್‌ನ ಪುಸ್ತಕಗಳಿಗೆಲ್ಲಾ ಮಾದರಿ.

ಈ ಪುಸ್ತಕ ಮುದ್ರಣಕ್ಕೆ ಹೋಗುವ ಮುನ್ನ ನಮ್ಮ ಮನೆಯಲ್ಲಿ ಶೇಷಗಿರಿ ರಾಯರು, ರಾಮಚಂದ್ರಮೂರ್ತಿ, ಕೆ. ನರಸಿಂಹಮೂರ್ತಿ, ನಾರಾಯಣಸ್ವಾಮಿ ಅವರ ಸಮ್ಮುಖದಲ್ಲಿ ಮೂರ್ತಿರಾಯರೇ ಓದಿದರು. ಎಲ್ಲರೂ ಮೆಚ್ಚಿಕೊಂಡರು. ಅದರಿಂದ ನನಗೆ ಮುದ್ರಿಸಲು ಧೈರ್ಯ ಬಂದಿತು ಎಂದು ಮೂರ್ತಿರಾಯರೇ ಒಂದು ಕಡೆ ಹೇಳಿಕೊಂಡಿದ್ದಾರೆ.

ಟೆಂಪೆಸ್ಟನ್ನು 'ಬಿರುಗಾಳಿ' ಎಂದು ಕುವೆಂಪು ಸಹ ರೂಪಾಂತರ ಮಾಡಿದ್ದಾರೆ. ಒಂದೇ ಗ್ರಂಥಕ್ಕೆ ಸಂಬಂಧಪಟ್ಟ ಕೃತಿಗಳಾದರೂ ಇವುಗಳಲ್ಲಿ ಬೇರೆ ಬೇರೆ ಶಕ್ತಿ ಕಂಡು ಬರುತ್ತದೆ.

'ಸಾಕ್ರಟೀಸನ ಕೊನೆಯ ದಿನಗಳು' ಮೂರ್ತಿರಾಯರು ಮೈಸೂರು ವಿಶ್ವ ವಿದ್ಯಾನಿಲಯಕ್ಕೆ ಅನುವಾದ ಮಾಡಿಕೊಟ್ಟ ಮೊದಲ ಪುಸ್ತಕ. ಅದನ್ನು ನಾನು ಪಾಠ ಮಾಡುತ್ತಿದ್ದಾಗಲೇ ಸಾಕ್ರಟೀಸನ ಎಲ್ಲಾ ಕೃತಿಗಳನ್ನು ಓದುವ ಹಂಬಲ ಬೆಳೆಯಿತು. ಪ್ಲೇಟೋ ಹಾಗೂ ಸಾಕ್ರಟೀಸನ ಬಗ್ಗೆ ಕನ್ನಡದ ಜನರಿಗೆ ತಿಳುವಳಿಕೆ ಬಂದಿದ್ದು ಆ ಪುಸ್ತಕದಿಂದಲೇ.

ಮೂರ್ತಿರಾಯರು ಸ್ವತಃ ಕಥೆಗಳನ್ನು ಬರೆದಿಲ್ಲ, ಇಂಗ್ಲಿಷ್ ಕಥೆಗಳನ್ನು ಅನುವಾದ ಮಾಡಿದ್ದಾರೆ. ಆದರೆ ಅವು ಯಾವುವೂ ಅನುವಾದ ಎನಿಸಿಲ್ಲ. ಆ ಕಥೆಗಳನ್ನು ಓದಿದರೆ ಅವು ಇಂಗ್ಲಿಷ್‌ನ ರೂಪಾಂತರಗಳೆನಿಸದೆ ಕನ್ನಡದ ಕಥೆಗಳು, ಸ್ವಂತ ಕಥೆಗಳು ಎಂಬ ಭಾವನೆ ಹುಟ್ಟಿಸುತ್ತವೆ. ಉದಾ: 'ರಿವರ್ ಆಫ್ ಸೈಲೆನ್ಸ್' ಕಥೆಗೆ ಅವರಿಟ್ಟ ಹೆಸರು 'ಮೌನವತಿ' ನಮ್ಮ ಹೇಮಾವತಿ ರೀತಿ. ಅವರು 25 ಕೃತಿಗಳನ್ನು ಬರೆದಿರಬಹುದು. ಆದರೆ ಅವರು ಬರೆದದ್ದೆಲ್ಲವೂ ಸತ್ವಪೂರ್ಣವಾದದ್ದು.

'ಆಷಾಢಭೂತಿ' ನಾಟಕ ಬರೆದ ಮೂರ್ತಿರಾಯರು ಒಮ್ಮೆ ನಾಟಕದಲ್ಲೂ ಪಾತ್ರ ಮಾಡಿದ್ದರಂತೆ. ಅವರ ನಾಟಕ ನೋಡಲು ಪತ್ನಿ ಜಯಲಕ್ಷ್ಮಿ ಕೂಡಾ ಬಂದಿದ್ದರು. ಆದರೆ ಮೂರ್ತಿರಾಯರಿಗೋ ಅಭಿನಯದ ಗಂಧಗಾಳಿಯೂ ಇಲ್ಲ. ಸ್ನೇಹಿತರು ಹೇಳಿದರೆಂದು ಇವರು ಪಾತ್ರ ಮಾಡಲು ಒಪ್ಪಿದರು. ರಂಗದ ಮೇಲೆ ಹೋಗಿ ಸುಮ್ಮನೆ

ನಿಂತು ಬಂದರಂತೆ. ಇದನ್ನು ನೋಡಿದ ಅವರ ಪತ್ನಿ ಕುರಿಯು ಹಾಗೆ ನಿಂತು ಬರಲಿಕ್ಕೆ ಸ್ಟೇಜ್ ಮೇಲೆ ಹೋಗಿದ್ದಿರಾ ಎಂದು ಸದಾ ರೇಗಿಸುತ್ತಿದ್ದರಂತೆ.

ದೇವರಿಲ್ಲ ಎಂಬುದು ಅವರ ನಂಬಿಕೆ. ಆದರೆ ಈ ನಂಬಿಕೆ ಅವರ ಸ್ನೇಹಿತರ, ಸಂಬಂಧಿಕರ ವಿಶ್ವಾಸಕ್ಕೆ ಯಾವುದೇ ಆಘಾತ, ಅಡ್ಡಿ ಉಂಟು ಮಾಡಿಲ್ಲ. ಮನಸ್ಸಿನ ನಂಬಿಕೆಗೂ, ಸ್ನೇಹಕ್ಕೂ ಯಾವುದೇ ಕಿರಿಕಿರಿಯಾಗದಂತೆ ನೋಡಿಕೊಂಡವರು ಅವರು. ನನ್ನ ಹಾಗೂ ಮೂರ್ತಿರಾಯರ ಸಂಬಂಧ ಗುರು-ಶಿಷ್ಯರ ಸಂಬಂಧದಂತೆ ಇಂದಿಗೂ ನಡೆದುಕೊಂಡು ಬರುತ್ತಿದೆ. ಆದರೆ ಅವರೀಗ ಇಸ್ರೋ ಲೇಔಟ್‌ಗೆ ಹೋಗಿದ್ದಾರೆ. ಕಾರ್ ಡ್ರೈವ್ ಮಾಡಿಕೊಂಡು ಹೋಗುವ ಸ್ಥಿತಿಯಲ್ಲಿ ನಾನಿಲ್ಲ. ನನಗೂ 86 ವರ್ಷವಾಯಿತು. ಆಗಾಗ ದೂರವಾಣಿಯಲ್ಲಿ ಮಾತನಾಡುತ್ತೇವೆ.

ಅಂತಹ ಗುರುಗಳು, ಸ್ನೇಹಿತರು ಸಿಕ್ಕುವುದು ವಿರಳ.



# ಕನ್ನಡ ಸಾಹಿತ್ಯದ ಹಿರಿಯಜ್ಜ ಪ್ರೊ. ಎ. ಎನ್. ಮೂರ್ತಿರಾವ್

ಕೆ. ನರಸಿಂಹಮೂರ್ತಿ

ಇನ್ನೇನು ಇಪ್ಪತ್ತೇ ತಿಂಗಳುಗಳ ಸುಮಾರಿನಲ್ಲಿ ನಮ್ಮೆಲ್ಲರ ಪ್ರೀತ್ಯಾದರಗಳ ಹಾಗೂ ಮೆಚ್ಚಿನ ಪ್ರಾಧ್ಯಾಪಕ, ಸಾಹಿತಿ, ವಿಮರ್ಶಕರಾದ, ಪ್ರೊ. ಎ. ಎನ್. ಮೂರ್ತಿ ರಾವ್‌ರವರು, ಶತಾಯುಷಿಗಳಾಗಲಿರುವುದು ಕನ್ನಡ ಸಹೃದಯ ಲೋಕಕ್ಕೆ ಖುಷಿಯ ವಿಷಯವಾಗಿದೆ. ಅವರು ಜನಿಸಿದುದು ಮಂಡ್ಯ ಜಿಲ್ಲೆಯ ಹೇಮಾವತಿ ನದಿ ತೀರದ ಅಕ್ಕಿಹೆಬ್ಬಾಳ ಗ್ರಾಮದಲ್ಲಿ, 1900 ಜೂನ್ ಹದಿನಾರರಂದು. ಅವರದು ತುಂಬು ಜೀವನ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಅಸಂಖ್ಯ ವಿದ್ಯಾರ್ಥಿ ತರುಣರಿಗೆ ಇಂಗ್ಲೀಷ್ ಸಾಹಿತ್ಯ ಕೃತಿರತ್ನಗಳ ಅಧ್ಯಯನದಲ್ಲಿ ಮಾರ್ಗ ದರ್ಶಕರಾಗಿ ಸಾಹಿತ್ಯ ವಿಷಯದಲ್ಲಿ ಅವರ ವಿವೇಚನಾಶಕ್ತಿಯನ್ನು, ಅಭಿರುಚಿಯನ್ನು ಪರಿಷ್ಕೃತಗೊಳಿಸಿದ್ದಾರೆ. ಮಾನ್ಯ ಕೆಂಗಲ್ ಹನುಮಂತಯ್ಯನವರು ಯೋಜಿಸಿದ ಸಂಸ್ಕೃತಿ ಪ್ರಸಾರ ಕಾರ್ಯದಲ್ಲಿ ತಮ್ಮನ್ನು ಗಾಢವಾಗಿ ತೊಡಗಿಸಿಕೊಂಡು ಅವರು ನಾಡಿನ ಜನತೆಯ ಅಭಿರುಚಿಯ ಮಟ್ಟವನ್ನೂ ಎತ್ತರಿಸುವುದರಲ್ಲಿ ನೆರವು ನೀಡಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ಹಲವು ಪ್ರಕಾರಗಳಲ್ಲಿ ಕೃತಿ ರಚನೆ ಮಾಡಿ ಹೊಸ ಕನ್ನಡ ಸಾಹಿತ್ಯವನ್ನು ಹೆಚ್ಚು ಶ್ರೀಮಂತಗೊಳಿಸಿದ್ದಾರೆ. ಲಲಿತ ಪ್ರಬಂಧಕರಾಗಿ, ಅನುವಾದಕರಾಗಿ ಅವರು ಚಿರಕಾಲ ಬಾಳುವ ಕೃತಿಗಳನ್ನು ನೀಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿ ಗಳಾಗಿ, ಮುಂದೆ ಅಧ್ಯಕ್ಷರಾಗಿ ಅವರು ಕನ್ನಡ ನುಡಿಯ ಅಭಿವೃದ್ಧಿಗಾಗಿ ಸೆಣಸಿದ್ದಾರೆ. ಸಹಜವಾಗಿಯೇ ಸಾಹಿತ್ಯಲೋಕದ ಹಲವಾರು ಗೌರವಗಳು ಅವರಿಗೆ ಸಂದಿವೆ. ಮೈಸೂರು ವಿಶ್ವವಿದ್ಯಾನಿಲಯವು ಅವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿದೆ. ಅವರ 'ಚಿತ್ರಗಳು - ಪತ್ರಗಳು' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡಮಿಯ ಪ್ರಶಸ್ತಿ ಲಭಿಸಿದೆ. 'ಅಪರ ವಯಸ್ಕನ ಅಮೇರಿಕಾ ಯಾತ್ರೆ' ಎಂಬ ಅವರ ಪ್ರವಾಸ ಕಥನ ಕರ್ನಾಟಕ ರಾಜ್ಯ ಅಕಾಡಮಿಯ ಪ್ರಶಸ್ತಿಯನ್ನು ಗಳಿಸಿದೆ. ಅವರ 'ದೇವರು' ಎಂಬ ವೈಚಾರಿಕ ಸುದೀರ್ಘಲಲಿತ ಪ್ರಬಂಧ ಕರ್ನಾಟಕದ ಅತ್ಯುನ್ನತ ಪ್ರಶಸ್ತಿಯಾದ 'ಪಂಪ ಪ್ರಶಸ್ತಿ'ಯನ್ನು ಪಡೆದುಕೊಂಡಿದೆ. 1984 ರಲ್ಲಿ ಕೈವಾರದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಅವರು ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಗಳ ಪ್ರಗತಿಯ ಮೇಲೆ ಹೆಚ್ಚಿನ ಬೆಳಕು ಚೆಲ್ಲಿದ್ದಾರೆ.

ಕನ್ನಡ ಸಾಹಿತ್ಯೇತಿಹಾಸದಲ್ಲಿ ಅವರದು ಒಂದು ವಿಶಿಷ್ಟ ಸ್ಥಾನ. ಸಣ್ಣಕಥೆಯ ಕ್ಷೇತ್ರದಲ್ಲಿ ಮಾಸ್ತಿಯವರು ಬೀರಿರುವ ಪ್ರಭಾವದ ದೃಷ್ಟಿಯಲ್ಲಿ ಆ ಸಾಹಿತ್ಯ ಪ್ರಕಾರದ

ಆದ್ಯಪ್ರವರ್ತಕರೂ ಅದರ ಅತ್ಯಂತ ಮಹತ್ವಪೂರ್ಣ ಕೃತಿಕಾರರೂ ಆಗಿರುವಂತೆ, ಲಲಿತ ಪ್ರಬಂಧದ ಕ್ಷೇತ್ರದಲ್ಲಿ ಮೂರ್ತಿರಾಯರು ಆ ಪ್ರಕಾರದ ಆದ್ಯ ಪ್ರವರ್ತಕರೂ ಅದರ ಅತ್ಯಂತ ಮಹತ್ವಪೂರ್ಣ ಲೇಖಕರೂ ಆಗಿದ್ದಾರೆ. ಇಂಗ್ಲೀಷ್-ಫ್ರೆಂಚ್ ಸಾಹಿತ್ಯಗಳಲ್ಲಿ ಪರಿಣಿತರಾಗಿದ್ದ ಅವರು ಈ ಪ್ರಕಾರದಲ್ಲಿ ತಮ್ಮ ಪ್ರಥಮ ಕೃತಿಗಳನ್ನು ರಚಿಸಿದಾಗ ಅವುಗಳನ್ನು ತಮ್ಮ ಆಪ್ತ ಮಿತ್ರರಾದ ತೀ.ನಂ.ಶ್ರೀಕಂಠಯ್ಯನವರಿಗೆ ಬೇರೆ ಯಾರೋ ಒಬ್ಬರು ಬರೆದ ಲೇಖನಗಳಂತೆ ತೋರಿಸಿದರಂತೆ. ಶ್ರೀಕಂಠಯ್ಯನವರು ಅವುಗಳನ್ನು ಮೆಚ್ಚಿಕೊಂಡು ಅವುಗಳ ಲೇಖಕನನ್ನು ತಮಗೆ ಪರಿಚಯ ಮಾಡುವಂತೆ ಹೇಳಿದಾಗ ಅವರು ಅವನನ್ನು ಕರೆ ತರುವುದಾಗಿ ಹೇಳಿ ಹೊರಕ್ಕೆ ಹೋಗಿ ವಾಪಸ್ಸಾಗಿ ಕರೆತಂದಿದ್ದೇನೆ ಎಂದರಂತೆ. ಅವರ ವಿನಯಕ್ಕೂ ಅವರ ವಿನೋದ ಪ್ರಜ್ಞೆಗೂ ಇದಕ್ಕಿಂತಲೂ ಹೆಚ್ಚಿನ ನಿದರ್ಶನ ಬೇಕೇ? ವೈಯಕ್ತಿಕ ದೃಷ್ಟಿಕೋನದ ಸ್ವೋಪಜ್ಞತೆಯಲ್ಲಿಯೂ ಸ್ವಚ್ಛಂದ ವಿಚಾರ ಲಹರಿಯಲ್ಲಿಯೂ, ಆತ್ಮೀಯ ಭಾವುಕತೆಯಲ್ಲಿಯೂ ತಿಳಿಹಾಸ್ಯದಲ್ಲಿಯೂ ಶೈಲಿಯ ಕಾವ್ಯಾತ್ಮಕತೆಯಲ್ಲಿಯೂ ಮೂರ್ತಿರಾಯರ ಲಲಿತ ಪ್ರಬಂಧಗಳು ಫ್ರೆಂಚ್ ಭಾಷೆಯ ಮಾಂಟೇಯ್ನ್‌ನನ್ನು ಇಂಗ್ಲೀಷ್ ಭಾಷೆಯ ಛಾರ್ಲ್ಸ್‌ಲ್ಯಾಂಬ್‌ನನ್ನು ನೆನಪಿಗೆ ತರುತ್ತವೆ. 'ಹಗಲುಗನಸುಗಳು' 'ಅಲೆಯುವ ಮನ' 'ಮಿನುಗು ಮಿಂಚು' ಎಂಬ ಮೂರು ಲಲಿತ ಪ್ರಬಂಧ ಸಂಕಲನಗಳನ್ನು ಅವರು ಪ್ರಕಟಿಸಿದ್ದಾರೆ. 'ಹೂಗಳು' 'ಗಾದೆಯ ಪ್ರಮಾಣ' ಹಾಗೂ 'ಮಹಾರಾಜಾ ಕಾಲೇಜಿನ ಕಾಮನ್ ರೂಮ್' ಮತ್ತು 'ದಿವಾನ್ ಖಾನೆಯ ಅಂದಚೆಂದ'ಗಳಂತಹ ಹಲವು ಹೃದಯಂಗಮ ಲಲಿತ ಪ್ರಬಂಧಗಳು ಮೂರ್ತಿರಾಯರ ಹೆಸರನ್ನು ಚಿರಸ್ಥಾಯಿಗೊಳಿಸಿವೆ.

ಮಹತ್ತ್ವಪೂರ್ಣ ಫ್ರೆಂಚ್ ನಾಟಕಕಾರ ಮೋಲಿಯೇರ್‌ನ ಪ್ರಸಿದ್ಧ ನಾಟಕ 'ತಾರ್ತೂಫ್'ನ ಮೂರ್ತಿರಾಯರ ರೂಪಾಂತರ 'ಆಷಾಢಭೂತಿ' ಎಷ್ಟು ಸಹಜವಾಗಿ ಮೂಡಿದೆ ಎಂದರೆ ನಮ್ಮ ಸುತ್ತಣ ಜೀವನದ ಚಿತ್ರಣದ ಒಂದು ಸ್ವಂತ ಕೃತಿಯಂತೆಯೇ ಅದು ನಮ್ಮ ಅನುಭವಕ್ಕೆ ಬರುತ್ತದೆ. ರಂಗಮಂಚದ ಮೇಲೆ ಅದು ಹಲವು ಯಶಸ್ವೀ ಪ್ರದರ್ಶನಗಳನ್ನು ಕಂಡಿದೆ. ಮೋಲಿಯೇರ್‌ನ ನಾಟಕಗಳಲ್ಲೆರಡರ ನೇರ ಅನುವಾದಗಳನ್ನು ರಾಯರು ನೀಡಿದ್ದಾರೆ. ಅಂತೆಯೇ ವಿಶ್ವವಿಖ್ಯಾತ ಇಂಗ್ಲೀಷ್ ನಾಟಕಕಾರ ಷೇಕ್ಸ್‌ಪಿಯರ್‌ನ ಕಡೆಯ ನಾಟಕ 'ಟೆಂಪೆಸ್ಟ್'ನ ಅನುವಾದವನ್ನು ಅವರು 'ಚಂಡಮಾರುತ' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ. ಮೂರ್ತಿರಾಯರ ನಾಟಕೀಯ ಪ್ರಜ್ಞೆ, ವಿನೋದ ಪ್ರಜ್ಞೆ, ಗಾಢ ಜೀವನಾನುಭವ, ಸಾಹಿತ್ಯ ಸಾರಗ್ರಹಿಕೆ ಈ ಶಕ್ತಿಗಳೆಲ್ಲವೂ ಅವರ ಅನುವಾದಗಳಲ್ಲಿಯೂ ಅವರ ಈ ರೂಪಾಂತರದಲ್ಲಿಯೂ ಪ್ರಕಟಗೊಂಡಿವೆ.

ಸೃಜನಶೀಲ ಕ್ಷೇತ್ರದಲ್ಲಿ ಹೇಗೋ ಹಾಗೆಯೇ ವಿಮರ್ಶಾ ಕ್ಷೇತ್ರದಲ್ಲಿಯೂ ಮೂರ್ತಿರಾಯರ ಪ್ರತಿಭೆ ಪ್ರಕಾಶಮಾನವಾಗಿ ಬೆಳಗಿದೆ. 'ಸಾಹಿತ್ಯ ಮತ್ತು ಸತ್ಯ', 'ಸಾಹಿತ್ಯ ಮತ್ತು ಕಲೆ' ಎನ್ನುವ ಪ್ರಬಂಧಗಳ ಸಾಹಿತ್ಯಕ ತಾತ್ವಿಕ ಜಿಜ್ಞಾಸೆಯಾಗಲೀ ಇಂಗ್ಲೀಷ್ ಮತ್ತು ಸಂಸ್ಕೃತಗಳ ದಿಗ್ಗಜಗಳಾದ ಷೇಕ್ಸ್‌ಪಿಯರ್, ವಾಲ್ಮೀಕಿ, ಕಾಳಿದಾಸ, ಭವಭೂತಿಯರ ಕೃತಿಗಳ ನೇರ ಹಾಗೂ ತೌಲನಿಕ ವಿಮರ್ಶೆಯಾಗಲೀ, ಹೊಸಗನ್ನಡ

ಸಾಹಿತ್ಯದ ಆದ್ಯ ಹಾಗೂ ಅಗ್ರಪಂಕ್ತಿಯ ಲೇಖಕರಾದ ಮಾಸ್ತಿ ಹಾಗೂ ಬಿ. ಎಂ. ಶ್ರೀಕಂಠಯ್ಯನವರ ಸ್ವಾರಸ್ಯಪೂರ್ಣ ಕೃತಿಗಳ ಸಮೀಕ್ಷೆಯಾಗಲೀ, ಮೂರ್ತಿರಾಯರ ವಿಮರ್ಶಾ ಕೃತಿಗಳಾಗಲೀ ಅವರದೇ ಸ್ವೋಪಜ್ಞತೆಯ ಛಾಪು ಹೊತ್ತ ಸದಭಿರುಚಿಯ ಸೂಕ್ಷ್ಮಗ್ರಹಿಕೆಯ ವಿಮರ್ಶಾಪ್ರಜ್ಞೆಯ ಅತ್ಯುತ್ತಮ ಮಾದರಿಗಳಾಗಿವೆ.

ಅವರಿಗೆ ಪಂಪ ಪ್ರಶಸ್ತಿಯನ್ನು ತಂದುಕೊಟ್ಟ ಅವರ ಅತ್ಯಂತ ಆತ್ಮೀಯ ವೈಚಾರಿಕ ಕೃತಿ 'ದೇವರು' ಜೀವನದ ಬಗ್ಗೆ ಅವರ ಗಾಢ ಪ್ರೀತಿಯನ್ನೂ ದೇವರ ಅಸ್ತಿತ್ವದ ಬಗ್ಗೆ ಅವರಲ್ಲಿ ಉದಿಸುವ ಗಂಭೀರ ಸಮಸ್ಯೆಯನ್ನೂ ಜೀವನದಲ್ಲಿ ಮಾನವೀಯ ಅನುಕಂಪದ ಪ್ರಾಧಾನ್ಯವನ್ನೂ ಸಾಮಾನ್ಯ ಅನುಭವದ ನಿದರ್ಶನಗಳೊಂದಿಗೆ ತಿಳಿಯಾದ ಶೈಲಿಯಲ್ಲಿ ಸುಲಲಿತವಾಗಿ ವಿವೇಚಿಸುವ ರೀತಿ ಅತ್ಯಂತ ಬೋಧಪ್ರದವಾಗಿರುವಂತೆಯೇ ಅತ್ಯಂತ ಆಕರ್ಷಕವೂ ಆಗಿದೆ.

ತಮ್ಮ ಅನುಭವವನ್ನು ತಾವೇ ಮೆಲುಕು ಹಾಕಿಕೊಳ್ಳುವ ಅವರ ಆತ್ಮ ಜೀವನ ಸಿಂಹಾವಲೋಕನದ ಸ್ಮೃತಿಚಿತ್ರಗಳು ಅವರ 'ಸಂಜೆಗಣ್ಣಿನ ಹಿನ್ನೋಟ' ಆತ್ಮವೃತ್ತದಲ್ಲಿ ವಿಸ್ತಾರವಾಗಿಯೂ ಅವರ 'ಅಪರ ವಯಸ್ಕನ ಅಮೆರಿಕಾ ಯಾತ್ರೆ' ಪ್ರವಾಸಕಥನದಲ್ಲಿ ಅವರಿಗೆದುರಾದ ಹಲವು ಸಂದರ್ಭಗಳಲ್ಲಿಯೂ 'ಚಿತ್ರಗಳು-ಪತ್ರಗಳು' ಸಂಕಲನದ ಸೂಕ್ಷ್ಮ ಒಳನೋಟಗಳಲ್ಲಿಯೂ ಹರಡಿಕೊಂಡಿವೆ. ಆತ್ಮವೃತ್ತದಲ್ಲಿ ತಮ್ಮ ಜೀವನದ ಮೂಲ ಸ್ಫೂರ್ತಿಸ್ರೋತಗಳನ್ನು ಅವರು ಅನ್ವೇಷಿಸುವಂತೆ ಪ್ರವಾಸ ಕಥನದಲ್ಲಿ ಅವರು ಪಾಶ್ಚಾತ್ಯ ಸಂಸ್ಕೃತಿಯ ಸಹಾನುಭೂತಿಪರ ತುಲನಾತ್ಮಕ ವಿವೇಚನೆ ನಡೆಸುತ್ತಾರೆ. 'ಚಿತ್ರಗಳು-ಪತ್ರಗಳು' ಸಂಕಲನದಲ್ಲಿ ತಮ್ಮ ಗುರುಗಳ ವ್ಯಕ್ತಿಚಿತ್ರಗಳನ್ನು ಕೊಡುವಲ್ಲಿ ಅವರ ನಿಷ್ಪಕ್ಷಪಾತದೃಷ್ಟಿ ಅವರ ಭಕ್ತಿ, ಗೌರವಗಳಲ್ಲಿಯೂ ಮರೆಯಾಗದು. ಅವರ ಮಿತ್ರಪ್ರೀತಿ ಅವರ ಪತ್ರಗಳ ಸಾರಸರ್ವಸ್ವ.

ಮೂರ್ತಿರಾಯರ ಮುಗುಳ್ನಗೆ ಮೊಗದಲ್ಲಿ ಅವರ ಚಿತ್ತದ ಪ್ರಸನ್ನತೆ ಹೊರ ಸೂಸುತ್ತದೆ. ಸಾಹಿತ್ಯಪ್ರಿಯರಾಗಿರುವಂತೆಯೇ ಅವರು ಸಂಗೀತಪ್ರಿಯರು. ವಯೋವೃದ್ಧರೂ ಜ್ಞಾನವೃದ್ಧರೂ ಆದ ಅವರಿಗೆ ಶ್ರೀಮದ್ಗಾಂಭೀರ್ಯತೆಯೆಂದರೆ ಆಗದು ಎನ್ನುವುದು ಅವರ ವ್ಯಕ್ತಿತ್ವದ ಒಂದು ಮುಖ್ಯ ಲಕ್ಷಣವನ್ನು ಸೂಚಿಸುತ್ತದೆ. ಜೀವನ ವನ್ನು ಅನನ್ಯ ಪ್ರೀತಿಯಿಂದಲೂ ಅದಮ್ಯ ಉತ್ಸಾಹದಿಂದಲೂ ಅತ್ಯಂತ ಹಗುರವಾಗಿ ತೆಗೆದುಕೊಳ್ಳುವ ಅವರು ಅವರೊಡನೆ ಕ್ಷಣ ಮಾತ್ರ ವ್ಯವಹರಿಸುವವರಲ್ಲಿಯೂ ತರುಣರಲ್ಲಿ ತರುಣರಾಗಿ ರಸಿಕರಲ್ಲಿ ರಸಿಕರಾಗಿ ತೋರುತ್ತಾರೆ. ಅವರ ಸಾಹಿತ್ಯದಿಂದಲೂ ಅವರ ಜೀವನಶೀಲತೆಯಿಂದಲೂ ನಾವು ಕಲಿಯಬೇಕಾಗಿರುವುದು ಬಹಳ. ಅವರು ಶತಾಯುಷಿಗಳಾಗುವ ಶುಭದಿನವನ್ನು ನಾವೆಲ್ಲರೂ ಕಾಣುವಂತೆ ದೇವರು ಕರುಣಿಸಲಿ.

# ಮೂರ್ತಿರಾಯರಿಗೆ ಗೊರೂರು ಪ್ರಶಸ್ತಿ

ಹಾ. ಮಾ. ನಾಯಕ

"ಚಾರ್ಲ್ಸ್ ಡಿಕನ್ಸ್, ಆಲಿವರ್ ಗೋಲ್ಡ್‌ಸ್ಮಿತ್, ಎ. ಜಿ. ಗಾರ್ಡಿನರ್ ಮುಂತಾದ ಇಂಗ್ಲಿಷ್ ಲೇಖಕರ ಬರವಣಿಗೆಯನ್ನು ಓದಿ ಅಲ್ಲಿನ ವಿವಿಧ ರೀತಿಯ ಹಾಸ್ಯವನ್ನು ಚಪ್ಪರಿಸಿದ್ದ ನಮಗೆ ಕನ್ನಡದಲ್ಲಿ ಅಂಥ ಹಾಸ್ಯದ ಅರಕೆ ದೊಡ್ಡ ಕೊರಗನ್ನೇ ಉಂಟುಮಾಡಿತ್ತು. ಆ ಅರಕೆಯನ್ನು ಹೋಗಲಾಡಿಸಿದ ಕೆಲವೇ ಲೇಖಕರಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು ನಿಜವಾಗಿಯೂ ಅಗ್ರಸ್ಥಾನದಲ್ಲಿದ್ದಾರೆ."

ಇದು ರಾಷ್ಟ್ರಕವಿ ಕುವೆಂಪು ಅವರು ಗೊರೂರರನ್ನು ಮೆಚ್ಚಿಕೊಂಡ ರೀತಿ. ಮುಂದುವರಿದು ಕುವೆಂಪು ಮತ್ತೂ ಹೇಳುತ್ತಾರೆ. "ನೀರಸ ಎಂದು ತೋರುವ ಗ್ರಾಮೀಣ ಜೀವನದ ಸ್ವಾರಸ್ಯಕರ ಅಂಶಗಳನ್ನು ಎತ್ತಿ ತೋರಿಸಿ ಗೊರೂರರು ಅವುಗಳನ್ನು ಅಮರಗೊಳಿಸಿದ್ದಾರೆ. ತನ್ಮೂಲಕ ತಾವೂ ಅಮರರಾಗಿದ್ದಾರೆ."

ಅವರ 'ಹಳ್ಳಿಯ ಚಿತ್ರಗಳು' ಇಂಥ ಅಮರ ಕೃತಿಗಳಲ್ಲಿ ಒಂದು. ಅದು ಪ್ರೊಫೆಸರ್ ಎ. ಎನ್. ಮೂರ್ತಿರಾವ್ ಅವರಂಥ ಲೇಖಕರನ್ನು ಕನ್ನಡಕ್ಕೆ ಕೊಟ್ಟಿದೆ. ಈ ಮಾತನ್ನು ಮೂರ್ತಿರಾಯರೇ ಮೊನ್ನೆ ಗೊರೂರು ಪ್ರಶಸ್ತಿಯನ್ನು ಸ್ವೀಕರಿಸಿ ಮಾತನಾಡುತ್ತಿದ್ದಾಗ ಹೇಳಿದರು. ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ ಅವರಿಗೆ ಇಂಗ್ಲಿಷ್‌ನಲ್ಲೇ ಆಸಕ್ತಿ. ಶಾಲಾ ಕಾಲೇಜುಗಳಲ್ಲಿಯೂ ಕನ್ನಡವನ್ನು ಓದಿದವರಲ್ಲ! ಬದಲಿಗೆ ಫ್ರೆಂಚನ್ನು ಆಯ್ದು ಕೊಂಡಿದ್ದರು. ಕನ್ನಡದ ಬಗ್ಗೆ ತಾತ್ಸಾರ ತುಂಬಿತ್ತು. ಕನ್ನಡದಲ್ಲಿ ಏನಿದೆ? ಎಂಬುದು ಅವರ ಧೋರಣೆ ಆಗಿತ್ತು. ಒಂದು ಸಲ ತಮ್ಮ ಮಿತ್ರರಾದ ತೀ.ನಂ. ಶ್ರೀಕಂಠಯ್ಯ ನವರಲ್ಲೂ ಇದೇ ಅಭಿಪ್ರಾಯ ವ್ಯಕ್ತಪಡಿಸಿದರು. ಆಗ ಶ್ರೀಕಂಠಯ್ಯನವರು ಮರು ಮಾತಾಡದೆ ಗೊರೂರರ 'ಹಳ್ಳಿಯ ಚಿತ್ರಗಳು' ಪುಸ್ತಕದ ಒಂದು ಪ್ರತಿಯನ್ನು ಮೂರ್ತಿ ರಾಯರ ಕೈಯಲ್ಲಿಟ್ಟು "ಇದನ್ನು ಓದಿ" ಎಂದರಂತೆ.

ಮೂರ್ತಿರಾಯರು ಆ ಪುಸ್ತಕವನ್ನು ಓದಿದರು. ಅದು ರಾಮಾಯಣವಲ್ಲ, ಭಾರತವಲ್ಲ. ನಮ್ಮ ದಿನದಿನದ ವ್ಯವಹಾರ. ಅದು ಕನ್ನಡ ಸಾಹಿತ್ಯದ ಬಗೆಗೆ ಮೂರ್ತಿ ರಾಯರ ಕಣ್ಣನ್ನು ತೆರೆಸಿತು. ಅವರ ಅಭಿಪ್ರಾಯವನ್ನು ಬದಲಿಸಿತು. ಕನ್ನಡದಲ್ಲಿಯೂ ಎಷ್ಟು ಸುಂದರವಾಗಿ ಬರೆಯಬಹುದು ಎನ್ನಿಸಿತು! ನಿಧಾನವಾಗಿ ಅವರು ಕನ್ನಡಕ್ಕೆ ಒಲಿದರು. ಅದೇ ಸಮಯಕ್ಕೆ ಪ್ರೊಫೆಸರ್ ರೊಲೋ ತಮಗೆ ಕೊಟ್ಟಿದ್ದ ಇಂಗ್ಲಿಷ್ ಪ್ರಬಂಧವನ್ನು ವಾಪಸ್ ಕೊಡುತ್ತಾ ಹೇಳಿದರು: "ನೀನು ನಿಮ್ಮ ಜನರಿಗೆ ಅರ್ಥವಾಗುವ

ಭಾಷೆಯಲ್ಲಿ ಬರೆಯಬೇಕು." ಅಂದಿನಿಂದ ಮೂರ್ತಿರಾಯರು ಕನ್ನಡದಲ್ಲಿಯೇ ಬರೆಯಲು ಆರಂಭಿಸಿದರು !

ಈ ಪ್ರಸಂಗ ನಮಗೆ ಪುಟ್ಟಪ್ಪನವರ ಕೆಲವು ಇಂಗ್ಲಿಷ್ ಕವಿತೆಗಳನ್ನು ಓದಿ ಕಸಿನ್ಸ್, ಅವರು ಪುಟ್ಟಪ್ಪನವರಿಗೆ, "ನೀವು ಇಂಗ್ಲಿಷಿನಲ್ಲಿ ಬರೆಯದೆ ಕನ್ನಡದಲ್ಲಿಯೇ ಬರೆಯಬೇಕು." ಎಂದು ಬೋಧಿಸಿದ್ದನ್ನು ನೆನಪಿಗೆ ತರುತ್ತದೆ. ನಿಜ, ಎಂಥ ಪ್ರತಿಭಾವಂತನಾದರೂ ತನ್ನ ಸ್ವಂತ ಭಾಷೆಯಲ್ಲಿ ಅಭಿವ್ಯಕ್ತಗೊಳಿಸಿದಂತೆ ಇನ್ನೊಂದು ಭಾಷೆಯಲ್ಲಿ ಅಭಿವ್ಯಕ್ತಗೊಳಿಸಲಾರ. ಮೂರ್ತಿರಾಯರು ಇಂಗ್ಲಿಷಿನಲ್ಲಿ ಬರೆದ ಪುಸ್ತಕಗಳನ್ನು ಈಗ ಯಾರು ನೆನಪಿಸಿಕೊಳ್ಳುತ್ತಾರೆ? ಆದರೆ ಅವರು ಕನ್ನಡದಲ್ಲಿ ಬರೆದಿದ್ದುದರಿಂದ ಯಾವತ್ತೂ ಕನ್ನಡಿಗರು ನೆನಪಿಸಲ್ಲಿಟ್ಟುಕೊಳ್ಳುವಂಥ ಒಬ್ಬ ಲೇಖಕರಾಗಿದ್ದಾರೆ. ಅವರು ಗೊರೂರರವರ ಹೆಸರಿನಲ್ಲಿರುವ ಪ್ರಶಸ್ತಿಯನ್ನೇ ಪಡೆದಿದ್ದಾರೆ.

ಗೊರೂರರ 'ಹಳ್ಳಿಯ ಚಿತ್ರಗಳು' ಆದೇ ತಾನೇ ಪ್ರಕಟವಾಗಿತ್ತು. 1930 ಇಲ್ಲವೆ 1931 ಇರಬೇಕು. ಅದೇ ವರ್ಷ ಗೊರೂರರನ್ನು, ಎಸ್. ಎಸ್. ಸುಬ್ಬರಾಯರು, ಎಸ್. ಎಸ್.ಎಲ್.ಸಿ. ಪರೀಕ್ಷೆಗೆ ಪರೀಕ್ಷಕರನ್ನಾಗಿ ನೇಮಿಸಿದರು. ಗೊರೂರರು ಯಾವ ಪರೀಕ್ಷೆಯನ್ನೂ ಪಾಸುಮಾಡಿಲ್ಲವೆಂದು ಶಿಕ್ಷಣ ಇಲಾಖೆಯಲ್ಲಿ ಹಲವು ಅಧಿಕಾರಿಗಳಿಗೆ ಹೊಟ್ಟೆಯುರಿ ಉಂಟಾಯಿತು. ಅವರೆಲ್ಲ ಸೇರಿ ಸುಬ್ಬರಾಯರಲ್ಲಿ ದೂರುಕೊಟ್ಟರು. "ಗೊರೂರರು ಯಾವ ಪರೀಕ್ಷೆಯಲ್ಲಿಯೂ ಪಾಸು ಮಾಡದಿದ್ದರೆ ಏನಾಯಿತು? 'ಹಳ್ಳಿಯ ಚಿತ್ರಗಳು' ಪುಸ್ತಕ ಬರೆದಿಲ್ಲವೆ? ಸಾಕು" ಎಂದು ಸುಬ್ಬರಾಯರು ದೂರು ತಂದವರ ಬಾಯಿ ಕಟ್ಟಿಸಿದರು.

ಆದಾದ ಮೇಲೆ ಅವರು ಗೊರೂರರನ್ನು ತಮ್ಮ ಬಳಿ ಕರೆಸಿ "ನೀವು ಬಿ. ಎ. ಪಾಸು ಮಾಡಿಲ್ಲವೆ!" ಎಂದು ಕೇಳಿದರು."ಇಲ್ಲ." "ಇಂಟರ್‌ಮೀಡಿಯಟ್ಟನ್ನಾದರೂ ಮಾಡಿದ್ದೀರ? "ಎಂದು ಸುಬ್ಬರಾಯರು ಕೇಳಿದರು."ಇಲ್ಲ." "ಎಸ್.ಎಸ್. ಎಲ್. ಸಿ. ಯನ್ನಾದರೂ ಮಾಡಿಲ್ಲವೆ?" "ಇಲ್ಲ ಸಾರ್, ನಾನು ಯಾವ ಪರೀಕ್ಷೆಯನ್ನೂ ಮಾಡಿಲ್ಲ." ಗೊರೂರರು ಉತ್ತರಿಸಿದರು. ಯಾವ ಪರೀಕ್ಷೆಯನ್ನೂ ಮಾಡಿಲ್ಲದ ಈತ 'ಹಳ್ಳಿಯ ಚಿತ್ರಗಳ'ಂತಹ ಪುಸ್ತಕ ಹೇಗೆ ಬರೆದ ಎಂದು ಸುಬ್ಬರಾಯರಿಗೆ ಆಶ್ಚರ್ಯವಾಯಿತು. ಬೇಸರ ದನಿಯಲ್ಲಿ ಹೇಳಿದರು. "ನಿಮ್ಮಂತಹವರನ್ನು ಕಟ್ಟಿಕೊಂಡು ಏನು ಮಾಡೋಣ? ಹೋಗಿ, ಯಾವುದಾದರೂ ಪರೀಕ್ಷೆ ಕಟ್ಟಿ ಪಾಸು ಮಾಡಿಕೊಂಡು ಬನ್ನಿ." "ಆಗಲಿ"ಎಂದು ಗೊರೂರರು ಹೊರಟರು!

ತಮಗಾಗಿ ಅಲ್ಲದಿದ್ದರೂ ಸುಬ್ಬರಾಯರಿಗಾಗಿ ಗೊರೂರರು ಒಂದು ಪರೀಕ್ಷೆ ಪಾಸು ಮಾಡಬೇಕಾಯಿತು. ಮದ್ರಾಸ್ ವಿಶ್ವವಿದ್ಯಾನಿಲಯದ ವಿದ್ವಾನ್ ಪರೀಕ್ಷೆಗೆ ಗೊರೂರರು ಕುಳಿತದ್ದು ಹಾಗೆ. ಅಲ್ಲಿಯೂ ಒಂದು ಸ್ವಾರಸ್ಯವೆಂದರೆ ತಾವು ಬರೆದ ಒಂದು ಪುಸ್ತಕವನ್ನೇ ಪಠ್ಯವಾಗಿ ಓದಬೇಕಾಯಿತು. ಪರೀಕ್ಷೆ ಮುಗಿಯಿತು. ಉತ್ತೀರ್ಣರಾದರು. ಪರೀಕ್ಷಕರಾಗಿದ್ದ ಮುಳಿಯ ತಿಮ್ಮಪ್ಪಯ್ಯನವರು ಗೊರೂರರನ್ನು ಕುರಿತು ಹೇಳಿದರಂತೆ: "ನಿಮ್ಮ ಪುಸ್ತಕದ ಮೇಲೆ ಕೇಳಿದ ಪ್ರಶ್ನೆಗಳಿಗೆ ನೀವು ಬರೆದ ಉತ್ತರಗಳು ಚೆನ್ನಾಗಿರಲಿಲ್ಲ. ಅವಕ್ಕೆ ಇನ್ನೂ ಕಡಿಮೆ ಅಂಕಗಳು ಬರಬೇಕಾಗಿತ್ತು."

ಗೊರೂರರು ಪರೀಕ್ಷೆಯ ಪ್ರಶ್ನೆಗಳಿಗೆ ಚೆನ್ನಾದ ಉತ್ತರಗಳನ್ನು ಬರೆಯು ದಿರಬಹುದು. ಆದರೆ ಬದುಕಿನ ಪ್ರಶ್ನೆಗಳಿಗೆ ಅವರು ಬರೆದ ಉತ್ತರಗಳು ತುಂಬ ಪ್ರಸಿದ್ಧವಾಗಿವೆ. ಕನ್ನಡಿಗರ ಮನೆ ಮಾತಾಗಿವೆ. ಇಂಥ ಲೇಖಕರ ಸ್ಮರಣೆಗಾಗಿ ಒಂದು ಪ್ರಶಸ್ತಿಯನ್ನು ಸ್ಥಾಪಿಸಿದ್ದು ಅತ್ಯಂತ ಶ್ಲಾಘನೀಯವಾಗಿದೆ. 1991ರಲ್ಲಿ ನಿಧನರಾದ ಗೊರೂರರ ನೆನಪಿನಲ್ಲಿ ಒಂದು ಪ್ರತಿಷ್ಠಾನವನ್ನು ಏರ್ಪಡಿಸಿದವರು ಸು. ರಂಗಸ್ವಾಮಿ ಯವರು. ಇವರು 1983ರಲ್ಲಿ ಗೊರೂರರ ನೆನಪಿಗಾಗಿಯೆ ಈ ಪ್ರತಿಷ್ಠಾನವನ್ನು ಕಟ್ಟಿದರು. ಕವಿ ಪು.ತಿ.ನ. ಅವರು ಅದರ ಅಧ್ಯಕ್ಷರು.

ಗೊರೂರು ಪ್ರತಿಷ್ಠಾನ ಪ್ರತಿವರ್ಷವೂ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸಾಕಷ್ಟು ಶ್ರಮಿಸಿರುವ ಹಿರಿಯ ಸಾಹಿತಿಯೊಬ್ಬರನ್ನು ಆಯ್ದು 'ಗೊರೂರು ಪ್ರಶಸ್ತಿ'ಯ ಮೂಲಕ ಸನ್ಮಾನಿಸುತ್ತದೆ. ಹೀಗೆ ಈ ಹಿಂದಿನ ವರ್ಷಗಳಲ್ಲಿ 'ರಘುಸುತ', ರಂಗಾಚಾರ್, ಅ. ರಾ. ಮಿತ್ರ, ಎಸ್. ವಿ ಪರಮೇಶ್ವರಭಟ್ಟ, ಡಾ. ಪ್ರಭುಶಂಕರ, ಎನ್.ಕೆ. ಕುಲಕರ್ಣಿ ಅವರುಗಳಿಗೆ ಈ ಪ್ರಶಸ್ತಿ ಸಂದಿದೆ. ಮೂರ್ತಿರಾಯರಿಗೆ ಗೊರೂರು ಪ್ರತಿಷ್ಠಾನದ ಏಳನೇ ಪ್ರಶಸ್ತಿ ದೊರಕಿ ಪ್ರತಿಷ್ಠಾನಕ್ಕೇ ಒಂದು ಬೆಲೆ ತಂದಿದೆ. ಇದರಿಂದ ಗೊರೂರರ ಆತ್ಮಕ್ಕೆ ಖಂಡಿತವಾಗಿಯೂ ತೃಪ್ತಿ ಲಭಿಸುತ್ತದೆ ಎಂದು ಹೇಳಬಹುದು.

ಗೊರೂರು ಪ್ರಶಸ್ತಿಯನ್ನು ಗಳಿಸಿರುವ ಪ್ರೊಫೆಸರ್ ಮೂರ್ತಿರಾಯರು ಕನ್ನಡದ ಹಿರಿಯ ಲೇಖಕರಲ್ಲಿ ಒಬ್ಬರು. ಈ ಶತಮಾನ ಇನ್ನೆರಡು ವರ್ಷಕ್ಕೆ ಮುಗಿದಾಗ, ಅವರೂ ಶತಮಾನವನ್ನು ಮುಗಿಸುತ್ತಾರೆ. ಅವರ ಶತಮಾನವನ್ನು ಆಚರಿಸುವ ಪುಣ್ಯ ನಮಗಿರಲಿ.

## 'ಹಗಲುಗನಸುಗಳ' ಶತಾಯುಷಿ
## ಪ್ರೊ. ಎ. ಎನ್. ಮೂರ್ತಿರಾವ್

ಹಾ. ಮಾ. ನಾಯಕ

ಈ ಶತಮಾನವನ್ನು ಇಡಿಯಾಗಿ ಕಂಡ ಶ್ರೇಷ್ಠ ಕನ್ನಡಿಗರಲ್ಲಿ ಅಕ್ಕಿಹೆಬ್ಬಾಳು ನರಸಿಂಹಮೂರ್ತಿರಾಯರು ಒಬ್ಬರು. ಮಂಡ್ಯ ಜಿಲ್ಲೆಯ ಅಕ್ಕಿಹೆಬ್ಬಾಳು ಊರಿನವರಾದ ಅವರ ತಂದೆ ಎ. ಸುಬ್ಬರಾಯರು; ತಾಯಿ ವೆಂಕಟಲಕ್ಷ್ಮಮ್ಮನವರು. ಅವರು ಹುಟ್ಟಿದ್ದು ಜೂನ್ 16, 1900. ಈ ಜೂನ್ 16ಕ್ಕೆ ಅವರು ಹುಟ್ಟಿ ತೊಂಬತ್ತೊಂಬತ್ತು ವರ್ಷಗಳಾಗುತ್ತವೆ. ಅಂದು ಅವರು ಒಂದು ನೂರನೆಯ ವರ್ಷಕ್ಕೆ ಕಾಲಿಡುತ್ತಾರೆ. ಅವರ ಶಿಕ್ಷಣವೆಲ್ಲ ಮೈಸೂರಿನಲ್ಲಿಯೇ ನಡೆಯಿತು.

ಹೀಗೆ ನೂರು ತುಂಬಿದ ಕನ್ನಡ ಲೇಖಕರು ವಿರಳ. ಕಾರಂತರು, ಮಾಸ್ತಿ ಮುಂತಾದ ಮಹಾನ್ ಲೇಖಕರು ಕೆಲವರು ನೂರರ ಹತ್ತಿರ ಹತ್ತಿರ ಬಂದು ತೀರಿಕೊಂಡದ್ದು ದುರ್ದೈವವೆಂದೇ ಹೇಳಬೇಕು. ಈಗ ನಮ್ಮ ಸಂತೋಷಕ್ಕೆ ಮೂರ್ತಿರಾಯರಿದ್ದಾರೆ. ಬಹಳ ಜನ ಕನ್ನಡ ಲೇಖಕರಂತೆ ಅವರೂ ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕ ರಾಗಿದ್ದವರು. ಬಿ.ಎಂ.ಶ್ರೀ. ಪರಂಪರೆಗೆ ಸೇರಿದವರು. ಇಂಗ್ಲಿಷನ್ನು ಬೋಧಿಸಿ, ಕನ್ನಡದಲ್ಲಿ ಬರೆದವರು. ಲಲಿತ ಕನ್ನಡ ಬರವಣಿಗೆಗೆ ಹೆಸರಾದವರು.

"ಅಕ್ಕಿಹೆಬ್ಬಾಳು ಅಂದರೆ ಏನು ಅಂದುಕೊಂಡಿದೀಯೆ? ಅದು ಲಂಡನ್ ಕಣೋ. ಹೊಯ್ಸಳ ಕರ್ಣಾಟಕರ ಲಂಡನ್ನು! ತಿಳಕೋ!" ಎಂದು ಅವರ ಚಿಕ್ಕಪ್ಪ ಹೇಳುತ್ತಿದ್ದರಂತೆ. "ನಮ್ಮೂರಿಗೂ ಲಂಡನ್ನಿಗೂ ಅದೇನು ಸಾಮ್ಯ ಕಂಡರೋ ಅವರು ನನಗೆ ತಿಳಿಯದು. ವಾಸ್ತವವಾಗಿ ಅಕ್ಕಿಹೆಬ್ಬಾಳಿನ ಮಹತ್ವವನ್ನು ಮನಗಾಣಬೇಕಾದರೆ ಅದನ್ನು ಯಾವ ಪರಂಗಿಯವರ ರಾಜಧಾನಿಗೂ ಹೋಲಿಸಬೇಕಾಗಿಲ್ಲ. ನಮ್ಮೂರಿಗೆ ಸಾವಿರಾರು ವರ್ಷಗಳ ಇತಿಹಾಸವಿದೆ" ಎಂದು ಮೂರ್ತಿರಾಯರು ದೊಡ್ಡವರಾದ ಮೇಲೆ ಒಂದು ಕಡೆ ಬರೆದು ಕೊಂಡಿದ್ದಾರೆ. ಅಕ್ಕಿಹೆಬ್ಬಾಳು ಶಾಂತ, ಸುಂದರ ವಾತಾವರಣದಿಂದ ಕೂಡಿದ್ದು. ಇಂಥ ವಾತಾವರಣ ಉತ್ತರದಲ್ಲೆಲ್ಲೂ ದೊರೆಯದೆ ಗೌತಮರು ದಕ್ಷಿಣಕ್ಕೆ ಬರಬೇಕಾಯಿತು! ಅವರೇ ಈ ಊರಿಗೆ 'ತಂಡುಲಪುರ' ಎಂಬ ಹೆಸರಿಟ್ಟರು. ಆದರೆ ಅನೇಕ ವರ್ಷಗಳ ನಂತರ ಊರವರು ಆ ಹೆಸರನ್ನು ಅಕ್ಕಿಹೆಬ್ಬಾಳು ಎಂದು ಕನ್ನಡೀಕರಿಸಿದರು. ಇದು ಸ್ಥಳ ಪುರಾಣ ಎನ್ನುತ್ತಾರೆ ಮೂರ್ತಿರಾಯರು. ಮನೆಯಲ್ಲಿಯೇ ಇದ್ದ 'ಜೈಮಿನಿ ಭಾರತ'ದ ಒಂದು ಪ್ರತಿಯೇ ಅವರು ಓದಿದ ಮೊದಲನೆಯ ಪುಸ್ತಕ. ಅವರ ದೊಡ್ಡಪ್ಪ ಮೈಸೂರಿನ ಅರಮನೆಯಲ್ಲಿ ಅದನ್ನು ಪಾರಾಯಣ ಮಾಡಲು ನೇಮಿತರಾಗಿದ್ದರು.

ಮೂರ್ತಿರಾಯರು ತಮ್ಮ ಹನ್ನೆರಡನೆಯ ವಯಸ್ಸಿನಲ್ಲಿ ತಮ್ಮ ತಂದೆ ತಾಯಿ ಮತ್ತು ಒಬ್ಬ ತಮ್ಮನೊಡನೆ ಮೈಸೂರಿಗೆ ಬಂದರು. ಅಲ್ಲಿಯೇ ನೆಲಸುವ ದೃಷ್ಟಿಯಿಂದ ಬರಲಿಲ್ಲ. ಅವರ ತಂದೆಗೆ ವಾಯು ಸಂಬಂಧ ಅನಾರೋಗ್ಯವಾಗಿತ್ತು. ಯಾವ ಮದ್ದಿನಿಂದಲೂ ಗುಣವಾಗಲಿಲ್ಲ. ನಂಜುಂಡೇಶ್ವರನ ಸೇವೆ ಮಾಡಿದರೆ ಗುಣವಾಗಬಹುದೆಂದು ಕೆಲವರು ಸಲಹೆಮಾಡಿದರು. ಆ ಸೇವೆಗಾಗಿ ಮೂರ್ತಿರಾಯರ ತಂದೆ ಮೈಸೂರಿಗೆ ಬಂದು ಗಿರಿಭಟ್ಟರ ತಮ್ಮಯ್ಯನವರ ಮನೆಯಲ್ಲಿನ ಒಂದು ಭಾಗದಲ್ಲಿ ತಾತ್ಕಾಲಿಕವಾಗಿ ಸಂಸಾರ ಹೂಡಿತು. ಗಿರಿಭಟ್ಟರ ತಮ್ಮಯ್ಯನವರು ಆಗಿನ ದಿನಗಳಲ್ಲಿ ಪ್ರತಿಷ್ಠಿತರು, ಪ್ರಭಾವಶಾಲಿಗಳು. ಒಂದೆರಡು ವರ್ಷಗಳಲ್ಲಿಯೇ ಅವರು ಕೋಟೆ ಆವರಣವನ್ನು ಬಿಟ್ಟು ಕಾಳಮ್ಮನ ಗುಡಿ ಬೀದಿಯಲ್ಲಿ ವಾಸಮಾಡಲಾರಂಭಿಸಿದರು.

**ಜೀವನದ ತಿರುವು**

ಅಷ್ಟರಲ್ಲಿಯೇ ಅವರ ದೂರದ ಬಂಧುಗಳಾಗಿದ್ದ ಸುಬ್ಬಯ್ಯನವರು ಮೂರ್ತಿ ರಾಯರ ತಂದೆ ತಾಯಿಗಳನ್ನು ನೋಡಲು ಬಂದರು. ಬಾಲಕ ಮೂರ್ತಿರಾಯರನ್ನು ನೋಡಿದರು. ಅವರಿಗೆ ಏನನ್ನಿಸಿತೊ ಆ ಬಾಲಕನನ್ನು ನೋಡಿ "ಈ ವರ್ಷ ಸ್ಕೂಲಿಗೆ ಸೇರುವ ಕಾಲ ಆಗಿಹೋಯಿತು. ಮುಂದಿನ ವರ್ಷ ಇವನನ್ನು ಮೈಸೂರಿಗೆ ಕಳಿಸಿಬಿಡು. ನಮ್ಮ ಮನೇಲೇ ಇದ್ದುಕೊಳ್ಳಲಿ. ನನಗೇನು ಈ ಚೋಟುದ್ದದ ಹುಡುಗ ಹೊರೆಯಲ್ಲ, ಅಂಬಲಿಯೋ ತುಂಬೆ ಸೊಪ್ಪೋ ನಮಗಾದದ್ದು ಅವನಿಗೂ ಆಗುತ್ತೆ" ಎಂದರು. ಸುಬ್ಬಯ್ಯನವರು ಕೊಟ್ಟ ಭೇಟಿ "ನನ್ನ ಜೀವನಪಥ ಯಾವುದೆಂಬುದನ್ನು ನಿರ್ಣಯಿಸಿತು" ಎಂದು ಮೂರ್ತಿರಾಯರು ಬರೆಯುತ್ತಾರೆ. ಸುಬ್ಬಯ್ಯನವರ ಮನೆಯಲ್ಲಿ ಮೂರ್ತಿರಾಯರಿಗೆ ಪ್ರೌಢಶಾಲಾ ಶಿಕ್ಷಣ ಆರಂಭವಾಯಿತು. ಆರಂಭದ ಕೆಲವು ದಿವಸ ಸಂಕೋಚದಿಂದ ನರಳಿದರೂ ಮನೆಯವರ ಪ್ರೀತಿವಾತ್ಸಲ್ಯಗಳಿಂದ ಸರಿಹೋದರು. ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿ ಎಂಟನೆ ತರಗತಿಗೆ ಸೇರಿದರು. ಅಲ್ಲಿಂದಲೇ ಅವರಿಗೆ ಓದಿನ ಹುಚ್ಚು ಹಿಡಿಯಿತು. ಕೈಗೆ ಸಿಕ್ಕಿದ್ದನ್ನೆಲ್ಲ ಓದಿದರು.

ಅವರ ಓದಿನಲ್ಲಿ ಅಕಸ್ಮಾತಾಗಿ ಕೆಲವು ಚಿರ ಸಾಹಿತ್ಯ ಕೃತಿಗಳೂ ಸೇರಿದ್ದವು. ಅಂಥ ಪುಸ್ತಕಗಳನ್ನು ಆಯ್ದು ಅಂಥವನ್ನು ಓದುವಂತೆ ಮಾಡಿದವರು ಅವರ ಗುರುಗಳಾದ ಡಿ.ಎನ್. ಮೂರ್ತಿಯವರು. "ನೀವು ಇಂಗ್ಲಿಷನ್ನು ಹೇಗೆ ಬರೆಯುತ್ತೀರೋ ನೋಡೋಣ" ಎಂದು, "ಓದಿದ ಯಾವುದಾದರೊಂದು ಕಥೆಯನ್ನು ಎರಡು ಮೂರು ಪುಟಗಳಿಗೆ ಮೀರದಂತೆ ಬರೆದುಕೊಂಡು ಬನ್ನಿ" ಎಂದು ಮನೆಗೆಲಸ ಕೊಟ್ಟರು. ಅವನ್ನೆಲ್ಲ ಹಿಂದಿರುಗಿಸುವಾಗ "ಪರ್ಸಿಯ ಕಥೆಯನ್ನು ಬರೆದ ಹುಡುಗ ಯಾರು?" ಎಂದು ಮೂರ್ತಿಯವರು ಕೇಳಿದರು. ಮೂರ್ತಿರಾಯರು ಎದ್ದುನಿಂತರು. ತಮ್ಮನ್ನು ಬಂದು ನೋಡುವಂತೆ ಮೂರ್ತಿಯವರು ಹೇಳಿದರು. ಭೇಟಿಯಾದಾಗ ಕೋಪಗೊಂಡು "ಇದು ನೀನು ಬರೆದದ್ದಲ್ಲ. ಈಗಲೇ ಮೋಸ ಮಾಡುವುದನ್ನು ಕಲಿತುಬಿಟ್ಟೆಯಾ?" ಎಂದು ಕೇಳಿದರು. ಅದು ನನ್ನ ಸ್ವಂತ ಬರಹ ಎಂದು ನಾನಾ ವಿಧವಾಗಿ ಹೇಳಿಕೊಂಡರೂ ಮೂರ್ತಿಯವರು ಒಪ್ಪಲಿಲ್ಲ. "ನೀನು ಓದಿರುವ ಇನ್ನೊಂದು ಕಥೆಯನ್ನು ಇಲ್ಲೇ ನನ್ನೆದುರಿಗೇ ಬರಿ" ಎಂದರು. ಮೂರ್ತಿರಾಯರು ಬರೆಯತೊಡಗಿದರು. ಮುಕ್ಕಾಲು

ಪುಟ ಬರೆಯುತ್ತಲೇ ಅದನ್ನು ಮೂರ್ತಿಯವರು ಕೋಪದಿಂದ ಕಿತ್ತುಕೊಂಡು ಓದಿದರು. "ನೀನು ಸುಳ್ಳು ಹೇಳುತ್ತಿಲ್ಲ" ಎಂದರು. ಆ ಬರಹ ಓದಿ ಅವರಿಗೆ ಸಂತೋಷವಾಗಿತ್ತು. ಅಂದಿನಿಂದ ಮೂರ್ತಿರಾಯರ ಮೇಲೆ ಮೂರ್ತಿಯವರ ಪ್ರೀತಿ ಹೆಚ್ಚಾಯಿತು. ಸಾಹಿತ್ಯದ ವ್ಯಾಸಂಗದಲ್ಲಿ ಆಸಕ್ತಿ ವಹಿಸಿ ಹೇಳಿಕೊಡಲು ತೊಡಗಿದರು. ಅಂದಿನಿಂದ ಮೂರ್ತಿರಾಯರ ಓದಿಗೆ ಒಂದು ಅರ್ಥ ಬಂತು.

ಹೈಸ್ಕೂಲಿನ ಮೂರು ವರ್ಷ ಕಳೆಯುವವರೆಗೂ ಮೂರ್ತಿರಾಯರು ಸುಬ್ಬಯ್ಯನವರ ಮನೆಯಲ್ಲಿಯೇ ಇದ್ದರು. ಆ ಮೇಲೆ ಅವರ ಮನೆ ಅಕ್ಕಿಹೆಬ್ಬಾಳದಿಂದ ಮೈಸೂರಿಗೇ ಬದಲಾಯಿತು. ಅವರು ಆಗ ಪಡೆದ ಮನೆಯ ಬಾಡಿಗೆ ಎರಡೂವರೆ ರೂಪಾಯಿ!. ಎರಡು ವರ್ಷಗಳ ಮೇಲೆ ಸುಬ್ಬಯ್ಯನವರ ಕೃಪೆಯಿಂದ ನಾನೂರು ರೂಪಾಯಿಗೆ ಒಂದು ನಿವೇಶನ ದೊರೆಯಿತು. ಅದರಲ್ಲಿ ಸುಬ್ಬಯ್ಯನವರೇ ಸುಮಾರು ಎರಡು ಸಾವಿರ ರೂಪಾಯಿ ಖರ್ಚಿನಲ್ಲಿ ಮುಂದೆ ನಿಂತು ಮನೆ ಕಟ್ಟಿಸಿಕೊಟ್ಟರು. ಜೊತೆಗೆ ಮೂರ್ತಿರಾಯರ ಶಿಕ್ಷಣವೂ ಅಡೆತಡೆಯಿಲ್ಲದೆ ಸಾಗಿತು. ಅವರ ಓದಿನ ವೈವಿಧ್ಯ, ವಿಸ್ತಾರಗಳೂ ಬೆಳೆದವು. ಬಿ. ಎ. ಮೂರನೆಯ ವರ್ಷಕ್ಕೆ ಬಂದಾಗ ಅವರ ತಂದೆಯವರು ತೀರಿಕೊಂಡರು.

ಎರಡನೆಯ ಎಂ.ಎ. ತರಗತಿಗೆ ಬಂದಾಗ, ಒಮ್ಮೆ ಪ್ರೊ. ರಾಲೋ ರಜೆಯ ಮೇಲೆ ಇಂಗ್ಲೆಂಡಿಗೆ ಹೋದಾಗ, ಆಗ ಪ್ರಿನ್ಸಿಪಾಲ್ ಆಗಿದ್ದ ಎನ್. ಎಸ್. ಸುಬ್ಬರಾಯರನ್ನು ಕಂಡು ಮೂರ್ತಿರಾಯರು "ಟ್ಯೂಟರ್ ಹುದ್ದೆಯನ್ನು ಭರ್ತಿ ಮಾಡುತ್ತೀರಾ?" ಎಂದು ಕೇಳಿದರು. "ಅರ್ಜಿ ಬರಿ" ಎಂದು ಸುಬ್ಬರಾಯರು ಅರ್ಧಗಜ ಕಾಗದವನ್ನು ಕೊಟ್ಟರು! ಆ ಮೇಲೆ ಹೇಳಿದರು: "ನಾಳೆಯಿಂದ ರುಮಾಲು ಹಾಕಿಕೊಂಡು ಬಾ." ಈಗ ಇಂಥ ಕೆಲಸ ಹೀಗೆ ಸಿಕ್ಕುತ್ತದೆಯೆ? ಎಂದು ಕೇಳಬೇಕು. ಮೂರ್ತಿರಾಯರು ಎಂ.ಎ.ಪರೀಕ್ಷೆಗೆ ಕುಳಿತಾಗ, ಅನಾರೋಗ್ಯದ ಕಾರಣ ಒಂದು ಪತ್ರಿಕೆಯನ್ನು ತೆಗೆದುಕೊಳ್ಳಲಾಗಲಿಲ್ಲ. ಆದ್ದರಿಂದ ಒಂದು ವರ್ಷ ವ್ಯರ್ಥವಾಯಿತು, ಒಂದು ಅರ್ಥದಲ್ಲಿ; ಇನ್ನೊಂದು ಅರ್ಥದಲ್ಲಿ ಅಲ್ಲ. ಆ ಅವಧಿಯಲ್ಲಿ ಮಹಾರಾಜ ಹೈಸ್ಕೂಲಿನಲ್ಲಿ 75 ರೂಪಾಯಿ ತಲಬಿನ ಮೇಲೆ ತಾತ್ಕಾಲಿಕ ಕೆಲಸ ದೊರಕಿತು. ಈ ಮಾಸ್ತರಿಕೆಯ ಅವಧಿ ಎರಡು ವರ್ಷಗಳದ್ದು. 1927 ರಿಂದ ಮತ್ತೆ ಮಹಾರಾಜ ಕಾಲೇಜಿಗೇ ಅಧ್ಯಾಪಕರಾಗಿ ನೇಮಕಗೊಂಡರು. ಈ ಕಾಲೇಜಿನಲ್ಲಿಯೇ ಅಧ್ಯಾಪಕನಾಗಿರಬೇಕೆಂಬ ಮೂರ್ತಿರಾಯರ ಕನಸು ಈಗ ಈಡೇರಿತು. ಇಲ್ಲಿಂದ ನಿವೃತ್ತರಾಗುವವರೆಗೂ ಅವರು ಹಿಂದಿರುಗಿ ನೋಡಲಿಲ್ಲ.

ಮೂರ್ತಿರಾಯರು 1927 ರಿಂದ 40 ರವರೆಗೆ ಮೈಸೂರು ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. 1940–43 ರ ಅವಧಿಯಲ್ಲಿ ಶಿವಮೊಗ್ಗೆಯ ಇಂಟರ್ ಮೀಡಿಯಟ್ ಕಾಲೇಜಿನಲ್ಲಿ ಉಪ ಪ್ರಾಧ್ಯಾಪಕರಾಗಿದ್ದರು. 1948–49ರ ಅವಧಿಯಲ್ಲಿ ಚಿತ್ರದುರ್ಗದ ಇಂಟರ್‌ಮೀಡಿಯಟ್ ಕಾಲೇಜಿನಲ್ಲಿ ಪ್ರಿನ್ಸಿಪಾಲ್ ಆಗಿ ಕೆಲಸ ನಿರ್ವಹಿಸಿದರು. 1949 ರಿಂದ 1955 ರ ತನಕ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷಿನ ಪ್ರಾಧ್ಯಾಪಕರಾಗಿದ್ದರು. 1955 ರಲ್ಲಿ ನಿವೃತ್ತಿಗೊಂಡರು. ಈ ಮಧ್ಯೆ 1943

ರಿಂದ 47 ರವರೆಗೆ ಮೈಸೂರು ಆಕಾಶವಾಣಿಯ ನಿರ್ದೇಶಕರಾಗಿದ್ದರು. ನಿವೃತ್ತಿಯ ನಂತರ 1956–59ರ ಅವಧಿಯಲ್ಲಿ ಕರ್ನಾಟಕ ರಾಜ್ಯದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯ ನಿರ್ದೇಶಕರಾಗಿಯೂ ಕೆಲಸ ಮಾಡಿದರು. 1954 ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾದರು. ಮುಂದಿನ ಎರಡು ವರ್ಷಗಳ ಕಾಲ ಅವರು ಪರಿಷತ್ತಿನ ಅಧ್ಯಕ್ಷರಾಗಿಯೂ ಇದ್ದರು.

## ಪ್ರಶಸ್ತಿ – ಗೌರವ

ಕೇಂದ್ರ ಸಾಹಿತ್ಯ ಅಕಾಡೆಮಿಯ ಕನ್ನಡ ಸಲಹಾ ಸಮಿತಿಯ ಸಂಚಾಲಕರೂ ಆಗಿದ್ದ ಮೂರ್ತಿರಾಯರು, ಸದರ್ನ್ ಲ್ಯಾಂಗ್ವೇಜಸ್ ಬುಕ್ ಟ್ರಸ್ಟಿನ ಕನ್ನಡದ ಸಂಚಾಲಕ ರಾಗಿಯೂ ಇದ್ದರು. ಆಕಾಶವಾಣಿಯ ಕೇಂದ್ರ ಕಾರ್ಯಕ್ರಮ ಸಲಹಾ ಸಮಿತಿಯ ಸದಸ್ಯರಾಗಿಯೂ ಅವರು ನಾಲ್ಕು ವರ್ಷ ಕೆಲಸ ಮಾಡಿದರು. ಅವರಿಗೆ 1974 ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿತು. 1977ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಿ.ಲಿಟ್. ಪ್ರಶಸ್ತಿ ನೀಡಿ ಗೌರವಿಸಿತು. 'ಅಪರ ವಯಸ್ಕನ ಅಮೆರಿಕಾ ಯಾತ್ರೆ' ಎಂಬ ಪುಸ್ತಕಕ್ಕಾಗಿ 1978 ರಲ್ಲಿಯೂ, 'ಚಂಡಮಾರುತ' ಪುಸ್ತಕಕ್ಕಾಗಿ 1981 ರಲ್ಲಿಯೂ ಅವರಿಗೆ ಅಕಾಡೆಮಿ ಬಹುಮಾನಗಳು ಸಂದಿವೆ. 'ಚಿತ್ರಗಳು – ಪತ್ರಗಳು' ಪುಸ್ತಕಕ್ಕಾಗಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಗೌರವ (1979) ಪ್ರಾಪ್ತವಾಗಿದೆ. 1984 ರಲ್ಲಿ ಅವರಿಗೆ ರಾಜ್ಯೋತ್ಸವ ಪ್ರಶಸ್ತಿ ಬಂದಿದೆ. ಇದಕ್ಕೆಲ್ಲ ಕಿರೀಟವಿಟ್ಟಂತೆ, ಈಗ ಮಾಸ್ತಿ ಪ್ರಶಸ್ತಿ ಲಭಿಸಿದೆ.

ಕೈವಾರದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅವರು ಅಧ್ಯಕ್ಷರಾಗಿದ್ದರು. ಕೈವಾರ ಸಮ್ಮೇಳನ ಎಂದಾಗ, ಆ ಸಮ್ಮೇಳನದಲ್ಲಿ ನಡೆದ ಒಂದು ಪ್ರಸಂಗ ನೆನಪಿಗೆ ಬರುತ್ತದೆ: ಕೋಲಾರದ ಚಿನ್ನದಗಣಿ ಪ್ರದೇಶದಲ್ಲಿ ಕನ್ನಡಿಗರಿ ಗಾಗುತ್ತಿರುವ ಅನ್ಯಾಯಗಳ ಬಗೆಗೆ ಕವಿತಾ ಕೃಷ್ಣ ಅವರು ಒಂದು ನಿರ್ಣಯ ಮಂಡಿಸಿದರು. ಕೆ.ಪ್ರಹ್ಲಾದರಾವ್ ಅದನ್ನು ಅನುಮೋದಿಸಿದರು. ಅದು ಸಮ್ಮೇಳನದ ಮೂರನೆಯ ದಿನ. ಅಲ್ಲಿಯವರೆಗೂ ಸಮ್ಮೇಳನ ತುಂಬಾ ಚೆನ್ನಾಗಿ ನಡೆದುಕೊಂಡು ಬಂದಿತ್ತು. ಎಂ. ಎಸ್. ರಾಮಯ್ಯನವರು ಸಮ್ಮೇಳನದ ಯಶಸ್ಸಿಗೆ ಬೇಕಾದುದನ್ನೆಲ್ಲಾ ಮಾಡಿದ್ದರು. ಈಗ ನಿರ್ಣಯದ ಸೂಚನೆ ಮಂಡಿತವಾದೊಡನೆಯೇ ಕಾರ್ಮಿಕ ಮುಖಂಡರೊಬ್ಬರು ಕನ್ನಡ ಕಾರ್ಮಿಕರಿಗೆ ಆಗುತ್ತಿರುವ ಅನ್ಯಾಯಗಳನ್ನು ಹೇಳಲು ಧಾವಿಸಿ ಧ್ವನಿವರ್ಧಕವನ್ನು ಕಿತ್ತುಕೊಂಡು ಮಾತನಾಡತೊಡಗಿದರು. ಅವರು ಮಾತಿನ ನಡುವೆ ವೇದಿಕೆ ಮೇಲಿದ್ದ ಸಚಿವ ಬೈರೇಗೌಡರ ವಿರುದ್ಧವಾಗಿಯೂ ಮಾತನಾಡಿದರು. ಬೈರೇಗೌಡರೂ ಅವರನ್ನು ನಿಂದಿಸಿದರು. ಒಡನೆಯೇ ಕಾರ್ಮಿಕರ ಗುಂಪೊಂದು ವೇದಿಕೆಯ ಕಡೆಗೆ ನುಗ್ಗಿತು. ಆಡಬಾರದ ಮಾತುಗಳು ಕೇಳಿಬಂದವು. ಉದ್ರಿಕ್ತರಾದ ಜನರನ್ನು ಸಮಾಧಾನಗೊಳಿಸಲು ಸಮ್ಮೇಳನದ ಅಧ್ಯಕ್ಷರು, ಪರಿಷತ್ತಿನ ಅಧ್ಯಕ್ಷರು ಮತ್ತಿತರ ಹಿರಿಯರು ಮಾಡಿಕೊಂಡ ಮನವಿಗೆ ಅಪೇಕ್ಷಿತ ಪ್ರತಿಕ್ರಿಯೆ ಬರಲಿಲ್ಲ. ಕೈಕೈ ಮಿಲಾಯಿಸುವ ಹಂತಕ್ಕೆ ಬಂತು. ಮುಂದಿನ ಸಾಲಿನಲ್ಲಿ ಮೌನವಾಗಿ ಕುಳಿತಿದ್ದ ನನಗೆ ಮಾತನಾಡಬೇಕೆಂದು ಕಿವಿಯಲ್ಲಿ ಕವಿತಾಕೃಷ್ಣ ಕೇಳಿಕೊಂಡರು. ಸಮ್ಮೇಳನದ ಆ ಹೊತ್ತಿನ

ಪರಿಸ್ಥಿತಿಯಿಂದ ವಿಚಲಿತನಾಗಿದ್ದ ನಾನು ಸುಮ್ಮನಿರುವುದು ಒಳ್ಳೆಯದಲ್ಲ ಎಂದುಕೊಂಡು ಎದ್ದು ನಿಂತೆ. ನಿಧಾನವಾಗಿ ವೇದಿಕೆಯ ಮೇಲೆ ಹೋದೆ. ಜನ ತಣ್ಣಗಾದರು. ಮಾತು ನಿಲ್ಲಿಸಿದರು. ನಾನು ನನಗೆ ತೋರಿದ ನಾಲ್ಕು ಮಾತುಗಳನ್ನು ಐದು ನಿಮಿಷ ಆಡಿದೆ: "ಮಿತ್ರರೆ, ನಿಮ್ಮ ಅಂತರಂಗದ ನೋವು ನಮಗೆಲ್ಲಾ ಅರಿವಾಗಿದೆ. ಆದರೆ ಈ ರೀತಿಯ ದಾರಿ ಹಿಡಿಯುವುದು ಸರಿಯಲ್ಲ. ನಮ್ಮ ಇಂದಿನ ಕಲಾಪವನ್ನು ಕಂಡು ಅನ್ಯರು ನಗುತ್ತಾರೆ. ಇದು ನಮ್ಮ ನಿಮ್ಮ ಹಿತದ ಪ್ರಶ್ನೆಯಲ್ಲ. ಕನ್ನಡದ ಮಾನ ಮರ್ಯಾದೆಯ ಪ್ರಶ್ನೆ. ದಯಮಾಡಿ ಶಾಂತಿಯಿಂದ ವರ್ತಿಸಿ ಸಮ್ಮೇಳನದ ಯಶಸ್ಸಿಗೆ ಸಹಕರಿಸಿ ಎಂದು ಕೈಮುಗಿದು ಕೇಳಿಕೊಳ್ಳುತ್ತೇನೆ" ಎಂದು ಹೇಳಿದೆ. ಆ ಮಾತುಗಳು ಜನರನ್ನು ಸಮಾಧಾನ ಪಡಿಸಿದವು.

ರಾಮಯ್ಯನವರು "ನೀವು ಸಮ್ಮೇಳನವನ್ನು ಉಳಿಸಿದಿರಿ' ಎಂದು ಹೇಳುತ್ತಾ ನನ್ನನ್ನು ತಬ್ಬಿಕೊಂಡರು. ಸಮ್ಮೇಳನಾಧ್ಯಕ್ಷರಾದ ಮೂರ್ತಿರಾಯರು "ತುಂಬ ಚೆನ್ನಾಗಿ ಹೇಳಿದಿರಿ. ನೀವು ಇವತ್ತು ಪರಿಷತ್ತನ್ನು ಉಳಿಸಿದಿರಿ; ನನ್ನನ್ನೂ ಉಳಿಸಿದಿರಿ" ಎಂದು ಕೈ ಕುಲುಕಿದರು. ಅವರು ಅಷ್ಟು ಭಾವೋದ್ರೇಕರಾದುದನ್ನು ನಾನೆಂದೂ ಕಂಡಿರಲಿಲ್ಲ. ಅದೊಂದು ಘಳಿಗೆ! ಆ ಗಲಾಟೆಯ, ಆ ಗಡಿಬಿಡಿಯ ಸಂದರ್ಭ ಹೀಗೆ ಮುಕ್ತಾಯ ಗೊಳ್ಳುತ್ತದೆ ಎಂದು ನಾನೂ ಭಾವಿಸಿರಲಿಲ್ಲ. ಆದರೆ ನನ್ನ ಅದೃಷ್ಟ!

ಮೂರ್ತಿರಾಯರು ಸುಮಾರು ಇಪ್ಪತ್ತೈದು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ಅರ್ಧದಷ್ಟು ಅನುವಾದ ಕೃತಿಗಳು. ಅವರ ಪ್ರಸಿದ್ಧಿಗೆ ಕಾರಣವಾದದ್ದು 'ಆಷಾಢಭೂತಿ' ಎಂಬ ನಾಟಕ (1931). ಇದು ಪ್ರಸಿದ್ಧ ಫ್ರೆಂಚ್ ಲೇಖಕ ಮೋಲಿಯೇರನ 'ತಾರ್ತುಫ್' ಎಂಬ ನಾಟಕದ ಆಧಾರದ ಮೇಲೆ ರಚಿತವಾದದ್ದು. ಇದರ ಜನಪ್ರಿಯತೆ, ಇದೊಂದು ಸ್ವಂತ ನಾಟಕವೋ ಎಂಬಂತೆ ಬೆಳೆದಿದೆ. ಮುಂದೆ ಇದು ಬೆಳ್ಳಿಯ ತೆರೆಯ ಮೇಲೂ ಕಾಣಿಸಿಕೊಂಡಿದೆ, 'ಸುಬ್ಬಾಶಾಸ್ತ್ರಿ' ಎಂಬ ಹೆಸರಿನಲ್ಲಿ! ಅದರಿಂದ ಇದರ ಜನಪ್ರಿಯತೆ ಇನ್ನಷ್ಟು ಬೆಳೆದಿದೆ. ಬೆಳೆಯುತ್ತಲೇ ಇದೆ.

**ಲಲಿತ ಪ್ರಬಂಧಗಳು**

'ಹಗಲುಗನಸುಗಳು' ಎಂಬುದು ಮೂರ್ತಿರಾಯರ ಆರಂಭದ ಏಳು ಲಲಿತ ಪ್ರಬಂಧಗಳ ಸಂಕಲನ. ಬೇರೆ ಬೇರೆ ನಿಯತಕಾಲಿಕಗಳಲ್ಲಿ ಪ್ರಕಟವಾಗಿದ್ದ ಈ ಪ್ರಬಂಧಗಳು ಪುಸ್ತಕ ರೂಪದಲ್ಲಿ ಮೊದಲು ಪ್ರಕಟವಾದದ್ದು 1937ರಲ್ಲಿ. ಲಲಿತ ಪ್ರಬಂಧಗಳ ಸಂಕಲನವೊಂದಕ್ಕೆ ಹೇಳಿ ಮಾಡಿಸಿದ ಹೆಸರು 'ಹಗಲುಗನಸುಗಳು.' ಕನ್ನಡದ ಆರಂಭದ ಲಲಿತ ಪ್ರಬಂಧಗಳ ಸಂಕಲನಗಳಲ್ಲಿ ಇದೂ ಒಂದು. ಈ ಸಂಕಲನ ಪ್ರಕಟವಾಗುತ್ತಲೇ ಮೂರ್ತಿರಾಯರು ಪ್ರಬಂಧಕಾರರೆಂದು ಹೆಸರಾಗಿ ಪ್ರಸಿದ್ಧಿಗೆ ಬಂದರು. 'ಅಲೆಯುವ ಮನ' (1957) ಮತ್ತು 'ಮಿನುಗು ಮಿಂಚು' (1962) ಅವರ ಇನ್ನೆರಡು ಪ್ರಬಂಧ ಸಂಕಲನಗಳು. ಮೊದಲಿನ ಸಂಕಲನದಲ್ಲಿ ಕೆನೆಗಟ್ಟಿರುವ ಲಲಿತಗುಣ ಈ ಇನ್ನೆರಡು ಸಂಕಲನಗಳಲ್ಲಿ ತೋರಿಸಿಕೊಳ್ಳುವುದಿಲ್ಲ. ಇವುಗಳಲ್ಲಿ ಒಂದೊಂದರಲ್ಲಿಯೂ ಒಂದೆರಡು ಅಂಥ ಪ್ರಬಂಧಗಳಿವೆ. ಉಳಿದವನ್ನು ಅವುಗಳೊಂದಿಗೆ ಹೋಲಿಸಲಾಗುವುದಿಲ್ಲ. ಈ ಮೂರು ಸಂಕಲನಗಳಿಂದಲೇ ತಮ್ಮ ಪ್ರಬಂಧಕಾರ

ಮೋಹಕವಾದ ಬರವಣಿಗೆ. ಈ ಬಗೆಯ ಪ್ರಬಂಧಗಳನ್ನು ಅವರು ಹೆಚ್ಚಿಗೆ ಬರೆಯದಿದ್ದರೆ ಏನಾಯಿತು? ಬರೆದ ಈ ಕೆಲವೇ ಪ್ರಬಂಧಗಳು ಸಾಕು, ಮುಂಬರುವ ಕಾಲದಲ್ಲಿ ಅವರ ಹೆಸರನ್ನು ಉಳಿಸಲು! ಮೂರ್ತಿರಾಯರ ಮತ್ತೊಂದು ಪ್ರಾರಂಭಿಕ ಪುಸ್ತಕ 'ಸಾಕ್ರಟೀಸನ ಕೊನೆಯ ದಿನಗಳು' ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದ ಈ ಪುಸ್ತಕದಲ್ಲಿ ಪ್ಲೇಟೋವಿನ ನಾಲ್ಕು ಸಂವಾದಗಳ, ಇಂಗ್ಲಿಷನ್ನು ಅನುಸರಿಸಿದ ಭಾಷಾಂತರಗಳಿವೆ. 'ಎಂಥಿಫ್ರೋ', 'ಕ್ರಿಟೋ', 'ಅಪಾಲಜಿ' ಮತ್ತು 'ಫೀಡೋ' ಎಂಬ ನಾಲ್ಕು ಸಂವಾದಗಳಿವೆ. ಜೊತೆಗೆ ಸಾಕ್ರಟೀಸನ ಜೀವನವನ್ನು ಸಂವಾದಗಳ ಸಾಹಿತ್ಯಿಕ ಹಾಗೂ ದಾರ್ಶನಿಕ ಮಹತ್ವವನ್ನು ಕುರಿತ ವಿಮರ್ಶಾತ್ಮಕ ಪೀಠಿಕೆಯೂ ಇದೆ. ಈ ಬಗೆಯ ಪುಸ್ತಕ ಕನ್ನಡದಲ್ಲಿ ಇದೇ ಮೊದಲನೆಯದು ಎಂದರೆ ತಪ್ಪಾಗಲಾರದು. ಈ ಭಾಷಾಂತರ ಮೂರ್ತಿರಾಯರಿಗೆ ಪ್ರಾಚೀನ ಸಾಹಿತ್ಯದಲ್ಲಿದ್ದ ಆಸಕ್ತಿಯನ್ನು ತೋರಿಸುತ್ತದೆ.

ಕೈವಾರ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ ಮೂರ್ತಿರಾಯರು ಹೇಳುತ್ತಾರೆ : "ಲಲಿತ ಸಾಹಿತ್ಯ ಹುಟ್ಟಿನಿಂದಲೆ ಮೋಹಕವಾದದ್ದು. ಜೊತೆಗೆ ನಾವು ಅದಕ್ಕೆ ಕೊಟ್ಟಿರುವ ಪ್ರಾಶಸ್ತ್ಯ ಪ್ರಚಾರಗಳಿಂದಾಗಿ ಅದರ ಸುತ್ತ ಮಳೆ ಬಿಲ್ಲಿನ ವರ್ಣ ಸಂಪತ್ತುಳ್ಳ ಪ್ರಭಾವಲಯ ಕಂಗೊಳಿಸುತ್ತಿದೆ. ಅದಕ್ಕಾಗಿ ಸಂತೋಷ ಪಡೋಣ. ಆದರೆ ಆ ಪ್ರಾಶಸ್ತ್ಯ ಪ್ರಚಾರಗಳು ಅದೇ ಪ್ರಮಾಣದಲ್ಲಿ ವಿಚಾರ ಸಾಹಿತ್ಯಕ್ಕೂ ಸಲ್ಲುವಂತೆ ಮಾಡುವುದು ಅವಶ್ಯಕ ಎನ್ನಿಸುತ್ತದೆ. ಲಲಿತ ಸಾಹಿತ್ಯ ನಿರ್ಮಾಪಕರ ಹೆಸರು ಜನರ ಬಾಯಲ್ಲಿ ಓಡಾಡುವಂತೆ ವಿಚಾರ ಸಾಹಿತ್ಯ ಬರೆದವರ ಹೆಸರು ಓಡಾಡುತ್ತಿಲ್ಲ. ಅದು ಸ್ವಾಭಾವಿಕ ಎನ್ನಬಹುದು. ಆದರೆ ಸ್ವಾಭಾವಿಕವಾದದ್ದೆಲ್ಲ ನ್ಯಾಯವಲ್ಲ; ಪ್ರಗತಿಪರವೂ ಅಲ್ಲ. ನಮ್ಮೆಲ್ಲರ ಗಮನ ವಿಚಾರ ಸಾಹಿತ್ಯದ ಕಡೆಗೆ ಹೆಚ್ಚು ಹೆಚ್ಚಾಗಿ ಹರಿಯುವುದು ಅತ್ಯವಶ್ಯಕ." ಈ ಮಾತುಗಳು ಅವರ ದೃಷ್ಟಿಯನ್ನು ಸೂಚಿಸುತ್ತವೆ. ಇದಕ್ಕೆ ಅನುಗುಣ ವಾಗಿ ಅವರು ವಿಚಾರ ಸಾಹಿತ್ಯಕ್ಕೆ ಪ್ರಾಶಸ್ತ್ಯ ಕೊಟ್ಟಿದ್ದಾರೆ.

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ 'ಚಿತ್ರಗಳು-ಪತ್ರಗಳು' ಎಂಬ ಪುಸ್ತಕದಲ್ಲಿ ಎರಡು ಭಾಗಗಳಿವೆ. ಒಂದು ಡಾ. ರಾಧಾಕೃಷ್ಣನ್, ಎಸ್.ಎಸ್. ಸುಬ್ಬರಾವ್, ಬಿ.ಎಂ.ಶ್ರೀ ಮುಂತಾದ, ಅವರ ಗುರುಗಳೂ ಗೆಳೆಯರೂ ಆದ ಹನ್ನೆರಡು ಜನರ ವ್ಯಕ್ತಿಚಿತ್ರಗಳಿವೆ. ಈ ವ್ಯಕ್ತಿ ಚಿತ್ರಗಳು ಅವರ ಆತ್ಮಕಥೆಯ ಭಾಗಗಳೇ ಆಗಿವೆ. ಇನ್ನೊಂದು ಭಾಗದಲ್ಲಿ ತೀ.ನಂ. ಶ್ರೀಕಂಠಯ್ಯನವರಿಗೆ, ಮಗ ಸುಬ್ಬರಾಮಯ್ಯನವರಿಗೆ, ಸೊಸೆ ನ್ಯಾನ್ಸಿ ನಾಗರಾಜ್ ಅವರಿಗೆ ಬರೆದ 76 ಪತ್ರಗಳ ಗೊಂಚಲು ಇದೆ. ಈ ಗೊಂಚಲು ತೀರ ವಿರಳವಾದ ನಮ್ಮ ಪತ್ರಸಾಹಿತ್ಯಕ್ಕೆ ಸಂದ ಅತ್ಯುತ್ತಮ ಕೊಡುಗೆಯಾಗಿದೆ. ತಮ್ಮ ಹೆಂಡತಿ ತೀರಿಹೋದ ಎರಡನೆಯ ದಿನ ಅವರು ವಿದೇಶದಲ್ಲಿದ್ದ ತಮ್ಮ ಮಗನಿಗೆ ಬರೆದ ಕಾಗದ ಅವರು ಎಂಥ ಸಮಚಿತ್ತರು ಎಂಬುದನ್ನು ಹೇಳುತ್ತದೆ. ಅಲ್ಲದೆ ಯಾವುದೇ ಆಡಂಬರವಿಲ್ಲದ ಅವರ ಬರವಣಿಗೆ ನಮ್ಮ ಹೃದಯವನ್ನು ತಟ್ಟುತ್ತದೆ. ಅದನ್ನು ಓದುವಾಗ ಕಣ್ಣುಗಳು ಮಂಜಾಗುತ್ತವೆ.

'ಅಪರ ವಯಸ್ಕನ ಅಮೇರಿಕಾ ಯಾತ್ರೆ' ವಿಶಿಷ್ಟವಾದ ಒಂದು ಪ್ರವಾಸ ಕಥನ. ಮೂರ್ತಿರಾಯರು ಸ್ವಭಾವತಃ ವಿಚಾರಶೀಲರು. ಅವರ ಬರವಣಿಗೆಯಲ್ಲಿರುವ

ಕೋಮಲವಾದ ಧ್ವನಿಪೂರ್ಣ ಹಾಸ್ಯ ವಿಶಿಷ್ಟವಾದದ್ದು. ಪಾಂಡಿತ್ಯದ ಭಾರವಿಲ್ಲದ ಈ ಬರವಣಿಗೆಯ ಓದಿನಲ್ಲಿ ಉಲ್ಲಾಸ ಚಿಮ್ಮುತ್ತದೆ. ಈ ಪುಸ್ತಕ ಪ್ರವಾಸ ಕಥನವೇ ಆಗಿದ್ದರೂ ಅದರಲ್ಲಿ ಆತ್ಮಕಥೆಯ ಎಳೆಗಳೂ ಸೇರಿಕೊಂಡಿವೆ. ಇದರಿಂದ ಸಮಗ್ರ ನಿರೂಪಣೆಗೆ ಒಂದು ಬಗೆಯ ಆತ್ಮೀಯತೆಯ ಸೊಗಡು ಸೇರಿರುವಂತೆ ತೋರುತ್ತದೆ. ಅದರಿಂದ ಬರವಣಿಗೆಯ ಆಕರ್ಷಣೆ ಹೆಚ್ಚುತ್ತದೆ. ರಾಜ ನ್ಯಾಸ್ವಿಯರ ಮದುವೆ ಪ್ರಕರಣವನ್ನು ಓದುತ್ತಿದ್ದಾಗ, ಯಾವುದೋ ಕಾದಂಬರಿಯನ್ನು ಓದುತ್ತಿರುವಂತೆ ಭಾಸವಾಗುತ್ತದೆ. ಈ ಎಲ್ಲ ಲಲಿತ ಗುಣಗಳಿಂದ ಪುಸ್ತಕದ ಬರವಣಿಗೆ ತುಂಬ ಅಪರೂಪದ್ದಾಗಿ ಕಾಣುತ್ತದೆ.

'ಸಂಜೆಗಣ್ಣಿನ ಹಿನ್ನೋಟ' ಎನ್ನುವುದು ಮೂರ್ತಿರಾಯರ ಆತ್ಮಕಥೆ. ಇದರಲ್ಲಿ ಈ ಶತಮಾನದ ಹೆಚ್ಚುಕಡಿಮೆ ತೊಂಬತ್ತು ವರ್ಷಗಳ ಕಥೆ ಜರುತ್ತದೆ. ಮೂರ್ತಿರಾಯರು ವ್ಯಕ್ತಪಡಿಸುವ ಅಭಿಪ್ರಾಯಗಳು ಯಾವಾಗಲೂ ಸಮತೋಕದವಾಗಿರುತ್ತವೆ. ಅದರಲ್ಲಿ ಯಾವ ಪೂರ್ವಗ್ರಹಗಳೂ ಕಾಣಿಸುವುದಿಲ್ಲ. ಇಷ್ಟು ನಿರ್ವಿಕಾರವಾಗಿ ಬದುಕನ್ನು ನೋಡುವ ಆತ್ಮಕಥೆ ಕನ್ನಡದಲ್ಲಿ ಇನ್ನೊಂದಿದೆ ಎಂದು ನಾನು ಹೇಳಲಾರೆ. 'ಷೇಕ್ಸ್‌ಪಿಯರ್' ಎಂಬ ಪುಸ್ತಕ ಒಂದು ಅನನ್ಯವಾದ ಕೃತಿ. ಅದರ ಮೊದಲನೆಯ ಭಾಗ ಮಾತ್ರ ಪ್ರಕಟಗೊಂಡಿದೆ. ಮುಂದಿನ ಭಾಗಕ್ಕಾಗಿ ಕನ್ನಡಿಗರು ಎಷ್ಟುಕಾಲ ಕಾಯಬೇಕೋ? ಮೂರ್ತಿರಾಯರಷ್ಟು ಸಮರ್ಥರಾದ ಇನ್ನೊಬ್ಬ ಲೇಖಕರು ಬಂದು ಆ ಕೆಲಸ ಮುಗಿಸುವುದು ಕನಸಿನ ಮಾತೇ ಸರಿ. 'ದೇವರು' ಎನ್ನುವುದು ಅವರಿಗೆ ಪಂಪ ಪ್ರಶಸ್ತಿಯನ್ನು ತಂದುಕೊಟ್ಟ ವೈಚಾರಿಕ ಕೃತಿ. ಅನಾದಿ ಕಾಲದಿಂದಲೂ ದೇವರಿದ್ದಾನೆ. ಅಂದಿನಿಂದಲೇ ಅವನಿದ್ದಾನೆಯೇ ಎಂಬ ಪ್ರಶ್ನೆಯೂ ಇದೆ. ಆ ಪ್ರಶ್ನೆಗೆ ಮೂರ್ತಿರಾಯರು ಇಲ್ಲಿ ತಮ್ಮ ದೃಷ್ಟಿಕೋನದಂತೆ ಉತ್ತರ ಕೊಟ್ಟಿದ್ದಾರೆ. ಇದೊಂದು ಸರಳ, ಸುಂದರ ಪುಸ್ತಕ. ದೇವರನ್ನು ಕುರಿತಂತೆ ಇಷ್ಟು ಸಲೀಸಾಗಿ ವಿಚಾರ ಮಾಡುವವರನ್ನು ವಿರಳರೆಂದೇ ಹೇಳಬೇಕು. 'ಗಾನವಿಹಾರ', 'ಸಾಹಿತ್ಯ ಮತ್ತು ಸತ್ಯ', 'ವಿಮರ್ಶಾತ್ಮಕ ಪ್ರಬಂಧಗಳು' – ಮೂರ್ತಿರಾಯರ ವೈಚಾರಿಕ ಪ್ರಬಂಧಗಳ ಸಂಕಲನಗಳು.

ಆಳವಾದ ಅಧ್ಯಯನ ಮೂರ್ತಿರಾಯರ ಬರವಣಿಗೆಗೆ ದೃಢತೆಯನ್ನೊದಗಿಸಿದೆ. "ದೇಶವನ್ನು ನೋಡಿ, ಕೋಶವನ್ನು ಓದಿರುವ" ಅವರು ಇನ್ನೂ ಬಹುಕಾಲ ಆರೋಗ್ಯವಂತರಾಗಿರಲಿ ಎಂಬುದೇ ಈ ಹೊತ್ತಿನ ಹಾರೈಕೆ. ಇಂಗ್ಲಿಷ್ ತತ್ವಜ್ಞಾನಿ ಸ್ಯಾಮ್ಯುಯಲ್ ಅಲೆಗ್ಸಾಂಡರ್ ಬೇರೊಂದು ಸಂದರ್ಭದಲ್ಲಿ ವ್ಯಕ್ತಪಡಿಸಿದ ಮಾತುಗಳೊಡನೆ ಈಗಾಗಲೇ ದೀರ್ಘವಾಗಿ ಬೆಳೆದ ಈ ಬರಹ ಮುಗಿಸಬಹುದು: ಮೂರ್ತಿರಾಯರು "ಬಹಳ ದೊಡ್ಡ ವ್ಯಕ್ತಿ. ದೊಡ್ಡ ಕಲೆಗಾರರು, ಜ್ಞಾನ ಗೆಲವುಗಳ ಬತ್ತಲಾರದ ಚಿಲುಮೆ, ಪ್ರಿಯತಮರಾದ ಸ್ನೇಹಿತರು – ಇಂಥವರ ವಿಷಯದಲ್ಲಿ ನನಗಿರುವ ಕೃತಜ್ಞತೆಯನ್ನು ಸ್ವಲ್ಪಮಟ್ಟಿಗೆ ತಿಳಿಸುವ ಪ್ರಯತ್ನ ಮಾಡಿದ್ದೇನೆ."

# ನೂರು ತುಂಬಿದ ಮುಗ್ಧ ಜೀವಿ ಮೂರ್ತಿರಾವ್

ಎಸ್. ಪಟ್ಟಾಭಿರಾಮನ್

ಕನ್ನಡದ ಆಚಾರ್ಯ ಬಿ.ಎಂ.ಶ್ರೀ ಅವರ ಪರಂಪರೆಯಲ್ಲಿ ಮೂರು ದಶಕಗಳ ಕಾಲ ಸಹಸ್ರಾರು ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಪಾಠ ಹೇಳಿ, ಇದಕ್ಕೂ ಮಿಗಿಲಾಗಿ ಕರ್ನಾಟಕದ ಉದ್ದಗಲಕ್ಕೂ ಸಂಚರಿಸಿ, ಕನ್ನಡ ಸಾಹಿತ್ಯ ಸಂದೇಶವನ್ನು ಅಸಂಖ್ಯ ಕನ್ನಡಿಗರಿಗೆ ಸಾರಿದ ಪ್ರೊ. ಅಕ್ಕಿಹೆಬ್ಬಾಳು ನರಸಿಂಹ (ಎ.ಎನ್.) ಮೂರ್ತಿರಾಯರು ತೊಂಬತ್ತೊಂಬತ್ತು ವರ್ಷಗಳನ್ನು ಸಾರ್ಥಕ ರೀತಿಯಲ್ಲಿ ಕಳೆದು ತಮ್ಮ ನೂರನೇ ವರ್ಷಕ್ಕೆ ಪದಾರ್ಪಣ ಮಾಡುತ್ತಿದ್ದಾರೆ. ಆ ಕಾಲದಲ್ಲಿ (1925ರಿಂದ 1995) ಇಂಗ್ಲಿಷ್ ಅಧ್ಯಾಪಕ ಪ್ರಾಧ್ಯಾಪಕರಾಗಿದ್ದ ಹಮ್ಮು-ಬಿಮ್ಮು ಇಲ್ಲದ ಸರಳ, ಸಾದಾ, ಮುಗ್ಧ ಸ್ವಭಾವ, ಹಿತಮಿತವಾದ ಜೀವನ, ಮನೆ ಮಂದಿ, ನೆಂಟರಿಷ್ಟರು, ಶಿಷ್ಯರು, ಮಿತ್ರರು- ಹೀಗೆ ಆಬಾಲ ವೃದ್ಧರಾದಿಯಾಗಿ ಎಲ್ಲರೊಂದಿಗೆ ಸುಲಭವಾಗಿ ಬೆರೆಯುವ ವ್ಯಕ್ತಿತ್ವ, ಗುಣ.

ಯಶಸ್ವಿಯಾಗಿ 99 ವರ್ಷ ಕಳೆದಿರುವ ಪ್ರೊ. ಮೂರ್ತಿರಾಯರು ಇಂದಿಗೂ ಉಲ್ಲಸಿತರಾಗಿದ್ದಾರೆ. ಕುಗ್ಗದ ಜೀವನ ಉತ್ಸಾಹ, ಮಾಸದ ದೃಷ್ಟಿ, ಮಂದವಾಗದ ಕಿವಿ, ಬಾಗದ ಬೆನ್ನು. ಸ್ವಲ್ಪವೂ ಆಲಸ್ಯವಿಲ್ಲದೆ ಬಂದವರೊಡನೆ ಸಂಭಾಷಿಸುತ್ತಾರೆ. ಬಂದವರಿಗೇ ಇವರಿಗೆ ಆಯಾಸವಾದೀತೇನೋ? ಎಂಬ ಅಳುಕು. ಆದರೆ ಎರಡು ಮೂರು ಗಂಟೆಗಳಿಗೂ ಮಿಕ್ಕು, ಕೂತು ಪತ್ರಕರ್ತರ ಪ್ರಶ್ನೆಗಳಿಗೆ ಉತ್ತರಿಸಲು ರಾಯರು ಸಿದ್ಧ. "ಸಂಕೋಚ ಪಡಬೇಡಿ. ನನಗೆ ಇನ್ನೇನು ಕೆಲಸ? ನಾನು ಇನ್ನೇನು ಮಾಡಬೇಕು? ಕೇಳಿ" ಎಂದು ರಾಯರಿಂದಲೇ ಸಿದ್ಧ ಪ್ರತಿಕ್ರಿಯೆ.

### ಹಿರಿಯ ಅಜ್ಜ

ಕನ್ನಡದ ಅತ್ಯಂತ ಹಿರಿಯ ಅಜ್ಜ ಪ್ರೊ. ಮೂರ್ತಿರಾಯರು ಕನ್ನಡಿಗರಿಗೆ ಈ ಸಂಬಂಧದಲ್ಲಿ ತಾವು ನೀಡುವ ಸಂದೇಶ ಏನೂ ಇಲ್ಲ ಎಂಬ ವಿನಯ ಪೂರ್ವಕ ಉತ್ತರ. ಅಂತೆಯೇ ಕನ್ನಡ ಸಾಹಿತ್ಯ ಎತ್ತ ಸಾಗಬೇಕು? ಎಂಬ ಪ್ರಶ್ನೆಗೆ ಕಳೆದ 15-20 ವರ್ಷಗಳಿಂದ ತಮಗೆ ಸಾಹಿತ್ಯದ ಸಂಪರ್ಕವಿಲ್ಲ. ಅಷ್ಟೊಂದು ಪುಸ್ತಕಗಳನ್ನು ಓದಲಾಗಿಲ್ಲ ಎಂಬ ಒಪ್ಪಿಗೆ. ಆದರೆ ತಮ್ಮ ಗುರುಗಳಾದ ಆಚಾರ್ಯ ಬಿ. ಎಂ. ಶ್ರೀಕಂಠಯ್ಯ ಅವರು 'ಕನ್ನಡಕ್ಕೆ ಹೊಸ ರೂಪ' ನೀಡಿದ್ದನ್ನು ನೆನೆದರು. ಅಲ್ಲಿಯವರೆಗೂ ಷಟ್ಪದಿಯೇ ಇದ್ದು, "ಬಿ.ಎಂ.ಶ್ರೀ. ಹೊಸ ದಾರಿಯಲ್ಲಿ ನಡೆದರು. ಅದೇ ದಾರಿಯಲ್ಲೇ ನಾವೂ ನಡೀಬೇಕು. ನವ್ಯದಲ್ಲಿ ಪ್ರಯೋಗ, ಬದಲಾವಣೆ ಮಾಡ್ತಾ ಇರಬೇಕು. ಅದೇ ಪ್ರಗತಿಯ ಹಾದಿ" ಎಂದು ಸೂಚ್ಯವಾಗಿ ತಿಳಿಸಿದರು.

ಬಿ ಎಂ ಶ್ರೀ ಕನ್ನಡ ಚಳುವಳಿಯ ಚಾಲನಶಕ್ತಿಯಾಗಿದ್ದರು ಎಂದು ಸೇರಿಸಿದರು. ಮೂಲತಃ ತಾವೊಬ್ಬ ಅಧ್ಯಾಪಕ. "ನಾನು ಆ ವೃತ್ತಿಯನ್ನು, ಪಾಠಹೇಳುವುದನ್ನು ಚೆನ್ನಾಗಿ ಅನುಭವಿಸಿದ್ದೇನೆ. ಪುನರ್ಜನ್ಮ ಇರೋದಾದರೆ ನಾನು ಮತ್ತೆ ಅಧ್ಯಾಪಕನಾಗಬಯಸುತ್ತೇನೆ" ಎಂದು ತಮ್ಮ ಅಪೇಕ್ಷೆಯನ್ನು ವ್ಯಕ್ತಪಡಿಸಿದರು. ಸಾಹಿತ್ಯ ವಿದ್ಯಾರ್ಥಿಯಾಗಿ ಯಾವಾಗಲೂ ಓದಿನಲ್ಲಿ ನಿರತರಾಗಿರುತ್ತಿದ್ದ ಪ್ರೊ. ಮೂರ್ತಿರಾಯರಿಗೆ ಕರ್ನಾಟಕ ಶಾಸ್ತ್ರೀಯ ಸಂಗೀತದ ಕೇಳ್ಮೆಯಲ್ಲಿ ಇನ್ನಿಲ್ಲದ ಗೀಳು. ಬೇಕೆನಿಸಿದಾಗ ತಮ್ಮ ಮೆಚ್ಚಿನ ಎಂ.ಎಸ್.ಸುಬ್ಬುಲಕ್ಷ್ಮಿ ಮತ್ತಿತರ ಸಂಗೀತಗಾರರ ಕ್ಯಾಸೆಟ್ ಕೇಳುವ ಹವ್ಯಾಸ. ಡಾ. ಎಸ್. ರಾಮನಾಥನ್ ಅವರ ಸಂಗೀತವೆಂದರೆ ರಾಯರಿಗೆ ಮೈಯೆಲ್ಲ ಕಿವಿ. ಒಮ್ಮೆ ಅವರ ಅಪೇಕ್ಷೆಯನ್ನರಿತ ಶಿಷ್ಯರೊಬ್ಬರು ಡಾ. ರಾಮನಾಥನ್ ಅವರನ್ನು ವಿಶೇಷವಾಗಿ ಮದರಾಸಿನಿಂದ ಕರೆಸಿ ಸಂಗೀತ ಕಛೇರಿ ಮಾಡಿಸಿದ್ದರು. ಸಂದರ್ಶಕರು ಇಲ್ಲದಾಗ ತಮ್ಮ ಇಷ್ಟದ ಕೀರ್ತನೆಗಳನ್ನೋ, ಹಾಡುಗಳನ್ನೋ ರಾಯರು ಮೆಲ್ಲಗೆ ಹೇಳಿಕೊಳ್ಳುತ್ತಿರುತ್ತಾರೆ. ಮೈಸೂರಿನ ಖ್ಯಾತ ಪಿಟೀಲುವಾದಕ ಟಿ.ಚೌಡಯ್ಯ ಅವರು ಸಂಗೀತ ಪಾಠ ಹೇಳಿಕೊಡಲು ಮುಂದೆ ಬಂದಿದ್ದರಂತೆ. ಆವರೆ "ನೀವು ಇವತ್ತು ಈ ಊರು, ನಾಳೆ ಮದರಾಸು, ನಾಳಿದ್ದು ಇನ್ನೆಲ್ಲೋ. ನನಗೆ ತಪ್ಪದೆ ಹೇಗೆ ಪಾಠ ಹೇಳಲು ನಿಮಗೆ ಸಾಧ್ಯ? ಎಂದು ಹೇಳಿದೆ. ಹಾಗಾಗಿ ನನ್ನ ಸಂಗೀತಾಭ್ಯಾಸ ಶುರು ಆಗಲೇ ಇಲ್ಲ" ಎಂದು ರಾಯರು ನಗುತ್ತಾ ನೆನಪಿಸಿಕೊಂಡರು.

## ಆರೋಗ್ಯದ ಗುಟ್ಟು

ಬೆಳಗಿನ ಜಾವ ಐದು ಗಂಟೆಗೆಲ್ಲ ಏಳುವ ರಾಯರು 6 ರಿಂದ 7ರವರೆಗೆ ಯಾರ ಜೊತೆ, ಕೊನೆಗೆ ಊರುಗೋಲೂ ಇಲ್ಲದೆ ಪ್ರತಿದಿನ ತಪ್ಪದೆ ನಡೆಯುತ್ತಾರೆ. ಇಂದಿಗೂ ಲವಲವಿಕೆಯಿಂದಿರುವ ರಾಯರ ಆರೋಗ್ಯದ ಗುಟ್ಟಿನ ಬಗ್ಗೆ ಕೇಳಿದಾಗ "ನಾನು ಉದ್ವೇಗ ಭಾವಾವೇಶಕ್ಕೆ ಒಳಗಾಗುವುದಿಲ್ಲ. ಹೆಚ್ಚು ಖಾರ ತಿನ್ನುವುದಿಲ್ಲ. ಹಸಿವಾಗದೆ ಊಟ ಮಾಡುವುದಿಲ್ಲ. ಏನನ್ನೂ ತಿನ್ನುವುದಿಲ್ಲ" ಎನ್ನುವ ಮೂಲಕ ತಮ್ಮ ಒಳ್ಳೆಯ ಆರೋಗ್ಯದ ಹಿನ್ನೆಲೆಯನ್ನು ಬಿಡಿಸಿ ಹೇಳಿದರು. ನಿತ್ಯ ಕಾಯಕವಾದ ದೀರ್ಘ ನಡಿಗೆ ಮುಖ್ಯ ಕಾರಣ ಎನ್ನುವುದನ್ನು ಹೇಳಬೇಕಾಗಿಲ್ಲ. ಹಿಂದೆ ಮೈಸೂರಿನ ಚಾಮುಂಡಿಪುರದ ಮನೆಯಿಂದ ಮಾನಸಗಂಗೋತ್ರಿಯವರೆಗೆ ನಾಲ್ಕೈದು ಕಿ. ಮೀ. ದೂರ ಪ್ರತಿದಿನ ನಡೆಯುತ್ತಿದ್ದುದನ್ನು ಇಲ್ಲಿ ನೆನೆಯಬಹುದು. ಮುಂಜಾನೆಯ ನಡಿಗೆ, ಮನೆಗೆ ವಾಪಸ್ಸಾದ ಮೇಲೆ ವೃತ್ತಪತ್ರಿಕೆ, ಪುಸ್ತಕಗಳ ಮೇಲೆ ಕಣ್ಣು ಹಾಯಿಸುವುದು, ಬಂದವರೊಡನೆ ಹರಟೆ, ಸಂಗೀತ ಕ್ಯಾಸೆಟ್‌ಗಳ ಆಲಿಕೆ ರಾಯರ ದಿನಚರಿ.

ಮಂಡ್ಯ ಜಿಲ್ಲೆಯ ಅಕ್ಕಿ ಹೆಬ್ಬಾಳಿನಲ್ಲಿ ನಡೆದ ಆರಂಭಿಕ ಶಿಕ್ಷಣ ಬಿಟ್ಟರೆ ಬಳಿಕ ಓದಿದ್ದೆಲ್ಲ ಮೈಸೂರಿನಲ್ಲೇ. ವೆಸ್ಲಿಯನ್ ಮಿಷನ್ ಹೈಸ್ಕೂಲ್, ಆಮೇಲೆ ಮಹಾರಾಜ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರಿಂದ ಇಂಗ್ಲಿಷ್ ಸಾಹಿತ್ಯಾಭ್ಯಾಸ. ಇಂಗ್ಲಿಷ್ ಎಂ.ಎ ವ್ಯಾಸಂಗವೂ ಮಹಾರಾಜ ಕಾಲೇಜಿನಲ್ಲೇ. ಮಹಾರಾಜ ಪ್ರೌಢಶಾಲೆ, ನಂತರ ಮಹಾರಾಜ ಕಾಲೇಜಿನಲ್ಲಿ 13 ವರ್ಷಗಳ ಕಾಲ ಇವರಿಂದ ಪಾಠ ಕೇಳುವ ಸದವಕಾಶ ಸಹಸ್ರಾರು ವಿದ್ಯಾರ್ಥಿಗಳಿಗೆ. ಶಿವಮೊಗ್ಗದ ಇಂಟರ್‌ಮೀಡಿಯಟ್ ಕಾಲೇಜಿನಲ್ಲಿ ವೃತ್ತಿ ಮುಂದುವರಿಕೆ. ಈ ಮಧ್ಯೆ 1943 ರಿಂದ 1947 ರವರೆಗೆ ಮೈಸೂರು ಆಕಾಶವಾಣಿ

ನಿಲಯದಲ್ಲಿ ಇವರ ಸೇವೆ. ಆಕಾಶವಾಣಿಗೆ ಇವರ ಕೊಡುಗೆ ಅಪಾರ. 1955 ರಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ನಿವೃತ್ತರಾದ ರಾಯರಿಂದ ರಾಜ್ಯ ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕರಾಗಿ (1956–59), ಕನ್ನಡ ಸಾಹಿತ್ಯ ಪರಿಷತ್ ಕಾರ್ಯದರ್ಶಿಯಾಗಿ, ಅಧ್ಯಕ್ಷರಾಗಿ (1954–56) ಕನ್ನಡ ಸಾಹಿತ್ಯಕ – ಸಾಂಸ್ಕೃತಿಕ ಸೇವೆ ಸಂದಿದೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಕನ್ನಡ ಸಲಹಾ ಸಮಿತಿ ಸಂಚಾಲಕರಾಗಿ, ದಕ್ಷಿಣ ಭಾಷಾ ಪುಸ್ತಕ ಟ್ರಸ್ಟ್ ಅಧ್ಯಕ್ಷರಾಗಿ ನಿಷ್ಠಾವಂತ ಸೇವೆ ಸಲ್ಲಿಸಿದ್ದಾರೆ.

1977ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಿ'ಲಿಟ್ ಪದವಿ ನೀಡಿ ಗೌರವಿಸಿದರೆ, 1984 ರಲ್ಲಿ ರಾಜ್ಯೋತ್ಸವ ಪ್ರಶಸ್ತಿ, 1997 ರಲ್ಲಿ ಪಂಪ ಪ್ರಶಸ್ತಿ, ಇತ್ತೀಚೆಗೆ ಮಾಸ್ತಿ, ಗೊರೂರು ಪ್ರಶಸ್ತಿಗಳೂ ಇವರನ್ನು ಹುಡುಕಿಕೊಂಡು ಬಂದಿವೆ. ಜ್ಞಾನಪೀಠ ಪ್ರಶಸ್ತಿ ಬಿಟ್ಟರೆ ಪ್ರೊ. ಮೂರ್ತಿರಾಯರಿಗೆ ಬೇರೆಲ್ಲ ಸಾಹಿತ್ಯಕ ಪ್ರಶಸ್ತಿಗಳೂ ಲಭ್ಯವಾಗಿವೆ.

## ನಾಸ್ತಿಕರಲ್ಲ

ಪ್ರೊ. ಮೂರ್ತಿರಾಯರು 'ದೇವರು' ಪುಸ್ತಕ ಬರೆದ ಮೇಲೆ ಇವರು ನಾಸ್ತಿಕರೇ? ಎಂಬ ಅನುಮಾನ ಹಲವರಿಗೆ. ಆದರೆ ರಾಯರು "ಇಲ್ಲ, ನಾನು ಆಸ್ತಿಕ. ಒಳ್ಳೆಯ ತನದಲ್ಲಿ ನನಗೆ ನಂಬಿಕೆ ಇದೆ. ನಮ್ಮ ನೆರೆಯವರಿಗೆ ಉಪಯುಕ್ತವಾಗಿರುವುದು, ಕಷ್ಟದಲ್ಲಿರುವವರಿಗೆ ನೆರವಾಗುವುದೇ ನನಗೆ ದೇವರು. ಮಾನವಕುಲದ ಸೇವೆಯೇ, ದೇವರು" ಎಂದು ವಿಶ್ಲೇಷಿಸಿದರು. ರಾಯರ ಯಾವ ಪುಸ್ತಕವೂ ಇಂಗ್ಲಿಷಿಗೆ ಭಾಷಾಂತರವಾಗಿಲ್ಲದ ಕಾರಣ ಜ್ಞಾನಪೀಠ ಪ್ರಶಸ್ತಿ ಬಂದಿಲ್ಲ. ಈಗ ಇವರ 'ದೇವರು' ಮತ್ತು 'ಸಂಜೆಗಣ್ಣಿನ ಹಿನ್ನೋಟ' ಪುಸ್ತಕಗಳನ್ನು ಇವರ ಮಗ ಎ.ಎಸ್. ಸುಬ್ಬರಾಮಯ್ಯ ಇಂಗ್ಲಿಷಿಗೆ ಅನುವಾದಿಸುತ್ತಿದ್ದಾರೆ. ಬಳಿಕ ರಾಯರ ಈ ಪುಸ್ತಕಗಳು ಜ್ಞಾನಪೀಠ ಪ್ರಶಸ್ತಿಗೆ ಅರ್ಹತೆ ಪಡೆಯುತ್ತವೆ.

ಈಗ ಸಾಹಿತ್ಯ, ಸಂಗೀತ, ಸಲ್ಲಾಪದಲ್ಲಿ ತಲ್ಲೀನರಾಗಿರುವ ಪ್ರೊ. ಎ.ಎಸ್. ಮೂರ್ತಿರಾಯರು ತಮ್ಮ ಕೊನೆಯ ದಿನಗಳನ್ನು ಮೈಸೂರಿನ ತಮ್ಮ ಸ್ವಂತ ಮನೆಯಲ್ಲೇ ತಮ್ಮ ಮಗನ ಜೊತೆಯಲ್ಲಿ ಕಳೆಯಲು ಅಪೇಕ್ಷಿಸಿದ್ದಾರೆ.

ಬಾಡಿಗೆದಾರರು ಇನ್ನು ಹೆಚ್ಚು ಸತಾಯಿಸದೆ ರಾಯರ ಅಪೇಕ್ಷೆಯನ್ನು ಈಡೇರಿಸಿಯಾರೆಂಬ ಆಶಯ ಅಭಿಮಾನಿಗಳಿಗೆ–ಶಿಷ್ಯರಿಗೆ. ಇಂಥ ಹಿರಿಯ ಜೀವವನ್ನು ಪಡೆದಿರುವುದು ಕನ್ನಡ ನಾಡಿನ ಹಿರಿಮೆಯಲ್ಲವೇ? ಈ ಶುಭ ಸಂದರ್ಭದಲ್ಲಿ ಕನ್ನಡದ ಹೆಮ್ಮೆಯ ಪುತ್ರ ಶತಾಯು, ಸುಮನಸ್ಕ ವಿದ್ವಾಂಸರಿಗೆ ಕನ್ನಡಿಗರ ನಮನಗಳು.

# ನೂರರ ಹರಯದ ಜ್ಞಾನಯೋಗಿ 

ಟಿ. ಮಹಾಬಲೇಶ್ವರ ಭಟ್ಟ

ಕನ್ನಡ ಸಾಹಿತ್ಯದ ಅತ್ಯಂತ ಹಿರಿಯ ವ್ಯಕ್ತಿ ಎ. ಎಸ್. ಮೂರ್ತಿರಾಯರು. ಅವರಿಗೆ ಇದೇ ಜೂನ್ 15ಕ್ಕೆ 99 ವರ್ಷ ತುಂಬಿ ಒಂದು ನೂರನೇ ವರ್ಷ ಪ್ರಾರಂಭ ವಾಗುತ್ತದೆ. ಒಬ್ಬ ಸಾಹಿತಿ ಇಷ್ಟೊಂದು ದೀರ್ಘಕಾಲ ಬದುಕಿದ್ದಾರೆ ಎನ್ನುವುದೇ ಒಂದು ಆಶ್ಚರ್ಯ. ನನ್ನ ಅನುಭವದಲ್ಲಿರುವಂತೆ, ಆಚಾರ್ಯ ಬಿ.ಎಂ.ಶ್ರೀಯವರು 99 ವರ್ಷ ಬದುಕಿದ್ದರು. ಡಾ. ಶಿವರಾಮಕಾರಂತರ ಎಲ್ಲಾ ಪರಾಕ್ರಮವನ್ನು ಕಂಡಾಗ ಇವರೂ ಶತಕ ಬಾರಿಸುತ್ತಾರೆಂದು ಬಹಳಷ್ಟು ಜನರು ನಂಬಿದ್ದರು ಅದಾಗಲಿಲ್ಲ. ಈಗ ಅಕ್ಕಿಹೆಬ್ಬಾಳು ನರಸಿಂಹಮೂರ್ತಿರಾವ್ ನೂರು ವರ್ಷಕ್ಕೆ ಕಾಲಿಟ್ಟಿದ್ದಾರೆ. ಇದು ನಾಡಿನ ಪುಣ್ಯ. "ದೇವರನ್ನು ನಾನು ನಂಬಿಲ್ಲ. ಹಾಗಂತ ದೇವರನ್ನು ನಂಬಿದವರ ಬಗ್ಗೆ ನನ್ನ ವಿರೋಧವಿಲ್ಲ. ದೇವರು ಇದ್ದಾನೆ ಎಂದಾಗಿದ್ದರೆ ಒಮ್ಮೆಯಾದರೂ ನಮಗೆ ಕಾಣ ಬೇಕಿತ್ತು. ನನ್ನ ಈ ದೀರ್ಘಕಾಲದ ಆಯುಷ್ಯದಲ್ಲಿ ನಾನು ಕಂಡ ನೆನಪು ಕಾಣಿಸುತ್ತಿಲ್ಲ" ಎಂದು ಹೇಳುತ್ತಲೇ ಶತಕ ಬಾರಿಸಿದ ಎ. ಎಸ್. ಮೂರ್ತಿರಾಯರನ್ನು ನಾನು ಕಂಡೇ ಈಗಾಗಲೇ ನಲವತ್ತೈದು ವರ್ಷಗಳು ಸಂದವು. ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ (1955). ಅಪ್ಪರನಂತರ ಎರಡು ಬಾರಿ ಕಂಡಿದ್ದೇನೆ. ಕುಶಲ ವಿಚ್ಛಾರಿಸಿದ್ದೇನೆ. ಈ ನೂರು ವರ್ಷದ ಅವರ ಜೀವನದಲ್ಲಿ ಊಟ, ಉಪಾಹಾರ, ಕೆಲಸ, ನಿದ್ರೆ ಇವೆಲ್ಲವೂ ನಿಯಮಿತವಾಗಿ ನಡೆಯುತ್ತಾ ಬಂದಿದ್ದರಿಂದ ಅವುಗಳು ಮೂರ್ತಿ ರಾಯರ ದೀರ್ಘಾಯುಷ್ಯಕ್ಕೆ ಸಹಕಾರ ನೀಡಿವೆ.

ಮೂರ್ತಿರಾಯರು ಒಮ್ಮೆ ನನ್ನೊಡನೆ ಮಾತನಾಡುತ್ತಾ "ನಾನು ವಿಶ್ವಕುಟುಂಬಿ. ನನಗೆ ಮೂರು ಜನ ಗಂಡು ಮಕ್ಕಳು. ಒಬ್ಬರು ಭಾರತೀಯಳನ್ನು ಮದುವೆಯಾಗಿದ್ದಾರೆ. ಒಬ್ಬರು ಅಮೆರಿಕೆಯ ಪ್ರಜೆಯನ್ನು ಮದುವೆಯಾಗಿದ್ದಾರೆ. ಇನ್ನೊಬ್ಬರು ಬ್ರಿಟಿಷ್ ಪ್ರಜೆಯನ್ನು ಮದುವೆಯಾಗಿದ್ದಾರೆ. ಹಾಗಾಗಿ ನನ್ನ ಮನೆಯಲ್ಲಿ ಭಾರತೀಯರು ಮಾತ್ರವಲ್ಲ ಬೇರೆ ಬೇರೆ ದೇಶದ ಜನರೂ ಇದ್ದಾರೆ" ಎಂದಿದ್ದರು. ಈ ರೀತಿಯ ಮದುವೆಗೆ ಮೂರ್ತಿರಾಯರು ಸಂಪ್ರದಾಯಸ್ತರಾದರೂ ವಿರೋಧಿಸಿಲ್ಲ. ಅವರವರ ಆಯ್ಕೆ ಅವರವರಿಗೆ. ಯಾವುದರಲ್ಲಿ ಸುಖವನ್ನು ಜನರು ಕಂಡುಕೊಳ್ಳುತ್ತಾರೋ ಅಲ್ಲೇ ಅವರಿಗೆ ಆನಂದ ದೊರೆಯುತ್ತದೆ ಎಂಬುದು ಮೂರ್ತಿರಾಯರ ಮಾತು.



ಮೂರ್ತಿರಾಯರು ರಾಶಿ ರಾಶಿ ಪುಸ್ತಕಗಳನ್ನು ಬರೆದಿಲ್ಲ. ಸುಮಾರು 26 ಪುಸ್ತಕಗಳನ್ನು ಬರೆದಿರಬಹುದು. ಬರೆದುದೆಲ್ಲಾ ಅಪರಂಜಿ. ಹಗಲುಗನಸುಗಳು, ಮಿನುಗು ಮಿಂಚು, ಅಲೆಯುವ ಮನ– ಇವು ಶ್ರೇಷ್ಠ ಪ್ರಬಂಧಗಳ ಸಂಗ್ರಹ. ಸಾಕ್ರಟೀಸನ ಕೊನೆಯ ದಿನಗಳು, ಪಾಶ್ಚಾತ್ಯ ಸಣ್ಣ ಕಥೆಗಳು, ಹವಳದದ್ವೀಪ, ಚಂಡಮಾರುತ, ಆಷಾಡಭೂತಿ – ಇವುಗಳು ಅನುವಾದ ಕೃತಿಗಳು, ಚಿತ್ರಗಳು–ಪತ್ರಗಳು ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿದೆ. ದೇವರು ಕೃತಿಗೆ ಪಂಪ ಪ್ರಶಸ್ತಿ ದೊರಕಿದೆ.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ, ಸಾಹಿತ್ಯ ಅಕಾಡೆಮಿಯ ಕನ್ನಡ ವಿಭಾಗದ ಸಲಹಾ ಸಮಿತಿಯ ಸದಸ್ಯರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಮೈಸೂರು ಆಕಾಶವಾಣಿಯ ನಿರ್ದೇಶಕರಾಗಿ ಅತ್ಯುತ್ತಮ ಸೇವೆ ಮಾಡಿದ್ದಾರೆ. ದೀರ್ಘಕಾಲ ಅಧ್ಯಾಪಕರಾಗಿ, ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ, ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್ ಪಡೆದವರಾಗಿ, ಕನ್ನಡಿಗರ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿದ್ದಾರೆ. ಉತ್ತಮ ಮಾತುಗಾರರು, ಉತ್ತಮ ಅಧ್ಯಾಪಕರು, ಸರಳ ಸಜ್ಜನಿಕೆಗಳು, ತಿಳುವಳಿಕೆ, ಪಾಂಡಿತ್ಯಗಳು ಇವರನ್ನು ಎತ್ತರಕ್ಕೆ ಏರಿಸಿವೆ. ಕನ್ನಡ, ಇಂಗ್ಲೀಷ್, ಫ್ರೆಂಚ್ ಭಾಷೆಗಳನ್ನು ಬಲ್ಲವರು. ತನ್ನಲ್ಲಿ ಅಪಾರವಾದ ಪಾಂಡಿತ್ಯವಿದೆ ಎಂಬ ಅಹಂಕಾರವಾಗಲಿ, ಬಿಗುಮಾನವಾಗಲಿ ಮೂರ್ತಿರಾಯರ ಬಳಿ ಸ್ವಲ್ಪವೂ ಸುಳಿಯುವುದಿಲ್ಲ. ಇವರ ಕೋಟು, ಬೂಟು, ಟೈಗಳನ್ನು ನೋಡಿದ ನನಗೆ ನಿವೃತ್ತರಾದ ನಂತರ ಪಂಚೆ, ಶರ್ಟ್‌ಗಳ, ಬೆಳ್ಳಿ ಕೂದಲಿನ ಮೂರ್ತಿರಾಯರನ್ನು ಕಂಡಾಗ ಭಕ್ತಿ, ಗೌರವ ಇನ್ನಷ್ಟು ಹೆಚ್ಚುತ್ತದೆ. ಸುಮಾರು ಹತ್ತು ಬಾರಿಗಿಂತ ಹೆಚ್ಚಿಗೆ ಪಾಶ್ಚಾತ್ಯ ದೇಶಗಳಲ್ಲಿ ಪ್ರವಾಸ ಮಾಡಿಬಂದರೂ ಪಾಶ್ಚಾತ್ಯ ಸಂಸ್ಕೃತಿಯನ್ನು ಬೆಳೆಸಿಕೊಂಡಿಲ್ಲ, ಅಪ್ಪಟ ಭಾರತೀಯರಾಗಿಯೇ ಇದ್ದಾರೆ.

ಮೂರ್ತಿರಾಯರ ವಿಚಾರ ಲಹರಿ, ಆಧುನಿಕ ಪ್ರಪಂಚದಲ್ಲಿ ತಮ್ಮನ್ನು ತೊಡಗಿಸಿಕೊಂಡಂತೆ ಕಾಣುತ್ತಾರೆ. ರಾಜಕೀಯಕ್ಕೂ, ಸಾಹಿತ್ಯಕ್ಕೂ ನಂಟು ಹಾಕುವುದು ತರವಲ್ಲ. ರಾಜಕೀಯ ರಾಜಕೀಯವೇ, ಸಾಹಿತ್ಯ ಸಾಹಿತ್ಯವೇ ಸಾಹಿತ್ಯದಲ್ಲಿ ರಾಜಕೀಯ ತೂರಿದರೆ ಸಾಹಿತ್ಯವೂ ಜೊಳ್ಳಾಗುತ್ತದೆ. ಕನ್ನಡ ಸಾಹಿತ್ಯಕ್ಕಿಂತ ಇಂಗ್ಲಿಷ್ ಸಾಹಿತ್ಯ ಗಟ್ಟಿ ಎಂದು ಕೆಲವೊಮ್ಮೆ ಒಪ್ಪಿಕೊಳ್ಳಬಹುದಾದರೂ ಕನ್ನಡ ಸಾಹಿತ್ಯ ಕೂಡ ಇತರ ಯಾವ ಭಾಷೆಗೂ ಕಡಿಮೆ ಇಲ್ಲವೆಂಬ ಅಭಿಪ್ರಾಯ ಎ. ಎನ್. ಮೂರ್ತಿರಾಯರದ್ದು.

ತಮ್ಮ 100 ನೇ ವಯಸ್ಸಿನಲ್ಲೂ ಇವರ ಜ್ಞಾನಸಂಪತ್ತು ವಿಚಾರಗಳು ದಿಕ್ಕು ತಪ್ಪಿಲ್ಲ, ನಿತ್ಯದ ತಮ್ಮ ಕೆಲಸದಲ್ಲೂ ಪತ್ರಿಕೆ ಓದುವುದು, ಜಗತ್ತಿನ ಆಗು ಹೋಗುಗಳನ್ನು ಅರಿಯುವುದು ಇದಾವುದೂ ನಿಂತಿಲ್ಲ.

ಈಗ್ಗೆ ಎಂಟು ವರ್ಷಗಳ ಹಿಂದೆ ಶಿವಮೊಗ್ಗದ ಜುವೆಲ್‌ರಾಕ್ ಹೋಟೆಲಿನ ಹತ್ತಿರ ನನ್ನ ಸ್ನೇಹಿತರೊಡನೆ ಸಂಜೆ ಹೊತ್ತು ಮಾತನಾಡುತ್ತಾ ಇದ್ದೆ. ಅಷ್ಟರಲ್ಲಿ ಒಂದು ವ್ಯಾನು ಬಂದು ನಿಂತಿತು. ಅದರಲ್ಲಿದ್ದ ಎ. ಎನ್. ಮೂರ್ತಿರಾಯರು ಹೊರಬಂದರು. ಅವರ ಮನೆ ಮಂದಿ ಎಲ್ಲರೂ ಇದ್ದರೆಂದು ನೆನಪು. ಇಳಿದವರು ನಾವು ನಿಂತ ಕಡೆ ಬಂದು ನಿಮ್ಮನ್ನ ನೋಡಿದ್ದೇನೆ. ಹೆಸರು ಜ್ಞಾಪಕಕ್ಕೆ ಬರುವುದಿಲ್ಲ ಎಂದರು. ನನ್ನ

ಪರಿಚಯ ನಾನೇ ಮಾಡಿಕೊಂಡೆ. ಕೈ ಕುಲುಕಿ, ಕ್ಷೇಮ ಸಮಾಚಾರ ವಿಚಾರಿಸಿಕೊಂಡರು. ನಂತರ ಅರ್ಧ ಗಂಟೆ ಮಾತನಾಡಿದೆವು.

ಅವರು ಇನ್ನೊಬ್ಬರೊಡನೆ ಮಾತನಾಡುವಾಗ, ಪ್ರೀತಿ, ವಿಶ್ವಾಸಗಳಿಗೆ ಬಹಳ ಒತ್ತು ಕೊಡುತ್ತಾರೆ. ನ್ಯಾಯ, ಧರ್ಮದ ಬಗ್ಗೆ ಚಿಂತನೆ ಮಾಡುತ್ತಾರೆ. ಗಾಂಧೀ ವಿಚಾರಧಾರೆಗಳಿಗೆ ಒಪ್ಪಿಗೆ ನೀಡುತ್ತಾರೆ. ಗಾಂಧಿ ಈ ಶತಮಾನದ ಅತ್ಯಂತ ಶ್ರೇಷ್ಠ ವ್ಯಕ್ತಿ ಎನ್ನುತ್ತಾರೆ. ಬರವಣಿಗೆಯನ್ನು ಈಗಲೂ ಮಾಡಬೇಕೆಂಬ ಹಂಬಲ, ಆದರೆ ಕೈಗಳು ಆ ಬಗ್ಗೆ ಸಹಕರಿಸುತ್ತಿಲ್ಲ ಎನ್ನುತ್ತಾರೆ.

ಆರೋಗ್ಯ ಕೆಟ್ಟಿಲ್ಲ. ಮೂರ್ತಿರಾಯರನ್ನು ನೋಡಿದಾಗ ಇವರಿಗೆ 100 ವರ್ಷವೆಂದರೆ ನಂಬುವುದು ಕಷ್ಟ. ವಯಸ್ಸಾದವರು ಎಂದು ಮಾತ್ರ ಹೇಳಬಹುದು. ಬಿಳಿಯ ತಲೆಕೂದಲನ್ನು ನೋಡಿ ಹೆಚ್ಚು ವಯಸ್ಸಾದವರೆಂದು ಹೇಳಬಹುದು.

# ಲಲಿತವನದಲ್ಲಿ ಅಲೆಯುವ ಮನ

ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ

ಅಕ್ಕಿಹೆಬ್ಬಾಳು ನರಸಿಂಹಮೂರ್ತಿರಾವ್ (ಎ. ಎನ್. ಮೂರ್ತಿರಾವ್) ಅವರು ಹುಟ್ಟಿದ್ದು 16 ರ ಜೂನ್ 1900 ರಂದು. ಇದೇ ಜೂನ್ 16ಕ್ಕೆ ಅವರಿಗೆ 99 ವರ್ಷಗಳು ತುಂಬಿ ನೂರಕ್ಕೆ ಅಡಿಯಿಡುತ್ತಾರೆ. ಇಡೀ ಶತಮಾನ ಬದುಕುವ ಭಾಗ್ಯ ಎಷ್ಟು ಜನಕ್ಕಿದ್ದೀತು? ಅದರಲ್ಲೂ ಮೈ - ಮನಸ್ಸುಗಳ ಆರೋಗ್ಯ ಕಾಪಾಡಿಕೊಂಡು ತೊಂಬತ್ತೊಂಬತ್ತರಲ್ಲೂ ಲವಲವಿಕೆಯಿಂದಿರುವುದು ಒಂದು ಭಾಗ್ಯವೇ ಸರಿ.

ಸಂಜೆ ಐದರ ವೇಳೆಗೆ ಮೈಸೂರಿನಲ್ಲಿ ಅವರ ನಾದಿನಿಯ ಮಗ ಶಾಮಣ್ಣನವರ ಮನೆಗೆ ನಾನು ಹೋದಾಗ ಮೂರ್ತಿರಾಯರು ಉತ್ಸಾಹದಿಂದಲೇ ಬರಮಾಡಿಕೊಂಡರು. ಮುಪ್ಪು ಅವರನ್ನು ಕುಗ್ಗಿಸಿಲ್ಲ. ನನಗೆ ತಕ್ಷಣ ನೆನಪಾದ ಮತ್ತೊಬ್ಬ ಹಿರಿಯರು ಸಿಟ್ಟೂರು ಶ್ರೀನಿವಾಸರಾಯರು. ಆ ವಯಸ್ಸಿನಲ್ಲಿ ಅವರ ಉತ್ಸಾಹವೂ ಆಶ್ಚರ್ಯ ಹುಟ್ಟಿಸುವಂಥದು. ನಮ್ಮಲ್ಲಿ ಶತಾಯುಷಿಗಳು ವಿರಳ. ಸರ್ ಎಂ. ವಿಶ್ವೇಶ್ವರಯ್ಯನವರನ್ನು ಬಿಟ್ಟರೆ ಶತಾಯುಷಿಯಾದ ಪ್ರಸಿದ್ಧ ಕನ್ನಡ ಚೇತನ ತಕ್ಷಣ ನೆನಪಿಗೆ ಬರುತ್ತಿಲ್ಲ. ನಾನು ಮೂರ್ತಿರಾಯರನ್ನು ಕೇಳಿದೆ:

- **ಈ ಶತಮಾನ ಪೂರ್ತಿ ಕಂಡ ನಿಮಗೆ ಈ ಕ್ಷಣ ಏನನ್ನಿಸುತ್ತಿದೆ?**

– 'ಭಗವಂತನ ಪಾದಾರವಿಂದ' ವನ್ನು ತುರ್ತಾಗಿ ಸೇರಿಕೊಳ್ಳಬೇಕೆಂಬ ಆಸೆಯೇನೂ ನನಗಿಲ್ಲ. I love this life. I love people. ಬದುಕು ನನಗೆ ಬೇಸರವೆನ್ನಿಸಿಲ್ಲ.

- **ಮುಪ್ಪಿನ ಸಮಸ್ಯೆಗಳಾವುವು? ಇತರರು ನಿಮ್ಮನ್ನು ಹೇಗೆ ನಡೆಸಿಕೊಳ್ಳುತ್ತಾರೆ?**

ಮುಪ್ಪಿನ ನಿಜವಾದ ಸಮಸ್ಯೆ ಇಂದ್ರಿಯಗಳು ತಮ್ಮ ಶಕ್ತಿ ಕಳೆದುಕೊಳ್ಳುತ್ತಾ ಹೋಗುವುದು; ಇಂದ್ರಿಯಾನುಭವಗಳಿಂದ ವಂಚಿತರಾಗುತ್ತ ಹೋದಂತೆ ಬದುಕು ಭಾರವೆನ್ನಿಸಲು ಶುರುವಾಗುತ್ತದೆ.

ಇದು ಹೇಗೆಂಬುದನ್ನು ನಾನು ಕಾಣೆ: ನನಗೆ ಈಗಲೂ ಕಣ್ಣು ಚೆನ್ನಾಗಿ ಕಾಣಿಸುತ್ತದೆ. ಕಿವಿ ಚೆನ್ನಾಗಿ ಕೇಳಿಸುತ್ತದೆ. ನಿಮಗೆ ಕೇಳಿಸಬಹುದಾದ ಪಿಸುಮಾತು ನನಗೂ ಸಹ ಕೇಳಿಸುತ್ತದೆ. ವಾಕಿಂಗ್ ಹೋಗುವಾಗ ಯಾರ ನೆರವಿನ ಅಗತ್ಯವೂ ನನಗಿಲ್ಲ. ಹೀಗಾಗಿ ಬದುಕುವುದು ನನಗೆ ಹಿಂಸೆಯೆನ್ನಿಸಿಲ್ಲ. ಎಲ್ಲಿಯವರೆಗೆ ಈ ಬದುಕನ್ನು ಅನುಭವಿಸುವ–ಅನುಭವಿಸುವ ಕ್ರಮಗಳು ಬೇರೆ ಬೇರೆ–ಶಕ್ತಿ ಪಡೆಯುತ್ತಿರುತ್ತೇವೆಯೋ ಅಲ್ಲಿಯವರೆಗೆ ಬದುಕು ಭಾರವೆನ್ನಿಸಬೇಕಿಲ್ಲ.

ಇನ್ನು ನನ್ನನ್ನು ಈ ಇಳಿ ವಯಸ್ಸಿನಲ್ಲಿ 'ಅನುಪಯುಕ್ತ ವ್ಯಕ್ತಿ'ಎಂಬಂತೆ ನನ್ನ ಪತ್ನಿಗರವರು ನಡೆಸಿಕೊಂಡಿಲ್ಲ. I am deeply grateful to my son and daughter in-law. ಮಗ-ಸೊಸೆ ತುಂಬ ಪ್ರೀತಿಯಿಂದ ನೋಡಿಕೊಂಡಿದ್ದಾರೆ. ಈಗಷ್ಟೇ ಅಲ್ಲ, ಮೊದಲಿನಿಂದಲೂ ಅಷ್ಟೆ. ಈ ಬದುಕಿನಿಂದ ನಾನು ಸಾಕಷ್ಟು ಪ್ರೀತಿ ಪಡೆದಿದ್ದೇನೆ. ಅದಕ್ಕಾಗಿ ನಿಜಕ್ಕೂ ಈ ಬದುಕಿಗೆ ನಾನು ಕೃತಜ್ಞ.

ನೆನಪಿನಲ್ಲೇ ಬದುಕುವುದು ನನಗಿಷ್ಟವಿಲ್ಲ. ನನ್ನ ಪಾಲಿಗೆ ನೆನಪು ಬಹು ಸುಂದರ; ಅಷ್ಟೇ ವಾಸ್ತವವೂ ಹಿತಕರ.

**• ಇಷ್ಟೊಂದು ದೀರ್ಘ ಅವಧಿಯಲ್ಲಿ ಆರೋಗ್ಯ ಕಾಪಾಡಿಕೊಳ್ಳುವುದು ಹೇಗೆ?– ನಿಮ್ಮ ಅನುಭವದ ಬೆಳಕಿನಲ್ಲಿ ಹೇಳಿ.**

ಮುಖ್ಯವಾಗಿ ಇದು ದೇಹಸ್ಥಿತಿಯ ಜೊತೆಗೆ ಮನಸ್ಸಿಗೂ ಸಂಬಂಧಿಸಿದ್ದು ಎಂದು ನನ್ನ ತಿಳುವಳಿಕೆ. ದೇಹಕ್ಕೆ ಸಂಬಂಧಿಸಿದಂತೆ ಮಿತಾಹಾರ ಅತ್ಯಂತ ಒಳ್ಳೆಯದು. ನನಗೆ ಎಂದೂ ಚಪಲವಿಲ್ಲ. ಎಲ್ಲ ಬಗೆಯ ಆಹಾರ ಪದಾರ್ಥಗಳನ್ನೂ ಸವಿಯುತ್ತೇನೆ. ಆದರೆ ಅತಿಯಾಗಿ ತಿನ್ನುವುದಿಲ್ಲ.

ವಾಕಿಂಗ್ ಆರೋಗ್ಯಕ್ಕೆ ತುಂಬ ಒಳ್ಳೆಯದೆಂದು ಮೂರ್ತಿರಾಯರು ಸೂಚಿಸಿದರು. ಅವರಿಗೆ ನಡೆಯುವುದೆಂದರೆ ತುಂಬ ಇಷ್ಟವಂತೆ. ಹರಯದಲ್ಲೊಮ್ಮೆ ಅವರು ಗೆಳೆಯರೊಡನೆ ಮೈಸೂರಿನಿಂದ ಅಕ್ಕಿಹೆಬ್ಬಾಳಿಗೆ ಸುಮಾರು ನಲವತ್ತೆರಡು ಮೈಲು ದೂರ ನಡೆದೇ ಹೋಗಿದ್ದನ್ನು ನೆನಪಿಸಿಕೊಂಡರು. ಅಷ್ಟೇ ಅಲ್ಲ, ಹಾಗೆ ನಡೆದು ಹೋಗಿ ತಕ್ಷಣ ಎಲ್ಲರೂ ಈಜಲು ಹೋಗಿದ್ದರಂತೆ. ಈಗಲೂ ಅವರು ವಾಕಿಂಗ್ ತಪ್ಪಿಸಿದವರಲ್ಲ.

ಮೂರ್ತಿರಾಯರು ಆರೋಗ್ಯದ ಬಗ್ಗೆ ಮುಂದುವರಿದು ಹೇಳಿದರು–'ಆರೋಗ್ಯ ಕೇವಲ ದೇಹಕ್ಕೆ ಮಾತ್ರ ಸಂಬಂಧಿಸಿದ್ದಲ್ಲ. ದೈಹಿಕ ಆರೋಗ್ಯವನ್ನು ನಮ್ಮ ಮನಸ್ಥಿತಿಯೂ ನಿಯಂತ್ರಿಸುತ್ತದೆ. ಸಾಧ್ಯವಾದಷ್ಟೂ ಕೋಪ ಮಾಡಿಕೊಳ್ಳದೆ ಇರುವುದು ಒಳ್ಳೆಯದು.

**• ನಿಮ್ಮ ಕಾಲಕ್ಕೂ ಈಗಿನ ಪರಿಸ್ಥಿತಿಗೂ ಯಾವ ಬಗೆಯ ವ್ಯತ್ಯಾಸ ಕಾಣುತ್ತೀರಿ?**

ಬಹಳಷ್ಟು ಸುಧಾರಣೆ ಆಗಿದೆ. ಈಗ ಕಾಲ ಕೆಟ್ಟುಹೋಗಿದೆ ಎಂದು ಹೇಳುವುದನ್ನು ಕೇಳಿದ್ದೇನೆ. ಅದು ತಪ್ಪು ಕಲ್ಪನೆ. ಈಗ ನಮ್ಮ ಬದುಕು ಮೊದಲಿಗಿಂತ ಹಿತಕರವಾಗಿದೆ. ಸಾರಿಗೆ, ವಸತಿ– ಎಲ್ಲದರಲ್ಲೂ ಎಷ್ಟೊಂದು ಅನುಕೂಲಗಳಾಗಿವೆ. ನಮ್ಮ ದಿನನಿತ್ಯದ ಬದುಕನ್ನು ಹೋಲಿಸಿ ನೋಡಿದರೆ ನೀವೇ ಹೇಳುತ್ತೀರಿ–ಮೊದಲಿಗಿಂತ ಈಗ ನಾವು ಚೆನ್ನಾಗಿದ್ದೇವೆ ಅಂತ. ನಮ್ಮ ಆಹಾರ ಪದ್ಧತಿಯನ್ನೇ ತೆಗೆದುಕೊಳ್ಳಿ–ಮೊದಲು ಎರಡು ಹೊತ್ತು ಊಟ; ಊಟವೆಂದರೆ ಏನು–ಹಿಟ್ಟು, ಅನ್ನ ಅಷ್ಟೆ. ಈಗ ನೋಡಿ ಎಷ್ಟು ಬಗೆಯ ವೈವಿಧ್ಯ! ಯಾರದೇ ಮನೆಯನ್ನು ಗಮನಿಸಿದರೂ– ಕೆಲವು ಮೂಲಭೂತ ಸೌಕರ್ಯಗಳಿರುವುದನ್ನು ಇವತ್ತು ನಾವು ಕಾಣುತ್ತೇವೆಂಬುದೇ ಪರಿಸ್ಥಿತಿ ಸುಧಾರಿಸಿದೆ ಎಂಬುದರ ಗುರುತು. ಬೇರೆ ಯಾರಿಗೋ ಹೋಲಿಸಿಕೊಂಡು ಕೊರಗುವುದರಲ್ಲಿ ಅರ್ಥವಿಲ್ಲ.

**• ನಿಮ್ಮ ಬಾಲ್ಯದ ಪರಿಸರಕ್ಕೂ ನಿಮ್ಮ ಮೊಮ್ಮಕ್ಕಳ ಈಗಿನ ಬಾಲ್ಯದ ಪರಿಸರಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಿದಾಗ ಈಗಿನ ಮಕ್ಕಳ ಬೆಳವಣಿಗೆಗೆ ಸೃಜನಶೀಲ ವಾತಾವರಣವಿದೆ ಅನ್ನಿಸುತ್ತದೆಯೇ ?**

ಖಂಡಿತವಾಗಿ. ಅನುಮಾನವೇ ಬೇಡ. ಮೊದಲು ಪ್ರೀತಿಗಿಂತ ಭಕ್ತಿ, ಗೌರವ ಜಾಸ್ತಿ ಇತ್ತು. ಹೀಗಾಗಿ ಮನಸ್ಸಿನ ಸಹಜ ಅರಳುವಿಕೆಗೆ ಅವಕಾಶವಿರಲಿಲ್ಲ. ಮನೆಯಲ್ಲಿ ಚಿಕ್ಕವರು ಏನಾದರೂ ಹೇಳಿದರೆ 'ನಿಂಗೊತ್ತಾಗಲ್ಲ ಸುಮ್ಮನಿರು ' ಎಂದು ಬಡಿದು ಕೂರಿಸುತ್ತಿದ್ದರು. ಮನೆ, ಮನೆಯಂತಿರುತ್ತಿರಲಿಲ್ಲ. ಬಹಳಷ್ಟು ಸಲ ಅದು ಅಧಿಕಾರದ ಕೇಂದ್ರವಾಗಿರುತ್ತಿತ್ತು. ಈಗ ಮಕ್ಕಳಿಗೆ ಅಪಾರ ಸ್ವಾತಂತ್ರ್ಯವಿದೆ. ತಂದೆ ತಾಯಿಗಳು ಮಕ್ಕಳ ಅಭಿಪ್ರಾಯಕ್ಕೆ ಮನ್ನಣೆ ಕೊಡುತ್ತಾರೆ. ಪರಸ್ಪರ ಕುಳಿತು ಮಾತನಾಡುವ ಸೌಹಾರ್ದ ವಾತಾವರಣವಿದೆ. ಇದನ್ನೆಲ್ಲ ಬಳಸಿಕೊಳ್ಳುವುದು ವೈಯಕ್ತಿಕ ಪ್ರತಿಭೆಗೆ ಸಂಬಂಧಿಸಿದ್ದು. ಆದರೆ ವಾತಾವರಣ ಈಗ ಮೊದಲಿಗಿಂತ ಹೆಚ್ಚು ಸೌಹಾರ್ದಯುತವಾಗಿದ್ದು ಬೆಳವಣಿಗೆಗೆ ಪೂರಕವಾಗಿದೆ.

**• ನೀವು ಬ್ರಿಟಿಷರ ಆಡಳಿತವನ್ನೂ ಕಂಡವರು. ಸ್ವಾತಂತ್ರ್ಯಾನಂತರದ ಭಾರತವನ್ನೂ ಕಂಡವರು. ಯಾವುದು ಉತ್ತಮ ?**

ಬ್ರಿಟಿಷರ ಉದ್ದೇಶ ಮೂಲತಃ ಆರ್ಥಿಕ ಸಂಪತ್ತನ್ನು ಲೂಟಿ ಮಾಡುವುದಾಗಿತ್ತು. ಅದಕ್ಕೆ ಏನು ಬೇಕೋ ಅದನ್ನೆಲ್ಲ ಮಾಡಿದರು. ಆದರೆ ಬ್ರಿಟಿಷರ ಆಗಮನದಿಂದ ನಮ್ಮ ಸಾಮಾಜಿಕ ರಚನೆಯಲ್ಲಾದ ಬದಲಾವಣೆ ಗಮನಿಸಬೇಕಾದಂಥದ್ದು.

ಒಂದು ಸಣ್ಣ ನಿದರ್ಶನ ನೀಡುವುದಾದರೆ – ಜಾತಿ ಪದ್ಧತಿಗೆ ಸಂಬಂಧಿಸಿದ ನಮ್ಮ ನಿಲುವಿನಲ್ಲಾದ ಬದಲಾವಣೆ. ಒಂದು ಘಟನೆ ನೆನಪಾಗುತ್ತಿದೆ–ನಮ್ಮ ಸಂಬಂಧಿಯೊಬ್ಬರಿದ್ದರು, ಕಟ್ಟಾ ಸಂಪ್ರದಾಯಸ್ಥ. ಕೆಳವರ್ಗದ ವ್ಯಕ್ತಿಯ ಜೊತೆ ಅವರು ಮಾತನಾಡುವಾಗ ತಮ್ಮನ್ನೇ ಉದ್ದೇಶಿಸಿ ಹೇಳುತ್ತಿದ್ದರು: 'ಈಗ ಬಿಡುವಿಲ್ಲ. ಆಮೇಲೆ ಬಾ ಅಂತ ಹೇಳು.' 'ಇವತ್ತು ಆಗಲ್ಲ ಅಂತ ಹೇಳು'. ಅಂದರೆ ಆತನ ಜೊತೆ ನೇರ ಸಂವಾದ ಸಹ ಅನುಚಿತವೆಂಬ ಭಾವನೆ. ಈಗಿನ ಪರಿಸ್ಥಿತಿ ನಿಮಗೇ ಗೊತ್ತು.

**• ಆಡಳಿತದ ಸ್ವರೂಪದಲ್ಲಿ?**

ನೋಡಿ, ನಾವು ಮೊದಲು ಮಹಾರಾಜರ ಆಡಳಿತದಲ್ಲಿ ಇದ್ದವರು–ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಡಳಿತ. ಅವರಂತಹ ಅತ್ಯುತ್ತಮ ಆಡಳಿತಗಾರರು ಅಪರೂಪ. ಆಗ ಹೇಗೆ ಕೆಲಸ ನಡೀತಿತ್ತು ಅನ್ನೋದಕ್ಕೆ ಒಂದು ಉದಾಹರಣೆ–ಒಮ್ಮೆ ಅವರು ದಿವಾನ್ ಮಿರ್ಜಾ ಅವರ ಜೊತೆ ಸಂಚಾರ ಹೊರಟಿದ್ದಾಗ ತಮ್ಮ ಹೆಸರಿಟ್ಟಿದ್ದ ರಸ್ತೆಯಲ್ಲಿ ಹೋಗುತ್ತಿದ್ದರು. ಅದರ ಸ್ಥಿತಿ ಅತ್ಯಂತ ಕೆಟ್ಟದ್ದಾಗಿತ್ತು. ಆಗ ಮಹಾರಾಜರು ಮಿರ್ಜಾ ಅವರಿಗೆ ಹೇಳಿದರಂತೆ–'ಈ ರಸ್ತೆಗೆ ಯಾಕಪ್ಪಾ ನನ್ನ ಹೆಸರಿಟ್ಟಿದ್ದೀರಿ?' ಅಷ್ಟು ಹೇಳಿ ನಕ್ಕು ಸುಮ್ಮನಾದರಂತೆ. ಮಾರನೇ ದಿನವೇ ಮಿರ್ಜಾ ತಾವೇ ಆಸಕ್ತಿ ತೆಗೆದುಕೊಂಡು ತಕ್ಷಣ ಆ ರಸ್ತೆ ರಿಪೇರಿ ಮಾಡಿಸಿದರಂತೆ. ನಮಗೆ ಬ್ರಿಟಿಷರ ಆಡಳಿತದ ನೇರ ಅನುಭವವಿಲ್ಲ. ಇದ್ದ ಅರಸರ ಆಡಳಿತ ಅತ್ಯುತ್ತಮವಾಗಿತ್ತು.

ಇದೇ ಕಾಲದಲ್ಲಿ ಭಾರತದ ಬೇರೆ ರಾಜ್ಯಗಳಲ್ಲಿ ಅತ್ಯಂತ ನೀಚರೆನ್ನಿಸುವಂಥವರ ಆಳ್ವಿಕೆಯೂ ಇತ್ತು. ಯಾವುದೇ ಆಡಳಿತವಾಗಲಿ ವ್ಯಕ್ತಿಗಳನ್ನು ಅವಲಂಬಿಸಿರುತ್ತದೆ. ತಾನು ಉದ್ಧಾರವಾಗುವುದು ಮಾತ್ರವಲ್ಲ. ಸುತ್ತ ಮುತ್ತಲಿನವರ ಬದುಕೂ ಹಸನಾಗಿರಬೇಕೆಂಬ ಕಾಳಜಿ, ದರ್ಶನ ಆಡಳಿತ ನಡೆಸುವವರಲ್ಲಿರಬೇಕು. ಈಗ ಅಂಥ ದರ್ಶನವಿರುವವರ ಸಂಖ್ಯೆ ಕಡಿಮೆ ಅನ್ನಿಸುತ್ತದೆ.

**• ನೀವು ಭಾರತೀಯ ಸಂಸ್ಕೃತಿಯಲ್ಲಿ ಬದುಕಿದವರು; ಪಾಶ್ಚಾತ್ಯ ಸಂಸ್ಕೃತಿಯನ್ನೂ ಆಳವಾಗಿ ಅಧ್ಯಯನ ಮಾಡಿರುವಂಥವರು. ನಮ್ಮ ಸಂಸ್ಕೃತಿಯ ಅತ್ಯುತ್ತಮ ಅಂಶಗಳಾವುವು?**

'ತಾಳುನಿಕೆ'. ನೋಡಿ ನಮ್ಮಲ್ಲಿ ಮೊದಲು ಅವಿಭಕ್ತ ಕುಟುಂಬಗಳಿದ್ದುವು. ಅನೇಕರು ಒಟ್ಟಿಗೇ ಬದುಕಬೇಕಾದ ಪರಿಸ್ಥಿತಿ, 'ಸಹಬಾಳ್ವೆ'ಯ ಮೊದಲಪಾಠ ಅಲ್ಲಿ ಸಹಜವಾಗಿ ಆಗಿಬಿಡ್ತಾ ಇತ್ತು. ಜೊತೆಗೆ ಬದುಕಿಗೆ ಅಗತ್ಯವಾದ ಮಾನವ ಅನುಕಂಪ ಅಲ್ಲಿ ಯಾರಿಂದಲಾದರೂ ದೊರೆಯುತ್ತಿತ್ತು. ಎಷ್ಟೋ ಸಲ ಜೀವಕ್ಕೆ ಇಂಥ 'ಆಸರೆ' ಬೇಕಾಗುತ್ತದೆ. ಅವಿಭಕ್ತ ಕುಟುಂಬಗಳಲ್ಲಿ, ಎಲ್ಲ ಸಮಸ್ಯೆಗಳ ನಡುವೆಯೂ ಇಂಥ ಸಹಾನುಭೂತಿಯ ಆಸರೆ ಸಿಗುತ್ತಿತ್ತು.

**• ಪಾಶ್ಚಾತ್ಯ ಸಂಸ್ಕೃತಿಯ ಆಕ್ರಮಣದಿಂದ ತತ್ತರಿಸುತ್ತಿರುವ ಯುವ ಜನತೆ ಅದರಿಂದ ತಪ್ಪಿಸಿಕೊಳ್ಳುವ ಬಗೆ ಹೇಗೆ?**

ಪಾಶ್ಚಾತ್ಯ ಸಂಸ್ಕೃತಿಯಿಂದ ನಮಗೆ ಆಗಿರುವ ಅನ್ಯಾಯಗಳೇನು ಹೇಳಿ. ನಮ್ಮಲ್ಲಿ ಕೆಲವು ರೂಢಿಯ ಮಾತುಗಳಿವೆ. ಅವುಗಳ ಪ್ರಸ್ತಾಪ ಹೀಗೆ ಮತ್ತೆ ಮತ್ತೆ ಆಗುತ್ತಿದೆ. ಪಾಶ್ಚಾತ್ಯ ಸಂಸ್ಕೃತಿಯಿಂದ ನಮಗೆ ತುಂಬ ಆಘಾತವಾಗಿದೆಯೆಂದೇನೂ ನನಗೆ ಅನ್ನಿಸುವುದಿಲ್ಲ. ಹೆಚ್ಚು ವಿಶಾಲವಾದ ದೃಷ್ಟಿಕೋನವೊಂದು ನಮಗೆ ಅದರಿಂದ ಪ್ರಾಪ್ತವಾಗಿದೆ.

**• ನಮ್ಮ ಬಗ್ಗೆ ಕೀಳರಿಮೆ?**

ಅದು ಪಾಶ್ಚಾತ್ಯ ಸಂಸ್ಕೃತಿಯಿಂದಲೇ ಬಂದದ್ದೇನು? ನಮ್ಮ ಶ್ರೇಣೀಕೃತ ಸಾಮಾಜಿಕ ರಚನೆಯಲ್ಲಿ ಇಂಥ ಕೀಳರಿಮೆಯಿಂದ ನರಳುವ ವರ್ಗ ಇರಲಿಲ್ಲವೇನು? ಹಾಗೆ ನೋಡಿದ್ದರೆ ಅಂಥ ವರ್ಗಕ್ಕೆ ಆತ್ಮ ವಿಶ್ವಾಸ ಬಂದದ್ದೇ ಪಾಶ್ಚಾತ್ಯ ವಿದ್ಯಾಭ್ಯಾಸ ಕ್ರಮದಿಂದ. ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕದಿಂದ ಅನೇಕ ಸಂಗತಿಗಳನ್ನು ನಾವು ಕಲಿತಿದ್ದೇವೆ. ಮುಖ್ಯ, ಯಾವುದನ್ನೇ ಆಗಲಿ ಜೀರ್ಣಿಸಿಕೊಳ್ಳುವ ಶಕ್ತಿ ಬೇಕಷ್ಟೆ.

ಇದಕ್ಕೆ ಸಂಬಂಧಿಸಿದ ಹಾಗೆ ಒಂದು ಸಣ್ಣ ಘಟನೆ ಹೇಳ್ತೀನಿ. ನಾನು ಅಧ್ಯಾಪಕನಾಗಿದ್ದಾಗ ಒಂದು ಭಾನುವಾರ ವಿಶೇಷ ತರಗತಿ ಪ್ರಕಟಿಸಿದ್ದೆ. ಅಂದೇ ಗೆಳೆಯರ ಮನೆಯಲ್ಲಿ ಊಟಕ್ಕೆ ಹೋಗಿದ್ದೆ. ಹಾಗೇ ತರಗತಿಗೆ ಹೋಗಬೇಕಾಯಿತು. ನಾನು ಪಂಚೆ ಶರ್ಟ್‌ನಲ್ಲಿದ್ದೆ. ಆ ಮುನ್ನ ನಾನು ಯಾವಾಗಲೂ ಸೂಟ್‌ನಲ್ಲೇ ಕಾಲೇಜಿಗೆ ಹೋಗುತ್ತಿದ್ದುದು. ತುಂಬ ಚೆನ್ನಾಗಿ ಡ್ರೆಸ್ ಮಾಡುತ್ತಿದ್ದೆ. ಅನೇಕ ಟೈಲರ್‌ಗಳನ್ನು ನಾನುeducate ಮಾಡಿದ್ದೇನೆ. ಹ್ಞಾ! ಅವತ್ತು ಪಂಚೆ ಶರ್ಟ್‌ನಲ್ಲೇ ಕಾಲೇಜಿಗೆ ಹೋದಾಗ

ವಿದ್ಯಾರ್ಥಿಗಳು ಕೆಲವು ಕ್ಷಣ ಗುಸುಗುಸು ಮಾತನಾಡಿದರು. ನಾನು ಸಮಾಧಾನದಿಂದ ಇನ್ನೂ ಸ್ವಲ್ಪ ಹೊತ್ತು ತಗೊಳ್ಳಿ ಪರವಾಗಿಲ್ಲ ಅಂತ ಹಾಗೇ ಕುಳಿತೆ. ನಂತರ ಸದ್ದು ನಿಂತಿತು. ಅವತ್ತು ಒಂದು ಬಗೆಯ ಆತ್ಮವಿಶ್ವಾಸ ನನ್ನಲ್ಲಿ ಮೂಡಿತು. ಇದೊಂದು ಸಾಂಕೇತಿಕ ಘಟನೆ ಅಂತ ನನಗನ್ನಿಸುತ್ತೆ.

ವಿದ್ಯಾರ್ಥಿಗಳು ANM–Top ಎನ್ನುತ್ತಿದ್ದರು.

• ಸರ್, ಯಾರಾದ್ರೂ ಆಗ ನಿಮ್ಮನ್ನ ಲವ್ ಮಾಡಿದ್ರಾ?

ಇಲ್ಲ.

• ನೀವು ಯಾರನ್ನಾದ್ರೂ.......?

ಅದೂ ಇಲ್ಲ. ಆಗ ಈಗಿನಷ್ಟು ಅವಕಾಶಗಳಿರಲಿಲ್ಲ.

ಮೂರ್ತಿರಾಯರು ನಮ್ಮ ಸಂಸ್ಕೃತಿಯನ್ನೂ ವಿಮರ್ಶಾತ್ಮಕ ದೃಷ್ಟಿಯಿಂದಲೇ ಕಂಡವರು. ಯಾವ ಸಂಸ್ಕೃತಿಯೇ ಆಗಲಿ ನಮ್ಮ ಅಂತಃಶಕ್ತಿಯನ್ನು ಕುಗ್ಗಿಸುವಂತಿದ್ದರೆ, ಮಾನವನ ಜೀವನಕ್ಕೆ ಅಗತ್ಯ ಬೇಕಾದ ಪುಷ್ಟಿಯನ್ನೊದಗಿಸದಿದ್ದರೆ ಅಂಥ ಸಂಸ್ಕೃತಿಯಿಂದ ಯಾರಿಗೇನು ಪ್ರಯೋಜನ? ಎಂದು ಮೂರ್ತಿರಾಯರು ಪ್ರಶ್ನಿಸುತ್ತಾರೆ. ಅದ್ದರಿಂದಲೇ ದೇವರ ಬಗ್ಗೆ ಅವರಿಗೆ ನಂಬಿಕೆಯಿಲ್ಲ. ನಾನು ಕೇಳಿದೆ–

• **ದೇವರು ಇದ್ದಾನೋ ಇಲ್ಲವೋ, ಆದರೆ ದೈವಪೂಜೆಯಿಂದ ಸಿಗುವ ಸಂತೋಷ, ನೆಮ್ಮದಿ, ಅದಕ್ಕಿರುವ ಒಂದು ಸಂಭ್ರಮ ಇದು ಬದುಕಿಗೆ ಅಗತ್ಯವಲ್ಲವೇ?**

ನೀವು ಹೇಳುವುದು ನಿಜ. ದೈವಪೂಜೆಯ ಈಸ್ಥೆಟಿಕ್ ಅಂಶದ ಬಗ್ಗೆ ನನಗೂ ಆಸಕ್ತಿಯಿದೆ. ದೀಪದ ಬೆಳಕು ನಿಜಕ್ಕೂ ಚಂದ. ಅನೇಕ ದೀಪಗಳು ಒಟ್ಟಿಗೇ ಬೆಳಗಿದಾಗ ಮತ್ತಷ್ಟು ಚಂದ. ಆದರೆ ಅದು ದೈವಕ್ಕೆ ಸಂಬಂಧಿಸಿಯೇ ಏಕಾಗಬೇಕು? ಮಗುವಿಗೆ ಅಲಂಕಾರ ಮಾಡಿ ಸಂತೋಷಪಡಬಹುದಲ್ಲವೇ? ಎಲ್ಲಕ್ಕಿಂತ ಮಿಗಿಲಾಗಿ ಭಕ್ತಿ ನಮ್ಮ ರುಚಿಯನ್ನು ಹಾಳುಮಾಡಿಬಿಡುತ್ತದೆಂಬುದರ ಬಗ್ಗೆ ಎಳ್ಳಷ್ಟೂ ಸಂಶಯ ಬೇಡ.

• **ಬದುಕಿಗೆ ಒಂದು 'ನಂಬಿಕೆ' ಬೇಡವೆನ್ನುತ್ತೀರಾ ?**

ಖಂಡಿತಾ ಬೇಕು. Faith in goodness. ಒಳ್ಳೆಯದರ ಬಗ್ಗೆ ನಮಗೆ ನಂಬಿಕೆ ಇರಬೇಕು. 'ಸಹಬಾಳ್ವೆಯಲ್ಲಿ ಸಂತೋಷವಿದೆ' ಎಂಬುದರಲ್ಲಿ ನಮಗೆ ನಂಬಿಕೆ ಇರಬೇಕು. ಕ್ಯಾಂಟ್ ಒಂದು ಕಡೆ ಹೇಳುತ್ತಾನೆ: ನಿನ್ನ ಆಲೋಚನೆ, ಕ್ರಿಯೆ ಸರಿಯೋ ತಪ್ಪೋ ಎಂಬುದನ್ನು ನಿರ್ಧರಿಸಲು, ಅದನ್ನು universalise ಮಾಡಿ ನೋಡು, ಆಗ ತಿಳಿಯುತ್ತದೆ ಅಂತ. ಅಂದರೆ 'ನಾನು ಸ್ವಾರ್ಥಿಯಾದರೆ ತಪ್ಪೇನು?' ಎಂಬ ಪ್ರಶ್ನೆಗೆ ಉತ್ತರ 'ಎಲ್ಲರೂ ಹಾಗೇ ಸ್ವಾರ್ಥಿಗಳಾದರೆ ಹೇಗೆ?' ಎಂಬ ಪ್ರಶ್ನೆಗೆ ನಾವು ಕಂಡುಕೊಳ್ಳುವ ಉತ್ತರದಲ್ಲಿದೆ. ಆದ್ದರಿಂದ ನಮ್ಮ ಬದುಕನ್ನು ನಾವು ರೂಪಿಸಿಕೊಳ್ಳಬೇಕೇ ಹೊರತು ದೇವರ ಮೇಲೆ ಭಾರ ಹಾಕಿ ಕುಳಿತುಕೊಳ್ಳುವುದರ ಬಗ್ಗೆ ನನಗೆ ತೀವ್ರ ಅಸಹನೆಯಿದೆ.

• **ನಿಮ್ಮ ಪ್ರಕಾರ ಸಾರ್ಥಕ ಬದುಕಿನ ಪರಿಕಲ್ಪನೆ ?**

'The less you think of yourself
and more you think of others.'

ನಮ್ಮ ಸುತ್ತಮುತ್ತಲಿನ ಪರಿಸರವನ್ನು ಸಾಧ್ಯವಾದಷ್ಟೂ ಆರೋಗ್ಯಕರವಾಗಿ, ಚಂದವಾಗಿ ಇಟ್ಟುಕೊಳ್ಳುವುದರಲ್ಲೇ ನಮ್ಮ ಬದುಕಿನ ಸಾರ್ಥಕತೆಯಿದೆ. ಮೂರ್ತಿರಾಯರು ತಮ್ಮ ವೃತ್ತಿ ಬದುಕನ್ನು ಸಂಪೂರ್ಣ ಶಿಕ್ಷಣ ಕ್ಷೇತ್ರದಲ್ಲಿ ಕಳೆದಂಥವರು. ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ ಸೇವೆ ಸಲ್ಲಿಸಿದಂಥವರು. ಹಾಗಾಗಿ ನಾನು ಕೇಳಿದೆ.

**• ನಮ್ಮ ಶಿಕ್ಷಣ ಕ್ಷೇತ್ರದಲ್ಲಿ ನೀವು ಕಾಣುವ ಮುಖ್ಯ ದೋಷಗಳು ಯಾವುವು?**

ಪಠ್ಯಕ್ರಮವನ್ನು ನಾವು ಸರಿಯಾಗಿ ರೂಪಿಸಲಿಲ್ಲ. ಇರುವ ಪರಿಸ್ಥಿತಿಯಲ್ಲೇ ಅತ್ಯುತ್ತಮವಾದುದನ್ನು ಪಡೆದುಕೊಂಡು ಶಿಕ್ಷಣ ಕ್ಷೇತ್ರವನ್ನು ಸುಧಾರಿಸಲು ನಾವು ಪ್ರಯತ್ನಿಸಲಿಲ್ಲ. ಅನಾಸಕ್ತ, ಅನರ್ಹ ವ್ಯಕ್ತಿಗಳು ಶಿಕ್ಷಣ ಕ್ಷೇತ್ರವನ್ನು ಆಕ್ರಮಿಸಲು ಅವಕಾಶ ಮಾಡಿಕೊಟ್ಟೆವು. ಕ್ರಮೇಣ ಇದು ವ್ಯಾಪಾರವೂ ಆಗಿಬಿಟ್ಟಿತು. ಎಲ್ಲಕ್ಕಿಂತ ಮುಖ್ಯ Social Philosophyಯನ್ನು ನಮ್ಮ ಶಿಕ್ಷಣ ಕ್ರಮದಲ್ಲಿ ಅಳವಡಿಸಿಕೊಳ್ಳಬೇಕಿತ್ತು. ಒಬ್ಬ ವಿದ್ಯಾರ್ಥಿ ಯಾವ ವಿಷಯವನ್ನೇ ಅಧ್ಯಯನ ಮಾಡಲಿ, ಆತನಿಗೆ ಕಡ್ಡಾಯವಾಗಿ 'ಸಾಮಾಜಿಕ ತತ್ವಜ್ಞಾನ'ವನ್ನು ಕಲಿಸುವ ವ್ಯವಸ್ಥೆ ಇರಬೇಕಿತ್ತು.

ಮೂರ್ತಿರಾಯರು ಅತ್ಯಂತ ಸುಸಂಸ್ಕೃತರು, ಸಜ್ಜನರು ಎಂದು ಹೆಸರಾದವರು. Gentleman ಎಂಬ ಪರಿಕಲ್ಪನೆಗೆ ಅವರು ಮಾದರಿಯಾಗಿರುವಂಥವರು. ಈ ಹಿನ್ನೆಲೆಯಲ್ಲಿ ಅವರನ್ನು ಕೇಳಿದೆ–

**• ನಿಮ್ಮ ವ್ಯಕ್ತಿತ್ವವನ್ನು ರೂಪಿಸಿದ ಸಂಗತಿಗಳು ಯಾವುವು? ಪ್ರಭಾವ ಬೀರಿದ ವ್ಯಕ್ತಿಗಳು ಯಾರು ?**

ಮೂರ್ತಿರಾಯರು ತಕ್ಷಣ ಉತ್ತರಿಸಿದರು: 'ಪುಸ್ತಕಗಳು, ಅಲ್ಲಿನ ಪಾತ್ರಗಳು.' 'ಕಿಂಗ್ ಲಿಯರ್'ನಲ್ಲಿ ಬರುವ 'What is in this nature that makes these hard hearts' ಎಂಬಂತಹ ಮಾತುಗಳು ನನ್ನ ಮೇಲೆ ಗಾಢ ಪ್ರಭಾವ ಬೀರಿವೆ. ನಾನು ವೆಸ್ಲಿಯೆನ್ ಮಿಷನ್ ಹೈಸ್ಕೂಲಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಓದಲು ಬೈಬಲ್ ಸಿಕ್ಕಿತು. ಅದೂ ನನ್ನ ಮೇಲೆ ಪ್ರಭಾವ ಬೀರಿದೆ.

ಮತ್ತೊಂದು ಘಟನೆ ನೆನಪಾಗುತ್ತಿದೆ: ನಾನು ಚಿಕ್ಕವನಾಗಿದ್ದಾಗ ಒಮ್ಮೆ ನಮ್ಮ ತಂದೆಯವರ ಎದುರಿಗೆ ಬಾಳೆಹಣ್ಣು ತಿನ್ನುತ್ತಿದ್ದೆ. ನಾನು ಕಚ್ಚಿ ತಿನ್ನುತ್ತಿದ್ದೇನೆಂದು ಅವರು ಆಕ್ಷೇಪಿಸಿದರು. ನಾನು ಕಚ್ಚಿ ತಿಂದಿರಲಿಲ್ಲ. ಇಲ್ಲವೆಂದು ಹೇಳಿದೆ. ಥಟೀರನೆ ಕೆನ್ನೆಗೆರಡು ಬಾರಿಸಿದರು.

ನಂತರ ಅವರಿಗೆ ಖಚಿತವಾಯಿತು–ನಾನು ಕಚ್ಚಿ ತಿಂದಿರಲಿಲ್ಲವೆಂದು. ಆಗ ಅವರು ನನ್ನನ್ನು ಹತ್ತಿರದ ದೇವಸ್ಥಾನಕ್ಕೆ ಕರೆದು ಕೊಂಡು ಹೋಗಿ,'ಆ ದೇವರಿಗೆ ನಮಸ್ಕರಿಸು' ಎಂದರು. ತಾವೂ ನಮಸ್ಕರಿಸಿದರು... ಕಣ್ಣಂಚಿನಲ್ಲಿ ನೀರು ಮಡುಗಟ್ಟಿತ್ತು. 'ನೋಡು, ಇನ್ನು ಮೇಲೆ ನನಗೆ ಕೋಪ ಬಂದಾಗ ನೀನು ಅಲ್ಲಿರಬೇಡ' ಎಂದು ತಬ್ಬಿಕೊಂಡರು.

ಈ ಘಟನೆ ನನಗೆ ಮತ್ತೆ ಮತ್ತೆ ನೆನಪಾಗುತ್ತದೆ. ನನ್ನ ವ್ಯಕ್ತಿತ್ವದ ಒಂದಂಶವಾಗಿದೆ. ಪ್ಲೇಗ್ ರೋಗ ಬಂದ ಸಂದರ್ಭದಲ್ಲಿ ನಮ್ಮ ತಂದೆ ರೋಗಿಗಳ ನಡುವೆ ಸೇವೆ ಮಾಡುತ್ತಿದ್ದುದು, ನಾನು ಅವರಿಗೆ ಊಟ ತೆಗೆದುಕೊಂಡು ಹೋಗಿ ದೂರದಲ್ಲೆ ನಡುರಸ್ತೆಯಲ್ಲಿ ಇಟ್ಟು ಬರುತ್ತಿದ್ದುದು ನೆನಪಾಗುತ್ತಿದೆ. ಇವೆಲ್ಲವೂ ನನ್ನನ್ನು ರೂಪಿಸಿವೆ.

• ನಿಮ್ಮ ದಾಂಪತ್ಯ ಜೀವನ....

ಓ ! ಆ ವಿಚಾರದಲ್ಲಿ ನಾನು ಅದೃಷ್ಟವಂತ. ಜಯಲಕ್ಷ್ಮೀ- ನನ್ನ ಹೆಂಡತಿ. ನನ್ನ ಬದುಕನ್ನು ಹಸನಾಗಿಸಿದ, ಅಲ್ಲಿ ಕೌಟುಂಬಿಕ ಜೀವನವನ್ನು ಸಹನೀಯವಾಗಿಸಿದ ಅದ್ಭುತ ಚೇತನ.

ಮೂರ್ತಿರಾಯರು ಆ ಕ್ಷಣ ಭಾವುಕರಾದಂತೆ ನನಗೆ ಅನ್ನಿಸಿತು. ಮೂರ್ತಿರಾಯರಿಗೆ ಮೂವರು ಗಂಡು ಮಕ್ಕಳು. ಹಿರಿಯ ಮಗ ಸುಬ್ಬರಾಮಯ್ಯನವರು ಪವರ್ ಇಂಜಿನೀಯರ್ ಆಗಿದ್ದು, ಈಗ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ. ಅವರ ಮನೆಯಲ್ಲೇ ಮೂರ್ತಿರಾಯರ ವಾಸ್ತವ್ಯ. ಎರಡನೆಯ ಮಗ ನಾಗರಾಜ್ ತೀರ್ಥಹಳ್ಳಿಯಲ್ಲಿದ್ದಾರೆ. ಮೂರನೆಯ ಮಗ ರಾಮಚಂದ್ರ ಅಮೇರಿಕಾದಲ್ಲಿದ್ದಾನೆ. ಸುಬ್ಬರಾಮಯ್ಯನವರ ಪ್ರಕಾರ ಮೂರ್ತಿರಾಯರು ಕೌಟುಂಬಿಕ ವ್ಯವಹಾರದಲ್ಲಿ ಹೆಚ್ಚು ತೊಡಗಿಸಿಕೊಂಡವರಲ್ಲ. ಅವೆಲ್ಲವೂ ಜಯಲಕ್ಷ್ಮೀಯವರ ಜವಾಬ್ದಾರಿ. ಮೊದಲಿನಿಂದಲೂ ತುಂಬ ಶಿಸ್ತಿನ ವ್ಯಕ್ತಿ. ನಿಯಮಬದ್ಧ ಬದುಕು. ಆದರೆ ಹಾಸ್ಯಪ್ರಿಯ ಮನೋಭಾವ. ಲಲಿತ ಪ್ರಬಂಧದಲ್ಲಿ ಸಾಧನೆ ಮಾಡಲು ಈ ಮನೋಭಾವವೇ ಕಾರಣವಾಗಿರಬಹುದು.

ಈ ಹಿನ್ನೆಲೆಯಲ್ಲಿ ಕೇಳಿದೆ–

• **ಸಾಹಿತ್ಯದಲ್ಲಿ ಗದ್ಯದ ಸ್ಥಾನ.....**

ಮೊದಲಿನಿಂದಲೂ ಸಾಹಿತ್ಯವೆಂದರೆ ಕಾವ್ಯವೆಂಬ ಪರಿಕಲ್ಪನೆಯೇ ರೂಢಿಗೆ ಬಂದುಬಿಟ್ಟದೆ. ಈಗಲೂ ಕವಿಗಳಿಗಿರುವ ಸಾಮಾಜಿಕ ಮನ್ನಣೆ ಬೇರೆ ಪ್ರಕಾರದ ಲೇಖಕರಿಗೆ ಅಷ್ಟು ಸುಲಭವಾಗಿ ಸಿಗುವುದಿಲ್ಲ. ಬಹುಶಃ ಲಯಬದ್ಧ ರಚನೆ ಸಹ ಕಾವ್ಯದ ಜನಪ್ರಿಯತೆಗೆ ಕಾರಣವಿರಬೇಕು. ಗದ್ಯದಲ್ಲಿ ಕತೆ, ಕಾದಂಬರಿ ಇವುಗಳಿಗಿರುವ ಸ್ಥಾನ ವಿಚಾರ ಸಾಹಿತ್ಯಕ್ಕಿಲ್ಲ. ಈ ಬಗ್ಗೆ ನಾವೆಲ್ಲರೂ ಗಂಭೀರವಾಗಿ ಯೋಚಿಸಬೇಕು. ಸಾಹಿತ್ಯದಲ್ಲಿರುವ ವೈಚಾರಿಕ ಅಂಶದ ಕಡೆಗೆ ಓದುಗರ ಆಸಕ್ತಿ ಬೆಳೆಯುವಂತೆ ಮಾಡಬೇಕು. ಸಾಮಾನ್ಯವಾಗಿ ಭಾವುಕ ಅಂಶ ತಕ್ಷಣ ಮನಸ್ಸನ್ನು ಆಕ್ರಮಿಸುತ್ತದೆ, ಅದು ಸಹಜ. ಆದರೆ ಶ್ರೇಷ್ಠ ಸಾಹಿತ್ಯದಲ್ಲಿ ಅನುಭವ ಮಥಿತ ವಿಚಾರವೂ ಪಟ್ಟವಾಗಿರುತ್ತದೆ. ಅದರ ಬಗ್ಗೆ ಓದುಗ ಚಿಂತಿಸಬೇಕು, ಆ ಜಗತ್ತಿಗೆ ಆತ ಪ್ರವೇಶ ಪಡೆಯಬೇಕು. ಆಗ ಸಾಹಿತ್ಯದ ನಿಜವಾದ ಪ್ರಯೋಜನವನ್ನು ಆತ ಪಡೆಯುತ್ತಾನೆ.

• **ನಿಮಗೆ ಸಂಗೀತದಲ್ಲಿ ವಿಶೇಷ ಆಸಕ್ತಿ. ಇದಕ್ಕೆ ಪ್ರೇರಣೆ ?**

ಚಿಕ್ಕಂದಿನಲ್ಲಿ ನನಗೆ ಒಳ್ಳೆಯ ಕಂಠವಿತ್ತು. ಚೆನ್ನಾಗಿ ಹಾಡುತ್ತಿದ್ದೆ. ಶಾಲಾ ಪರೀಕ್ಷೆಯೊಂದರಲ್ಲಿ ನನಗೆ ಬಹುಮಾನ ಬಂದಾಗ ಆ ಹಣದಲ್ಲಿ ನಾನು ಹಾರ್ಮೋನಿಯಂ ಕೊಂಡುಕೊಂಡಿದ್ದೆ. ನಮ್ಮ ತಂದೆಗೆ ನನ್ನ ಸಂಗೀತಾಸಕ್ತಿ ಅಷ್ಟು ಪ್ರಿಯವಾದುದಾಗಿರಲಿಲ್ಲ. ಹಾಗಾಗಿ ನಾನು ಸಂಗೀತಗಾರನಾಗುವುದು ತಪ್ಪಿತು.

• **ಪಾಶ್ಚಾತ್ಯ ಸಂಗೀತಕ್ಕೂ ಭಾರತೀಯ ಸಂಗೀತಕ್ಕೂ ಇರುವ ಮುಖ್ಯ ವ್ಯತ್ಯಾಸ?**

ಅಲ್ಲಿ Harmony ಮುಖ್ಯ, ನಮ್ಮಲ್ಲಿ Melody ಪ್ರಧಾನ. ಆ ಬಗ್ಗೆ ಮೂರ್ತಿರಾಯರು ಸಾಕಷ್ಟು ವಿವರಿಸಿದರು. ಬದುಕಿನಲ್ಲಿ ಸಂಗೀತದ ಅಗತ್ಯದ ಬಗ್ಗೆ ಕೇಳಿದಾಗ Music makes me more human ಎಂದು ಹೇಳಿದರು.

• ಸಾಹಿತ್ಯ, ಸಂಗೀತಗಳ ಜೊತೆಗೆ ನಿಮ್ಮ ಇತರ ಆಸಕ್ತಿ....

ಮೂರ್ತಿರಾಯರು ತಟಕ್ಕನೆ ಹೇಳಿದರು–Friends. ಅವರೊಡನೆ ಹರಟೆ. ವಿದ್ಯಾರ್ಥಿ ದೆಸೆಯಲ್ಲಿ ಅವರು ಟೆನಿಸ್ ಆಡುತ್ತಿದ್ದರಂತೆ. ಹೆಂಡತಿಯೊಡನೆ ಪಗಡೆಯಾಡುತ್ತಿದ್ದುದನ್ನು ನೆನಪಿಸಿಕೊಂಡರು.

ಮೂರ್ತಿರಾಯರೊಡನೆ ಮಾತನಾಡುವಾಗ ವಯೋವೃದ್ಧ, ಜ್ಞಾನವೃದ್ಧರೊಡನೆ ಮಾತನಾಡುತ್ತಿದ್ದೇವೆ ಎಂದು ಅನ್ನಿಸುವುದಿಲ್ಲ. ಆಶ್ಚರ್ಯವೆಂದರೆ ಕೆಲವೊಮ್ಮೆ ನಮ್ಮ ಮಾತುಗಳೇ ವೃದ್ಧಾಪ್ಯದ ಹಳಹಳಿಕೆಯ ಧಾಟಿ ಹಿಡಿದ ಅನುಮಾನವಾಗಿ ಬಿಡುವಷ್ಟು ಅವರು ಸಮಕಾಲೀನರಾಗಿದ್ದಾರೆ. ಆಪ್ತವಾಗಿ ಮಾತಾಡುತ್ತಲೇ ನಮ್ಮನ್ನು ಚಿಂತನೆಗೆ ಅದ್ದುತ್ತಾರೆ. ಮನುಷ್ಯ ಸಹಜ ಭಾವನೆಗಳನ್ನು ಪ್ರಕಟಿಸುತ್ತಲೇ 'ಪುರುಷೋತ್ತಮ' ರೆಂಬ ಅನುಭವ ಮೂಡಿಸುತ್ತಾರೆ.

ನೆನಪುಗಳು ದಟ್ಟವಾಗಿವೆ. ಮರೆವು ಆಕ್ರಮಣ ಮಾಡಲು ಸಿದ್ಧವಾದಂತೆ ತೋರುತ್ತದೆ. ಆದರೆ ಮೂರ್ತಿರಾಯರ ಚೇತನ ಮರೆವಿಗೆ ಸಂಪೂರ್ಣ ಶರಣಾಗಿಲ್ಲ. ಆಗೀಗ ಅವರು ಹಾಗೆ 'ಮರೆತಿದೆ' ಎಂದರೂ ತಕ್ಷಣ ಖಚಿತ ಧಾಟಿಯಲ್ಲಿ ಅದನ್ನು ವಿವರಿಸುತ್ತಾರೆ. 'ಸ್ವವಿಮರ್ಶೆ'ಯ ಎಚ್ಚರ ಅವರ ಮಾತುಗಳಲ್ಲಿ, ವ್ಯಕ್ತಿತ್ವದಲ್ಲಿ ಎದ್ದು ಕಾಣುತ್ತದೆ. ಎ.ಎನ್. ಮೂರ್ತಿರಾಯರಂಥವರ ಒಡನಾಟ ಬದುಕಿನ ಭಾಗ್ಯಗಳಲ್ಲೊಂದು.

# ಶತಮಾನದ ದಾರ್ಶನಿಕ : ಶತಾಯುಷಿ
# ಪ್ರೊ. ಎ. ಎನ್. ಮೂರ್ತಿರಾವ್

ಸತ್ಯನಾರಾಯಣರಾವ್ ಅಣತಿ

*ಕಾನನ ಬಾಲೆ*
*ಓ ಗುಣ ಶೀಲೆ*
*ಯಾವನ ಕೊರಳಿಗೆ ನಿನ್ನಯ ಮಾಲೆ?*

ಇದು ಹರೆಯದಲ್ಲಿ ಪ್ರೊ. ಎ. ಎನ್. ಮೂರ್ತಿರಾವ್ ಅವರು ರಚಿಸಿದ ಕವಿತೆಯ ಸಾಲುಗಳು. ಪ್ರೊ. ತೀ. ನಂ. ಶ್ರೀಕಂಠಯ್ಯನವರು 'ನಮ್ಮ ಮೂರ್ತಿರಾವ್‌ಗೆ ಕವಿತೆ ಬರೆಯೋಕೆ ಆಗುಲ್ಲಾ' ಎಂದು ಹೇಳಿದಾಗ 'ಯಾಕೆ ಹೀಗೆ ಹೇಳ್ತೀರಾ ಸಾರ್' ಎಂದು ಛಾಲೆಂಜ್‌ಗಾಗಿ ಆ ಕಾಲದ ಚಿತ್ರ ತಾರೆ ಕಾನನ್ ಬಾಲಾ ಕುರಿತು ಕವಿತೆ ಬರೆದು ತೀನಂಶ್ರೀ ಅವರಿಗೆ ತೋರಿಸಿದರು. ಅದನ್ನು ಓದಿದ ತೀನಂಶ್ರೀ : 'ಇದನ್ನು ನಿಮ್ಮ ಹೆಂಡತಿಗೆ ಕಳಿಸ್ತೇನೆ' ಎಂದು ಹೇಳಿದ ಹಾಸ್ಯ ಸಂದರ್ಭವನ್ನು ನೆನಪಿಸಿಕೊಂಡು ಹೊಟ್ಟೆ ತುಂಬ ನಕ್ಕು ನಗಿಸಿದರು.

ಇದೇ ಮೇ 13ರ ಸಂಜೆ ಶಿವಮೊಗ್ಗೆಯಲ್ಲಿ ಅಭಿಮಾನಿ ಕಿರಿಯ ಗೆಳೆಯರೊಂದಿಗೆ ಸುಮಾರು ಮೂರು ಗಂಟೆ ಉತ್ಸಾಹದಿಂದ ಆಡಿದ ಮಾತುಗಳು. ಪ್ರಶ್ನೆಗಳಿಗೆ ಉತ್ತರಿಸಿದ ವಿಚಾರಗಳು ನಾಡಿನ ಸಾಂಸ್ಕೃತಿಕ ಆಸ್ತಿಯೇ ಸರಿ. ಕಲೋನಿಯಲ್ ಇಂಪ್ಯಾಕ್ಟ್, ಗ್ಲೋಬಲೈಸೇಶನ್‌ನ ಪರಿಣಾಮ, ಇಂಗ್ಲೀಷ್ ಕಲಿಕೆ. ಹಬ್ಬ, ಹರಿದಿನಗಳ ಸಂಭ್ರಮ, ಕುವೆಂಪು ಅವರೊಂದಿಗಿನ ಒಡನಾಟ, ಇಂದಿನ ಮಹಿಳೆ, ದೇವರು, ಕಲೆ ಸಾಹಿತ್ಯ ಹಲವು ಹತ್ತು ಸಂಗತಿಗಳ ಬಗ್ಗೆ ಮೂರ್ತಿರಾವ್ ಅವರ ನಿರ್ಮಲ ಮನಸ್ಸಿನ ನಿಶ್ಚಿತ ನಿಲವುಗಳು, ಜೀವನ ಆಸಕ್ತಿ ಚೇತೋಹಾರಿಯಾಗಿ ಅನಾವರಣಗೊಂಡವು. ಹಲವು ಚಿಂತೆಗೆ ಹಚ್ಚುವವು. ಪ್ರಚೋದಿಸುವವು, ಮತ್ತಷ್ಟು ಮುದಕೊಡುವವು ಆಗಿದ್ದವು.

ಇದೇ ಜೂನ್ 16 ರಂದು ಒಂದು ನೂರಕ್ಕೆ ಕಾಲಿಡಲಿರುವ ಈ ಹಿರಿಯ ಸಾಹಿತಿಗೆ ಮಾತು ಎಂದರೆ ಪ್ರಾಣ. ದಿನನಿತ್ಯ ಬೆಂಗಳೂರಿನಲ್ಲಿ ಈಗಿರುವ ತಮ್ಮ ಮನೆಗೆ ಬರುವ ನಾಲ್ಕಾರು ಸ್ನೇಹಿತರೊಂದಿಗೆ ಮಾತುಕತೆಯಲ್ಲಿ ಲವಲವಿಕೆಯಿಂದ ಕಾಲ ಕಳೆಯುತ್ತಾರೆ. ಹೊಳೆಯುವ ಕಣ್ಣುಗಳು, ಉತ್ಸಾಹದ ಧ್ವನಿಯ ಏರಿಳಿತ, ಜೀವನ ಶ್ರದ್ಧೆ, ಒಳ್ಳೆಯದನ್ನು ಕಾಣುವ ಕೇಳುವ, ತಿಳಿಯ ಹೇಳುವ, ಆತ್ಮೀಯವಾಗಿ ಒಡನಾಡುವ ಚೈತನ್ಯದ ಚಿಲುಮೆ ಯಂತಿರುವ ಐದಡಿಗಿಂತ ಕಮ್ಮಿ ಎತ್ತರದ ಮೂರ್ತಿ ಇನ್ನೂ ಬಾಲಕನಂತೆ ಇದ್ದಾರೆ.

ಆಲೋಚನೆ, ಅಭಿವ್ಯಕ್ತಿ ಪ್ರಬುದ್ಧ ಮನಸ್ಸಿನದು. ಉಲ್ಲಾಸದ ಮಾತುಗಾರಿಕೆ. ವಿಚಿತ ವಿಚಾರಧಾರೆ, ಜನ ಚೆನ್ನಾಗಿ ಬದುಕಬೇಕೆಂಬ ಸಮೃದ್ಧ ವಿಶ್ವ ಸಂಸ್ಕೃತಿಯ ಸ್ವರೂಪ ದಂತಿರುವ ಹಿರಿಯ ಚೇತನದೊಂದಿಗೆ ನಡೆಸಿದ ಮಾತುಕತೆಯನ್ನು ದಾಖಲಿಸುವುದು ಎಂದರೆ ಈ ಶತಮಾನದ ನಾಡಿನ ಚರಿತ್ರೆಯ ಸಿಂಹಾವಲೋಕನವೂ, ಸೀಮೋಲ್ಲಂಘನವೂ ಆಗಿದೆ.

ಮಂಡ್ಯ ಜಿಲ್ಲೆಯ ಅಕ್ಕಿಹೆಬ್ಬಾಳಿನ ಮುಗ್ಧ ದಿನಗಳು, ಹಬ್ಬಹರಿದಿನದ ಸಂಭ್ರಮ ಸಡಗರದಿಂದ ಹಿಡಿದು ಷೇಕ್ಸ್‌ಪಿಯರ್, ಮಿಲ್ಟನ್, ಮೋಲಿಯೇರ್, ಗಯಟೆ, ಸಾಕ್ರಟೀಸ್, ಹೆಗೆಲ್, ಕ್ಯಾಂಟ್, ವ್ಯಾಸ, ವಾಲ್ಮೀಕಿಯರ ಸಾಹಿತ್ಯ– ಲೋಕಜ್ಞಾನ, ಐನ್‌ಸ್ಟೀನ್, ರಸಾಯನ, ಭೌತವಿಜ್ಞಾನ ಕೊಡುಗೆ ಎಲ್ಲಾದರ ಬಗ್ಗೆಯೂ ನಿಖರವಾಗಿ ಅಭಿಪ್ರಾಯ ವನ್ನು ಮಂಡಿಸುವ ಮೂರ್ತಿರಾವ್ ಅವರು ಬ್ರಿಟಿಷ್ ಆಡಳಿತವನ್ನು 'God's blessings' ಎಂದೇ ಭಾವಿಸಿದ್ದಾರೆ. ಇಂಗ್ಲೀಷ್ ವಿದ್ಯಾಭ್ಯಾಸದಿಂದ ಭಾರತೀಯರಲ್ಲಿ ಆದ ಪರಿವರ್ತನೆ ಏನು ಅಂದರೆ "ಇಂದು ನಾವು ಶಾಸ್ತ್ರ ಪುರಾಣಗಳು ಏನು ಹೇಳುತ್ತವೆ ಎಂದು ಕೇಳುವುದಿಲ್ಲ. is it reasonable? ಎಂದು ಪ್ರಶ್ನಿಸುವ ಸಾಮರ್ಥ್ಯ ತಂದುಕೊಟ್ಟಿದೆ. Wretched caste system ನ idiotic mentality ಯನ್ನು ದೂರ ಮಾಡಿದೆ. ಇವತ್ತಿನ ನಮ್ಮ ದೇಶದ ಸ್ತ್ರೀಯರು ನೂರು ವರ್ಷ ಹಿಂದಿನ ಮಹಿಳೆಗಿಂತ ಬಹಳ ಮುಂದುವರಿದ ಸ್ಥಿತಿಯಲ್ಲಿ ಇದ್ದಾರೆ. ನಮ್ಮ ಸಮಾಜದ ಇಂದಿನ ಹುಡುಗಿಯರಲ್ಲಿ supreme self confidence ಇದೆ. ತಾವು ಏನು ಮಾಡಬಲ್ಲೆವೆಂಬ ಅರಿವಿದೆ ಮತ್ತು ತಮ್ಮ ಸಾಮರ್ಥ್ಯ ತೋರಿಸುತ್ತಿದ್ದಾರೆ; ಇದನ್ನು ನೋಡಿ ನನಗೆ ಬಹಳ ಸಂತೋಷ. ಹಿಂದಿನ ಕಾಲದ ಹೆಂಗಸರಿಗೆ ಅಡಿಗೆ ಮನೆ ಬಿಟ್ಟು ಇನ್ನೇನೂ ಇರಲಿಲ್ಲ. ವೆರೈಟಿ ಇರಲಿಲ್ಲ." ಎಂದು ತಮಗೆ ಇಂಗ್ಲೆಂಡ್ ತೋರಿಸಿಕೊಂಡು ಬಂದ ತಮ್ಮ ಮೊಮ್ಮಗಳ ಸಾಮರ್ಥ್ಯದ ಬಗ್ಗೆ ಹೆಮ್ಮೆಯಿಂದ ಮಾತನಾಡಿದರು.

ಶ್ರೀಮತಿ ಪ್ರಭಾರವರು ಮೂರ್ತಿರಾಯರು ಅವರ ಪತ್ನಿ ಶ್ರೀಮತಿ ಜಯಲಕ್ಷ್ಮಿ ಅವರೊಂದಿಗೆ ಅಕ್ಕಿ ಹೆಬ್ಬಾಳಿನಲ್ಲಿ ಸಂಸಾರ ನಡೆಸುತ್ತಿದ್ದ ಸಂದರ್ಭವೊಂದು ಅವರ ಪ್ರಬಂಧದಲ್ಲಿ ಪ್ರಸ್ತಾಪವಾಗಿರುವುದನ್ನು ನೆನಪಿಸಿದರು. ಮೂರ್ತಿರಾವ್‌ರವರು ಉತ್ತೇಜಿತರಾಗಿ "ಹೌದು ಹೌದು, ನಾವಿಬ್ಬರೇ ಸ್ವತಂತ್ರವಾಗಿರಲು ಅಕ್ಕಿ ಹೆಬ್ಬಾಳಿನಲ್ಲಿ ಮನೆ ಮಾಡಿ ಸ್ವಲ್ಪ ದಿನ ವಾಸವಾಗಿದ್ದೆವು" ಎನ್ನುತ್ತಲೇ ಒಂದು ಹಾಸ್ಯ ಪ್ರಸಂಗವನ್ನು ಜ್ಞಾಪಿಸಿಕೊಂಡರು ; ಒಂದು ಸಲ ತಮಾಷೆಗೆ "ಹೀಗೆಲ್ಲಾ ಮಾತಾಡಿದರೆ ನಾನು ಸುಮ್ಮನಿರೋಲ್ಲ. 'ತರುಣಿಗೆ ಪತಿ ದೈವಂ' ತಿಳ್ಕೋ" ಎಂದೆ. She quietly replied "ನೀವು ದೇವರ ಹಾಗೆ ನಡಕೊಂಡ್ರೆ ನಾನೇನು ಬೇಡ ಅಂತೀನೆ?" ಅಂದಳು ಎನ್ನುತ್ತಾ ನಗುವಿನಲ್ಲಿ ತೇಲಿದರು. ಅವಳು ಲೋಯರ್ ಸೆಕೆಂಡರಿವರೆಗೆ ಮಾತ್ರ ಓದಿದ್ದಳು. ನಾನು ಇಂಗ್ಲಿಷಿನ ಒಳ್ಳೊಳ್ಳೆ ಕಥೆಗಳನ್ನು, ರಾಮಾಯಣ, ಮಹಾಭಾರತದ ಸನ್ನಿವೇಶ ಗಳನ್ನು ಓದಿ ಹೇಳುತ್ತಿದ್ದೆ ಎಂದಾಡುವಾಗ ಪ್ರೀತಿ ತುಂಬಿದ ಕಣ್ಣುಗಳು ಹೊಳೆ ಯುತ್ತಿದ್ದವು.

ಇಂಗ್ಲೀಷ್ ಕಲಿಕೆಯ ಬಗ್ಗೆ: ಪ್ರತಿವರ್ಷ ಎಸ್‌ಎಸ್‌ಎಲ್‌ಸಿ ಪರೀಕ್ಷೇಲಿ ಇಂಗ್ಲೀಷ್‌ನಲ್ಲಿ ಫೇಲ್ ಆಗುತ್ತಿರುವ ಸಾವಿರಾರು ಗ್ರಾಮೀಣ ಮಕ್ಕಳು ದಡ್ಡರಾಗಿ ಮೂಲೆಗುಂಪಾಗುತ್ತಿದ್ದಾರಲ್ಲ. ಈ ರಾಜಕಾರಣಕ್ಕೆ ಏನಂತೀರಿ ಎಂಬ ಡಾ. ರಹಮತ್ ತರೀಕೆರೆ ಅವರ ಪ್ರಶ್ನೆಗೆ– "ನೀವು ಹೇಳುತ್ತಿರುವುದು ನಿಜ, ಯಾವುದೇ ತಲೆಮಾರಿನಲ್ಲಿ ಜ್ಞಾನಾರ್ಜನೆಗಾಗಿ ಶೇ. 20–30 ಜನ ಇದ್ದೇ ಇರ್ತಾರೆ. ಅವರಿಗಾದರೂ ಇಂಗ್ಲೀಷ್ ಭಾಷೆ ಕಲಿಸಬೇಕು, ಉಳಿದ ಜೀವನ ವೃತ್ತಿಗಾಗಿ ಓದುವವರು ಯಾವುದಾದರೂ ತಮ್ಮ ಭಾಷೆಯಲ್ಲಿ ಕಲೀಬಹುದು" ಎಂದು ಅಭಿಪ್ರಾಯ ಪಡುತ್ತಾ 'English is the gate-way to the knowledge of the World' ಆದ್ದರಿಂದಲೇ ನಾವು ಜಗತ್ತಿನ ನಾಗರೀಕರಾಗಿದ್ದೇವೆ ಅದಕ್ಕಾಗಿ ಥ್ಯಾಂಕ್ಸ್ ಹೇಳಬೇಕು.

ನಾವು ನಮ್ಮ ಭಾಷೆ ಮರ್ತಿಲ್ಲ, ಪ್ರೀತಿ ಇರುತ್ತೆ. ಈಗ ನೋಡಿ ನಾನು ಕನ್ನಡ ವಿದ್ಯಾರ್ಥಿ ಅಲ್ಲಾ. ಆದರೂ ನಾನು ಕನ್ನಡದಲ್ಲೇ ಬರೆದೆ. ಇಂಗ್ಲೀಷ್ ಸಾಹಿತ್ಯದ ವಿದ್ಯಾರ್ಥಿಯೂ ಆಗಿದ್ದ ಕನ್ನಡ ಪ್ರೊ. ತೀ.ನಂ.ಶ್ರೀ. ಅವರೂ ಕನ್ನಡದಲ್ಲೇ ಬರೆದರು. ಇದಕ್ಕೆ ಏನಂತೀರಿ? ಎಂದು ತಿರುಗಿ ಪ್ರಶ್ನಿಸಿದರು. ಈ ವಿವೇಕದ ಔಚಿತ್ಯವನ್ನು ಹೇಗೆ ನಿಭಾಯಿಸಬಹುದು.

ಇಂದಿನ ಉದಾರೀಕರಣ, ಗ್ಲೋಬಲೈಸೇಶನ್, ಮುಕ್ತ ಮಾರುಕಟ್ಟೆಯ ಹುರುಪಿನಲ್ಲಿ ದೇಶೀಯ ಜೀವನ–ಸಂಸ್ಕೃತಿ ಕಲೆಯ ಮೇಲೆ ಉಂಟಾಗಬಹುದಾದ ಆಘಾತದ ಬಗ್ಗೆ ಅಣತಿಯವರು ಆತಂಕ ವ್ಯಕ್ತಪಡಿಸಿದರು. 'ಅಂಥದ್ದೇನೂ ಆಗುವುದಿಲ್ಲ. ಬದಲಾಗಿ ನಮ್ಮ ಸಂಸ್ಕೃತಿಯ ಬೆಳವಣಿಗೆಗೆ ಉಪಕಾರವಾಗುತ್ತೆ'. ಅರಿಯಾಕುಡಿ ರಾಮಾನುಜಂ ಅಂಥವರು ಬಂದು ಹಾಡಿದರೆ, ರಾಧಾಕೃಷ್ಣನ್ ಅಂಥವರು ಕೂತ್ಕೊಂಡು ಕೇಳುತ್ತಿದ್ದರು ಎಂದರು. ದೇಶೀಯತೆಯನ್ನು ಉಳಿಸಿಕೊಳ್ಳುವ, ಬೆಳೆಸುವ ಸಂದರ್ಭದಲ್ಲಿ ನಾವು ಅನುಸರಿಸಬಹುದಾದ ರೀತಿಗೆ ಎರಡು ಉದಾಹರಣೆಗಳನ್ನು ನೀಡಿದರು.

1. ಕೇಂಬ್ರಿಜ್ ವಿದ್ವಾಂಸರು, ಮಹಾರಾಜ ಕಾಲೇಜಿನಲ್ಲಿ ಪ್ರೊಫೆಸರ್ ಆಗಿದ್ದ ಎನ್.ಎಸ್. ಸುಬ್ಬರಾವ್ ಅವರು ವರದಾಚಾರ್ ನಾಟಕ ಕಂಪನಿ ಮೈಸೂರಿನಲ್ಲಿ ಪ್ರದರ್ಶನ ನೀಡುತ್ತಿದ್ದ ಕಾಲದಲ್ಲಿ ಸೀಸನ್ ಟಿಕೆಟ್ ಕೊಂಡು ನಾಟಕ ನೋಡುತ್ತಿದ್ದುದನ್ನು ನೆನಪಿಸಿಕೊಂಡರು. 'ಪ್ರತಿ ಸಲ ವರದಾಚಾರ್ಯರು ಮೈಸೂರಿಗೆ ಬಂದಾಗ ನಾನು ಹೀಗೆ ಮಾಡುತ್ತೇನೆ' ಎಂದು ಹೇಳಿದರು. ನಮ್ಮನ್ನೆಲ್ಲ ನೀವ್ಯಾಕೆ ಯಾರೂ ನಾಟಕ ನೋಡೋಕೆ ನಿನ್ನೆ ಬಂದಿದ್ದಿಲ್ಲ ಎಂದು ಕೇಳಿದರು. ಕಂಪನಿ ನಾಟಕ ನೋಡಿದರೆ ಸುಬ್ಬರಾಯರು ಏನು ತಿಳಿಯುತ್ತಾರೂ ಎಂಬ ಸಂಕೋಚದಲ್ಲಿ ಇದ್ದ ವಿದ್ಯಾರ್ಥಿಗಳು, ಉಪನ್ಯಾಸಕರು, ನಿಸ್ಸಂಕೋಚವಾಗಿ ನಾಟಕ ನೋಡಲಿಕ್ಕೆ ಆರಂಭಿಸಿದರು. ನಾನು ನಿರುಪಮ ನಾಟಕ ನೋಡಿ ಮೆಚ್ಚಿಕೊಂಡೆ. ಆ ಭಾಷಾಂತರಿಸಿದ ನಾಟಕದಲ್ಲಿ the whole thing was Indian.

2. ನಮ್ಮ ಮನೆಯಲ್ಲಿ ಮಹಾನವಮಿ ಹಬ್ಬದ ದಿನ ದೇವಿ ಪೂಜೆ ಮಾಡಿ ಮುತ್ತೈದೆಯರನ್ನು ಕರೆದು ಕಾಲು ತೊಳೆದು, ಹೂವೀಳ್ಯಕೊಟ್ಟು, ಅವರು ಊಟ ಮಾಡಿ ಹೋದ ಮೇಲೆ ಮನೆಯವರೆಲ್ಲ ಊಟ ಮಾಡುತ್ತಿದ್ದೆವು. The beauty of that

ceremony itself appeals to me. I have enjoyed that ceremony. ಅಂಥದ್ದನ್ನು ನಾನು ಇಷ್ಟಪಡುತ್ತಿದ್ದೆ ಎಂದು ಉತ್ಸುಕರಾಗಿ ಹೇಳಿದರು. Pepsi Cola ಪರಿಣಾಮದ ಬಗ್ಗೆ : ನೀವು ಇವತ್ತು ಒಂದು ಅಂಥದೇ Tinge ಇರುವ Drink ತಯಾರು ಮಾಡಿ. I will be the first to buy ಎಂದು ನಕ್ಕರು.

ನಮ್ಮ ಜನಪದ ಕಲೆಯ ಮೇಲೆ ಆಗುತ್ತಿರುವ ಪರಿಣಾಮಗಳನ್ನು ಪ್ರಶ್ನಿಸಿದೆವು. ಇದು ನಿಮ್ಮ ಊಹೆ, ಹೀಗಾಗಬಹುದೇ ಅಂತ: ಜನಪದ ಕಲೆ ಬಗ್ಗೆ ಎರಡು ಅಂಶಗಳನ್ನು ಹೇಳಬಹುದು: (1) There is an intrinsic vigour in our folk art. (2) There is also an intrinsic crudity. ಅದಕ್ಕಾಗಿ, ಯಾರು ಕಲೆಯ ಸಹಜ ಸೌಂದರ್ಯ ಇಷ್ಟಪಡ್ತಾರೋ, ಸವಿಯುವುದರಲ್ಲಿ ಮುಂದುವರಿದು ಇರ್ತಾರೋ ಅಂಥವರು ಅದನ್ನು ನೋಡಿ ಸಂತೋಷಪಡ್ತಾರೆ. ಅಂಥದನ್ನು ಹುಡಿಕ್ಕೊಂಡು ಹೋಗ್ತಾರೆ ಎಂದು ಅಭಿಪ್ರಾಯಪಟ್ಟರು. ಇಂಥ ಅಭಿರುಚಿ ಇಂದಿನ ಸಾಂಸ್ಕೃತಿಕ ಸಂದರ್ಭದ ಅವಶ್ಯಕತೆ ಅನ್ನಿಸುವುದಿಲ್ಲವೇ?

ಎಂಬತ್ತನೇ ವಯಸ್ಸಿನಲ್ಲಿ 'ದೇವರು' ಎನ್ನುವ ಪುಸ್ತಕವನ್ನು ಬರೆದು, ನಂಬಿಕೊಂಡಿರುವವರನ್ನು ಮತ್ತು ವಿಚಾರವಂತರನ್ನೂ ಹುಬ್ಬೇರಿಸುವಂತೆ ಮಾಡಿದ ಮೂರ್ತಿರಾವ್ ಅವರು 'Goodness is God' ಎಂದು ನಂಬಿರುವವರು. ಆ ಬಗ್ಗೆ ಕಲಿಮುಲ್ಲಾ ಪ್ರಶ್ನಿಸಿದಾಗ, 'ಆ ಪುಸ್ತಕ ಓದಿ ಶಿವಮೊಗ್ಗೆಯವರು ಒಬ್ಬರು "The less said the bettter" ಅಂದರಂತೆ' ಎಂದು ನಕ್ಕರು. 'ನಮ್ಮ ಹೃದಯದಲ್ಲಿ ಯಾವತ್ತು ಯಾವುದು ಒಳ್ಳೆ ಯೋಚನೆ ಬರುತ್ತೋ; ಯಾರಾದರೂ ಕಷ್ಟಪಡುತ್ತಿರುವವರನ್ನು ನೋಡಿದಾಗ, ಅಯ್ಯೋ ಪಾಪ ಅಂದುಕೊಂಡಾಗ "It is God speaking; God is within us" ಆ ಗಾಡ್‌ನ ನಾನು ನಂಬುತ್ತೀನಿ, ಎಲ್ಲೋ ಸ್ವರ್ಗದಲ್ಲಿ, ಸಿಂಹಾಸನದ ಮೇಲೆ ಹಂಸದ ಮೇಲೆ, ಕ್ಷೀರ ಸಾಗರದಲ್ಲಿ ಕುಳಿತು, ಜನರಿಗೆ ನೀನು ಇದು ಮಾಡು– ಅದು ಮಾಡು ಅಂತ ಆಜ್ಞಾಪಿಸುವ ದೇವರನ್ನಲ್ಲಾ. ಅಂಥ ದೇವರಲ್ಲಿ ನನಗೆ ನಂಬಿಕೆ ಇಲ್ಲಾ. ಯಾರಾದರೂ ಬಡತನದಲ್ಲಿ ಇದ್ದರೆ, ಒಪ್ಪೊತ್ತಿಗೆ ಇಲ್ಲದಂತೆ, ಸಂಕಟದಲ್ಲಿ ಇದ್ದಾರಲ್ಲಾ ಅವರಿಗೆ ಏನಾದರೂ ಸಹಾಯ ಮಾಡಬೇಕು ಅನ್ನಿಸಿದಾಗ that which makes me to think of a fellow being; to me it is God. ಎಲ್ಲಿ ಒಳ್ಳೆತನ ಇರುತ್ತೆ, ಅಲ್ಲಿ ದೇವರು ಇದ್ದೇ ಇದ್ದಾನೆ; ಆದ್ದರಿಂದ ನನ್ನ ನಂಬಿಕೆ 'Goodness is God'. 'ಇನ್ನೊಬ್ಬನಿಗೆ ಕಪಾಳಕ್ಕೆ ಹೊಡೆದು ಸಂತೋಷವಾಗಿರಲು ಸಾಧ್ಯವೇ?' ಎಂದು ಪ್ರಶ್ನಿಸುವ ಮೂರ್ತಿರಾವ್ ಅವರು, ಬುದ್ಧ, ಬಸವ, ಗಾಂಧಿ ಅಂಥ ಮಾನವತಾವಾದಿಗಳ ಮುಂದುವರಿದ ಚಿಂತಕರಂತಿದ್ದಾರೆ ಅನ್ನಿಸುತ್ತದೆ. ಇವತ್ತಿನ ಸ್ವಾರ್ಥ, ಹಿಂಸೆಗೆ ಪರಿಹಾರ ಇಂಥ ಆಲೋಚನಾ ಕ್ರಮದಲ್ಲಿ ಇದೆ ಅನ್ನಿಸುವುದಿಲ್ಲವೆ?

**ವಿಜೇತನ ಪ್ರಶ್ನೆ: ನಾವು ಯಾವುದಾದರೂ ಐಡಿಯಾ–ವಿಚಾರ ವಾದ ಅಥವಾ ಸಿದ್ಧಾಂತಕ್ಕೆ ಅಂಟಿಕೊಂಡಿರುವುದಕ್ಕಿಂತ ಈ ಕ್ಷಣ ಸಹಜವಾದ ಛೇಂಜಸ್‌ಗೆ ತಕ್ಕಂತೆ ಇರುವುದು (ಬದುಕುವುದು) ಒಳ್ಳೆಯದಲ್ಲವೇ?**

ಒಳ್ಳೆಯದಲ್ಲ. definitely ಅಲ್ಲ. ಈಗ ನನಗೆ ಒಬ್ಬನ್ನ ಕೊಂದು ಹಾಕಬೇಕು ಅನ್ನಿಸುತ್ತೆ ಅಂತ ಕೊಂದ್ರೆ, lifeನೆಲ್ಲಾ ಜೈಲ್‌ನಲ್ಲಿ ಕಳೀಬೇಕಾಗುತ್ತೆ. ಯಾಕೇಂದ್ರೆ, we cannot trust our emotions. ಏನೇನೋ ಕೆಟ್ಟ ಕೆಲಸ ಮಾಡ್ತೀವಲ್ಲಾ, ಆಮೇಲೆ ಏನು ಹೇಗೆ ಮಾಡಿಬಿಟ್ಟೆನಲ್ಲಾ ಅನ್ನಿಸುತ್ತೆ. ಯಾಕೆ ಅಂತಹ ಬುದ್ಧಿ ಬಂತು ಅನ್ನಿಸುತ್ತೆ. ಇದು ಎಲ್ಲರಿಗೂ ಆಗುತ್ತೆ. That means that there is something which is always counteracting the sudden bad impression about the subject.

**ಪ್ರಶ್ನೆ: ಹಾಗಂತ ಯಾವುದಾದರೂ ವಾದಕ್ಕೆ ಅಂಟಿಕೊಂಡು, ಒಂದು ಫಿಲಾಸಫಿಗೆ ಕಮಿಟ್ ಆದರೆ interaction ಕಮ್ಮಿ ಆಗಿಬಿಡುತ್ತೆ– ಸಂವೇದನೇನೇ ಕಮ್ಮಿ ಆಗುತ್ತೆ. ಅಲ್ವೆ?**

I don't think anybody can commit himself to a philosophy. Because, we are human beings and we are thinking more about the other person, than about the theory of philosophy. Theory of Philosophyಗೆ respect ಇರಬಹುದು. but normal ಆಗಿ act ಮಾಡುವಾಗ ಕ್ಯಾಂಟ್ ಏನು ಹೇಳ್ತಾನೆ, ಹೆಗೆಲ್ ಏನು ಹೇಳ್ತಾನೆ, ಹಾಗ್ ಮಾಡೋಣ ಅಂತ ನಾವೇನೂ ಅಂದ್ಕೊಳ್ಳೋಲ್ಲಾ.

ಈಗೇನಾದರೂ ಬರಿತಿದ್ದೀರಾ ಸಾರ್ ಪ್ರಶ್ನೆಗೆ: ಈಗ ಆರು ವರ್ಷದ ಹಿಂದೆ ಈಶಾವಾಸ್ಯೋಪನಿಷತ್‌ನ ಮೇಲೆ Commentary ಬರೆಯಲು ಶುರು ಮಾಡಿದೆ. 18 ಮಂತ್ರಗಳಿವೆ. ಆರು ಮಂತ್ರಗಳ ಮೇಲೆ ಬರಿದಿದ್ದೀನಿ. ಇಲ್ಲಿಂದ ಬೆಂಗಳೂರಿಗೆ ಹೋದ ಮೇಲೆ ಬರೆದು ಮುಗಿಸಬೇಕು ಅಂದುಕೊಂಡಿದ್ದೀನಿ. ಹೀಗೆ ಉತ್ಸಾಹವಾಗಿರುವ ಮೂರ್ತಿರಾವ್ ಅವರನ್ನು ಈ ಉಪನಿಷತ್ತಿನ ಮೇಲೆ ಬರೆಯಲು ಕಾರಣ ಕೇಳಿದಾಗ: ಅದರಲ್ಲಿ ಮೊದಲನೆ ಮಂತ್ರವೇ ನನ್ನನ್ನು ಆಕರ್ಷಿಸಿತು.

**ಈಶಾ ವಾಸ್ಯಮಿದಂ ಸರ್ವಂ**
**ಯತ್ಕಿಂಚ ಜಗತ್ಯಾಂ ಜಗತ್ ।**
**ತೇನ ತ್ಯಕ್ತೇನ ಭುಂಜೀಥಾ**
**ಮಾ ಗೃಧಃ ಕಸ್ಯಸ್ವಿದ್ಧನಮ್ ।**

('ಈ ಕ್ಷಣಿಕವಾದ ಜಗತ್ತಿನಲ್ಲಿ ಬದಲಾವಣೆ ಹೊಂದುವಂಥದು ಏನಿದೆಯೋ ಅದೆಲ್ಲವನ್ನೂ ಭಗವಂತನಿಂದ ಆವರಿಸಬೇಕು. ಈ ತ್ಯಾಗದಿಂದಲೇ ನೀನು ಅವಲಂಬನೆ ಪಡೆ. ಬೇರೊಬ್ಬರ ಐಶ್ವರ್ಯಕ್ಕೆ ಆಸೆ ಪಡಬೇಡ'.

(ಉಪನಿಷತ್ತುಗಳ ಸಂದೇಶ – ಪು. 102)

ಇಲ್ಲಿ ಪ್ರಪಂಚದಲ್ಲಿ ಏನೇನಿದೆಯೋ: However small or however great; it is penetrated through by God. that appealed to me: ಎಂದರು.

**ಮಹಾಯುದ್ಧಗಳ ಬಗ್ಗೆ ನಿಮಗೇನು ಅನ್ನಿಸುತ್ತಿತ್ತು? (ಅಣತಿ) :**

"I thought the whole thing, foolish ಅಂತ ಮನಸ್ಸಿಗೆ ಅನ್ನಿಸುತ್ತಿತ್ತು. ಏನ್ ಇಷ್ಟು ಜನಾನ ಕೊಲ್ತಿದ್ದಾರಲ್ಲಾ!– ಅಷ್ಟು ಮಿಲಿಯ peoples ನ್ನು ಕೊಂದರೂ ಪರವಾಗಿಲ್ಲ, ಇಷ್ಟು ಬುದ್ಧಿ ಕಲಿತುಕೊಂಡಿದ್ದೀವೀಂತ ನಾವೇನೂ ಹೇಳುವ ಹಾಗಿಲ್ಲ" ಎಂದು ಹೇಳುವಾಗಿನ ಅವರ ಧ್ವನಿಯಲ್ಲಿ ವಿಷಾದದ ಭಾರ ಗೋಚರವಾಗುತ್ತಿತ್ತು.

ಈ ಶತಮಾನವನ್ನು ಸಂಪೂರ್ಣವಾಗಿ ಕಂಡಿರುವ ಮೂರ್ತಿರಾವ್ ಅವರನ್ನು **'ಕಾಲದಿಂದ ಕಾಲಕ್ಕೆ ಆಗಿರುವ ಡೆವಲಪ್‌ಮೆಂಟ್ ನೋಡಿದರೆ; ನಿಜವಾದ ಪ್ರೋಗ್ರೆಸ್ ಆಗಿದೆ ಅಂತ ಅನ್ನಿಸುತ್ತದೆಯೇ?** (ತೀನಂಶಂ) Absolutely no doubt about it, ನಿಜವಾದ ಪ್ರೋಗ್ರೆಸ್ ಆಗಿದೆ. ಹಿಂದಿನ ಕಾಲವೇ ಚೆನ್ನಾಗಿತ್ತು ಅಂತ ಅಂದ್ರೆ Stupid notion ಎಂದರು (ಗಹಗಹಿಸಿ ನಕ್ಕರು).

ಕುವೆಂಪು, ಕಾರಂತ, ಬೇಂದ್ರೆ ಮುಂತಾದವರ ಒಡನಾಟದ ಓದಿನ ಸ್ನೇಹದ ಮಾತುಕತೆಯಾಯಿತು; ರಹಮತ್ ತರಿಕೆರೆಯವರು – **ಕುವೆಂಪು ಬಗ್ಗೆ ನಿಮ್ಮ ಬರವಣಿಗೆಯಲ್ಲಿ ಹೆಚ್ಚೇನೂ ಹೇಳಿಲ್ಲ. ಈಗ ಒಂದಿಷ್ಟು ಏನಾದರೂ ಹೇಳಿ ಸಾರ್** ಅಂದರು: 'Great writer, I noticed, he was afraid of the influence of English on our country. Compete ಮಾಡುತ್ತೆ ಅನ್ನೋ ಭಾವನೆ ಇತ್ತು ಅಂತ ಕಾಣುತ್ತೆ.' ಸಾಂಸ್ಕೃತಿಕವಾಗಿ ಸಮಕಾಲೀನರಾಗಿ ಹೇಗೆ ಗ್ರಹಿಸಿದ್ದೀರಿ ಎಂದು ಮತ್ತೆ ಕೇಳಿದರು. 'ಅವರು ನಮ್ಮ ದೊಡ್ಡ ಮನುಷ್ಯರು. ಅವರ ಮೇಲೆ ಗೌರವ ಇದೆ. ಅವರನ್ನು ಓದಬೇಕು. ಅವರ ಕಾವ್ಯ ಕಾದಂಬರಿಗಳನ್ನು ನಾನು ಓದಿದ್ದೇನೆ. ಅವರದ್ದು ಈಸ್ತೆಟಿಕ್ ಮಾತ್ರವೇ ಅಲ್ಲ. He was great thinker also. ಸ್ನೇಹಪರರು, ಖುಷಿಯಾಗಿ ಮಾತನಾಡ್ತಿದ್ದರು. ಒಂದು ಸಲ ಅವರ ಹಳ್ಳಿ ಮನೆಯಲ್ಲಿ ಎಂಟು ದಿನ ಇದ್ದೆ. ಅವರು ಒಕ್ಕಲಿಗರು ನಾನು ಬ್ರಾಹ್ಮಣ. "ತೀರ್ಥಹಳ್ಳಿಯಿಂದ ಬೇಕಾದರೆ ಬ್ರಾಹ್ಮಣ ಅಡಿಗೆಯವರನ್ನು ಕರೆಸ್ತೀನಿ" ಅಂತ ಹೇಳಿದರು. ನಾನು ಹೇಳಿದೆ "ಯಾರು ಅಡಿಗೆ ಮಾಡಿದರೂ ನನಗೆ ಪರವಾಗಿಲ್ಲ. ಒಂದು ಮಾತ್ರ ಜ್ಞಾಪಕ ಇರಲಿ; ನಾನು ಮಾಂಸ ತಿನ್ನೋಲ್ಲ. ಸೋ, ನಾನಿರೋವರೆವಿಗೂ ಮಾಂಸ ಮನೇಲಿ ಮಾಡ್ತಾ ಇರಲಿಲ್ಲ". ಇಂತಹ ಸ್ನೇಹದಿಂದ ತಾನೆ ನಾವು ನಮ್ಮ ಜಾತಿಗಳನ್ನು ಮೀರಬೇಕಾಗಿರುವುದು?

ಮೈಸೂರಿನಲ್ಲಿ ಕಾಲೇಜು ವಿದ್ಯಾಭ್ಯಾಸ, ಅವರ ಗುರುಗಳು, ಫ್ರೆಂಚ್ ಕಲಿಕೆ, ಉಪನ್ಯಾಸಕರಾಗಿ, ಸಹೋದ್ಯೋಗಿಗಳೊಡನೆ ಒಡನಾಟ, ಇತ್ಯಾದಿ ಅನುಭವಗಳನ್ನು ನೆನಪಿಸಿಕೊಂಡು ಉತ್ತೇಜಿತರಾಗಿ ಮಾತನಾಡಿದರು. ಹಾಸ್ಯದ–ವಿರಸದ ನೆನಪುಗಳು ಹಾದುಹೋದವು. ರಾಧಾಕೃಷ್ಣನ್, ರಾಲೋ ಮುಂತಾದವರೆಲ್ಲಾ ಒಳ್ಳೆ ಟೀಚರು ಗಳಾಗಿದ್ದರು. ಆಗ ಯೂನಿವರ್ಸಿಟಿಯಲ್ಲಿ ಕನ್ನಡ ಒಂದು ಇದೆ ಎನ್ನುವುದೇ ಗೊತ್ತಿರಲಿಲ್ಲ. ಹಾಗಾಗಿ ನಾವೆಲ್ಲ ಕನ್ನಡದಲ್ಲಿ ಬರೆಯಲು ಆರಂಭಿಸಿದೆವು. ಆದರೆ ಇಂಗ್ಲೀಷ್‌ಮೆನ್‌ಗಳು ಮಾತ್ರ ಇಂಗ್ಲೀಷಿನಲ್ಲಿ ಚೆನ್ನಾಗಿ ಪಾಠ ಮಾಡ್ತಾರೆ ಎನ್ನುವ

ಅಭಿಪ್ರಾಯವಿತ್ತು. ಆದ್ದರಿಂದ ನಾವು ಕನ್ನಡದವರು ಒಂದೂ ಕನ್ನಡ ಪದ ಬಳಸದೆ ಟೀಚ್ ಮಾಡಿ ತೋರಿಸಿದೆವು ಎಂದು ಅಭಿಮಾನದಿಂದ ಅವರು ನುಡಿದರು.

ಕನ್ನಡದ ಇತ್ತೀಚಿನ ಸಾಹಿತ್ಯದ ಬಗ್ಗೆ ಏನಾದರೂ ಹೇಳಿ ಸಾರ್ ಎಂದು ಅಣತಿಯವರು ಕೇಳಿದರು: 'ಇತ್ತೀಚಿನ ಸಾಹಿತ್ಯ ನಾನು ಓದಿಲ್ಲ. ನನ್ನ ಓದೆಲ್ಲ 50ರ ದಶಕದ ಹಿಂದಿನದು ಎನ್ನಬಹುದು. ಈಗಿನ ಕನ್ನಡ ಸಾಹಿತ್ಯದ ಬಗ್ಗೆ ಮಾತನಾಡಲು ನನಗೆ ಅಧಿಕಾರವಿಲ್ಲ'. ಎಂದು ನಮ್ರತೆಯಿಂದ ಹೇಳಿದರು. 'ನನ್ನ ಕಾಲದ ಕುವೆಂಪು, ಕಾರಂತ, ಬೇಂದ್ರೆಯವರನ್ನು ಓದಿದ್ದೇನೆ. ಹಳಗನ್ನಡ ಸಾಹಿತ್ಯವನ್ನೂ ನಾನೇನು ಅಷ್ಟು ಓದಿಲ್ಲ. ಗದಾಯುದ್ಧ ಕಾವ್ಯ ಓದಿದ್ದೇನೆ. ಒಂದಿಷ್ಟು ವಚನಗಳನ್ನು ಓದಿದ್ದೇನೆ' ಎಂದು ಹೇಳುತ್ತಾ ಒಂದು ಪ್ರಸಂಗವನ್ನು ನೆನಪು ಮಾಡಿಕೊಂಡರು: ಒಂದು ವಚನದಲ್ಲಿ "ಕನ್ನೆಯ ಸ್ನೇಹದಂತಿತ್ತು" ಅಂತ ಬರುತ್ತೆ. ಅದನ್ನು ಓದಿಬಿಟ್ಟು ಶ್ರೀಕಂಠಯ್ಯನವರಿಗೆ ಹೇಳಿದೆ ಬಹಳ ಚೆನ್ನಾಗಿದೇರೀ ಅಂತ. "ಬುದ್ಧಿ ಬಂತೋ ಹಾಗಾದರೆ ನಿಮಗೆ" ಎಂದು ಶ್ರೀಕಂಠಯ್ಯನವರು ಆಡಿದ್ದನ್ನು ಅನುಕರಿಸಿ ತೋರಿಸಿದರು. ಇಂದಿನ ಬರಹಗಾರರಿಗೆ ಸೆಲ್ಫ್ ಎಕ್ಸ್‌ಪ್ರೆಶನ್ ಜಾಸ್ತಿ ಅಂತ ಕಾಣುತ್ತೆ. ಇಂಪ್ರೆಸ್ ಮಾಡಬೇಕು ಅನ್ನುವುದು ಹೆಚ್ಚಾಗಿದೆ. ನಮ್ಮ ಮನಸ್ಸಿನಲ್ಲಿ ಯಾವ ಐಡಿಯಾ ಡೆವಲಪ್ ಆಗಿದೆ ಅನ್ನುವುದನ್ನು ಕುರಿತು ಯೋಚನೆ ಮಾಡುವುದು ಸರಿಯೇ. ಅದರಿಂದ ಜನ ಇಂಪ್ರೆಸ್ ಆಗ್ತಾರೆ ಅಂತ ಹೊರಟರೆ literature might suffer ಎಂದು ಅವರು ಅಭಿಪ್ರಾಯ ಪಟ್ಟರು.

ಮೂರ್ತಿರಾಯರು ಮಾದರಿಯ "ಲಲಿತ ಪ್ರಬಂಧ"ಗಳನ್ನು ಕನ್ನಡಕ್ಕೆ ಕೊಟ್ಟಿದ್ದಾರೆ. ಅನುವಾದಗಳು, ನಾಟಕ, ವ್ಯಕ್ತಿಚಿತ್ರಗಳು, ವಿಮರ್ಶೆ ಲೇಖನಗಳು, ಆತ್ಮ ಕಥನ, ದೇವರು–ಧರ್ಮ ಮುಂತಾದ ಕೃತಿಗಳ ಮೂಲಕ ಮಹತ್ವದ ಲೇಖಕರಾಗಿದ್ದಾರೆ. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಕೇಂದ್ರ ಮತ್ತು ರಾಜ್ಯ ಸಾಹಿತ್ಯ ಅಕಾಡೆಮಿಗಳು ಪುಸ್ತಕ ಬಹುಮಾನ, ಪ್ರಶಸ್ತಿಗಳಿಂದ ಗೌರವಿಸಿವೆ. ರಾಜ್ಯೋತ್ಸವ, ಪಂಪ ಪ್ರಶಸ್ತಿ ಪುರಸ್ಕೃತರು. ಇವರ ಒಂದು ಸಣ್ಣ ಆಸೆ ಮೈಸೂರಿನ ತಮ್ಮ ಸ್ವಂತ ಮನೆಯಲ್ಲಿ ವಾಸಿಸಬೇಕು ಅಂತ. ಬಾಡಿಗೆದಾರನಿಂದ ಸರ್ಕಾರ ಅವರ ಮನೆಯನ್ನು ತೆರವು ಮಾಡಿಸಿಕೊಟ್ಟು ನೆಮ್ಮದಿಯಿಂದ ವಾಸವಾಗಿರಲು ಅನುವು ಮಾಡಿಕೊಡಬೇಕಾದ್ದು ತುರ್ತು ಕರ್ತವ್ಯವಾಗಿದೆ.

ವಯಸ್ಸು 50–60 ತುಂಬುವ ಹೊತ್ತಿಗೆ ಆತ್ಮ–ಪರಮಾತ್ಮ–ಮುಕ್ತಿ ಅಂದುಕೊಳ್ಳುತ್ತಾ ಅಗೋಚರ ಕಾಲ್ಪನಿಕ ಜಗತ್ತನ್ನು ಕುರಿತು ಧ್ಯಾನಿಸುವವರು ಬಹುಸಂಖ್ಯೆಯ ಜನರು. ಇಂಥವರ ನಡುವೆ ಜನಪರವಾದ ಪ್ರೀತಿಯಿಂದ, ಬಂಧು–ಬಳಗ, ಸ್ನೇಹಿತರು, ಅಭಿಮಾನಿಗಳೊಂದಿಗೆ ಒಡನಾಡುತ್ತಿದ್ದಾರೆ. ನಾಡು ನುಡಿಯ ಬಗ್ಗೆ ಕಾಳಜಿ ವಹಿಸುತ್ತಾರೆ. ಸಾಮಾಜಿಕರು ಸುಖ ಸಂತೋಷಗಳಿಂದ ಬದುಕಬೇಕು. ಎಂಬ ಮಹದಾಸೆಯಿಂದ ಸಂಸ್ಕೃತಿಯ ಉತ್ತಮಾಂಶಗಳನ್ನು ಎತ್ತಿಹೇಳುತ್ತಿರುವ ಶತಾಯುಷಿ–ಶತಮಾನದ ದಾರ್ಶನಿಕ ಪ್ರೊ. ಎ. ಎನ್. ಮೂರ್ತಿರಾವ್‌ರವರಿಗೆ "ದ್ವಿ ಶತಮಾನಂ ಭವತಿ" ಎಂದು ಹಾರೈಸುತ್ತಾ ನಾಡಿನ ಪರವಾಗಿ ನಮಸ್ಕಾರಗಳನ್ನು ಸಲ್ಲಿಸುತ್ತೇನೆ.

# ಪ್ರೊ. ಮೂರ್ತಿರಾಯರ ಜೊತೆ ಒಂದು ಸಂವಾದ

– ಡಾ. ಎಸ್. ಎಸ್. ಲಕ್ಷ್ಮೀನಾರಾಯಣ ಭಟ್ಟ

ಪ್ರೊ. ಎ. ಎನ್. ಮೂರ್ತಿರಾವ್ ಕನ್ನಡ ಸಾಹಿತ್ಯವಲಯದಲ್ಲಿ ಬಹಳ ಗಣ್ಯವಾದ ಹೆಸರು. ಇಂಗ್ಲಿಷ್ ಪ್ರಾಧ್ಯಾಪಕರಾಗಿ ಅವರು ಸಹಸ್ರಾರು ವಿದ್ಯಾರ್ಥಿಗಳ ಅಭಿಮಾನ ಗೌರವಗಳನ್ನು ಗೆದ್ದವರು: ಯಾವ ಇಂಗ್ಲಿಷ್ ಪ್ರಬಂಧಕಾರನಿಗೂ ಕಡಿಮೆಯಿಲ್ಲದಂತೆ ಕನ್ನಡದಲ್ಲಿ ರುಚಿರುಚಿಯಾದ ಪ್ರಬಂಧಗಳನ್ನು ಬರೆದು ಆ ಸಾಹಿತ್ಯಪ್ರಕಾರವನ್ನೇ ಮೇಲೆತ್ತಿದವರು ಮೈಸೂರು ವಿಶ್ವವಿದ್ಯಾಲಯ ಅವರ ವ್ಯಕ್ತಿತ್ವದ ಎತ್ತರಕ್ಕೆ ಬಾಗಿ ಗೌರವ ಡಿಲಿಟ್ ಪದವಿ ಇತ್ತಾಗ ಮತ್ತು ಕನ್ನಡ ಸಾಹಿತ್ಯಪರಿಷತ್ತು ಅವರನ್ನು ಸಮ್ಮೇಳನಾಧ್ಯಕ್ಷರನ್ನಾಗಿ ಮಾಡಿ 'ನಾಡೋಜ'ರೆಂದು ಗೌರವಿಸಿದಾಗ ಎಲ್ಲರಿಗೂ ಅದು ತೀರ ಸಹಜವಾದ ಮನ್ನಣೆಯಾಗಿ ಕಂಡಿತು. ಅವರ ಮಾತಿಗೆ ಸಾಹಿತ್ಯವಲಯದಲ್ಲಿ ಇರುವ ಗೌರವ ಎಷ್ಟೆನ್ನುವುದನ್ನು ನನ್ನ ಒಂದು ಅನುಭವದಿಂದಲೇ ನಿದರ್ಶಿಸಬಹುದು. ನಾನು ಯಾಕಾಗಿಯೋ ಅನುವಾದಿಸಿದ್ದ ಷೇಕ್ಸ್‌ಪಿಯರನ ಸಾನೆಟ್ಟೊಂದನ್ನು ಅವರು ಮೆಚ್ಚಿ, ಈತ ಇನ್ನಷ್ಟು ಸಾನೆಟ್ ಅನುವಾದ ಮಾಡಿದ್ದರೆ ಚೆನ್ನಾಗಿರುತ್ತಿತ್ತು ಎಂದು ಯಾರಿಗೋ ಹೇಳಿದರು. ಆ ಮಾತು ನನ್ನ ಕಿವಿ ಮುಟ್ಟಿತು. ಮೂರ್ತಿರಾಯರ ಮೆಚ್ಚಿಕೆ ಮಾತಿಗಿಂತ ದೊಡ್ಡ ಮನ್ನಣೆಯೇ? ಸ್ವಭಾವತಃ ತುಂಬ ಅಲಸಿಯಾದ ನಾನು ಆ ಮಾತಿನಿಂದ ಹುರುಪುಗೊಂಡು ಷೇಕ್ಸ್‌ಪಿಯರನ ಐವತ್ತು ಸಾನೆಟ್ಟು ಅನುವಾದಿಸಿ ಬಿಟ್ಟೆ!

1990ರ ಕೊನೆ ಇರಬಹುದು. ಮೂರ್ತಿರಾಯರ '*ಸಂಜೆಗಣ್ಣಿನ ಹಿನ್ನೋಟ*' ಕೃತಿಯನ್ನು ಓದುತ್ತಿದ್ದೆ. ಕೇವಲ ವೃತ್ತಾಂತಗಳಿಂದಲೇ ಇಡಿಕಿರಿದ ಸ್ವಾರಸ್ಯಕರವಾದ ಬರೆಹ ಅದು. ಆತ್ಮಕಥೆಯ ರೂಪದಲ್ಲಿದ್ದರೂ ತನ್ನ ಕಾಲವನ್ನು, ಸುತ್ತಮುತ್ತಲ ಪರಿಸರವನ್ನು, ಅದರ ಸಂಸ್ಕೃತಿ ವೈಚಾರಿಕತೆಗಳನ್ನು ಜೊತೆಗೆ ಹೊತ್ತುತಂದ ಕೃತಿ. ಅದರ ಒಂದು ಭಾಗದಲ್ಲಿ ಭಾರತೀಯರ ದೈವಕಲ್ಪನೆ ಕುರಿತು ಅವರು ಮಂಡಿಸಿದ್ದ ವಿಚಾರ ನನ್ನಲ್ಲಿ ಕುತೂಹಲ ಹುಟ್ಟಿಸಿತು. ಅವರು ಆ ಬಗ್ಗೆ ಇನ್ನಷ್ಟು ಬರೆದಿದ್ದರೆ ಆಗುತ್ತಿತ್ತು ಎನ್ನಿಸಿತು. ಈಶ್ವರವಾದವನ್ನು ಕುರಿತ ತಮ್ಮ ಹೆಚ್ಚಿನ ಅನ್ನಿಸಿಕೆಗಳನ್ನು ತಮ್ಮ ಬರಲಿರುವ ಪುಸ್ತಕದಲ್ಲಿ ಹೇಳಿರುವುದಾಗಿ ಮೂರ್ತಿರಾಯರು ಅಲ್ಲಿ ತಿಳಿಸಿದ್ದರು. ಆ ಪುಸ್ತಕದ ಬಿಡುಗಡೆಗೆ ನಾನು ತುದಿಗಾಲ ಮೇಲೆ ಕಾದೆ. ಬಂದೊಡನೆ ತರಿಸಿ ಓದಿದೆ. ಪುಸ್ತಕದ ಹೆಸರು '*ದೇವರು*'.



ಅಚ್ಚುಕಟ್ಟಾದ ಕನ್ನಡ, ತೊಡಕಿಲ್ಲದ ನಿರೂಪಣೆ, ವಿಚಾರದ ತರ್ಕಬದ್ಧ ಚಲನೆ, ಶಂಕಿಸಲಾಗದ ಪ್ರಾಮಾಣಿಕತೆ. ಆ ಬರೆಹ ನನಗೆ ಅವರಲ್ಲಿದ್ದ ಗೌರವವನ್ನು ಇಮ್ಮಡಿಸಿತು.

ಆದರೂ ಅಲ್ಲಿ ಪ್ರತಿಪಾದಿತವಾಗಿದ್ದ ನಿಲುವು ನನ್ನ ಗಂಟಲಿನಲ್ಲಿ ಇಳಿಯಲಿಲ್ಲ. ಕಾರಣ ಏನೆಂದು ನನಗೇ ಸ್ಪಷ್ಟವಾಗಲಿಲ್ಲ. ನನ್ನನ್ನೇ ನಾನು ಅನುಮಾನಿಸಿಕೊಂಡೆ. ಎಂಟು ಹತ್ತು ದಿನ ಅದು ನನ್ನನ್ನು ಕಾಡುತ್ತಲೇ ಇತ್ತು. ನನ್ನ ಅಸಮ್ಮತಿಯ ಕಾರಣ ಏನೆನ್ನುವುದು ಕ್ರಮೇಣ ನನಗೆ ಅಸ್ಪಷ್ಟವಾಗಿ ಹೊಳೆಯಿತು. ದೈವದ ಅಸ್ತಿತ್ವ ಕುರಿತ ಗ್ರಹಿಕೆ ಕೇವಲ ತರ್ಕದಿಂದ ಸಿದ್ಧಿಸುವಂಥದೆ? ಬುದ್ಧಿ ಕಲ್ಪನೆ ಭಾವನೆಗಳಂಥ ಹಲವು ಎಳೆಗಳು ಒಟ್ಟಾಗಿ ಹುರಿಗೊಂಡ ಧ್ಯಾನಚೋದಿತ ಚಿತ್ತಕ್ಕೆ ಕೂಡ ಹೊಳೆದರೆ ಹೊಳೆದೀತು, ಬಿಟ್ಟರೆ ಬಿಟ್ಟೀತು ಎನ್ನುವ ಸೂಕ್ಷ್ಮ ಅನುಭವ, ತರ್ಕದ ಕಡಲೆಮಾತುಗಳ ಜಾಳುಬಲೆಯಲ್ಲಿ ಸಿಕ್ಕಿ ಬೀಳಬಲ್ಲುದೆ ಎನಿಸಿತು. ಇದನ್ನೆಲ್ಲ ಪ್ರಶ್ನಿಸಿ ನನ್ನ ಪ್ರತಿಕ್ರಿಯೆ ತಿಳಿಸುವ ಒಂದು ಪತ್ರ ಬರೆಯಲು ಕೂತೆ. ಅದು ಅರ್ಧಕ್ಕೆ ನಿಂತುಹೋಯಿತು. ಎರಡು ಮೂರು ದಿನ ಕಳೆದಿರಬಹುದು, ಪದ್ಯರೂಪದ ಕೆಲವು ಸಾಲು ಹೊಳೆದವು. ಬರೆಯುತ್ತ ಹೋದೆ. ಪದ್ಯ ದೀರ್ಘವಾಗಿ ಬೆಳೆಯಿತು. ಆಶ್ಚರ್ಯವೆಂದರೆ ಅದು ಪ್ರತಿಕ್ರಿಯೆಯ ರೂಪದ್ದಾಗಿರಲಿಲ್ಲ. ಎಷ್ಟೋ ಕಾಲದಿಂದ ನನ್ನ ಅಂತಃಕರಣದ ಸುಳಿ, ಮಡುವುಗಳಲ್ಲಿ ಸಿಕ್ಕಿ ಹಾಕಿಕೊಂಡು, ಹಿಂದೆ ಬರೆದ ಪದ್ಯ, ಗೀತೆಗಳಲ್ಲಿ ಅಷ್ಟಿಷ್ಟು ಮುಖ ತೋರಿಸಿ ಮೈಗರೆದಿದ್ದ ಸಂವೇದನೆ ಅದು. ಈಗ ತಾನೇ ತಾನಾಗಿ ದಿಢೀರನೆ ಹೊರಬಂದಂತಿತ್ತು. ಪದ್ಯವನ್ನು ಸ್ನೇಹಿತರಿಗೆ ತೋರಿಸಿದೆ. ಅದನ್ನು ಒಂದು ಧ್ವನಿಸುರುಳಿಯಲ್ಲಿ ಓದಿ ಲಾಸ್ ಏಂಜಲೀಸ್‌ನಲ್ಲಿರುವ ಇಂದ್ರಾಣಿಮೂರ್ತಿಗೆ ಕಳಿಸಿದೆ. ಕಾಕತಾಳೀಯವೆಂಬಂತೆ ಮೂರ್ತಿರಾಯರು ಅಲ್ಲೇ ಇದ್ದರು. ಪದ್ಯವನ್ನು ಅವರೂ ಕೇಳಿದರು. ಭಾರತಕ್ಕೆ ಬಂದವರೇ ಫೋನ್ ಮಾಡಿದರು. ನಿಮ್ಮ ಅರುಣಗೀತೆ ಪದ್ಯ ಕೇಳಿದೆ. ಇಷ್ಟವಾಯಿತು. ದೇವರ ವಿಷಯ ಕುರಿತು ನಿಮ್ಮ ಜೊತೆ ಬಹಳ 'ಜಗಳ'ವಾಡುವುದಿದೆ! ತಪ್ಪಿಸಿ ಕೊಳ್ಳಬೇಡಿ. ಯಾವಾಗ ಬರುತ್ತೀರಿ ಹೇಳಿ ?

ಅಂಥ ಒಂದು 'ಜಗಳ'ಕ್ಕಾಗಿ ನಾನೂ ಕಾತರನಾಗಿದ್ದೆ! ಆದರೂ ಹೋಗುವುದಾಗಿರಲಿಲ್ಲ. ಉದಯವಾಣಿ ಪತ್ರಿಕೆ ದೇವರು ಎಂಬ ಕಲ್ಪನೆ ಕುರಿತು ನೀವಿಬ್ಬರೂ ದಯವಿಟ್ಟು ಚರ್ಚಿಸುತ್ತೀರಾ? ಅದನ್ನು ನಮ್ಮ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸುತ್ತೇವೆ ಎಂದು ತಿಳಿಸಿ ಇದ್ದಕ್ಕಿದ್ದಂತೆ ಒಂದು ಸಂದರ್ಭ ಕಲ್ಪಿಸಿತು. ಈ ಸಂವಾದ ಅದರ ಫಲ.

**ಎಸ್. ಎಸ್. ಎಲ್ :** ಸಾರ್, ನೀವು ಕರೆದಂತೆಯೇ ಬಂದಿದ್ದೇನೆ. ಚರ್ಚೆಯನ್ನು ಎಲ್ಲಿಂದ ಶುರುಮಾಡೋದು ಅನ್ನೋ ಸಮಸ್ಯೆಯೇನೂ ಇಲ್ಲ. 'ದೇವರು' ಪುಸ್ತಕದಲ್ಲಿ ನೀವು ದೇವರ ಮೇಲಿನ ದಾಳಿಯನ್ನು ಗಣಪತಿಯಿಂದಲೇ ಆರಂಭಿಸಿದ್ದೀರಿ! ನಿರೀಶ್ವರವಾದಿಯಾದ ನೀವೇ ಗಣಪತಿಗೆ ಮೊದಲ ಪೂಜೆ ಸಲ್ಲಿಸಿ ಸಂಪ್ರದಾಯ ಪಾಲಿಸಿರುವಾಗ ನಾನು ಕ್ರಮಕ್ಕೆ ತಪ್ಪುವುದು ಯಾಕೆ?

**ಮೂರ್ತಿರಾವ್ :** ಕಾರಣವಿಲ್ಲದೆ ಯಾಕೆ ಕ್ರಮ ಮುರೀತೀರಪ್ಪಾ! ಗಣಪತಿಯ ಕಲ್ಪನೆ ನನಗೂ ಇಷ್ಟವಾದದ್ದೇ. ನಾನು ಅವರ ಅಸ್ತಿತ್ವವನ್ನು ನಿರಾಕರಿಸುವವನೇ ಹೊರತು

ಅವನ ಕಲ್ಪನೆಯ ಹಿಂದಿರುವ ನಮ್ಮ ಜನರ ನಿರ್ಮಲ ಹಾಸ್ಯಮನೋಧರ್ಮವನ್ನಲ್ಲ. ಜನಕ್ಕೆ ಅವನಲ್ಲಿ ಭಕ್ತಿ ಇರಬಹುದು. ನಾನು ನನ್ನ ಮನಸ್ಸಿನಲ್ಲಿ ಭಕ್ತಿಗೆ ಬದಲಾಗಿ ಆ ಕಲ್ಪನೆಯ ಹಿಂದಿನ ಆಕರ್ಷಕತೆಯನ್ನು ತುಂಬಿಕೊಂಡಿದ್ದೇನೆ.

ಎಸ್. ಎಸ್. ಎಲ್ : ಗಣಪತಿ, ಶಿವ, ವಿಷ್ಣು, ಇಂದ್ರ – ಇಂಥ ದೇವತೆಗಳ ಕಥೆಗಳಲ್ಲಿ ಕಾಣುವ ಪರಸ್ಪರ ವಿರೋಧದ ಅಂಶಗಳನ್ನು ತೋರಿಸಿ ನೀವು ಅವುಗಳನ್ನು ಗೇಲಿ ಮಾಡಿದ್ದೀರಿ. ಅವು ಏನಿದ್ದರೂ ಪುರಾಣಕಥೆಗಳು: ಈಶ್ವರವಾದದ ಗಂಭೀರ ಕಲ್ಪನೆಯಿಲ್ಲದ ಜನ ಸೃಷ್ಟಿಸಿರಬಹುದಾದದ್ದು. ಈಶ್ವರವಾದವನ್ನು ಅಲ್ಲಗಳೆಯುವವರು ತಮ್ಮ ಚರ್ಚೆಗೆ ಗುರಿಮಾಡಬೇಕಾದದ್ದು ಉಪನಿಷತ್ತು, ಗೀತೆ, ಬ್ರಹ್ಮಸೂತ್ರಗಳಂಥ ಕೃತಿಗಳಲ್ಲಿರುವ ಗಂಭೀರ ಹೇಳಿಕೆಗಳನ್ನು ಅಲ್ಲವೆ?

ಇನ್ನು ಪುರಾಣಕಥೆಗಳ ಪ್ರಯೋಜನವೂ ಬೇರೆಯೇ ಇಲ್ಲವೇ? ಅವುಗಳನ್ನು ಪ್ರತೀಕಾತ್ಮಕವಾದ ಮಿಥಕಗಳಾಗಿ ನೋಡಬಹುದಲ್ಲ. ಎಲ್ಲ ದೇಶದ ಸಾಹಿತ್ಯ ಇಂಥ ಮಿಥಕ (Myths)ಗಳನ್ನು ಅರ್ಥವತ್ತಾಗಿ ಬಳಸಿ ತುಂಬ ಶ್ರೀಮಂತವಾಗಿವೆ. ನಮ್ಮ ಕಾಲದ ಗಾಢ ಅನುಭವಗಳನ್ನು ಎಲ್ಲ ಕಾಲಕ್ಕೂ ದಾಟಿಸಲು ಬೇಕಾದ ಧ್ವನಿಪೂರ್ಣವಾದ ಪ್ರತೀಕಗಳ ಸೃಷ್ಟಿಗೆ ಅವು ಪಕ್ಕಾ ಸಾಮಗ್ರಿಗಳಾಗಿವೆ. ಇಂದ್ರ ಅಹಲ್ಯೆಯರ ಕಥೆ ಪುರಾಣದಲ್ಲಿ ಹೇಗಾದರೂ ಇರಲಿ, ಕವಿ ಪುತಿನ ಅದನ್ನು ತಮ್ಮ ಅಹಲ್ಯೆ ಕಾವ್ಯನಾಟಕದಲ್ಲಿ ದಾಂಪತ್ಯ ಜೀವನದ ವಿಷಮ ಸಮಸ್ಯೆಗಳನ್ನು, ಮಾರ್ಮಿಕ ಪಲ್ಲಟಗಳನ್ನು ಹೇಳಲು ಬಳಸಿಲ್ಲವೆ? ಅದರ ಮೂಲಕ ಬೆರಗುಗೊಳಿಸುವ ಪ್ರೇಮಮೀಮಾಂಸೆಯನ್ನೇ ಮಂಡಿಸಿಲ್ಲವೆ? ಗಣಪತಿಯ ಕಲ್ಪನೆ ಕೂಡ ಬಲಿಷ್ಠ ಆನೆಯ ಬೃಹನ್ಮುಖ, ಪುಟ್ಟ ಆಕೃತಿಯ ಚುರುಕು ಇಲಿ, ಅದನ್ನು ನುಂಗುವ ಹಾವು, ಮನುಷ್ಯ ದೇಹ – ಇಂಥ ವೈಪರೀತ್ಯಗಳನ್ನು, ದ್ವಂದ್ವಗಳನ್ನು ಏಕತ್ರ ರೂಢಿಸಿಕೊಂಡ ಅರ್ಥವತ್ತಾದ ಸಂಕೇತವಾಗಿಲ್ಲವೆ?

ಮೂರ್ತಿರಾವ್ : ಅದನ್ನು ನಾನೂ ಒಪ್ಪುತ್ತೇನೆ. ಆದರೆ ನಮ್ಮ ಜನ ಗಣಪತಿಯನ್ನು ಕೇವಲ ಪ್ರತೀಕಮಾತ್ರವಾಗಿ ಕಂಡಿಲ್ಲವಲ್ಲ! ಅವನನ್ನು ದೇವರೆಂದೂ, ವಿಘ್ನನಿವಾರಕನೆಂದೂ ಭಕ್ತಿಯಿಂದ ಆರಾಧಿಸುವ ಜನರೇ ಹೆಚ್ಚು. ಹಿಂದಿನವರಿರಲಿ, ಇಪ್ಪತ್ತನೆಯ ಶತಮಾನದಂಥ ವೈಚಾರಿಕಯುಗದ ಜನ ಕೂಡ ಕೃಷ್ಣನ ಗೋಪೀ ವಸ್ತ್ರಾಪಹರಣ, ರಾಸಕ್ರೀಡೆ, ರಾಧೆಯ ಪ್ರಣಯ, ವಿಷ್ಣುವಿನಿಂದ ಬೃಂದೆಯ ಪಾತಿವ್ರತ್ಯಭಂಗ – ಇಂಥ ಕಥೆಗಳ ಬಗ್ಗೆ ಪ್ರಶ್ನೆ ಎತ್ತಲೊಲ್ಲರು. ಈ ಬಗೆಯ ಆಕ್ಷೇಪಣೆಯನ್ನು ಮಡಿವಂತಿಕೆ ಎಂದು ತಳ್ಳಿಹಾಕುವುದು ಸುಲಭ. ಆದರೆ ನಮ್ಮನ್ನೇ ಯಾರಾದರೂ ಹಾಗೆ ಚಿತ್ರಿಸಿದರೆ ನಮಗೆ ಇಷ್ಟವಾಗುತ್ತದೆಯೇ? ಇಂಥದನ್ನೆಲ್ಲ ಒಪ್ಪಿ, ಅವುಗಳ ಕಾರಣಮೂರ್ತಿಗಳನ್ನು ದೇವರೆಂದು ಪೂಜಿಸುವುದರಲ್ಲಿ ಅರ್ಥವಿಲ್ಲ ಎಂದು ನನ್ನ ಭಾವನೆ.

ಇನ್ನು ನೀವು ಹೇಳಿದ ಮತ್ತೊಂದು ವಿಷಯ. ಉಪನಿಷತ್ತು, ಗೀತೆ ಮೊದಲಾದವು ಎತ್ತಿ ಹಿಡಿಯುವ ಈಶ್ವರ ಕಲ್ಪನೆಯ ಬಗ್ಗೆಯೂ ನನ್ನ ಪುಸ್ತಕದಲ್ಲಿ ವಿಸ್ತಾರವಾಗಿ

ಚರ್ಚಿಸಿದ್ದೇನೆ. ಸರ್ವಜ್ಞನೂ ಸರ್ವಶಕ್ತನೂ ಆದ ಒಬ್ಬ ದೇವರು ಇದ್ದಾನೆ ಎನ್ನುವುದು ಅವುಗಳ ತಾತ್ಪರ್ಯ. ಅಂಥವನೊಬ್ಬ ಇಲ್ಲ ಎನ್ನುವುದೇ ನನ್ನ ಚರ್ಚೆಯ ಸಾರ. ಸರ್ವಜ್ಞತೆ ಮತ್ತು ಸರ್ವಶಕ್ತತೆ ಒಂದಕ್ಕೊಂದು ಅಡ್ಡಿಯಾಗದೆ ಏಕಕಾಲದಲ್ಲಿ, ಒಬ್ಬನೇ ವ್ಯಕ್ತಿಯಲ್ಲಿ ಇರುವುದು ಸಾಧ್ಯವಿಲ್ಲ. ದೇವರು ಸರ್ವಜ್ಞನಾದರೆ ಮುಂದೆ ಇಂಥ ಘಟನೆ ನಡೆಯುತ್ತದೆ, ಯಾರೂ ಅದನ್ನು ಬದಲಿಸಲು ಅಥವಾ ತಪ್ಪಿಸಲು ಸಾಧ್ಯವಿಲ್ಲ ಎಂಬ ನಿಶ್ಚಿತ ಅರಿವು ಇರಬೇಕು. ಹಾಗೆ ಇದ್ದಲ್ಲಿ ಅದನ್ನು ಬದಲಿಸುವ ಅಥವಾ ತಪ್ಪಿಸುವ ಶಕ್ತಿಯಾರಿಗೂ ಇರಬಾರದು. ಸ್ವತಃ ದೇವರಿಗೂ ಇರಬಾರದು. ಆದರೆ ಆ ಶಕ್ತಿ ಇಲ್ಲವಿದ್ದರೆ ದೇವರು ಸರ್ವಶಕ್ತ ಎಂಬ ಮಾತು ಸುಳ್ಳಾಗುತ್ತದೆ.

**ಎಸ್. ಎಸ್. ಎಲ್ :** ವಿಸ್ಮಯಕಾರಕವಾದ ಈ ವಿಶ್ವದ ರಚನೆ ಭಾರಿ ಭಾರಿ ವಿಜ್ಞಾನಿಗಳನ್ನೂ ಸೋಜಿಗಪಡಿಸುವಷ್ಟು ನಿಗೂಢವಾಗಿದೆಯಲ್ಲವೆ? ಇದು ಮನುಷ್ಯನ ಬುದ್ಧಿಶಕ್ತಿಗಳಿಗೂ ಮೀರಿದ ಪ್ರಜ್ಞಾಶಕ್ತಿಯೊಂದರ ಆವಿರ್ಭಾವವಾಗಿರಬಹುದು ಎನ್ನಿಸುವುದಿಲ್ಲವೆ?

**ಮೂರ್ತಿರಾವ್ :** ಹಾಗೆ ಸೋಜಿಗಕಾರಕವಾದ ಕೆಲವು ನಿರ್ದಿಷ್ಟ ಸಂಗತಿಗಳನ್ನು ಪ್ರಸ್ತಾಪಿಸುತ್ತೀರಾ?

**ಎಸ್. ಎಸ್. ಎಲ್ :** ರಾತ್ರಿ ಹೊತ್ತು ಕತ್ತೆತ್ತಿದರೆ ಸಾಕು, ಲಕ್ಷಾಂತರ ನಕ್ಷತ್ರಗಳಿಂದ ತುಂಬಿಹೋಗಿರುವ ಆಕಾಶದ ನೀಲಿ ಯಂಗಳ ಝಗಝಗಿಸುವುದು ಕಾಣುತ್ತದೆ. ನಮ್ಮ ಕಣ್ಣು ಹಾಯುವಷ್ಟು ದೂರವೂ ಚುಕ್ಕೆಗಳು ಇಡಿಕಿರಿದಿವೆ. ನಮಗೆ ತಿಳಿದಿರುವಂತೆಯೇ ಅನೇಕ ನಕ್ಷತ್ರಗಂಗೆಗಳಿವೆ; ತಿಳಿಯದಂತೆ ಎಷ್ಟಿವೆಯೋ! ಒಂದೊಂದರಲ್ಲೂ ಲೆಕ್ಕಕ್ಕೆ ಸಿಗದಷ್ಟು ಚುಕ್ಕೆಗಳು. ಹೀಗೆ ಹುಚ್ಚಾಪಟ್ಟೆ ಎರಚಿದಂತಿರುವ ನಕ್ಷತ್ರಗಳ ನಡುವೆಯೂ ಭೂಮಿಯ ದೃಷ್ಟಿಯಿಂದ ತುಂಬ ಅರ್ಥವತ್ತಾದ ಸಂಬಂಧ ಇದೆ. ಎರಡು ನಕ್ಷತ್ರಗಳ ನಡುವಿನ ಅಂತರ ಸರಾಸರಿ ಇಪ್ಪತ್ತು ಮಿಲಿಯನ್ ಮಿಲಿಯನ್ (20,000,000,000,000) ಮೈಲಿಗಳು. ಈ ಅಗಾಧ ಅಂತರದ ಆಚೀಚೆ ನಿಂತ ನಕ್ಷತ್ರಗಳು ಭೂಮಿಯ ಮೇಲಿರುವ ಜೀವರಾಶಿಯ ಮೇಲೆ ನಿಶ್ಚಿತ ಪರಿಣಾಮ ಬೀರಬಲ್ಲವು ಎಂದು ಯಾರಾದರೂ ಹೇಳಿದರೆ ಅವರನ್ನು ಜ್ಯೋತಿಷಿಗಳು ಎಂದು ಹಾಸ್ಯಮಾಡಿಯೇವು. ಆದರೆ ಅದು ನಿಜ. ಈ ಅಂತರ ಎರಡು ಮಿಲಿಯನ್ ಮಿಲಿಯನ್‌ಮೈಲಿಗಳೋ ಅಥವಾ ಹತ್ತು ಮಿಲಿಯನ್ ಮಿಲಿಯನ್ ಮೈಲಿಗಳೋ ಆಗಿದ್ದಲ್ಲಿ ಭೂಮಿಯ ಮೇಲೆ ಜೀವ ಇರುವುದೇ ಸಾಧ್ಯವಿರಲಿಲ್ಲ. ಇದನ್ನು ಹೇಳುವವನು ಫ್ರೀಮನ್ ಡೈಸನ್ ಎಂಬ ಜಗದ್ವಿಖ್ಯಾತ ಭೌತವಿಜ್ಞಾನಿ. ಆತ ಇಂಥ ಇನ್ನೂ ಹಲವು ವಿಸ್ಮಯಕರ ಸಂಗತಿಗಳ ಬಗ್ಗೆ ವಿಜ್ಞಾನದ ಆಧಾರ ಕೊಟ್ಟು ಮಾತಾಡುತ್ತಾನೆ. ನಮ್ಮ ಬುದ್ಧಿತರ್ಕಗಳಿಗೆ ಗ್ರಹಿಸಲೂ ಕಷ್ಟವಾಗುವ ಈ ಅರ್ಥವತ್ತಾದ ವ್ಯೂಹ ಯಾವ ಉದ್ದೇಶವನ್ನೂ ಧ್ವನಿಸುವುದಿಲ್ಲವೆ?

**ಮೂರ್ತಿರಾವ್ :** ನನ್ನ ಮಟ್ಟಿಗೆ ಹೇಳುವುದಾದರೆ ಇಲ್ಲ. ಈ ಬಗೆಯದು ಏನು ಇದೆಯೋ ಅದು ಆಕಸ್ಮಿಕವಾಗಿ ಆಗಿದ್ದು ಎನ್ನಿಸುತ್ತದೆ. ಈ ರೀತಿಯ 'ಅರ್ಥವಂತಿಕೆ' ಪ್ರಕಟವಾಗದ ಎಷ್ಟೋ ಭಾಗಗಳೂ ಈ ವಿಶ್ವದಲ್ಲಿ ಇರಬೇಕಷ್ಟೆ? ಅವುಗಳಿಗೆ ಏನು

ಹೇಳೋಣ? ಇರುವುದು ಇಲ್ಲದಿರುವುದು ಎರಡೂ ಆಕಸ್ಮಿಕ. ಇವುಗಳಲ್ಲಿ ಯೋಜನಾಬದ್ಧವಾಗಿ ಇರುವಂತೆ ಕಾಣುವುದಷ್ಟನ್ನೇ ನಾವು ಗಮನಿಸುತ್ತೇವೆ. ಆ ವ್ಯವಸ್ಥೆಯ ಮೂಲಕ ಪ್ರಕಟವಾಗುವಂತೆ ತೋರುವ ಅರ್ಥವಂತಿಕೆಗೆ ಬೆರಗಾಗುತ್ತೇವೆ. ಅದರ ಹಿಂದೆ ಒಂದು ಉದ್ದೇಶ ಇರಬೇಕು ಎಂದು ಯೋಚಿಸಲು ತವಕಪಡುತ್ತೇವೆ. ಈ ಬಗೆಯ ಪರಿಣಾಮಕ್ಕೆ ಕಾರಣವಾಗಿಲ್ಲದ ಇತರ ಆಕಸ್ಮಿಕಗಳನ್ನು ನಾವು ಗಮನಿಸುವುದೇ ಇಲ್ಲ. ಎಂದರೆ ಅರ್ಥವತ್ತಾದುದನ್ನು ಕಾಣಲು ನಾವು ನಮಗೆ ತಿಳಿಯದೆಯೇ ಕಾತರರಾಗಿರುತ್ತೇವೆ.

ಎಸ್. ಎಸ್. ಎಲ್ : ಇನ್ನೂ ಹೆಚ್ಚಿನ ರಹಸ್ಯಾತ್ಮಕ ಸಂಗತಿಗಳಿವೆ ನೋಡಿ. ಭೌತಜಗತ್ತಿಗೂ ಜೀವ ಜಗತ್ತಿಗೂ ನಡುವಿನ ಸಂಬಂಧ ಎಷ್ಟು ನಿಗೂಢವಾಗಿದೆ. ಲೋಕದಲ್ಲಿ ಗಾಳಿ, ನೀರು ಬೆಳಕು, ಶಾಖ ಇತ್ಯಾದಿಗಳಿವೆ. ಇವುಗಳೆಲ್ಲ ಜೀವ ಪೋಷಕವಾದ ವಸ್ತುಗಳು. ಅವು ಆ ಉದ್ದೇಶದಿಂದ ಉಂಟಾದವಲ್ಲ, ಯಾವುದೋ ಕಾರ್ಯಕಾರಣ ಸಂಬಂಧದಿಂದ ಉತ್ಪತ್ತಿಯಾದ ಆಕಸ್ಮಿಕಗಳು ಎಂದುಕೊಂಡರೂ ಅವುಗಳನ್ನು ಬಳಸಲು ಬೇಕಾಗುವ ಅಂಗಾಂಗಗಳು ಮನುಷ್ಯನಲ್ಲಿ ಹೇಳಿ ಮಾಡಿಸಿದಂತೆ ಇರುವುದು ಆಶ್ಚರ್ಯವಲ್ಲವೆ? ಲೋಕದಲ್ಲಿ ವಸ್ತುಗಳಿವೆ; ಅವುಗಳನ್ನು ಕಾಣಲೆಂಬಂತೆ ನಮಗೆ ಕಣ್ಣುಗಳಿವೆ. ಗಾಳಿ ಇದೆ; ಅದನ್ನು ಉಸಿರಾಡಿ ಬದುಕಿಕೊಳ್ಳಲು ಮೂಗು ಶ್ವಾಸಕೋಶ ಇವೆ. ಶಬ್ದ ಇದೆ; ಅದನ್ನು ಆಲಿಸಲು ಕಿವಿಯಿದೆ. ಬಿಸಿಲು ಚಳಿ ಇವೆ; ಅವನ್ನು ಗ್ರಹಿಸಲು ಸಂವೇದನೆಯಿರುವ ಚರ್ಮವಿದೆ. ಮರದಲ್ಲಿ ಹಣ್ಣು ಇದ್ದರೆ ಮುಗಿಯಲಿಲ್ಲ. ಅದನ್ನು ತಿನ್ನುವಂತೆ ಪ್ರಚೋದಿಸಲು ನಾಲಗೆಯಲ್ಲಿ ರುಚಿಗ್ರಂಥಿ(Teste bud) ಇವೆ. ಹೀಗೆ ಜಡ-ಜೀವಗಳ ಮಧ್ಯೆ ಏರ್ಪಟ್ಟಿರುವ ಸಂಬಂಧವೂ ಆಕಸ್ಮಿಕವೇ? ಈ ನಿಗೂಢ ಸಂಬಂಧ ಕಂಡು ಬೆರಗಾಗಿಯಲ್ಲವೆ, 'ಸವಿಯು ಸಕ್ಕರೆಯೊಳಗೊ, ಸಕ್ಕರೆಯು ಸವಿಯೊಳಗೊ, ಸವಿಸಕ್ಕರೆಗಳೆರಡೂ ನಿನ್ನೊಳಗೊ ಹರಿಯೆ' ಎಂಬ ವೇದಾಂತದ ಉದ್ಗಾರ ಹೊರಟದ್ದು; ತಾಯಿ ಶಕ್ತಿಯೊಂದರ ಅಸ್ತಿತ್ವ ಕುರಿತ ಆಲೋಚನೆಗೆ ಪುಟ ಸಿಕ್ಕದ್ದು?

**ಮೂರ್ತಿರಾವ್ :** ನಿಮ್ಮ ವಿಸ್ಮಯ ನನಗೆ ತಿಳಿಯುತ್ತದೆ. ನಾನೂ ಹೀಗೆ ಅಚ್ಚರಿಪಡುವವನೇ, ಈ ಸಂಬಂಧ ಬೆರಗುಗೊಳಿಸುವಂಥದು ಎಂದು ಒಪ್ಪಿದರೂ ಅದು ಪ್ರಜ್ಞಾಶಾಲಿಯಾದ ಲೋಕೋತ್ತರವಾದ ಶಕ್ತಿಯೊಂದರ ಉದ್ದೇಶಪೂರ್ವಕ ಕ್ರಿಯೆ ಎಂದು ನನಗನ್ನಿಸುವುದಿಲ್ಲ. ವಿಕಾಸವಾದ ಹೇಳುವಂತೆ ಮೊದಲು ಅಮೀಬಾದಂಥ ಒಂದು ಜೀವಿ ಕಾಣಿಸಿಕೊಂಡಿತು. ಹಲವು ಸಹಸ್ರ ವರ್ಷಗಳ ದೀರ್ಘಕಾಲಾವಧಿಯಲ್ಲಿ, ಸುತ್ತಲ ಲೋಕವನ್ನು ಬಳಸಲು ಆಗುವಂತೆ ಅದರ ದೇಹರಚನೆ ಸಂಕೀರ್ಣವಾಗುತ್ತ ವಿಕಾಸದ ಮಾರ್ಗದಲ್ಲಿ ನಡೆಯಿತು. ಬಿತ್ತವೊಂದು ಸಸಿಯಾಗಿ, ಗಿಡವಾಗಿ, ಮೊಗ್ಗು ಹೂ ಕಾಯಾಗಿ ಫಲಿಸುವಂತೆ ಕ್ರಮಕ್ರಮವಾಗಿ ಇದರ ವಿಕಾಸ ಆಗಿದೆ. ಆ ಬೆಳವಣಿಗೆಯ ವಿವರ ನಮ್ಮ ಕಣ್ಣೆದುರಿಗಿಲ್ಲ; ಕೇವಲ ಅದರ ಪರಿಣಾಮವಷ್ಟೇ ಕಾಣುತ್ತಿದೆ. ಅದರಿಂದ ಹೀಗೆ ಬೆರಗುಪಡುವಂತಾಗುತ್ತದೆ.

ಎನ್. ಎಸ್. ಎಲ್ : ಸೃಷ್ಟಿಗೆ ಒಂದು ಉದ್ದೇಶವಿಲ್ಲ, ಅದರ ಬುಡಕ್ಕೆ ಯಾವ ಪ್ರಜ್ಞೆಯೂ ಇಲ್ಲ ಅನ್ನುತ್ತೀರಿ. ಅದು ಇಲ್ಲದೆ ಜೀವಸೃಷ್ಟಿಯ ಪ್ರಕ್ರಿಯೆ ರೂಪುಗೊಂಡಿತೆ? ನೆಲ ಜಲ ವಾಯುಮಂಡಲಗಳಲ್ಲಿ ಇರುವ ಕೋಟ್ಯಾಂತರ ಜೀವಯೋನಿಗಳಲ್ಲಿಯೂ ಗಂಡು ಹೆಣ್ಣುಗಳ ಭೇದ ಇದೆ. ಅವುಗಳಿಗೆ ಪರಸ್ಪರ ಅದಮ್ಯವಾದ ಆಕರ್ಷಣೆ ಇದೆ. ಗಂಡು ಹೆಣ್ಣುಗಳ ಮೈಯ ರಚನೆ ಭಿನ್ನವಾಗಿದ್ದರೂ ಜೀವಸೃಷ್ಟಿಯ ಕ್ರಿಯೆಗೆ ಪೂರಕವಾಗಿದೆ. ತಮ್ಮ ಕಾಮನೆಯ ಪೂರೈಕೆಗಾಗಿ ಪರಸ್ಪರ ಕೂಡುತ್ತಿರುವಂತೆ ಗಂಡು ಹೆಣ್ಣು ಭಾವಿಸಿಕೊಂಡರೂ ಸೃಷ್ಟಿಯ ನಿರಂತರ ಮುಂದುವರಿಕೆ ಗಾಗಿ ಬೇರೆ ಯಾವುದೋ ಒಂದು ಶಕ್ತಿ ಅವರನ್ನು ತನ್ನ ಸಾಧನವಾಗಿ ಬಳಸುತ್ತಿದೆಯೋ ಎಂಬಂತೆ ಇಡೀ ಸೃಷ್ಟಿಯ ಜೀವೋತ್ಪಾದಕ ಪ್ರಕ್ರಿಯೆ ಸಾಗಿರುವಂತೆ ಕಾಣುವುದಿಲ್ಲವೆ? ಐನ್‌ಸ್ಟೈನ್, ಕಾಪ್ರಾ, ಹಾಲ್ಡೇನ್, ಅಲೆಕ್ಸಿ, ಕೆರೆಲ್ ಮೊದಲಾದ ಮಹಾಮೇಧಾವಿಗಳು ಈ ಸೃಷ್ಟಿಯ ರಚನೆ, ತುಡಿತ, ಕ್ರಿಯೆಗಳ ಬಗ್ಗೆ ತಮ್ಮ ಬೆರಗನ್ನು ವ್ಯಕ್ತಪಡಿಸಿದ್ದಾರಲ್ಲ? ನಮಗೆ ಮೀರಿದ ಒಂದು ಶಕ್ತಿ ಇಲ್ಲ ಎಂದು ನಿಮ್ಮ ಅಭಿಪ್ರಾಯವೇ? ಅಥವಾ ಇದ್ದರೂ ಅದು ಪ್ರಜ್ಞೆಯಿಂದ ಕೂಡಿದ್ದಲ್ಲವೆ?

**ಮೂರ್ತಿರಾವ್** : ಇಲ್ಲ ಎನ್ನಲಾಗುವುದಿಲ್ಲ. ವಿಶ್ವದ ಸೃಷ್ಟಿಗೆ ಮೂಲವಾಗಿ ಯಾವುದೋ ಒಂದು Intelligence ಇದ್ದಿರಬಹುದು. Intelligence ಅಂದಮೇಲೆ ಅದು ಪ್ರಜ್ಞಾಪೂರ್ಣವಾದದ್ದೂ ಆಗಿರಬೇಕು. ಆದರೆ ಅದು ಪರಿಪಕ್ವವಾದ ಜ್ಞಾನ ಇದ್ದಿರಲಾರದು. ವೈಟ್‌ಹೆಡ್ ಎಂಬ ವಿದ್ವಾಂಸನೊಬ್ಬನ ಸಿದ್ಧಾಂತವನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು. ಈ ಸೃಷ್ಟಿಯಲ್ಲಿ ಇರುವ ಯಾವುದೇ ಜೀವಿಯ ಪ್ರಜ್ಞೆ ಸಾಮರ್ಥ್ಯಗಳಿಗೂ ಮೀರಿದ ಒಂದು ಶಕ್ತಿ ಇದ್ದು, ಸದ್ಯದ ದೃಷ್ಟಿ ಅದು ನಡೆಸಿರುವ ಪ್ರಯೋಗವಾಗಿರಬಹುದು. ಈ ಪ್ರಯೋಗದಿಂದ ಹೊರಪಡಬಹುದಾದ ದೋಷಗಳನ್ನು ತಿಳಿದು ಅದನ್ನು ಸರಿಪಡಿಸಿಕೊಂಡು ಮುಂದೆ ಇನ್ನಷ್ಟು ಪ್ರಗತಿ ಸಾಧಿಸುವ ರೀತಿ ಅದರದ್ದಿರಬಹುದು. ಆದರೆ ಒಂದು ವಿಷಯ: ಈ ವಿಶ್ವ ಈಗಿರುವಂತೆ ದೋಷಮುಕ್ತ ಅಲ್ಲ. ಆದ್ದರಿಂದ ಇದನ್ನು ಸೃಷ್ಟಿಸಿದ ಸರ್ವಜ್ಞ ಅಥವಾ ಸರ್ವಶಕ್ತನೊಬ್ಬ ಇರಲಾರ.

ಎನ್. ಎಸ್. ಎಲ್ : ಸಾರ್, ದೈವಶಕ್ತಿಯೊಂದು ಖಂಡಿತವಾಗಿ ಇದೆ ಎನ್ನುವುದು ಒಂದು ತುದಿ. ಇಲ್ಲವೇ ಇಲ್ಲ ಎನ್ನುವುದು ಇನ್ನೊಂದು ತುದಿ. ಎರಡೂ ತುದಿಗಳು ವಿಷಯ ಖಚಿತವಾದವರ ನೆಲೆಗಳು. ನೀವು ಒಂದು ತುದಿಯಲ್ಲಿ ಇದ್ದೀರಿ. ಈಶ್ವರ ನಿರಾಕರಣೆಗೆ ನಿಮಗಿರುವ ದೃಢ ಆಧಾರ ಯಾವುದು?

ಮೂರ್ತಿರಾವ್ : ಲೋಕದಲ್ಲಿ ಎಲ್ಲೆಂದರಲ್ಲಿ ಕಾಣುವ ಕೇಡು, ಸಂಕಟ, ಕೆಲವು ಮತಗಳು ಸದ್ಗುಣನಿಧಿಯಾದ ದೇವರೊಬ್ಬ ಇರುವಂತೆ ದುರ್ಗುಣಗಳ ಗಣಿಯಾದ ಒಂದು ಶಕ್ತಿಯೂ ಇದೆ ಎಂದು ನಂಬುತ್ತವೆ. ಬೈಬಲ್ ಅವನನ್ನು ಸೈತಾನ ಎಂದು ಕರೆಯುತ್ತದೆ. ಆದರೆ ಈ ಸೈತಾನ ದೇವರಷ್ಟು ದೊಡ್ಡವನಲ್ಲ. ಅವನು ತನ್ನನ್ನು ತಾನೇ ಸೃಷ್ಟಿಸಿಕೊಳ್ಳಲಿಲ್ಲ. ಎಲ್ಲ ಸೃಷ್ಟಿಗೂ ಕರ್ತನಾದವನು ದೇವರೊಬ್ಬನೇ ಎಂದ ಮೇಲೆ ಕೇಡೂ ದೇವರ ಸೃಷ್ಟಿ ಎಂದೇ ಆಯಿತು. ಸಕಲ ಕೇಡುಗಳ ತವರಾದ ಈ ಸೈತಾನನನ್ನು

ದೇವರು ಯಾಕೆ ಸೃಷ್ಟಿಸಿದ? ಈ ಪ್ರಶ್ನೆಗೆ ಸಮರ್ಪಕವಾದ ಉತ್ತರವಿಲ್ಲ. ಕೇಡು ಇದೆ, ಆದ್ದರಿಂದ ದೇವರಿಲ್ಲ ಎನ್ನಬೇಕಾಗುತ್ತದೆ.

ಎಸ್. ಎಸ್. ಎಲ್ : ಬಾಳಿಗೆ ಕೊನೆ ತರುವ ಸಾವು ಹೇಗೆ ಜೀವನಕ್ಕೆ ಒಂದು ಅರ್ಥವಂತಿಕೆಯನ್ನು ಕಲ್ಪಿಸಿ ಅದರ ಬೆಲೆ ಹೆಚ್ಚಿಸಿದೆಯೋ ಹಾಗೆಯೇ ನೋವು ಬಾಳಿನ ಸಂಕೀರ್ಣತೆಗೆ, ಅದರ ಸ್ವರೂಪದ ಗಂಭೀರತೆಗೆ ಕಾರಣವಾಗಿರಬಹುದಲ್ಲವೆ? ಸಂಕಟ ಅದರ ತೀವ್ರತೆಯಲ್ಲಿ ಒದಗಿದಾಗ ಬದುಕನ್ನು ಅಲ್ಲಾಡಿಸಿಬಿಡುತ್ತದೆ, ನಿಜ. ಆದರೆ ಸಂಕಟದ ಪ್ರಸಂಗವೊಂದು ಸದಾಕಾಲ ಒಂದೇ ತೀವ್ರತೆಯಲ್ಲಿ ಇರುವುದಿಲ್ಲ. ಪ್ರೀತಿಯ ಹೆಂಡತಿಯ ಸಾವಿನಿಂದ ಕಂಗಾಲಾಗಿ ಇನ್ನು ಈ ಬದುಕೇ ಸಾಕು ಎಂದು ಸಂತಪ್ತನಾದ ಅನುರಕ್ತ ಪತಿಯೂ ವರ್ಷದಾಟುವಷ್ಟರಲ್ಲಿಯೇ ಮತ್ತೆ ಮದುವೆಯಾದ ನಿದರ್ಶನಗಳಿಲ್ಲವೆ? ಘಟಿಸಿದಾಗಿನ ಅನುಭವದ ತೀವ್ರತೆಗೂ, ನೆನಪಿಸಿಕೊಂಡಾಗಿನ ಅನುಭವದ ಆರಿದ ಸ್ಥಿತಿಗೂ ಖಂಡಿತ ಅಂತರವಿದೆ. ನೀವು ಅತೀವವಾದ ಸಂಕಟವೊಂದು ಅದರ ದುರ್ಭರ ಸ್ಥಿತಿಯಲ್ಲೇ ಒಬ್ಬನನ್ನು ಸದಾ ಕುದಿಸುತ್ತಿದ್ದರೆ ಹೇಗೋ ಹಾಗೆ ಕಲ್ಪಿಸುತ್ತಿದ್ದೀರಿ. ಅಲ್ಲದೆ ಕಷ್ಟ ನೋವುಗಳಲ್ಲಿಯೂ ಬೇರೆ ಬೇರೆ ಬಗೆಯವು ಇವೆ. ಎಲ್ಲವೂ ಅಷ್ಟೊಂದು ದುರ್ಭರವಲ್ಲ.

ಮೂರ್ತಿರಾವ್ : ಯಾವ ಬಗೆಯ ಕಷ್ಟ ನೋವುಗಳೇ ಆಗಲಿ ಯಾಕೆ ಇರಬೇಕು? ಅದರ ಪ್ರಯೋಜನ ಏನು? ಅವುಗಳಿಂದ ಬಾಳು ಕಹಿಯಾಗುವುದಿಲ್ಲವೆ? ಅದು ಬಾಳಿನ ಸಂಕೀರ್ಣತೆಗೆ, ಗಂಭೀರತೆಗೆ ಕಾರಣವಾಗುತ್ತದೆ ಎಂದಿರಿ. ಅದು ಹೇಗಾದೀತು? ಅಲ್ಲದೆ ಕೇಡು ಮಾಡಿದವರಿಗೆ ಶಿಕ್ಷೆಕೊಟ್ಟು ಒಂದು ಬಗೆಯ ಸಮಾಧಾನ ತಂದುಕೊಂಡೀರಿ. ತಪ್ಪೇ ಇಲ್ಲದೆ ನೋವಿಗೆ ಗುರಿಯಾದವರ ಬಗ್ಗೆ ಏನು ವಿವರಣೆ ಕೊಡಲಾದೀತು?

ಎಸ್. ಎಸ್. ಎಲ್ : ಸಂಕಟದ ಸಮಸ್ಯೆ ಮತ್ತು ಕೇಡಿನ ಸಮಸ್ಯೆ ಕುರಿತು ವಿಚಾರಮಾಡುವಾಗ ಅದನ್ನು ಒಟ್ಟು ಮಾನವ ಕುಲದ ಸಮಸ್ಯೆಯಾಗಿ ನೋಡಬೇಕೇ ಹೊರತು ಬಿಡಿವ್ಯಕ್ತಿಗಳ ಸಮಸ್ಯೆಯಾಗಿ ಅಲ್ಲ ಅಂತ ನನಗನ್ನಿಸುತ್ತದೆ. ಮಾನವನಿಗೆ ತಿಳುವಳಿಕೆ ಇದೆ. ಸರಿ ತಪ್ಪುಗಳ ಸಾಮಾನ್ಯ ವಿವೇಚನಾಶಕ್ತಿ ಇದೆ. ಕೇಡಿನ ಸ್ವರೂಪವನ್ನು ಅರಿತು ಅದನ್ನು ನಿವಾರಿಸಿಕೊಳ್ಳುವವರೆಗೆ ಮಾನವ ಕುಲ ಈ ಬಗೆಯ ಶಿಕ್ಷೆಗೆ ಗುರಿಯಾಗುತ್ತಲೇ ಇರಬೇಕಾಗುತ್ತದೆ. ಕೇಡುಮಾಡಿದವನು, ಅದಕ್ಕೆ ತುತ್ತಾದವನು ಎಂದು ಪ್ರತ್ಯೇಕಿಸುವುದಲ್ಲ. ಇದು ಒಟ್ಟು ಮಾನವ ಕುಲದ ಸಮಸ್ಯೆ.

ಕಷ್ಟ ನೋವುಗಳಿಂದ ಬಾಳು ಕಹಿಯಾಗುತ್ತದೆ ಎಂಬ ಮಾತು ಬಂತು. ಸುಖ ಸಂತೋಷಗಳಂತೆಯೇ ದುಃಖ ನೋವುಗಳೂ ಇವೆ. ಕಷ್ಟ ತನಗೆ ತಾನೇ ಪ್ರತ್ಯೇಕವಾಗಿ ಇಲ್ಲ. ಬಯಕೆ ಭರವಸೆ ಸುಖ ನಿರೀಕ್ಷೆಗಳೆಲ್ಲ ಇರುವ ಒಟ್ಟು ಜೀವನದ ನಡುವೆ ಅದು ಘಟಿಸುತ್ತದೆ. ಅವುಗಳ ನೆರೆಹೊರೆಯಲ್ಲಿ ಕಷ್ಟವೂ ಸಹ್ಯವಾಗುತ್ತದೆ. ಬಗೆ ಬಗೆ ರುಚಿಗಳಿಂದ ಕೂಡಿದ ಭರ್ಜರಿ ಊಟವನ್ನು ಷಡ್ರಸ ಭೋಜನ ಎನ್ನುತ್ತೇವಷ್ಟೆ. ಷಡ್ರಸ ಎಂದರೆ ಸಿಹಿ ಒಂದೇ ಅಲ್ಲವಲ್ಲ; ಉಳಿದವೂ ಇವೆ. ಅವುಗಳಲ್ಲಿ ಕಹಿಯೂ ಇದೆ. ಹಾಗಲಕಾಯಿ ತನಗೆ ತಾನೇ ಘೋರ ಕಹಿ. ಆದರೆ ಉಪ್ಪು, ಹುಳಿ, ಖಾರ, ಸಿಹಿಗಳ

ಜೊತೆ ಬೆರೆತ ಹಾಗಲಕಾಯಿಯ ಗೊಜ್ಜು ಎಲ್ಲರಿಗೂ ಪ್ರಿಯವೇ. ಬಾಳಿನ ಇತರ ಅನುಭವಗಳ ಒಟ್ಟು ಸಂದರ್ಭದಲ್ಲಿ ಕಷ್ಟವನ್ನು ಇಟ್ಟು, ಅದರ ಬೆಲೆ ಕಟ್ಟಬೇಕು. ಎಷ್ಟೋ ಸಲ ಕಹಿ ಅನುಭವದಿಂದಾಗಿ ಅನಂತರ ಒದಗುವ ಸುಖದ ಬೆಲೆ ಹೆಚ್ಚಬಹುದು – ವಿಯೋಗದ ನಂತರದ ಸಮಾಗಮದಂತೆ.

**ಮೂರ್ತಿರಾವ್** : ಈ ತರ್ಕವನ್ನು ನಾನು ಒಪ್ಪುವುದಿಲ್ಲ. ಸುಖದ ಆಸ್ವಾದಕ್ಕೆ ಕಷ್ಟದ ಹಿನ್ನಲೆ ಯಾಕೆ ಬೇಕು? ಖಂಡಿತ ಅದರ ಅಗತ್ಯವಿಲ್ಲ. ಕಹಿಯ ಅನುಭವವೇ ಇಲ್ಲದ ಮೂರುದಿನದ ಮಗುವಿನ ಬಾಯಿಗೆ ಸಕ್ಕರೆ ಇಡಿ: ಚಪ್ಪರಿಸಿಕೊಂಡು ತಿನ್ನುತ್ತದೆ. ನನಗೆ ಮಕ್ಕಳಿಲ್ಲದವರ ಸಂಕಟ ಅನುಭವಕ್ಕೆ ಬಂದಿರಲಿಲ್ಲ. ಮಕ್ಕಳ ಜವಾಬ್ದಾರಿಯೇ ಬೇಡ. ಮಕ್ಕಳಾದರೆ ಅವನ್ನು ಯಾರಿಗಾದರೂ ದತ್ತುಕೊಟ್ಟುಬಿಡುತ್ತೇನೆ ಎನ್ನುತ್ತಿದ್ದೆ. ಆದರೆ ಮಕ್ಕಳಾದಾಗ ಸಂತೋಷಪಟ್ಟೆ, ಸಂತೋಷದಿಂದಲೇ ಅವುಗಳ ಜವಾಬ್ದಾರಿ ಹೊತ್ತೆ – ಆ ಸಂತೋಷಕ್ಕೆ ಪೂರ್ವಭಾವಿಯಾಗಿ ಸಂಕಟದ ಅನುಭವ ಇಲ್ಲದೆಯೇ ನಾನು ಸುಖ ಪಟ್ಟೆ.

**ಎನ್. ಎಸ್. ಎಲ್** : ಮಗು ಸಕ್ಕರೆಯನ್ನು ಚಪ್ಪರಿಸಿಕೊಂಡು ತಿಂದದ್ದನ್ನು ಒಪ್ಪೋಣ. ಆದರೆ ಅದು ಬಾಲರುಚಿ, ಪ್ರೌಢರ ರುಚಿಮಟ್ಟವೇ ಬೇರೆ. ಮಗುವಿನ ಬಾಯಿಗೆ ಕೊಂಚ ಕಹಿ ಸೋಕಿಸಿದರೂ ಅದು ಮುಖ ಸಿಂಡರಿಸುತ್ತದೆ. ಆದರೆ ಬೆಳೆದವರು ಖಾರ ಕಹಿಗಳನ್ನು ಬಯಸುತ್ತಾರೆ. ಸಾಕಷ್ಟು ಹಣತೆತ್ತು ಕಹಿಯಾದ ಬಿಯರ್ ಸವಿಯುವವರು ಎಷ್ಟೊಂದು ಜನ ಇಲ್ಲ? ಮನೆಯಲ್ಲಿ ಡಬ್ಬದ ತುಂಬ ಸಕ್ಕರೆ ಇದ್ದರೂ ಅದನ್ನು ಹಾಗೇ ಮುಕ್ಕದೆ ಕಾಫಿಯ ಕಹಿ ಜೊತೆ ಬೆರೆಸಿ ಕುಡಿಯುವುದಿಲ್ಲವೆ? ಉಳಿದುದರ ಜೊತೆಯಲ್ಲಿ ಕಷ್ಟವೂ ನಮ್ಮ ಅನುಭವದ ವೈವಿಧ್ಯವನ್ನು ಹೆಚ್ಚಿಸುತ್ತದೆ; ಬದುಕನ್ನು ಗಂಭೀರವಾಗಿ ಕಾಣುವುದನ್ನು ಕಲಿಸುತ್ತದೆ; ಮತ್ತೊಬ್ಬರ ಬಗ್ಗೆ ಸಹಾನುಭೂತಿಯಿಂದ ಯೋಚಿಸುವುದನ್ನು ಕಲಿಸುತ್ತದೆ ಎಂದು ನನ್ನ ಭಾವನೆ. ಎಷ್ಟೇ ಕಷ್ಟವಿದ್ದರೂ ಜನ ಬಾಳಬೇಕು ಎಂದೇ ಬಯಸುತ್ತಾರೆ. ಯಾರೂ ಸಾಯಲು ಸಿದ್ಧರಿಲ್ಲ. ಇದರ ಅರ್ಥ, ಕಷ್ಟವನ್ನೂ ಸಹಿಸಿಕೊಂಡು ಬದುಕಬೇಕು ಎನ್ನುವಷ್ಟು ಬಾಳು ಆಕರ್ಷಕವಾಗಿದೆ. ಅಲ್ಲದೆ, ಇಂದಲ್ಲ ನಾಳೆ, ಈ ಕಷ್ಟ ಮುಗಿಯುತ್ತದೆ ಎಂಬ ವಿಚಿತ್ರ ಭರವಸೆ ಕೂಡ ಮನುಷ್ಯ ಹೃದಯದಲ್ಲಿ ಸತತವಾಗಿ ಪುಟಿಯುತ್ತಲೇ ಇರುತ್ತದಲ್ಲ?

**ಮೂರ್ತಿರಾವ್** : ಇಂಥ ವಿಚಾರಗಳನ್ನು ಚರ್ಚಿಸುವಾಗ ಹೋಲಿಕೆಗಳನ್ನು ಬಳಸುವುದು ಸರಿಯಾಗುವುದಿಲ್ಲ ಅನ್ನಿಸುತ್ತೆ. ಯಾವ ಎರಡು ಸಂಗತಿಗಳೂ ಪರಸ್ಪರ ಸಮಸಮ ಅಲ್ಲವಾಗಿ ಹೋಲಿಕೆ ಸರಿಯಲ್ಲ. ಕಷ್ಟವನ್ನು ಕಹಿಗೆ ಹೋಲಿಸುವುದಲ್ಲ. ಕಹಿ ಕಾಫಿಯನ್ನು ನಾನು ಇಷ್ಟಪಡುತ್ತೇನೆ. ಆದರೆ ಕಷ್ಟವನ್ನು ಬಯಸುವುದಿಲ್ಲ. ಕಷ್ಟ ಬಂದಾಗ ತಾಳಿಕೊಳ್ಳುವುದು ಬೇರೆ, ಅದನ್ನು ಬಯಸುವುದೇ ಬೇರೆ.

**ಎನ್. ಎಸ್. ಎಲ್.** : 'ದೇವರು' ಪುಸ್ತಕದಲ್ಲಿ ದೈವಶ್ರದ್ಧೆಯಿಂದ ಆಗಬಹುದಾದ ಕೇಡುಗಳ ಬಗ್ಗೆ ಹೇಳಿದ್ದೀರಿ.

ಮೂರ್ತಿರಾವ್ : ಹೌದು, ದೇವರಲ್ಲಿನ ನಂಬಿಕೆಯಿಂದ ಆದ ಕೆಲವು ದುರಂತಗಳನ್ನು ಪ್ರಸ್ತಾಪಿಸಿದ್ದೇನೆ. ಇಲ್ಲಿ ಒಂದು ಮಾತು ಹೇಳಬೇಕು. ನನ್ನಂಥ ನಿರೀಶ್ವರವಾದಿಗಳೂ ಸೇರಿದಂತೆ ಇಡೀ ಮನುಕುಲಕ್ಕೇ ಕರುಣಾರ್ದ್ರ ಹೃದಯನೂ ಪ್ರೇಮಸ್ವರೂಪಿಯೂ ಆದ ದೇವರು ಬೇಕು. ದೇವರು ಇಲ್ಲ ಎಂದುಕೊಳ್ಳುವಾಗ ನನ್ನ ಮನಸ್ಸಿನಲ್ಲಿ ಹುಟ್ಟುವುದು ಸಂತೋಷವಲ್ಲ. ಅದನ್ನು ವಿಷಾದ ಎಂದು ಕರೆಯಬಹುದೇನೋ. ಜೀವಕೋಟಿಯ ಸಂಕಟವನ್ನು ಪರಿಹರಿಸಬಲ್ಲ ದೇವರು – ಅಂಥ ದೇವರು ಇರುವುದಾದರೆ – ಯಾರಿಗೆ ಬೇಡ? ದೇವರು ಬೇಕು, ಆದರೆ ಅವನಿಲ್ಲ! ಇದೇ ನಮ್ಮ ಕರುಣಾಜನಕ ಐರನಿ. ಇಲ್ಲದ ದೇವರಲ್ಲಿ ಇಟ್ಟ ನಂಬಿಕೆ ಎಲ್ಲಿಗೆ ಮುಟ್ಟಿದೆಯೆಂದರೆ ಅದಕ್ಕಾಗಿ ಕ್ರೂಸೇಡುಗಳೇ ನಡೆದು ರಕ್ತದ ಹೊಳೆ ಹರಿದಿವೆ. ದೊಡ್ಡವರು ಇರಲಿ, ಮಕ್ಕಳೂ ಕ್ರೂಸೇಡು ನಡೆಸಿ ಹೃದಯವಿದ್ರಾವಕ ರೀತಿಯಲ್ಲಿ ಸತ್ತಿದ್ದಾರೆ. ಇದು ದೈವಶ್ರದ್ಧೆಯ ಫಲ.

ಎನ್. ಎಸ್. ಎಲ್ : ದೈವಶ್ರದ್ಧೆಯಿಂದ ಫಲಿಸಿದ ಬೇಕಾದಷ್ಟು ಅದ್ಭುತಗಳೂ ಇದೆಯಲ್ಲ? ಪರಮಹಂಸ, ವಿವೇಕಾನಂದ, ಗಾಂಧಿ, ಮದರ್ ಥೆರೇಸಾ – ಮೊದಲಾದವರು ಮನುಷ್ಯನ ಘನತೆಯನ್ನು ಮುಗಿಲೆತ್ತರಕ್ಕೆ ಎತ್ತಿದವರಲ್ಲವೆ? ಇವರೆಲ್ಲ ದೈವಶ್ರದ್ಧೆಯನ್ನೇ ಉಸಿರಾಡಿ ಬೆಳೆದವರು. Prayer is the key of the morning and bolt of the evening ಎನ್ನುವ ಮಾತು ಗಾಂಧಿಯವರದೇ. ಅವರು ಭಗವದ್ಗೀತೆಯನ್ನು ತಮ್ಮ ಮಾರ್ಗದರ್ಶಕ ಕೃತಿ ಎಂದು ಭಾವಿಸಿದ್ದವರು. ಉಪವಾಸ ಮೌನಗಳ ಆಚರಣೆಯಿಂದ ದೇಹ ಮನಸ್ಸುಗಳನ್ನು ದಂಡಿಸಿ ಜೀವನವೇ ಒಂದು ಕ್ರಿಯಾಮಯವಾದ ಪ್ರಾರ್ಥನೆಯೆಂಬಂತೆ ಬಾಳಿದವರು. ಅವರೆಲ್ಲ ಅಂಥ ಎತ್ತರಕ್ಕೆ ಏರಲು ಅವರಲ್ಲಿದ್ದ ಸಹಜಶಕ್ತಿಯ ಜೊತೆಗೆ ಅವರ ದೈವಶ್ರದ್ಧೆಯೂ ಕಾರಣವಲ್ಲವೆ?

ಮೂರ್ತಿರಾವ್ : ನನಗೆ ಹಾಗೆನ್ನಿಸುವುದಿಲ್ಲ. ದೈವಶ್ರದ್ಧೆ ಗಾಂಧಿಯವರಲ್ಲಿತ್ತು ನಿಜ. ನೀವು ಹೇಳಿದ ಇತರರಲ್ಲೂ ಇತ್ತು ಎಂದು ಒಪ್ಪುತ್ತೇನೆ. ಆದರೆ ಅದಿಲ್ಲದಿದ್ದರೂ ಅವರೆಲ್ಲ ಅಷ್ಟೇ ದೊಡ್ಡವರಾಗುತ್ತಿದ್ದರು. ಅವರಲ್ಲಿ ಸಹಜವಾಗಿದ್ದ ಸತ್ಯಪ್ರೇಮ, ಅಹಿಂಸೆ, ನಿಷ್ಕರ್ಮ, ಫಲದೃಷ್ಟಿಗಳಿಂದಲೇ ಅದು ಸಾಧ್ಯವಾಯಿತೇ ಹೊರತು ಅವರ ದೈವಶ್ರದ್ಧೆಯಿಂದಲ್ಲ.

ಎನ್. ಎಸ್. ಎಲ್ : ದೇವರು ಇಲ್ಲದಿದ್ದರೂ ಅವನನ್ನು ಕಲ್ಪಿಸಬೇಕಾಗುತ್ತದೆ ಎಂಬ ವಾದವನ್ನು ಪ್ರಸ್ತಾಪಿಸಿ "ಈ ವಾದದಲ್ಲಿ ಹುರುಳಿಲ್ಲ, ಇದು ನಾವೇ ಕಲ್ಪಿಸಿಕೊಂಡದ್ದು ಎಂದು ತಿಳಿದೂ ಆ ಭ್ರಮೆಯನ್ನು ನೆಚ್ಚಿ ಬದುಕಬೇಕೇ ಎಂದು" 'ದೇವರು' ಪುಸ್ತಕದಲ್ಲಿ ಹೇಳಿದ್ದೀರಿ. ಕಲ್ಪಿತವಾದ ಸಂಗತಿಗಳಿಂದಲೂ ಮನುಷ್ಯಕುಲಕ್ಕೆ ನೆಮ್ಮದಿ ಸಿಕ್ಕಿದೆ. ಸಂಸ್ಕೃತಿ ಎನ್ನುವುದು ಕಲ್ಪಿತವಾದದ್ದು ತಾನೆ? ನಿಸರ್ಗಸತ್ಯದ ದೃಷ್ಟಿಯಿಂದ ಗಂಡಿನ ಪಾಲಿಗೆ ಎಲ್ಲ ಹೆಣ್ಣೂ ಒಂದೇ. ಹಾಗೇ ಹೆಣ್ಣಿನ ಪಾಲಿಗೆ ಎಲ್ಲ ಗಂಡೂ ಒಂದೇ. ಆದರೆ ಹೆಣ್ಣನ್ನು ತಾಯಿ, ಅಕ್ಕ, ತಂಗಿ, ಮಗಳು ಎಂದೂ, ಗಂಡನ್ನು ಅಪ್ಪ, ಅಣ್ಣ, ತಮ್ಮ, ಮಗ ಎಂದೂ ಬೇರೆ ಬೇರೆ ಸಂಬಂಧದಲ್ಲಿ ನಡೆಸಿಕೊಳ್ಳುತ್ತೇವೆ.

ಇದು ಮನುಷ್ಯನ ಬಾಳಿಗೆ ಒಂದು ಚೆಲುವನ್ನು, ಘನತೆಯನ್ನು ಭಾವ ವೈವಿಧ್ಯವನ್ನು ತಂದಿದೆ; ಪಶುವಿನಂತಿದ್ದ ಆದಿಮಾನವನನ್ನು ಸುಸಂಸ್ಕೃತ ವ್ಯಕ್ತಿಯನ್ನಾಗಿ ಮಾಡಿದೆ. ಈ ಸಂಬಂಧಗಳು ನಾನೇ ಕಲ್ಪಿಸಿಕೊಂಡದ್ದು ನಿಜ. ಆದರೂ ಅದನ್ನು ಬಿಡಬಹುದೆ? ದೈವಕಲ್ಪನೆಯೂ ಹೀಗೇ ಅಲ್ಲವೇ? ಅದು ಒಂದು ಭಾವಸತ್ಯ. ಅದರಿಂದ ಬದುಕಿಗೆ ಚೆಲುವು, ಘನತೆ ಬಂದಿದೆ. ಹಬ್ಬ ಹರಿದಿನ ಪೂಜೆ ವ್ರತ ನೇಮ ಮೊದಲಾದ ಸುಂದರ ವಿಧಿಗಳು ಅದರ ಆಧಾರದ ಮೇಲೆ ಸೃಷ್ಟಿಯಾಗಿವೆ. ಅಂಥ ಭಾವಸತ್ಯವೊಂದನ್ನು, ಅದು ಕಲ್ಪಿತವಾದದ್ದಾದರೂ ಯಾಕೆ ಗೌರವಿಸಬಾರದು?

**ಮೂರ್ತಿರಾವ್ :** ನೀವು ಹೇಳಿದ ಸಂಸ್ಕೃತಿ ಒಂದು ಸಮೂಹ ಒಪ್ಪಿ ಆಚರಿಸಿದ ವಿಷಯವಾಯಿತು. ನಮ್ಮ ಸಂಬಂಧಿಕರು ನಮ್ಮ ಜೊತೆ ಇರುತ್ತ, ನಾವು ಪ್ರೀತಿ ತೋರಿಸಿದಂತೆ ಅವರೂ ನಮಗೆ ಪ್ರೀತಿ ತೋರುತ್ತ ನಡೆದುಕೊಳ್ಳುವುದರಿಂದ ಇದು ಸಾಧ್ಯವಾಗುತ್ತೆ. ದೇವರ ಬಗ್ಗೆಯೂ ನಮ್ಮ ಸಂಬಂಧ ಹೀಗೇ ಇರುವುದಾದರೆ, ಎಂದರೆ ರಾಮಕೃಷ್ಣ ಪರಮಹಂಸರಂಥವರು ದೇವರನ್ನು ತನ್ನ ಸುತ್ತ ಇದ್ದ ವ್ಯಕ್ತಿಗಳಷ್ಟೇ ಸತ್ಯ ಎಂದು ತಿಳಿದು ದೇವರ ಪ್ರೀತಿಯನ್ನು ಅನುಭವಿಸಿದಂತೆ ನಾವೂ ಅನುಭವಿಸುವುದು ಸಾಧ್ಯವಾಗುವುದಾದರೆ ದೇವರು ಅನ್ನೋ ಕಲ್ಪನೆಯನ್ನು ನಾವೂ ಒಪ್ಪಬಹುದು.

**ಎಸ್. ಎಸ್. ಎಲ್ :** ನನಗೇನೋ ದೈವಕಲ್ಪನೆ ತನಗೆ ತಾನೇ ಸುಂದರವೆನ್ನಿಸಿದೆ. ದೈವಶ್ರದ್ಧೆಯನ್ನು ತಪ್ಪುದಾರಿಯಲ್ಲಿ ಬಳಸಿದರೆ ಅದು ಮನುಷ್ಯನ ತಪ್ಪೇ ಹೊರತು ಆ ಕಲ್ಪನೆಯದಲ್ಲ. ಈ ಮಾತನ್ನು ವಿಜ್ಞಾನಕ್ಕೂ ಅನ್ವಯಿಸಬಹುದು. ಬಳಸುವವನ ಬುದ್ಧಿ ಸರಿಯಾಗಿಲ್ಲದಿದ್ದರೆ ದೈವಶ್ರದ್ಧೆಯಿಂದ ಮಾತ್ರವಲ್ಲ ವಿಜ್ಞಾನದ ಅರಿವಿನಿಂದಲೂ ಮನುಷ್ಯ ಕೇಡನ್ನೇ ತಂದುಕೊಂಡಾನು.

ದೈವಕಲ್ಪನೆ ನಮ್ಮ ಸಾಹಿತ್ಯ ಪರಂಪರೆ ಕೂಡ ಎಷ್ಟೊಂದು ಋಣಿಯಾಗಿರಬೇಕು! ಅದರಿಂದ ಉದ್ದೀಪನಗೊಂಡು ಸಾಹಿತ್ಯ ಸೃಷ್ಟಿಸಿದವರ ಬರೆಹ ಬಿಟ್ಟರೆ ಬೇರೆ ಏನೂ ಉಳಿಯುವುದೇ ಇಲ್ಲ. ರಾಮಾಯಣ ಭಾರತಗಳಾಗಲೀ, ಬಸವಣ್ಣ ಅಲ್ಲಮ ಕುಮಾರವ್ಯಾಸ ಪುರಂದರ ಶರೀಫರಂಥವರ ಬರೆಹಗಳಾಗಲೀ ಆ ಶ್ರದ್ಧೆಯ ವೃಕ್ಷಕ್ಕೆ ಒಡೆದ ಟಿಸಿಲುಗಳು. ನಿರೀಶ್ವರವಾದಿಗಳೆನ್ನಬಹುದಾದ ಎ. ಕೆ. ರಾಮಾನುಜನ್ನರಂಥವನ್ನು ನಮ್ಮ ಸಂಸ್ಕೃತಿ–ಸಾಹಿತ್ಯಗಳ ಸಾರವನ್ನು ಹೊರಜಗತ್ತಿಗೆ ಅನುವಾದಿಸಿ ಕೊಡಬೇಕಾಗಿ ಬಂದಾಗ ಅವರು ಆಸ್ತಿಕತೆಯ ನೀರು ಗೊಬ್ಬರ ಹೀರಿ ಬೆಳೆದ ಸಾಹಿತ್ಯವನ್ನೇ ಕೊಟ್ಟರು. ಅವರ Speaking of Siva, Hymns for the Drowning ಇವೆಲ್ಲ ಅಂಥ ಕೃತಿಗಳೇ ತಾನೆ?

ಸಾರ್, ಒಂದು ಪ್ರಶ್ನೆ ಈವರೆಗಿನ ದೀರ್ಘಾವಧಿಯಲ್ಲಿ ನೀವು ಬೇಕಾದಷ್ಟು ಶ್ರೇಷ್ಠ ಕೃತಿಗಳನ್ನು ಓದಿದ್ದೀರಿ. ಅವುಗಳಲ್ಲಿ ನಿಮ್ಮ ಮೇಲೆ ತುಂಬ ಪ್ರಭಾವ ಬೀರಿದ ಆಪ್ತವಾದ ಕೃತಿಗಳು ಯಾವುವು?

ಮೂರ್ತಿರಾವ್ : ಆಪ್ತವಾದ ಕೃತಿಗಳನ್ನು ಎರಡು ಗುಂಪು ಮಾಡಬಹುದು. ಮೊದಲಿನವು ನನಗೆ ಬಹಳ ಪ್ರಿಯವಾದ ಕೃತಿಗಳು. ಇವು ನನ್ನ ಮೇಲೆ ಗಾಢವಾದ ಪರಿಣಾಮ ಮಾಡಿವೆ ಅಂತ ಅಲ್ಲ; ಓದಿದಾಗ ತುಂಬ ಸುಖ ಸಂತೋಷ ಕೊಟ್ಟಿವೆ. ಇಂಥವು ಸಾಕಷ್ಟು ಇವೆ. ಅವುಗಳನ್ನು ನಾನು ಪಟ್ಟಿಮಾಡಲು ಹೋಗುವುದಿಲ್ಲ.

ಎರಡನೆಯದು ನನ್ನನ್ನು ಮತ್ತೆ ಮತ್ತೆ ಆಲೋಚನೆಗೆ, ವಿಚಾರಕ್ಕೆ ಹಚ್ಚಿದಂಥ ಕೃತಿಗಳು. ಹಾರ್ಡಿಯ ಕೆಲವು ಕಾದಂಬರಿಗಳು, ಷೇಕ್ಸ್‌ಪಿಯರನ ಎರಡು ದುರಂತ ನಾಟಕಗಳು ಮತ್ತು ಮಹಾಭಾರತ. ಹಾರ್ಡಿಯ ಕಾದಂಬರಿಗಳ ಕೆಲವು ಪಾತ್ರಗಳ ದುರ್ವಿಧಿ, ಪ್ರಸಂಗಗಳ ವೈಚಿತ್ರ್ಯ ನನ್ನಲ್ಲಿ ಗಾಢವಾದ ವಿಷಾದವನ್ನು ಕವಿಸಿದ್ದುಂಟು.

ಷೇಕ್ಸ್‌ಪಿಯರನ ದುರಂತ ನಾಟಕಗಳಲ್ಲಿ ನನಗೆ ವಿಶೇಷವಾಗಿ ಮೆಚ್ಚಿಕೆಯಾದವು. ಮ್ಯಾಕ್‌ಬೆತ್ ಮತ್ತು ಕಿಂಗ್‌ಲಿಯರ್. ಹಿಂಜರಿಯುತ್ತ ಹಿಂಜರಿಯುತ್ತ ಮಾಡಿದ ಒಂದು ಕರಾಳಕೃತ್ಯ ಮ್ಯಾಕ್‌ಬೆತ್‌ನನ್ನು ಒಂದಾದಮೇಲೊಂದು ಭಯಂಕರ ಕೃತ್ಯಗಳಿಗೆ ಹಚ್ಚುತ್ತದೆ. ಮಹತ್ವಾಕಾಂಕ್ಷೆಯ ಕೀಲು ಕುದುರೆ ಅವನನ್ನು ಹಿಂಸೆ ತುಂಬಿದ ಭಯಾನಕ ಅಡವಿಯಲ್ಲಿ ಕೆಡವಿ ಮರೆಯಾಗಿದೆ. ಹಿಂದಿನ ಕೊಲೆಗೆ ಪರಿತಪಿಸುತ್ತಾ ಮುಂದಿನ ಕೊಲೆ ಮಾಡಿಸಬೇಕಾಗಿದೆ. ನನ್ನ ತಲೆ ಚೇಳುಗಳ ಸಂತೆಯಾಗಿ ಹೋಗಿದೆ ಎನ್ನುತ್ತಾನೆ ಮ್ಯಾಕ್‌ಬೆತ್. ನಿದ್ದೆಯಿಲ್ಲದೆ ಸಾಲುರಾತ್ರಿಗಳನ್ನು ಕಳೆದ ಅವನಿಗೆ, ಸತ್ತ ಡಂಕನ್ ಗೋರಿಯಲ್ಲಿ ಸುಖವಾಗಿ ಮಲಗಿದ್ದಾನೆ ಎನ್ನಿಸಿಬಿಡುತ್ತದೆ.

**Duncan is in his grave**
**After life's fetful fever**
**He sleeps well.**

ಎನ್ನುವ ಮಾತು ಅವನ ಬದುಕಿನ ಭೀಕರತೆಗೆ ಹಿಡಿದ ಕನ್ನಡಿ, ಮನುಷ್ಯ ಒಮ್ಮೆ ಕೇಡಿನ ಜೊತೆ ಕೈಕುಲುಕಿದನೋ ಮುಗಿಯಿತು. ಮತ್ತೆ ಅವನು ನೆಮ್ಮದಿಯ ದಡಸೇರಿದ ಹಾಗೆಯೇ!

ಮಹಾಭಾರತದಲ್ಲಿ ಉದ್ದಕ್ಕೂ ಕೇಡಿನ ವಿಜೃಂಭಣೆಯೇ. ಎಂಥೆಂಥವರ ಬಾಳೂ ಸಂಕಟದ ಮಡುವಾಗಿದೆ. ಬಹಳ ಭೀಕರವಾದದ್ದೆಂದರೆ ಅದರ ಅಂತ್ಯ. ಕೃಷ್ಣ ಕೌರವ ಕುಲವನ್ನು ದಾರಿಗೆ ಹಚ್ಚಲು ಹೋದವನು. ಆದರೆ ತನ್ನ ಯಾದವ ಕುಲವನ್ನು ರಕ್ಷಿಸುವುದೇ ಅವನಿಂದಾಗಲಿಲ್ಲ. ಎಷ್ಟೊಂದು ಜನರಿಗೆ ವೀರ ಮರಣ ಕಲ್ಪಿಸಿದ ಅವನಿಗೇ ಅಂಥ ಮರಣವಿಲ್ಲ. ಯಾರೋ ಒಬ್ಬ ಬೇಡ (ಯೋಗರೂಢನಾಗಿ) ಮಲಗಿದ್ದ ಅವನನ್ನು ಒಂದು ಸಾಮಾನ್ಯ ಬಾಣದಿಂದ ಕೊಲ್ಲುತ್ತಾನೆ. ಅಟ್ಟಿಬಂದ ನೀಚರಿಂದ ತನ್ನನ್ನು ಕಾಪಾಡುವಂತೆ ದ್ವಾರಕೆಯ ಸ್ತ್ರೀಯರು ಅರ್ಜುನನಿಗೆ ಮೊರೆಯಿಡುತ್ತಾರೆ. ಆದರೆ ಆ ತ್ರಿಲೋಕವೀರನಿಗೆ ಧನುಸ್ಸಿಗೆ ಹೆದೆ ಕಟ್ಟುವುದೇ ಪ್ರಯಾಸವಾಗಿ ಬಿಡುತ್ತದೆ. ಅವನ ಎದುರೇ ಕಳ್ಳರು ಕಂಡ ಕಂಡದ್ದನ್ನು ಲೂಟಿ ಹೊಡೆದು ಹೆಂಗಸರನ್ನು ಎಳೆದುಕೊಂಡು ಹೋಗುತ್ತಾರೆ. ಸಮುದ್ರ ಉಕ್ಕಿಬಂದು ಹೆಬ್ಬಾವಿನಂತೆ ದ್ವಾರಕೆಯನ್ನು ನಿಧಾನವಾಗಿ ಕಬಳಿಸುತ್ತ ಹೋಗುತ್ತದೆ. ಎಂಥ ಯುಗಕ್ಕೆ ಎಂಥ ಅಂತ್ಯ! ವ್ಯಾಸರಿಗೆ ಸಿದ್ಧಿಸಿದ ಕೇಡಿನ ದರ್ಶನ ಅದ್ಭುತವಾದದ್ದು.

ಆಗಲೇ ಬಹಳ ಹೊತ್ತಾಗಿತ್ತಾಗಿ ನಮ್ಮ ಸಂವಾದ ಮುಗಿಯಿತು. ಮನೆಗೆ ಬಂದರೂ ಮೂರ್ತಿರಾಯರ ಮಾತೇ ನನ್ನನ್ನು ಕಾಡುತ್ತಿತ್ತು. ದೈವ ಎನ್ನುವುದು ತರ್ಕದಿಂದ ಸಾಧಿಸಬಹುದಾದದ್ದೆ ? ಅದು ಶ್ರದ್ಧೆ ಧ್ಯಾನ ತಪಸ್ಸುಗಳಿಂದ ಅನುಭವಕ್ಕೆ ತಂದುಕೊಳ್ಳ ಬಹುದಾದ ಒಂದು ಭಾವಸತ್ಯವಲ್ಲವೆ ? ತರ್ಕದಿಂದ ಅದನ್ನು ಕಾಣಹೊರಡುವುದು ಎಷ್ಟು ಸರಿ? ಒಂದು ವಸ್ತುವನ್ನು ಅದಕ್ಕೆ ಹೊಂದದ ಮಾಪನದಿಂದ ಅಳೆಯ ಹೊರಡುವುದು ಮೀನು ಹಿಡಿಯುವ ಬಲೆಯಿಂದ ನೀರು ಎತ್ತಲು ಹೋದಂತಲ್ಲವೆ? ಋಷಿಪ್ರಣೀತವಾದ ಮಾರ್ಗದಲ್ಲಿ ಸಾಧಿಸಲು ಹೋಗಿ ವಿಫಲರಾದಲ್ಲದೆ ಅದನ್ನು ನಿರಾಕರಿಸಬಹುದೆ? ಹೀಗೆ ಯೋಚಿಸುತ್ತಲೇ ನಮ್ಮ ಸಂವಾದವನ್ನು ಬರೆಯಲು ಕೂತೆ.






ಮೂರ್ತಿರಾವ್ ದಂಪತಿಗಳು



ದ್ವಿತೀಯ ಪುತ್ರ ನಾಗರಾಜ್, ಸೊಸೆ ಮತ್ತು ಮೊಮ್ಮಕ್ಕಳೊಡನೆ ( 1979)



ಕೈವಾರದಲ್ಲಿ ನಡೆದ 56ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ-
ಡಾ॥ ಹಂಪನಾ ಮತ್ತು ಮುಖ್ಯ ಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರೊಂದಿಗೆ



56ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಒಂದು ನೋಟ

'ನವರತ್ನ ರಾವ್ ಪ್ರಶಸ್ತಿ ಪ್ರದಾನ' - ಪ್ರೊ|| ಅ. ರಾ. ಮಿತ್ರ, ಪ್ರೊ|| ಎ. ಎನ್. ಮೂರ್ತಿರಾವ್ ಹಾಗೂ ಸು. ರಂಗಸ್ವಾಮಿ



